ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

## ಗುಣಸೌರಭ-೧

ಸಂಪುಟ-೧

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# "ಯುಕ್ತಿಮಲ್ಲಿಕಾ"

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ಗುಣಸೌರಭಮ್ - ೧

### ಸಂಪುಟ - ೧

ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು**

ಪ್ರಥಮಪರ್ಯಾಯ. ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಪಿ. ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು :

ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

**ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.**

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ **ಶ್ರೀಯುಕ್ತಿಮಲ್ಲಿಕೆಯ** ಶ್ರೀ ಸುರೋತ್ತಮ ತೀರ್ಥಮುನಿವಿರಚಿತ **ಭಾವವಿಲಾಸಿನೀ** ವ್ಯಾಖ್ಯಾನಸಹಿತ ಹತ್ತು ಸಂಪುಟಗಳಿಂದ ಕೂಡಿದ ಕನ್ನಡಾನುವಾದದ ಕೃತಿಯು ಸೋದೆ ಶ್ರೀವಾದಿರಾಜಮಠಾಧೀಶರಾದ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರ ಪ್ರಥಮಪರ್ಯಾಯ ಮಹೋತ್ಸವ ಸಂದರ್ಭದಲ್ಲಿ ವಿಜಯ ಸಂವತ್ಸರ/ ಕಾರ್ತಿಕ/ ಬಹುಳ ಪಂಚಮೀ ಶನಿವಾರ (23.11.2013) ದಂದು ಅನೇಕ ಪೀಠಾಧಿಪತಿಗಳ ಸಮಕ್ಷಮದಲ್ಲಿ ಶ್ರೀಮಧ್ವ- ರಾಜಾಂಗಣದಲ್ಲಿ ನಡೆದ ಕಾರ್ಯಕ್ರಮದಲ್ಲಿ ಶ್ರೀರಾಜಮಧ್ವವಲ್ಲಭನಾದ ಭೈಷ್ಮೀ-ಸತ್ಯಾಸಮೇತ ಶ್ರೀಕೃಷ್ಣ- ಪರಮಾತ್ಮನ ಅಡಿದಾವರೆಗಳಲ್ಲಿ ಸಮರ್ಪಿತವಾಯಿತು.




| | | |
|---|---|---|
| ಪುಟಗಳು | - | LXXXVIII + 384= 472 |
| ಸಂಪುಟ | - | ೧(೧೦) |
| ಮುದ್ರಿತ ಪ್ರತಿಗಳು | - | ೧೦೦೦ |
| ಪ್ರಕಾಶಕರು | - | ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನ ಕೇಂದ್ರ, ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ. |
| ಮುಖಪುಟವಿನ್ಯಾಸ | : | ಲಕ್ಷ್ಮೀನಾರಾಯಣ ತಂತ್ರಿ |
| ಪುಟ ಸಂಯೋಜನೆ | : | ಬದರಿನಾರಾಯಣಾಚಾರ್ಯ ಎಸ್. ಕಡ್ಡಿ |
| ಅಕ್ಷರ ಜೋಡಣೆ | : | ಕೆ. ಗಣಪತಿ ಭಟ್<br>ಶ್ರೀಮತಿ ನಾಗಲತಾ (ಸುಧಾ),<br>ಎಂ. ಶರತ್ ಚಂದ್ರ |
| ಮುದ್ರಕರು | : | ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್<br>ಮೈಸೂರು. ✆ : 7899779255 |
| ಗ್ರಂಥಪ್ರಾಪ್ತಿ | : | ಸೋದೆ ಶ್ರೀವಾದಿರಾಜಮಠ, ಉಡುಪಿ. |

# ಶ್ರೀವೇದವ್ಯಾಸರು



ವ್ಯಾಸಾಯಾಪ್ರತಿಮೇತಿಹಾಸರಚನೋಲ್ಲಾಸಾಯದುರ್ವಾದಿನಾಮ್ ।
ತ್ರಾಸಾಯಾಸಕರಾಯ ಸತ್ಸುಕೃತವಿಶ್ವಾಸಾಯದೋಷದ್ವಿಷೇ ॥
ಭಾಸಾಯಾಮುನರಮ್ಯತೋಯಸದೃಶಾಯ ಆಸಾಯಮಾಸಾವಿನೇ ।
ದಾಸಾಯಾಭಯದಾಯ ಮಧ್ವಗುರುಹೃದ್ವಾಸಾಯ ತುಭ್ಯಂ ನಮಃ ॥

# ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು



ಹೃತಕುಸಮಯಚೋರಂ ಹಾರಿತಾಘಾಂಧಕಾರಂ
ಶಮಿತಸಕಲತಾಪಂ ಸರ್ವಲೋಕೈಕದೀಪಮ್ ।
ಸುಕವಿನುತಚರಿತ್ರಂ ಶುದ್ಧವಿದ್ಯಾಬ್ಧಿಮಿತ್ರಂ
ನವನವಗುಣಸಾಂದ್ರಂ ನೌಮಿ ಮಧ್ವಾಖ್ಯಚಂದ್ರಮ್ ॥

# ಉತ್ತರಕಲ್ಪಸಮೀರರ ಪರಾಕು




★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ' ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ. ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಬದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''

# ಶ್ರೀಭೂತರಾಜರು




ರಕ್ತಂ ವಿಚಿತ್ರವಸನಂ ಮಣಿಕುಂಡಲಾಢ್ಯಂ
ಬಂಧೂಕಪುಷ್ಪಸದೃಶಾಧರಪಾಣಿಪಾದಮ್ ।
ಉದ್ಯದ್ದಿನೇಶಕಿರಣಾರುಣದೇಹಭಾಜಂ
ನಾರಾಯಣಂ ನಮತ ಚಾಪಶರಾನ್ ದಧಾನಮ್ ॥

ಗಣೈಸ್ಸ ನಾರಾಯಣಭೂತನಾಥಃ
ಸಮನ್ವಿತ ಕರ್ಣವಿಕರ್ಣಸಂಜ್ಞೈಃ ।
ಮಹಾಮಣೀನಾಂ ಬಹುಲೈಃ ಸುಕೀರ್ಣ-
ಮೌಲಿಂ ದದೌ ಮೇ ಶಿರಸಿ ಸ್ಥಿರೋಽಭೂತ್ ॥

# ಶ್ರೀಸುರೋತ್ತಮತೀರ್ಥರು



ಸಂಶ್ರಿತ್ಯವಿಷ್ಣೋಃ ಪದಮತ್ರಸಾಧು
ಸಸ್ಯಾನಿವಿಜ್ಞಾನಜಲೇನಹರ್ಷಂ।
ನಯಂತಮುಚ್ಚೈಃ ಪ್ರವಚೋ ನಿನಾದಂ
ಸುರೋತ್ತಮಾರ್ಯಾಂಬುಧರಂ ನತೋಽಸ್ಮಿ॥

# ರಾಜರ ಸಂದೇಶ

## ವಿದ್ಯಾಚಕೋರಿಗೆ ವಶರಾಗಿ

ಹೃದ್ಯಪದ್ಯರಸಸ್ನಿಗ್ಧಾಂ ಸದ್ಯೋ
ಹೃದ್ರೋಚನೋದ್ಯತಾಮ್ ।
ವಿದ್ಯಾಮದ್ಯಾನವದ್ಯಾಂ ಮೇ
ಕೋ ದ್ವೇಷ್ಟ್ಯುದ್ಧತಪದ್ಧತಿಃ ॥

ಮನೋಹರಪದ್ಯಕಾವ್ಯರಸಗಳಿಂದ ಸ್ನಿಗ್ಧಳಾದ; ಮೊದಲ ನೋಟದಲ್ಲಿಯೇ ಹೃದಯಮೀಟುವ ಗುಣಶೀಲೆ ಈ ಮಲ್ಲಿಕೆ. ರಾಜರ ಅನವದ್ಯಬುದ್ಧಿಜೆ. ವಿದ್ಯಾನಾಮಭೂಷಿತೆ. ಇವಳನ್ನುಬಿಟ್ಟವ ನೀತಿಗೆಟ್ಟವ.

## ಅಸು ಇದ್ದವ ಈ ಕುಸುಮ ಬಿಡ

ವಿದುಷೋಽವಿದುಷೋಽಪೀಷ್ಟಾ-
ಕಂ ಜನಂ ರಂಜಯೇನ್ನಗೀಃ ।
ಅಮರ್ತ್ಯೈರ್ಭ್ರಮರ್ತ್ಯೈಶ್ಚಾರ್ಥ್ಯಂ
ಕುಸುಮಂ ಕೋಽಸುಮಾಂಸ್ತ್ಯಜೇತ್ ॥

ರಾಜರ-ಮಧ್ವರ ಮಾತು; ಜಾಣ-ದಡ್ಡರಿಗೂ ರಂಜಕ. ಅರಳಿದ ಕುಸುಮವು ಅಸು ಉಳ್ಳವರಿಗೆಲ್ಲ ಇಷ್ಟ. ದೇವ-ದುಂಬಿಗಳೂ ಬಯಸುವ ಕುಸುಮದಂತಿದೆ ಈ ಯುಕ್ತಿಮಲ್ಲಿಕಾ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿಶ್ವವಲ್ಲಭತೀರ್ಥ ಶ್ರೀಪಾದರು**

**ಪರ್ಯಾಯ ಶ್ರೀಸೋದೆವಾದಿರಾಜ ಮಠ, ರಥಬೀದಿ, ಉಡುಪಿ.**

---

# ಅನುಗ್ರಹ ಸಂದೇಶ

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯರಿಂದ ರಚಿತವಾದ ಮಹಾಮೇರು ಕೃತಿ **'ಶ್ರೀಯುಕ್ತಿಮಲ್ಲಿಕಾ'** ಗ್ರಂಥವು ದೇವತೆಗಳಿಂದ ಉಪಾಸ್ಯ-ಮಾನವಾದ ಗ್ರಂಥವಾಗಿದೆ. **''ಸುರೋತ್ತಮಯೋಗಿವರ್ಯಾಃ ದಕ್ಷಾಃ''** ಎಂದು ಯುಕ್ತಿಮಲ್ಲಿಕಾಗ್ರಂಥದ ವ್ಯಾಖ್ಯಾನ ಕರ್ತೃಗಳಾದ ಶ್ರೀ ಭಂಡಾರಕೇರಿ ಮಠದ ಮಹಾವಿಭೂತಿಪುರುಷರಾದ ಶ್ರೀಸುರೋತ್ತಮ ತೀರ್ಥರೇ ಈ ಮಾತನ್ನು ಹೇಳಿದ್ದಾರೆ. ನ್ಯಾಯರತ್ನಾವಲೀ ಗ್ರಂಥದಲ್ಲಿ ಸ್ವತಃ ರಾಜರೇ ಯುಕ್ತಿಮಲ್ಲಿಕೆಯ ಬಗ್ಗೆ ಹೀಗೆ ಉದ್ಗರಿಸಿದ್ದಾರೆ-

''ಸುಂದೋಪಸುಂದೌ ಹಂತುಂ ಪ್ರಾಕ್ ಬ್ರಹ್ಮಾ ಚಕ್ರೇ ತಿಲೋತ್ತಮಾಮ್ ।
ಭಾವಿಬ್ರಹ್ಮಾತ್ವಿಮೌ ಹಂತುಂ ಚಕ್ರೇ ಯುಕ್ತಿತಿಲೋತ್ತಮಾಮ್ ॥''

ಸುಂದೋಪ-ಸುಂದರನ್ನು ಸಂಹರಿಸಲು ಹಿಂದೆ ಬ್ರಹ್ಮದೇವರು ತಿಲೋತ್ತಮೆಯನ್ನು ಸೃಷ್ಟಿಸಿದಂತೆ ಭಾವಿಬ್ರಹ್ಮರಾದ ರಾಜರು ಬೌದ್ಧ-ಮಾಯಾಮತಗಳೆಂಬ ಸುಂದೋಪಸುಂದರನ್ನು ಸಂಹರಿಸಲು ಈ ಯುಕ್ತಿಮಲ್ಲಿಕೆಯನ್ನು ರಚಿಸಿದ್ದಾರೆ'' ಎಂದು. ರಾಜರ 'ಭಾವಿಬ್ರಹ್ಮಾ' ಎಂಬ ಮಾತು ಶ್ಲೇಷಾರ್ಥಕ. ಭಾವಿಬ್ರಹ್ಮರಾದ ಮಧ್ವರ ಅನುವ್ಯಾಖ್ಯಾನವೆಂಬ ಯುಕ್ತಿಮಲ್ಲಿಕೆಯೂ ಬೌದ್ಧಮಾಯಿಮತಗಳನ್ನು ಖಂಡಿಸುವ ತಿಲೋತ್ತಮೆ ಎಂಬ ಅರ್ಥವೂ ಇಲ್ಲಿದೆ. ಅರ್ಥಾತ್ ಆಚಾರ್ಯರ ಅನುವ್ಯಾಖ್ಯಾನ ಗ್ರಂಥಕ್ಕೆ ತುಲನೆಯಾಗುವ ಗ್ರಂಥ ಯುಕ್ತಿಮಲ್ಲಿಕಾ ಎಂದು ರಾಜರೇ ಹೇಳಿದ್ದಾರೆ. ಇಂತಹ ಗ್ರಂಥಕ್ಕೆ ರಾಜರ ಪೂರ್ವಾಶ್ರಮದ ಅನುಜರೇ ಆದ ಶ್ರೀಶ್ರೀಸುರೋತ್ತಮತೀರ್ಥರ ಭಾವವಿಲಾಸಿನೀ ವ್ಯಾಖ್ಯಾನವು ಯುಕ್ತಿಮಲ್ಲಿಕೆಗಳನ್ನು ಜೋಡಿಸುವ ಪವಿತ್ರಗ್ರಂಥಿಯಾಗಿದೆ.

ರಾಜರ ಇಂತಹ ಗ್ರಂಥರತ್ನದ ಪಾಠ-ಪ್ರವಚನಗಳು ಅದಮಾರು ಮಠಾಧೀಶರಾದ ಶ್ರೀಶ್ರೀವಿಬುಧಪ್ರಿಯತೀರ್ಥರಿಂದ ವಿಶೇಷವಾಗಿ ನಡೆದಿದ್ದನ್ನು ನಾವು ಕೇಳಿದ್ದೇವೆ. ಯುಕ್ತಿಮಲ್ಲಿಕಾ ಮಹಾಪರೀಕ್ಷೆ ಕೊಟ್ಟವರಿಗೆ ಬಂಗಾರದ ಕಂಕಣವನ್ನು ತೊಡಿಸಿದ್ದರೆಂದು ಕೇಳಿದ್ದೇವೆ. ನಮ್ಮ ಗುರುಗಳಾದ ಶ್ರೀಶ್ರೀವಿಶ್ವೋತ್ತಮತೀರ್ಥ-ಶ್ರೀಪಾದರು ಮಧ್ವಸಿದ್ಧಾಂತ ಶಿಕ್ಷಣ ಹೊಂದುವ ವಿದ್ಯಾರ್ಥಿಗಳಿಗೆ ಸುಧಾ-

ಮಂಗಳವಾದ ಮೇಲೆ ಯುಕ್ತಿಮಲ್ಲಿಕಾಗ್ರಂಥ ಮಂಗಳ ಮಾಡಿಸಬೇಕೆಂದು ಹೇಳುತ್ತಿದ್ದರು. ಪ್ರಾಚೀನ ಪ್ರತಿಗಳಿಂದ ಅನೇಕವಿಧವಾದ ಸ್ತೋತ್ರಗಳ ಪಾಠಭೇದವನ್ನು ಗುರುತಿಸಿ ಪಾಠಶುದ್ಧಿಯನ್ನು ತಿಳಿಸುವಲ್ಲಿ ಗುರುಗಳ ಪಾಂಡಿತ್ಯ ಅಪಾರವಾಗಿತ್ತು. ಯುಕ್ತಿಮಲ್ಲಿಕೆಯಲ್ಲಿ ಮೂವತ್ತು ಸಾವಿರಕ್ಕೂ ಅಧಿಕವಾದ ಯುಕ್ತಿಗಳಿದ್ದಾವೆಂದು ತಿಳಿಸುತ್ತಿದ್ದರು. ಅಂತಹ ಗುರುಗಳೇ ನಮ್ಮಲ್ಲಿ ನಿಂತು ಈ ಸತ್ಕರ್ಮವನ್ನು ನಡೆಸಿದ್ದಾರೆಂದು ಭಾವಿಸುತ್ತೇವೆ.

ಪೇಜಾವರ ಮಠಾಧೀಶರಾದ ಶ್ರೀಶ್ರೀವಿಶ್ವೇಶತೀರ್ಥರ ಶ್ರೀಪಾದರ ವಿಶೇಷ ಸಹಕಾರದಿಂದ, ನಮ್ಮ ವಿದ್ಯಾಗುರುಗಳಾದ ಕೃಷ್ಣಾಪುರಮಠಾಧೀಶರಾದ ಶ್ರೀಶ್ರೀ ವಿದ್ಯಾಸಾಗರತೀರ್ಥ ಶ್ರೀಪಾದರ ಮಾರ್ಗದರ್ಶನದಿಂದ ಸಮಗ್ರಗ್ರಂಥದ ಕನ್ನಡಾನುವಾದದ ಯೋಜನೆಯನ್ನು ಹಮ್ಮಿಕೊಂಡೆವು. ಈ ನಮ್ಮ ಸಂಕಲ್ಪದಲ್ಲಿ ಅನೇಕ ವಿದ್ವಾಂಸರು ವಿಶೇಷವಾಗಿ ಅನುವಾದ ಗುರುರಾಜರ ಸೇವೆಸಲ್ಲಿಸಿದ್ದಾರೆ.

ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಬಹಳ ಶ್ರಮವಹಿಸಿ ಬಿಟ್ಟುಹೋದ ಅನುವಾದಗಳನ್ನು ಅನುವಾದಗಳ ಪರಿಶೀಲನೆಯನ್ನು ಸಮರ್ಥವಾಗಿ ನಡೆಸಿಕೊಟ್ಟದ್ದಾರೆ. ವಿದ್ವಾನ್ ಸಿ.ಎಚ್. ಶ್ರೀನಿವಾಸಮೂರ್ತಿ ಆಚಾರ್ಯರೂ ಬಹಳ ಶ್ರಮವಹಿಸಿದ್ದಾರೆ. ವಿದ್ವಾನ್ ಬೆ.ನಾ. ವಿಜಯೀಂದ್ರಾಚಾರ್ಯರು ಯುಕ್ತಿಮಲ್ಲಿಕಾ ಕನ್ನಡಾನುವಾದದ ಯೋಜನೆಯ ಸಂಕಲ್ಪದಿಂದ ಆರಂಭಿಸಿ ಕೃಷ್ಣಾರ್ಪಣದ ತನಕ ಮುತುವರ್ಜಿಯಿಂದ ಸೇವೆ ಸಲ್ಲಿಸಿದ್ದಾರೆ. ಇಂತಹ ಮಹತ್ಕಾರ್ಯದಲ್ಲಿ ಅನೇಕರ ಪಾತ್ರವಿದೆ. ಶ್ರಮವಿದೆ. ಹಯಗ್ರೀವ-ಭೂವರಾಹ-ವೇದವ್ಯಾಸಾಭಿನ್ನ-ಶ್ರೀಕೃಷ್ಣನು ರಾಜ-ಮಧ್ವರ ದ್ವಾರಾ ಇದರಲ್ಲಿ ಸೇವೆಸಲ್ಲಿಸಿದ ಸಕಲ ವಿದ್ವನ್ಮಂಡಳಿಗೂ ಜ್ಞಾನ-ಭಕ್ತ್ಯಾದಿಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

ನಾರಾಯಣ ಸ್ಮರಣೆಗಳು

ವಿಜಯ-ಆಶ್ವಯುಜ-ಶುಕ್ಲ-ದಶಮಿ
13-10.2013

**ಶ್ರೀಶ್ರೀವಿಶ್ವವಲ್ಲಭತೀರ್ಥ ಶ್ರೀಪಾದಂಗಳವರು**

ಪರ್ಯಾಯ ಶ್ರೀಸೋದೆ ವಾದಿರಾಜ ಮಠ,

ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದರು**

**ಶ್ರೀ ಪೇಜಾವರ ಅಧೋಕ್ಷಜ ಮಠ, ರಥಬೀದಿ, ಉಡುಪಿ.**

---

# ಅನುಗ್ರಹ ಸಂದೇಶ

ಶ್ರೀಮಧ್ವಾಚಾರ್ಯರ ಸಿದ್ಧಾಂತವೆನ್ನುವ ಬಳ್ಳಿಯಲ್ಲಿ ಬೆಳೆದ ಮಲ್ಲಿಗೆಯೇ ಯುಕ್ತಿ-ಮಲ್ಲಿಕೆಯೆಂದು ಪ್ರಸಿದ್ಧವಾಗಿದೆ. ಶ್ರೀ ವಾದಿರಾಜರೇ 'ವಲ್ಲೀ ತೇ ಯುಕ್ತಿಮಲ್ಲಿಕೇ' ಎಂದು ವರ್ಣಿಸಿದ ಶಾಸ್ತ್ರವಾಙ್ಮಯದ ಒಂದು ಅಪೂರ್ವ ಗ್ರಂಥ. ಶಾಸ್ತ್ರದ ಗಾಂಭೀರ್ಯದ ಜೊತೆಗೆ ಕವಿತೆಯ ಲಾಲಿತ್ಯವನ್ನು ಇಲ್ಲಿ ಕಾಣಬಹುದು. ಶಾಸ್ತ್ರಗ್ರಂಥಗಳಲ್ಲಿ ಇದನ್ನು ಕಲ್ಲುಸಕ್ಕರೆಯೆಂದೇ ಕರೆಯಬಹುದು. ಕಾಠಿಣ್ಯ ಮಾಧುರ್ಯಗಳೆರಡರ ಸಂಗಮವನ್ನು ನಾವಿಲ್ಲಿ ಕಾಣುತ್ತೇವೆ.

ವಾದಿರಾಜರು ರುಗ್ಮಿಣೀಶ ವಿಜಯದಂತಹ ಮಧುರ ಕಾವ್ಯವನ್ನು ರಚಿಸಿ ಅದರಲ್ಲಿ ಶಾಸ್ತ್ರೀಯ ವಿಷಯಗಳನ್ನೂ ಸುಂದರವಾಗಿ ನಿರೂಪಿಸಿದ್ದಾರೆ. ಯುಕ್ತಿಮಲ್ಲಿಕೆಯಂತಹ ಶಾಸ್ತ್ರಗ್ರಂಥವನ್ನು ಕಾವ್ಯಮಯವಾಗಿ ರಚಿಸಿದ್ದಾರೆ. ಹೀಗೆ ಕಾವ್ಯವನ್ನು ಶಾಸ್ತ್ರವನ್ನಾಗಿಯೂ, ಶಾಸ್ತ್ರವನ್ನು ಕಾವ್ಯವನ್ನಾಗಿಯೂ ರಚಿಸಿರುವುದು ಶ್ರೀವಾದಿರಾಜರ ವೈಶಿಷ್ಟ್ಯವಾಗಿದೆ. ಜ್ಞಾನಿವರೇಣ್ಯರೂ, ಗುರುಸಾರ್ವಭೌಮರೂ, ಭಾವಿಸಮೀರರೂ ಆಗಿರುವ ಶ್ರೀವಾದಿರಾಜರು ಮಧ್ವಸಿದ್ಧಾಂತವನ್ನು ಶ್ರುತಿ, ಯುಕ್ತಿಗಳಿಂದ ಬಲವಾಗಿ ಸಮರ್ಥಿಸಿ ರಚಿಸಿದ ಈ ಗ್ರಂಥವು ಬ್ರಹ್ಮಸೂತ್ರದಂತೆ ಆಪ್ತಿಮೂಲ, ಶ್ರುತಿಮೂಲ, ಯುಕ್ತಿಮೂಲವೂ ಆಗಿರುವುದರಿಂದ ಶ್ರೇಷ್ಠಪ್ರಮಾಣವಾಗಿದೆ.

ಈ ಯುಕ್ತಿಮಲ್ಲಿಕೆಯ ಜ್ಞಾನಪರಿಮಳವು ಸಜ್ಜನ ಜನತೆಗೆ ದೊರೆಯಲು ಅನುಕೂಲವಾಗಲೆಂದು ಕನ್ನಡದಲ್ಲಿ ಅನುವಾದ ಮಾಡಿಸಿ ಪ್ರಕಟಿಸುವ ಮಹೋನ್ನತ ಕಾರ್ಯವನ್ನು ಸಾಧಿಸಿದ ಪರ್ಯಾಯ ಸೋದೆ ಮಠಾಧೀಶರೂ, ನಮ್ಮ ಪರಮಪ್ರಿಯರೂ ಆದ ಶ್ರೀಶ್ರೀವಿಶ್ವವಲ್ಲಭತೀರ್ಥರನ್ನು ವಿಶೇಷವಾಗಿ ಅಭಿನಂದಿಸುತ್ತೇವೆ. ಅನುವಾದ ಕಾರ್ಯದಲ್ಲಿ ಭಾಗವಹಿಸಿದ ಎಲ್ಲಾ ವಿದ್ವಾಂಸರನ್ನೂ ಅಭಿನಂದಿಸುತ್ತೇವೆ. ಇದರ ಲಾಭವನ್ನು ಸಜ್ಜನರು ಪಡೆಯಲೆಂದು ಆಶಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು,

**ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು**

ಶ್ರೀ ಪೇಜಾವರ ಅಧೋಕ್ಷಜ ಮಠ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

# ಪರಮಪೂಜ್ಯ ಶ್ರೀಶ್ರೀವಿದ್ಯಾಸಾಗರತೀರ್ಥ ಶ್ರೀಪಾದರು

ಶ್ರೀ ಕೃಷ್ಣಾಪುರ ಮಠ, ರಥಬೀದಿ, ಉಡುಪಿ.

---

# ಅನುಗ್ರಹ ಸಂದೇಶ

ಪರ್ಯಾಯ ಶ್ರೀ ಸೋದೆ ವಾದಿರಾಜ ಮಠದವತಿಯಿಂದ ಈ ಎರಡು ವರ್ಷಗಳ ಪರ್ಯಾಯ ಅವಧಿಯಲ್ಲಿ ನಡೆಯಲಿರುವ ಜ್ಞಾನಯಜ್ಞದ ಅಂಗವಾಗಿ ಭಾವಿಸಮೀರರಾದಂತಹ ಶ್ರೀವಾದಿರಾಜಗುರುಸಾರ್ವಭೌಮರ ಯುಕ್ತಿಮಲ್ಲಿಕಾ ಗ್ರಂಥದ ಪ್ರಕಾಶನ ಕೆಲಸವು ನಡೆಯುತ್ತಿರುವ ವಿಚಾರ ತಿಳಿದು ಸಂತೋಷವಾಯಿತು. ಶ್ರೀಮದಾನಂದತೀರ್ಥಭಗವತ್ಪಾದರ ತತ್ತ್ವವಾದ ಎಂಬ ಬಳ್ಳಿಯಲ್ಲಿ ಬೆಳೆದ ಈ ಯುಕ್ತಿಮಲ್ಲಿಕಾ ಗ್ರಂಥ ಎಂಬ ಮಲ್ಲಿಗೆ ಹೂವು, ಭಗವಂತನ ಗುಣಗಳನ್ನು ಪ್ರತಿಪಾದನೆ ಮಾಡುವುದು. ಭಗವಂತನು ದೋಷರಹಿತ ಎಂದು ಪ್ರತಿಪಾದನೆ ಮಾಡುವುದು. ಚೇತನ ಜಗತ್ತಿನಿಂದ ಭಗವಂತನು ಭಿನ್ನನಾಗಿದ್ದಾನೆ ಎಂದು ಪ್ರತಿಪಾದನೆ ಮಾಡುವುದು, ಇದೇ ಮೊದಲಾದ ಐದು ವಿಚಾರಗಳನ್ನು ಪ್ರತಿಪಾದನೆ ಮಾಡುವುದರಿಂದ ಗುಣಸೌರಭ, ಶುದ್ಧಿಸೌರಭ, ಭೇದಸೌರಭ, ವಿಶ್ವಸೌರಭ ಮತ್ತು ಫಲಸೌರಭಗಳೆಂಬ ಐದು ಬಗೆಯ ಕಂಪನ್ನು ಸಂಸ್ಕೃತ ಭಾಷೆಯನ್ನು ಅರಿಯದ ಜನರಿಗೂ ನೀಡಿ ರಾಜರ ಯುಕ್ತಿ ಚಾತುರ್ಯವನ್ನು ಮನದಟ್ಟು ಮಾಡಿ ಸಜ್ಜನರ ಆತ್ಮೋದ್ಧಾರವನ್ನು ಸಾಧಿಸುವ ನಿಟ್ಟನಿಂದ ಪರ್ಯಾಯ ಶ್ರೀಗಳವರು ಮುತುವರ್ಜಿಯಿಂದ ವಿವಿಧ ವಿದ್ವಾಂಸರುಗಳ ಸಹಾಯದಿಂದ ನಡೆಯುತ್ತಿರುವ ಈ ಒಂದು ಗ್ರಂಥಪ್ರಕಾಶನದಿಂದ ಸಜ್ಜನ ಸಮುದಾಯಕ್ಕೆ ಖಂಡಿತವಾಗಿ ಮಹಾ ಉಪಕಾರವಾಗಲಿದೆ. ಮಠದ ವತಿಯಿಂದ ರಾಜರ ಈ ಉದ್ಗ್ರಂಥದ ಪ್ರಕಾಶನ ಈ ಹಿಂದೆ ನಡೆದಿಲ್ಲ ಎಂಬ ಕೊರತೆಯನ್ನು ಇದೀಗ ಪರ್ಯಾಯ ಶ್ರೀಗಳವರು ತಮ್ಮ ಪರ್ಯಾಯ ಅವಧಿಯಲ್ಲಿ ನಡೆಸಲಿರುವ ಅನ್ವಯಾರ್ಥ, ಅರ್ಥಾನುವಾದ ಹಾಗೂ ರಾಜರ ಪೂರ್ವಾಶ್ರಮದ ಸಹೋದರರಾದ ಭಂಡಾರಕೇರಿ ಮಠಾಧೀಶರಾಗಿದ್ದಂತಹ ಶ್ರೀ ಸುರೋತ್ತಮತೀರ್ಥರ ಭಾವವಿಲಾಸಿನೀ ವ್ಯಾಖ್ಯಾನ ಹಾಗೂ ಅದರ ಕನ್ನಡ ಅನುವಾದಗಳಿಂದ ಸಹಿತವಾಗಿರತಕ್ಕಂತಹ ಈ ಪ್ರಕಟಣೆಯು ಪರಿಹರಿಸಲಿದೆ. ಸಜ್ಜನರೆಲ್ಲರೂ ಶ್ರೀಗಳವರ ಪ್ರಯತ್ನವನ್ನು ಪ್ರೋತ್ಸಾಹಿಸಿ ಮಠದ ವತಿಯಿಂದ ಇನ್ನು ಮುಂದೂ ಕೂಡ ರಾಜರ ಅಪಾರಶಾಸ್ತ್ರ ಸಂಪತ್ತಿನ ಪ್ರಕಾಶನ ಕಾರ್ಯ ನಿರ್ವಿಘ್ನವಾಗಿ ನಡೆಯುವಂತೆ ನೋಡಬೇಕು. ಗ್ರಂಥವನ್ನು ತೆಗೆದುಕೊಂಡು ಖರೀದಿಸಿ ಅಧ್ಯಯನ ಮಾಡುವವರೆಲ್ಲರಿಗೂ ಹರಿವಾಯುಗಳ ವಿಶೇಷ ಅನುಗ್ರಹ ಸಿದ್ಧಿಸಲೆಂದು ತಮ್ಮ ಆರಾಧ್ಯಮೂರ್ತಿಯಾದ ಶ್ರೀ ನರಸಿಂಹ ಕಾಳೀಯ ಮರ್ದನ ಕೃಷ್ಣದೇವರಲ್ಲಿ ಪ್ರಾರ್ಥಿಸುತ್ತೇವೆ.

ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿದ್ಯಾಸಾಗರತೀರ್ಥ ಶ್ರೀಪಾದಂಗಳವರು**

ಶ್ರೀ ಕೃಷ್ಣಾಪುರ ಮಠ, ರಥಬೀದಿ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು**

**ಶ್ರೀ ಅದಮಾರು ಮಠ, ರಥಬೀದಿ, ಉಡುಪಿ.**

---

# ಅನುಗ್ರಹ ಸಂದೇಶ

ಶಾಸ್ತ್ರದ ಮಾತುಗಳೆಂದರೆ ಸುಲಭಗಳಲ್ಲ. ತಿಳಿಯುವುದೂ ತಿಳಿಸುವುದೂ ಎರಡು ಕ್ಲೇಶದಾಯಕ. ಆದರೆ ಈ ವಿಷಯದಲ್ಲಿ ಭಾವಿಸಮೀರ ಶ್ರೀವಾದಿರಾಜ-ಗುರುಸಾರ್ವಭೌಮರಿಗೆ ರಿಯಾಯ್ತಿ ಇದೆ. ಎಂತಹ ಕಠಿಣ ವಿಚಾರಗಳನ್ನೂ ಲೌಕಿಕ ಉದಾಹರಣೆಯ ಮೂಲಕ ಮನದಟ್ಟು ಮಾಡಿಸುವ ಶಕ್ತಿ ವಿಶೇಷವಾಗಿ ಇವರಿಗೆ ಇದೆ. ಈ ಶಕ್ತಿಯು ಸಮಗ್ರವಾಗಿ ಬೆಳಕಿಗೆ ಬಂದದ್ದು ರಾಜರ ಯುಕ್ತಿಮಲ್ಲಿಕಾ ಎಂಬ ಗ್ರಂಥದಲ್ಲಿ. ಸುಲಿದ ಬಾಳೆಹಣ್ಣಿನಂತೆ ವಿಷಯಗಳ ಸರಣಿಯು ಇಲ್ಲಿ ನಿರೂಪಿತವಾಗಿದೆ. ಮಹಾಭಾರತದ ರಚನೆಯಿಂದ ವ್ಯಾಸರು ದೇವರ ಅವತಾರ ಎಂದು ತಿಳಿಯುತ್ತದೆ. ಹಾಗೆಯೇ ಈ ಯುಕ್ತಿಮಲ್ಲಿಕೆಯ ರಚನೆಯಿಂದ ರಾಜರನ್ನು ಭಾವಿಚತುರಾನನ ಎಂದು ತಿಳಿಯಬಹುದು.

ಇಂತಹ ಕೃತಿಯು ಸಾಮಾನ್ಯಜನರಿಂದ ದೂರ ಉಳಿದಿದೆ. ಈ ಅಂತರವನ್ನು ಕಮ್ಮಿಮಾಡಲು ಶ್ರೀಶ್ರೀ ವಿಶ್ವವಲ್ಲಭ ಶ್ರೀಪಾದರು ಇದನ್ನು ಕನ್ನಡೀಕರಿಸಲು ಸಂಕಲ್ಪಿಸಿದ್ದು ಬಹಳ ಸಂತೋಷ. ಮೂಲಕಾರರ ಅಭಿಪ್ರಾಯವನ್ನು ಸಮಗ್ರವಾಗಿ ಕೊಡಲು ಭಾಷಾಂತರವು ಸೋಲುತ್ತದೆ ಎಂದು ಎಲ್ಲರಿಗೂ ತಿಳಿದ ವಿಷಯ. ಆದರೂ ಶ್ರೀಗಳವರ ಪ್ರಯತ್ನವು ಶ್ಲಾಘನೀಯ. ತಿಳಿದ ವಿದ್ವಾಂಸರು ಕನ್ನಡೀಕರಿಸಿದ್ದಾರೆ. ಇದು ಜನರಿಗೆ ತಲುಪಲಿ. ಮೂಲಕೃತಿಯನ್ನೇ ಓದುವ ಅಭಿಲಾಷೆ ಉಂಟಾಗಲಿ. ರಾಜರ ಮೂಲಕ ದೇವರ ಅನುಗ್ರಹ ಲಭಿಸಲಿ ಎಂದು ಉಡುಪಿ ಶ್ರೀಕೃಷ್ಣ-ಮುಖ್ಯಪ್ರಾಣರಲ್ಲಿ ನಮ್ಮ ಪ್ರಾರ್ಥನೆ.

ನಾರಾಯಣ ಸ್ಮರಣೆಗಳು

**ಶ್ರೀಶ್ರೀವಿಶ್ವಪ್ರಿಯತೀರ್ಥ ಶ್ರೀಪಾದಂಗಳವರು**

ಶ್ರೀ ಅದಮಾರು ಮಠ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

# ಪರಮಪೂಜ್ಯ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರು

ಶ್ರೀ ಪಲಿಮಾರು ಮಠ, ರಥಬೀದಿ, ಉಡುಪಿ.

---

## ಅನುಗ್ರಹ ಸಂದೇಶ

ಒಪ್ಪಿಗೆಯಾಗದ್ದನ್ನು ಮನಸ್ಸು ಸಲೀಸಾಗಿ ಒಪ್ಪುವಂತೆ ಮಾಡುವ ಸಾಧನವೇ 'ಯುಕ್ತಿ'. 'ಯುಜ್ಯತೇ ಮನಃ ಯಾಯಾ ಸಾ ಯುಕ್ತಿಃ'. 'ಯುಕ್ತಿಯುಕ್ತಂ ವಚೋಗ್ರಾಹ್ಯಂ ಬಾಲಾದಪಿ ಶುಕಾದಪಿ' - ಆಡುವ ಮಗುವೇ ಇರಲಿ-ಮಾತನಾಡುವ ಗಿಣಿಯೇ ಇರಲಿ, ಯುಕ್ತಿಗೆ ಅನುಸಾರಿಯಾದ ಮಾತುಗಳು ಯಾರಿಂದ ಬಂದರೂ ಗ್ರಾಹ್ಯ. ಅಲಂಕಾರಶಾಸ್ತ್ರದಲ್ಲಿ ಪ್ರಧಾನವೆನಿಸಿದ ಅಲಂಕಾರ 'ಉಪಮಾ'. ಈ ಸಾದೃಶ್ಯದ-ಹೋಲಿಕೆಯ- ಉಪಮಾವನ್ನು ಮೂಲವಾಗಿಟ್ಟುಕೊಂಡು ನೂರಾರು ಅಲಂಕಾರಗಳು ಆವಿರ್ಭಾವ ಕಂಡಿವೆ. ಈ ಅಲಂಕಾರಶಾಸ್ತ್ರವು ಕೇವಲ ಪಾಮರಲೋಕದ ಮನೋರಂಜನೆಗೆ ಮಾತ್ರ ಮೀಸಲಾಗಿದ್ದರೆ, ಲೋಕಾತೀತನ ಲೋಕೇಶ-ಲೋಕಕರ್ತಾರನ ಆಕರ್ಷಣೆಗೆ- ಅನುಗ್ರಹಕ್ಕೆ-ಅರಿವಿಗೆ ಈ ಯುಕ್ತಿ ಅತ್ಯಗತ್ಯ.

ಪುರಾಣಗಳ ರಾಜ ಎನಿಸಿದ ಶ್ರೀಮದ್ಭಾಗವತದ 'ಜನ್ಮಾದ್ಯಸ್ಯ ಯತೋಽನ್ವಯಾದಿತರತಃ' ಎಂಬ ಮಂಗಲಾಚರಣೆ ಪದ್ಯದಲ್ಲಿದ್ದ 'ಇತರತಃ' ಎಂಬ ವೇದವ್ಯಾಸರ ಶಬ್ದಕ್ಕೆ ಗುರುಗಳಾದ ಶ್ರೀಮಧ್ವಾಚಾರ್ಯರು 'ತರ್ಕತಃ' ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ. ಶ್ರೀಹರಿಯ ಪರತತ್ವದ ಅರಿವಿಗೆ ಯುಕ್ತಿ ಅತ್ಯಗತ್ಯ ಎಂಬುದು ಶ್ರೀಮದಾಚಾರ್ಯರಿಗೂ ಸಮ್ಮತ ಎಂದಾಯಿತು.

ಪ್ರಮಾಣಗಳು ಕೇವಲ ಮೂರೇ, ಪ್ರತ್ಯಕ್ಷ-ಅನುಮಾನ-ಆಗಮ. ಕಣ್ಣಿಗೆ ಕಾಣದ ಅತೀಂದ್ರಿಯವೆನಿಸಿದ ಧರ್ಮ-ಅಧರ್ಮಗಳ ನಿರ್ಧಾರಕ್ಕೆ ಪ್ರತ್ಯಕ್ಷವು ಕುರುಡೇ ಸರಿ. ಆಸ್ತಿಕ-ನಾಸ್ತಿಕ, ವೈದಿಕ-ಅವೈದಿಕ ಇಬ್ಬರಿಗೂ ಸಮ್ಮತವಾದ ಒಂದು ಗ್ರಂಥವೆಂಬುದು ಇಲ್ಲವೇ ಇಲ್ಲ. ನಾಸ್ತಿಕರನ್ನೋ, ವಿಧರ್ಮಿಯರನ್ನೋ, ಅವೈದಿಕರನ್ನೋ ಒಪ್ಪಿಸುವ ಪ್ರಮಾಣ ಒಂದೇ ಒಂದು. ಅದು 'ಯುಕ್ತಿ'.

ಹಾಗಾಗಿಯೇ ಭಗವಂತನ ಸಾಕ್ಷಾತ್ ಅವತಾರರಾದ, ವೇದಗಳನ್ನು ವಿಭಾಗಮಾಡಿದ, ಶ್ರೀವೇದವ್ಯಾಸರು ಆ ವೇದಗಳ ಅರ್ಥನಿರ್ಣಯಕ್ಕೋಸ್ಕರ ರಚಿಸಿದ್ದು 'ಸೂತ್ರ'ಗಳನ್ನು. ಶ್ರುತ್ಯರ್ಥ ನಿರ್ಣಾಯಕವಾದ 'ಬ್ರಹ್ಮಸೂತ್ರ'ಗಳು; ನ್ಯಾಯಸೂತ್ರಗಳೆನಿಸಿದ ಸಮಗ್ರ 'ಸೂತ್ರಪ್ರಸ್ಥಾನ' ಯುಕ್ತಿಮಯ. ಶ್ರೀಮಧ್ವಾಚಾರ್ಯರು ತರ್ಕದಲ್ಲಿ ನಿಷ್ಣಾತರು ಯುಕ್ತಿ ಪ್ರಪಂಚದಲ್ಲಿ ಶ್ರೀಮದಾಚಾರ್ಯರಿಗೆ ಸರಿ ಮಿಗಿಲೆನಿಸಿದವರಿಲ್ಲ. ಅದಕ್ಕೆಂದೇ ಶ್ರೀಮದಾಚಾರ್ಯರ ಪ್ರಶಸ್ತಿಗಳ ಪರಮಾಲೆಯಲ್ಲಿ 'ಅನುಮಾನತೀರ್ಥ' ಅನ್ನುವುದೂ ಸೇರಿಕೊಂಡಿದೆ.

ಶ್ರೀಮಧ್ವಾಚಾರ್ಯರ ನಂತರದ ಅನುಮಾನತೀರ್ಥರೆಂದರೆ 'ಶ್ರೀವಾದಿರಾಜರು'. ಈ ಯುಕ್ತಿಮಲ್ಲಿಕೆಯ ಋಷಿಗಳೂ ಇವರೇ. ಶ್ರುತಿ-ಸ್ಮೃತಿಗನುಗುಣವಾದ ಕಂಡುಕೇಳರಿಯದ ಅಶ್ರುತಪ್ರತಿಭೆಯೇ 'ಯುಕ್ತಿಮಲ್ಲಿಕಾ'.

ಶ್ರೀಭೀಮಸೇನದೇವರು ತಂದ ಸೌಗಂಧಿಕಪುಷ್ಪದ ದಿವ್ಯಗಂಧ ದೇಶವ್ಯಾಪಿಯಾಗಿತ್ತು. ಸೌಗಂಧಿಕ ಕುಸುಮದ ಸುಗಂಧಕ್ಕೆ ದೈತ್ಯರು ಮೂರ್ಛಿತರಾದರು. ದೇವತೆಗಳು ಹರ್ಷೋಲ್ಲಸಿತರಾಗಿ ಗದ್ಗರಿತರಾದರು. ದ್ರೌಪದೀದೇವಿಯರ ಮುಡಿಗೆಮುಡಿದ ಈ ಸೌಗಂಧಿಕ ಕುಸುಮ ಐದುಬಣ್ಣದ್ದು. 'ಪಂಚವರ್ಣಾನಿ ಪಾತ್ಯಂತೇ ಪುಷ್ಪಾಣಿ ಭರತರ್ಷಭ'.

ರಾಜರ ಯುಕ್ತಿಮಲ್ಲಿಕೆಯು ಸುಗಂಧಮಯ ಸೌಗಂಧಿಕಪುಷ್ಪಯುಕ್ತಿಮಲ್ಲಿಕೆಯು ಐದು ಕಂಪಿನದ್ದು. ಗುಣಸೌರಭ-ಶುದ್ಧಿಸೌರಭ-ಭೇದಸೌರಭ-ವಿಶ್ವಸೌರಭ-ಫಲಸೌರಭ. ಯುಕ್ತಿಮಲ್ಲಿಕೆಯ ಕಂಪು ನಾಸ್ತಿಕರನ್ನು ಮೂರ್ಛಿತಗೊಳಿಸುತ್ತದೆ. ಸಜ್ಜನರಿಗೆ ಬ್ರಹ್ಮಾನಂದ. ರಾಜರು ಭಾರತೀದೇವಿಯ ಮುಡಿಗೆ ಮುಡಿಸಿದ ಕುಸುಮದ ಕಂಪು ದೇವತೆಗಳಿಗೂ ಆಪ್ಯಾಯಮಾನ.

ವೇದಪ್ರವಚನಾಚಾರ್ಯರೆಂದೇ ಖ್ಯಾತಿಗಳಿಸಿದ ಶ್ರೀಮದಾಚಾರ್ಯರಂತೆ ಶ್ರೀವಾದಿರಾಜರ ವೇದಸೂಕ್ತಗಳ ವ್ಯಾಖ್ಯಾನ-ವಿಮರ್ಶೆ ಅತ್ಯಪೂರ್ವ. ಐದುಸಾವಿರ ಪದ್ಯಗಳುಳ್ಳ ಮಗದೊಂದು ಅನುವ್ಯಾಖ್ಯಾನದಂತಿದೆ. ಇಂತಹ ಯುಕ್ತಿಮಲ್ಲಿಕೆಯ ಶುದ್ಧಪಾಠ-ಸಂಶೋಧನೆ ಸಮಗ್ರ ಅನುವಾದ ಕಾರ್ಯವು ಶ್ಲಾಘನೀಯವಾದುದು. ಶ್ರೀಮದಾಚಾರ್ಯರ ಜೀವನ ಚರಿತ್ರೆಯನ್ನು ಬಿತ್ತರಿಸುವ ಶ್ರೀಮಧ್ವವಿಜಯದಲ್ಲಿ ಪಂಡಿತಾಚಾರ್ಯರು ಸರ್ವಮೂಲ ಗ್ರಂಥಗಳು ಶ್ರೀಮದಾಚಾರ್ಯರ ಶುದ್ಧಪ್ರತೀಕ ಎಂದು ಹೇಳಿದ್ದಾರೆ. 'ರೂಪಮನ್ಯದಿವ ಧನ್ಯಮಾತ್ಮನಃ'. ಈ ಮಾತು ವಾದಿರಾಜರ ಯುಕ್ತಿಮಲ್ಲಿಕೆಗೂ ಅನ್ವಯವಾಗುತ್ತದೆ..

ಯುಕ್ತಿಮಲ್ಲಿಕೆಯ ಅನುವಾದದಂತಹ ಮಹತ್ಕಾರ್ಯವನ್ನು ಕೈಗೆತ್ತಿಕೊಂಡಿರುವ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರ ಸಾಹಸ ಅನ್ಯಾದೃಶ. ಇತ್ತೀಚೆಗಷ್ಟೇ ಸೋಂದಾ ಕ್ಷೇತ್ರದಲ್ಲಿ ಆಸ್ತಿಕ ಸಮಾಜಕ್ಕೆ ರಾಜಧಾಮವನ್ನು ನೀಡಿದ ಶ್ರೀಪಾದರಿಂದ ಇಂದು ಸಾರಸ್ವಲೋಕದ ಜಿಜ್ಞಾಸುಗಳಿಗೆ ಮಗದೊಂದು 'ರಾಜಧಾಮ'ದ ಅರ್ಪಣೆಯಾಗುತ್ತಿದೆ. ಇಂತಹ ಶ್ರೀಪಾದರಿಂದ ರಾಜರಿಗೆ ಪ್ರೀತಿಕರವಾದ ಕಾರ್ಯಗಳು ನಿರಂತರವಾಗಿ ನಡೆಯುತ್ತಿರಲಿ ಎಂದು ಅಪೇಕ್ಷಿಸುತ್ತೇವೆ.

ಈ ಕೃತಿಯ ಆಕೃತಿಗಾಗಿ ಶ್ರಮಿಸಿದ ಸಕಲರಿಗೂ ಶ್ರೀಕೃಷ್ಣ-ಮುಖ್ಯಪ್ರಾಣದೇವರ ಪೂರ್ಣಾನುಗ್ರಹವಿರಲಿ.

ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು**

ಶ್ರೀ ಪಲಿಮಾರು ಹೃಷಿಕೇಶ ಮಠ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

# ಪರಮಪೂಜ್ಯ ಶ್ರೀಶ್ರೀವಿದ್ಯೇಶತೀರ್ಥ ಶ್ರೀಪಾದರು

**ಶ್ರೀ ಭಂಡಾರಕೇರಿ ಮಠ, ಉಡುಪಿ.**

---

# ಅನುಗ್ರಹ ಸಂದೇಶ

ಶ್ರೀಜ್ಞಾನಿವರೇಣ್ಯರಾದ ಶ್ರೀವಾದಿರಾಜ ಶ್ರೀಮಚ್ಚರಣರು ತಮ್ಮ **ಯುಕ್ತಿಮಲ್ಲಿಕಾ** ಎಂಬ ಮೇರುಕೃತಿರತ್ನದ ಪ್ರಭೆಯಿಂದ ನಾನಾ ದುರ್ಮತರೂಪ ಅಂಧಕಾರಗಳನ್ನು ದೂರ ಮಾಡಿ ಭಗವಂತನ ದರ್ಶನಕ್ಕೆ ಅನುಕೂಲವನ್ನು ಕಲ್ಪಿಸಿದ್ದಾರೆ.

ಈ ದೃಷ್ಟಿಯಿಂದ ಅವರು **ಗುರುರಾಜ** ಎನಿಸಿದ್ದಾರೆ.

ಜ್ಞಾನಕ್ಕೆ ಪ್ರತಿಬಂಧಕವಾದ ಅಂಧಕಾರವನ್ನು ದೂರ ಮಾಡುವವನೇ **ಗುರು** ಎನಿಸಿಕೊಳ್ಳಲು ಅರ್ಹನಾನೆ?

ಭಗವಂತನಾದ ಶ್ರೀಹರಿಯನ್ನು ಗುಣಪೂರ್ಣ ನಿರ್ದೋಷ-ಜೀವವಿಲಕ್ಷಣ-ಸರ್ವೋತ್ತಮನೆಂದು ಪ್ರತಿಪಾದಿಸಿ ಆತನನ್ನು ಗೌರವಿಸುವ ಶಾಸ್ತ್ರವೇ ಆತನನ್ನು ತಲುಪಲು ಅವಶ್ಯಕವಾದ ನಿಷ್ಕಂಟಕ ರಾಜಮಾರ್ಗ. ಇದನ್ನೇ ಭಗವಾನ್ ಶ್ರೀಕೃಷ್ಣನು **ಪಂಥಾ ಮನ್ನಿಗಮಃ ಸ್ಮೃತಃ** ಎಂಬ ನುಡಿಯಲ್ಲಿ ಸ್ಪಷ್ಟಪಡಿಸಿದ್ದಾನೆ. ಇಲ್ಲಿ ತನ್ನ ಪರವಾಗಿ ತೆರೆದುಕೊಳ್ಳುವ ಶಾಸ್ತ್ರವೇ ರಾಜಮಾರ್ಗವೆಂದು ಪ್ರತಿಪಾದಿಸಲಾಗಿದೆ.

ಗೋವಿಂದನನ್ನು ಈ ತೆರನಾಗಿ ಆದರಿಸದ ನಿರ್ಗುಣತ್ವ ಪರವಾದ ಮಾಯಾವಾದಿಮತವು ಕುಪಥ ಎಂಬುದಾಗಿ ಸೂಚ್ಯವಾಗಿ ನಿಂದಿಸಿದ ಮಹಾಭಾರತ ವಚನವು ಮಧ್ವಮತವನ್ನು ಪರೋಕ್ಷವಾಗಿ ಎತ್ತಿಹಿಡಿದಿದೆ.

**ಏಷ ನಿಷ್ಕಂಟಕಃ ಪಂಥಾ ಯತ್ರ ಸಂಪೂಜ್ಯತೇ ಹರಿಃ ।**
**ಕುಪಥಂ ತಂ ವಿಜಾನೀಯಾತ್ ಗೋವಿಂದರಹಿತಾಗಮಮ್ ॥**

ಎಂಬ ಶ್ಲೋಕವನ್ನು ಆಧರಿಸಿ ಶ್ರೀವಾದಿರಾಜರು ಈ ವಿಷಯವನ್ನು ಸಮರ್ಥಿಸಿದ್ದಾರೆ. ವೇದವನ್ನು ಇತಿಹಾಸ ಪುರಾಣಗಳ ಮಾರ್ಗದರ್ಶನದಲ್ಲಿ ಅರ್ಥೈಸಬೇಕೆಂದು ಪ್ರಮಾಣಬದ್ಧವಾಗಿ ಅಭಿಪ್ರಾಯಪಟ್ಟ ರಾಜರು ಪದ್ಮಪುರಾಣದಲ್ಲಿ ಉಲ್ಲೇಖಗೊಂಡ-

**ಯೋಽಸೌ ನಿರ್ಗುಣ ಇತ್ಯುಕ್ತಃ ಶಾಸ್ತ್ರೇಷು ಜಗದೀಶ್ವರಃ ।**
**ಪ್ರಾಕೃತೈರ್ಹೇಯಸಂಯುಕ್ತೈಃ ಗುಣೈರ್ಹೀನತ್ವಮುಚ್ಯತೇ ॥**

ಎಂಬ ರುದ್ರದೇವರ ವಚನವನ್ನು ಆಧರಿಸಿ ಬಂಧನಕ್ಕೆ ಕಾರಣಗಳಾದ ಸತ್ತ್ವಾದಿ ದುರ್ಗುಣಗಳಿಂದ ರಹಿತನೆಂದು ಅರ್ಥೈಸುವುದೇ ಸೂಕ್ತವೆಂದು ಪ್ರತಿಪಾದಿಸಿದ್ದಾರೆ.

**ಏಷ ಸರ್ವೇಶ್ವರಃ, ಸಾಕ್ಷೀ, ಕರ್ಮಾಧ್ಯಕ್ಷಃ, ಸರ್ವಜ್ಞಃ, ಸರ್ವಭೂತಾಂತರಾತ್ಮಾ** ಮುಂತಾದ ಪದಗಳಿಂದ ಶ್ರುತಿಯು ಸರ್ವೇಶ್ವರತ್ವ ಸರ್ವಜ್ಞತ್ವ- ಕರ್ಮಾಧಿಪತ್ಯ ಮುಂತಾದ ಸದ್ಗುಣಗಳನ್ನು ಪ್ರತಿಪಾದಿಸಿ ತಾನೇ ಅವುಗಳನ್ನು ನಿರ್ಗುಣ ಪದದಿಂದ ನಿಷೇದಿಸಿದರೆ ವೇದವು ಉನ್ಮತ್ತನಂತೆ ಸ್ವವ್ಯಾಹತ ಭಾಷೆಯಾದೀತು. ಆದು ವೈದಿಕರಿಂದ ಹೇಗೆ ಮಾನ್ಯವಾದೀತು? ಎಂದು ಆಕ್ಷೇಪಿಸಿದ್ದಾರೆ.

**ಇಮೇಚಾನ್ಯೇಚ ಭಗವನ್ನಿತ್ಯಾ ಯತ್ರ ಮಹಾಗುಣಾಃ**

ಮುಂತಾದ ಭಾಗವತದಲ್ಲಿ ಉಲ್ಲೇಖಗೊಂಡ ಧರಣೀದೇವಿಯ ವಚನದಿಂದ ಭಗವಂತನಾದ ಶ್ರೀನಿವಾಸನ ಗುಣಗಳು ನಿತ್ಯಗಳೆಂದು ಸಿದ್ಧವಾಗಿದೆ.

**ಸತ್ಯಸ್ಸೋಽಸ್ಯಮಹಿಮಾ** ಎಂಬ ಶ್ರುತಿಯು ಭಗವಂತನ ಮಹಿಮೆಯನ್ನು ಸತ್ಯವೆಂದು ಸಾರುತ್ತಿದೆ.

**'ಪರಾಽಸ್ಯಶಕ್ತಿಃ ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ-ಬಲ-ಕ್ರಿಯಾ ಚ'**

ಮುಂತಾದ ಶ್ರುತಿಯು ಭಗವಂತನ ಜ್ಞಾನ-ಶಕ್ತಿ-ಬಲಾದಿಗುಣಗಳು ಸ್ವಾಭಾವಿಕಗಳೆಂದೂ ಸಾರುತ್ತಿದೆ.

ಹೀಗಾಗಿ ಸತ್ಯ-ನಿತ್ಯ-ಸ್ವಾಭಾವಿಕಗಳಾದ ಆ ಗುಣಗಳು ಭಗವಂತನಂತೆ ಮಾಯಾಕಲ್ಪಿತ-ವಲ್ಲವೆಂದು ಸಿದ್ಧವಾಗುತ್ತದೆ.

ಬ್ರಹ್ಮನಲ್ಲಿರುವ ಸತ್ಯತ್ವ-ಸಾಭಾವಿಕತ್ವ-ನಿತ್ಯತ್ವರೂಪನ್ಯಾಯಗಳು ನಿನ್ನ ಬ್ರಹ್ಮನಿಗೆ ಮಾಯಾಕಲ್ಪಿತತ್ವವನ್ನು ನಿರಾಕರಿಸುವುದಾದರೆ ಆತನ ಗುಣಗಳಿಗೆ ಆ ನ್ಯಾಯಗಳು ಏಕೆ ಅದನ್ನು ನಿಷೇಧಿಸುವುದಿಲ್ಲ? ಆದುದರಿಂದ ಸಗುಣಬ್ರಹ್ಮ ಈಶ್ವರಾಶ್ರಿತವಾದ ಮಾಯೆಯ ಶಿಶುವೆಂಬುದು ಕಾಲ್ಪನಿಕವೇ ವಿನಾ ಪ್ರಾಮಾಣಿಕವಲ್ಲವೆಂದು ಸಮರ್ಥಿಸಿದ್ದಾರೆ.

**'ಸತ್ಯತ್ವಾಚ್ಚ ಸ್ವಭಾವತ್ವಾನ್ನಿತ್ಯತ್ವಾತ್ ಬ್ರಹ್ಮವತ್ ಸದಾ**
**ಅಮಾಯಿಕಾ ಬ್ರಹ್ಮಧರ್ಮಾ ಇತಿಸ್ಯಾದನುಮಾಽಪಿನಃ'**

ಗುಣಗಳನ್ನು ನಿರಾಕರಿಸಿ ಗುಣಾಭಾವರೂಪ ದೋಷವನ್ನು ಸಮರ್ಥಿಸುವ ಮಾಯಾವಾದಿಗಳು ಭಗವಂತನಲ್ಲಿ ಅಸೂಯಾ ಪರಾಯಣರೇ ವಿನಾ ಭಗವತ್ ಭಕ್ತಿ ಪರಾಯಣರಲ್ಲ. ಅಸೂಯಾಪರರಾದ ದುರ್ಜನರು ಮಹಾತ್ಮರ ಗುಣಗಳನ್ನು ಅಲ್ಲಗಳೆಯುತ್ತಾರೆ. ಅವುಗಳಲ್ಲಿ ದೋಷವನ್ನು ಹುಡುಕುತ್ತಾರೆ.

ಮಾಯಾವಾದಿಗಳು ದೇವರ ಸದ್ಗುಣಗಳನ್ನು ನಿರಾಕರಿಸುತ್ತಾರೆ. ಅವುಗಳಲ್ಲಿ ಅವಿದ್ಯಾಕಲ್ಪಿತತ್ವರೂಪ ದೋಷವನ್ನು ಹೇಳುತ್ತಾರೆ.

ಇದು ಅವರ ದುರ್ಜನರ ದುರ್ಲಕ್ಷಣವನ್ನು ಸಾಬೀತು ಪಡಿಸುತ್ತದೆಂದು ಜರೆದಿದ್ದಾರೆ -

**ನ ಸಹೇತಗುಣಶ್ಲೋಕಾನ್ ದೋಷಶ್ಲೋಕಾನ್ ಖಲೋಽರ್ಜಯೇತ್ ।**
**ತ್ಯಕ್ತ್ವಾನೇಕಗುಣೋಕ್ತೀನಾಂ ಕಿಂ ನ ವೈಗುಣ್ಯವಾಗ್ ಭರಃ ॥**

ಆದುದರಿಂದ 'ಗುಣಭೃನ್ನಿರ್ಗುಣೋ ಮಹಾನ್' 'ನಿರ್ಗುಣಂ ಗುಣಭೋಕ್ತೃ ಚ' ಮುಂತಾದ ಕಡೆಗಳಲ್ಲಿ ಕಂಡುಬರುವ ವಿರೋಧಾಭಾಸ (ಮೇಲ್ನೋಟಕ್ಕೆ ಮಾತ್ರ ಕಂಡುಬರುವ ವಿರೋಧ) ವಚನಗಳನ್ನು ವೈದಿಕರಾದ ನಾವು ಹೊಂದಿಸಿಕೊಂಡು ಅರ್ಥೈಸಬೇಕು.

ಈ ದೃಷ್ಟಿಯಲ್ಲಿ ಜ್ಞಾನಾನಂದಾದಿ ಶುಭಗುಣಗಳಿಂದ ಸಂಪನ್ನ ಸತ್ತ್ವಾದಿ ದುರ್ಗುಣಗಳಿಂದ ದೂರವೆಂದು ಅರ್ಥೈಸುವುದೇ ಸಮಂಜಸ.

ಜೀವನಲ್ಲಿರುವ ಮಹಾದೋಷರೂಪವಾದ ಅಜ್ಞಾನವನ್ನು ಕೆಲವು ಮಾಯಾವಾದಿಗಳು ಬ್ರಹ್ಮನಲ್ಲಿ ಹೇಳುತ್ತಾರೆ. ಆದರೆ ಬ್ರಹ್ಮನಲ್ಲಿ ಅಜ್ಞಾನವಿದೆ ಎಂಬ ವಿಷಯವು ಬ್ರಹ್ಮನಿಗೆ 'ಅಹಮಜ್ಞಃ' ಎಂಬ ಅಜ್ಞಾನ ಪ್ರತ್ಯಕ್ಷವಿದ್ದರೆ ಮಾತ್ರ ಅದರಿಂದ ಸಿದ್ಧವಾಗಬಲ್ಲದು. ಆದರೆ ಆತನಿಗೆ ಆ ಅನುಭವವಿಲ್ಲ. ಅದಕ್ಕೆ ವಿರುದ್ಧವಾಗಿ 'ಅಹಂ ಸರ್ವಜ್ಞಃ' ಎಂಬ ಸರ್ವಜ್ಞತ್ವದ ಅನುಭವವಿದೆ.

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥**

ಪರಬ್ರಹ್ಮಸ್ವರೂಪಿಯಾದ ಶ್ರೀಕೃಷ್ಣನ ಮಾತಿನಿಂದ ಆತನಿಗೆ ಸರ್ವಜ್ಞತ್ವದ ಅನುಭವವಿದೆ ಎಂದು ಸೂಚಿತವಾಗುತ್ತದೆ. ಒಟ್ಟಿನಲ್ಲಿ ಜೀವನ ಮನೋಗುಹೆಯಲ್ಲಿ ವಾಸಿಸುವ 'ಅಹಮಜ್ಞಃ'ಎಂಬ ಅಜ್ಞಾನ ಪ್ರತ್ಯಕ್ಷರೂಪವಾದ ಹೆಣ್ಣು ಜಿಂಕೆಯು 'ಅಹಂ ಸರ್ವಜ್ಞಃ' ಎಂಬ ಸರ್ವಜ್ಞತ್ವ ಪ್ರತ್ಯಕ್ಷರೂಪಪ್ರಬಲ ಸಿಂಹಕ್ಕೆ ಆಶ್ರಯವಾದ ಪರಬ್ರಹ್ಮನ ಹೃದಯೊಳಗೆ ಪ್ರವೇಶಿಸಿ ಆತನಿಗೆ ಅಜ್ಞಾನವನ್ನು ಸ್ಥಾಪಿಸಲು ಹೇಗೆ ಸಮರ್ಥವಾದೀತು? ಒಂದು ವೇಳೆ ಅಹಮಜ್ಞಃ ಎಂಬ ಅಜ್ಞಾನ ಪ್ರತ್ಯಕ್ಷರೂಪವಾದ ದುರ್ಬಲವಾದ ಹೆಣ್ಣು ಜಿಂಕೆಯನ್ನು ಬಲಾತ್ಕಾರದಿಂದ (ಕುಯುಕ್ತಿಯಿಂದ) ಮಾಯಾವಾದಿಗಳು ಪರಬ್ರಹ್ಮನ ಹೃದಯ ಗುಹೆಯೊಳಗೆ ನೂಕಿದರೂ, ಅದು ಅಲ್ಲಿ ಜಾಗೃತವಾದ ಅಹಂಸರ್ವಜ್ಞಃ ಎಂಬ ಪ್ರಬಲ ಪ್ರತ್ಯಕ್ಷಸಿಂಹದಿಂದ ಪೀಡಿತವಾಗಿ ಪ್ರಾಮಾಣ್ಯರೂಪ ಪ್ರಾಣವನ್ನೇ ಕಳೆದುಕೊಳ್ಳಬೇಕಾದೀತು? ಅದು ಜೀವಂತವಾಗಿದ್ದು ಪರಬ್ರಹ್ಮನಿಗೆ ಅಜ್ಞಾನವನ್ನು ಸ್ಥಾಪಿಸಲು ಸರ್ವಥಾ ಶಕ್ತವಾಗಲಾರದು ಎಂದು ಸಾಹಿತ್ಯಮುದ್ರೆಯಿಂದ ರಾಜರು ಮನೋಜ್ಞವಾಗಿ ಅಜ್ಞಾನರೂಪದೋಷವನ್ನು ಶ್ರೀಹರಿಗೆ ನಿರಾಕರಿಸಿದ್ದಾರೆ –

**ಅತಸ್ಸರ್ವಜ್ಞತಾಧ್ಯಕ್ಷಹರ್ಯಕ್ಷಸ್ಯ ಗುಹಾಮಿಮಾಮ್ ।**
**ಅಜ್ಞಾನಾಧ್ಯಕ್ಷಹರಿಣೀ ಜೈವೀ ನೈವ ವಿವಿಕ್ಷತಿ ॥** – ಶುದ್ಧಿ ಸೌರಭ ೭೭ನೇ ಪದ್ಯ.

ಮಾಯಾವಾದಿಗಳು ಜ್ಞಾನಸ್ವರೂಪಭೂತಬ್ರಹ್ಮನಿಗೆ ಅಜ್ಞಾನವನ್ನು ಅಂಗೀಕರಿಸುತ್ತಾರೆ. ಜ್ಞಾನಪ್ರಕಾಶರೂಪನಾದ ಆತನಿಗೆ ಅಜ್ಞಾನಾಂಧಕಾರ ಹೇಗೆ? ಎಂದು ಪ್ರಶ್ನಿಸಿದರೆ, ಜಡವಾದ

ಅಂತಃಕರಣವೃತ್ತಿ ಜ್ಞಾನಕ್ಕೆ ಮಾತ್ರ ಅಜ್ಞಾನದಿಂದ ವಿರೋಧವಿದೆ. ಸ್ವರೂಪಜ್ಞಾನಕ್ಕೆ ಆದರಿಂದ ವಿರೋಧವಿಲ್ಲ. ಸ್ವರೂಪಜ್ಞಾನವು ಅಜ್ಞಾನಕ್ಕೆ ಸ್ಫೋರಕವೇ ಆಗಿದೆ ಎಂದು ವಾದಿಸುತ್ತಾರೆ. ಸ್ವರೂಪ ಜ್ಞಾನಕ್ಕೆ ಅಜ್ಞಾನ ಸಂಬಂಧವು ಯುಕ್ತವೇ, ವೃತ್ತಿಜ್ಞಾನಕ್ಕೆ ಅಜ್ಞಾನ ಸಂಬಂಧ ಸಾಮನಾಧಿಕರಣ್ಯ ಕೂಡುವುದಿಲ್ಲವೆನ್ನುವ ಈ ವಾದವು ಮುಂದೆ ಹೇಳುವ ವಾದಕ್ಕೆ ಸಮಾನವಾಗಿದ್ದು ಅಪಹಾಸಾಸ್ಪದವಾಗಿದೆ.

ಬ್ರಾಹ್ಮಣನಿಗೆ ಶೂದ್ರಕನ್ಯಾವಿವಾಹರೂಪ ಸಂಬಂಧವು ಧರ್ಮಸಮ್ಮತವಲ್ಲವೆಂದು ನ್ಯಾಯವನ್ನು ಮುಂದಿಟ್ಟು ಬ್ರಾಹ್ಮಣನಿಗೆ ಶೂದ್ರಕನ್ಯಾವಿವಾಹ ಸಂಬಂಧವನ್ನು ಪ್ರಾಜ್ಞವೈದಿಕರು ನಿರಾಕರಿಸುತ್ತಾರೆ. ಆಗ ಒಬ್ಬ ವೈದಿಕಾಭಾಸನು ಪಾಮರ ಬ್ರಾಹ್ಮಣನಿಗೆ ಮಾತ್ರ ಶೂದ್ರಕನ್ಯಾ ವಿವಾಹ ಸಂಬಂಧವು ಧರ್ಮಸಮ್ಮತವಲ್ಲ. ವೈದಿಕ ಬ್ರಾಹ್ಮಣನಿಗೆ ಶೂದ್ರಕನ್ಯಾ ಸಂಬಂಧವು ಕೂಡುತ್ತದೆ. ಅಲ್ಲೇನೂ ವಿರೋಧವಿಲ್ಲವೆನ್ನುವ ವಾದಾಭಾಸಕ್ಕೆ ಮಾಯಾವಾದಿಯ ವಾದವು ಸಮಾನವಾಗಿದೆ. ಇಲ್ಲಿ ನಿಕೃಷ್ಟವಾದ ಜಡಭೂತವಾದ ವೃತ್ತಿ ಜ್ಞಾನವು ಪಾಮರಬ್ರಾಹ್ಮಣನಂತಿದೆ. ಸ್ವರೂಪಜ್ಞಾನವು ವೈದಿಕ ಬ್ರಾಹ್ಮಣನಂತಿದೆ. ಪಾಮರಬ್ರಾಹ್ಮಣನಿಗೆ ಮಾತ್ರ ಶೂದ್ರಕನ್ಯಾಸಂಬಂಧವು ವಿರುದ್ಧವಾಗಿದೆ, ವೈದಿಕ ಬ್ರಾಹ್ಮಣನಿಗೆ ಶೂದ್ರಕನ್ಯಾಸಂಬಂಧವು ವಿರುದ್ಧವಲ್ಲವೆಂದು ವಾದಿಸಿದಂತೆ ಪಾಮರ ಬ್ರಾಹ್ಮಣಸ್ಥಾನೀಯವಾದ ಜಡಭೂತವಾದ ಅಂತಃಕರಣವೃತ್ತಿಜ್ಞಾನಕ್ಕೆ ಮಾತ್ರ ಶೂದ್ರಕನ್ಯಾ ಸ್ಥಾನೀಯವಾದ-ಅಜ್ಞಾನ ಸಂಬಂಧವು ವಿರುದ್ಧವಾಗಿದೆ. (ಅಜ್ಞಾನದೊಂದಿಗೆ ಸೇರುವಿಕೆ ವಿರುದ್ಧವಾಗಿದೆ). ಸ್ವರೂಪಜ್ಞಾನಕ್ಕೆ ಅಜ್ಞಾನದಿಂದ ವಿರೋಧವಿಲ್ಲ. ಆದುದರಿಂದ ವೈದಿಕ ಬ್ರಾಹ್ಮಣಸ್ಥಾನೀಯವಾದ ಜ್ಞಾನಸ್ವರೂಪವಾದ ಬ್ರಹ್ಮನಿಗೆ ಅವಿದ್ಯಾರೂಪ ಶೂದ್ರಕನ್ಯಾ ಸಂಬಂಧ ಸಮರ್ಪಕವೆನ್ನುವ ಮಾಯಾವಾದಿಗಳ ವಾದವು ಅಪಹಾಸಾಸ್ಪದವಾಗಿದೆ.

ವೈದಿಕಾಭಾಸನು ಹಿಂದೆ ಹೇಳುವ ಸುಳ್ಳುವಾದದಿಂದ ವೈದಿಕ ಬ್ರಾಹ್ಮಣನಿಗೆ ಶೂದ್ರಕನ್ಯಾ ವಿವಾಹರೂಪಸಂಬಂಧವನ್ನು ಬಲಾತ್ಕಾರದಿಂದ ಮಾಡಿಸಿದರೆ ಅದು ಗೊತ್ತಾದರೆ ವೈದಿಕಳಾದ ವರನ ತಾಯಿ (ಅತ್ತೆ) ನಿಷಿದ್ಧವಾದ ಶೂದ್ರಕನ್ಯೆಯನ್ನು ಅಸಹನೆಯಿಂದ ಹೊಡೆದು ತನ್ನ ವರಪುತ್ರನಿಂದ ಆಕೆಯನ್ನು ದೂರಕ್ಕೆ ಓಡಿಸುತ್ತಾಳೆ. ಅದೇ ತೆರನಾಗಿ **'ಮಾಯಾಂ ವ್ಯುದಸ್ಯಚಿಚ್ಛಕ್ತ್ಯಾ ಕೈವಲ್ಯೇಸ್ಥಿತ ಆತ್ಮನಿ'** ಎಂಬ ಭಾಗವತೋಕ್ತಿಯು ವರನ ತಾಯಿಯ (ಅತ್ತೆಯ) ಸ್ಥಾನದಲ್ಲಿದೆ. ಏಕೆಂದರೆ ಆ ಉಕ್ತಿಯು ಭಗವಂತನನ್ನು ಸರ್ವಜ್ಞಾನಸ್ವರೂಪದಲ್ಲಿ ವ್ಯಕ್ತಪಡಿಸಿದ್ದಾಳೆ. (ಮಗುವನ್ನು ಅಭಿವ್ಯಕ್ತಿಗೊಳಿಸುವವಳು ತಾಯಿ ತಾನೇ?) ಭಾಗವತೋಕ್ತಿ ಎಂಬ ಅತ್ತೆಯೂ ಕೂಡಾ ವೈದಿಕನಾದ ತನ್ನ ವರಪುತ್ರನಿಗೆ ಸೊಸೆಸ್ಥಾನದಲ್ಲಿರುವ ಅವಿದ್ಯಾರೂಪ ಶೂದ್ರಕನ್ಯಾಸಂಬಂಧವನ್ನು ಸಹಿಸದೆ, ಆ ಅವಿದ್ಯಾರೂಪ ಶೂದ್ರ ಕನ್ಯೆಯನ್ನು ಹೊಡೆದು ತಮ್ಮ ವೈದಿಕ ವರಪುತ್ರನಾದ ಪರಬ್ರಹ್ಮನಿಂದ ದೂರ ಓಡಿಸಿದ್ದಾಳೆ ಎಂದು ವಾದಿರಾಜರು ದೃಷ್ಟಾಂತ ಚಮತ್ಕಾರದಿಂದ ಶ್ರೀಹರಿಗೆ ಅಜ್ಞಾನ ಸಂಬಂಧವನ್ನು ಮನೋಜ್ಞವಾಗಿ ನಿರಾಕರಿಸಿದ್ದಾರೆ-

**ಮಾಯಾಂ ವ್ಯುದಸ್ಯಚಿಚ್ಛಕ್ತ್ಯೇತ್ಯುಕ್ತಿಶ್ಶ್ವಶ್ರೂಃ ಕ್ಷಣೇಕ್ಷಣೇ ।**
**ಉದೂಢಾಮಪಿ ತಾಂ ಕನ್ಯಾಂ ಕನ್ಯಾದೇವೇತಿ ಮೇ ಮತಿಃ ॥**-ಶುದ್ಧಿಸೌರಭ ೮೧

ಪಂಚಭೇದಗಳನ್ನೊಳಗೊಂಡ ಪ್ರಪಂಚವು ಮಾಯಾಕಲ್ಪಿತ (ಮಿಥ್ಯೆ) ಎಂದು ಮಾಯಾವಾದಿಗಳು ಹೇಳುತ್ತಾರೆ. ಆದರೆ ಅವರ ವಾದವು 'ವಿಶ್ವಂಸತ್ಯಂ' ಮುಂತಾದ ವೇದ ವಚನಕ್ಕೆ ವಿರುದ್ಧವಾಗಿದೆ. ಇದಲ್ಲದೆ ಅರ್ಜುನಾದಿಗಳು ದಿವ್ಯಪ್ರತ್ಯಕ್ಷಕ್ಕೂ ವಿರುದ್ಧವಾಗಿದೆ ಎಂದು ರಾಜರು ಪ್ರತಿಪಾದಿಸಿದ್ದಾರೆ, ಅವರು ದ್ವಿವ್ಯಪ್ರತ್ಯಕ್ಷಕ್ಕೆ ಗೋಚರವಾದ ಈ ಪ್ರಪಂಚವು ಹೇಗೆ ಮಾಯಾಕಲ್ಪಿತವಾಗಲು ಸಾಧ್ಯ? ಮಿಥ್ಯೆಯೂ ಕೂಡ ಶ್ರೀಕೃಷ್ಣನು ನೀಡಿದ ದೃಷ್ಟಿಗೆ ಗೋಚರವಾಗುವುದಾದರೆ ಅದು ದಿವ್ಯದೃಷ್ಟಿ ಹೇಗೆ ಆದೀತು?

ಅದು ಭಕ್ತನಾದ ಅರ್ಜುನನನ್ನು ವಂಚಿಸಿದ ಕುದೃಷ್ಟಿ ಆಗುವುದಿಲ್ಲವೆ? ಎಂದು ಸೂಚ್ಯವಾಗಿ ಪ್ರಬಲವಾಗಿ ಆಕ್ಷೇಪಿಸಿದ್ದಾರೆ-

**'ದಿವ್ಯದೃಷ್ಟ್ಯಾ ದೃಷ್ಟೋ ಯಃ ಕಥಂ ಮಾಯಾಮಯೋ ಭವೇತ್'**

ಒಟ್ಟಿನಲ್ಲಿ ಭೀಷ್ಮದ್ರೋಣ-ಕೃಪ-ವಿದುರ-ಉದಂಕ ಯಶೋದಾ-ಅರ್ಜುನ-ಭೀಷ್ಮಕ ಮುಂತಾದ ಮಹಾತ್ಮರ ದಿವ್ಯದೃಷ್ಟಿಯಲ್ಲಿ ಜಗನ್ನಿವಾಸ ರೂಪದಲ್ಲಿ ಗೋಚರನಾದ ಶ್ರೀಹರಿಯಲ್ಲಿ ಸರ್ವಥಾ ಜಗತ್ತು ಸತ್ಯ. ಮಾಯಾಕಲ್ಪಿತವಲ್ಲವೆಂದೇ ಸಿದ್ಧವಾಗುತ್ತದೆ ಎಂಬುದು ವಾದಿರಾಜರ ಅಭಿಪ್ರಾಯ. ಪಂಚಸುಗಂಧಗಳನ್ನೊಳಗೊಂಡ ಯುಕ್ತಿಮಲ್ಲಿಕೆಗೆ ಪುಷ್ಪಗಳಿಂದ ತಮ್ಮ ಉಪಾಸ್ಯ ಮೂರ್ತಿಯಾದ ಶ್ರೀವರಾಹಭಿನ್ನ ಹಯವದನನನ್ನು ಭಕ್ತಿಯಿಂದ ಆರಾಧಿಸಿ, ಶ್ರೀವಾದಿರಾಜ ಶ್ರೀಮಚ್ಚರಣರು 'ಭಾವಪುಷ್ಪರಾಜ' ಎನಿಸಿದ್ದಾರೆ.

ಅವರ ಪ್ರತಿಯೊಂದು ಕೃತಿಯ ಜ್ಞಾನ ಸುಧೆಯನ್ನು ಸವಿದ ಸುಜೀವಿಯು ಕ್ರಮೇಣ 'ಅಜರಾಮರ'ನಾಗಿ ಹಯವದನನ ಸಾನ್ನಿಧ್ಯದಲ್ಲಿ ಸುಖಿಯಾಗಿರುತ್ತಾನೆ ಎಂಬ ವಿಚಾರದಲ್ಲಿ ಎರಡು ಮಾತಿಲ್ಲ. ಅನೇಕ ದುರ್ಮತಗಳ ದುರ್ವಾಸನೆಯಿಂದ ಬುಧ ಜನರು ತತ್ತ್ವಜ್ಞಾನ ಪ್ರಪಂಚದಲ್ಲಿ ಉಸಿರುಗಟ್ಟಿದ ದುಃಸ್ಥಿತಿಯನ್ನು (ವಿಚಾರಶಕ್ತಿ ಕುಂಠಿತವಾದ ಸ್ಥಿತಿಯನ್ನು) ಪಡೆದಾಗ ರಾಜರು ಅವತರಿಸಿ ತನ್ನ ಯುಕ್ತಿಮಲ್ಲಿಕೆ ಪುಷ್ಪಗಳಿಂದ ಅದರ ವಿಚಾರ-ವಾದರೂಪ ಶ್ವಾಸವನ್ನು ಸುಗಂಧಗೊಳಿಸಿ ಸುಖಶ್ವಾಸವನ್ನು ನೀಡಿದೆ ದೀಪ್ಯಮಾನವಾಗಿದ್ದಾರೆ -

**ದುರ್ಮತಾಮೇಧ್ಯದುರ್ಗಂಧರುದ್ಧಶ್ವಾಸೇ ಬುಧೇ ಜನೇ ।**
**ವಾದೀಶೋ ಯುಕ್ತಿಪುಷ್ಪೇಣ ಸುರಭಿಶ್ವಾಸದೋ ಬಭೌ ।**

ಶ್ರೀರಾಜರ ಯುಕ್ತಿಮಲ್ಲಿಕಾರೂಪ ಮೇರುಕೃತಿಗೆ ಅವರ ಪೂರ್ವಾಶ್ರಮ ಅನುಜರಾದ ನಮ್ಮ ಮಠದ ಪರಂಪರೆಯಲ್ಲಿ ವಿರಾಜಮಾನರಾದ ಶ್ರೀ ಸುರೋತ್ತಮತೀರ್ಥರು 'ಭಾವವಿಲಾಸಿನೀ' ಎಂಬ ಉತ್ತಮ ಟಿಪ್ಪಣಿಯನ್ನು ವಿರಚಿಸಿ ಮಹೋಪಕಾರವನ್ನು ಮಾಡಿದ್ದಾರೆ. ಶ್ರೀ ಸುರೋತ್ತಮತೀರ್ಥರು ಶ್ರೀವಾದಿರಾಜ ಶ್ರೀಮಚ್ಚರಣರಿಗೆ, ಮಧ್ವಾಚಾರ್ಯರಿಗೆ ಅವರ ಪೂರ್ವಾಶ್ರಮದ ತಮ್ಮಂದಿರಾದ ವಿಷ್ಣುತೀರ್ಥರಂತೆ ಅತ್ಯಂತ ಪ್ರಿಯರಾಗಿದ್ದರು -

**'ಸುರೋತ್ತಮಾರ್ಯಸ್ತಸ್ಯಾಸೀತ್ ಸೋದರ್ಯೋ ವಿದ್ವದಗ್ರಣೀಃ ।**
**ಯತೀಂದ್ರೋ ವಿಷ್ಣುತೀರ್ಥಾರ್ಯೋ ಯಥಾ ಮಧ್ವಸ್ಯ ವೈ ಪುರಾ.॥'**

ಶ್ರೀವಾದಿರಾಜರಲ್ಲಿ ಅನನ್ಯಭಕ್ತಿ ಇರುವುದರಿಂದ ಶ್ರೀ ಸುರೋತ್ತಮತೀರ್ಥರು ವಿನಯದಿಂದ, ತಾನೇ (ವಾದಿರಾಜರೇ) ತನ್ನ ಕೃತಿಗೆ ಟಿಪ್ಪಣಿಯನ್ನು ವಿರಚಿಸಿ ನನ್ನ ಹೆಸರಿನಲ್ಲಿ ಅದನ್ನು ಪ್ರಖ್ಯಾತಪಡಿಸಿದರೆಂದು ಹೇಳಿಕೊಂಡಿದ್ದಾರೆ. ಸೋದೆ ಮಠಾಧೀಶರಾದ ಶ್ರೀವಿಶ್ವವಲ್ಲಭತೀರ್ಥರು ಪರ್ಯಾಯ ಪೀಠಸ್ಥರಾಗಿ ಅತ್ಯುತ್ತಮವಾದ ಜ್ಞಾನಕಾರ್ಯವನ್ನು ಕೈಗೊಂಡಿದ್ದಾರೆ.

ಶ್ರೀಸುರೋತ್ತಮತೀರ್ಥರ ಟಿಪ್ಪಣಿಯನ್ನು ಆಧರಿಸಿ ರಾಜರ ಯುಕ್ತಿಮಲ್ಲಿಕೆರೂಪ ಮೇರುಕೃತಿಗೆ ವಿದ್ವಾಂಸರಿಂದ ಸಮಂಜಸವಾದ ಅನುವಾದ ಕಾರ್ಯವನ್ನು ಮಾಡಿಸಿ ಅದನ್ನು ಪ್ರಕಟಪಡಿಸುವ ಘನೋದ್ದೇಶದಿಂದ ಪ್ರವೃತ್ತರಾಗಿದ್ದಾರೆ. ಅದಕ್ಕಾಗಿ ನಾವು ಅವರನ್ನು ಅಭಿನಂದಿಸುತ್ತೇವೆ. ಶ್ರೀವಾದಿರಾಜರು ಅಗ್ರಜರಾದರೆ ಸುರೋತ್ತಮತೀರ್ಥರು ಅನುಜರು. ಅವರ ನಡುವೆ ಘನಿಷ್ಠವಾದ ಸೌಭ್ರಾತ್ರಭಾವವಿತ್ತು. ಅವರೀರ್ವರ ಅನುಗ್ರಹದಿಂದ ಸೋದೆ ಮಠ ಶ್ರೀಭಂಡಾರಕೇರಿ ಮಠಗಳ ನಡುವೆಯೂ ಸ್ನೇಹಮಯವಾದ ಘನಿಷ್ಠ ಸಂಬಂಧ ಉಳಿಯಲಿ–ಬೆಳೆಯಲಿ ಎಂದು ಹಾರೈಸುತ್ತೇವೆ.

ವಿದ್ವಾನ್ ಶ್ರೀ ಬೆ.ನಾ. ವಿಜಯೀಂದ್ರಾಚಾರ್ಯರು ಅನುವಾದ ಕಾರ್ಯವು ಸಮಂಜಸವಾಗಿ ಸುಸಂಪನ್ನಗೊಳಿಸಲು ಕಟಿಬದ್ಧರಾಗಿನಿಂತು ರಾಜರ ಸೇವೆಯನ್ನು ಮಾಡುತ್ತಿದ್ದಾರೆ. ಅವರು ಈ ಕಾರಣದಿಂದ ಅಭಿನಂದನಾರ್ಹ. ಹಿರಿಯ ವಿದ್ವಾಂಸರಾದ ಶೇಷಗಿರಿ ಆಚಾರ್ಯರು ವಿದ್ವಾಂಸರ ಅನುವಾದದ ಶೋಧನೆಗೈದು ಶುದ್ಧಾನುವಾದವು ಜಿಜ್ಞಾಸುಗಳಿಗೆ ದೊರಕಿಸಲು ಅವಿರತ ಶ್ರಮರೂಪ ತಪಸ್ಸನ್ನು ಮಾಡಿ ರಾಜರ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಅದಕ್ಕಾಗಿ ಅವರನ್ನು ಅಭಿನಂದಿಸುತ್ತಿದೆ. ವಿದ್ವಾಂಸರಾದ ಸಿ.ಎಚ್. ಶ್ರೀನಿವಾಸಮೂರ್ತಿಯವರೂ ಈ ಕಾರ್ಯದಲ್ಲಿ ಸಹಕರಿಸಿ ಅಭಿನಂದನಾರ್ಹರಾಗಿದ್ದಾರೆ. ಇತರ ವಿದ್ವಾಂಸರೂ ಅನುವಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಶ್ರೀವಾದಿರಾಜ ಹಯವದನರ ಅನುಗ್ರಹಕ್ಕೆ ಅರ್ಹರಾಗಿದ್ದಾರೆ.

ಜಿಜ್ಞಾಸುಗಳು ಇದರ ಸದುಪಯೋಗವನ್ನು ಪಡೆದು ಕೃತಾರ್ಥರಾಗಲಿ. ಶ್ರೀ ಸೋದೆ ಶ್ರೀಗಳ ಸಾಹಸಮಯವಾದ ಕಾರ್ಯವು ಶ್ರೀಕೃಷ್ಣ-ಹಯವದನ ರಾಜರ ಅನುಗ್ರಹ ಕವಚದಿಂದ ಸುರಕ್ಷಿತವಾಗಿ ಯಶಸ್ವಿಯಾಗಲಿ ಎಂದು ಉಪಾಸ್ಯಮೂರ್ತಿಯಾದ ಶ್ರೀ ಕೃಷ್ಣ-ಹಯವದನ-ಅಭಿನ್ನ ಶ್ರೀರಾಮಚಂದ್ರ ದೇವರನ್ನು ಪ್ರಾರ್ಥಿಸುತ್ತೇವೆ.

ನಾರಾಯಣ ಸ್ಮರಣೆಗಳು

**ಶ್ರೀಶ್ರೀವಿದ್ಯೇಶತೀರ್ಥ ಶ್ರೀಪಾದಂಗಳವರು**

ಶ್ರೀ ಭಂಡಾರಕೇರಿ ಮಠ

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿಶ್ವಪ್ರಸನ್ನತೀರ್ಥ ಶ್ರೀಪಾದರು**

**ಶ್ರೀ ಪೇಜಾವರ ಅಧೋಕ್ಷಜ ಮಠ, ರಥಬೀದಿ, ಉಡುಪಿ.**

---

# ಅನುಗ್ರಹ ಸಂದೇಶ

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಭಾವಿಸಮೀರಶ್ರೀಮದ್ವಾದಿರಾಜಭಗವತ್ಪಾದ ವಿರಚಿತ ಯುಕ್ತಿಮಲ್ಲಿಕಾ ಗ್ರಂಥವು ಶ್ರೀಶ್ರೀ ಸುರೋತ್ತಮತೀರ್ಥಮುನಿ ವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಸಹಿತವಾಗಿ ಸಮಗ್ರವಾಗಿ ಕನ್ನಡಾನುವಾದದೊಂದಿಗೆ ಪ್ರಕಟವಾಗುತ್ತಿರುವುದು ಸಂತಸದ ವಿಚಾರ.

ಶ್ರೀಮನ್ಮಹಾವಿಷ್ಣುವಿನ ಸರ್ವೋತ್ತಮತ್ವವನ್ನು ಸದಾ ಪ್ರತಿಪಾದನೆ ಮಾಡುತ್ತಿರಬೇಕೆಂಬುದು ಶ್ರೀಮದಾಚಾರ್ಯರ ಆದೇಶ. ಶ್ರೀಮದ್ವಾದಿರಾಜ ಗುರುಸಾರ್ವಭೌಮರಿಂದ ರಚಿತವಾದ ಯುಕ್ತಿಮಲ್ಲಿಕೆಯು ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನು ಸಮರ್ಥವಾಗಿ ಪ್ರತಿಪಾದಿಸುವ ಒಂದು ಅಪೂರ್ವಕೃತಿ.

ಸಂಸ್ಕೃತವನ್ನರಿಯದವರಿಗೆ ಈ ಕೃತಿಯನ್ನು ಅರ್ಥೈಸಿಕೊಳ್ಳುವಲ್ಲಿ ಈ ಕನ್ನಡಾನುವಾದವು ಅತ್ಯಂತ ಉಪಕಾರಿ. ಇಂತಹ ಒಂದು ಯೋಜನೆಯನ್ನು ಕೈಗೆತ್ತಿಕೊಂಡಿರುವ ಪರ್ಯಾಯ ಶ್ರೀಸೋದೆ ವಾದಿರಾಜ ಮಠದ ಶ್ರೀಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರನ್ನು ಅಭಿನಂದಿಸುತ್ತಾ ಇದರ ಸದುಪಯೋಗವು ಸಮಸ್ತ ಆಧ್ಯಾತ್ಮ ಬಂಧುಗಳಿಗೂ ದೊರೆಯುವಂತಾಗಲೆಂದು ಆಶಿಸುವೆವು.

ಇಂತು ಸಪ್ರೇಮ ನಾರಾಯಣ ಸ್ಮರಣೆಗಳು

**ಶ್ರೀಶ್ರೀವಿಶ್ವಪ್ರಸನ್ನತೀರ್ಥ ಶ್ರೀಪಾದಂಗಳವರು**

ಶ್ರೀಪೇಜಾವರ ಅಧೋಕ್ಷಜ ಮಠ, ಉಡುಪಿ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿದ್ಯಾವಲ್ಲಭತೀರ್ಥ ಶ್ರೀಪಾದರು**

ಶ್ರೀ ಕಾಣೆಯೂರು ಮಠ, ರಥಬೀದಿ, ಉಡುಪಿ.

# ಅನುಗ್ರಹ ಸಂದೇಶ

ಶ್ರೀವಾದಿರಾಜಗುರುಸಾರ್ವಭೌಮರಿಂದ ರಚಿತವಾದ ಯುಕ್ತಿಮಲ್ಲಿಕಾಗ್ರಂಥವು ಕೇವಲ ಯುಕ್ತಿಯಿಂದ ಮಾತ್ರಕೂಡಿದ್ದಲ್ಲ. ಇದೊಂದು ಶಾಸ್ತ್ರಕಾವ್ಯ. ಕಾವ್ಯದಲ್ಲಿರಬೇಕಾದ ವರ್ಣಾನುಪ್ರಾಸಾದಿ ರಸಗಳಿಂದ ಅಧ್ಯೇತೃಗಳಿಗೆ ಆಪ್ಯಾಯಮಾನವಾಗಿದೆ. ಸ್ವತಃ ರಾಜರೇ ಈ ಮಾತನ್ನು ಹೇಳಿದ್ದಾರೆ -

''ಹೃದ್ಯ-ಪದ್ಯ-ರಸ-ಸ್ನಿಗ್ಧಾಂ ಸದ್ಯೋ ಹೃದ್ರೋಚನೋದ್ಯತಾಮ್ ।
ವಿದ್ಯಾಮದ್ಯಾನವದ್ಯಾಂ ಮೇ ಕೋ ದ್ವೇಷ್ಟ್ಯುದ್ಧತಪದ್ಧತಿಃ ॥'' ಎಂದು.

ಈ ನನ್ನ ಗ್ರಂಥವು ಹೃದ್ಯವಾದ ಪದ್ಯಗಳಿಂದ ಅಲಂಕಾರರಸಗಳಿಂದ ರಮಣೀಯವಾಗಿದೆ. ಕೂಡಲೇ ಹೃದಯಕ್ಕೆ ಆಹ್ಲಾದವನ್ನುಂಟುಮಾಡುತ್ತದೆ. ಈ ಗ್ರಂಥದಲ್ಲಿ ಯಾವುದೇ ದೋಷಗಳಿರುವುದಿಲ್ಲ. ಗುಣಜ್ಞನು ಈ ಗ್ರಂಥಕ್ಕೆ ವಶನಾಗುತ್ತಾನೆ. ಈ ಗ್ರಂಥವನ್ನು ದ್ವೇಷಿಸುವವ ಉದ್ಧಟಸ್ವಭಾವದವನು ಎಂದಿದ್ದಾರೆ. ರಾಜರ ಈ ಗ್ರಂಥವು ಪ್ರಮಾಣಿಕವಾಗಿ ಓದಿದಲ್ಲಿ ಸನ್ಮಾರ್ಗಕ್ಕೆ ಕರೆದೊಯ್ಯುತ್ತದೆ. ಪರವಾದಿಗಳೂ ಪ್ರಾಮಾಣಿಕರಾಗಿದ್ದಲ್ಲಿ ಈ ರಾಜರಯುಕ್ತಿ- ಬದ್ಧವಾದ ಮಾತುಗಳಿಗೆ ವಶರಾಗಲೇಬೇಕು.

ಸೋದೆ ವಾದಿರಾಜ ಮಠಾಧೀಶರಾದ ಆತ್ಮೀಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು ಭಾವಿಸಮೀರ ಶ್ರೀವಾದಿರಾಜ ಗುರುಸಾರ್ವಭೌಮರು ರಚಿಸಿರುವ ಶ್ರೇಷ್ಠವಾದ ಕೃತಿ ರತ್ನವೆನಿಸಿದ 'ಯುಕ್ತಿಮಲ್ಲಿಕಾ' ವನ್ನು ಮತ್ತು 'ಯುಕ್ತಿಮಲ್ಲಿಕಾ ಕೃತಿಗೆ ಗುರುಸಾರ್ವಭೌಮರ ಪೂರ್ವಾಶ್ರಮದ ತಮ್ಮಂದಿರು ಹಾಗೂ ಭಂಡಾರಕೇರಿ ಮಠಾಧೀಶರೂ ಆಗಿರುವ ಶ್ರೀ ಸುರೋತ್ತಮತೀರ್ಥರು ರಚಿಸಿರುವ 'ಭಾವವಿಲಾಸಿನೀ' ಎಂಬ ವ್ಯಾಖ್ಯಾನವನ್ನು ಅನೇಕ ವಿದ್ವಾಂಸರಿಂದ ಅನುವಾದ ಮಾಡಿಸಿ ಪರ್ಯಾಯ ಸಂದರ್ಭದಲ್ಲಿ ಪ್ರಕಟಗೊಳಿಸುತ್ತಿರುವ ವಿಚಾರ ತಿಳಿದು ಸಂತೋಷಗೊಂಡಿದ್ದೇವೆ. ಪರ್ಯಾಯ ಕಾಲದಲ್ಲಿ ಹಲವಾರು ಕಾರ್ಯಗಳನ್ನು ಮಾಡಿ ಕೀರ್ತಿಭಾಜನರಾದ ಶ್ರೀಪಾದರು ಗುರುಸಾರ್ವಭೌಮರ ಕೃತಿಯನ್ನು ಅನುವಾದ ಮಾಡಿಸಿ ತನ್ಮೂಲಕ ಉತ್ಕೃಷ್ಟವಾದ ಜ್ಞಾನಸೇವೆಯನ್ನು ಮಾಡಿ ವಾದಿರಾಜರ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದಾರೆ.

ಶ್ರೀಪಾದರಿಂದ ಇನ್ನೂ ಅನೇಕ ಸತ್ಕಾರ್ಯಗಳು ನೆರವೇರಲೆಂದು ನಾವು ಆಶಿಸುತ್ತೇವೆ.

ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿದ್ಯಾವಲ್ಲಭತೀರ್ಥ ಶ್ರೀಪಾದಂಗಳವರು**

ಶ್ರೀ ಕಾಣೆಯೂರು ಮಠ, ಉಡುಪಿ.

॥ ಶ್ರೀಶೋ ವಿಜಯತೇ ॥

# ಪ್ರಕಾಶಕರ ನುಡಿ

ಉಪದಿಷ್ಟವಿದ್ಯೆ ಸರಿಯಾಗಿ ಬುದ್ಧಿಸ್ಥವಾಗುವುದು ದುರ್ಲಭ. ಬುದ್ಧಿಸ್ಥವಾಗಿರೋದು ಸಕಾಲಕ್ಕೆ ಸ್ಮರಣೆಗೆ ಬಂದರೆ ಸುಕೃತ, ಇಲ್ಲವಾದಲ್ಲಿ ಆ ಪ್ರಸಂಗವೇ ಆಭಾಸವಾದೀತು. ಆದಕ್ಕಾಗಿ ಬುದ್ಧಿಸ್ಥವಾದುದನ್ನು ಗ್ರಂಥಸ್ಥವಾಗಿಸುವುದು ಆರಂಭವಾಯಿತು. ಇದರಲ್ಲಿ ಎರಡು ಬಗೆ. ಉಪದಿಷ್ಟವಾದುದನ್ನು ಯಥಾವತ್ ಗ್ರಂಥಸ್ಥ ಮಾಡುವುದು; ಅಥವಾ ಉಪದಿಷ್ಟವಿಷಯವನ್ನು ತಮ್ಮ ಬುದ್ಧಿ ಸೌಷ್ಠವದಿಂದ ಪುನಃ ಪುನಃ ಚಿಂತನ-ಮನನ-ಮಂಥನ ಮಾಡಿ, ಸಮಷ್ಟಿರೂಪ ಕೊಟ್ಟು ತಮ್ಮದೇ ಆದ ವಾಗ್ವಿಲಾಸ ವೈಖರೀಮುಖೇನ ಸಮರ್ಥನ ವರ್ಣನ-ನಿವೇದನಾದಿ ಪ್ರಕಾರಗಳಿಂದ ಸ್ವತಂತ್ರ ಕೃತಿ ನಿರ್ಮಿಸುವುದು. ಈ ಎರಡೂ ಬಗೆಯ ಗ್ರಂಥಸ್ಥೀಕರಣ ಸಾವಿರಾರು ವರ್ಷಗಳಿಂದ ಸಾಗಿಬಂದಿದೆ. ಕೆಲವೊಮ್ಮೆ ಸಂಕ್ಷೇಪ ಶಿಲಾಲೇಖನವಾದದ್ದೂ ಉಂಟು. ಹೆಚ್ಚಾಗಿ ಹಸ್ತಪ್ರತಿಲೇಖನ ವ್ಯಾಪಕವಾಗಿ ನಡೆದು ನಮ್ಮ ದೇಶದ ವಾಙ್ಮಯನಿಧಿ ಇದರಲ್ಲೇ ಭದ್ರತೇವಣಿಯಾಗಿದೆ. ಮುದ್ರಣ ತಂತ್ರಜ್ಞಾನ ಆರಂಭವಾಗಿ ಅಭಿವೃದ್ಧಿ ಹೊಂದಿದ ಮೇಲಂತೂ ಠೇವಣಿಗೊಂಡಿರುವ ನಿಧಿ ಅನೇಕ ಪ್ರಕಾರ ಪ್ರಕಾಶನಗೊಳ್ಳುತ್ತಿದೆ.

ಇಂದಿನ ದಿನಗಳಲ್ಲಿ ಗ್ರಂಥ ಸಂಪಾದನ ಹಾಗೂ ಪ್ರಕಾಶನ ಒಂದು ಶಿಸ್ತುಬದ್ಧಕಲೆ. ಅನೇಕ ಮಠ-ಮಂದಿರಗಳು, ಸಂಘ-ಸಂಸ್ಥೆಗಳು, ಸರಕಾರ-ಶಿಕ್ಷಣ ಕೇಂದ್ರಗಳು ಸಂಬಂಧಪಟ್ಟ ವಿದ್ವಾಂಸರಿಂದ ಗ್ರಂಥ ಸಂಪಾದನಾದಿಕಾರ್ಯಗೈಸಿ ಪ್ರಕಾಶನಕ್ಕೆ ಮುಂದಾಗುತ್ತಿವೆ. ಕೆಲವೊಮ್ಮೆ ವ್ಯಕ್ತಿಗಳೂ ವೈಯಕ್ತಿಕವಾಗಿ ಈ ಸಂಪಾದನ-ಪ್ರಕಾಶನಕಾರ್ಯದಲ್ಲಿ ತೊಡಗಿಸಿಕೊಂಡಿರುವುದನ್ನೂ ಕಾಣಬಹುದು. ಪತ್ರಿಕಾಪ್ರಪಂಚವಂತೂ ಸ್ಪರ್ಧಾತ್ಮಕ ಪೈಪೋಟಿ ನೀಡುತ್ತಿರುವುದು ಗಮನಾರ್ಹವಾಗಿದೆ. ವೈಜ್ಞಾನಿಕ ಮನೋಭಾವ ಹಾಗೂ ವಾತಾವರಣ ಪ್ರಭಾವಿತ ಈ ಸಮಯದಲ್ಲಿಯೂ ಕಲೆ, ಸಂಸ್ಕೃತಿ, ಸಾಹಿತ್ಯ, ಶಾಸ್ತ್ರ ಅಧ್ಯಾತ್ಮ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದ ಸಂಶೋಧನ ಸಂಪಾದನ-ಪ್ರಕಾಶನಾದಿಗಳು ಮೇಲುಗೈ ಸಾಧಿಸುವಂತೆ ಸಾಗಿವೆ.

ಪ್ರಕೃತ, ಈ ನಿಟ್ಟಿನಲ್ಲಿ ಶ್ರೀಸೋದೆ ವಾದಿರಾಜಮಠವು ಹಲವಾರು ದಶಕಗಳಿಂದ ಅಮೂಲ್ಯ ಗ್ರಂಥ ಸಂಪಾದನ-ಪ್ರಕಾಶನ ಕಾರ್ಯವನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ. ಕರಾವಳಿಯ ಮಳೆಯ ಅಬ್ಬರದ ಆಟೋಪ ಪ್ರಕೋಪ ಹಾಗೂ ನಿರಂತರ ತೇವ ವಾತಾವರಣದ ಪರಿಣಾಮ ಹಸ್ತಪ್ರತಿಗಳ ಸಂರಕ್ಷಣೆ ಕಠಿಣ. ಈ ನಿಮಿತ್ತ ಎಷ್ಟೋ ಹಸ್ತಪ್ರತಿಗಳು ನಶಿಸಿರಬಹುದು. ಆದರೂ, ಶ್ರೀಮಠದಲ್ಲಿ ಸಾವಿರಾರು ಹಸ್ತಪ್ರತಿಗಳು ಇಂದಿಗೂ ಕಾಣುತ್ತವೆ. ಇದೆಲ್ಲದರ ಶ್ರೇಯಸ್ಸು ಹರಿಪಾದ ಸೇರಿದ ಪರಮಪೂಜ್ಯ

ಶ್ರೀ ಶ್ರೀವಿಶ್ವೋತ್ತಮತೀರ್ಥ ಶ್ರೀಪಾದಂಗಳವರಿಗೆ ಸಲ್ಲುತ್ತದೆ. ಹಸ್ತಪ್ರತಿ ಸಂಗ್ರಹದ ಸದಾಶಯ ಹಾಗೂ ಸದಾಗ್ರಹ ಅವರಲ್ಲಿತ್ತು. ಹೆಚ್ಚು ಸಂಚಾರ ಮಾಡದೆ ಇದ್ದರೂ, ಸಂಚಾರ ಹೋದಲ್ಲಿ ಹಾಗೂ ಸನ್ನಿಧಿಯಲ್ಲಿ ಭೇಟಿಯಾಗುವವರ ಮುಂದೆ ತಮ್ಮ ಆಶಯವನ್ನು ವ್ಯಕ್ತಪಡಿಸುತ್ತಿದ್ದರು. ಬೇರೆ ಮಠಗಳಲ್ಲಿ ಹಾಗೂ ಸ್ಥಳಗಳಲ್ಲಿ ಉಪಲಬ್ಧವಾಗದ ಅಪರೂಪದ ಅಮೂಲ್ಯ ಹಸ್ತಪ್ರತಿಗಳು ಪೂಜ್ಯರ ಸಂಗ್ರಹಕೋಶದಲ್ಲಿ ಕಾಣುತ್ತವೆ. ಶ್ರೀವಾದಿರಾಜ ಗುರುಗಳ ಹಾಗೂ ಇತರ ಅನೇಕ ಜ್ಞಾನಿ ವಿರಚಿತ ಹಲವಾರು ಕೃತಿಗಳು ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರ ಮಾರ್ಗದರ್ಶನದಲ್ಲಿ ಹಾಗೂ ಮುಂದಾಳತ್ವದಲ್ಲಿ ಶ್ರೀಮಠದಿಂದ ಸ್ವತಂತ್ರವಾಗಿ ಹಾಗೂ ಅಂದಿನ 'ಶ್ರೀಮದ್ವಾದಿರಾಜೀಯ ಗ್ರಂಥಪ್ರಕಾಶನ ಸಮಿತಿ, ಉಡುಪಿ' ದ್ವಾರ ಕಳೆದ ಶತಮಾನದ ಮಧ್ಯಭಾಗದಲ್ಲಿಯೇ ಪ್ರಕಾಶನಗೊಂಡಿದೆ. ನಂತರವೂ ಈ ಕಾರ್ಯಮುಂದುವರೆದಿದೆ.

ಶ್ರೀಸೋದೆವಾದಿರಾಜಮಠದ ಪ್ರಸ್ತುತ ಪೀಠಾಧಿಪತಿಗಳಾದ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು ಶ್ರೀಮಠದಲ್ಲಿ ಸಂಗ್ರಹೀತ ಹಸ್ತಪ್ರತಿಗಳ ಸಂರಕ್ಷಣಸಂಶೋಧನ ಹಾಗೂ ಪ್ರಕಾಶನಕ್ಕೆ ಕಾಯಕಲ್ಪ ನೀಡುವ ಸಂಕಲ್ಪಗೈದು, ಅದಕ್ಕಾಗಿಯೇ 'ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನ ಕೇಂದ್ರ' ಎಂಬ ಶ್ರೀಮಠದ ಅಂಗಸಂಸ್ಥೆಯನ್ನು ಆರಂಭಿಸಿದ್ದಾರೆ. ಈಗಾಗಲೇ ಹಲವು ಪರಿಚಯಾತ್ಮಕ ಕೃತಿಗಳು ಈ ಸಂಸ್ಥೆಯಿಂದ ಪ್ರಕಾಶನಗೊಂಡಿವೆ. ಶ್ರೀಮಠದಲ್ಲಿ ಪ್ರತ್ಯೇಕ ವಿಭಾಗ ಕಾರ್ಯಾಲಯವನ್ನು ಪ್ರಾರಂಭಿಸಿದ್ದು ಹಸ್ತಪ್ರತಿಗಳ ಸಂರಕ್ಷಣ ಕಾರ್ಯ ಆಧುನಿಕ ತಂತ್ರಜ್ಞಾನದೊಂದಿಗೆ ವ್ಯವಸ್ಥಿತವಾಗಿ ಸಾಗಿದೆ. ಕಾಲಾಧಾರಿತ ಮತ್ತು ವಿಷಯಾಧಾರಿತ ಹಸ್ತಪ್ರತಿಗಳ ವರ್ಗೀಕರಣ ನಡೆದಿದೆ. ಪೂಜ್ಯ ಶ್ರೀಗಳವರು ವಿಶೇಷ ಆಸಕ್ತಿಯನ್ನು ವಹಿಸಿ ಅಪೂರ್ವ ಹಸ್ತಪ್ರತಿಗಳ ಪ್ರಕಾಶನಕ್ಕೆ ಮುಂದಾಗಿದ್ದಾರೆ.

ಭಾವಿಸಮೀರ ಶ್ರೀವಾದಿರಾಜ ಗುರುಗಳ ಮೇರು ಕೃತಿ 'ಯುಕ್ತಿಮಲ್ಲಿಕಾ' ವೇದಾಂತದ ಪ್ರೌಢವಾದಗಳನ್ನು, ಗಹನ ಪ್ರಮೇಯಗಳನ್ನು ಕಾವ್ಯದ ಕಮನೀಯ ಹಾಗೂ ಚಿತ್ತಾಕರ್ಷಕ ಶೈಲಿಯಲ್ಲಿ ನಿರೂಪಿಸಿರುವ ಕೃತಿ ಇದು. ಶ್ರೀವಾದಿರಾಜಗುರುಗಳ ಅಪೂರ್ವ, ಅನ್ಯರಲ್ಲಿ ಅದೃಷ್ಟ ಅಸದೃಶ ಚಿಂತನಶೈಲಿ, ಅನನ್ಯ ವಿವೇಚನ ವೀಥಿ, ಅನುಪಮ ನಿರೂಪಣ ಕ್ರಮ ಹಾಗೂ ಅಪೂರ್ವ ಸಮರ್ಥನರೀತಿಯನ್ನು ಸ್ಫುಟಪಡಿಸುವ ದರ್ಪಣದಂತಿದೆ. ಭಾವಬಂಧುರ-ಅರ್ಥಸುಂದರ ಪದಪುಂಜಗಳಿಂದ ಶ್ಲೋಕಮಯ ಕೃತಿಯಾಗಿದ್ದು, ಪುಣ್ಯಶ್ಲೋಕ ಶ್ರೀಹರಿಯ ಮಹಿಮೆಯನ್ನು ಲೋಕೋತ್ತರ ದೃಷ್ಟಾಂತ ಹಾಗು ಸದ್ಯುಕ್ತಿರತ್ನಗಳಿಂದ ಸಮರ್ಥಿಸುತ್ತದೆ. ಐದು ಸಾವಿರಕ್ಕೂ ಮೇಲ್ಪಟ್ಟು ಶ್ಲೋಕಗಳಿರುವ ಈ ಕೃತಿ ಐದು ಸೌರಭಗಳಲ್ಲಿ ರಚಿತವಾಗಿದೆ. ಪ್ರಕೃತ, ಈ ಗ್ರಂಥವನ್ನು ಪೂಜ್ಯಶ್ರೀಗಳವರು ಕನ್ನಡ ಲಿಪಿಯಲ್ಲಿ ಮೂಲ, ಶ್ರೀಸುರೋತ್ತಮತೀರ್ಥವಿರಚಿತ

'ಭಾವವಿಲಾಸಿನೀ' ಎಂಬ ಟಿಪ್ಪಣಿ, ಅವರಡರ ಅನುವಾದ ಹಾಗು ಅವಶ್ಯ ವಿವರಣೆಯೊಂದಿಗೆ ಅನೇಕ ಸಂಪುಟಗಳಲ್ಲಿ ಶ್ರೀಮಠದ ಅಂಗಸಂಸ್ಥೆಯಾದ 'ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನ ಕೇಂದ್ರ' ದ್ವಾರ ಪ್ರಕಾಶಿಸುವ ಯೋಜನೆಯನ್ನು ತಮ್ಮ ಪ್ರಥಮ ದ್ವೈವಾರ್ಷಿಕ ಪರ್ಯಾಯಾರಂಭದಲ್ಲಿ ಆರಂಭಿಸಿದರು. ಅದಕ್ಕಾಗಿ ಶ್ರೀರಾಜರ ವಿಷಯದಲ್ಲಿ ನಿರ್ವ್ಯಾಜಶ್ರದ್ಧಾಭಕ್ತಿಯುಳ್ಳ ನಾಡಿದ ಅನೇಕ ಹಿರಿಯ ಹಾಗೂ ತರುಣ ವಿದ್ವಾಂಸರನ್ನು ಆಯ್ಕೆ ಮಾಡಲಾಯಿತು. ಪ್ರತಿಯೊಬ್ಬರಿಗೂ ವಿಷಯಾಧಾರಿತ ಸಂಖ್ಯೆಗನುಗುಣವಾಗಿ ಶ್ಲೋಕಭಾಗ ಹಾಗು ತತ್ಸಂಬಂಧಿ ಟಿಪ್ಪಣಿಯನ್ನು ವಿವರಣೆಯೊಂದಿಗೆ ಅನುವಾದಿಸಲು ನೀಡಲಾಯಿತು. ಸಂಬಂಧಪಟ್ಟ ವಿದ್ವಾಂಸರೆಲ್ಲ, ಅಲ್ಪವಿಳಂಬವಾದರೂ ಶ್ರೀರಾಜರ ಸರ್ವಜ್ಞತ್ವಾದಿ ಮಹಿಮೆಗೂ ಪೂರಕವಾಗುವಂತೆ ಅನುವಾದಕಾರ್ಯವನ್ನು ನಿರ್ವಹಿಸಿದ್ದಾರೆ. ಮೂಲ ಹಾಗೂ ಟಿಪ್ಪಣಿಯ ಆಶಯವು ಸ್ಫುಟಜ್ಞಾತವಾಗುವಂತೆ ಅನುವಾದ ಹಾಗೂ ವಿವರಣೆಯನ್ನು ಲೇಖನ ಮಾಡಿದ್ದಾರೆ. ಶ್ರೀಮಠದಲ್ಲಿ ಹಾಗು ಅನ್ಯತ್ರ ಉಪಲಬ್ಧ ಶ್ರೀಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ಟಿಪ್ಪಣಿ ಸಹಿತ 'ಯುಕ್ತಿಮಲ್ಲಿಕಾ' ಸಂಬಂಧಿ ಅನೇಕ ಹಸ್ತಪ್ರತಿಗಳನ್ನು ಹಿರಿಯ ವಿದ್ವಾಂಸರುಗಳು ವಿಶೇಷ ಶ್ರಮವಹಿಸಿ ಪರಿಶೋಧಿಸಿ ಮೂಲ ಹಾಗೂ ಟಿಪ್ಪಣಿಯ ಶುದ್ಧಪಾಠ ಒದಗಿಸಿದ್ದಾರೆ. ವಿದ್ವಾಂಸರೆಲ್ಲರ ಸಮಷ್ಟಿ ಪ್ರಯತ್ನದ ಫಲವಾಗಿ 'ಯುಕ್ತಿಮಲ್ಲಿಕಾ' ಕೃತಿರತ್ನವು ಪ್ರಕಾಶನ ಕಂಡಿದೆ. ಹತ್ತು ಸಂಪುಟಗಳಲ್ಲಿ ಪ್ರಕಾಶಗೊಂಡಿರುವ ಈ ಕೃತಿರತ್ನವು 'ವಿದುಷೋಽಪ್ಯವಿದುಷೋಪೀಪ್ಸಾ ಕಂ ಜನಂ ರಂಜಯೇನ್ನ ಗೀಃ' ಎಂಬಂತೆ ವಿದ್ವಾಂಸರಿಗೆ, ಜಿಜ್ಞಾಸುಗಳಿಗೆ ಹಾಗೂ ಅಧ್ಯೇತೃಗಳಿಗೂ ಉಪಕರಿಸಿ ಸಂತೋಷಪಡಿಸುವುದೆಂಬಲ್ಲಿ ಎರಡು ಮಾತಿಲ್ಲ. ಈ ಗ್ರಂಥರತ್ನದ ಮೌಲಿಕತೆಯನ್ನು ಹಾಗೂ ಪ್ರಕಾಶನಕಾರ್ಯದ ಉಪಯುಕ್ತತೆಯನ್ನು ಮನದುಂಬಿಕೊಂಡಾಡುತ್ತಾ ಅನೇಕ ಯತಿವರೇಣ್ಯರು ಅನುಗ್ರಹವಚನವನ್ನು ನೀಡಿದ್ದಾರೆ.

ಪರಮಪೂಜ್ಯ ಪೇಜಾವರ ಶ್ರೀಅಧೋಕ್ಷಜ ಪರಂಪರೆಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಯುಕ್ತಿಮಲ್ಲಿಕಾ ಕೃತಿಯ ಉತ್ಕೃಷ್ಟತೆ ಹಾಗೂ ಅನನ್ಯತೆಯನ್ನು ಸೋದಾಹರಣ ಉಲ್ಲೇಖಿಸಿ ಅನುಗ್ರಹವಚನ ಕರುಣಿಸಿದ್ದಾರೆ. ಪೂಜ್ಯರಿಗೆ ಅನಂತಾನಂತ ದಂಡವತ್ ಪ್ರಣಾಮಗಳು. ಪರಮಪೂಜ್ಯ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಗುರುಗಳಿಂದ ಯುಕ್ತಿಮಲ್ಲಿಕಾದ ಗಾಂಭೀರ್ಯ ಹಾಗೂ ಆಕೂತಾರ್ಥವನ್ನು ಅರಿತು ಶ್ರೀರಾಜರ ಹಾಗು ಕೃತಿರತ್ನದ ಲೋಕೋತ್ತರ ಹಿರಿಮೆಯನ್ನು ಹಿರಿದಾಗಿ ಕೊಂಡಾಡುತ್ತಾ ಅನುಗ್ರಹವಚನವನ್ನು ನೀಡಿದ ಕೃಷ್ಣಾಪುರಮಠದ ಶ್ರೀ ಶ್ರೀ ವಿದ್ಯಾಸಾಗರತೀರ್ಥ ಶ್ರೀಗಳವರಿಗೆ ಸಾಷ್ಟಾಂಗ ಪ್ರಣಾಮಗಳು. ಯುಕ್ತಿಮಲ್ಲಿಕಾ ಗ್ರಂಥದ ಪ್ರಮೇಯಜ್ಞಾನದ ಅವಶ್ಯಕತೆಯನ್ನು ಅರಹುತ್ತ ಅನುಗ್ರಹವಚನ ನೀಡಿದ ಅದಮಾರು ಮಠದ ಶ್ರೀ ಶ್ರೀ ವಿಶ್ವಪ್ರಿಯತೀರ್ಥ ಶ್ರೀಗಳವರಿಗೆ ಅಗಣಿತ ಪ್ರಣಾಮಗಳು. ಶ್ರೀರಾಜರ ಕೃತಿಯ

ಔಚಿತ್ಯಪೂರ್ಣ ಹಾಗು ಚಮತ್ಕಾರಯುತ ವಿವೇಚನೆ ಮತ್ತು ನಿರೂಪಣೆಯನ್ನು ಪ್ರಶಂಶಿಸಿ ಅನುಗ್ರಹವಚನವನ್ನು ನೀಡಿದ ಫಲಿಮಾರು ಮಠದ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಗಳವರಿಗೆ ಅನಂತಪ್ರಣಾಮಗಳು. ಶ್ರೀವಾದಿರಾಜಗುರುಗಳ ಪ್ರೌಢವಾದ, ವಾಕ್ಯಾರ್ಥ ವಿಕ್ರಮ ಹಾಗು ಚಿತ್ತಾಕರ್ಷಕ ನಿರೂಪಣ ಶೈಲಿಯನ್ನು ಕೊಂಡಾಡುತ್ತ ಅನುಗ್ರಹವಚನವನ್ನು ನೀಡಿದ ಶ್ರೀಸುರೋತ್ತಮತೀರ್ಥ ಪರಂಪರಾಧೀಶರಾದ ಭಂಡಾರಕೇರಿ ಮಠದ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಗಳವರಿಗೆ ಅನೇಕಾನೇಕ ದಂಡವತ್ ಪ್ರಣಾಮಗಳು. ಯುಕ್ತಿಮಲ್ಲಿಕೆಯ ಪ್ರಕಾಶನದ ಅಗತ್ಯವನ್ನು ಸ್ವಾಗತಿಸಿ ಅನುಗ್ರಹಸಂದೇಶವನ್ನು ನೀಡಿದ ಶ್ರೀ ಶ್ರೀ ವಿಶ್ವಪ್ರಸನ್ನತೀರ್ಥ ಶ್ರೀಪಾದರಿಗೆ ದಂಡವತ್ ಪ್ರಣಾಮಗಳು. ಶ್ರೀರಾಜರ ಹಾಗು ಯುಕ್ತಿಮಲ್ಲಿಕಾ ಕೃತಿಯ ಶ್ರೇಷ್ಠತೆಯನ್ನು ಸರಲಸುಂದರ ಶೈಲಿಯಲ್ಲಿ ಪೊಗಳಿ ಅನುಗ್ರಹವಚನವನ್ನು ನೀಡಿದ ಕಾಣಿಯೂರು ಮಠದ ಶ್ರೀ ಶ್ರೀ ವಿದ್ಯಾವಲ್ಲಭತೀರ್ಥ ಶ್ರೀಗಳವರಿಗೆ ಅಸಂಖ್ಯಸಾಷ್ಟಾಂಗ ಪ್ರಣಾಮಗಳು. ಈ ಕೃತಿಕುಸುಮವು ಶ್ರೀಮಠದ ಅಂಗಸಂಸ್ಥೆಯಾದ ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗು ಪ್ರಕಾಶನ ಕೇಂದ್ರ ಮುಖೇನ ಪ್ರಕಾಶಗೊಳ್ಳುತ್ತಿದೆ. ಈ ಕೃತಿಪ್ರಕಾಶನದ ಪ್ರೇರಕಶಕ್ತಿ ಹಾಗು ಕೇಂದ್ರಬಿಂದು ಪರ್ಯಾಯ ಶ್ರೀ ಸೋದೆವಾದಿರಾಜಮಠದ ಶ್ರೀ ಶ್ರೀ ವಿಶ್ವವಲ್ಲಭತೀರ್ಥರು. ಪೂಜ್ಯರು ತಮ್ಮ ಪರ್ಯಾಯಾವಧಿಯಲ್ಲಿ ಆಡಂಬರ ಪ್ರಚಾರಾದಿಗಳು ಇಲ್ಲದೆ ಅನೇಕ ಐತಿಹಾಸಿಕ ಕಾರ್ಯಗಳನ್ನು ಆರಂಭಿಸಿ ಪೂರೈಸಿದ್ದಾರೆ. ಈ ಗ್ರಂಥಪ್ರಕಾಶನವಂತೂ ಮಿಗಿಲಾದ ಮೈಲುಗಲ್ಲು ಮತ್ತು ವಾದೀಶವರದೇಶ- ಮಧ್ವೇಶನಿಗೆ ಸಮರ್ಪಿಸಲ್ಪಡುವ ಅನುಪಮ ಸೇವೆ. ಪೂಜ್ಯ ಶ್ರೀಗಳವರು ಯುಕ್ತಿಮಲ್ಲಿಕಾ ಆರಂಭ ಭಾಗದ ಅನುವಾದಾದಿ ಕಾರ್ಯವನ್ನು ಶ್ರೀರಾಜರ ಋಜುಮಹಿಮಾನುಸಂಧಾನದೊಂದಿಗೆ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಈ ಗ್ರಂಥಪ್ರಕಾಶನಕ್ಕೆ ಅನುಗ್ರಹ ಮುನ್ನುಡಿ ನೀಡಿ ಹರಿಸಿದ್ದಾರೆ. ಪೂಜ್ಯರಿಗೆ ಅನಂತಾನಂತ ಪ್ರಣಾಮಗಳು.

'ಯುಕ್ತಿಮಲ್ಲಿಕಾ' ಕೃತಿಯ ಮೂಲ ಹಾಗೂ ಟಿಪ್ಪಣಿಯ ಸಂಬಂಧಿ ಅನೇಕ ಹಸ್ತಪ್ರತಿಗಳನ್ನು ಪರಿಶೀಲಿಸುವುದರ ಮೂಲಕ ಶುದ್ಧ ಪಾಠವನ್ನು ಒದಗಿಸಿ ಅನುವಾದ ಲೇಖನಗಳನ್ನೂ ಪರಿಶೀಲಿಸಿದ ಲೇಖನಗೊಳಿಸಿ ಅನುವಾದ ಭಾಗವನ್ನು ತಮ್ಮ ಇತರ ಕಾರ್ಯಗಳ ಒತ್ತಡದ ಮಧ್ಯೆಯೂ ಚೆನ್ನಾಗಿ ಪರಿಶೀಲಿಸಿ ಉಪಕರಿಸಿದ ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯ, ಮೈಸೂರು, ಇವರಿಗೆ ಕೃತಜ್ಞತಾಪೂರ್ವಕ ನಮಸ್ಕಾರಗಳು. ಅನೇಕ ವಿದ್ವಾಂಸರುಗಳ ಲೇಖನವನ್ನು ಪರಿಶೀಲನೆ ಮಾಡಿದ ವಿದ್ವಾನ್ ಶ್ರೀ ಹಯವದನ ಪುರಾಣಿಕರು, ಬೆಂಗಳೂರು ಹಾಗೂ ಡಾ|| ಸಿ.ಎಚ್. ಶ್ರೀನಿವಾಸಮೂರ್ತಿ, ಮೈಸೂರು, ಇವರಿಗೆ ಹೃತ್ಪೂರ್ವಕ ನಮನಗಳು. ಸಂಶೋಧನ ಸಂಸ್ಥೆಯಿಂದ ಒದಗಿಸಿದ ಭಾಗವನ್ನು ಮೂಲ ಹಾಗು ಟಿಪ್ಪಣಿಯ ಅಭಿಪ್ರಾಯಕ್ಕೆ ನ್ಯಾಯ

ಒದಗಿಸುವ ನಿಟ್ಟಿನಲ್ಲಿ ಅನೇಕ ವಿದ್ವಾಂಸರು ವಿಸ್ತೃತ ವಿವರಣೆಯೊಂದಿಗೆ ಅನುವಾದ ಸೇವೆಯನ್ನು ಸಮರ್ಥರೀತಿಯಲ್ಲಿ ಸಲ್ಲಿಸಿದ್ದಾರೆ. ಅವರೆಲ್ಲರಿಗೂ ಸಗೌರವ ವಂದನೆಗಳು. ಈ ಗ್ರಂಥದ ಅನುವಾದದ ಭಾಗಗಳನ್ನು ವಿಭಾಗಿಸಿ ಜೊತೆಗೆ ತಾವೂ ಅನುವಾದಿಸಿ ರಾಜರ ಸೇವೆಯನ್ನು ವಿಶೇಷವಾಗಿ ಸಲ್ಲಿಸಿದ ವಿದ್ವಾನ್ ಸಿ.ಎಚ್. ಬದರೀನಾಥಾಚಾರ್ಯರಿಗೆ ಕೃತಜ್ಞತಾನಮನಗಳು. ಉಪೋದ್ಘಾತ ರಚನೆ ಕರಡು ಪ್ರತಿಶೋಧನೆಯಲ್ಲಿ ವಿಶೇಷವಾಗಿ ತಮ್ಮನ್ನು ತೊಡಗಿಸಿಕೊಂಡ ಶ್ರೀ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದರ ಒಲುಮೆಗೆ ಪಾತ್ರರಾದ ವಿದ್ವಾನ್ ಬಿ.ಎನ್. ಸೀತಾರಾಮಾಚಾರ್ಯರಿಗೂ ಕೃತಜ್ಞತಾ ನಮನಗಳು. ಬಿಟ್ಟುಹೋದ ಭಾಗಗಳ ಅನುವಾದವನ್ನು ನಡೆಸಿಕೊಟ್ಟ ಸಹೃದಯರಾದ ಈ ಕೃತಿರತ್ನದ ಪ್ರಕಾಶನ ವಿಷಯದಲ್ಲಿ ಅನುವಾದಾದಿಗಳನ್ನು ಲೇಖನಮಾಡುವವರೊಂದಿಗೆ ಪ್ರಾರಂಭದಿಂದ ಕೊನೆಯವರೆಗೂ ಒಟ್ಟಾರೆ ಎಲ್ಲ ವಿಧದ ಜವಾಬ್ದಾರಿ ಮತ್ತು ಮುತುವರ್ಜಿಯನ್ನು ವಹಿಸಿ ಸಹಕರಿಸಿದ ವಿದ್ವಾನ್ ಬೆ.ನಾ. ವಿಜಯೀಂದ್ರಾಚಾರ್ಯ, ಮೈಸೂರು ಇವರಿಗೆ ಕೃತಜ್ಞತಾ ನಮನಗಳು. ವಿದ್ವಾನ್ ಶ್ರೀಪಾಂಡುರಂಗಾಚಾರ್ಯ ಪಾಂಡುರಂಗಿ ಅವರಿಗೆ ಕೃತಜ್ಞತಾಪೂರ್ವಕ ನಮನಗಳು.

ಯುಕ್ತಿಮಲ್ಲಿಕಾ ಗ್ರಂಥಕ್ಕೆ ಸಂಬಂಧಿಸಿದ ಅನೇಕ ವ್ಯವಸ್ಥೆಗಳಲ್ಲಿ ಕೊನೆಯತನಕ ಸಹಕರಿಸಿದ ಭಾವಿಸಮೀರಗುರುಕುಲದ ಪ್ರಾಂಶುಪಾಲರಾದ ಶ್ರೀವಿದ್ವಾನ್ ಕೆ.ಪಿ. ವಾದಿರಾಜಾಚಾರ್ಯರಿಗೆ ಕೃತಜ್ಞತಾನಮನಗಳು. ಯುಕ್ತಿಮಲ್ಲಿಕಾ ಕೃತಿಗೆ ಬೇಕಾದ ಕೆಲವು ಭಾಗದ ಮೂಲಪಾಠ ಸಂಶೋಧನೆಯನ್ನು ಮುತುವರ್ಜಿಯಿಂದ ನೆರವೇರಿಸಿಕೊಟ್ಟ ವಿದ್ವಾನ್ ಕೆ. ಮುರಳೀಧರ ಭಟ್ ಇವರಿಗೆ ಕೃತಜ್ಞತಾನಮನಗಳು. ಭೇದಸೌರಭ-ವಿಶ್ವಸೌರಭ-ಫಲಸೌರಭಗಳ ಮೂಲಪ್ರತಿಯನ್ನು ಶೋಧಿಸಿ ಶೀಘ್ರವಾಗಿ ರಾಜರಸೇವೆಯನ್ನು ನೆರವೇರಿಸಿದ ವಿದ್ವಾನ್ ಬಿ.ಎನ್. ಮಾಧವಾಚಾರ್ಯ, (ವಿದ್ವಾನ್ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ಶಿಷ್ಯರು) ಇವರಿಗೆ ಕೃತಜ್ಞತಾಪೂರ್ವಕ ನಮನಗಳು. ಗುಣಸೌರಭದ ಭೂಮಿಕೆಗೆ ಬೇಕಾದ ಮಾಹಿತಿಗಳನ್ನು ಕೆಲವು ಲೇಖನಗಳನ್ನು ಒದಗಿಸಿಕೊಟ್ಟ ಡಾ|| ಗುರುರಾಜಾಚಾರ್ಯ ನಿಪ್ಪಾಣಿ ಇವರಿಗೆ ಕೃತಜ್ಞತಾನಮನಗಳು.

ಯುಕ್ತಿಮಲ್ಲಿಕಾ ಲೇಖನ ಗ್ರಂಥಗಳ ಅಕ್ಷರಸಂಯೋಜನೆಯಲ್ಲಿ ಸಹಕರಿಸಿದ ವಿದ್ವಾನ್ ಕೆ. ಗಣಪತಿ ಭಟ್, ಶ್ರೀ ಪ್ರಹ್ಲಾದ ದೇಶಪಾಂಡೆ, ಶ್ರೀಮತಿ ಸುಧಾ, ಶ್ರೀ ಅಂಬಾಜಿರಾವ್ ಇವರಿಗೆಲ್ಲರಿಗೂ ಕೃತಜ್ಞತೆಗಳು.

ಯುಕ್ತಿಮಲ್ಲಿಕಾ ಗ್ರಂಥಪ್ರಕಾಶನದ ಪ್ರಚಾರಯೋಜನೆಯಲ್ಲಿ ನಿರ್ವ್ಯಾಜವಾದ ಗುರುರಾಜರಲ್ಲಿನ ಭಕ್ತಿಯಿಂದ ತಮ್ಮನ್ನು ತೊಡಗಿಸಿಕೊಂಡ ಶ್ರೀಗೋಪಾಲಕೃಷ್ಣವರ್ಣ

ಮತ್ತು ಶ್ರೀಯುತ ಅಬ್ಬೂರು ಜಗನ್ನಾಥ್, ಶ್ರೀಯುತ ಕೆ.ಎನ್. ಪ್ರಸಾದ್ ಇವರಿಗೆ ಕೃತಜ್ಞತೆಗಳು.

ಅತ್ಯಂತ ಶ್ರದ್ಧೆಯಿಂದ ಕೊನೆಹಂತದ ಪುಸ್ತಕದ ಪುಟವಿನ್ಯಾಸವನ್ನು ನಿರ್ವಹಿಸಿಕೊಟ್ಟ ಗುರುರಾಜರಭಕ್ತರಾದ ಶ್ರೀ ವಿದ್ವಾನ್ ಬದರೀನಾರಾಯಣಾಚಾರ್ಯ ಕಡ್ಡಿ ಇವರಿಗೆ ನಮನಪೂರ್ವಕ ಕೃತಜ್ಞತೆಗಳು.

ಯುಕ್ತಿಮಲ್ಲಿಕೆಯ ಬಹುಭಾಗದ ಅಕ್ಷರಸಂಯೋಜನೆಯನ್ನು ಶ್ರದ್ಧಾಭಕ್ತಿಗಳಿಂದ ನಿರ್ವಹಿಸಿದ್ದಲ್ಲದೆ, ಸಮಗ್ರಗ್ರಂಥದ ಮುದ್ರಣದ ವ್ಯವಸ್ಥೆಯ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿದ ಎಂ. ಶರತ್ ಚಂದ್ರ ಇವರಿಗೆ ವಿಶೇಷ ಕೃತಜ್ಞತೆಗಳು.

ಗ್ರಂಥಸಂಯೋಜನೆಯಲ್ಲಿ ನೆರವಾದ ಶ್ರೀ ಶ್ರೀಧರ್, ವಿದ್ವಾನ್ ಕೃಷ್ಣಾಚಾರ್ಯ, ಶ್ರೀ ರಮೇಶ್, ಶ್ರೀ ಸುಧಾಕರ, ಶ್ರೀಮತಿ ಜಯಶ್ರೀರಾವ್ ಇವರೆಲ್ಲರಿಗೂ ಕೃತಜ್ಞತೆಗಳು.

ಪ್ರಕಾಶನದ ವ್ಯವಸ್ಥೆಯಲ್ಲಿ ವಿಶೇಷವಾಗಿ ಸಹಕರಿಸಿದ ಸಹೃದಯರಾದ ಶ್ರೀಪಾದರ ಪೂರ್ವಾಶ್ರಮದ ಸಹೋದರರಾದ ಶ್ರೀಮದ್ವೇಶತಂತ್ರಿಗಳಿಗೆ ಶ್ರೀಯುತ ಪುತ್ತೂರಾಯರಿಗೆ ಹಾರ್ದಿಕ ಕೃತಜ್ಞತೆಗಳು.

ಪುಸ್ತಕ ಅಂದಕ್ಕೆ ಬೇಕಾಗುವ ಮುಖಪುಟವಿನ್ಯಾಸವನ್ನು ಮಾಡಿಕೊಟ್ಟ ಶ್ರೀಯುತ ಹೆರ್ಗ ಲಕ್ಷ್ಮೀನಾರಾಯಣ ತಂತ್ರಿ ಇವರಿಗೆ, ಎಲ್ಲ ಕ್ಷೇತ್ರಗಳ ಚಿತ್ರಗಳನ್ನು ಶ್ರಮವಹಿಸಿ ಸೆರೆಹಿಡಿದು ತಂದ ಶ್ರೀ ಸುಕುಮಾರ್ ಕೊಡವೂರು ಇವರಿಗೆ ಹಾರ್ದಿಕ ಕೃತಜ್ಞತೆಗಳು.

ಪ್ರತ್ಯಕ್ಷವಾಗಿ-ಪರೋಕ್ಷವಾಗಿ ಸಹಕರಿಸಿದ ಎಲ್ಲ ಸಹೃದಯದ ಅಧ್ಯಾತ್ಮಬಂಧುಗಳಿಗೂ ಹಾರ್ದಿಕ ಕೃತಜ್ಞತೆಗಳು.

**ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್**, ಮೈಸೂರು ಮುದ್ರಣಾಲಯದ ಅಧಿಕಾರಿ ಹಾಗು ಸಿಬ್ಬಂದಿವರ್ಗಕ್ಕೆ ಕೃತಜ್ಞತೆಗಳು. ಈ ಗ್ರಂಥರತ್ನಪ್ರಕಾಶನದಲ್ಲಿ ಪ್ರತ್ಯಕ್ಷ ಹಾಗು ಪರೋಕ್ಷ ಸಹಕರಿಸಿದ ಎಲ್ಲ ಮಹನೀಯರಿಗೆ ಸಂಶೋಧನ ಸಂಸ್ಥೆಯು ಸಗೌರವ ಆಭಾರಿಯಾಗಿದೆ.

ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,
ಸೋದೆ ಶ್ರೀವಾದಿರಾಜಮಠ,
ರಥಬೀದಿ, ಉಡುಪಿ
ಪರವಾಗಿ,
ಶ್ರೀಮಠದ ದಿವಾನರು
**ಶ್ರೀಯುತ ವಿದ್ವಾನ್ ಪಾಡಿಗಾರು ಶ್ರೀನಿವಾಸ ತಂತ್ರಿ**

# ಮುನ್ನುಡಿ

ಶಾಸ್ತ್ರಪಂಕಜಮಕರಂದವನ್ನಾಸ್ವಾದಿಸುವ ರಸಋಷಿಗಳಿಗೆಲ್ಲರಿಗೂ ಕೃಷ್ಣದ್ವೈಪಾಯನ ಎಂಬ ಅರಿವಿನ ಸಾಗರವೇ ಆಶ್ರಯ ತಾಣ. ಮೂರ್ಲೋಕದ ಅರತಿಗಳ ಕಿತ್ತೊಗೆಯುವ ನಿಶಿತ ಬಾಣ. ವ್ಯಾಸರಿಂದಲೇ ಋಷಿಮುನಿಗಳಿಗೆಲ್ಲ ನಿರಂತರ ತತ್ವಸುಧೆಯ ರಸದೌತಣ. ಹೀಗಿದ್ದರೂ ವ್ಯಾಸರ ಹೃದಯಸೊದೆಯ ಸವಿಯನ್ನು ಸವಿಯಬಲ್ಲ ಏಕೈಕ ಜಾಣ; ಮುದ್ದು ಮುಖದ ಮುಖ್ಯಪ್ರಾಣ. ಬಹುಗುಣಮಣಿಯ ಮುಖ್ಯಪ್ರಾಣನೆಂದರೆ ಶ್ರೀಹರಿಗೂ ಪಂಚಪ್ರಾಣ.

ಇಂತಹ ನಿಜದಾಸನಾದ ಪ್ರಾಣನ ಸಿರಿವದನದಲ್ಲಿ ಅರಿವಿನ ಸಾಗರವೆನಿಸಿದ ವ್ಯಾಸರು; ಸಾವಿರ ಸುರರ ಮಧ್ಯೆ ತತ್ವ-ಸುಧೆಯ ಕಂಪನ್ನು ತುಂಬಿದರು. ಅಧ್ವಗಾಮಿಗಳಾದ ಸಾಧುಗಳಿಗೆ ಸಿದ್ಧಾಂತ ಪದ್ಧತಿಯಿಂದುದ್ಧರಿಸೆಂದು ಹರಸಿದರು.

ಈ ಪ್ರಾಣನಿಂದಲೇ ಜಗದ ಇರವು ಮತ್ತು ಅರಿವು. ಪ್ರಾಣನಿಲ್ಲದ ಪ್ರಪಂಚ ಪಂಚತ್ವವನ್ನೈದಿದ ಪೆಣ. ಪ್ರಾಣೇಶನ ಅರಿವಿಲ್ಲದ ಜೀವನ ಕಾರ್ಬೊಗೆಯ ಕಾನನ. ಜಗತ್ತ್ರಾಣನಾದ ಮುಖ್ಯಪ್ರಾಣ ಸಕಲಸುರಮುನಿಕುಲಕ್ಕೆ ತತ್ವಕಮಲದ ಕಂಪನ್ನು ನೀಡಿದ. ಆದರೇನಂತೆ ? ಧರೆಯ ಮಂದಿಯೆಲ್ಲ ಅಜ್ಞಾನದ ಕರಿಯ ಕಡಲಲ್ಲೇ ಮುಳುಗಿದರು. ಅಜ್ಞಾನಿಗಳ ತವರಿನಲ್ಲಿ ಅಲ್ಪಜ್ಞಾನಿಗಳೇ ಹೆಚ್ಚಾದರು. ಕಾಲಾಂತರದಲ್ಲಿ ತಿಳಿಗೇಡಿಗಳ ನಾಡಾಯಿತು. ಕಗ್ಗತ್ತಲ ಕಾಡಾಯಿತು. ಸುಜನರೆಲ್ಲರೂ ಇರುಳು ಕಂಡ ಭಾವಿಗೆ ಹಗಲೇ ಬೀಳಹತ್ತಿದರು. ಕುರುಗಣೆಯ ಕಾಪಥದಲ್ಲಿ ಕಾಲಿಟ್ಟರು.

ಇವರನ್ನು ಕಂಡ ಹರಿದಾಸಾಗ್ರಣಿಯಾದ ಮುಖ್ಯಪ್ರಾಣ ಸತ್ಯಲೋಕದಿಂದ ಧರೆಗಿಳಿದು ಬಂದ. ಭವಬೇಗುದಿಯಲ್ಲಿ ಬೆಂದು ನೊಂದು ಬಸವಳಿದ ಸುಜನರ ಉದ್ಧಾರಕ್ಕಾಗಿ 'ಮಧ್ವಮುನಿ' ಎಂಬ ಚಂದನಾಚಲವಾಗಿ ಬಂದ.

ಭಗವಾನ್ ಆನಂದತೀರ್ಥಭಗವತ್ಪಾದರು ಅತ್ಯಾಹಿತ ಅರತಿಯಿಂದ ಅತೃಪ್ತರಾದ ಅಜ್ಞರಾದ ಸಜ್ಜನರ ಬುದ್ಧಿಯನ್ನು ಅರಿವೆಂಬ ಅಚ್ಛೋದದಿಂದ ಸ್ವಚ್ಛಗೊಳಿಸಿದರು. ಮಲಿನಗೊಂಡ ಅಂತಃಕರಣವನ್ನು ತಮ್ಮ ಶಾಸ್ತ್ರವೆಂಬ ಅಂಶುಕದಿಂದ ಒರೆಸಿದರು.

ಹೀಗಿದ್ದರೂ ಕಾಲಾಂತರದಲ್ಲಿ ಮಧ್ವರಚಂದನವನದಲ್ಲಿ ಅನ್ಯಮತಗಳೆಂಬ ಕಂಟಕದ್ರುಮಗಳು ಬೆಳೆಯಲಾರಂಭಿಸಿದವು. ಸಜ್ಜನರಿಗೆ ಶಾಸ್ತ್ರಗಳು ಜಟಿಲವಾದವು. ಇದನ್ನರಿತ ಹರಿಯು ವಿದ್ವತ್ತಿಮಿಂಗಿಲರೆನಿಸಿದ 'ಜಯತೀರ್ಥ'ರೆಂಬ ತರುಣ ತರಣಿಯನ್ನು

ಕಳುಹಿಸಿದ. ಕಾಲಾಂತರದಲ್ಲಿ ಯತಿಕುಲಲಾಮರೆನಿಸಿದ ಶ್ರೀಪಾದರಾಜರು - ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀವಿಜಯೀಂದ್ರರೇ ಮೊದಲಾದ ಜ್ಞಾನಸೂರ್ಯರ ಉದಯಮಾನವಾಯಿತು. ಮಹಾರಥಿಕರೆಲ್ಲರೂ ಸೇರಿದಾಗ ಭೀಮಾಭಿರಕ್ಷಿತ ಪಾಂಡವ ಸೇನೆಯಂತೆ ವಾದಿಭೀಮರಿಂದ ಮಧ್ವಸಿದ್ಧಾಂತ ಸೇನೆಯು ರಕ್ಷಿತವಾಯಿತು.

ಮಧ್ವಮುನಿಗಳು ವೇದಾಂತಸಾಮ್ರಾಜ್ಯದ ಸಾಮ್ರಾಟ್ ಆಗಿದ್ದರೆ ಆದಕ್ಕೆ ಯುವರಾಜರು ವಾದಿರಾಜರು. ವ್ಯಾಸರ ಆಣತಿಯನ್ನು ಪ್ರಣತಿಯಂತೆ ಹೊತ್ತು ಬಂದ ಲಾತವ್ಯರೇ ಭಗವಾನ್ ರಾಜರು. ಭೂವರಾಹ ಮತ್ತು ವಾಗೀಶತೀರ್ಥರಲ್ಲಿ ಸೇವೆಗೈದ ಫಲವಾಗಿ ರಾಮಾಚಾರ್ಯ ದಂಪತಿಗಳನ್ನು ನೆಪವಾಗಿಟ್ಟುಕೊಂಡು ಹೂವಿನಕೆರೆಯಲ್ಲಿ ಅವತರಿಸಿದ ಮಹಾನುಭಾವರೇ ವರಾಹನಾಮಕ ಲಾತವ್ಯರು.

ಪಾಂಡವರ ಇಂದ್ರಪ್ರಸ್ಥದಲ್ಲಿನ ಸರೋವರದಲ್ಲಿ ಕೆಸರಿನ ಸಂಬಂಧವಿಲ್ಲದೆ ಕಮಲಗಳು ಅರಳಿದ್ದವಂತೆ. ಅಂತೆಯೇ ಮಾಧ್ವ ಬಂಧುಗಳ ಇಂದ್ರಪ್ರಸ್ಥವೆಂಬ ಉಡುಪಿಯ ಹೂವಿನಕೆರೆ ಎಂಬ ಸರೋವರದಲ್ಲಿ ಪ್ರಕೃತಿಯ ಸಂಬಂಧವಿಲ್ಲದೆ ಅರಳಿದ ಕಮಲ ವಾದಿರಾಜರು. ಹರಿದಿನವೆನಿಸಿದ ದ್ವಾದಶಿಯಲ್ಲಿ ವಾಗೀಶತೀರ್ಥರೆಂಬ ಯೋಗಿಗಳಿಂದ ಕೃಷ್ಣನ ಪೂಜೆಗಾಗಿ ಬಂಗಾರದ ಹರಿವಾಣದಲ್ಲಿ ಸ್ವೀಕರಿಸಿದ ಪುಷ್ಪವೇ ರಾಜರು. ಧೂರ್ತರ ದುರ್ಧರ್ಷವಾದ ದುಃಸ್ಸಿದ್ಧಾಂತಗಳೆಂಬ ಅಶನಿಪಾತದಿಂದ ಕಂಗಾಲಾದ ಮಂದಿಗೆ ಸಾಂತ್ವನ ನೀಡಲೋಸುಗುವೇ ಧರೆಗಿಳಿದ ಧೀಮಂತ ಧೀಮಣಿಗಳಿವರು. ಧರಣಿ ಧರೇಂದ್ರರನ್ನೂ ಮೀರಿಸುವ, ದೇವಗುರುಧಿಕ್ಷಣರನ್ನೂ ಧಿಕ್ಕರಿಸುವ ಧೀವರರ ಬುದ್ಧಿಮತ್ತೆಯನ್ನು ಬಲ್ಲವರಾರು ?

ತತ್ವದ ಜಾಡನ್ನು ಕಾಣದೆ ನೊಂದ; ಅಧ್ಯಾತ್ಮ ತೃಷೆಯಿಂದ ತರ್ಷಿತರಾದ ಸಜ್ಜನ ಮಂದಿಗೆಲ್ಲ ಆನಂದಮುನಿಯ ಸಿದ್ಧಾಂತವೆಂಬ ಚಂದನಾಚಲದ ಕಂಪಿನ ತಂಗಾಳಿಯನ್ನು ಬೀಸಿದ ಮಹಾನುಭಾವರಿವರು. ನಿರ್ದುಷ್ಟಳಾದ ಗೀರ್ವಾಗ್ವಾಣಿಯ ವೇಣಿಯಲ್ಲಡಗಿದ ತತ್ವರತ್ನಗಳನ್ನು ಭವ್ಯ ಭಾರತಾದ್ಯಂತ ಕಾಲ್ನಡಿಗೆಯಲ್ಲಿ ಸಂಚರಿಸಿ ಬಿತ್ತಿದ ಮಹಾಭಗೀರಥರಿವರು.

ರಾಜರನ್ನು ಮನದಲ್ಲಿ ನೆನೆದ ಮಂದಿಗೆ ಹೃದಯಗುಹೆಯಲ್ಲಡಗಿದ ಪಡಿಪುಚ್ಚಗಳ ಗುಚ್ಚವೆಲ್ಲ ನುಚ್ಚುನೂರು.

## ಪವಾಡಗಳು

ಎಂಟರ ಎಳವೆಯಲ್ಲಿ ಕಾಷಾಯ ತೊಟ್ಟು ಸತತವಾಗಿ ೧೧೨ ವರ್ಷಗಳ ಕಾಲ ಕಡಲತೀರದ ಕಡೆಗೋಲು ಕೃಷ್ಣನನ್ನು ಪೂಜಿಸಿದ ಕೀರ್ತಿ ರಾಜರಿಗೇ ಸಲ್ಲುವಂತಹದ್ದು.

ಶ್ರೀಕೃಷ್ಣಪರ್ಯಾಯವನ್ನು ಎರಡುವರ್ಷಗಳ ಅವಧಿಗೆ ವಿಸ್ತರಿಸಿ ನಾಲ್ಕು ಪರ್ಯಾಯಗಳನ್ನು ಸ್ವತಃ ತಾವೇ ನಡೆಸಿ ಐದನೇ ಪರ್ಯಾಯವನ್ನು ಸೋದೆಯಲ್ಲಿ ವೇಣುಗೋಪಾಲನನ್ನು ಸ್ಥಾಪಿಸಿ ಪೂಜಿಸಿ ಸಂಭ್ರಮದಿಂದ ಪೂರೈಸಿದ ಮಹಾವಿಭೂತಿಪುರುಷರು.

ರಾಜರೊಮ್ಮೆ ಸಂಚಾರದಲ್ಲಿದ್ದಾಗ ಜಹಗೀರದಾರನ ಮಗನೊಬ್ಬನು ಮದುವೆ ಮಂಟಪದಲ್ಲಿಯೇ ತಲೆಗೆಸುತ್ತಿದ್ದ ರುಮಾಲಿನಲ್ಲಿದ್ದ ಹಾವೊಂದು ಕಡಿದು ಅಸುನೀಗಿದ. ಮದುವೆಗೆ ಕಟ್ಟಿದ ಮಂಟಪವೇ ಮಸಣಕ್ಕೆ ಸಾಗುವ ಮಂಚವಾಗುವ ಸ್ಥಿತಿ. ತಂದ ತೋಮಾಲೇಗಳೇ ಹೆಣಕ್ಕೆ ಅಲಂಕಾರವಾಗುವ ವಿಷಮಘಳಿಗೆ ಸಮೀಪಿಸಿತು. ವಿಷವೈದ್ಯನ ಕೈಚಳಕಕ್ಕೂ ಗುಣವಾಗದೆ ಅಸುನೀಗಿದ. ದೈವವಶಾತ್ ರಾಜರು ಬಂದ ಸುದ್ದಿ ತಿಳಿದ ಜಹಗೀರ ತ್ವರಿತದಿಂದ ಬಂದು ರಾಜರ ಚರಣಸನ್ನಿಧಿಯಲ್ಲಿ ಕುಸಿದುಬಿದ್ದ. ಗೋಳಿಟ್ಟ. ವೈರಾಗ್ಯ ಪ್ರತೀಕವಾದ ದಂಡ; ಕರುಣೆಗೆ ಸಂಕೇತವಾದ ಕಮಂಡಲುವನ್ನು ಹಿಡಿದ ರಾಜರು ಅಭಯದಾನ ಮಾಡಿದರು. ವಿವಾಹ ನಡೆಯುವುದೆಂದರು. ಅದೆಂತಹ ಪವಾಡ! ರಾಜರು ಕ್ಷಣಮಾತ್ರದಲ್ಲಿ ಮಹಾಲಕುಮಿಯೇ ಬಯಸಿ ಬರೆಸಿದ ಲಕ್ಷ್ಮೀಶೋಭಾನಪದವನ್ನು ಸುಶ್ರಾವ್ಯವಾಗಿ ಹಾಡಿ-ಹಾಡಿಸಿದರು. ಸತ್ತ ಮಧುಮಗ ಚೈತನ್ಯ ಹೊಂದಿದ. ಅಂದಿನಿಂದ ಇಂದಿಗೂ ಈ ಕೃತಿಯ ಮಹಿಮೆ ಮನೆಮನೆಗಳಲ್ಲಿ ಅಳಿಯದೆ ಉಳಿದಿರುವುದೂ ಒಂದು ರಾಜರ ಪವಾಡದಲ್ಲೇ ಅಡಗಿದೆ.

ಹಯಗ್ರೀವನ ಉಪಾಸನೆಯ ಆಳವನ್ನರಿತ ರಾಜರಿಗೆ ಜಗತ್ತಿನ ಸಂತಾಪವನ್ನು ಕಳೆಯುವುದು ದೊಡ್ಡಸಾಧನೆ ಎನಿಸಲಿಲ್ಲ. 'ವ್ಯಾಘ್ರೇಣ ಖಾದ್ಯಮನೋಽಪಿ ನ ವಿಶೇಜ್ಜೈನಮಂದಿರಮ್' 'ತಿನ್ನಬೇಕೆಂದು ಹುಲಿ ಅಟ್ಟಿಸಿಕೊಂಡು ಬಂದರೂ ಜೈನಾಲಯಕ್ಕೆ ಹೊಕ್ಕಬಾರದೆಂದು' ಶಾಸ್ತ್ರದ ಮಾತಿದೆ. ಆದರೆ ರಾಜರು ಜೈನಾಲಯವನ್ನು ಕೃಷ್ಣಾಲಯ ಮಾಡಿ ಒಳಹೋದರು. ಶಿಷ್ಯರೆಲ್ಲರೂ ಗಾಬರಿಯಾದರೆ 'ನವರತ್ನಾಲಂಕೃತ ಪಚ್ಚೆ ಬುದ್ಧವಿಗ್ರಹವನ್ನು ವಿಟ್ಠಲನನ್ನಾಗಿ ಪರಿವರ್ತಿಸಿ ತಂದರು. ಗಣಪತಿಯನ್ನು ಹಯಗ್ರೀವನನ್ನಾಗಿ ಮಾಡಿದರು. ಬ್ರಹ್ಮರಾಕ್ಷಸನನ್ನು ಬ್ರಾಹ್ಮಣನನ್ನಾಗಿ ಮಾಡಿದರು, ಬಂಜೆಗೆ ಮಕ್ಕಳಾಗುವಂತೆ ಮಾಡಿದರು. ಅಮಾವಾಸ್ಯೆ ಚಂದ್ರನನ್ನು ತೋರಿಸಿದರು. ಮೃತ್ತಿಕೆಯಿಂದ ಹಸುವಿನ ಕೆಚ್ಚಲಲ್ಲಿ ಹಾಲೂರುವಂತೆ ಮಾಡಿದರು. ನೆಲೆಗಡಲೆಯನ್ನು ಬಂಗಾರದ ಕಡಲೆಯನ್ನಾಗಿ ಮಾಡಿದರು. ಬದನೆಯನ್ನು – ಔಷಧಿಯನ್ನಾಗಿಯೂ, ಹುಲಿಯನ್ನು ಹಸುವಿನಂತೆಯೂ ಮಾಡಿದರು.

ರಾಜರೊಂದುದಿನ ರಥೋತ್ಸವ ಮಾಡುವಾಗ ಧೋ ಧೋ ಎಂದು ಮಳೆಯು ಸುರಿಯಲಾರಂಭಿಸಿತು. ಹರಿಯಲ್ಲಿ 'ಎನ್ನ ಮೇಲೆ ಕರುಣಾಮೃತದ ರಸಮಳೆಯ ಸುರಿಸೆಂದು' ಸೊಲ್ಲೊಂದನ್ನು ಹೊಸೆದದ್ದೇ ತಡ, ಆರಿದ ದೀಪಗಳು ಉರಿದವು. ತಾವೇ ರಥ

ಎಳೆದರು. ಮಳೆಯಲ್ಲಿಯೂ ದೀಪೋತ್ಸವ ಮಾಡುವ ಶಕ್ತಿ. ವಿಷತಿಂದು ಜೀರ್ಣಿಸಿಕೊಳ್ಳುವ ಶಕ್ತಿ, ಜ್ವರವನ್ನು ದಂಡಕ್ಕೆ ಆವಾಹಿಸುವ ಶಕ್ತಿ. ಮೊಸಳೆ - ಇಲಿ - ಸರ್ಪ - ಹುಲಿ - ಮನುಷ್ಯರ ಸ್ವಭಾವವನ್ನೇ ತಿದ್ದಿ ಮೆರೆವ ಶಕ್ತಿ ಋಜುಯೋಗಿಗಳಾದ ರಾಜರಿಗಲ್ಲದೆ ಮರ್ತ್ಯರಿಗೆ ಒಲಿಯಲು ಸಾಧ್ಯವೇ?

ರಾಜರ ಮೃಧೂಳು ಭಕ್ತರ ತಲೆಶೂಲೆಯನ್ನು ಓಡಿಸಿದೆ. ರಾಜರ ಶೇಷವಸ್ತ್ರ ಕುಷ್ಠರೋಗವನ್ನಪಹರಿಸಿದೆ. ರಾಜರ ಗಂಡೂಷ ಜಲ ಹುಚ್ಚನ್ನು ಹೊಡೆದಟ್ಟಿದೆ. ರಾಜರ ಉಚ್ಛಿಷ್ಟ ಮೃತ್ಯುವನ್ನೇ ಹೊಡೆದೊಡಿಸಿದೆ. ಪಾದೋದಕ ಉದರವ್ಯಾಧಿ - ಜ್ವರಗಳನ್ನು ಪರಿಹರಿಸಿದೆ. ಇಂತಹ ಮಹಿಮೆಗಳನ್ನು ಕಂಡ ಕವಿಗಳು ಹೀಗೆ ಬಣ್ಣಿಸುತ್ತಾರೆ -

**ಚಿತ್ರಂ ಗುರೋಸ್ತಚ್ಚರಣಾರವಿಂದಂ**
**ಚಿತ್ರಂ ಗುರೋಸ್ತನ್ನಯನಾರವಿಂದಮ್ ।**
**ಚಿತ್ರಂ ಗುರೋಸ್ತದ್ವದನಾರವಿಂದಂ**
**ಚಿತ್ರಂ ಚ ಚಿತ್ರಂ ಪುನರಂಬಚಿತ್ರಮ್ ॥** ಎಂದು.

ಸ್ವತಃ ರಾಜರೇ ತಮ್ಮ ಉಪಾಸನೆಯ ಸಿದ್ಧಿಯನ್ನು ಕಂಡು ಹೀಗೆ ಉದ್ಗರಿಸಿದ್ದಾರೆ -

**''ನ ಶಸ್ತ್ರೀ ಮೇ ಭೃತ್ಯೋ ನಚ ಕಪಟಚಾಟೂಕ್ತಿಕುಮನುಃ**
**ನ ವಿತ್ತೈರ್ಭೈಷಜ್ಯಂ ನ ಚ ಪದರಯೋ ನಾಪಿ ಖಗರಾಜ್ ।**
**ತಥಾಪ್ಯೇಷಾದೋಷಾನಲಸಪಿಶುನೋನ್ಮತ್ತ ಭುಜಗೀ**
**ಹಯಗ್ರೀವಶ್ರೀಮಚ್ಚರಣಶರಣಂ ಮಾಂ ಸ್ಪೃಶತಿ ಕಿಮ್ ॥''**

'ಶಸ್ತ್ರಧಾರಿ ಭೃತ್ಯನು ನನ್ನ ಬಳಿ ಇಲ್ಲ. ಕಪಟ ಚಾಟೂಕ್ತಿಯ ಕುಮಂತ್ರವೂ ಇಲ್ಲ. ಹಣಕೊಟ್ಟು ಔಷಧಿಮಾಡುವವನಲ್ಲ. ಗರುಡನೂ ಅಲ್ಲ. ಹೀಗಿದ್ದರೂ ಹೀನಬುದ್ಧಿಯವರಿಂದ ಬಿಡಲ್ಪಟ್ಟ ಸರ್ಪಗಳು ಹಯಗ್ರೀವನ ಪಾದವನ್ನು ಭಜಿಸುವ ನನ್ನನ್ನು ಮುಟ್ಟಲಾರವು ಎಂದಿದ್ದಾರೆ.

ಆದ್ದರಿಂದ ರಾಜರನ್ನು ಸರ್ಪಕಚ್ಚಲಾರದು, ರಾಜರನ್ನು ರಾಜರಿಂದ ಬಂಧಿಸಲಾಗದು, ಕಳ್ಳರಿಂದ ಹೊಡೆಯಲಾಗದು. ಕುಮತಿಗಳ ಕ್ರೌರ್ಯ, ಪ್ರಕೃತಿಯ ಶೌರ್ಯ, ರೋಗರುಜಿನಗಳ ತಾಪ, ಮಾನಸಿಕ ಚಿಂತೆ ಮುಂತಾದ ಪ್ರಕೃತಿಯ ಯಾವ ವಿಭ್ರಮ ವಿಪರ್ಯಾಸಗಳಿಗೆ ತುತ್ತಾಗದೆ ಆಖಣಾಶ್ಮ ಸಮರಂತೆ ಮೆರೆದ ಮಹಾನುಭಾವರು.

## ರಾಜರೆಂಬ ಸೊದೆಯ ಕಡಲು

ರಾಜರು ಸನ್ಯಾಸಕ್ಕೆ ತೆರಳಿದಾಗ ಪುತ್ರವಿರಹವನ್ನು ತಂದೆ ಸಹಿಸದಾದರು. ರಾಜರು ಶ್ರೀಮದಾಚಾರ್ಯರಂತೆ ನಾರಾಯಣನೆಂಬ ಮಗ ಹುಟ್ಟುವಂತೆ ಮಾಡಿ ಸನ್ಯಾಸಿಯಾದರು.

ಸನ್ಯಾಸಿಯಾಗಿದ್ದರೂ ಹಂಪೆಯ ಕೃಷ್ಣರಾಯನು ದಾರಿದ್ರ್ಯದಿಂದ ಕಂಗೆಟ್ಟಾಗ ವಾಲಿ ಭಂಡಾರವನ್ನು ತೋರಿ ಹರಿಸಿದರು. ದುರ್ಭಿಕ್ಷೆಯು ದೇಶದಲ್ಲಿ ತಾಂಡವವಾಡುವಾಗ ಮಂತ್ರಶಕ್ತಿಯಿಂದ ಸುವರ್ಣವೃಷ್ಟಿ ಸುರಿಸಿದರು. ಶ್ರೀಕೃಷ್ಣಾಷ್ಟಕದಿಂದ ಕೃಷ್ಣಯತಿಗಳ ಜ್ವರ ಪರಿಹರಿಸಿದರು. ಶ್ರೀಶಗುಣದರ್ಪಣದಿಂದ ಬ್ರಾಹ್ಮಣನ ದಾರಿದ್ರ್ಯಪರಿಹಾರ ಮಾಡಿದರು. ದೆಹಲಿ ರಾಜನ ಮಗನನ್ನು ಸಮಾಧಿಯಿಂದ ತೆಗೆಸಿ ಬದುಕಿಸಿದರು. ಭಕ್ತನಿಗಾಗಿ ಭಾಗವತ ರಚಿಸಿಕೊಟ್ಟರು. ಶಿಷ್ಯರು ದಾರಿತಪ್ಪಿದಾಗ 'ಕಂಜಾಕ್ಷಾಯಯ್ಯ' ಎಂದು ಪ್ರಾರ್ಥಿಸಿ ಗುರಿಮುಟ್ಟಿಸಿದರು. ಹಾವಿಗೆ ಹೆದರಿದ ಇಲಿಯ ಭೀತಿಯನ್ನೂ ಪರಿಹರಿಸಿದರು. ಭಕ್ತನಿಗಾಗಿ ನದಿಯಲ್ಲಿ ಬಿಸಿನೀರಿನ ಕುಂಡ ನಿರ್ಮಿಸಿದರು. ನಿರೇ ಇಲ್ಲದ ಪ್ರದೇಶದಲ್ಲಿ ತಮ್ಮ ಕಮಂಡಲುವನ್ನಿಟ್ಟು ನಿತ್ಯವೂ ನೀರು ಇರುವಂತೆ ಮಾಡಿದರು. ಕಣ್ಣಿಲ್ಲದವಗೆ ಕಣ್ಣು ಕೊಟ್ಟರು. ಅಚ್ಯುತರಾಯನ ರೋಗವನ್ನು ಪರಿಹರಿಸಿದರು. ರಾಜರ ಸಂತಾನ ಪರಂಪರೆ ಮುಂದುವರೆಯುವಂತೆ ಅನುಗ್ರಹಿಸಿದರು. ಹೀಗೆ ರಾಜರು ಕರುಣೆಯ ಕಡಲು. ಅವರ ಮಹಿಮೆ ಹರಿಯಂತೆ ಬಲು ಚಿತ್ರ - ಅದ್ಭುತ.

## ದಿಗ್ವಿಜಯ

ರಾಜರ ಬಳಿ ಪ್ರತಿವಾದಿಗಳೇ ನಿಲ್ಲದಾದರು. ಹಯಗ್ರೀವನ ಸುತನನ್ನು ಮುಸುಕುವ ಕಾರ್ಮೋಗೆಯುಂಟೇ? ಹೀಗಿದ್ದರೂ ಕೆಲವರು ಜಯಿಸಬಂದರು. ಮಲ್ಲಣ ಪಂಡಿತ, ಕುಂಭಕೋಣದ ಪಂಡಿತರು, ಜಂಗಮರು, ಅದ್ವೈತಿಗಳ ದಂಡೇ ರಾಜರ ಬಳಿ ವಾದಕ್ಕೆಂದು ಬಂದು ಪತಂಗದಂತೆ ಅಪಜಯವೆಂಬ ಸಾವಿಗೆ ಶರಣಾಗತರಾದರು. ಅಹೋಬಲದಲ್ಲಿ ಶೃಂಗೇರಿಯಲ್ಲಿ ರಾಜರ ಜಯವನ್ನು ಸಂಕೇತಿಸುವ ಕುರುಹು-ಜಯಸ್ತಂಭಗಳಿವೆ. ಮಾಘಕಾವ್ಯವನ್ನು ಮೀರಿಸುವ ರುಕ್ಮಿಣೀಶವಿಜಯ ಕಾವ್ಯವು ಆನೆಯ ಮೇಲೆ ಅಲಂಕೃತವಾಗಿ ಮೆರವಣಿಗೆ ಮಾಡಿದ ಇತಿಹಾಸ ಪೂನಾದಲ್ಲಿ ನಡೆದಿದೆ. ರಾಜರವಿದ್ವತ್ತೆಯನ್ನು ಕಂಡು ಕಂಗಾಲಾದ ವೆಂಕಟಪತಿಭೂಪ ಪ್ರಸಂಗಾಭರಣತೀರ್ಥರೆಂದು ಗೌರವಿಸಿದ್ದಾನೆ.

## ಗ್ರಂಥರಚನೆ

ಕೆಲವರು ಶಾಸ್ತ್ರ ಹೇಳಿದರೆ ಶಸ್ತ್ರದಿಂದ ಚುಚ್ಚುವಂತಿರುತ್ತದೆ. ಕೆಲವರು ಕಾವ್ಯವೆಂದು ಹೇಳಿದರೆ ಶ್ರಾವ್ಯವೆಂದೇ ಅನಿಸುವುದಿಲ್ಲ. ರಾಜರು ಹೊಸೆದ ಕಾವ್ಯವು ಶ್ರಾವ್ಯವಾಗಿಯೂ ಶಾಸ್ತ್ರವೂ ಆಗಿ ಕಾಣುತ್ತದೆ. ಶಾಸ್ತ್ರವನ್ನೂ ಕಾವ್ಯದಂತೆ ಹೇಳುವ ಶೈಲಿ ರಾಜರದ್ದು. ಇದರ ಸವಿಯನ್ನು ಅನುಭವಿಸಿಯೇ ತಿಳಿಯಬೇಕು. ಶ್ರೀಮದಾಚಾರ್ಯರ ಅನುವ್ಯಾಖ್ಯಾನಕ್ಕೆ ತುಲನೆಯಾಗುವ ರಾಜರ ಶಾಸ್ತ್ರಕಾವ್ಯ ಯುಕ್ತಿಮಲ್ಲಿಕಾ ಎಂಬ ಪ್ರೌಢಗ್ರಂಥ. ಇದರಲ್ಲಿ

ವ್ಯಾಕರಣ, ಭಾಟ್ಟ – ವೇದಾಂತ – ತರ್ಕ – ಅಲಂಕಾರ – ಲೋಕನೀತಿಗಳು ಪರಸ್ಪರ ಬೆರೆತು ಸರಸವಾಡಿವೆ. ಶಾಸ್ತ್ರರಸಿಕರಿಗೆ ಈ ಪ್ರೌಢಳಾದ ಯುಕ್ತಿಮಲ್ಲಿಕೆಯಲ್ಲಿ ಸಿಗುವ ಸುಖ ಮೋಕ್ಷಾನಂದವನ್ನೂ ಮೀರಿಸುವಂತಹದ್ದು. ಇದರಂತೆ ವ್ಯಾಸರ ಆಜ್ಞೆಯನ್ನು ಸ್ವೀಕರಿಸಿ ಮಹಾಭಾರತಕ್ಕೆ ಲಕ್ಷಾಲಂಕಾರ ರಚಿಸಿ ತಾಯಿಯ ಹರಕೆಯನ್ನು ಪೂರೈಸಿದ್ದಾರೆ. ತಾತ್ಪರ್ಯನಿರ್ಣಯ ವ್ಯಾಖ್ಯಾನ ಪ್ರಕಾಶಿಕಾ, ತತ್ವಪ್ರಕಾಶಿಕಾ ವ್ಯಾಖ್ಯಾನ ಗುರ್ವರ್ಥದೀಪಿಕಾ, ಭೂಗೋಲವರ್ಣನೆ, ವೈಕುಂಠ ವರ್ಣನೆ, ಸರಸಭಾರತೀವಿಲಾಸ, ಹರಿಭಕ್ತಿಲತಾ, ಗುಂಡಕ್ರಿಯೆ, ಸ್ವಪ್ನಪದ, ತುಳಸೀ ಸಂಕೀರ್ತನೆ ಉಪನಿಷದ್ವ್ಯಾಖ್ಯಾನ ಮುಂತಾದ ರಾಜರ ಗ್ರಂಥರಚನೆಯು ಆಳವಾದ ಪಾಂಡಿತ್ಯವನ್ನು ನೀಡಿ ಜೀವರಿಗೆ ಮಹತ್ವವನ್ನು ತುಂಬುವಂತಹವು. ಇಷ್ಟಾಗಿ ಪ್ರತಿನಿತ್ಯವೂ ಹಾಡುವಂತಹ ಸ್ತುತಿಸುವಂತ ಸ್ತೋತ್ರ ಪದ್ಯಗಳನ್ನು ಹೇರಳವಾಗಿ ಕೊಟ್ಟು ಅಧ್ಯಾತ್ಮ ಬಂಧುಗಳ ಕೊರತೆಯನ್ನು ತುಂಬಿಸಿದ ಕೀರ್ತಿ ರಾಜರಿಗೇ ಸಲ್ಲುವಂತಹದ್ದು.

## ರಾಜರ ವಿಶಿಷ್ಟಸೇವೆ

ರಾಜರು ಶ್ರೀಹರಿಗೆ ಸಲ್ಲಿಸಿದ ಸೇವೆಗಳು ಅಭೂತಪೂರ್ವವಾದವುಗಳು. ಸಮಸ್ತ ಜನರ ಕಷ್ಟಗಳನ್ನು ಪರಿಹರಿಸಲೆಂದು ಶ್ರೀಮದಾಚಾರ್ಯರು ದ್ವಾರಕಾಧೀಶ ಶ್ರೀಕೃಷ್ಣನನ್ನು ಪ್ರತಿಷ್ಠಾಪಿಸಿದಂತೆ ರಾಜರು ಬದರಿಯಿಂದ ಒಲಿದು ಬಂದ ತ್ರಿವಿಕ್ರಮದೇವರನ್ನು ಪ್ರತಿಷ್ಠಾಪಿಸಿದರು. ತ್ರಿವಿಕ್ರಮನ ಪ್ರತಿಷ್ಠಾಪನೆಯ ಮೂಲಕ ತಮ್ಮ ಸಮೀರತ್ವವನ್ನು ಸಾಬೀತುಪಡಿಸಿದರು. ಅಯೋಧ್ಯೆಯಿಂದ ಗರುಡ–ಮುಖ್ಯಪ್ರಾಣದೇವರನ್ನು ತಂದು ಪ್ರತಿಷ್ಠಾಪಿಸಿ, ಭಕ್ತರ ಕಷ್ಟಗಳಿಗೆಲ್ಲ ಉತ್ತರಿಸಿದರು. ಶಾಲಗ್ರಾಮ ಕ್ಷೇತ್ರ ಎನಿಸಿದ ಗಂಡಕೀ ನದಿಯಿಂದ ಶಾಲಗ್ರಾಮಗಳನ್ನು ತಂದು ಶ್ರೀನಿವಾಸನಿಗರ್ಪಿಸಿದರು. ಕೃಷ್ಣನ ಗರ್ಭಗುಡಿ ಪಕ್ಕದಲ್ಲಿ ಮತ್ತು ಪಾಜಕದಲ್ಲಿ ಆಚಾರ್ಯರ ಪ್ರತೀಕಗಳನ್ನು ಪ್ರತಿಷ್ಠಾಪಿಸಿದರು. ಸುಬ್ರಹ್ಮಣ್ಯ – ಧರ್ಮಸ್ಥಳಗಳ ಇಂದಿನ ಮಹಿಮೆಗಳು ರಾಜರ ಹಸ್ತಸ್ಪರ್ಶದ ವೈಭವದಿಂದ.

## ಲೋಕೋಪಕಾರ

ತೀರ್ಥಕ್ಷೇತ್ರ ಸಂಚಾರ ನಿಮಿತ್ತದಿಂದ ರಾಜರು ಅನೇಕ ಮುಖವಾದ ಲೋಕೋಪಕಾರಗಳನ್ನು ಮಾಡಿದ್ದಾರೆ. ಲೋಭಿಗಳನ್ನು ಉದಾರಿಗಳನ್ನಾಗಿ ಮಾಡಿದ್ದಾರೆ. ದರಿದ್ರರನ್ನು ಧನಿಕರನ್ನಾಗಿಸಿದ್ದಾರೆ. ದಂಡದಿಂದ ತೀರ್ಥನೀಡಿದ್ದಾರೆ. ಕಾಲಿಟ್ಟು ನೀರು ಬರಿಸಿದ್ದಾರೆ. ಬೆರಳಿನಿಂದ ಬಂಡೆ ಒಡೆದಿದ್ದಾರೆ. ಕೆಳಗೆ ಬೀಳುವ ಶಿಲೆಯನ್ನು ಹೆಸರಿನಿಂದಲೇ ನಿಲ್ಲಿಸಿದ್ದಾರೆ. ಹೀಗೆ ಒಂದೇ ಎರಡೇ? ರಾಜರೆಂಬ ಕಲ್ಪತರುವಿನ ವೈಭವದಿಂದ ಭಕ್ತರು ಪಡೆಯದ ಇಷ್ಟಾರ್ಥಗಳೇ ಇಲ್ಲ.

## ಶ್ರೀಮಠದ ಭಗವತ್ಸನ್ನಿಧಾನ

ಮನೆಯ ಮಕ್ಕಳು - ಮಡದಿಯರೇ ಒಲಿಯದಿರುವ ಕರಾಳ ಕಲಿಯುಗದಲ್ಲಿ ಅಸ್ವತಂತ್ರರಾಗಿ ಅತಪಸ್ವಿಗಳಾಗಿ ನಾವೆಲ್ಲರೂ ಕಮರಿ ಹೋಗಿದ್ದೇವೆ. ಆದರೆ ರಾಜರಿಗೆ ಜಗನ್ನಿಯಾಮಕನಾದ ಭಗವಂತನೇ ಒಲಿದು ಬಂದು ಅಪ್ಪುಗೆಯನ್ನು ನೀಡಿ ಮುದ್ದಿಟ್ಟಿದ್ದಾನೆಂದರೇ ರಾಜರ ಅಂತಸ್ಸತ್ವವನ್ನು ಅರಿಯಬಲ್ಲ ಧೀಮಂತರ್ಯಾರಿದ್ದಾರೆ? ಇಂದಿಗೂ ರಾಜರ ಸಂಸ್ಥಾನದಲ್ಲಿ ರಾಜರಿಗೆ ಒಲಿದ – ಭೀಮಸೇನಾಹೃತ – ನರಸಿಂಹ. ಗೌತಮ ಕರಾರ್ಚಿತ - ವಿಟ್ಠಲ, ವಾಲಿ -ಸುಗ್ರೀವಕರಾರ್ಚಿತ ರಾಮ -ವಿಟ್ಠಲ - ನರಸಿಂಹ ಶಾಲಗ್ರಾಮ, ಹಯಗ್ರೀವ, ಭೂವರಾಹ, ಪಚ್ಚೆ ವಿಟ್ಠಲ, ವಿಶ್ವಂಭರ ಶಾಲಿಗ್ರಾಮ, ದ್ವಾರಾವತೀಯಿಂದ ಒಲಿದು ಬಂದ ಹಯಗ್ರೀವ ಶಾಲಗ್ರಾಮ, ದ್ವಾದಶಲಕ್ಷ್ಮೀನಾರಾಯಣ ಶಾಲಗ್ರಾಮ, ವಿಶ್ವಂಭರಶಾಲಗ್ರಾಮ, ಬಸವನಗಂಟೆ, ಶ್ರೀಮುಷ್ಣವರಾಹ, ದಧಿವಾಮನ ಶಾಲಗ್ರಾಮ, ಬಲಮುರಿಶಂಖ ಗದ್ದುಗೆ ಎಲ್ಲವೂ ರಾಜರ ವೈಭವ ಮತ್ತು ಭಗವದನುಗ್ರಹದ್ಯೋತಕವಾಗಿವೆ.

## ರಾಜರ ಶಿಷ್ಯರು

ಅಪರೋಕ್ಷಜ್ಞಾನಿಗಳ ದೊಡ್ಡಗುಂಪು ರಾಜರಿಂದ ಉಪದೇಶ ಪಡೆದಿದ್ದಾರೆ. ರಾಜರ ಕಾಲದಲ್ಲಿ ಅನೇಕರು ರಾಜರ ಅನುಗ್ರಹಕ್ಕೆ ಪಾತ್ರರಾದರು. ನಂತರವೂ ಪಾತ್ರರಾಗಿದ್ದಾರೆ. ಶ್ರೀಶ್ರೀಸುರೋತ್ತಮತೀರ್ಥರು. ಶ್ರೀಶ್ರೀರಘುನಾಥತೀರ್ಥರು, ಶ್ರೀಶ್ರೀವಾರಿಜಾಕ್ಷ ತೀರ್ಥರು, ಪುರಂದರದಾಸರು, ಕನಕದಾಸರು, ಏಡಮೂಕಬ್ರಾಹ್ಮಣ (ಶ್ರೀಶ್ರೀ ವಿಶ್ವಪ್ರಿಯತೀರ್ಥರು - ಸ್ವಾಪ್ನವೃಂದವನಾಚಾರ್ಯರು) ಶ್ರೀಶ್ರೀ ವಿದ್ಯಾನಿಧಿತೀರ್ಥರು, ಶ್ರೀಶ್ರೀ ವಿದ್ಯಾಧೀಶತೀರ್ಥರು, ಶ್ರೀಶ್ರೀ ಸತ್ಯಧರ್ಮತೀರ್ಥರು, ಶ್ರೀ ಜಗನ್ನಾಥದಾಸರು (ಕೊಂಡಪ್ಪ) ಹೀಗೆ ದೊಡ್ಡ ಪಟ್ಟಿಯೇ ಇದೆ. ಇಂದು ಅನೇಕ ರಾಜರ ಮಹಿಮೆಗಳನ್ನು ರಾಜರ ಪರಮಾನುಗ್ರಹದಿಂದ ತಿಳಿದು ಪ್ರಸಿದ್ಧಿ ಪಡಿಸಿದ ಕೀರ್ತಿ ಶ್ರೀಶ್ರೀವಿಶ್ವೋತ್ತಮತೀರ್ಥ ಶ್ರೀಪಾದರದ್ದು.

## ಪರಿವರ್ತನೆ

ಜಗತ್ತಿನಾದ್ಯಂತ ರಾಜರಕಾಲದಲ್ಲಿ ಶೈವಮತವೇ ಪ್ರಬಲವಾಗಿದ್ದಾಗ ಅದರ ವಿರುದ್ಧ ತಮ್ಮ ಅಸದೃಶವಾದ ಪಾಂಡಿತ್ಯದ ಅದಟನ್ನು ತೋರಿಸಿದ ಮಹಾಮಹಿಮರು ರಾಜರು. ಶೈವರನ್ನು ವೈಷ್ಣವರನ್ನಾಗಿ ಪರಿವರ್ತಿಸಿದ್ದಾರೆ. ಬೌದ್ಧರಿಗೆ ವೈಷ್ಣವಧರ್ಮದ ಮಹಿಮೆಗಳನ್ನು ತೋರಿಸಿದ್ದಾರೆ. ದ್ವೈವಾರ್ಷಿಕ ಪರ್ಯಾಯಕ್ಕಾಗಿ ಅಷ್ಟಮಠಾಧೀಶರ ಮನಸ್ಸನ್ನು ಅಂದು

ಒಂದು ಮಾಡಿದ್ದಾರೆ. ಗ್ರಂಥದಿಂದ ಇಂದಿಗೂ ನಮ್ಮಂಥ ಪಾಮರರಿಗೂ ಸತ್ಸಿಂದ್ಧಾತ ದೀಕ್ಷೆಯನ್ನು ತೊಡಿಸಿ ಪರಿವರ್ತಿಸುತ್ತಲೇ ಇದ್ದಾರೆ.

## ಅನ್ಯಥಾಕರ್ತುಂ ಸಾಮರ್ಥ್ಯ

ಕಡಲೆಯನ್ನು ಬಂಗಾರ ಮಾಡಿದ್ದಾರೆ. ಬದನೆಕಾಯಿಯನ್ನು ಗುಳ್ಳವನ್ನಾಗಿ ಮಾಡಿದ್ದಾರೆ. ಬುದ್ಧನನ್ನು ಪಚ್ಚೆ ವಿಟ್ಠಲ. ಗಣಪತಿಯನ್ನು - ಹಯಗ್ರೀವ. ವಾಚಾಳಿ ಕುಹಕಿಗಳನ್ನು - ಮೂಕರನ್ನಾಗಿಸಿದ್ದಾರೆ. ಮಳೆಯಲ್ಲಿ ದೀಪ ಉರಿಸಿದ್ದಾರೆ. ಅಮಾವಾಸ್ಯೆ ಚಂದ್ರನನ್ನು ತೋರಿದ್ದಾರೆ. ಒಣಗಿದ ಹಸುವಿನ ಕೆಚ್ಚಲಲ್ಲಿ ಹಾಲೂರಿಸಿದ್ದಾರೆ. ರಾಮೇಶ್ವರದಲ್ಲಿದ್ದ ಪತಿವ್ರತೆಯ ಪತಿಯನ್ನು ಕಾಶಿಕ್ಷೇತ್ರದಲ್ಲಿ ತೋರಿಸಿದ್ದಾರೆ. ಹರಿಯುವ ತಣ್ಣೀರಿನ ನದಿಯಲ್ಲಿ ಬೆಂದ್ರೆತೀರ್ಥವನ್ನು ನಿರ್ಮಿಸಿದ್ದಾರೆ. ಸತ್ತವರನ್ನು ಬದುಕಿಸಿದಾದರೆ. ಕುರುಡನಿಗೆ ಕಣ್ಣುಕೊಟ್ಟಿದ್ದಾರೆ. ಭಗವನ್ವಿಮುಖರಾದ ಸಜ್ಜನರನ್ನು ಭಗಮನ್ಮುಖರನ್ನಾಗಿಸಿದ್ದಾರೆ.

## ವೈರಾಗ್ಯ

'ತಾರ್ಣೇ ವೌಕಸಿ ಪಾರ್ಣೇ ವಾ ತಾಪಸೋ ಭೂಪ! ಸೋऽವಸತ್' ಎಂದು ರಾಜರೇ ಹೇಳಿದಂತೆ ರಾಜರು ತಮ್ಮ ಹೃದಯಾಂಗಣವೆಂಬ ಹರಿಯಂಗಣದಲ್ಲಿ ವಿಹರಿಸುವ ಅರ್ಹತೆಯುಳ್ಳ ಭಾವಿಬ್ರಹ್ಮರು. ಹೀಗಾಗಿ ಬಾಹ್ಯಸಂಪತ್ತು ಇವರಿಗೆ ನಗಣ್ಯ. ಹೀಗಾಗಿ ರಾಜರಿಗಾಗಿ ದೆಹಲಿ ಭಕ್ತನು ಕಳುಹಿಸಿದ ಸಂಪತ್ತನ್ನು ಕಾಶಿಯಲ್ಲಿ ಗಂಗೆಗೆ ಸುರಿಸಿದರು. ಮತ್ತೊಮ್ಮೆ ಕೃಷ್ಣಮಠದ ಪ್ರಾಂಗಣದಲ್ಲಿನ ವಸಂತ ಮಂಟಪದ ಬಳಿ ಸುರಿಸಿ ಅಲ್ಲಿ ನಾಗನನ್ನು ಸ್ಥಾಪಿಸಿದರು. ಅನೇಕರ ದಾರಿದ್ರ್ಯ ಪರಿಹರಿಸಿದರು. ಉಪವಾಸದಲ್ಲಿ ತಪಸ್ಸನ್ನಾಚರಿಸಿದರು. ತೀರ್ಥಯಾತ್ರೆಯನ್ನು ಕಾಲ್ನಡಿಗೆಯಿಂದ ಕೈಗೊಂಡರು.

## ಮಧ್ವರಂತೆ ರಾಜರು

| ಮಧ್ವರು | ರಾಜರು |
|---|---|
| ★ ಪಾಜಕ (ಹರಿಯಿಂದ ನೀರು ಹೊಂದಿದ ಕ್ಷೇತ್ರ) | - ಹೂವಿನಕೆರೆ |
| ★ ೩೨ ಲಕ್ಷಣ | - ೩೨ ಲಕ್ಷಣ |
| ★ ದಶಮೀ (ಹರಿದಿನ ಅವತಾರ) | - ದ್ವಾದಶೀ ಅವತಾರ |
| ★ ವಾಸುದೇವ | - ವರಾಹ |
| ★ ಆನಂದತೀರ್ಥ | - ವಾದಿರಾಜ |
| ★ ಆಚಾರ್ಯರ ಪ್ರತಿಮೆ | - ರಾಜರ ಪ್ರತಿಮೆ (ಸೌಮ್ಯ) |
| ★ ದ್ವಾದಶಸ್ತೋತ್ರದಿಂದ ಜೀವ | - ಲಕ್ಷ್ಮೀಶೋಭಾನೆಯಿಂದ ಜೀವ |

| | |
|---|---|
| ★ ಭವಿಷ್ಯತ್ತಿನ ಜ್ಞಾನ | - ಭವಿಷ್ಯತ್ತಿನಜ್ಞಾನ |
| ★ ಭಾರತಕ್ಕೆ ತಾತ್ಪರ್ಯ ನಿರ್ಣಯ | - ಭಾರತಕ್ಕೆ ಲಕ್ಷಾಲಂಕಾರ |
| ★ ಅನುವ್ಯಾಖ್ಯಾನ | - ಯುಕ್ತಿಮಲ್ಲಿಕಾ |
| ★ ತಮ್ಮನನ್ನು ಹೋತೃಮಾಡಿದರು | - ನಾರಾಯಣಾಚಾರ್ಯರನ್ನು ಹೋತೃಮಾಡಿದರು |
| ★ ತಮ್ಮ - ವಿಷ್ಣುತೀರ್ಥರು | - ತಮ್ಮ - ಸುರೋತ್ತಮ ತೀರ್ಥರು |
| ★ ಪರ್ಯಾಯ ೨ ತಿಂಗಳ ವ್ಯವಸ್ಥೆ | - ೨ ವರ್ಷಗಳ ವ್ಯವಸ್ಥೆ |
| ★ ಕೃಷ್ಣಪ್ರತಿಷ್ಠೆ | - ತ್ರಿವಿಕ್ರಮ ಪ್ರತಿಷ್ಠೆ |
| ★ ದಂಡತೀರ್ಥ | - ದಂಡತೀರ್ಥ |
| ★ ವಿಷಉಂಡಭೀಮ | - ಅಹೋಬಲದಲ್ಲಿ ವಿಷಭೋಜನ |
| ★ ಪರವಾದಿನಿಗ್ರಹ | - ಪರವಾದಿನಿಗ್ರಹ |
| ★ ಅಂಗುಷ್ಠದಲ್ಲಿ ಬೆಳಕು | - ಅಂಗುಷ್ಠದಲ್ಲಿ ತೇಜಸ್ಸು |
| ★ ಗೋವೆಯಲ್ಲಿ ಮಧ್ವರು | - ಕುಂಭಾಸಿಯಲ್ಲಿ ರಾಜರು |
| ★ ಅಷ್ಟಮಠ ನಿರ್ಮಾಣ | - ಸೋದಾಕ್ಷೇತ್ರ ನಿರ್ಮಾಣ |
| ★ ಗೃಹಸ್ಥ, ಸಂನ್ಯಾಸಿ, ದಾಸ ಶಿಷ್ಯರು | - ಗೃಹಸ್ಥ, ಸಂನ್ಯಾಸಿ, ದಾಸಶಿಷ್ಯರು |
| ★ ಅದೃಶ್ಯರಾದರು | - ಅದೃಶ್ಯರಾದರು |
| ★ ಅನುಮಾನತೀರ್ಥ | - ಪ್ರಸಂಗಾಭರಣತೀರ್ಥ |
| ★ ದ್ವಾದಶಸ್ತೋತ್ರ | - ದಶಾವತಾರಸ್ತುತಿ |
| ★ ವೇದವ್ಯಾಸರ ದರ್ಶನ (ಬದರಿ) | - ವ್ಯಾಸದರ್ಶನ (ಪ್ರಯಾಗ) |

## ಪಂಚವೃಂದಾವನೋಪಾಸನ ಕ್ರಮ ಮತ್ತು ಫಲ

ಶ್ರೀಗುರುರಾಜರ ಉಪಾಸನೆಯನ್ನು ಮಾಡಬಯಿಸಿದವರು ಮೊದಲು ಶಾಲ್ಮಲೀ ನದಿಯಲ್ಲಿ ಸ್ನಾನವನ್ನು ಮಾಡಬೇಕು. ಅನಂತರ ಸೋದಾಕ್ಷೇತ್ರಕ್ಕೆ ಬಂದು ಕ್ಷೇತ್ರಪಾಲಕರಾದ ಶ್ರೀಭೂತರಾಜರಿಗೆ ತೆಂಗಿನಕಾಯಿಯನ್ನು ಸಮರ್ಪಿಸಬೇಕು. ಇದು ಇಲ್ಲಿ ವಿಶಿಷ್ಟ ಪದ್ಧತಿಯಾಗಿರುವುದು. ಆಮೇಲೆ ಸಂಕಲ್ಪಪೂರ್ವಕವಾಗಿ ಧವಲಗಂಗೆಯಲ್ಲಿ ಸ್ನಾನಮಾಡಿ, ಶ್ರೀತ್ರಿವಿಕ್ರಮದೇವರ ದರ್ಶನವನ್ನು ಮಾಡಿ, ಪಂಚವೃಂದಾವನದೆದುರಲ್ಲೇ ಸೇವಾಸಂಕಲ್ಪವನ್ನು ಮಾಡಿ, ಅಲ್ಲಿ ಸೇವೆಗಾಗಿ ಮಂತ್ರಿಸಿ ಕೊಡುವ ಫಲ ಸಹಿತ, ಸ್ನಾನಪೂರ್ವಕವಾಗಿ ನೂರೆಂಟು, ಐವತ್ತು ನಾಲ್ಕು ಪ್ರದಕ್ಷಿಣೆ ನಮಸ್ಕಾರಗಳನ್ನು ಪ್ರತಿದಿನ ಮಾಡುತ್ತಾ ಬಂದರೆ ಶ್ರೀಗುರುರಾಜರ ಅನುಗ್ರಹಪಾತ್ರರಾಗುವರು. ಒಂದೊಂದು ಪ್ರದಕ್ಷಿಣೆ ನಮಸ್ಕಾರವಾದ ಮೇಲೆ ಪುನಃ ಧವಲಗಂಗೆಯಲ್ಲಿ ಸ್ನಾನವನ್ನು ಮಾಡತಕ್ಕದ್ದು. ಬಲ್ಲವರಾದ ಗಂಡಸರು ಶ್ರೀವೃಂದಾವನದ ಸಮೀಪದಲ್ಲಿ ಶ್ರೀವಾದಿರಾಜಕವಚ, ಶ್ರೀಸ್ವಾಪ್ನವೃಂದಾವನಾಖ್ಯಾನ, ಸರ್ವಮೂಲ ಮೊದಲಾದ ಗ್ರಂಥಗಳ ಪಾರಾಯಣವನ್ನು ಮಾಡಿ ಶ್ರೀಗುರುವರ್ಯರ ಪರಮಾನುಗ್ರಹ ಪಾತ್ರರಾಗುತ್ತಾರೆ. ಈ ವೃಂದಾವನದ

ಮೃತ್ತಿಕೆಯು ಸರ್ವಾಪತ್ಪರಿಹಾರಕವಾದ ಸಕಲೇಷ್ಟಾರ್ಥಪ್ರದವಾದ ಮಹಾ ಪ್ರಸಾದವಾಗಿರುವುದು.

ಈ ವೃಂದಾವನದ ಸೇವೆ, ಮೃತ್ತಿಕಾ ಧಾರಣ ಲೇಪನ, ಪಾದೋದಕಪಾನ, ಪ್ರಸಾದ ಸ್ವೀಕಾರ ಇವುಗಳಿಂದ ಬಹಳ ಜನರು ತಮ್ಮ ಅಸಾಧ್ಯ ರೋಗಗಳಿಂದಲೂ ರಾಕ್ಷಸ ಪಿಶಾಚಾದಿ ಉಪಹತಿಗಳಿಂದಲೂ ವಿಮುಕ್ತರಾಗಿರುವರು. ಈಗಲೂ ಆಗುತ್ತಿರುವರು. ಈ ಹಿಂದೆ ವರ್ಣಿಸಿರುವಂತೆ ಈ ಪಂಚವೃಂದಾವನಗಳಲ್ಲಿರತಕ್ಕ ದೇವತೆಗಳನ್ನು ಧ್ಯಾನಿಸಿ ಶ್ರೀಗುರುಸಾರ್ವಭೌಮರನ್ನು ಸೇವಿಸುವ ಭಕ್ತರು ದುರ್ಲಭಗಳಾದ ಇಷ್ಟಾರ್ಥಗಳನ್ನು ಹೊಂದಿ ಅತಿಶಯ ಗುರುಭಕ್ತಿಯುಳ್ಳವರಾಗುವರು. ವೃಂದಾವನದ ಮತ್ತು ಶ್ರೀಗುರುರಾಜರ ಮಹಿಮೆಯನ್ನರಿಯಬೇಕಾದವರು ಸ್ವಾಪ್ನವೃಂದಾವನಾಖ್ಯಾನವನ್ನು ಉಪದೇಶಹೊಂದಿ ಭಕ್ತಿಯಿಂದ ಪಾರಾಯಣ ಮಾಡತಕ್ಕದ್ದು. ಅಥವಾ ಅಣುವೃಂದಾವನಾಖ್ಯಾನವನ್ನಾದರೂ ಪಾರಾಯಣ ಮಾಡಬೇಕು.

ಎಷ್ಟೋ ಜನರು ಸ್ವಪ್ನಸೂಚನೆಯಾಗಿ ಶ್ರೀಗುರುರಾಜರ ಅನುಗ್ರಹಪಾತ್ರರಾಗಿರುವರು. ಭಕ್ತಿಯಿಲ್ಲದವರು ಪರೀಕ್ಷೆಗಾಗಿ ಸೇವೆಗೆ ಬಂದು ಬಹಳ ಅನರ್ಥಗಳನ್ನು ಈ ಕಾಲದಲ್ಲಿಯೂ ಹೊಂದುತ್ತಿರುವರು. ಇಲ್ಲಿ ಇನ್ನೊಂದು ವಿಶೇಷವೇನೆಂದರೆ ಧವಲಗಂಗಾಸರೋವರದ ಆಗ್ನೇಯ ಭಾಗವು ಶ್ರೀಭೂತರಾಜರ ಸ್ನಾನಸ್ಥಳವಾದುದರಿಂದ ಯಾರೂ ಆ ಸ್ಥಳದಲ್ಲಿ ಸ್ನಾನಮಾಡುವ ಸಂಪ್ರದಾಯ ಇರುವುದಿಲ್ಲ. ತಿಳಿಯದೆ ಯಾರಾದರೊಮ್ಮೆ ಮಾಡಿದುದಾದರೆ ಒಂದು ಸಲಕ್ಕೆ ಕ್ಷಮೆಯಿರುವುದು. ತಿಳಿದು ಮತ್ತೂ ಅಲ್ಲಿಯೇ ಸ್ನಾನ ಮಾಡತಕ್ಕವರು ಶ್ರೀಭೂತರಾಜರ ಅವಗ್ರಹಪಾತ್ರರು. ಈಗಲೂ ಶಿಕ್ಷೆಗೆ ಒಳಗಾಗುತ್ತಿರುವುದು ಪ್ರತ್ಯಕ್ಷವಾಗಿದೆ.

ಈ ಕ್ಷೇತ್ರದಲ್ಲಿ ಸಾಕ್ಷಾತ್ತಾಗಿ ಶ್ರೀಮದ್ವಾದಿರಾಜಪೂಜ್ಯಚರಣರು ಒಂದು ರೂಪದಿಂದ ಸನ್ನಿಹಿತರಾಗಿದ್ದುಕೊಂಡು ಭಕ್ತರನ್ನನುಗ್ರಹಿಸುತ್ತಿರುವರು. ಅಲ್ಲದೆ, ನಂಬಿದ ಭಕ್ತರು ಎಲ್ಲೆಲ್ಲಿ ಈ ಮಹಾನುಭಾವರನ್ನು ಸ್ಮರಿಸುವರೋ ಅಲ್ಲಿಯೂ ಸನ್ನಿಹಿತರಾಗಿ ಆ ಭಕ್ತರ ಇಚ್ಛೆಯನ್ನು ಪೂರೈಸುತ್ತಿರುವರು. ಶ್ರೀಭೂತರಾಜರೂ ಈ ವೃಂದಾವನದ ಸಮೀಪದಲ್ಲಿ ಸನ್ನಿಹಿತರಾಗಿ ಭಕ್ತರಿಗಾಗಿ ಇಷ್ಟಾರ್ಥವನ್ನು ಕೊಡುವವರು ಮಾತ್ರವಲ್ಲದೆ ನಂಬಿದವರ ಬಳಿಯಲ್ಲಿಯೂ ಸನ್ನಿಹಿತರಾಗಿ ಅವರ ಇಚ್ಛೆಯನ್ನು ಪೂರೈಸುತ್ತಿರುವರೆಂಬುದು ಈಗಲೂ ಪ್ರತ್ಯಕ್ಷಸಿದ್ಧವಾಗಿರುವದು. ಈ ಪೀಠಾಧಿಪತಿಗಳಾದ ಯತಿಗಳೂ ಇವರನ್ನು ನಂಬಿರುವ ಅನೇಕ ಭಕ್ತರೂ ಶ್ರೀವಾದಿರಾಜಗುರುಸಾರ್ವಭೌಮರ ಮತ್ತು ಶ್ರೀಭೂತರಾಜರ ಅನುಗ್ರಹದಿಂದ ಈಗಲೂ ಕವಚಗಳನ್ನು ಪಠಿಸುತ್ತಾ ವೃಂದಾವನದ ಮೃತ್ತಿಕೆಯನ್ನು ಕೊಡುತ್ತಾ ಜನರ ಕಷ್ಟಗಳನ್ನು ಪರಿಹರಿಸಿ ಇಷ್ಟಗಳನ್ನು ಸಾಧಿಸಿಕೊಡುತ್ತಿರುವರು.

## ಯುಕ್ತಿಮಲ್ಲಿಕಾ

ಸರ್ವಜ್ಞಕಲ್ಪರಾದ ರಾಜರು ಯುಕ್ತಿಮಲ್ಲಿಕಾ ಗ್ರಂಥರಚನೆಯಲ್ಲಿ ಉದ್ಯುಕ್ತರಾಗಿ ಮಂಗಳಪದ್ಯವನ್ನು ಬರೆಯಲಾರಂಭಿಸಿದರು. ಮಂಗಳಪದ್ಯವಾದ 'ಭಕ್ತ್ಯಾಸ್ತುತ್ಯಾ......' ಎಂಬ ಪದ್ಯದ ಮೂರನೇ ಪಾದ ಮುಗಿಯುವುದರಲ್ಲಿಯೇ ರಾಜರ ಮನಸ್ಸಿನಲ್ಲಿದ್ದ ವಸ್ತು - ಅಧಿಕಾರಿ - ಫಲ - ಸಂಬಂಧ ಎಲ್ಲದರ ಆಕಾಂಕ್ಷೆಯೂ ಪೂರ್ಣವಾಯಿತು. ಆಕಾಂಕ್ಷೆಯೇ ಮುಗಿದ ಬಳಿಕ ಪುನಃ ಉತ್ಥಾಪ್ಯ ಆಕಾಂಕ್ಷೆಯು ಕಾವ್ಯದೋಷವಿನಿಸಿದೆ. ರಾಜರು ಹಾಗೇ ಧ್ಯಾನಸ್ಥರಾದರು. ಗ್ರಂಥೋದ್ದೇಶದಿಂದ ಮೊದಲೇ ಪ್ರಸನ್ನನಾದ ಹಯವದನನು ಕಾವ್ಯದೋಷಬಾರದಿರುವಂತೆ ನಾಲ್ಕನೇ ಪಾದವನ್ನು ಸ್ವತಃ ತಾನೇ ಮಾಡುವ ಮೂಲಕ ರಾಜರ ಗ್ರಂಥವು ಅಪೌರುಷೇಯವೇದತುಲ್ಯ ಅಥವಾ 'ವೇದಾದಪಿ ಪರಂ' ಎನಿಸಿದ ಮಹಾಭಾರತ ತುಲ್ಯವೆಂದೆನಿಸಿದನು. ಗಮನಿಸಿ - 'ಅಮುತ್ರಪಾತ್ರೇ ನಮಸ್ತೇ' ಎಂದು ಮೂರನೇ ಪಾದದಲ್ಲಿಯೇ ಆಕಾಂಕ್ಷಾ ಪೂರ್ಣವಾಗಿದೆ. 'ತಸ್ಮೈ ಕಸ್ಮೈಚಿದ್ ಅಸ್ಮನ್ಮನಸಿ ಧೃತಕಥಾವಿಸ್ಮೃತೌ ಸ್ಮಾರಕಾಯ' ಎಂಬುದು ಹಯಗ್ರೀವನೇ ಗ್ರಂಥಕ್ಕೆ ಸೇರಿಸಿದ ಪಾದ. ಹಾಗಾಗಿ ಗ್ರಂಥಾರಂಭದಲ್ಲಿಯೇ ಹಯಗ್ರೀವನು ಪ್ರಸನ್ನನಾಗಿದ್ದಾನೆಂದಾದರೆ ಇದು ಸರ್ವಜ್ಞ ರಚಿತ ಗ್ರಂಥವೆಂದೇ ಅಭಿಪ್ರಾಯ. ಇಲ್ಲಿ 'ವಿಸ್ಮೃತೌ ಸ್ಮಾರಕಾಯ' ಎಂಬುದನ್ನು 'ವರಪ್ರದ ಚರಿತ್ರಂ ಜ್ಞಾಪಯ ಮೇ' ಎಂಬಂತೆ ಅರ್ಥೈಸಿಕೊಳ್ಳಬೇಕು.

ಮುಂದೆ ರಾಜರೇ ಗ್ರಂಥದ ಬಗ್ಗೆ ಒಂದು ಮಾತನ್ನು ಹೇಳುತ್ತಾರೆ -

**ವಿದುಷೋಽವಿದುಷೋಽಪೀಷ್ಟಾ ಕಂ ಜನಂ ರಂಜಯೇನ್ನ ಗೀಃ ।**
**ಅಮರೈರ್ಭ್ರಮರೈಶ್ಚಾರ್ಥ್ಯಂ ಕುಸುಮಂ ಕೋಽಸುಮಾಂಸ್ತ್ಯಜೇತ್ ॥**

**(ಗು.ಸೌ. ೩೦)**

ಉತ್ತಮಯುಕ್ತಿಗಳಿಂದ ಕೂಡಿದ ಕಾರಣ ವಿದ್ವಾಂಸರೂ ಇಷ್ಟಪಡುವ, ಅಲಂಕಾರಾದಿ ಕಾವ್ಯರಸಗಳಿಂದ ಕೂಡಿರುವ ಕಾರಣ ಸಾಮಾನ್ಯರಿಗೂ ಇಷ್ಟವಾಗುವ ಗ್ರಂಥವಿದು. ಆದ್ದರಿಂದ ಈ ನನ್ನ ಮಾತು ಯಾರನ್ನು ಇಷ್ಟಪಡಿಸುವುದಿಲ್ಲ? ಎಲ್ಲರಿಗೂ ಇಷ್ಟವಾಗುವಂತಹದು. ದೇವತೆಗಳಿಂದ - ಭ್ರಮರಗಳಿಂದಲೂ ಅಪೇಕ್ಷಿಸಲ್ಪಡುವ ಪುಷ್ಪವನ್ನು ಯಾವ ಮನುಷ್ಯನು ಬಿಟ್ಟಾನು ? ಎಂದು ಅತ್ಯಂತ ವಿಶ್ವಾಸದಿಂದ ಗ್ರಂಥದ ಮಹತ್ವವನ್ನು ತಿಳಿಸಿದ್ದಾರೆ.

ಹೀಗಿದ್ದರೂ ಆಲಸದಿಂದ - ಅಜ್ಞಾನದಿಂದ ಗ್ರಂಥಅಧ್ಯಯನವನ್ನು ಮಾಡುವವರ ಸಂಖ್ಯೆ ವಿರಳ. ವೇದಾಂತ ಪಿಪಾಸುಗಳ ದಾರಿದ್ರ್ಯ ಈ ಭೂಲೋಕದಲ್ಲಿ ಬಹಳವಾಗಿದೆ. ಆದ್ದರಿಂದ ಹರಿ-ಹನುಮಾದಿಗಳು ಅವತರಿಸಿ ಚೈತನ್ಯ ತುಂಬಿ ದಾರಿದ್ರ್ಯರೋಗವನ್ನು ಪರಿಹರಿಸಿದ್ದಾರೆ. ಹಾಗಿದ್ದರೂ ಈ ನಿತ್ಯರೋಗಕ್ಕೆ ಆವಾಗಾವಾಗ ಚಿಕಿತ್ಸೆ ನೀಡುವ ವೇದಾಂತ ವೈದ್ಯರುಗಳು ಅವತರಿಸುತ್ತಿರಬೇಕು. ಹೀಗಿದ್ದಲ್ಲಿ ಗ್ರಂಥಾಧ್ಯಯನ ಶೀಲರಾದ ಸಜ್ಜನರ ವರ್ಗ ಬೆಳೆಯುತ್ತದೆ.

ಆದ್ದರಿಂದ ರಾಜರು ಕಾಲಿಕವಾಗಿ ಇಂತಹ ಗ್ರಂಥಗಳನ್ನು ಅಧ್ಯಯನ ಕ್ರಮಕ್ಕೆ ತರುವ ವೇದಾಂತಿಗಳು ಬೇಕೇ ಬೇಕು; ಅವರಿಂದ ಈ ಗ್ರಂಥ ಬೆಳಗಬೇಕು ಎನ್ನುತ್ತಾರೆ –

**ಅಧುನಾ ವಿಧುನಾ ರುದ್ಧಂ ಮಧುನಾಸೀನ್ಮಧುವ್ರತ ।**
**ಉದಿತೇ ಮುದಿತೇಽಬ್ಜೇಸ್ಯಾದದಿತೇರ್ವಿದಿತೇ ಸುತೇ ॥**

**(ಗು.ಸೌ. ೨೬)**

ರಾತ್ರಿಕಾಲದಲ್ಲಿ ಚಂದ್ರೋದಯವಾದಾಗ ಅದರಿಂದಾಗಿ ಕಮಲವು ಮುಚ್ಚಲ್ಪಟ್ಟು ಭ್ರಮರಗಳಿಗೆ ಪುಷ್ಪರಸವು ಸಿಗದಿದ್ದರೂ, ಮರುದಿವಸ ಅದಿತಿಪುತ್ರನಾದ ಸೂರ್ಯನ ಉದಯವಾದೊಡನೆ ಕಮಲವು ಅರಳುತ್ತಿರಲು ಪುಷ್ಪರಸಕ್ಕೆ ಹೇಗೆ ಕೊರತೆಯಿಲ್ಲವೋ, ಅಂತೆಯೇ ಪ್ರಕೃತ. ಮಾತ್ಸರ್ಯಾದಿಗಳಿಂದ ಕೂಡಿದ ಕೆಲವು ಪಂಡಿತರಿಂದ ದೂಷಿಸಲ್ಪಟ್ಟು ಈ ಗ್ರಂಥದ ರಸವು ಭ್ರಮರದಂತಿರತಕ್ಕ ರಸಿಕಜನರಿಗೆ ಆಸ್ವಾದಿಸಲಿಕ್ಕೆ ಸಿಗದಿದ್ದರೂ ನಿರ್ಮತ್ಸರಾದ ಯೋಗ್ಯಪಂಡಿತರು ಕಾಲಾಂತರದಲ್ಲಿ ಈ ಗ್ರಂಥವನ್ನು ಪ್ರಚಾರಪಡಿಸಿ, ಎಲ್ಲಾ ಜನರಿಗೂ ಈ ಗ್ರಂಥದ ರಸವು ಸಿಗುವಂತೆ ಮಾಡಿಯಾರು ?! ಎಂದಿದ್ದಾರೆ.

ರಾಜರ ಈ ಮಾತಿನಂತೆ ರಾಜರ ಈ ಗ್ರಂಥವು ಸಕಲ ಮಾಧ್ವಬಂಧುಗಳಿಗೆ ಪರಿಚಯವಾಗಬೇಕೆಂಬ ಹಂಬಲದಿಂದ ಗ್ರಂಥಪ್ರಕಾಶನ ಪ್ರಚಾರಕ್ಕೆ ಮುಂದೆ ನಿಂತ ಮಹಾನುಭಾವರು ಪರಮಪೂಜ್ಯ ಶ್ರೀಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು. ಇವರು ವಿಗತಶ್ವರು. ವಿ + ಶ್ವ ಎಲ್ಲ ಕೆಲಸಗಳಿಗೂ ನಾಳೆ ಎನ್ನದೇ ಇಂದೇ ಆಗಲಿ ಎನ್ನುವ ವ್ಯಕ್ತಿತ್ವ ಇವರದ್ದು. ಶ್ರೀ ವಿಶ್ವೋತ್ತಮತೀರ್ಥಶ್ರೀಪಾದರ ಪೂರ್ಣಾನುಗ್ರಹ ಪಾತ್ರರಾದ ಇವರು ದೃಢಸಂಕಲ್ಪ ಉಳ್ಳವರು. ರಾಜರಿಗೆ ರಾಜರ ಗ್ರಂಥಕ್ಕೆ ಧಕ್ಕೆಯಾಗದಂತೆ ಅನುವಾದ ಮಾಡುವ ಹತ್ತಾರು ಮಂದಿ ವಿದ್ವಾಂಸರನ್ನು ಕಲೆಹಾಕಿ ವಿಮರ್ಶಾತ್ಮಕ ಲೇಖನಗಳನ್ನು ಬರೆಸಿ ಸಂಭಾವನೆ – ಸಮ್ಮಾನಗಳಿಂದ ಹರಸಿ ಅಪೂರ್ವಗ್ರಂಥಸಂಪುಟಗಳನ್ನು ಆಧ್ಯಾತ್ಮಬಂಧುವಲಯಕ್ಕೆ ನೀಡುತ್ತಿದ್ದಾರೆ. ಅಧುನಾಪೀಠದಲ್ಲಿ ವಿರಾಜಮಾನರಾದ ಶ್ರೀವಿಶ್ವವಲ್ಲಭಶ್ರೀಪಾದರನ್ನು ಕಂಡೇ ರಾಜರು 'ಉದಿತೇ ಮುದಿತೇಽಬ್ಜೇಸ್ಯಾತ್' ಎಂದು ಉದ್ಗರಿಸಿದ್ದಾರೆಂದರೆ ಸುಳ್ಳಾಗದು. ೨೧ರ ಎಳವೆಯಲ್ಲಿಯೇ ಧೀರೋದಾತ್ತನಾಯಕನ ಎಲ್ಲಾ ಲಕ್ಷಣಗಳನ್ನು ಹೊಂದಿದವರು ಇವರು. ಪೀಠಾಧಿಪತಿಗಳಾಗಿ ಏನೆಲ್ಲ ಸಾಧಿಸಬೇಕೆಂಬುದಕ್ಕೆ ಮಾರ್ಗದರ್ಶನ ಮಾಡುವ ಯತಿಗಳಾಗಿ ಬೆಳೆಯುತ್ತಿದ್ದಾರೆ. ಕಿರುವಯಸ್ಸಿನಲ್ಲಿಯೇ ಲೌಕಿಕ – ವೈದಿಕಮಾರ್ಗಗಳ ಮುನ್ನಡೆಗೆ ಬೇಕಾದ ಶಿಕ್ಷಣಸಂಸ್ಥೆಗಳನ್ನು ಕಟ್ಟಿ ಬೆಳೆಸುತ್ತಿದ್ದಾರೆ. ವೈದಿಕ – ತಾಂತ್ರಿಕ – ಗ್ರಾಂಥಿಕವಾಗಿ ಸಮಾಜವನ್ನು ಬೆಳಗುತ್ತಿರುವ ಇವರು ತ್ರಿವಿಕ್ರಮನಂತೆ ಎಂದು ಪರ್ಯಾಯದ ದರ್ಬಾರಿನಲ್ಲಿ ಶ್ರೀಶ್ರೀವಿಶ್ವೇಶತೀರ್ಥರು ಹಾರ್ದಿಕವಾಗಿ ಉದ್ಗರಿಸಿದ್ದಾರೆಂದರೆ ನಾವೇನು ಹೇಳೋಣ?

ಸುಮಾರು ೬೦ ಮಂದಿ ವಿದ್ವಾಂಸರ ಪಡೆಯ ಸತತ ಪರಿಶ್ರಮದ ಫಲವಾಗಿ ಯುಕ್ತಿಮಲ್ಲಿಕಾ ಗ್ರಂಥಕುಸುಮವು ನಿಮ್ಮ ಕೈಗೆ ಸೇರುತ್ತಿದೆ. ಎಲ್ಲ ವಿದ್ವಾಂಸರೂ ಗುರುಗಳ ಆಶೀರ್ವಾದ ಬಲದಿಂದ ಲೇಖನ ಬರೆದಿದ್ದಾರೆ. ಗುರುಗಳು–ರಾಜರು– ಮಧ್ವರ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಈ ಗ್ರಂಥಕ್ಕೆ ಸುಂದರವಾದ ವ್ಯಾಖ್ಯಾನವನ್ನು ಭಂಡಾರಕೇರಿಮಠದ ವಿಭೂತಿ ಪುರುಷರೆಂದೇ ಖ್ಯಾತರಾದ ರಾಜರ ಸಹೋದರರಾದ ಶ್ರೀಶ್ರೀ ಸುರೋತ್ತಮತೀರ್ಥರು ಭಾವವಿಲಾಸಿನೀ ಎಂಬ ಸುಂದರವಾದ ವ್ಯಾಖ್ಯಾನವನ್ನು ಬರೆದು ಅನುಗ್ರಹಿಸಿದ್ದಾರೆ. ಬಹುತೇಕ ಅವರ ವ್ಯಾಖ್ಯಾನದ ಅನುಗ್ರಹವಿಲ್ಲದೆ ರಾಜರ ಮಾತಿನ ಮರ್ಮವನ್ನು ಅರಿಯುವುದು ಕಷ್ಟ. ಆದರೆ ಸುರೋತ್ತಮಯೋಗಿಗಳ ವ್ಯಾಖ್ಯಾನವೂ ಬಲುಕಠಿಣವಾಗಿದೆ ಎಂದು ಇಂದಿನ ವಿದ್ವಾಂಸರ ಅಂಬೋಣ. ಏನೇ ಹೇಳಿ ಇದೊಂದು ಅತ್ಯಂತ ಕಠಿಣ ಪರಿಶ್ರಮದಿಂದ ಸಿದ್ಧವಾದ ಅನುವಾದ ಕೃತಿ. ಇಲ್ಲಿ ಗುರುಕರುಣೆ ಗುರುಗಳ ಔದಾರ್ಯಗಳಿಲ್ಲದೆ ಗುರಿಯನ್ನು ಮುಟ್ಟಲು ಸಾಧ್ಯವೇ ಇಲ್ಲ. ಗುರಿಮುಟ್ಟಿದ್ದೇವೆಂದರೆ ಗುರುಗಳ ಕರುಣೆಗೆ ನಾವೆಲ್ಲರೂ ಪಾತ್ರರಾಗಿದ್ದೇವೆಂದೇ ಅರ್ಥ.

ನಾಡಿನ ಪ್ರಸಿದ್ಧ ವಿದ್ವಾಂಸರು ಅತ್ಯಂತ ಶ್ರದ್ಧೆವಹಿಸಿ ಲೇಖನಗಳನ್ನು ಬರೆದಿದ್ದಾರೆ. ಆದರೆ ಎಷ್ಟೋ ಕಡೆ ವ್ಯಾಖ್ಯಾನ ಅಸಂಬದ್ಧವಾಗಿ ಮುದ್ರಿತವಾಗಿದೆ. ಹೀಗಾಗಿ ಮೂಲಪ್ರತಿಶೋಧನೆಯನ್ನು ನಡೆಸಿದೆವು. ಶ್ರೀವಾದಿರಾಜಮಠದ ಹಸ್ತಪ್ರತಿಗಳನ್ನು ಪರಿಶೀಲಿಸಿದಾಗ ಕೆಲವು ಕಡೆ ಮೂಲಶ್ಲೋಕಗಳೇ ಹಾರಿ ಹೋದ ಪ್ರಸಂಗವನ್ನು ಇಂದಿನ ಮುದ್ರಿತಪುಸ್ತಕದಲ್ಲಿ ನೋಡಿದೆವು. ನಂತರ ಗಮನಹರಿಸಿ ಸಮಗ್ರ ಪ್ರತಿಶೋಧಿಸಿದಾಗ ನೂರಾರು ತಪ್ಪುಗಳನ್ನು ಸರಿಪಡಿಸುವಲ್ಲಿ ಯಶಸ್ವಿಯಾಗಿದ್ದೇವೆ. ಪ್ರಕ್ಷಿಪ್ತಭಾಗಗಳನ್ನು ಗ್ರಂಥದಲ್ಲಿ ಅಲ್ಲಲ್ಲಿ ಕಂಸಲ್ಲಿ( )ತೋರಿಸಿದ್ದೇವೆ. ಲುಪ್ತಭಾಗಗಳನ್ನು ಸೇರಿಸಿದ್ದೇವೆ.

ಶ್ರೀಶ್ರೀ ವಿಶ್ವವಲ್ಲಭರು ತಮ್ಮ ಪರ್ಯಾಯದ ಪ್ರಸಂಗದಲ್ಲಿ ಬ್ರಹ್ಮರಥನವೀಕರಣ ಯೋಜನೆಗೆ ಸಂಕಲ್ಪಮಾಡಿದರು. ಬ್ರಹ್ಮರಥವನ್ನು ಬಿಚ್ಚಿದಾಗ ಹೊರಗೆ ಚೆಂದವಾಗಿ ಕಾಣುತ್ತಿದ್ದ ಬ್ರಹ್ಮರಥ ಒಳಗೆ ಸವೆದು ಹೋಗಿತ್ತು. ಯೋಜನಾಸಂಕಲ್ಪ ಸಾರ್ಥಕವೆನಿಸಿತು. ಇದರಂತೆ ಯುಕ್ತಿಮಲ್ಲಿಕೆಯು ಅನೇಕಬಾರಿ ಮುದ್ರಿತವಾಗಿ ಗ್ರಂಥವೈಭವದಿಂದ ಕಂಗೊಳಿಸುತ್ತಿದ್ದರೂ ಅದರ ಮೂಲಶೋಧನೆಯಲ್ಲಿದ್ದ ಲೋಪ-ದೋಷಗಳನ್ನು ಅಲ್ಲಗಳೆಯುವಂತಿಲ್ಲ. ಬ್ರಹ್ಮರಥವನ್ನು ಒಳಗಿನಿಂದಲೂ ಸುಂದರಗೊಳಿಸಿದ ಕೀರ್ತಿ ಶ್ರೀಪಾದರದ್ದು. ಹಾಗೆಯೇ ಯುಕ್ತಿಮಲ್ಲಿಕೆಯ ಮೂಲಪಾಠಶೋಧನೆಯನ್ನು ಮಾಡಿಸಿ ಅನುವಾದ ಮಾಡಿಸಿದ ಕೀರ್ತಿ ಶ್ರೀ ವಿಶ್ವವಲ್ಲಭಶ್ರೀಪಾದರದ್ದು.

—0—

# ಶ್ರೀಸುರೋತ್ತಮತೀರ್ಥರು

ಹೂವಿನಕೆರೆ ಎಂಬ ಪ್ರಶಾಂತ ಪ್ರದೇಶದಲ್ಲಿ ಮಹಾಪಂಡಿತರಾದ, ನಿತ್ಯ, ನೈಮಿತ್ತಿಕ ಕರ್ಮಾನುಷ್ಠಾನ ಚತುರರಾದ, ಯಾವಾಗಲೂ ವ್ರತೋಪಾಸಾದಿಗಳನ್ನು ಮಾಡುತ್ತಿರುವ ಶ್ರೀಹರಿಪ್ರೀತಿಪಾತ್ರರಾದ, ಸಾಮಶಾಖೆಯ ತೌಲವಕುಲಭೂಷಣರಾದ ರಾಮಾಚಾರ್ಯರೆಂಬ ಬ್ರಾಹ್ಮಣೋತ್ತಮರು ವಾಸಿಸುತ್ತಿದ್ದರು. ಇವರಿಗೆ ಯೋಗ್ಯ ಕಾಲದಲ್ಲಿ 'ಸರಸ್ವತಿ'ಯೆಂಬ ಕನ್ಯೆಯ ವಿವಾಹವಾಯಿತು. ಈ ಬ್ರಾಹ್ಮಣೋತ್ತಮರು ತನಗೆ ವಿವಾಹವಾದಂದಿನಿಂದ, ತನ್ನ ಪತ್ನಿಯಿಂದ ಕೂಡಿಕೊಂಡು ಗೃಹಸ್ಥಾಶ್ರಮೋಚಿತ ಸತ್ಕರ್ಮಾನುಷ್ಠಾನವನ್ನು ಮಾಡುತ್ತಾ, ವ್ರತನಿಷ್ಠರಾಗಿ ಪರಮಪಾವನ ಶರೀರಾಂತಃಕರಣರಾಗಿರುತ್ತಿದ್ದರು. ಆ ಊರಲ್ಲಿ ದೊಡ್ಡವರ ಹೆಸರನ್ನು ಹಿಡಿದು ವ್ಯವಹರಿಸುವ ಪದ್ಧತಿಯಿಲ್ಲದ ಕಾರಣದಿಂದ ಈ ರಾಮಾಚಾರ್ಯರನ್ನು 'ದೇವಭಟ್ಟ' ರೆಂದೂ, ಪತ್ನಿಯನ್ನು 'ಗೌರೀ' ದೇವಿಯೆಂದೂ ವ್ಯವಹರಿಸುತ್ತಲಿದ್ದರೆಂದೂ ಊಹಿಸಲು ಬರುತ್ತದೆ. ಅಥವಾ ದೇವರಪ್ರತಿಮೆಯಂತೆ ಯಾವ ತಂಟೆಗೂ ಹೋಗದೆ ಪರಮಯೋಗ್ಯರಾದವರನ್ನು ದೇವಭಟ್ಟರೆಂಬ ಅನ್ವರ್ಥಶಬ್ದದಿಂದಲೂ, ಇವರ ಪತ್ನಿಯನ್ನು ಗಂಡನ ಮನೆಯಲ್ಲಿಟ್ಟಿರುವ ಹೆಸರಿನಿಂದ 'ಗೌರೀದೇವಿ'ಯೆಂದೂ ಕರೆಯುತ್ತಲಿದ್ದರು. ಇತರ ಸಮಯಗಳಲ್ಲಿ ಪುರಾಣ ಮೊದಲಾದ ವಿಹಿತ ಸತ್ಕರ್ಮಗಳನ್ನಾಚರಿಸಿಕೊಂಡು ಇತರ ಸಮಯಗಳಲ್ಲಿ ಪುರಾಣ ಮೊದಲಾದ ಗ್ರಂಥಗಳನ್ನು ವಿಮರ್ಶಿಸುತ್ತಾ ತತ್ವದ ತಿರುಳನ್ನರಿತು ಪರಮ ವಿರಕ್ತಶಿಖಾಮಣಿಗಳಾಗಿರುತ್ತಿದ್ದರು. ಪತಿವ್ರತೆಯಾದ ಇವರ ಪತ್ನಿಯೂ ಸರ್ವದಾ ತನ್ನ ಪತಿಯ ಮನವನ್ನು ಒಲಿಸುತ್ತಾ ಪತಿಗನುಕೂಲಳಾಗಿ ಪರಮ ಪತಿವ್ರತೆಯೆಂದು ಜನಾದರಣೀಯಳಾಗಿರುತ್ತಿದ್ದಳು.

ಇವರಿಗೆ ಅಹಂಕಾರಕ್ಕೆ ಕಾರಣವಾದ ಹೇರಳ ಸಂಪತ್ತಿದ್ದಿಲ್ಲ. ಆದರೂ ಶ್ರೀಹರೀಚ್ಛೆಯಿಂದ ತನ್ನಧೀನಗಳಾದ ಗದ್ದೆಗಳಿಂದುತ್ಪನ್ನವಾಗುವ, ಒಕ್ಕಲುಗಳು ಸತ್ಯದಿಂದ ತಂದೊಪ್ಪಿಸುವ, ಕಾಳು, ಬೇಳೆಗಳಿಂದ ತನ್ನ ನಿತ್ಯದ ಪಂಚಯಜ್ಞ ಅತಿಥಿಪೂಜೆ ಮೊದಲಾದವುಗಳನ್ನು ಮಾಡಿಕೊಂಡು ನಿತ್ಯತೃಪ್ತರಾಗಿ ಸಂತುಷ್ಟಾಂತರಂಗರಾಗಿರುತ್ತಿದ್ದರು. ಹೀಗಿರುವ ಈ ದಂಪತಿಗಳಿಗೆ, ಶ್ರೀಮನ್ಮಧ್ವಾಚಾರ್ಯರ ತಂದೆ ತಾಯಿಯರೆನಿಸಿದ ಮಧ್ಯಗೇಹ ದಂಪತಿಗಳಿಗೆ ಪ್ರಥಮತಃ ಕನ್ಯಾಸಂತತಿಯಾದಂತೆ, ದಿವ್ಯವಾದೊಂದು ಕನ್ಯಾ ಸಂತಾನವಾಯಿತು. ನಂತರ ಸೋದೆಮಠದ ಭೂವರಾಹನ ಸೇವೆ ಶ್ರೀವಾಗೀಶತೀರ್ಥರ ದಯೆಯಿಂದ ಋಜುಪುಂಗವರಾದ ವರಾಹನ ಜನ್ಮವಾಯಿತು–

ಅನಂತರ ಸ್ವಲ್ಪ ದಿವಸಗಳಲ್ಲಿಯೇ ಶ್ರೀರಾಮಾಚಾರ್ಯರ ಪತ್ನಿಯು ಪುನಃ ಗರ್ಭವತಿಯಾದಳು. ಕ್ರಮವಾಗಿ ಹತ್ತನೇ ತಿಂಗಳಲ್ಲಿ ಆ ದಂಪತಿಗಳಿಗೆ ಈ ಗರ್ಭದಿಂದ, ಶ್ರೀವಾದಿರಾಜಗುರುಸಾರ್ವಭೌಮರಿಗೆ ತಮ್ಮನಾಗಿ ಬಾಳಲು ಅರ್ಹತೆಯುಳ್ಳ ಇನ್ನೊಬ್ಬ ಕುಮಾರನು ಜನಿಸಿದನು, ಇಂತಹ ಬಾಲಕನ ಜನನವಾಗಲು ಆ ತಾಯಿ ತಂದೆಗಳು, ಶ್ರೀವಾಗೀಶಮುನಿಗಳ ಕೃಪೆಯಿಂದ ಜನಿಸಿದ ಈ ಬಾಲಕನನ್ನು ಆದರದಿಂದ ರಕ್ಷಿಸತೊಡಗಿದರು.

ಶ್ರೀಗುರುಸಾರ್ವಭೌಮರ ತಂದೆತಾಯಂದಿರಾದ ರಾಮಾಚಾರ್ಯರೂ ಸರಸ್ವತೀ ಅಮ್ಮನೂ ತಾವು ಮಾಡಬೇಕಾದ ಮಗಳ ಮದುವೆಯನ್ನು, ಮಗನ ಉಪನಯನವನ್ನು ಮಾಡಿ ಕೆಲವು ಕಾಲದವರೆಗೆ ಸದ್ಧರ್ಮ ಸದಾಚಾರಪರರಾಗಿದ್ದುಕೊಂಡು ವೃದ್ಧರಾಗಿ ತಮ್ಮ ಪಾಂಚಭೌತಿಕ ಶರೀರವನ್ನು ಪರಿತ್ಯಜಿಸಿ ಮಕ್ಕಳಾದ ಶ್ರೀಮದ್ವಾದಿರಾಜ ಗುರುಸಾರ್ವಭೌಮರ ಮಹಿಮಾತಿಶಯದಿಂದಲೂ ತಾವಾಚರಿಸುತ್ತಿದ್ದ ಸದ್ಧರ್ಮಾಚರಣ ಸದಾಚಾರಗಳ ಪುಣ್ಯಾತಿಶಯದಿಂದಲೂ ಶ್ರೀಹರಿಚರಣ ಸನ್ನಿಧಾನವನ್ನು ಸೇರಿದರು. ಇನ್ನು ಮುಂದೆ ಸುರೋತ್ತಮತೀರ್ಥರಾಗತಕ್ಕ ಶ್ರೀಗುರುಸಾರ್ವಭೌಮರ ತಮ್ಮಂದಿರು (ಪೂರ್ವಾಶ್ರಮದ ಹೆಸರು ನಾರಾಯಣ) ತಾಯಿತಂದೆಗಳ ಅಂತ್ಯಕ್ರಿಯೆಯನ್ನು ಸಾಂಗೋಪಾಂಗವಾಗಿ ಮಾಡಿ ಶ್ರೀಮನ್ಮಧ್ವಾಚಾರ್ಯರ ತಮ್ಮನಂತೆ ಪರಮವಿರಕ್ತರಾಗಿ ಶ್ರೀಗುರುಸಾರ್ವಭೌಮರ ಸನ್ನಿಧಾನದಲ್ಲಿ ವಾಸಿಸತೊಡಗಿದರು. (ಶ್ರೀರಾಜರ ಆಶ್ರಮಕ್ಕಿಂತ ಪೂರ್ವದಲ್ಲಿ ಶ್ರೀರಾಮಾಚಾರ್ಯ ದಂಪತಿಗಳಿಗೆ ಇನ್ನೊಬ್ಬ ಸತ್ಪುತ್ರ ಹುಟ್ಟಿದ್ದು (ವಾ.ಗು.ಚ. ೧೧.೮) ಅವರೇ ಮುಂದೆ ಶ್ರೀಸುರೋತ್ತಮತೀರ್ಥರೆಂದು ಪ್ರಖ್ಯಾತರಾದರು. ಶ್ರೀವಾದಿರಾಜರ ಆಶ್ರಮಸ್ವೀಕಾರ ೧೪೮೮ ಅಥವಾ ೧೪೮೯ ಎಂಬುದಾಗಿ ತಿಳಿಯಲಾಗಿದೆ. ಇದಕ್ಕೂ ಪೂರ್ವದಲ್ಲಿ ಎರಡನೆಯ ಸತ್ಪುತ್ರನ ಜನನ ಆಂದಮೇಲೆ ಶ್ರೀಸುರೋತ್ತಮತೀರ್ಥರ ಜನನ ೧೪೮೭ರ ಸುಮಾರಿಗೆ ಎಂದು ನಿರ್ಧಾರವಾಗುವುದು. ಶ್ರೀರಾಜರ ಮಾತಾಪಿತೃರು ದೈವಾಧೀನರಾದದ್ದು, ಸುಮಾರು ೧೫೧೦ಕ್ಕೆಂದು ತಿಳಿದುಬರುತ್ತದೆ).

ಶ್ರೀಗುರುಸಾರ್ವಭೌಮರೊಮ್ಮೆ ತಮ್ಮ ಪೂರ್ವಾಶ್ರಮದ ಬಂಧು ಮತ್ತು ಇತರ ಪರಿವಾರದಿಂದ ಕೂಡಿಕೊಂಡು ಸಂಚರಿಸುತ್ತಾ ಆರಣಿ ಎಂಬಲ್ಲಿಗೆ ಬಂದರು. ಅಲ್ಲಿ ಒಬ್ಬ ರಾಜನು ಆ ಪ್ರಾಂತ್ಯಗಳನ್ನೆಲ್ಲಾ ಆಳುತ್ತಾ ಸಾಧು ಸಜ್ಜನಮಾನ್ಯನಾಗಿ ಬಹು ಶ್ರದ್ಧಾಭಕ್ತಿಯುಳ್ಳವನಾಗಿದ್ದನು. ಈ ರಾಜನು ತಮ್ಮ ಪ್ರಾಂತ್ಯಕ್ಕೆ ಬಂದಿರುವ ಶ್ರೀಗುರುರಾಜರ ಮಹಿಮೆಯನ್ನು ಕೇಳಿ ಅವರಿಗೆ ಬೇಕಾದ ಉಪಚಾರಗಳನ್ನು ಮಾಡಿಸತೊಡಗಿದನು. ಆಗ ಶ್ರೀಗುರುಸಾರ್ವಭೌಮರು, ಈ ಹಿಂದೆ ಶ್ರೀಮನ್ಮಧ್ವಾಚಾರ್ಯರು ತಮ್ಮ ತಮ್ಮನನ್ನು

ಹೋತೃವನ್ನಾಗಿ ಮಾಡಿ ಉಪಾಧ್ಯಾಯ ಪುತ್ರನಿಂದ ಯಾಗವನ್ನು ಮಾಡಿಸಿದಂತೆ. ತಮ್ಮ ಪೂರ್ವಾಶ್ರಮದ ತಮ್ಮನನ್ನು ಹೋತೃವನ್ನಾಗಿ ಮಾಡಿ, ಆ ಅರಣಿಯೆಂಬಲ್ಲಿ, ತನ್ನೆದುರಲ್ಲೆ ಯಾಗವನ್ನು ಮಾಡಿಸಬೇಕೆಂದು ಸಂಕಲ್ಪಿಸಿ ಅಲ್ಲಿ ಯಾಗವು ಆರಂಭವಾಯಿತು. ಮಹಾತ್ಮರು ತನ್ನ ದೇಶದಲ್ಲಿ ಮಾಡಿಸುವ ಯಾಗದಿಂದ ತನ್ನ ಮತ್ತು ದೇಶದ ಕಲ್ಯಾಣವಾಗುವದೆಂದರಿತು ಸಂತಸಗೊಂಡು ಆ ದೇಶದ ರಾಜನು ಶ್ರೀಗುರುಸಾರ್ವಭೌಮರ ದೇವರಿಗಾಗಿ ಅತ್ಯುತ್ತಮವಾದ ಬಹಳ ಬೆಲೆಯ ಮುತ್ತಿನಹಾರವನ್ನು ಕಾಣಿಕೆಯಾಗಿ ಅರ್ಪಿಸಿದನು. ಆ ಯಜ್ಞಕಾಲದಲ್ಲಿ ಅರ್ಪಿಸಿರುವ ಈ ಹಾರವನ್ನು ಶ್ರೀಗುರುಸಾರ್ವಭೌಮರು ತೆಗೆದುಕೊಂಡು ಹೋತೃವಾಗಿ ಹೋಮಿಸುತ್ತಿರುವ ತಮ್ಮ ತಮ್ಮನ ಕೈಯಲ್ಲಿ ಕೊಟ್ಟರು. ಗುರುಗಳ ಅಭಿಪ್ರಾಯವನ್ನರಿತ ಹೋತೃವು ವಿಚಾರಮಾಡದೆ ಆ ಮುತ್ತಿನಹಾರವನ್ನು ಅಗ್ನಿಯಲ್ಲಿ ಹೋಮಿಸಿಯೇ ಬಿಟ್ಟನು. ವಿಚಾರವನ್ನು ಕಣ್ಣಾರೆಕಂಡ ರಾಜನು 'ನಾನು ಗುರುಗಳಿಗೆ ಅರ್ಪಿಸಿದ ಹಾರವು ಅತ್ಯಲ್ಪವಾದುದೆಂದು ಶ್ರೀಗುರುರಾಜರು ಹೋಮಿಸುವಂತೆ ಮಾಡಿದರು. ನಾನೀ ಮಹಾನುಭಾವರಿಗೆ ಅಂತಹ ಅಲ್ಪ ಕಾಣಿಕೆಯನ್ನರ್ಪಿಸಿದುದು ನನ್ನ ಯೋಗ್ಯತೆಗೆ ಸರಿಯಾಗಿಲ್ಲ. ನಾನೀ ವಿಷಯದಲ್ಲಿ ತಪ್ಪನ್ನು ಮಾಡಿದೆನು. ಈಗೇನು ಮಾಡಲಿ?' ಎಂದು ಪಶ್ಚಾತ್ತಾಪಪಡುತ್ತಿದ್ದನು.

ಅನಂತರ ಯಜ್ಞದ ಪೂರ್ಣಾಹುತಿಯಾಗುವ ದಿನ ಶ್ರೀಗುರುಸಾರ್ವಭೌಮರು ರಾಜನನ್ನು ಕರೆದಿದ್ದರು. ಅಂದು ಆ ರಾಜನು ಸಪರಿವಾರನಾಗಿ ಬಹಳ ಭಕ್ತಿಯಿಂದ ಆ ಯಜ್ಞವು ನಡೆಯುತ್ತಿರುವ ಸ್ಥಳದಲ್ಲಿರುವ ಶ್ರೀಗುರುರಾಜರ ಸನ್ನಿಧಿಗೆ ಬಂದು ಸೇರಿದನು. ಆಗ ಆ ಊರ ಜನರೆಲ್ಲರೂ ಕಿಕ್ಕಿರಿದು ನೆರೆದಿದ್ದರು. ಹೀಗೆ ದೊಡ್ಡ ಸಭೆಯಾಗಿದ್ದಿತು. ಆ ಸಭೆಯ ಮಧ್ಯದಲ್ಲಿರುವ ಯಜ್ಞಕುಂಡದ ಸಮೀಪದಲ್ಲಿ ಗುರುವರ್ಯರಿಗೂ ರಾಜನಿಗೂ ಆಸನಗಳನ್ನು ಹಾಕಿದ್ದರು. ಪೂರ್ಣಾಹುತಿಯಾಗುವಾಗ ಆ ಅರಣಿಯ ರಾಜನು ಬಹಳ ಭಕ್ತಿಶ್ರದ್ಧೆಯಿಂದ ಅಂಜಲಿಬದ್ಧನಾಗಿ ಕುಳಿತಿದ್ದನು. ಆಗ ಎಂದೋ ಹೋಮಿಸಿದ್ದ ಮುತ್ತಿನಹಾರವು ಯಜ್ಞಕುಂಡದಿಂದ ತಾನಾಗಿ ಹಾರಿ ಆ ರಾಜನ ಅಂಜಲಿಯೊಲಗೆ ಬಿದ್ದು ಬಿಟ್ಟಿತು; ಆಗ ಆ ರಾಜನು ಆಶ್ಚರ್ಯಚಕಿತನಾಗಿ ತನ್ನ ಕೈಯೊಳಗೆ ಬಿದ್ದಿರುವ ವಸ್ತುವನ್ನು ಪರೀಕ್ಷಿಸಿದಾಗ, ತಾನು ಈ ಹಿಂದೆ ಗುರುಗಳಿಗರ್ಪಿಸಿದ್ದ ಹಾರವೇ ಆಗಿದ್ದಿತು. ಇದನ್ನು ಕಂಡ ರಾಜನು ಶ್ರೀಗುರುರಾಜರ ಮುಖವನ್ನೇ ನೋಡುತ್ತಾ ಈ ಮಹಾನುಭಾವರ ಮಹಿಮಾತಿಶಯಕ್ಕೆ ಬೆರಗಾಗಿ ತನ್ನ ಮನಸ್ಸಿನ ಪಶ್ಚಾತ್ತಾಪವನ್ನು ತೋರೆದು ಪುನಃ ಆ ಹಾರವನ್ನು ಗುರುಗಳ ಸನ್ನಿಧಾನದಲ್ಲಿ ಅರ್ಪಿಸಿ ಬಾಷ್ಪಪೂರ್ಣಾಕ್ಷನಾದನು. ಶ್ರೀಗುರುಸಾರ್ವಭೌಮರು ಆ ಹಾರವನ್ನು ಪುನಃ ಆ ಅಗ್ನಿಯಲ್ಲೇ ಅದನ್ನು ಹೋಮಿಸಿಯೇ ಬಿಟ್ಟರು. ಆಗ ರಾಜನು ವೈರಾಗ್ಯನಿಧಿಗಳಾದ ಇವರ ಮಹಿಮೆಗಳನ್ನು ಬಹಳವಾಗಿ ಕೊಂಡಾಡಿದನು. ಜನರೆಲ್ಲರೂ ಜಯಕಾರವನ್ನು ಮಾಡಿದರು. ಅನಂತರ ಈ ಯಜ್ಞದ ಸಮಾಪ್ತಿಯಾಗಿ ಅವಭೃತವಾಯಿತು.

ಶ್ರೀಗುರುಸಾರ್ವಭೌಮರು ಈ ತರದ ಮಹಿಮೆಯಿಂದ ಜನರ ಮನಸ್ಸಿನಲ್ಲಿ 'ಇವರು ಸಾಮಾನ್ಯರಲ್ಲ; ಲೋಕೋದ್ಧಾರಕ್ಕಾಗಿ ದೊಡ್ಡ ದೇವಾಂಶರೇ ಭೂಮಿಯಲ್ಲಿ ಅವತರಿಸಿರುವರು' ಎಂಬ ಭಾವನೆಯನ್ನು ತುಂಬಿಸಿದರು. ಮತ್ತು ಶ್ರೀಸರ್ವಜ್ಞಾ-ಚಾರ್ಯರಂತೆ ತಮ್ಮನ್ನೇ ಹೋತೃವನ್ನಾಗಿ ಮಾಡಿ ಯಜ್ಞವನ್ನು ಮಾಡಿಸಿ, ತಾವೂ ಶ್ರೀಸರ್ವಜ್ಞಾಚಾರ್ಯರ ಯೋಗ್ಯತೆಯವರೆಂದೂ ಸೂಚಿಸಿದರು.

## ಶ್ರೀಮದಚ್ಯುತಪ್ರೇಕ್ಷತೀರ್ಥರ ಸಂಸ್ಥಾನ, ಶ್ರೀಸುರೋತ್ತಮತೀರ್ಥರ ಆಶ್ರಮ ಸ್ವೀಕಾರ

ಶ್ರೀ ಅಚ್ಯುತಪ್ರೇಕ್ಷಾಚಾರ್ಯರು ಶ್ರೀಮದಾನಂದತೀರ್ಥ ಭಗವತ್ಪಾದರಿಗೆ ಆಶ್ರಮವನ್ನಿತ್ತ ಕೆಲವು ವರ್ಷಗಳಲ್ಲಿಯೇ ಶಿಷ್ಯಗ್ರಹಣ ಕಾರ್ಯವು ಆರಂಭವಾಯಿತು. (ಶ್ರೀಸುರೋತ್ತಮತೀರ್ಥರ ಆಶ್ರಮ ಸ್ವೀಕಾರಸಂಬಂಧಿಯಾಗಿ ವಿಭಿನ್ನ ಅಭಿಪ್ರಾಯಗಳು ಇತ್ತೀಚಿನ ಶ್ರೀರಾಜರ ಚರಿತ್ರೆ ಪುಸ್ತಕಗಳಲ್ಲಿ ಕಾಣಸಿಗುತ್ತವೆ). ಶ್ರೀಮದಾಚಾರ್ಯರ ಅನೇಕ ಶಿಷ್ಯರಲ್ಲಿ ಶ್ರೀಸತ್ಯತೀರ್ಥರು ಪರಮ ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು. ಇವರಿಂದಲೇ ಶ್ರೀಮದಚ್ಯುತಪ್ರೇಕ್ಷತೀರ್ಥರ ಸಂಸ್ಥಾನವು ಕವಲೊಡೆದು ಶ್ರೀಭೀಮನಕಟ್ಟೆ ಮತ್ತು ಶ್ರೀಭಂಡಾರಕೇರಿ ಮಠಗಳೆಂದು ಮುಂದುವರೆಯಿತು. ಶ್ರೀಭಂಡಾರಕೇರಿ ಮಠದ ಪರಂಪರೆಯಲ್ಲಿ ಶ್ರೀಸತ್ಯತೀರ್ಥರು ನಂತರ ಮಹಾಯೋಗಿಪುಂಗವರು ಆಗಿಹೋಗಿದ್ದಾರೆ. ಪ್ರಕೃತ ಅವರ ಶಿಷ್ಯರಾದ ಶ್ರೀಸತ್ಯತೀರ್ಥರು ಪರಮ ವಿರಕ್ತರಾಗಿ, ಮಹಾಮೇಧಾವಿಗಳೂ ಆಗಿರುತ್ತಾರೆ.

ಶ್ರೀಮನ್ಮಧ್ವಾಚಾರ್ಯರ ಜೊತೆಯಲ್ಲಿ ಅವರಿಂದ ತತ್ವಗಳನ್ನು ತಿಳಿಯುತ್ತಾ ಸಂಚರಿಸುತ್ತಿದ್ದರು. ಶ್ರೀಮನ್ಮಧ್ವಾಚಾರ್ಯರು ಉತ್ತರ ಬದರಿಕಾಶ್ರಮಕ್ಕೆ ಹೊರಟಾಗ, ಅವರ ವಿಯೋಗವನ್ನು ತಾಳಲಾರದೆ ಅವರನ್ನು ಸಾಯಂಕಾಲದವರೆಗೆ ಹಿಂಬಾಲಿಸುತ್ತಾ ಹೋಗಿ ಶ್ರೀಮದಾಚಾರ್ಯರ ಕೈಸನ್ನೆಯಿಂದ ಮೊದಲಿನ ಸ್ಥಳಕ್ಕೆ ಬಂದವರು, ಅಲ್ಲದೇ ಆಚಾರ್ಯರ ಮುಖದಿಂದ ಐತರೇಯ ಶಾಖೆಯ ಅರ್ಥವನ್ನು ಮೂರು ಸಲ ಕೇಳಿದವರು, ಶ್ರೀಮದ್ಬ್ರಹ್ಮಸೂತ್ರಕ್ಕೆ ಶ್ರೀಮನ್ಮಧ್ವಾಚಾರ್ಯರ ಭಾಷ್ಯವನ್ನು ರಚಿಸುವಾಗ ಅದನ್ನು ಬರೆದವರು; ಇಂತಹ ಶ್ರೀಮತ್ಸತ್ಯತೀರ್ಥರು ಶ್ರೀಮನ್ಮಧ್ವಾಚಾರ್ಯರ ಮಹಾಪ್ರೀತಿಪಾತ್ರರು. ಅಲ್ಲದೆ, ಶ್ರೀಮನ್ಮಧ್ವಾಚಾರ್ಯರಲ್ಲಿ ಮಹಾಭಕ್ತಿಯುಳ್ಳವರೂ ಆಗಿದ್ದರು. ಶ್ರೀಸುರೋತ್ತಮತೀರ್ಥರು (ಇವರ ಪೂರ್ವಾಶ್ರಮದ ಹೆಸರು ನಾರಾಯಣ) ಚಿಕ್ಕಂದಿನಿಂದಲೇ ಶ್ರೀವಿಷ್ಣುತೀರ್ಥರಂತೆ ವಿರಕ್ತರೇ ಆಗಿದ್ದರು. ಇಂತಹ ಇವರ ವೈರಾಗ್ಯ ಭಕ್ತಿಗಳನ್ನು ತಿಳಿದ ಭಂಡಾರಕೇರಿ ಶ್ರೀಗಳವರು ಚತುರ್ಥಾಶ್ರಮವನ್ನು ಕೊಟ್ಟು ಶ್ರೀ ಸುರೋತ್ತಮತೀರ್ಥರೆಂಬ ಹೆಸರನ್ನು ಪ್ರಧಾನ ಮಾಡಿದರು. ಅನಂತರ ಈ

ಸುರೋತ್ತಮತೀರ್ಥರು ತಮ್ಮ ಪೂರ್ವಾಶ್ರಮದ ಅಣ್ಣನಾದ ಶ್ರೀಮದ್ವಾದಿರಾಜ ಗುರುಸಾರ್ವಭೌಮರಲ್ಲಿ ಹೆಚ್ಚಿನ ವಿದ್ಯಾವ್ಯಾಸಂಗಕ್ಕೆಂದು ಬಂದು ಸೇರಿ ಅಧ್ಯಯನವನ್ನು ಮುಂದುವರೆಸಿದರು.

ಈ ಸುರೋತ್ತಮತೀರ್ಥರು, ಶ್ರೀಮನ್ಮಧ್ವಾಚಾರ್ಯರನ್ನು ಶ್ರೀವಿಷ್ಣುತೀರ್ಥರು ಭಕ್ತಿಯಿಂದ ಸೇವಿಸಿ ಕೃತಾರ್ಥರಾದಂತೆ, ಶ್ರೀಗುರುಸಾರ್ವಭೌಮರನ್ನು ಸೇವಿಸುತ್ತಾ ಪವಿತ್ರವ್ರತಗಳಿಂದ ಪೂತಾತ್ಮರಾಗಿ ಉತ್ತಮರೆನಿಸಿಕೊಂಡು, ಮಹಾಜ್ಞಾನಿಗಳಾಗಿ, ಮಾತಿನಲ್ಲೂ ಚತುರರಾಗಿ ಪ್ರವಚನಾಚಾರ್ಯರಲ್ಲಿ ಉತ್ತಮರೆನಿಸಿಕೊಂಡು, ತಮ್ಮ ವಿದ್ಯಾಗುರುಗಳಾದ ಅಗ್ರಜರಾದ ಶ್ರೀಗುರುರಾಜರ ಆಜ್ಞೆಯಂತೆ 'ಯುಕ್ತಿಮಲ್ಲಿಕಾ' ಗ್ರಂಥಕ್ಕೆ ಸರಿಯಾದ ವ್ಯಾಖ್ಯಾನವನ್ನು ಮಾಡಿ ಪಾಷಂಡಮತಖಂಡನಕ್ಕೆ ಹಾಗೂ ಸಂನ್ಯಾಸ ಪದ್ಧತಿಗೆ ಸಹ ವ್ಯಾಖ್ಯಾನವನ್ನು ಬರೆದಿರುವರು. ಭಂಡಾರಕೇರಿಯಲ್ಲಿ ಇವರ ಮೂಲವೃಂದಾವನವಿದ್ದು ಅಕ್ಷಯಾತೃತೀಯಾದಂದು ಬಾರ್ಕೂರಿನ ಬಳಿ ಇವರ ಆರಾಧನೆಯು ವೈಭವದಿಂದ ನಡೆಯುತ್ತದೆ.

ಯುಕ್ತಿಮಲ್ಲಿಕಾ ಗ್ರಂಥಕ್ಕೆ ಸುರೋತ್ತಮತೀರ್ಥರು ಪೂರ್ವಾಶ್ರಮದಲ್ಲಿಯೇ ನಾರಾಯಣಾಚಾರ್ಯರಾಗಿದ್ದಾಗಲೇ ವ್ಯಾಖ್ಯಾನವನ್ನು ಬರೆಯಲಾರಂಭಿಸಿದ್ದಾರೆ. ವೇದಾಪೌರುಷೇಯತ್ವದ ತನಕಬರೆದು ಬಳಿಕ ಆಶ್ರಮಸ್ವೀಕರಿಸಿದ್ದಾರೆ. ಈ ಗ್ರಂಥವ್ಯಾಖ್ಯಾನಕ್ಕೆ ದೇವತೆಗಳು ದಕ್ಷರು. 'ಸುರೋತ್ತಮಯೋಗಿವರ್ಯಾಃ ದಕ್ಷಾಃ' ಎಂದು ಹೇಳಿದ್ದಾರೆ. ಇದಕ್ಕೆ ಪ್ರತಿಯಾಗಿ ಇವರಿಗೆ ಸುರೋತ್ತಮತೀರ್ಥರೆಂದು ದೊರೆತು ಇವರು ದೇವತೆ ಎಂದೇ ಖ್ಯಾತರಾಗಿದ್ದಾರೆ. ಮೂಲಪ್ರತಿಶೋಧನೆಯಲ್ಲಿ ದೊರೆತ ಈ ಅಂಶವನ್ನು ಚಿತ್ರ (   ) ದಲ್ಲಿ ಗಮನಿಸಿ.

ಸಂಶ್ರಿತ್ಯ ವಿಷ್ಣೋಃ ಪದಮತ್ರಸಾಧುಸಸ್ಯಾಸಿ ವಿಜ್ಞಾನಜಲೇನ ಹರ್ಷಮ್ ।
ನಯಂತಮುಚ್ಚೈಃ ಪ್ರವಚೋನಿನಾದಂ ಸುರೋತ್ತಮಾರ್ಯಾಂಬುಧರಂ ನತೋಸ್ಮಿ ॥
ಸುರೋತ್ತಮಾರ್ಯಸ್ತಸ್ಯಾಸೀತ್ ಸೋದರ್ಯೋ ವಿದ್ವದಗ್ರಣೀಃ ।
ಯತೀಂದ್ರೋ ವಿಷ್ಣುತೀರ್ಥಾರ್ಯೋ ಯಥಾ ಮಧ್ವಸ್ಯ ವೈ ಪುರಾ ॥



# ಶ್ರೀ ಸುರೋತ್ತಮತೀರ್ಥರ ಭಾವವಿಲಾಸಿನೀ ಮತ್ತು ಪಾಠಶುದ್ಧಿ

ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರಿಂದ ನಿಯೋಜಿತರಾದ ವಿದ್ವಾಂಸರ ಮಂಡಲಿಯು ಯುಕ್ತಿಮಲ್ಲಿಕಾ ಮೂಲಪಾಠದ ಶುದ್ಧಿಯ ಜೊತೆಗೆ ಅನುವಾದ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಶ್ರೀಸೋದೆವಾದಿರಾಜ ಮಠದಲ್ಲಿ ಯುಕ್ತಿಮಲ್ಲಿಕಾ ಮೂಲ ಮತ್ತು ಭಾವವಿಲಾಸಿನೀ ತುಳುಲಿಪಿಯ ಹಸ್ತಪ್ರತಿಯು, ಪೇಪರ್ Manuscript ಇವುಗಳನ್ನು ಶ್ರೀಪಾದರು ಸಂಶೋಧಕರಿಗೆ ನೀಡಿದರು. ಶ್ರೀವಾದಿರಾಜರ ನಂತರ ಐವತ್ತು ವರ್ಷದ ಬಳಿಕ ಲಿಖಿತವಾದ ಸುಮಾರು ನಾಲ್ಕುನೂರು ವರ್ಷದ ಹಳೆಯ ಹಸ್ತಪ್ರತಿಯು ನಮಗೆ ಸಂಶೋಧನೆಗೆ ಆಧಾರವಾಗಿ ದೊರೆಯಿತು. ಐದು ವಿಲಾಸಗಳಲ್ಲಿ ಭೇದಸೌರಭ ಮತ್ತು ಫಲಸೌರಭದ ಐದುನೂರು ಶ್ಲೋಕಗಳ ವ್ಯಾಖ್ಯಾನದ ಹೊರತಾಗಿ ಬಹುತೇಕ ಸಮಗ್ರಭಾಗವು ದೊರೆತಿದೆ. ಆ ಹಸ್ತಪ್ರತಿಯ ಆಧಾರದಲ್ಲಿ ಅನೇಕ ಪ್ರಕ್ಷೇಪ- ವಿಕ್ಷೇಪಗಳನ್ನು ಗಮನಿಸಿ ಸಂಶೋಧಿಸಲಾಗಿದೆ. ಭಾವವಿಲಾಸಿನೀ ಪ್ರಕ್ಷಿಪ್ತಭಾಗಗಳನ್ನು ಕಂಸದಲ್ಲಿ ಸೂಚಿಸಲಾಗಿದೆ. ಸೇರಿಸಬೇಕಾದ ಭಾಗಗಳನ್ನು ಯಥಾವತ್ತಾಗಿ ಸೇರಿಸಲಾಗಿದೆ. ಮೂಲದಲ್ಲಿ ಅನೇಕ ಪಾಠಭೇದಗಳು ಉಪಲಬ್ಧವಾಗಿವೆ, ವ್ಯಾಖ್ಯಾನದಲ್ಲಿ ವಿಶೇಷಾಂಶಗಳು ಉಪಲಬ್ಧವಾಗಿವೆ.

ಉದಾ: ಭಾವವಿಲಾಸಿನೀ ವ್ಯಾಖ್ಯಾನದ ಆರಂಭದ ಭಾಗದಲ್ಲಿಯೇ ಹದಿನಾಲ್ಕನೆಯ ಶ್ಲೋಕದಲ್ಲಿ ಜೀವೈಕ್ಯವಾದಿಗಳಾದ ಮಾಯಾವಾದಿಗಳ ಮತವನ್ನು ನಿರಾಕರಿಸುತ್ತಾ, ನಿರಾಕಾರವಾದಿಗಳಿಗೆ ಆಗುವ ಅನರ್ಥವನ್ನು ರಾಜರು ವಿಶ್ಲೇಷಿಸಿದ್ದಾರೆ. ಹದಿನಾಲ್ಕನೆಯ ಶ್ಲೋಕದ ಭಾವವಿಲಾಸಿನೀ ವ್ಯಾಖ್ಯಾನದಲ್ಲಿ **ನಿರಾಕಾರೇತ್ಯುಪಲಕ್ಷಣಂ ಸಾಕಾರತ್ವೇಽಪಿ** ಎಂದು ಆರಂಭವಾಗಿದೆ. ಆದರೆ ಈ ಭಾಗವು ಮೂಲಪ್ರತಿಯಲ್ಲಿ ಕಾಣಿಸುತ್ತಿಲ್ಲ. ಮಾಯಾವಾದಿಗಳು ಸಾಕಾರವಾದಿಗಳು ಎಂದು ಹೇಳಲಾಗುವುದಿಲ್ಲ. ಈ ಭಾಗವು ಭಾವವಿಲಾಸಿನೀಯಲ್ಲಿ ಸೇರಿದ ಭಾಗವಾಗಿಲ್ಲ.

ಇಷ್ಟೇ ಅಲ್ಲದೆ, 23ನೆಯ ಶ್ಲೋಕದಲ್ಲಿ **ನಾಮ್ನಾ ಚಾತ್ಯುಲ್ಲಸಂತ್ಯಾಸೀದ್ವಲ್ಲೀ ಯುಕ್ತಿಮಲ್ಲಿಕೇ** ಎಂದು ಗ್ರಂಥವನ್ನು ಕುರಿತು ಸಂಬೋಧನೆಮಾಡಿದ್ದಾರೆ. ಇದಕ್ಕೆ ಪೂರಕವಾಗಿ ಕಾಳಿದಾಸನ ಮೇಘದೂತಕಾವ್ಯದ ಶ್ಲೋಕವನ್ನು ದೃಷ್ಟಾಂತವಾಗಿ ಹೇಳಲಾಗಿದೆ. **ತಚ್ಚಸ್ಥಾನಾದಸ್ಮಾತ್** ಇತ್ಯಾದಿ, ಆದರೆ ಈ ಭಾಗವು ಮೂಲಪ್ರತಿಯಲ್ಲಿ ಉಪಲಬ್ಧವಾಗಿಲ್ಲ. ವಾದಿರಾಜರು ಕಾಳಿದಾಸನ ಕಾವ್ಯ-ಶೈಲಿಯನ್ನೂ ಮೀರಿದ ಧೀರಕವಿಗಳು. ಹಾಗಾಗಿ ಇವರ ಕಾವ್ಯಗ್ರಂಥಕ್ಕೆ ಕಾಳಿದಾಸನ ಕಾವ್ಯಗಳ ದೃಷ್ಟಾಂತವು ಬೇಕಿರುವುದಿಲ್ಲ.

ಇದರಂತೆ ಶ್ಲೋಕಗಳಲ್ಲಿಯೂ ಅನೇಕ ಪಾಠಭೇದಗಳಿದ್ದಾವೆ. 53ನೆಯ ಶ್ಲೋಕದಲ್ಲಿ **'ಯಸ್ಯಾಸ್ತಿ ಪುಸ್ತಕಂ'** ಎಂದು ಮುದ್ರಿತವಾಗಿದೆ. ಆದರೆ ಮೂಲಕೋಶಗಳಲ್ಲಿ **'ಪಶ್ಯಾಸ್ತಿ ಪುಸ್ತಕಮ್'** ಎಂಬ ಸಾಧುವಾದ ಪಾಠ ಉಪಲಬ್ಧವಾಗಿದೆ.

ಇನ್ನು ಕೆಲವು ಕಡೆ **'ಪುರುಷ'** ಎಂದು ಇದ್ದ ಭಾಗಗಳಲ್ಲಿ **'ಪರುಷ'** ಎಂದು ಮುದ್ರಿತವಾಗಿದೆ. **'ತ್ರಿಗುಣತಃ'** ಎಂಬಲ್ಲಿ **'ಸ್ತ್ರೀಗುಣತಃ'** ಎಂದು ತಪ್ಪಾಗಿ ಮುದ್ರಿತವಾಗಿದೆ. **'ಮಾಧ್ವಭಟಾಸ್ತು ಕಿಮ್'** ಎಂಬಲ್ಲಿ **'ಮಾಧ್ವಭವಾಸ್ತು ಕಿಮ್'** ಎಂದು ತಪ್ಪಾಗಿ ಮುದ್ರಿತವಾಗಿದೆ. ತುಳುಲಿಪಿಯ ಸಾಮ್ಯ ಅಕ್ಷರಗಳ ಅಧ್ಯಯನದಲ್ಲಿ ಉಂಟಾದಕೊರತೆಯಿಂದ ಇಂತಹ ಪ್ರಮಾದಗಳು ಏರ್ಪಟ್ಟಿರಬಹುದು.

ಇಷ್ಟೇ ಅಲ್ಲದೆ ಗುಣಸೌರಭದ ವೇದಾಪೌರುಷೇಯತ್ವ ವಿಚಾರದ ಪರಿಸಮಾಪ್ತಿಯಲ್ಲಿ ಒಂದು ಹೊಸ ಅಂಶವು ಸಂಶೋಧಕರ ಕೈಗೆ ದೊರೆತಿದೆ. ಬಹುತೇಕ ವಾದಿರಾಜರ ಮಹಿಮಾಬೋಧಕ ಗ್ರಂಥವೆನಿಸಿದ, ವಾದಿರಾಜರ ಕಾಲದಲ್ಲಿಯೇ ರಚಿತಗೊಂಡ 'ಗುರುವರಚರಿತಾಮೃತ' ಎಂಬ ಗ್ರಂಥವು ಸಮಗ್ರ ರಾಜರ ಬದುಕಿಗೆ ಪ್ರಮಾಣಗ್ರಂಥವಾಗಿದೆ. ಆದರೆ ಆ ಗ್ರಂಥದಲ್ಲಿಯಾಗಲೀ ಬೇರೆ ಗ್ರಂಥಗಳಲ್ಲಿಯಾಗಲೀ ಅಂದಿನಿಂದ ಇಲ್ಲಿಯತನಕವು ವಾದಿರಾಜರ ಪೂರ್ವಾಶ್ರಮದ ಸಹೋದರರ ಹೆಸರು ಏನು ಎಂದು ತಿಳಿದುಬಂದಿಲ್ಲ. ಆದರೆ ಈ ಅತ್ಯಂತ ಪ್ರಾಚೀನವಾದ ಹಸ್ತಪ್ರತಿಯಲ್ಲಿ ವೇದಪೌರುಷೇಯತ್ವ ಪ್ರಸಂಗದ ಸಮಯದಲ್ಲಿ ''**ಇತಿ ಶ್ರೀಮದ್ವಾದಿರಾಜತೀರ್ಥ ಚರಣವಿರಚಿತಾ ಯುಕ್ತಿಮಲ್ಲಿಕಾ ಟೀಕಾಯಾಂನಾರಾಯಣಾಚಾರ್ಯ ಕೃತಾಯಾಂ ಭಾವವಿಲಾಸಿನ್ಯಾಂ ವೇದಾಪೌರುಷೇಯಪ್ರಕರಣಮ್**'' ಎಂದು ಪರಿಸಮಾಪ್ತವಾಗಿದೆ.

ಮುಂದೆಲ್ಲಿಯೂ ನಾರಾಯಣಾಚಾರ್ಯ ಎಂದು ಉಲ್ಲೇಖವಿಲ್ಲ. ಹೀಗಾಗಿ ಭಾವವಿಲಾಸಿನಿಯ ವ್ಯಾಖ್ಯಾನವನ್ನು ಆರಂಭಿಸಿದಾಗ ಸುರೋತ್ತಮತೀರ್ಥರೇ ಪೂರ್ವಾಶ್ರಮದಲ್ಲಿ ನಾರಾಯಣಾಚಾರ್ಯರೆಂದು ಕರೆಸಿಕೊಳ್ಳುತ್ತಿದ್ದರು. ವೇದಾಪೌರುಷೇತ್ವಭಾಗದನಂತರ ಅವರು ಸಂನ್ಯಾಸ ಸ್ವೀಕರಿಸಿ ವ್ಯಾಖ್ಯಾನ ಮಾಡಿರಬಹುದು ಎಂದು ಊಹಿಸಬಹುದಾಗಿದೆ. ಗ್ರಂಥದ ಆರಂಭದಲ್ಲಿ ಸುರೋತ್ತಮತೀರ್ಥರು ಈ ಗ್ರಂಥವನ್ನು ವ್ಯಾಖ್ಯಾನ ಮಾಡಲು **'ಸುರೋತ್ತಮಯೋಗಿವರ್ಯಾಃ ದಕ್ಷಾಃ'** ಎಂದು ಹೇಳಿದ್ದಾರೆ. **ದೇವಶ್ರೇಷ್ಠರು ವ್ಯಾಖ್ಯಾನ ಮಾಡಲು ದಕ್ಷರು** ಎಂದು ಈ ಮಾತಿನ ಅಭಿಪ್ರಾಯ. ರಾಜರು ಇವರ ವ್ಯಾಖ್ಯಾನದ ಕೌಶಲದಿಂದ ಇವರನ್ನು ಸುರೋತ್ತಮರೆಂದೇ ಕರೆದಿರಬಹುದು. ಭಂಡಾರಕೇರಿಮಠದ ಪರಂಪರೆಯಲ್ಲೂ ಇವರ ಈ ವ್ಯಾಖ್ಯಾನ ಕೌಶಲದಿಂದಲೇ ಈ ನಾಮದಿಂದ ಅಲಂಕರಿಸಿರಬಹುದು. ಇಷ್ಟೇ ಅಲ್ಲದೆ, ಈ ನಾರಾಯಣಾಚಾರ್ಯ ಎಂಬ ಮಾತಿನಿಂದ ಸುರೋತ್ತಮತೀರ್ಥರೇ 'ರುಗ್ಮಿಣೇಶವಿಜಯ' 'ತೀರ್ಥಪ್ರಬಂಧ' ಗ್ರಂಥಗಳಿಗೂ ವ್ಯಾಖ್ಯಾನಿಸಿರಬಹುದು ಎಂದು ಊಹಿಸಬಹುದು. 'ರುಗ್ಮಿಣೇಶವಿಜಯ' 'ಯುಕ್ತಿಮಲ್ಲಿಕಾ' ವ್ಯಾಖ್ಯಾನದ ಪ್ರೌಢಿಮೆಗಳಲ್ಲಿ ಸಾಮ್ಯತೆಗಳನ್ನೂ ಕಾಣಬಹುದು. ವ್ಯಾಖ್ಯಾನವನ್ನೇ ಗಮನಿಸಿದಾಗ ಇನ್ನೂ ಕೆಲವು ಅಂಶಗಳು ಕಂಡುಬರುತ್ತವೆ. ಅಧ್ಯಯನಶೀಲರಿಗೆ ಈ ವಿಮರ್ಶೆಯನ್ನು ಬಿಟ್ಟಿದ್ದೇವೆ.

ಇಷ್ಟೇ ಅಲ್ಲದೆ, ಇಂದು ಮುದ್ರಿತವಾದ ಅನೇಕ ಪ್ರತಿಗಳಲ್ಲಿ ಅನೇಕ ಶ್ಲೋಕಗಳ ವ್ಯಾಖ್ಯಾನವೇ ಲುಪ್ತವಾಗಿವೆ. ಉದಾ: ಭೇದಸೌರಭದ 151, 152ನೇ ಶ್ಲೋಕಗಳಲ್ಲಿ ಮುದ್ರಿತಪುಸ್ತಕಗಳಲ್ಲಿ ವ್ಯಾಖ್ಯಾನ ಇರುವುದಿಲ್ಲ. ಆದರೆ ಇಲ್ಲಿ ಇಷ್ಟು ವ್ಯಾಖ್ಯಾನವಿದೆ, ಗಮನಿಸಿ.

**ಭಾವವಿಲಾಸಿನೀ–** ಇದಾನೀಮವಿದ್ಯಮಾನಸ್ಯಾಪಿ ಗುರ್ವಾದೇರ್ಯಥಾ ಟೀಕಾದಿವ್ಯಾವರ್ತಕತ್ವಂ ತಥಾऽತ್ರಾಪಿ ಸ್ಯಾದಿತಿ ಮಂದಾಶಂಕಾಂ ನಿರಾಕರೋತಿ – **ಕದಾಚಿದಿತಿ ॥** ಕದಾಚಿತ್ ಗ್ರಂಥಸ್ಯ ಕರಣಸಮಯೇ ಕ್ಷೇತ್ರಸ್ಯ ಪಾಲನ ಸಮಯೇ ಚ। ಇದಮಪ್ಯುಪಲಕ್ಷಣಮ್। ಟೀಕಾಯಾಂ ಸರ್ವದಾ ವಿದ್ಯಮಾನಂ ಗುರುಕೃತತ್ವಂ ಕ್ಷೇತ್ರೇ ವಾದ್ಯಾಪಿ ವಿದ್ಯಮಾನಂ ಕುರುಪಾಲಿತತ್ವಂ ಚ ತತ್ರ ವಿದ್ಯಮಾನಮೇವ ತಸ್ಯ ತಸ್ಯ ವ್ಯಾವರ್ತಕಮ್। ಉತ್ತೃಣತ್ವಂ ಗೃಹಸ್ಯೇವೇತ್ಯಪಿ ದ್ರಷ್ಟವ್ಯಮ್ ॥ ೧೫೧ ॥

**ಭಾವವಿಲಾಸಿನೀ–** ಸರ್ವಥಾ ತದಸಂಬದ್ಧಸ್ಯ ತತ್ರೋಪಕಾರಕತ್ವಾಭಾವೇ ಲೌಕಿಕಾಭಾಣಕಮಾಹ – **ಮಹಿಷ್ಯಾ ಇತಿ ॥** ಸರ್ವಥಾ ಸಂಬಂಧಾಭಾವ

**ದರ್ಶನಾಯ ಮಹಿಷಸ್ಯೇತ್ಯನುಕ್ತ್ವಾ ಗೋವೃಷಸ್ಯೇತ್ಯುಕ್ತಮ್ । ಆಭಾಣಕಾಂತರ-ಮಪ್ಯಾಹ – ಕಾಕಸ್ಯೇತಿ ॥ ತವ ಪ್ರಾಸಾದ ಇತಿ ಸಂಬಂಧಃ ॥ ೧೫೨ ॥**

ಇದರಂತೆ ಇನ್ನೊಂದು ಮೂಲಪ್ರತಿಯಲ್ಲಿ ಯುಕ್ತಿಮಲ್ಲಿಕಾ ಭೇದಸೌರಭದಲ್ಲಿ ಒಂದು ಶ್ಲೋಕವೇ ಲುಪ್ತವಾಗಿದ್ದು ದೊರೆತಿದೆ. ಈ ಶ್ಲೋಕವನ್ನು ಸೇರಿಸದಿದ್ದರೆ ಹಿಂದೆ ಮುಂದೆ ಅನ್ವಯವೇ ಆಗುವುದಿಲ್ಲ. ಗಮನಿಸಿ.

**ಅದಃ ಪೂರ್ಣಮಿದಂ ಪೂರ್ಣಂ ಪೂರ್ಣಾತ್ಪೂರ್ಣಮುದಚ್ಯತೇ ।**
**ಇತ್ಯಾಹೇತಾನ್ ಶ್ರುತಿಸ್ತ್ವನ್ಯದೇತಸ್ಮಿನ್ನೇತದಾತತಮ್ ॥ ೬೨೮ ॥**

**ವಿಷ್ಣೋದ್ರಿಕ್ತಾಂಶರಾಮಾಂಘ್ರಿಪಾದುಕಾರಾಜ್ಯನಿರ್ವೃತಃ ।**
**ಇತ್ಯುದ್ರಿಕ್ತಾಂಶತಾ ರಾಮಸ್ಯೋಕ್ತಾ ಸಾ ಕಾ ವಿಚಾರ್ಯತಾಮ್ ॥ ೬೨೯ ॥**

ಇದರಂತೆ ಮೂಲಶ್ಲೋಕಗಳಲ್ಲಿ '**ಕಿಂಚೋಪಾಸ್ಯಾ ಯದಿಭಿಯಾ**' ಎಂದು ಮುದ್ರಿತವಾಗಿದೆ. '**ಕಿಂಚೋಪಾಸ್ಯಾ ಯದಿಭಿದಾ**' ಎಂದು ಮುದ್ರಿತವಾಗಬೇಕು. '**ದೇವೇಷು**' ಎಂದು ಮುದ್ರಿತವಾಗಿದೆ, '**ದೇಹೇಷು**' ಎಂದು ಮುದ್ರಿತವಾಗಬೇಕು. '**ಕೃಷ್ಣೇ ವಿಶತಿ**' ಎನ್ನುವಲ್ಲಿ '**ಕೃಷ್ಣೋ ವಿಶತಿ**' ಎಂದು ಮುದ್ರಿತವಾಗಿದೆ. ಮುಕ್ತಸ್ಯಾ-ಪ್ಯತ್ಪತೋಕ್ತೇಃ ಎಂಬಲ್ಲಿ ಮುಕ್ತಸ್ಯಪ್ರವೃತ್ತ್ಯೋಕ್ತೇಃ ಎಂದು ತಪ್ಪಾಗಿ ಮುದ್ರಿತವಾಗಿದೆ. ಹೀಗೆ ಅನೇಕ ಮೂಲಶ್ಲೋಕಗಳು, ಮೂಲವ್ಯಾಖ್ಯಾನಗಳು ಇವುಗಳ ಶೋಧನೆಯಲ್ಲಿ ಹಸ್ತಪ್ರತಿಯ ಶೋಧನೆಯು ತುಂಬ ಉಪಯುಕ್ತವೆನಿಸಿದೆ.

ಬಹುತೇಕ ಫಲಸೌರಭದಲ್ಲಿ 20 ಪುಟಕ್ಕಿಂತಲೂ ಅಧಿಕವಾದ ವ್ಯಾಖ್ಯಾನದ ಅಂಶಗಳು ಬಿಟ್ಟುಹೋಗಿದ್ದು ಮುದ್ರಿತಪುಸ್ತಕದಲ್ಲಿ ಕಂಡುಬಂದಿದೆ. ಅವೆಲ್ಲವನ್ನೂ ಅಲ್ಲಲ್ಲಿ ಆಯಾ ಶ್ಲೋಕಕ್ಕೆ ಅನುಗುಣವಾಗಿ ಸೇರಿಸಿದ್ದೇವೆ. ಮುದ್ರಿತವಾದ ಪುಸ್ತಕದಲ್ಲಿ ಈ ಅಂಶಗಳು ಬಿಟ್ಟುಹೋದದ್ದೇ ಅಸಾಂಗತ್ಯಕ್ಕೆ ಕಾರಣವಾಗಿದೆ. ಸೇರಿಸಿದ್ದರಿಂದ ಈ ಕೊರತೆಯನ್ನು ನೀಗಿಸಿದಂತಾಗಿದೆ. ಕೆಲವೊಂದು ಭಾಗಗಳು ಸಂಶೋಧನೆಯಲ್ಲಿ ನಂತರ ಬೆಳಕಿಗೆ ಬಂದಿದ್ದರಿಂದ ಅನುವಾದದ ಭಾಗಗಳು ತಪ್ಪಿರಬಹುದು. ಆದರೆ ವ್ಯಾಖ್ಯಾನ ಅಂಶಗಳನ್ನು ಪ್ರಯತ್ನಪೂರ್ವಕವಾಗಿ ಸೇರಿಸಿದ್ದೇವೆ.

ಮತ್ತೊಂದು ಗಮನಿಸಬೇಕಾದ ಪ್ರಧಾನವಾದ ಅಂಶವೇನೆಂದರೆ ಬಹುತೇಕ ನಮಗೆ ದೊರೆತ ನಾಲ್ಕು ಹಸ್ತಪ್ರತಿಗಳಲ್ಲಿ ಅಲ್ಲಲ್ಲಿ ವ್ಯಾಖ್ಯಾನದ ಕೊನೆಯಲ್ಲಿ ಆರಂಭದ ಭಾಗಗಳಲ್ಲಿ ಶ್ರೀ **ವಾದಿರಾಜಭಗವತ್ಪಾದಾಚಾರ್ಯ** ಮತ್ತು

**ಅವ್ಯವಹಿತೋತ್ತರಕಲ್ಪಮುಖ್ಯಸಮೀರ** ಇತ್ಯಾದಿ ಮಾತುಗಳು ಕಂಡುಬರುತ್ತವೆ. ಆ ಹಸ್ತಪ್ರತಿಯ ಫೋಟೋಗಳನ್ನು ಪುಸ್ತಕದ ಆರಂಭದಲ್ಲಿ ನೀಡಿದ್ದೇವೆ. ಆದ್ದರಿಂದ ರಾಜರಿಗೆ ಹಾಕಿದ **ಭಗವತ್**ಶಬ್ದವಾಗಲಿ, **ಸಮೀರ**ಶಬ್ದವಾಗಲಿ ಆಗ್ರಹಪೂರ್ವಕ-ವಾದುದಲ್ಲ ಎಂದು ನಿರ್ಮತ್ಸರರಾದ ವಿದ್ವಾಂಸರು ಗಮನಿಸಬೇಕಾದ ಅಂಶ.

ಹೀಗೆ ಯುಕ್ತಿಮಲ್ಲಿಕಾ ಗ್ರಂಥವು ರಾಜರ ಗ್ರಂಥಗಳಲ್ಲೇ ಶ್ರೇಷ್ಠವಾದುದು. ಮಧ್ವಸಿದ್ಧಾಂತದಲ್ಲೇ ಶ್ಲೋಕರೂಪ ಮತವಿಮರ್ಶಾತ್ಮಕವಾದ ಶ್ರೇಷ್ಠವಾದ ಕೃತಿಯಾಗಿದ್ದು; ಜೊತೆಗೆ ದಾರ್ಶನಿಕ ಪ್ರಪಂಚದಲ್ಲಿಯೇ ವಿನೂತನ ಕೊಡುಗೆಯನ್ನು ನೀಡುವ ಗ್ರಂಥವಾಗಿದ್ದು; ಇಂದು ಇಷ್ಟು ಸಂಶೋಧಿತವಾಗಿ ಜಗತ್ತಿಗೆ ದೊರೆಯುತ್ತಿರುವುದು ಸಂತೋಷದ ಸಂಗತಿಯಾಗಿದೆ. ಸಂಶೋಧಕರಿಗೆ ಸಮಾಧಾನವನ್ನು ತಂದಿದೆ. ಇನ್ನೂ ನಮಗೆ ತಿಳಿಯದ ಅನೇಕ ಅಂಶಗಳು ಇದ್ದಾವೆ. ಬೇರೆ ಮಠಗಳಲ್ಲಿ ನಮಗೆ ಇದರ ಹಸ್ತಪ್ರತಿಗಳು ದೊರೆಯಲಿಲ್ಲ. ಹಾಗಾಗಿ ಇನ್ನೂ ಹೆಚ್ಚು ಹಸ್ತಪ್ರತಿಗಳ ಆಧಾರದಲ್ಲಿ ಸಂಶೋಧನೆ ನಡೆದಲ್ಲಿ ಅರ್ಥವತ್ತಾದ ಗ್ರಂಥಶೋಧನೆ ಮತ್ತೂ ನಡೆಸಬಹುದೆಂದೇ ವಿಮರ್ಶಕರ ಅಭಿಪ್ರಾಯವಾಗಿದೆ. ಆದರೆ ಇಲ್ಲಿಯ ತನಕ ನಡೆದ ಕೆಲಸಕ್ಕೆ ಹೋಲಿಕೆ ಮಾಡಿ ನೋಡಿದಾಗ ಬಹುತೇಕ ಸಮಾಧಾನವನ್ನು ತಂದ ಸಂಶೋಧನೆಯಾಗಿದೆ ಎಂದು ತೃಪ್ತಿಪಟ್ಟಿದ್ದೇವೆ.

ಫಲಸೌರಭದ ವೇದವ್ಯಾಖ್ಯಾನಗಳು ಅಪೂರ್ವವಾಗಿದ್ದಾವೆ. ಸಮಗ್ರ ಯುಕ್ತಿಮಲ್ಲಿಕೆಯಲ್ಲಿ 280ಕ್ಕೂ ಅಧಿಕವಾದ ಭಾಗವತಶ್ಲೋಕಗಳಿಗೆ ರಾಜರು ತಮ್ಮದೇ ಆದ ಶೈಲಿಯಲ್ಲಿ ಯಾವ ಗ್ರಂಥಗಳಲ್ಲಿಯೂ ಕಾಣದ ವಿನೂತನ ರೀತಿಯಲ್ಲಿ ಮನಸ್ಸಿಗೆ ಒಪ್ಪುವಂತಹ ವ್ಯಾಖ್ಯಾನವನ್ನು ನೀಡಿ ಉಪಕರಿಸಿದ್ದಾರೆ. ಈ ಶ್ಲೋಕಗಳನ್ನೇ 'ಯುಕ್ತಿಮಲ್ಲಿಕೋದಾಹೃತ ಭಾಗವತಶ್ಲೋಕಗಳು' ಎಂದು ಪ್ರತ್ಯೇಕವಾಗಿ ಸಂಗ್ರಹಿಸಿದಲ್ಲಿ ಭಾಗವತ ರಸಿಕರಿಗೆ ಹೊಸ ಅಮೃತಭೋಜನವಾದೀತು. ಸಹೃದಯರಾದ ಜಿಜ್ಞಾಸುಗಳು ಎರಡು ವರ್ಷಗಳ ಈ ಸಂಶೋಧನೆ ಅನುವಾದ ಕಾರ್ಯಗಳಲ್ಲಿನ ಗುಣಗಳನ್ನು ಮೊದಲು ಸ್ವೀಕರಿಸಿ, ದೋಷಗಳಿದ್ದಲ್ಲಿ ಅದನ್ನು ತಿಳಿಸಿ ರಾಜರ ಗ್ರಂಥದ ಅಧ್ಯಯನಪರಂಪರೆಯು ಬೆಳೆಯುವಂತೆ ಸಹಕರಿಸುವಿರಾಗಿ ಆಶಿಸುತ್ತೇವೆ.

**॥ ಶ್ರೀಕೃಷ್ಣಾರ್ಪಣಮಸ್ತು ॥**

# ಅಣುವೃಂದಾವನಾಖ್ಯಾನ ಮತ್ತು ರಚನೆಯ ಹಿನ್ನೆಲೆ

- ವಿದ್ವಾನ್ ನಿಪ್ಪಾಣಿ ಗುರುರಾಜಾಚಾರ್ಯ

ಭಾವಿಸಮೀರ ಶ್ರೀವಾದಿರಾಜರು ಶ್ರೀಹರಿಯ ವಿಶೇಷ ಆಜ್ಞೆಯಿಂದ ಈ ಕಲ್ಪದಲ್ಲಿಯೇ ಪ್ರಾಣಾದಿಪಂಚರೂಪಗಳ ವೈಭವ ಭಾವ್ಯರು. ಆದ್ದರಿಂದಲೇ, ವೃಂದಾವನ ಪ್ರವೇಶಕ್ಕಿಂತ ಪೂರ್ವದಲ್ಲಿಯೇ ಐದು ವೃಂದಾವನಗಳನ್ನು ಸ್ಥಾಪಿಸಿ ಪೂಜಿಸಿದರು. ಬ್ರಹ್ಮಾಂಡದಲ್ಲಿಯ ತಾತ್ವಿಕ ಸನ್ನಿಧಾನದ ಸಮಷ್ಟಿರೂಪ ಈ ಐದುವೃಂದಾವನಗಳಲ್ಲಿ ಹಯಗ್ರೀವಾತ್ಮಕ ಶ್ರೀಹರಿ ಅನಿರುದ್ಧಾದಿ ಐದುರೂಪಗಳಿಂದ ಸನ್ನಿಹಿತನಾಗಿದ್ದಾನೆ. ಆ ದೇವನನ್ನು ಆರಾಧಿಸಲು ಶ್ರೀಮುಖ್ಯಪ್ರಾಣದೇವರು ಪ್ರಾಣಾದಿಪಂಚರೂಪಗಳಿಂದ ಸನ್ನಿಹಿತರಾಗಿದ್ದಾರೆ. ಶ್ರೀರಾಜರೂ ಶ್ರೀಹರಿಗುರುದೇವತಾ ಸನ್ನಿಧಾನದ ಮಹಿಮೆ, ಸೇವಾಸಾಧನ ಪ್ರಕಾರ, ಪರಾಪರತತ್ವವಿವೇಕ, ಫಲಾಫಲಸಂಬಂಧಿನಿದರ್ಶನ ನಿರೂಪಣೆ ಈ ಮೊದಲಾದ ಪ್ರಮುಖ ವಿಷಯಗಳನ್ನು ಮಹಿಮೆಯ ರೂಪದಲ್ಲಿ ವರ್ಣಿಸುವ ಕೃತಿಯೇ ಶ್ರೀಸ್ವಾಪ್ನವೃಂದಾವನಾಖ್ಯಾನ. ತಮ್ಮನ್ನು ಅನೇಕ ದಶಕಗಳ ಅವಧಿಗೆ ನಿರ್ವ್ಯಾಜ ಭಕ್ತಿಯಿಂದ ಸೇವಿಸಿದ, ಏಡ-ಮೂಕನಂತಿರುವ ಅಂತರಂಗ ಜ್ಞಾನಿಭಕ್ತಶ್ರೇಷ್ಠನನ್ನು ನಿಮಿತ್ತ ಮಾಡಿಕೊಂಡು ಸಕಲಸುಜನವೃಂದಕ್ಕೆ ಶ್ರೀರಾಜರು ಉಪದೇಶಿಸಿದ ಉತ್ಕೃಷ್ಟ ಕೃತಿ ಇದು. ಸಶರೀರ ವೃಂದಾವನ ಪ್ರವೇಶಾನಂತರ ಸನ್ನಿಧಿಯಲ್ಲಿ ಸೇವೆಯನ್ನು ಮುಂದುವರೆಸಿದ ಆ ಭಕ್ತನ ಸ್ವಪ್ನದಲ್ಲಿ ತೇಜೋರೂಪದಿಂದ ದರ್ಶನಕೊಟ್ಟು ರಾಗಯುಕ್ತ ಹೇಳಿದ ಹಿರಿದಾದ ಕೃತಿ. ಉಪದೇಶಿಸಿದ ಮರುದಿನ ಪ್ರಾತಃಕಾಲ ಆ ಬ್ರಾಹ್ಮಣಭಕ್ತ ಶ್ರೀವೇದನಿಧಿತೀರ್ಥರ ಸಮ್ಮುಖದಲ್ಲಿ ಸ್ವಪ್ನೋಪದೇಶವನ್ನು ಉಚ್ಚರಿಸುತ್ತಿದ್ದ. ಗುರುಗಳ ಶಿಷ್ಯರಾದ ಶ್ರೀರಾಮಚಂದ್ರಾಚಾರ್ಯರು ಲೇಖನ ಮಾಡುತ್ತಿದ್ದರು. ಲಕ್ಷಾವಧಿ ಶ್ಲೋಕಗಳನ್ನು ಶ್ರೀರಾಜರ ಸ್ವಪ್ನದಲ್ಲಿ ಉಪದೇಶಿಸಿದ್ದರೂ ವಿಪ್ರನಿಂದ ಉಚ್ಚಾರಣೆ ಮಾಡಿಸಿದ್ದು 2258 ಶ್ಲೋಕಗಳು. ಶ್ರೀವೇದನಿಧಿತೀರ್ಥರು ಸ್ವಶಾಖಾವೇದಾಧ್ಯಯನದಂತೆ ಈ ಕೃತಿಯನ್ನು 22 ಅಧ್ಯಾಯವುಳ್ಳದ್ದಾಗಿ ರೂಪಗೊಂಡಿತು. ಆ ವಿಪ್ರರು ನಂತರ ಜನ್ಮದಲ್ಲಿ ಶ್ರೀಸೋದೆಮಠದ

ಯತಿಗಳಾಗಿ ಶ್ರೀವೃಂದಾವನಾಚಾರ್ಯರೆಂದು ಪ್ರಸಿದ್ಧರಾದರು. ಶ್ರೀರಾಜರ ಕಾರುಣ್ಯದಿಂದ ಹಾಗು ಪ್ರಾಗ್‌ಜನ್ಮಾರ್ಜಿತಸುಕೃತವಿಶೇಷದಿಂದ ಪ್ರತಿಯೊಂದು ಅಧ್ಯಾಯಗತ ವಿಷಯ, ತತ್ಸಂಬಂಧಿ ಶ್ಲೋಕಗಳು ಯಾವ ಭಕ್ತರಿಗೆ ಸಂಬಂಧಪಟ್ಟಿದ್ದು ಎಂದು ಅರಿತು ಆಯಾ ವ್ಯಕ್ತಿಗಳ ಹೆಸರಿನಿಂದ ಪ್ರಕರಣಗಳನ್ನು ರಚಿಸಿದರು. ಶಿಷ್ಯರಿಂದ ವ್ಯಾಖ್ಯಾನ ಹಾಗು ಪ್ರಾಮಾಣ್ಯ ಸಮರ್ಥಕ ಕೃತಿಗಳನ್ನು ಬರೆಯಿಸಿದರು.

ಶ್ರೀವಾದಿರಾಜರು ಪ್ರಾಯಃ ಪ್ರತಿದಿನ ವಿಪ್ರಸ್ವಪ್ನದಲ್ಲಿ ಉಪದೇಶಮಾಡಿದ್ದು, ಆ ಏಡಮೂಕಬ್ರಾಹ್ಮಣನ ಸುಕೃತ ಅಪಾರ. ಶ್ರೀರಾಜರ ಅಮೃತವಾಣಿಯೊಂದಿಗೆ ಅವರ ದಿವ್ಯ ತೇಜೋರೂಪವನ್ನೂ ಕಾಣುತ್ತಿದ್ದ. ಆದ್ದರಿಂದಲೇ, ಶ್ರೀವೇದನಿಧಿತೀರ್ಥರು ಆ ಬ್ರಾಹ್ಮಣನ ವಿಷಯದಲ್ಲಿ ತುಂಬಾ ವಾತ್ಸಲ್ಯವುಳ್ಳವರಾಗಿದ್ದರು. ಎಂದಾದರೊಂದು ದಿನ ಆ ಬ್ರಾಹ್ಮಣ ಧಾವಿಸಿ ಬಂದು ಏನನ್ನೂ ಉಚ್ಚರಿಸದೆ ಇದ್ದರೆ ಗುರುಗಳು ಆತಂಕಗೊಂಡಂತೆ ತೋರುತ್ತಿದ್ದರು. ಮರುಕ್ಷಣ ಎಲ್ಲಾ ಶ್ರೀರಾಜರ ಚಿತ್ತವೆಂದು ಸಮಾಧಾನ. ಅವರಿಗೂ ಒಮ್ಮೆ ಈ ರೀತಿ ಸದಾಶಯಭಾವನೆ ಮನಸ್ಸಿನಲ್ಲಿ ಮೂಡಿತು. ಈ ಬ್ರಾಹ್ಮಣ ಬಹುಪುಣ್ಯವಂತ. ದಿನವೂ ಈತನಿಗೆ ಶ್ರೀವಾದಿರಾಜಗುರುಗಳ ತೇಜೋರೂಪದ ದರ್ಶನ ಹಾಗು ಅಮೃತವಾಣಿಯ ಶ್ರವಣ. ಶ್ರೀರಾಜರು ನನ್ನ ವಿಷಯದಲ್ಲಿಯೂ ಕರುಣಾಮಯಿಗಳಾಗಲಿ ಎಂಬ ಹಂಬಲದಿಂದ ಮನಸಾ ಪ್ರಾರ್ಥಿಸಿದರು. ಆ ವಿಪ್ರನಿಗೆ ದರ್ಶನ ಕೊಟ್ಟು ಉಪದೇಶಿಸುತ್ತಾರೆ ಎನ್ನುವುದಕ್ಕಾಗಿ ಗುರುಗಳಿಗೆ ಎಳ್ಳಷ್ಟೂ ಅಸಮಾಧಾನವಿರಲಿಲ್ಲ. ಅಸೂಯೆ ಪಡಲಿಲ್ಲ. ಬ್ರಾಹ್ಮಣನನ್ನು ಕಂಡರೆ ಅಪಾರ ಸದ್ಭಾವನೆ ಅವರಿಗೆ. ಆ ಬ್ರಾಹ್ಮಣನ ಗುರುಭಕ್ತಿಯೂ ನಿರ್ವ್ಯಾಜವಾದದ್ದು. ಶ್ರೀವೇದನಿಧಿತೀರ್ಥರ ಸದಾಶಯ-ಪ್ರಾರ್ಥನೆ ಫಲಿಸಿತು. ಶ್ರೀರಾಜರೂ ಅವರ ಸ್ವಪ್ನದಲ್ಲೂ ದರ್ಶನವಿತ್ತರು. ವೃಂದಾವನಾಖ್ಯಾನದ ಮಹಿಮಾಮೃತ ಸಾರವನ್ನು ಒಂದೇ ಶ್ಲೋಕದಲ್ಲಿ ಸಂಗ್ರಹಿಸಿ ಉಪದೇಶಿಸಿದರು. ಅದುವೇ

ಅಹಂ ಬ್ರಹ್ಮಾ ಚ ವಾಯುಶ್ಚ ವಿಷ್ಣೂ ರುದ್ರಶ್ಚ ಪಂಚಮಃ ।
ರಮಾಮ ನಿತ್ಯಮೇವಾತ್ರ ಶ್ವೇತದ್ವೀಪೇ ಯಥಾ ವಯಮ್ ॥

ಶ್ರೀರಾಜರ ತೇಜೋರೂಪದರ್ಶನ ಹಾಗೂ ಉಕ್ತಿರತ್ನದ ಶ್ರವಣದಿಂದ ಆನಂದತುಂದಿಲಾದರು. ಇದರೊಂದಿಗೆ ಆಖ್ಯಾನೋಕ್ತಿಗಳನ್ನೇ ಸಂಗ್ರಹಿಸಿ ಅಣುವೃಂದಾವನಾಖ್ಯಾನ ಕೃತಿರಚನೆಗೆ ಆಜ್ಞೆಯೂ ಆಯಿತು. ಶ್ರೀರಾಜರ ವಾಙ್ಮಯ

ಸೇವೆಯು ಅಲಭ್ಯಲಾಭವೆಂದು ಭಾವಿಸಿದರು. ಶ್ರೀರಾಜರ ಸೂಚನೆಯಂತೆ ಬೇರೆ ಬೇರೆ ಅಧ್ಯಾಯದಿಂದ 16 ಶ್ಲೋಕಗಳನ್ನು ಸಂಗ್ರಹಿಸಿ ರಚಿಸಿದರು. ತಾವು ಪ್ರಾರ್ಥನಾಪರ ಎರಡು ಶ್ಲೋಕಗಳನ್ನು ರಚಿಸಿ ಸೇರಿಸಿದರು. ಒಟ್ಟು 18 ಶ್ಲೋಕಗಳುಳ್ಳ ಅಣುವೃಂದಾವನಾಖ್ಯಾನವು ರಚಿತವಾಯಿತು. ಇದು ಆಖ್ಯಾನದಲ್ಲಿಯ ಆದೇಶದಂತೆ ರಚಿತವಾದದ್ದು. ಇದರ ಶಿಲಾಲೇಖಕ್ಕೂ ಆಜ್ಞೆ ಇರುವುದರಿಂದ ಶ್ರೀವೇದನಿಧಿತೀರ್ಥರು ಮಂತ್ರತುಲ್ಯ ಈ ಕೃತಿಯನ್ನು ಶಿಲಾಲೇಖ ಮಾಡಿ ಗುರುಗಳಾದ ಶ್ರೀವೇದವೇದ್ಯರ ವೃಂದಾವನ ಪಕ್ಕದಲ್ಲಿ ಸ್ಥಾಪಿಸಿದರು. ಅಕ್ಷರಾಭಿಮನಿದೇವತೆಗಳ ಹಾಗು ಪ್ರತಿಪಾದ್ಯ ದೇವತಾ ಸನ್ನಿಧಾನ ಜಾಗ್ರತವಾಗಿರುವುದರಿಂದ ಈ ಶಿಲಾಲೇಖಕ್ಕೂ ಅಭಿಷೇಕ ಆರ್ತಿಕ್ಯಾದಿ ಪೂಜೆಯನ್ನು ವಿಧಾನಮಾಡಿದರು. ಇಂದಿಗೂ ಕ್ಲೃಪ್ತವಾದ ಪೂಜಾವಿಧಾನವು ಮುಂದುವರೆದಿದೆ.

ಶ್ರೀವಾದಿರಾಜಗುರುವರಚರಿತಾಮೃತದಲ್ಲಿ -

ಅಣುವೃಂದಾವನಾಖ್ಯಾನಂ ಶ್ರೀವೇದನಿಧಿಸದ್ಗುರುಃ ।
ಸ್ವಾಪ್ನವೃಂದಾವನಾಖ್ಯಾನಾತ್ ಸಂಗೃಹ್ಯಾಲೇಖ್ಯ ಭಕ್ತಿತಃ ॥
ಲೇಖಯಿತ್ವಾ ಶಿಲಾಯಾಂ ಸ ವೃಂದಾವನತಟೇ ಬಹಿಃ ।
ಸ್ಥಾಪಯಾಮಾಸ ಭಕ್ತಾನಾಂ ನಿರಂತರಜಪಾಯ ಚ ॥

ಈ ಕೃತಿಯ ಬಗ್ಗೆ ಈ ರೀತಿ ಹೇಳಲಾಗಿದೆ.

ಸೂತ್ರಭಾಷ್ಯದ ಸಾರಸಂಗ್ರಹ ಅಣುಭಾಷ್ಯ. ಹಾಗೆಯೇ, ಸ್ವಾಪ್ನವೃಂದಾವನಾಖ್ಯಾನದ ಸಾರಸಂಗ್ರಹ ಅಣುವೃಂದಾವನಾಖ್ಯಾನ. ಈ ಸಂಗ್ರಹಕೃತಿಯಲ್ಲಿ ಹೆಚ್ಚಾಗಿ ವೃಂದಾವನಾಖ್ಯಾನದ ಮೊದಲನೆಯ, ಮೂರನೆಯ ಹಾಗು ಹತ್ತನೆಯ ಅಧ್ಯಾಯಗಳಿಂದ ಶ್ಲೋಕಗಳನ್ನು ಆಯ್ದುಕೊಳ್ಳಲಾಗಿದೆ. ಕೆಲವೆಡೆ ಹತ್ತನೆಯ ಅಧ್ಯಾಯದ ಶ್ಲೋಕಗಳಲ್ಲಿನ ಒಂದೆರಡು ಚರಣಗಳನ್ನು ಹಾಗು ಪದಗಳನ್ನು ಹಿಂದು ಮುಂದು ಮಾಡಲಾಗಿದೆ. ಆದರೂ ಆನುಪೂರ್ವಿ ಮತ್ತು ಅನ್ವಯಾರ್ಥವು ಸರಿಯಾಗಿಯೇ ಇದೆ. ಈ ಕೃತಿಯ ಪಠಣವೂ ಕೂಡ ಸಿದ್ಧಿಪ್ರದವೂ, ಜ್ಞಾನಾದಿಸಂಪತ್ ಪ್ರದವೂ ಎಂದು ಅಲ್ಲಿಯೇ ಘೋಷಿಸಲಾಗಿದೆ. ಕಂಠಪಾಠಮಾಡಲು ಹಾಗು ಅಲ್ಪ ಸಮಯದಲ್ಲಿ ಪಠಿಸಲೂ ಹೆಚ್ಚು ಉಪಯುಕ್ತವಾಗಿದೆ. ವೃಂದಾವನಾಖ್ಯಾನದ ಮಹಿಮಾಸಾರವನ್ನು ನಿತ್ಯ ಚಿಂತಿಸಿ ಮನನ ಮಾಡಲು ಉಪಕಾರಿಯಾಗಿದೆ. ಸ್ತೋತ್ರಾತ್ಮಕವಾದ್ದರಿಂದ ಶ್ರೀಹರಿಗುರುಪ್ರಸಾದ ಸಂಪಾದನೆಗೆ ಪ್ರಮುಖ ಸಾಧನವಾಗಿದೆ.

ಶ್ರೀವೇದನಿಧಿತೀರ್ಥರು ತಮಗೆ ಉತದಿಷ್ಟವಾದ 'ಅಹಂ ಬ್ರಹ್ಮಾ ಚ....' ಎಂಬ ಶ್ಲೋಕವನ್ನು ಅಣುವೃಂದಾವನಾಖ್ಯಾನದ ಮಧ್ಯದಲ್ಲಿ ಸೇರಿಸಿ ಕೃತಿಯನ್ನು ರಚಿಸಿದ್ದಾರೆ. ಶ್ರೀರಾಜರ ಚಾರಿತ್ರಿಕ ಗ್ರಂಥ (ವಾ.ಗು.ಚ) ಹಾಗು ಶಿಲಾಲೇಖನ ಈ ಕೃತಿ ನಿರ್ಮಾಣ ಹಾಗು ಪ್ರಾಮಾಣ್ಯ ವಿಷಯದಲ್ಲಿ ಪ್ರಾಮಾಣಿಕ ಆಧಾರವಾಗಿವೆ. ಈ ಮೇಲಿನ ಶ್ಲೋಕ ದ್ವಾರಾ ಅಣುವೃಂದಾವನಾಖ್ಯಾನದ ಪ್ರಾಮಾಣಿಕತೆಯನ್ನು ಮನಗಂಡ ಶ್ರೀವೇಣುಗೋಪಾಲವಿಟ್ಠಲರು ತಮ್ಮಿಂದ ರಚಿತವಾದ ಶ್ರೀರಾಜರಸ್ತುತಿಪರ ಕನ್ನಡ ಕೃತಿಯಲ್ಲಿ ಆ ಶ್ಲೋಕವನ್ನು ಒಂದು ಪದ್ಯದಲ್ಲಿ ಕನ್ನಡೀಕರಿಸಿ ಭಾಷಾಂತರಿಸಿದ್ದಾರೆ. ಶ್ರೀವೇಣುಗೋಪಾಲದಾಸರು ಶ್ರೀವಿಜಯದಾಸರ ಶಿಷ್ಯರಾಗಿ ಸಮಕಾಲಿನರೂ ಹೌದು.

**ಶ್ರೀವೇಣುಗೋಪಾಲದಾಸರಿಂದ ಭಾಷಾಂತರಿತ ಪದ್ಯಭಾಗ :-**

ಮಾರಪಿತ ನೀರಜಾಸನ ತೀವ್ರಗಮನ ಪದ್ಮಾರಿಮೌಳಿಗಳಿಂದ ಸಹಿತರಾಗಿ ।
ಸಾರಶ್ವೇತದ್ವೀಪದೊಳಗಿಪ್ಪ ತೆರನಂತೆ ಧೀರವೃಂದಾವನದಿ ತೋರುವ ನಿರಂತರದಿ ॥

ಆದ್ದರಿಂದ 18 ನೆಯ ಶತಮಾನದ ಆದಿಭಾಗದಲ್ಲಿಯೇ ಈ ಕೃತಿ ಪೂಜೆಗೊಂಡು ಪ್ರಸಿದ್ಧವಾಗಿತ್ತು ಎನ್ನುವಲ್ಲಿ ಯಾವ ಸಂದೇಹವೂ ಇಲ್ಲ.

—o—

# ಅಣುವೃಂದಾವನಾಖ್ಯಾನಮ್

ಹಯಗ್ರೀವಂ ಚಿದಾನಂದವಿಗ್ರಹಂ ಸದನುಗ್ರಹಮ್ ।
ದಶಗ್ರೀವಚ್ಛಿದಂ ಶಾಪಾನ್ಮಣಿಗ್ರೀವವಿಮೋಚನಮ್ ॥ ೧ ॥

ಜ್ಞಾನಾನಂದವಿಗ್ರಹನಾದ ಸಜ್ಜನರಲ್ಲಿ ಅನುಗ್ರಹವನ್ನು ಮಾಡುವ ಹತ್ತುತಲೆಯ ರಾವಣನನ್ನು ಸಂಹರಿಸಿದ, ಶಾಪದಿಂದ ಮಣಿಗ್ರೀವನನ್ನು ಬಿಡುಗಡೆಗೊಳಿಸಿದ ಹಯಗ್ರೀವನನ್ನು ವಂದಿಸುತ್ತೇನೆ.

ಸ್ವನಾಮಗ್ರಹಣಾದೇವ ನಿರಸ್ತಗ್ರಹವಿಗ್ರಹಮ್ ।
ವೃಂದಾವನಗತಂ ವಂದೇ ಬ್ರಹ್ಮರುದ್ರೇಂದ್ರವಂದಿತಮ್ ॥ ೨ ॥

ಹಯಗ್ರೀವ ಎಂಬ ನಾಮಸ್ವೀಕಾರದಿಂದಲೇ ಸಮಸ್ತ ಗ್ರಹಗಳ ಉಪದ್ರವವನ್ನು ನಿರಾಕರಿಸುವ ವೃಂದಾವನದಲ್ಲಿ ಸನ್ನಿಹಿತನಾದ ಬ್ರಹ್ಮ-ರುದ್ರೇಂದ್ರ ವಂದಿತನಾದ ಹಯಗ್ರೀವನನ್ನು ನಮಸ್ಕರಿಸುತ್ತೇನೆ.

ಯೋ ಮಾಂ ದೇವಂ ವಿಜಾನಾತಿ ಋಜುಸ್ಥಂ ಪುಣ್ಯಕೃನ್ನರಃ ।
ಸ ಯಾತಿ ನಿಲಯಂ ಪುಣ್ಯಂ ಯದ್ಗತ್ವಾ ನ ನಿವರ್ತತೇ ॥ ೩ ॥

ಯಾರು ನನ್ನನ್ನು ಋಜುಪಂಕ್ತಿಯಲ್ಲಿ ಇದ್ದೇನೆಂದು ತಿಳಿದುಕೊಳ್ಳುತ್ತಾನೋ ಅಂತಹ ಪುಣ್ಯಾತ್ಮನಾದ ನರನು ಎಂದೂ ತಿರುಗಿಬರದಿರುವ ಪುಣ್ಯತಮವಾದ ವೈಕುಂಠಲೋಕಕ್ಕೆ ಹೋಗುತ್ತಾನೆ.

ವಿಮಾನಂ ದಿವ್ಯಮಾನಂ ಚ ದೀಪ್ಯಮಾನಂ ಸದಾಯನಮ್ ।
ವೃಂದಾವನೋಪರಿಗತಂ ಪೂಜಯಂತು ಸದಾ ಮಮ ॥ ೪ ॥

ಸಾಧಕರಾದವರು ದಿವ್ಯವಾದ ವಿಮಾನದಲ್ಲಿ ಯಾವಾಗಲೂ ಕಂಗೊಳಿಸುವ ವಿಮಾನವನ್ನೇ ಮನೆಯನ್ನಾಗಿ ಮಾಡಿಕೊಂಡಿರುವ ವೃಂದಾವನದ ಮೇಲ್ಭಾಗದಲ್ಲಿರುವ ನನ್ನನ್ನು ಯಾವಾಗಲೂ ಪೂಜಿಸಲಿ.

ಪಂಚವೃಂದಾವನೇ ಪುಣ್ಯೇ ಪಂಚರೂಪಾತ್ಮಕೋ ಹರಿಃ ।
ಪಂಚೀಕೃತ್ಯ ಸ್ವರೂಪಾಣಿ ನಿತ್ಯಂ ಸನ್ನಿಹಿತಃ ಸ್ವಯಮ್ ॥ ೫ ॥

ಪುಣ್ಯತಮವಾದ ಪಂಚವೃಂದಾವನದಲ್ಲಿ ವಾಸುದೇವ, ಸಂಕರ್ಷಣ, ಅನಿರುದ್ಧ, ನಾರಾಯಣನೆಂಬ ಪಂಚರೂಪಾತ್ಮಕವಾದ ಹರಿಯು ತನ್ನ ಸ್ವರೂಪಗಳನ್ನು ಏಕೀಕರಣಮಾಡಿಕೊಂಡು ನಿತ್ಯವು ಸ್ವಯಂ ಸನ್ನಿಹಿತನಾಗಿದ್ದಾನೆ.

**ಅಹಂ ಬ್ರಹ್ಮಾ ಚ ವಾಯುಶ್ಚ ವಿಷ್ಣೂ ರುದ್ರಶ್ಚ ಪಂಚಮಃ ।**
**ರಮಾಮ ನಿತ್ಯಮೇವಾತ್ರ ಶ್ವೇತದ್ವೀಪೇ ಯಥಾ ವಯಮ್ ॥ ೬ ॥**

ನಾನು (ವಾದಿರಾಜರು), ಚತುರ್ಮುಖಬ್ರಹ್ಮದೇವರು, ವಾಯುದೇವರು, ವಿಷ್ಣು ಮಹರುದ್ರ ಈ ಐದು ಮಂದಿ ಶ್ವೇತದ್ವೀಪದಲ್ಲಿ ನಿತ್ಯವೂ ಹೇಗೆ ಕ್ರೀಡಿಸುತ್ತೇವೆಯೋ ಅದರಂತೆ ಈ ಪಂಚವೃಂದಾವನದಲ್ಲಿ ವಿಹರಿಸುತ್ತಿದ್ದೇವೆ.

**ಅಹಂ ಸದಾ ದೇವಸಭಾಸುಭಾಜಿತಃ**
**ಸುಭಾಸ್ವರೈರ್ದಿವ್ಯವಿಭೂಷಣೈರ್ಯುತಃ ।**
**ಅಹಂ ಸಮಾನ್ಯೈಃ ಸುರಮಾನಿಮಾನಿತಃ**
**ಸುಮಾನಯುಕ್ತೈಃ ಸುಮನೋಭಿರಂಜಸಾ ॥ ೭ ॥**

ನಾನು ಯಾವಾಗಲೂ ದೇವತೆಗಳ ಸಭೆಯಲ್ಲಿ ಸಮ್ಮಾನಿತನಾಗುತ್ತಿದ್ದೇನೆ. ಅತ್ಯಂತ ಕಂಗೊಳಿಸುವ ದಿವ್ಯವಾದ ಅಲಂಕಾರದಿಂದ ಕೂಡಿದ್ದೇನೆ. ಅದರಂತೆ ನಾನು ಒಳ್ಳೆಯ ಚಾರಿತ್ರ್ಯಸಂಪನ್ನರಾದ ದೇವತೆಗಳಿಂದ ಯಾವಾಗಲೂ ಸಮ್ಮಾನಿತನಾಗುತ್ತಿದ್ದೇನೆ.

**ಗುರುಮಖಿಲಗುಣಜ್ಞಂ ಸದ್ಗುಣೈಕಾಧಿವಾಸಂ**
**ಶಮದಮಪರಿನಿಷ್ಠಂ ಸತ್ತ್ವನಿಷ್ಠಂ ವರಿಷ್ಠಮ್ ।**
**ಸಕಲಸುಜನಶಿಷ್ಟಂ ನಿತ್ಯನಿರ್ಧೂತಕಷ್ಟಂ**
**ಹಯಮುಖಪದನಿಷ್ಠಂ ಮಾಂ ಭಜಂತು ಪ್ರಪನ್ನಾಃ ॥ ೮ ॥**

ಎಲ್ಲರಿಗೂ ಗುರುವಾದ ಭಗವಂತನ ಅನಂತಗುಣಗಳನ್ನು ತಿಳಿದವನಾದ, ಸದ್ಗುಣಗಳಿಗೆ ಮುಖ್ಯಾಶ್ರಯನಾದ, ಶಮದಮಗಳಲ್ಲಿ ವಿಶೇಷವಾದ ನಿಷ್ಠೆಯನ್ನು ಹೊಂದಿರುವ, ಸತ್ವಗುಣನಿಷ್ಠನಾದ, ವರಿಷ್ಠನಾದ, ಸಕಲಸುಜನಶಿಷ್ಟನಾದ ನಿತ್ಯವೂ ಕಷ್ಟವನ್ನು ಧೂಳಿಪಟವನ್ನಾಗಿ ಮಾಡುವ, ಹಯಗ್ರೀವನ ಪಾದಕಮಲಗಳಲ್ಲಿ ನಿಷ್ಠನಾದ ನನ್ನನ್ನು ಧೀನರಾದ ಭಕ್ತರು ಭಜಿಸಿರಿ.

**ತೀರ್ಥಾನಾಮುತ್ತಮಂ ತೀರ್ಥಂ ವನಾನಾಮುತ್ತಮಂ ವನಮ್ ।**
**ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಮಮ ವೃಂದಾವನಂ ದ್ವಿಜ ॥ ೯ ॥**

ದ್ವಿಜನೇ! ಈ ನನ್ನ ವೃಂದಾವನವು ಎಲ್ಲ ತೀರ್ಥಗಳಿಗಿಂತ ಉತ್ತಮವಾದ ತೀರ್ಥವೆನಿಸಿದೆ. ಎಲ್ಲ ವನಗಳಿಗಿಂತ ಉತ್ತಮವಾದ ವನವೆನಿಸಿದೆ. ಎಲ್ಲ ಕ್ಷೇತ್ರಗಳಿಗಿಂತ ಉತ್ತಮವಾದ ಕ್ಷೇತ್ರವೆನಿಸಿದೆ.

**ತಸ್ಮಾದ್ವೃಂದಾವನಮಿದಂ ಸರ್ವಾಭೀಷ್ಟಪ್ರದಂ ಸತಾಮ್ ।**
**ಪಂಚವೃಂದಾವನೇ ಪುಣ್ಯೇ ಸುಪರ್ವಾಣಶ್ಚ ಸರ್ವದಾ ॥ ೧೦ ॥**

ಆದ್ದರಿಂದ ಈ ವೃಂದಾವನವು ಸಜ್ಜನರಿಗೆ ಅಭೀಷ್ಟಪ್ರದವಾಗಿದೆ. ಪುಣ್ಯಪ್ರದವಾದ ಪಂಚವೃಂದಾವನದಲ್ಲಿ ಎಲ್ಲ ದೇವತೆಗಳು ಯಾವಾಗಲೂ ಸನ್ನಿಹಿತರಾಗಿದ್ದಾರೆ.

**ವಸಂತಿ ಪುಣ್ಯಕರ್ಮಾಣೋ ವಿಶೇಷಾತ್ತೇ ಚ ಪರ್ವಸು ।**
**ಪಂಚಮ್ಯಾಂ ಚ ತಿಥೌ ನಿತ್ಯಂ ಪಂಚಪರ್ವಸು ಪೂಜಯೇತ್ ॥ ೧೧ ॥**

ಪರ್ವಕಾಲದಲ್ಲಿ ಪುಣ್ಯಕರ್ಮನಿಷ್ಠರಾದ ದೇವತೆಗಳು ವಿಶೇಷವಾಗಿ ಸನ್ನಿಹಿತರಾಗಿರುತ್ತಾರೆ. ಪ್ರತೀ ಪಂಚಮೀ ತಿಥಿಯಲ್ಲಿಯೂ ಪಂಚಪರ್ವಗಳಲ್ಲಿ ಈ ವೃಂದಾವನದಲ್ಲಿ ಸನ್ನಿಹಿತನಾದ ನನ್ನನ್ನು ಅಂತರ್ಯಾಮಿಯನ್ನು ಪೂಜಿಸಬೇಕು.

**ಧೂಪೈರ್ದೀಪೈಸ್ತಥಾ ಮಾಲ್ಯೈರ್ಗಂಧೈರ್ದೂರ್ವಾಕ್ಷತಾದಿಭಿಃ ।**
**ಪಂಚಭಕ್ಷ್ಯಸಮಾಯುಕ್ತಂ ಪಂಚಾಮೃತಸಮನ್ವಿತಮ್ ॥ ೧೨ ॥**

ಧೂಪಗಳಿಂದ, ದೀಪಗಳಿಂದ ಹಾಗೆ ಪುಷ್ಪಮಾಲೆಗಳಿಂದ, ಗಂಧಗಳಿಂದ, ಗರಿಕೆ-ಅಕ್ಷತೆ ಮುಂತಾದ ದ್ರವ್ಯಗಳಿಂದ ಪಂಚಭಕ್ಷ್ಯಗಳಿಂದ ಪಂಚಾಮೃತಗಳಿಂದ ಕೂಡಿದ ಪರಿಕರಗಳಿಂದ ಆರಾಧಿಸಬೇಕು.

**ಪಂಚಖರ್ಜೂರಸಂಯುಕ್ತಂ ನೈವೇದ್ಯಂ ವಿನಿವೇದಯೇತ್ ।**
**ಏವಂ ಸಂಪೂಜ್ಯಮಾನೋಽಹಂ ದದ್ಯಾಂ ವರಮನುತ್ತಮ್ ॥ ೧೩ ॥**

ಐದು ಖರ್ಜೂರಗಳಿಂದ ಕೂಡಿದ ನೈವೇದ್ಯವನ್ನು ವಿಶೇಷವಾಗಿ ಸಮರ್ಪಿಸಬೇಕು. ಹೀಗೆ ಪೂಜ್ಯಮಾನನಾದ ನಾನು ಯಾರೂ ನೀಡದ ವರವನ್ನು ನೀಡುತ್ತೇನೆ.

**ತಸ್ಮಾದ್ವೃಂದಾವನೇ ಪುಣ್ಯೇ ಪಂಚಪರ್ವಸು ಪೂಜನಮ್ ।**
**ದರ್ಶನಂ ಸುಜನಾನಾಂ ತು ಸರ್ವಾಘೌಘವಿನಾಶನಮ್ ॥ ೧೪ ॥**

ಆದ್ದರಿಂದ ಪುಣ್ಯತಮವಾದ ವೃಂದಾವನದಲ್ಲಿ ಪಂಚಪರ್ವಗಳಲ್ಲಿ ಪೂಜಿಸುವಿಕೆಯು, ದರ್ಶನಮಾಡುವಿಕೆಯು ಸಜ್ಜನರ ಪಾಲಿಗೆ ಎಲ್ಲ ಪಾಪಗಳಿಗೆ ಪರಿಹಾರಕವಾಗಿದೆ.

ವಾದಿರಾಜಾಖ್ಯಯತಿನಾ ಬ್ರಾಹ್ಮಣಸ್ವಾಪ್ನಮೂರ್ತಿನಾ ।
ಕೃತಂ ವೃಂದಾವನಾಖ್ಯಾನಂ ಪಠತಾಂ ಸಂಪದಾಂ ಪದಮ್ ॥ ೧೫ ॥

ವಾದಿರಾಜನೆಂಬ ಯತಿಯು ಬ್ರಾಹ್ಮಣನ ಸ್ವಪ್ನದಲ್ಲಿ ಬಂದು ಈ ವೃಂದಾವನಾಖ್ಯಾನವನ್ನು ಮಾಡಿದ್ದಾನೆ. ಪಠಿಸುವವರಿಗೆ ಸಂಪತ್ತುಗಳನ್ನು ನೀಡುವ ಕೃತಿಯಾಗಿದೆ.

ವೇದನಿಧ್ಯಾಖ್ಯಯತಿನಾ ವಾದಿರಾಜೇನ ಚೋದಿತಮ್ ।
ಸ್ವಾಪ್ನಂ ವೃಂದಾವನಾಖ್ಯಾನಂ ಲಿಖಿತಂ ಪ್ರೀತಯೇ ಗುರೋಃ ॥ ೧೬ ॥

ವಾದಿರಾಜರಿಂದ ಪ್ರೇರಿತರಾದ ವೇದನಿಧಿಯೆಂಬ ಯತಿಗಳು ಗುರುಗಳ ಪ್ರೀತಿಗೋಸ್ಕರ ಸ್ವಾಪ್ನವೃಂದಾವನಾಖ್ಯಾನವನ್ನು ಬರೆಸಿದ್ದಾರೆ (ಶಿಲಾಲೇಖ ಮಾಡಿದ್ದಾರೆ).

ಮಾತಾ ರಾಜಾ ಮತ್ಪಿತಾ ವಾದಿರಾಜಃ-
ಭ್ರಾತಾರಾಜಾ ಮತ್ಸಖಾ ವಾದಿರಾಜಃ।
ಸರ್ವಸ್ವಂ ಮೇ ವಾದಿರಾಜೋ ದಯಾಲುರ್ನಾನ್ಯ-
ದ್ದೈವಂ ನೈವ ಜಾನೇ ನ ಜಾನೇ ॥ ೧೭ ॥

ವಾದಿರಾಜರು ತಾಯಿಯು, ರಾಜರು ನನ್ನ ತಂದೆಯು. ವಾದಿರಾಜರು ನನ್ನ ಅಣ್ಣನು, ವಾದಿರಾಜರು ನನ್ನ ಸ್ನೇಹಿತರು; ನನ್ನ ಬದುಕಿನ ಸರ್ವಸ್ವ ದಯಾಲುಗಳಾದ ವಾದಿರಾಜರು. ಇವರನ್ನು ಬಿಟ್ಟು ಬೇರೆ ದೈವವನ್ನು ನಾನು ತಿಳಿದಿಲ್ಲ, ತಿಳಿದಿಲ್ಲ.

ಹರಿಭಕ್ತಿದಯಾಂಬೋಧಿತರಲಕ್ರೀಡನೋತ್ಸುಕಾಃ ।
ಗುರವೋ ವಾದಿರಾಜಾರ್ಯಾಃ ಕರುಣಾಂ ವಿತರಂತು ಮೇ ॥ ೧೮ ॥

ಹರಿಭಕ್ತಿಯೆಂಬ ದಯೆಯ ಕಡಲಲ್ಲಿ ವಿಶೇಷವಾಗಿ ಕ್ರೀಡಿಸುವುದರಲ್ಲಿ ಆಸಕ್ತರಾದ ವಾದಿರಾಜಾರ್ಯರೆಂಬ ಗುರುಗಳು ನಿರಂತರವು ನನಗೆ ಕರುಣೆಯನ್ನು ಬೀರಲಿ. ಇಲ್ಲಿಗೆ ವೇದನಿಧಿಗಳಿಂದ ರಚಿಸಲ್ಪಟ್ಟ ಅಣುವೃಂದಾವನಾಖ್ಯಾನವು ಸಂಪೂರ್ಣವಾಯಿತು.

॥ ಇತಿ ಶ್ರೀವೇದನಿಧಿಮುನಿವಿರಚಿತಂ ಅಣುವೃಂದಾವನಾಖ್ಯಾನಂ
ಸಂಪೂರ್ಣಮ್॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಶ್ರೀವಾದಿರಾಜರ ವಾಙ್ಮಯ

## ಶ್ರೀ ವಿಶ್ವೋತ್ತಮತೀರ್ಥರ ಚಿಂತನೆ

**''ತಂ ಮಧ್ವಂ ಮಾರುತಂ ಸರ್ವೇ ಪರಿವಾರತಯಾ ಸದಾ ।**
**ಸಂಸೇವಿತುಂ ಸುರಾ ಭೂಮೌ ಅವತೇರುರಿತಿ ಸ್ಫುಟಮ್ ॥''**

ಎನ್ನುವ ಬ್ರಹ್ಮಾಂಡ ಪುರಾಣೋಕ್ತಿಯಂತೆ ಜಗತ್ತಿಗೆ ನೀಡಿದ ಮೇಲೆ, ಅದನ್ನೆಲ್ಲ ಅನುಸರಿಸಿ ಸೇವಿಸಲು ದೇವಾನುದೇವತೆಗಳೇ ಈ ಧರೆಗೆ ಇಳಿದು ಬಂದರು. ಆಚಾರ್ಯಮಧ್ವರಿಂದ ಪ್ರವರ್ತಿತ ಅನೇಕ ಪರಂಪರೆಗಳಲ್ಲಿ ಪೀಠಾಧಿಪತಿಗಳಾಗಿ ಹಾಗೂ ಗೃಹಸ್ಥಜ್ಞಾನಿವರೇಣ್ಯರಾಗಿ ಸಿದ್ಧಾಂತ ಸೇವೆಗೈಯುತ್ತಾ ಶಿಷ್ಟತತ್ತ್ವದ ಅರಿವು ಹಾಗೂ ಸದಾಚಾರದ ಶ್ರದ್ಧೆ ಸಜ್ಜನರ ಮನಸ್ಸಿನಲ್ಲಿ ಅಂಕುರಿಸಿ ದೃಢವಾಯಿತು. ನಿರ್ದುಷ್ಟ ಅನುಷ್ಠಾನ ಹಾಗು ಬೋಧನೆ ಅವರುಗಳ ತನುತಟ್ಟಿ ಮನಮುಟ್ಟಿತು. ಏತಾದೃಶ ಲೋಕೋತ್ತರ ಸೇವಾಸಾಧನೆಯನ್ನು ಸಾಧಿಸಿದ ಅನೇಕ ಪರಂಪರೆಗಳಲ್ಲಿ 'ವೇದಾಂತ ಗುರುಸೋದರ' ಖ್ಯಾತಿ ವಿಖ್ಯಾತ ಶ್ರೀವಿಷ್ಣುತೀರ್ಥಾಚಾರ್ಯರ ಪರಂಪರೆ ಪ್ರಸಿದ್ಧವಾದದ್ದು. ಈ ಪರಂಪರೆಯ ಮುಕುಟಮಣಿಯಾಗಿ ಅವತರಿಸಿದವರೇ ಲಾತವ್ಯ ಋಜುದೇವತೆಯಾದ ಶ್ರೀವಾದಿರಾಜರು. ಶ್ರೀರಾಜರೆಂದೇ ಪ್ರಸಿದ್ಧರಾದ ಶ್ರೀವಾದಿರಾಜರ ಮಹಿಮೆ ಅಪಾರ.

ಆಚಾರ್ಯ ಮಧ್ವರ ನಂತರ ಸತ್ವ ಹಾಗು ಸಂಖ್ಯೆಯ ದೃಷ್ಟಿಯಿಂದ ಶ್ರೀರಾಜರ ವಾಙ್ಮಯಕೊಡುಗೆ ಅನನ್ಯವಾದದ್ದು. ಯುಕ್ತಿಯು ಸದ್ಯುಕ್ತಿಯಾಗಿ ಸಾರ್ಥಕತೆಯನ್ನು ಕಂಡಿದ್ದು ಶ್ರೀರಾಜರ ಲೇಖನಸಿರಿಯಿಂದ ಎಂದರೆ ಅತಿಶಯೋಕ್ತಿ ಅಲ್ಲ. ಸಾಹಿತ್ಯದ ಸೌಧ ಶ್ರೀಮಂತಗೊಂಡಿದ್ದು ಶ್ರೀವಾದಿರಾಜರ ಕಾವ್ಯ-ಸ್ತೋತ್ರಾದಿ ಕೃತಿರತ್ನಗಳಿಂದ. ದೃಷ್ಟಾಂತವು ಸದ್ಯುಕ್ತಿಯ ಪ್ರಭಾವದಿಂದ ಹೃಷ್ಟವಾಗಿ ಚಿತ್ತಾಕರ್ಷವಾದದ್ದು ಶ್ರೀರಾಜರ ಲೇಖನಸಿರಿಯಿಂದ. ಶಾಸ್ತ್ರಾಭಾವವನ್ನೂ ಕಮನೀಯ ಕಾವ್ಯದ ಭವ್ಯಶ್ರಾವ್ಯ ಶೈಲಿಗೆ ಭಟ್ಟಿ ಇಳಿಸಿ ರಮಣೀಯ ಕೃತಿಗಳನ್ನು ರಚಿಸಿದವರು ಶ್ರೀರಾಜರು. ಇದು ಶ್ರೀವಾದಿರಾಜರ ವಿವೇಚನವೀಥಿ, ರಚನಾರೀತಿ ಎಂದು ಸ್ವತಂತ್ರ ಹಾಗು ಪ್ರತ್ಯೇಕ ಗುರುತಿಸಬಹುದಾದ ಸ್ವಂತಿಕೆ ವಿಶಿಷ್ಟ ಲಕ್ಷಣವಾಗಿ ತೋರುತ್ತದೆ ಅವರ ಕೃತಿಗಳಲ್ಲಿ. ಆದುದರಿಂದಲೇ, ಶ್ರೀರಾಜರ ವಾಗ್ವಿಲಾಸ 'ಶ್ರೀವಾದಿರಾಜವಚೋಽಮೃತಮ್' ಎನ್ನುವ ಪ್ರಶಸ್ತಿಗೆ ಪಾತ್ರವಾದದ್ದು.

ವಾದಿರಾಜಾಖ್ಯಯತಿನಾ ಬ್ರಾಹ್ಮಣಸ್ವಾಪ್ನಮೂರ್ತಿನಾ ।
ಕೃತಂ ವೃಂದಾವನಾಖ್ಯಾನಂ ಪಠತಾಂ ಸಂಪದಾಂ ಪದಮ್ ॥ ೧೫ ॥

ವಾದಿರಾಜನೆಂಬ ಯತಿಯು ಬ್ರಾಹ್ಮಣನ ಸ್ವಪ್ನದಲ್ಲಿ ಬಂದು ಈ ವೃಂದಾವನಾಖ್ಯಾನವನ್ನು ಮಾಡಿದ್ದಾನೆ. ಪಠಿಸುವವರಿಗೆ ಸಂಪತ್ತುಗಳನ್ನು ನೀಡುವ ಕೃತಿಯಾಗಿದೆ.

ವೇದನಿಧ್ಯಾಖ್ಯಯತಿನಾ ವಾದಿರಾಜೇನ ಚೋದಿತಮ್ ।
ಸ್ವಾಪ್ನಂ ವೃಂದಾವನಾಖ್ಯಾನಂ ಲಿಖಿತಂ ಪ್ರೀತಯೇ ಗುರೋಃ ॥ ೧೬ ॥

ವಾದಿರಾಜರಿಂದ ಪ್ರೇರಿತರಾದ ವೇದನಿಧಿಯೆಂಬ ಯತಿಗಳು ಗುರುಗಳ ಪ್ರೀತಿಗೋಸ್ಕರ ಸ್ವಾಪ್ನವೃಂದಾವನಾಖ್ಯಾನವನ್ನು ಬರೆಸಿದ್ದಾರೆ (ಶಿಲಾಲೇಖ ಮಾಡಿದ್ದಾರೆ).

ಮಾತಾ ರಾಜಾ ಮತ್ಪಿತಾ ವಾದಿರಾಜಃ-
ಭ್ರಾತಾರಾಜಾ ಮತ್ಸಖಾ ವಾದಿರಾಜಃ॥
ಸರ್ವಸ್ವಂ ಮೇ ವಾದಿರಾಜೋ ದಯಾಲುರ್ನಾನ್ಯ-
ದ್ದೈವಂ ನೈವ ಜಾನೇ ನ ಜಾನೇ ॥ ೧೭ ॥

ವಾದಿರಾಜರು ತಾಯಿಯು, ರಾಜರು ನನ್ನ ತಂದೆಯು. ವಾದಿರಾಜರು ನನ್ನ ಅಣ್ಣನು, ವಾದಿರಾಜರು ನನ್ನ ಸ್ನೇಹಿತರು; ನನ್ನ ಬದುಕಿನ ಸರ್ವಸ್ವ ದಯಾಲುಗಳಾದ ವಾದಿರಾಜರು. ಇವರನ್ನು ಬಿಟ್ಟು ಬೇರೆ ದೈವವನ್ನು ನಾನು ತಿಳಿದಿಲ್ಲ, ತಿಳಿದಿಲ್ಲ.

ಹರಿಭಕ್ತಿದಯಾಂಬೋಧಿತರಲಕ್ರೀಡನೋತ್ಸುಕಾಃ ।
ಗುರವೋ ವಾದಿರಾಜಾರ್ಯಾಃ ಕರುಣಾಂ ವಿತರಂತು ಮೇ ॥ ೧೮ ॥

ಹರಿಭಕ್ತಿಯೆಂಬ ದಯೆಯ ಕಡಲಲ್ಲಿ ವಿಶೇಷವಾಗಿ ಕ್ರೀಡಿಸುವುದರಲ್ಲಿ ಆಸಕ್ತರಾದ ವಾದಿರಾಜಾರ್ಯರೆಂಬ ಗುರುಗಳು ನಿರಂತರವು ನನಗೆ ಕರುಣೆಯನ್ನು ಬೀರಲಿ. ಇಲ್ಲಿಗೆ ವೇದನಿಧಿಗಳಿಂದ ರಚಿಸಲ್ಪಟ್ಟ ಅಣುವೃಂದಾವನಾಖ್ಯಾನವು ಸಂಪೂರ್ಣವಾಯಿತು.

॥ ಇತಿ ಶ್ರೀವೇದನಿಧಿಮುನಿವಿರಚಿತಂ ಅಣುವೃಂದಾವನಾಖ್ಯಾನಂ
ಸಂಪೂರ್ಣಮ್॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಶ್ರೀವಾದಿರಾಜರ ವಾಙ್ಮಯ

## ಶ್ರೀ ವಿಶ್ವೋತ್ತಮತೀರ್ಥರ ಚಿಂತನೆ

''ತಂ ಮಧ್ವಂ ಮಾರುತಂ ಸರ್ವೇ ಪರಿವಾರತಯಾ ಸದಾ ।
ಸಂಸೇವಿತುಂ ಸುರಾ ಭೂಮೌ ಅವತೇರುರಿತಿ ಸ್ಫುಟಮ್ ॥''

ಎನ್ನುವ ಬ್ರಹ್ಮಾಂಡ ಪುರಾಣೋಕ್ತಿಯಂತೆ ಜಗತ್ತಿಗೆ ನೀಡಿದ ಮೇಲೆ, ಅದನ್ನೆಲ್ಲ ಅನುಸರಿಸಿ ಸೇವಿಸಲು ದೇವಾನುದೇವತೆಗಳೇ ಈ ಧರೆಗೆ ಇಳಿದು ಬಂದರು. ಆಚಾರ್ಯಮಧ್ವರಿಂದ ಪ್ರವರ್ತಿತ ಅನೇಕ ಪರಂಪರೆಗಳಲ್ಲಿ ಪೀಠಾಧಿಪತಿಗಳಾಗಿ ಹಾಗೂ ಗೃಹಸ್ಥಜ್ಞಾನಿವರೇಣ್ಯರಾಗಿ ಸಿದ್ಧಾಂತ ಸೇವೆಗೈಯುತ್ತಾ ಶಿಷ್ಟತತ್ವದ ಅರಿವು ಹಾಗೂ ಸದಾಚಾರದ ಶ್ರದ್ಧೆ ಸಜ್ಜನರ ಮನಸ್ಸಿನಲ್ಲಿ ಅಂಕುರಿಸಿ ದೃಢವಾಯಿತು. ನಿರ್ದುಷ್ಟ ಅನುಷ್ಠಾನ ಹಾಗು ಬೋಧನೆ ಅವರುಗಳ ತನುತಟ್ಟಿ ಮನಮುಟ್ಟಿತು. ಏತಾದೃಶ ಲೋಕೋತ್ತರ ಸೇವಾಸಾಧನೆಯನ್ನು ಸಾಧಿಸಿದ ಅನೇಕ ಪರಂಪರೆಗಳಲ್ಲಿ 'ವೇದಾಂತ ಗುರುಸೋದರ' ಖ್ಯಾತಿ ವಿಖ್ಯಾತ ಶ್ರೀವಿಷ್ಣುತೀರ್ಥಾಚಾರ್ಯರ ಪರಂಪರೆ ಪ್ರಸಿದ್ಧವಾದದ್ದು. ಈ ಪರಂಪರೆಯ ಮುಕುಟಮಣಿಯಾಗಿ ಅವತರಿಸಿದವರೇ ಲಾತವ್ಯ ಋಜುದೇವತೆಯಾದ ಶ್ರೀವಾದಿರಾಜರು. ಶ್ರೀರಾಜರೆಂದೇ ಪ್ರಸಿದ್ಧರಾದ ಶ್ರೀವಾದಿರಾಜರ ಮಹಿಮೆ ಅಪಾರ.

ಆಚಾರ್ಯ ಮಧ್ವರ ನಂತರ ಸತ್ವ ಹಾಗು ಸಂಖ್ಯೆಯ ದೃಷ್ಟಿಯಿಂದ ಶ್ರೀರಾಜರ ವಾಙ್ಮಯಕೊಡುಗೆ ಅನನ್ಯವಾದದ್ದು. ಯುಕ್ತಿಯು ಸದ್ಯುಕ್ತಿಯಾಗಿ ಸಾರ್ಥಕತೆಯನ್ನು ಕಂಡಿದ್ದು ಶ್ರೀರಾಜರ ಲೇಖನಸಿರಿಯಿಂದ ಎಂದರೆ ಅತಿಶಯೋಕ್ತಿ ಅಲ್ಲ. ಸಾಹಿತ್ಯದ ಸೌಧ ಶ್ರೀಮಂತಗೊಂಡಿದ್ದು ಶ್ರೀವಾದಿರಾಜರ ಕಾವ್ಯ-ಸ್ತೋತ್ರಾದಿ ಕೃತಿರತ್ನಗಳಿಂದ. ದೃಷ್ಟಾಂತವು ಸದ್ಯುಕ್ತಿಯ ಪ್ರಭಾವದಿಂದ ಹೃಷ್ಟವಾಗಿ ಚಿತ್ತಾಕರ್ಷವಾದದ್ದು ಶ್ರೀರಾಜರ ಲೇಖನಸಿರಿಯಿಂದ. ಶಾಸ್ತ್ರಾಭಾವವನ್ನೂ ಕಮನೀಯ ಕಾವ್ಯದ ಭವ್ಯಶ್ರಾವ್ಯ ಶೈಲಿಗೆ ಭಟ್ಟಿ ಇಳಿಸಿ ರಮಣೀಯ ಕೃತಿಗಳನ್ನು ರಚಿಸಿದವರು ಶ್ರೀರಾಜರು. ಇದು ಶ್ರೀವಾದಿರಾಜರ ವಿವೇಚನವೀಥಿ, ರಚನಾರೀತಿ ಎಂದು ಸ್ವತಂತ್ರ ಹಾಗು ಪ್ರತ್ಯೇಕ ಗುರುತಿಸಬಹುದಾದ ಸ್ವಂತಿಕೆ ವಿಶಿಷ್ಟ ಲಕ್ಷಣವಾಗಿ ತೋರುತ್ತದೆ ಅವರ ಕೃತಿಗಳಲ್ಲಿ. ಆದುದರಿಂದಲೇ, ಶ್ರೀರಾಜರ ವಾಗ್ವಿಲಾಸ 'ಶ್ರೀವಾದಿರಾಜವಚೋಽಮೃತಮ್' ಎನ್ನುವ ಪ್ರಶಸ್ತಿಗೆ ಪಾತ್ರವಾದದ್ದು.

'ಸವಿನೋದಂ ಸಾಟ್ಟಹಾಸಂ ಸಸ್ಮಿತಂ ಸುಸ್ವರಾನ್ವಿತಮ್ ।
ಸರಹಸ್ಯಂ ಸಪ್ರಮಾಣಂ ವಾದಿರಾಜವಚೋಽಮೃತಮ್ ॥

........ ವಾಗೀಶ್ವರೇಶಕಾರುಣ್ಯವಾರ್ಧಿಜಾತಂ ಸುಕೋಮಲಮ್ ।
ನಿರ್ದುಷ್ಟಂ ರಸವತ್ ಸ್ಪಷ್ಟಂ ನಾನಂದಯತಿ ಕಂ ಜನಮ್ ॥

ಶ್ರೀವಾದಿರಾಜರ ವಾಗ್ವಿಲಾಸಾಮೃತದ ಸವಿಯನ್ನು ಸವಿದು 'ವಾದಿರಾಟ್ ಪ್ರಿಯ' ಮಹಿಮಾಮಹಿತರಾದವರು ಶ್ರೀಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದರು. ಪೂಜ್ಯರು ಶ್ರೀರಾಜರ ಪರಂಪರೆಯ ಪೀಠಾಧಿಪತಿಗಳಾಗಿ ಕಳೆದ ಶತಮಾನದ ಉತ್ತರಾರ್ಧ ಹಾಗು ಈ ಶತಮಾನದ ಆರಂಭದ ಹಲವು ವರುಷ ಮಹಿಮಾನ್ವಿತರಾಗಿ ಮೆರೆದವರು, ಶ್ರೀವಿಶ್ವೋತ್ತಮತೀರ್ಥರು ಯತ್ಯಾಶ್ರಮ ನಿಷ್ಠೆಯ ನಿಷ್ಠಾವಂತ ಹಾಗು ಶಿಸ್ತಿನ ಸರದಾರ; ಸಿದ್ಧಾಂತ ದೀಕ್ಷಾಸಂಪನ್ನಸೇನಾನಿ; ಮಾನಸಿದ್ಧ ಪ್ರಮೇಯವನ್ನು ಚಿಂತನಗೈದ ಮನನಶೀಲಮುನಿ. ಅವರದು ಸಾರಾಸಾರ ವಿವೇಚನೆಯ ವಿವೇಕ; ಧರ್ಮಾಧರ್ಮದ ಸೂಕ್ಷ್ಮದ ಅರಿವು. ಶ್ರೀಗಳವರು ಪ್ರಕಾಂಡಪಂಡಿತರೂ, ಮಹಾತಪಸ್ವಿಗಳೂ ಆಗಿದ್ದ ಕಾಣಿಯೂರು ಮಠದ ಶ್ರೀವಿದ್ಯಾಸಮುದ್ರತೀರ್ಥರಲ್ಲಿ ವೇದಾಂತಾದಿ ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಅಧ್ಯಯನಕಾಲದಲ್ಲಿ ಬಂದಿದ್ದ ಅಭಿನವವಿದ್ಯಾರಣ್ಯ ಪಂಡಿತ ಅನಂತಕೃಷ್ಣ ಶಾಸ್ತ್ರಿಗಳು, ಇವರ ವಿಷಯಗ್ರಹಣ ಹಾಗು ಮೇಧಾಶಕ್ತಿಯನ್ನು ಕಂಡು ಬೆರಗಾದರು. ಶ್ರೀಗಳವರ ಅನನ್ಯ ಏಕಾಗ್ರತೆ, ಅನಿತರ ಮೇಧಾಶಕ್ತಿ, ಮನನಶೀಲತೆ ಹಾಗು ಪ್ರತಿಭಾನ್ವಿತ ವರ್ಚಸ್ಸು ಮೊದಲಾದ ಗುಣಾಂಶಗಳನ್ನು ಕಂಡು ಗುರುಗಳು ಆನಂದ ತುಂದಿಲರಾದರು. ಪೂಜ್ಯ ಶ್ರೀಗಳವರಿಗೆ ಏಕಾಂತ ಬಲುಪ್ರೀತಿಕರ. ಅದು ಶ್ರೀಕಾಂತನ ಅನುಗ್ರಹವನ್ನು ಕರುಣಿಸುವ ಸಿದ್ಧಾಂತಕೃತಿರತ್ನಗಳನ್ನು ಅವಲೋಕಿಸಿ ಮನನ ಮಾಡಲು. ಯಾವಾಗಲೂ ಗ್ರಂಥಾವಲೋಕನ, ಹಸ್ತಪ್ರತಿಗಳನ್ನು ಸಂಗ್ರಹಿಸುವ ಹಂಬಲ. ಪೂಜ್ಯ ಶ್ರೀಗಳವರಿಗೆ ಸೂತ್ರಭಾಷ್ಯ, ಯುಕ್ತಿಮಲ್ಲಿಕಾ, ನ್ಯಾಯಸುಧಾ, ಪರಿಮಳ, ಗೀತಾವಿವೃತ್ತಿ, ತಾತ್ಪರ್ಯನಿರ್ಣಯ, ರುಗ್ಮಿಣೀಶವಿಜಯ, ಸರಸಭಾರತೀವಿಲಾಸ, ಲಕ್ಷ್ಮೀಶೋಭಾನೆ, ವೈಕುಂಠವರ್ಣನೆ, ಸ್ವಪ್ನಪದ, ಉಪನಿಷದ್ ವ್ಯಾಖ್ಯಾನ, ಭಾಗವತ ಮೊದಲಾದ ಗ್ರಂಥಗಳ ಕ್ಲೃಪ್ತಿ ಅಗಾಧವಾಗಿತ್ತು. ಅನೇಕ ಕೋಶ ಹಾಗು ನಿರ್ವಚನ ವಿವರಣೆ ಅನನ್ಯ. ಹರಿಕಥಾಮೃತಸಾರಾದಿ ಕೃತಿಗಳ ಪ್ರಮೇಯವೂ ಹೃದ್ಗತವಾಗಿತ್ತು. ಗೀತಾವಿವೃತ್ತಿಯ ಅಪೂರ್ವ ವ್ಯಾಕರಣ ಹಾಗು ನಿರ್ವಚನ ವಿಶೇಷಗಳನ್ನು ಪುಸ್ತಕ ನಿರಪೇಕ್ಷ ಉಲ್ಲೇಖಿಸುತ್ತಿದ್ದರು. ಅವರ ವಿಮರ್ಶೆ ಹಾಗು ವಿವೇಚನಾತ್ಮಕ ಪಾಠಹೇಳುವ ಶೈಲಿಯು ಅಡೆತಡೆಯಿಲ್ಲದ್ದು ಮತ್ತು ವಿಚಾರ ಮಂಥನಕ್ಕೆ ಮಾಧ್ಯಮವಾದದ್ದು. ಶಾಸ್ತ್ರಾಧ್ಯಯನ ಸಂಪನ್ನರಾದ ಪೂಜ್ಯ ಶ್ರೀಗಳವರು ಶ್ರೀಕೃಷ್ಣಾಪುರಮಠದ ಶ್ರೀವಿದ್ಯಾಸಾಗರತೀರ್ಥ

ಶ್ರೀಗಳವರಿಗೆ ಹಾಗು ಇತರರಿಗೆ ಸುಧಾಂತವೇದಾಂತಾದಿ ಶಾಸ್ತ್ರಪಾಠ ಹೇಳಿದ್ದಾರೆ. ಶ್ರೀಗಳವರ ಬೋಧನಾಕ್ರಮವು ಅಪ್ರತಿಮ ಹಾಗು ಅನ್ಯಾದೃಶ. ಪ್ರತ್ಯಕ್ಷರ ಪ್ರತಿಪದವನ್ನು ಬಿಡಿಸಿ ಭಾವಗರ್ಭಿತ ಆಕೂತಾರ್ಥವನ್ನು ಹೇಳುವುದು ಅವರಿಗೆ ಕರಗತ. ಇತರ ಗ್ರಂಥಸ್ಥ ಪೂರಕ ಪ್ರಮಾಣೋಕ್ತಿಗಳನ್ನು ಪುಂಖಾನುಪುಂಖವಾಗಿ ಉಲ್ಲೇಖಿಸುವ ವೈಖರಿಯಂತೂ ವರ್ಣನಾತೀತ. ಪೂಜ್ಯ ಶ್ರೀಗಳವರಿಗೆ ಶ್ರೀಹರಿಗುರು ಅನುಗ್ರಹದಿಂದ ಅನೇಕ ಶಾಸ್ತ್ರಗಳ ಹಾಗು ಕಲೆಗಳ ಸಂಬಂಧಿಜ್ಞಾನ ಅಗಾಧವಾಗಿತ್ತು. ವೇದಾಂತ, ಸಾಹಿತ್ಯ, ಸಾಹಿತ್ಯಶಾಸ್ತ್ರ ಸಂಗೀತ, ಆಯುರ್ವೇದ, ಹೋಮಿಯೋಪಥಿ, ಅಲೋಪಥಿ, ಶಿಲ್ಪ, ಯೋಗ, ಧರ್ಮಶಾಸ್ತ್ರ ಮುಂತಾದವುಗಳಲ್ಲಿ ಪ್ರಗಲ್ಭಪಾಂಡಿತ್ಯವಿತ್ತು. ಶ್ರೀಗಳವರು ಪ್ರಾಸಂಗಿಕವಾಗಿ ಆಯಾಶಾಸ್ತ್ರಸಮ್ಬಂಧಿ ಜಿಜ್ಞಾಸೆಯನ್ನು ಗ್ರಂಥನಿರಪೇಕ್ಷ ಮಾಡುತ್ತಿದ್ದರು. ಶಾಸ್ತ್ರಸಂಬಂಧಿ ಹಸ್ತಪ್ರತಿ ಹಾಗು ಮುದ್ರಿತ ಗ್ರಂಥಗಳ ಉಪಲಬ್ಧತೆ ಬಗ್ಗೆ ಮಾಹಿತಿಯನ್ನು ಮೌಖಿಕವಾಗಿ ಅಧಿಕೃತ ನೀಡುತ್ತಿದ್ದರು. ಅನೇಕ ರೋಗರುಜಿನಗಳ ಬಗ್ಗೆ ಶಾಸ್ತ್ರಜ್ಞರಂತೆಯೇ ಪರಿಹಾರ ಹೇಳುತ್ತಿದ್ದರು. ಸುಪ್ರಸಿದ್ಧ ಹೆಸರಾಂತ ಸಂಗೀತಗಾರ **ಆರ್.ಕೆ. ಪದ್ಮನಾಭನ್** ಪೂಜ್ಯಶ್ರೀಗಳವರ ಸಂಗೀತಶಾಸ್ತ್ರಜ್ಞಾನಕ್ಕೆ ತಲೆದೂಗಿ ನತಮಸ್ತಕರಾದರು. ಇಂದಿಗೂ ಶ್ರೀಗಳವರ ಬಗ್ಗೆ ಅಪಾರ ಗೌರವವುಳ್ಳವರು. ಮಂಗಳೂರಿನ ಮಣಿಪಾಲ ವೈದ್ಯಕೀಯ ಮಹಾವಿದ್ಯಾಲಯ ಹಾಗು ಆಸ್ಪತ್ರೆಯ ಹಿರಿಯ ಪ್ರಾಧ್ಯಾಪಕರೊಬ್ಬರು **'ಜೀನ್ಸ್‌ತಂತ್ರಜ್ಞಾನ'**ದ ಬಗ್ಗೆ ಶ್ರೀಗಳವರಿಗಿದ್ದ ಕೂಲಂಕುಷ ಅರಿವನ್ನು ಕೇಳಿ ಆಶ್ಚರ್ಯಪಟ್ಟು, ಪೂಜ್ಯರ ದರ್ಶನ ಪಡೆದು ಧನ್ಯರಾದರು. ಮೈಸೂರಿನ **ಡಾ|| ವಿಜಯೀಂದ್ರಮೂರ್ತಿಯವರು** ಶ್ರೀಗಳವರ ಆಯುರ್ವೇದ ಶಾಸ್ತ್ರಜ್ಞಾನವನ್ನು ಕಂಡು ಬೆರಗಾಗಿದ್ದಾರೆ. ಹಾಗೆಯೇ ಬೆಳಗಾವಿಯ **ಡಾ|| ಬಿ.ಎಚ್. ಯಲಬುರ್ಗಿಯವರು** ಶ್ರೀಗಳವರನ್ನು ಸಂಧಿಸಿ ಆಶ್ಚರ್ಯಪಟ್ಟಿದ್ದಾರೆ.

ಅನೇಕ ಮಹಾಕಾವ್ಯಗತ ರಮಣೀಯೋಕ್ತಿಗಳ ಉಲ್ಲೇಖ ಸರಾಗವಾಗಿ ಸಾಗುತ್ತಿತ್ತು. ಸಾಹಿತ್ಯಶಾಸ್ತ್ರದ ದಂಡಿಯ ಕಾವ್ಯಾದರ್ಶ, ಆನಂದವರ್ಧನನ ಧ್ವನ್ಯಾಲೋಕ ಹಾಗು ಕುಂತಕನ ವಕ್ರೋಕ್ತಿಜೀವಿತ ಅವರಿಗೆ ಇಷ್ಟವಾದ ವಿಮರ್ಶಾತ್ಮಕ ಕೃತಿಗಳು. ಅದರಲ್ಲಿಯೂ ಭಾಷೆಯ ಸರಳತೆ ಹಾಗು ನೇರಜಿಜ್ಞಾಸೆ - ವಿಮರ್ಶೆಯುಳ್ಳ **'ವಕ್ರೋಕ್ತಿಜೀವಿತ'** ಕೃತಿಯು ಶ್ರೀಗಳವರಿಗೆ ಬಹಳ ಮೆಚ್ಚುಗೆಯಾದ ಕೃತಿಯಾಗಿತ್ತು. ಅನೇಕ ಸಲ ಆ ಕೃತಿಯ **'ಕವಿಪ್ರತಿಭಾಯಾ ಆನಂತ್ಯಾತ್ ತನ್ನಿಯತತ್ವಂ ನ ಸಂಭವತಿ'** ಎನ್ನುವ ಪಂಕ್ತಿಯನ್ನು ಉಲ್ಲೇಖಿಸಿ ಶ್ರೀರಾಜರ **'ರುಕ್ಮಿಣೀಶವಿಜಯ'**ಕ್ಕೆ ಅನ್ವಯವಾದುದನ್ನು ತೋರಿಸುತ್ತಿದ್ದರು. ಯೋಗದ ಬಗ್ಗೆ ನಿಖರವಾದ ಅರಿವು ಶ್ರೀಗಳವರಿಗೆ ಅಗಾಧವಾಗಿತ್ತು. ಹೀಗೆ ಸತತ ಅಧ್ಯಯನ-ಮನನಾದಿಜನ್ಯ ಜ್ಞಾನಸಂಪತ್ತು ಅನುಗ್ರಹೀತರೂಪತಾಳಿತ್ತು ಪೂಜ್ಯ ಶ್ರೀಗಳವರಲ್ಲಿ.

ಶ್ರೀರಾಜರ ಕೃತಿಗಳ ವಿಷಯದಲ್ಲಂತೂ ಪೂಜ್ಯ ಶ್ರೀಗಳವರಿಗೆ ಅಪಾರ ಗೌರವ. ಕೃತಿಗಳ ಬಗ್ಗೆ ಮಾತನಾಡುವಾಗ ಬಹು ಆದರದ ಜಾಗ್ರತೆ. ಶ್ರೀಗುರುರಾಜಕೃತಿಗಳೆಲ್ಲ ಅವರಂತೆ ನಿರ್ದೋಷಕೃತಿಗಳೆಂದು ಭಾವಿಸಿದ್ದರು. ಅವರ ಸನ್ನಿಧಾನಯುತವೆಂದೂ ಅರಿತಿದ್ದರು. ಕೃತಿಗಳ ಅವಲೋಕನ, ಅಧ್ಯಯನಾದಿಗಳಿಂದ ಕೃತಿಕರ್ತೃವಿನ ಮಹಿಮೆಯನ್ನೂ ಅರಿಯಬೇಕೆನ್ನುವ ಅನಿಸಿಕೆ ಹಾಗು ಅಭಿಪ್ರಾಯ ಅವರದಾಗಿತ್ತು. ಆಚಾರ್ಯ ಮಧ್ವರಂತೆ ಸರ್ವಜ್ಞಗುರುಗಳಾದ ಶ್ರೀವಾದಿರಾಜ ಕೃತಿಗಳೆಲ್ಲ ಅನವದ್ಯ ಮತ್ತು ಬಹ್ವರ್ಥಗರ್ಭಿತ. ಆದ್ದರಿಂದಲೇ, ಪೂಜ್ಯ ಶ್ರೀಗಳವರು ಪ್ರತಿಪದವನ್ನೂ ವಿಶೇಷ ಮನನಮಾಡುತ್ತ ಆಕೂತಾರ್ಥ ಅರಿಯುತ್ತಿದ್ದರು. ತೀರ್ಥಪ್ರಬಂಧದ 'ಶಬ್ದಾಲಂಕಾರಬದ್ಧಂ ಶಮಲಕುಲ-ಬಹುಶ್ಲಾಘನೀಯಾರ್ಥಹೃದ್ಯಮ್' ರುಕ್ಮಿಣೀಶವಿಜಯದ 'ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ' ಮತ್ತು ಸರಸಭಾರತೀವಿಲಾಸದ 'ಚಾರ್ವಪೂರ್ವಪದಶ್ರೇಣೀಮ್.....' ಈ ಪಂಕ್ತಿಗಳನ್ನು ಉಲ್ಲೇಖಿಸುತ್ತ ಇವೆಲ್ಲ ಸತ್ಕಾವ್ಯದ ವಿಶಿಷ್ಟ ಲಕ್ಷಣೋಕ್ತಿಗಳೆಂದು ಅರುಹುತ್ತಿದ್ದರು. ರುಕ್ಮಿಣೀಶವಿಜಯದ 'ಕೃಷ್ಣಸ್ಯೋದಯವರ್ಣನೈಃ..' ಎಂಬ 19ನೇ ಸರ್ಗದ ಶ್ಲೋಕವು ಕಾವ್ಯಕೃತಿಯ ಲಕ್ಷಣ ಪ್ರಕಾರವನ್ನು ತುಲನಾತ್ಮಕವಾಗಿ ವರ್ಣಿಸುವ ಉಕ್ತಿ ಎಂದು ಹೇಳುತ್ತಿದ್ದರು. ಶ್ರೀಸ್ವಾಪ್ನವೃಂದಾವನಾಖ್ಯಾನದಲ್ಲಿಯ ಉಪದಿಷ್ಟಮಹಾತ್ಮರ, ಶೌಂಡ ಪದ್ಯಗಳ, ವಿಭಿನ್ನ ಪ್ರಕರಣಗಳ ಹಾಗು ಸಂಗತಿಗಳ ಹಿನ್ನೆಲೆ ಹಾಗು ಮಹತ್ವವನ್ನು ಚೆನ್ನಾಗಿ ಅರಿತಿದ್ದರು. ಆಖ್ಯಾನದಲ್ಲಿ ಜನ್ಮ ಜನ್ಮಾಂತರಕ್ಕೆ ಸಂಬಂಧಿಸಿದ ಘಟನೆಗಳನ್ನು ಪ್ರಕರಣಾನಂತರ ಮತ್ತು ಅಧ್ಯಾಯಾಂತರ ಪ್ರಮಾಣೋಕ್ತಿಗಳಿಂದ ತಿಳಿಸುತ್ತಿದ್ದರು. ಇಲ್ಲಿಯ ನಿಪಾತಗಳನ್ನು ಸಾಂದರ್ಭಿಕ ಅರ್ಥೈಸುವ ರೀತಿಯು ಅಸದೃಶವಾಗಿತ್ತು. ಅದೇ ಸಂದರ್ಭದಲ್ಲಿ ಲಕ್ಷಾಲಂಕಾರ ಹಾಗು ಸನತ್ಸುಜಾತೀಯ ಭಾಷ್ಯಕೃತಿಗಳಲ್ಲಿಯ ವಿವರಣೆಯನ್ನು ಉದಾಹರಣೆಯಾಗಿ ಕೊಡುತ್ತಿದ್ದರು.

ಶ್ರೀವಾದಿರಾಜರ ಯುಕ್ತಿಮಲ್ಲಿಕಾ ಕೃತಿಯಂತೂ ಪೂಜ್ಯ ಶ್ರೀವಿಶ್ವೋತ್ತಮತೀರ್ಥರಿಗೆ ಸರ್ವಸ್ವ. ಆಚಾರ್ಯ ಮಧ್ವರ ಅನುವ್ಯಾಖ್ಯಾನದಂತೆ ಗೌರವಿಸುತ್ತಿದ್ದರು ಅವರು. 'ಹೃದ್ಯಪದ್ಯರಸಸ್ನಿಗ್ಧಾಂ....' ಇತ್ಯಾದಿ ಉಕ್ತಿರತ್ನಗಳನ್ನು ಉಲ್ಲೇಖಿಸುತ್ತ ವೇದಾಂತದ ಪ್ರೌಢವಾದ ಕ್ರಮ ಈ ಕೃತಿಯಲ್ಲಿ ಕಮನೀಯಪಾಕಶೈಲಿಯಲ್ಲಿ ವಿಜೃಂಭಿಸಿದೆ. ಓದುಗರಿಗೆ ರಮಣೀಯ ಸಾಹಿತ್ಯ ಕೃತಿಯ ಅಧ್ಯಯನದ ಅನುಭವವನ್ನು ನೀಡುತ್ತದೆ. ಇದರಲ್ಲಿಯ ವಾದ ಪ್ರೌಢಿಮೆ ಉತ್ತುಂಗಶಿಖರಾಗ್ರಗಾಮಿ ಹಾಗು ಸಾಗರದಂತೆ ಅಗಾಧವಾದದ್ದು. ಶ್ರೀರಾಜರು ಕೊಡತಕ್ಕ ದೃಷ್ಟಾಂತ ಸರ್ವಾನುಭವ ಸಿದ್ಧನೆಲೆಯುಳ್ಳದ್ದು. ಅವರ ಯುಕ್ತಿ ಅಪ್ರತಿಹತ ಹಾಗು ಪ್ರಮಾಣಾಂತರ ಪುರಸ್ಕೃತ. ಶ್ರೀರಾಜರು ಕೊಡತಕ್ಕ ದೃಷ್ಟಾಂತದಿಂದ ಯುಕ್ತಿಯ ಔಚಿತ್ಯ, ನಿರ್ದುಷ್ಟತಾ ಹಾಗು ಅನ್ವಯತೆ ಸಾಧಿತವಾದರೆ ಯುಕ್ತಿಯು

ದೃಷ್ಟಾಂತದ ಸಾರ್ವಕಾಲಿಕ ಸತ್ಯತೆಯನ್ನು ಸಾಧಿಸುವಂತಿದೆ ಎಂಬುದು ಪೂಜ್ಯರ ಅಭಿಪ್ರಾಯ. ಯುಕ್ತಿಮಲ್ಲಿಕಾದಲ್ಲಿಯ ಪರವಾದಿಗಳ ಪ್ರಮಾಣವಿಮರ್ಶೆ, ಪ್ರಮೇಯ ವಿಮರ್ಶೆ ಅನನ್ಯವಾದದ್ದು. ಪ್ರಮಾಣಾಂತರ ಮೀಮಾಂಸೆ, ಇತಿಹಾಸ ಪುರಾಣ, ಸ್ಮೃತ್ಯಾದಿ ಉಕ್ತಿಗಳ ತಾತ್ಪರ್ಯ ವಿವೇಚನೆ, ಸಂಕ್ಷೇಪ-ವಿಸ್ತೃತ ವಿವರಣೆ, ಶ್ರುತಿ ಭಾಗಗಳ ಅಪೂರ್ವ ವ್ಯಾಖ್ಯಾನ ಮುಂತಾದದ್ದು ಅನುಪಮವಾದುದು. ಯುಕ್ತಿಮಲ್ಲಿಕಾದಲ್ಲಿ ಭಾವಬಂಧುರ ಪ್ರಾರ್ಥನಾ ಹಾಗು ಸ್ತುತಿಪರ ಉಕ್ತಿಗಳೂ ಹೇರಳ.

ಪೂಜ್ಯ ಶ್ರೀಗಳವರ ನಾಲ್ಕನೆಯ ಪರ್ಯಾಯ 1996-98. ಪರ್ಯಾಯ ಆರಂಭವಾದ ಮೇಲೆ ಶ್ರೀಗಳವರು ಯುಕ್ತಿಮಲ್ಲಿಕಾ ಪಾಠ ಪ್ರಾರಂಭಿಸಿದರು. ಮಧ್ಯಾಹ್ನ 3 ರಿಂದ 5 ಗಂಟೆಯವರೆಗೆ ಜರುಗುತ್ತಿತ್ತು. ಪೂಜ್ಯ ಶ್ರೀಕೃಷ್ಣಾಪುರ ಶ್ರೀಗಳು, ಶ್ರೀಗುರುರಾಜ ಪುರಾಣಿಕ, ಶ್ರೀರಾಘವೇಂದ್ರ ಪುರಾಣಿಕ, ಎಸ್.ಕೆ. ಆಚಾರ್ ಮುಂತಾದವರು ಇರುತ್ತಿದ್ದರು. ಶ್ರೀಗೋಪಾಲಕೃಷ್ಣ ಉಪಾಧ್ಯೆ ಅವಕಾಶವಿದ್ದಾಗ ಬರುತ್ತಿದ್ದರು. ನಾನೂ ಕೂಡ ಮಹಾವಿದ್ಯಾಲಯಕ್ಕೆ ವಾರ್ಷಿಕ ರಜೆಯಿದ್ದಾಗ ಹಾಗು ಪ್ರವಚನಕ್ಕೆ ಹೋದಾಗ ತಪ್ಪದೆ ಹಾಜರಾಗುತ್ತಿದ್ದೆ. ಆರಂಭದಲ್ಲಿ ಇದ್ದೆ. ಶ್ರೀಗಳವರು ಶ್ರೀರಾಜರ ಹಾಗು ಕೃತಿರತ್ನದ ಹಿರಿಮೆಯ ಬಗ್ಗೆ ಆರಂಭದಲ್ಲಿ ಬಹುಸೊಗಸಾಗಿ ಹೇಳಿದರು. ಪಾಠಕ್ಕಾಗಿ ಹಸ್ತಲಿಖಿತ ಪ್ರತಿಯನ್ನೇ ಇಟ್ಟುಕೊಂಡಿದ್ದರು. ಆದರೆ, ಆಗೊಮ್ಮೆ, ಈಗೊಮ್ಮೆ ನೋಡುತ್ತಿದ್ದರು. ಟಿಪ್ಪಣಿ ಸಹಿತ ಮೂಲ ಮುಖೋದ್ಗತ. ಟಿಪ್ಪಣಿ ಮಂಗಲಾಚರಣ ಭಾಗ ಹೇಳಿ ಶ್ರೀರಾಜರ ಉಕ್ತಿಚಾತುರ್ಯದ ಬಗ್ಗೆ ಶ್ರೀಸುರೋತ್ತಮತೀರ್ಥರ ಅಭಿಪ್ರಾಯ.... **ಜಯಮುನೀನಪಿ ವಾದಿರಾಜಗುರೂನ್ನತ್ವಾ...** ಎಂಬಲ್ಲಿಯ **ಅಪಿ** ಮತ್ತು **ವಾದಿರಾಜಗುರು** ಪದಗಳ ಸದಾಶಯವನ್ನು ಅರುಹಿದರು.

**'ಭಕ್ತ್ಯಾಸ್ತುತ್ಯಾ ವಿರಕ್ತ್ಯಾ....'** ಎನ್ನುವ ಮಂಗಲಾಚರಣದ ತಾತ್ಪರ್ಯವನ್ನು ಟಿಪ್ಪಣಿಗನುಗುಣ ಹೇಳಿ, ಅಂತಿಮ ಚರಣವು ಸ್ವಾಪ್ನೋಕ್ತಿ ಎನ್ನುವುದರ ಮಹತ್ವ ತಿಳಿಸಿದರು. ಪುನಃ ಮೊದಲನೆಯ ಚರಣವನ್ನು ಹೇಳುತ್ತ ಶ್ರೀಹಯಗ್ರೀವದೇವರು ಸಕಲ ಋಜುದೇವತೆಗಳಿಗೆ ವೇದಾದಿಶಾಸ್ತ್ರ ಉಪದೇಶಿಸಿ ನಿರ್ವಿಘ್ನ ನಿಯತಸಾಧನ ಮಾಡಿಸಿ ಯೋಗ್ಯವಾದ ಪದನಿಮಿತ್ತಕ ವೈಭವವನ್ನು ಹೇಗೆ ಕರುಣಿಸುತ್ತಾನೆಂದು ವಿವರಿಸಿ ವೃಂದಾವನಾಖ್ಯಾನ 22ನೆಯ ಅಧ್ಯಾಯದ **'ಮಮಾಪಿ ಪಾದಸೇವಯಾ ದಧಾತಿ ಯೋಗ್ಯ ವೈಭವಮ್....'** ಎಂಬುದನ್ನು ಉಲ್ಲೇಖಿಸಿ ಸಂತೋಷಪಡಿಸಿದರು. ಮೂರನೆಯ ಚರಣದಲ್ಲಿರುವ '..... ಅಮುತ್ರಪಾತ್ರೇ ನಮಸ್ತೇ....' ಎನ್ನುವುದರ ಭಾವವನ್ನು ವಿವರಿಸುವಾಗ ಶ್ರೀಮಧ್ವಾಚಾರ್ಯರಂತೆ ಶ್ರೀವಾದಿರಾಜರಿಗೂ ಶ್ರೀಹಯವದನ ಪ್ರತ್ಯಕ್ಷ ನಿತ್ಯವೆಂದೂ, ಶ್ರೀಮಧ್ವರಂತೆ ಎದುರಿನಲ್ಲಿ ದೇವನನ್ನು ಕಾಣುತ್ತ ನಮಸ್ಕರಿಸಿ ಕೃತಿರಚನೆ

ಮಾಡಿದ್ದಾರೆಂದೂ ವಿವರಿಸಿದರು. ಇದಕ್ಕೆ ಪೂರಕವಾಗಿ ಮಹಾಭಾರತ ತಾತ್ಪರ್ಯ ನಿರ್ಣಯದ ಶ್ರೀರಾಜರ ಭಾವಪ್ರಕಾಶಿಕಾ ವ್ಯಾಖ್ಯಾನದ ಭಾಗವನ್ನು. '**ಸ್ವೇನ ಅಪರೋಕ್ಷೀಕೃತಾಯ ಏವ ನಾರಾಯಣಾಯ ವಂದನಮಿದಂ ನತು ಅನ್ಯವತ್ ಪರೋಕ್ಷೀಕೃತಾಯ ಇತಿ ಸೂಚನಾಯ ತೇ ನಮ ಇತ್ಯುಕ್ತಮ್ ।**' ಮುಖೋದ್ಗತ ಉಲ್ಲೇಖಿಸಿ ಶ್ರೀಮಧ್ವಸಾಮ್ಯವನ್ನು ಶ್ರೀರಾಜರಿಗೆ ಸಮರ್ಥಿಸಿದ್ದು ಅನುಪಮವಾಗಿತ್ತು. ಅದರಂತೆ '...... **ಹಯಗ್ರೀವಂ ದೇವಂ ವಯಮಿಮಮುಪಾಸ್ಯೈವ ಕೃತಿನಃ ।**' ಶ್ಲೋಕದ ಕೊನೆಯ ಚರಣವನ್ನು ಹೇಳುತ್ತ, ಇಲ್ಲಿಯ 'ಏವ' ಕಾರವು ಶ್ರೀಗುರುರಾಜರ ಏಕಾಂತಭಕ್ತೋತ್ತಮತ್ವ ಸೂಚಿಸುತ್ತದೆ ಎಂದರು. ತಕ್ಷಣ 'ಸರಸಭಾರತೀವಿಲಾಸ' ದ ಕೊನೆಯ ಭಾಗದಲ್ಲಿರುವ '**ತಮೇವ ಚಾರ್ಚಯೇ ನಿತ್ಯಂ ತಮೇವ ಪ್ರಾರ್ಥಯೇऽನಿಶಮ್ । ತಮೇವ ಚಿಂತಯೇ ಚಿತ್ತೇ ಧ್ಯಾಯೇ ಮಹಿತಮೇವ ಹಿ**' ಹಾಗು ವೃಂದಾವನಾಖ್ಯಾನದ 1ನೆಯ ಅಧ್ಯಾಯದ '**ನಮಾಮಿ ನಾರಾಯಣಪಾದಪದ್ಮಂ.... ಸ್ಮರಾಮಿ ನಾರಾಯಣಮೂರ್ತಿಮೇವ**' ಎಂಬ ಪ್ರಮಾಣಾಂತರಗಳನ್ನು ಹೇಳಿ ಶ್ರೀರಾಜರ ಋಜುಮಹಿಮೆಯನ್ನು ಕೊಂಡಾಡಿದರು. ಹಾಗೆಯೇ '**ಅಧುನಾ ಮಿಧುನಾ ರುದ್ಧಂ....**' ಎನ್ನುವ ಶ್ಲೋಕವನ್ನು ಪಾಠಮಾಡುವಾಗ ಶ್ರೀರಾಜರ ಕೃತಿಗಳ ಹಾಗು ಸ್ವರೂಪ ಮಹಿಮಾ ವಿಷಯದಲ್ಲಿ ಪಂಡಿತರ ಧೋರಣೆಯನ್ನು ಉಲ್ಲೇಖಿಸುತ್ತ, ಸ್ವತಃ ಪ್ರಮಾಣವನ್ನು ಸರಿಯಾಗಿ ಅರಿಯದೆ ಇರುವ ಅವರ ನಿಲುವಿನ ಬಗ್ಗೆ ಕನಿಕರಪಟ್ಟು ಅಸಮಾಧಾನ ವ್ಯಕ್ತಪಡಿಸಿದರು. ಬೌದ್ಧರ ಸ್ವಭಾವವಾದ ನಿರಾಕರಣ ಭಾಗದಲ್ಲಿಯ '**ಯಸ್ತಂಭಸಂಭವೋ ಡಿಂಭಂ....**' ಶ್ಲೋಕ ವಿವರಣೆಯನ್ನು ನೀಡುವಾಗ ಪೂಜ್ಯ ಶ್ರೀಗಳವರು ನಾಸ್ತಿಕವಾದದ ನಿರಾಧಾರತ್ವ ಹಾಗು ಸದಾಗಮ ಬಹಿಷ್ಕೃತತ್ವವನ್ನು ವಿಷ್ಣು ತತ್ವನಿರ್ಣಯ, ಕಲ್ಪಲತಾದಿ ಇತರ ಗ್ರಂಥಸ್ಥ ಪ್ರಮಾಣೋಕ್ತಿಗಳನ್ನು ಮುಖೋದ್ಗತ ಉಲ್ಲೇಖಿಸಿದ್ದು ಆಶ್ಚರ್ಯಕರವಾಗಿತ್ತು. ಮೇಲಿನ ಶ್ಲೋಕದ ಟಿಪ್ಪಣೀ ಭಾಗವನ್ನೂ ಗ್ರಂಥ ನೋಡದೆ ನಿರರ್ಗಳ ಉಚ್ಚರಿಸಿದರು. '**ಮಮಸ್ವಾಮೀ ಇತ್ಯನೇನ ಚೇತನಾನಾಮಪಿ ಪ್ರವೃತ್ತಿಃ ತದಧೀನಾ । ಅನ್ಯಥಾ ಚೇತನಾಂತರೇ ಅದೃಷ್ಟಾ ಈದೃಶೀಗ್ರಂಥಕರಣಶಕ್ತಿಃ ಕಥಮಭೂದಿತಿ ಸೂಚಯತಿ ।**' ಋಜುಭಿನ್ನ ದೇವತೆಗಳಲ್ಲಿ ಈದೃಶಗ್ರಂಥಕರಣ ಶಕ್ತಿಯನ್ನು ಪ್ರಕಟಮಾಡದಲೇ ಶ್ರೀರಾಜರಲ್ಲಿ ಮಾಡಿದ್ದಾನೆ. ಶ್ರೀವಾದಿರಾಜರನ್ನು ಜೀವೋತ್ತಮ ಅಧಿಷ್ಠಾನವೆಂದು ತಿಳಿಯಬಹುದಾಗಿದೆ ಎಂದು ವಿವರಿಸಿದರು. ಅದೇ ಸಂದರ್ಭದಲ್ಲಿ ಶ್ರೀವಾದಿರಾಜಗುರುಗಳ ಅನನ್ಯತೆಯನ್ನು ತೋರಿಸುವ ನಿಟ್ಟಿನಲ್ಲಿ ಫಲಸೌರಭದಲ್ಲಿಯ ವಾಯುಸ್ತುತಿ ಸಂಬಂಧಿ ಮೂಲಪಂಕ್ತಿ ಹಾಗು ಟಿಪ್ಪಣಿಯನ್ನು ನೇರವಾಗಿ ಉಲ್ಲೇಖಿಸಿ ಸಮರ್ಥಿಸಿದರು.

**ಯದ್ವಾಯೋಃ ಪವಮಾನಸ್ಯ ಪೂಯಮಾನಾಭಿದಸ್ಯ ಚ ।**
**ಸೂಕ್ತಸ್ಥರ್ಚಾಮಿಯಂ ಚರ್ಚಾ ತದ್ವಾಯುಸ್ತುತಿರೇವ ನಃ ॥**

**ವಾಯುಸ್ತುತೌ ಚ ಮಧ್ವಾಖ್ಯಾ ಸಕೃದೇವ ಪ್ರದರ್ಶಿತಾ ।**
**ಅಸಕೃನ್ಮಧ್ವಸನ್ನಾಮ್ನೀ ಸೇಯಂ ವಾಯೋರ್ಮಹಾಸ್ತುತಿಃ ॥**

**ಯದ್ಯಸ್ಮಾತ್ ಪವಮಾನಸ್ಯ ಪೂಯಮಾನಾಭಿಧಸ್ಯ ಚ ಸೂಕ್ತಸ್ಥರ್ಚಾಮಿಯಂ ಚರ್ಚಾ ವಾಯೋರೇವ ಚರ್ಚಾ ತತ್ ತಸ್ಮಾತ್ ಇಯಂ ಚರ್ಚಾ ನಃ ವಾಯುಸ್ತುತಿರೇವ ಇತಿ ಸಂಬಂಧಃ ।**

ಇಂತಹ ಉಕ್ತಿಗಳೆಲ್ಲ ಶ್ರೀರಾಜರ ಸ್ವಂತಿಕೆಯನ್ನು ಹಾಗು ವಿಶಿಷ್ಟ ಮಹಿಮೆಯನ್ನು ಸಾರುತ್ತವೆ ಎಂದು ಹೇಳಿದರು. '**ಅಯಮಿಹ ಸುಮತಿಂ ವಾಯುರ್ದೇವೋ ವಿದಧ್ಯಾತ್...**' ಇತ್ಯಾದಿ ಉಲ್ಲೇಖಗಳು ಆಚಾರ್ಯ ಮಧ್ವರಿಂದ ಅನುಮೋದಿತ ಕೃತಿಯ ವಿಷಯದಲ್ಲಿ ಗೌರವಿಸುವ ಪ್ರಕಾರವೆಂದೂ, ಶಿಷ್ಯಶಿಕ್ಷಣವೆಂದೂ ಪ್ರತಿಪಾದಿಸಿದರು. ವ್ಯಾಪ್ತ್ಯೈಕ್ಯವನ್ನು ಶ್ರೀರಾಜರೇ ಸ್ವತಂತ್ರವಾಗಿ ಹಾಗು ಚೆನ್ನಾಗಿ ಪ್ರತಿಪಾದಿಸಿದವರು. ಆಚಾರ್ಯ ಮಧ್ವರೇ ಭೂಗೋಳ ವಿಷಯ ವಿಶೇಷದಂತೆ ಈ ಅಂಶವನ್ನು ಶ್ರೀರಾಜರಿಗೆ ವಿವರಿಸಲು ಅವಕಾಶ ನೀಡಿದ್ದಾರೆ ಎನ್ನುವುದು ಶ್ರೀಗಳವರ ಅಭಿಪ್ರಾಯವಾಗಿತ್ತು. ಇನ್ನು ಯುಕ್ತಿಮಲ್ಲಿಕಾದಲ್ಲಿಯ ಹಲವಾರು ವ್ಯಾಖ್ಯೆಗಳು ಅದ್ವಿತೀಯ. ಉದಾ:- ಪ್ರಾಮಾಣ್ಯಸ್ವತಸ್ತ್ವ, ವಿಶೇಷ, ಪ್ರತಿಬಂಧಕ, ಬಿಂಬ-ಪ್ರತಿಬಿಂಬಭಾವ, ಭಾವರೂಪ ಅಜ್ಞಾನ, ಭಕ್ತಿ ಮುಂತಾದವುಗಳು. '**ಭಕ್ತಿಶ್ಚ ಭಗವತ್ ಸ್ನೇಹಃ ।**' ಎಂಬ ವ್ಯಾಖ್ಯೆಯು ಚಿಕ್ಕದಾದರೂ ಆಕೂತಾರ್ಥಗರ್ಭಿತವಾದದ್ದು. ಪೂಜ್ಯ ಶ್ರೀಗಳವರು ಕೇವಲ ವ್ಯಾಖ್ಯೆಗಳನ್ನಷ್ಟೆ ಅಲ್ಲ, ಪ್ರತಿಯೊಂದು ವಿಷಯದ ವಿಮರ್ಶೆಯ ನಂತರ ಕೊನೆಯಲ್ಲಿ ಕಾಣಬಹುದಾದ ನಿರ್ಣೀತಾಭಿಪ್ರಾಯ ಬೋಧಕ ಉಕ್ತಿಯನ್ನು ಅದ್ಭುತವಾಗಿ ವಿಶ್ಲೇಷಿಸಿ ವಿವರಿಸುತ್ತಿದ್ದರು. ಸಿದ್ಧಾಂತ ತತ್ವ ಮಂಡನೆಯಲ್ಲಿ ಆ ನಿರ್ಣೀತೋಕ್ತಿಯು ಹೇಗೆ ನಿರ್ಣಾಯಕವಾಗಬಲ್ಲದು ಎಂದು ಮಾರ್ಮಿಕವಾಗಿ ಮಂಡಿಸುತ್ತಿದ್ದರು. ಶ್ರೀರಾಜರು ಪರಮತನಿರಾಕರಣ ಹಾಗು ಸ್ವಮತ ಸ್ಥಾಪನ ಸಂಬಂಧಿ ವಿಮರ್ಶೆಯಭಾಗದಲ್ಲಿ ಕೊಡತಕ್ಕ ಲೋಕೋತ್ತರ ದೃಷ್ಟಾಂತಗಳ ಭಾವವನ್ನು ಬಹು ಸೊಗಸಾಗಿ ವಿಶ್ಲೇಷಿಸುತ್ತಿದ್ದರು. ಅದ್ವೈತದ ಐಕ್ಯವಾದ ಎಲ್ಲಾ ನಿಮಿತ್ತದಿಂದಲೂ ಅಸಾಧು. ಇದು ಪ್ರಮಾಣ ಪ್ರಮಿತವೂ ಅಲ್ಲ; ಅನುಭವವೇದ್ಯವೂ ಅಲ್ಲ ಮತ್ತು ಬದುಕಿನ ಪ್ರಯೋಗ ಪರಿಕ್ರಮವೂ ಅಲ್ಲ ಎಂಬುದನ್ನು ಸಮರ್ಥಿಸುವಾಗ ಶ್ರೀರಾಜರು ಕೊಟ್ಟಿರುವ '**ಈಶೋಽಹಂಭಾವಧೀರ್ಭೋಗೇ ರೋಗೇ ಮೃತ್ಯುಂಜಯಾರ್ಚಕಃ**' ಎಂಬ ದೃಷ್ಟಾಂತದ ವಿವರಣೆ ನೀಡುವಾಗ ಅದ್ವೈತಿಗಳ ಬದುಕಿನಲ್ಲಿಯ ವೈರುಧ್ಯವನ್ನು ತಿಳಿಸುವ ಕ್ಷಣದಲ್ಲಿ ಶ್ರೀಗಳವರು ಬೀರಿದ ಮಂದಹಾಸದ ಲಾಸ್ಯವನ್ನು ಎಂದಿಗೂ ಮರೆಯಲಾಗದು. ಇಂತಹ ನೂರಾರು ಉದಾಹರಣೆಗಳನ್ನು ಪೂಜ್ಯ ಶ್ರೀಗಳವರ ವಿಷಯದಲ್ಲಿ ಸ್ಮರಿಸಿ ಮೆಲಕು ಹಾಕುತ್ತ ಸಂತಸಗೊಳ್ಳಬಹುದು.

ಮಾಡಿದ್ದಾರೆಂದೂ ವಿವರಿಸಿದರು. ಇದಕ್ಕೆ ಪೂರಕವಾಗಿ ಮಹಾಭಾರತ ತಾತ್ಪರ್ಯ ನಿರ್ಣಯದ ಶ್ರೀರಾಜರ ಭಾವಪ್ರಕಾಶಿಕಾ ವ್ಯಾಖ್ಯಾನದ ಭಾಗವನ್ನು. **'ಸ್ವೇನ ಅಪರೋಕ್ಷೀಕೃತಾಯ ಏವ ನಾರಾಯಣಾಯ ವಂದನಮಿದಂ ನತು ಅನ್ಯವತ್ ಪರೋಕ್ಷೀಕೃತಾಯ ಇತಿ ಸೂಚನಾಯ ತೇ ನಮ ಇತ್ಯುಕ್ತಮ್ ।'** ಮುಖೋದ್ಗತ ಉಲ್ಲೇಖಿಸಿ ಶ್ರೀಮಧ್ವಸಾಮ್ಯವನ್ನು ಶ್ರೀರಾಜರಿಗೆ ಸಮರ್ಥಿಸಿದ್ದು ಅನುಪಮವಾಗಿತ್ತು. ಅದರಂತೆ **'...... ಹಯಗ್ರೀವಂ ದೇವಂ ವಯಮಿಮಮುಪಾಸ್ಯೈವ ಕೃತಿನಃ ।'** ಶ್ಲೋಕದ ಕೊನೆಯ ಚರಣವನ್ನು ಹೇಳುತ್ತ, ಇಲ್ಲಿಯ 'ಏವ' ಕಾರವು ಶ್ರೀಗುರುರಾಜರ ಏಕಾಂತಭಕ್ತೋತ್ತಮತ್ವ ಸೂಚಿಸುತ್ತದೆ ಎಂದರು. ತಕ್ಷಣ 'ಸರಸಭಾರತೀವಿಲಾಸ' ದ ಕೊನೆಯ ಭಾಗದಲ್ಲಿರುವ **'ತಮೇವ ಚಾರ್ಚಯೇ ನಿತ್ಯಂ ತಮೇವ ಪ್ರಾರ್ಥಯೇಽನಿಶಮ್ । ತಮೇವ ಚಿಂತಯೇ ಚಿತ್ತೇ ಧ್ಯಾಯೇ ಮಹಿತಮೇವ ಹಿ'** ಹಾಗು ವೃಂದಾವನಾಖ್ಯಾನದ 1ನೆಯ ಅಧ್ಯಾಯದ **'ನಮಾಮಿ ನಾರಾಯಣಪಾದಪದ್ಮಂ.... ಸ್ಮರಾಮಿ ನಾರಾಯಣಮೂರ್ತಿಮೇವ'** ಎಂಬ ಪ್ರಮಾಣಾಂತರಗಳನ್ನು ಹೇಳಿ ಶ್ರೀರಾಜರ ಋಜುಮಹಿಮೆಯನ್ನು ಕೊಂಡಾಡಿದರು. ಹಾಗೆಯೇ **'ಅಧುನಾ ಮಿಧುನಾ ರುದ್ಧಂ....'** ಎನ್ನುವ ಶ್ಲೋಕವನ್ನು ಪಾಠಮಾಡುವಾಗ ಶ್ರೀರಾಜರ ಕೃತಿಗಳ ಹಾಗು ಸ್ವರೂಪ ಮಹಿಮಾ ವಿಷಯದಲ್ಲಿ ಪಂಡಿತರ ಧೋರಣೆಯನ್ನು ಉಲ್ಲೇಖಿಸುತ್ತ, ಸ್ವತಃ ಪ್ರಮಾಣವನ್ನು ಸರಿಯಾಗಿ ಅರಿಯದೆ ಇರುವ ಅವರ ನಿಲುವಿನ ಬಗ್ಗೆ ಕನಿಕರಪಟ್ಟು ಅಸಮಾಧಾನ ವ್ಯಕ್ತಪಡಿಸಿದರು. ಬೌದ್ಧರ ಸ್ವಭಾವವಾದ ನಿರಾಕರಣ ಭಾಗದಲ್ಲಿಯ **'ಯಸ್ತಂಭಸಂಭವೋ ಡಿಂಭಂ....'** ಶ್ಲೋಕ ವಿವರಣೆಯನ್ನು ನೀಡುವಾಗ ಪೂಜ್ಯ ಶ್ರೀಗಳವರು ನಾಸ್ತಿಕವಾದದ ನಿರಾಧಾರತ್ವ ಹಾಗು ಸದಾಗಮ ಬಹಿಷ್ಕೃತತತ್ವವನ್ನು ವಿಷ್ಣು ತತ್ವನಿರ್ಣಯ, ಕಲ್ಪಲತಾದಿ ಇತರ ಗ್ರಂಥಸ್ಥ ಪ್ರಮಾಣೋಕ್ತಿಗಳನ್ನು ಮುಖೋದ್ಗತ ಉಲ್ಲೇಖಿಸಿದ್ದು ಆಶ್ಚರ್ಯಕರವಾಗಿತ್ತು. ಮೇಲಿನ ಶ್ಲೋಕದ ಟಿಪ್ಪಣೀ ಭಾಗವನ್ನೂ ಗ್ರಂಥ ನೋಡದೆ ನಿರರ್ಗಳ ಉಚ್ಚರಿಸಿದರು. **'ಮಮಸ್ವಾಮೀ ಇತ್ಯನೇನ ಚೇತನಾನಾಮಪಿ ಪ್ರವೃತ್ತಿಃ ತದಧೀನಾ । ಅನ್ಯಥಾ ಚೇತನಾಂತರೇ ಅದೃಷ್ಟಾ ಈದೃಶೀಗ್ರಂಥಕರಣಶಕ್ತಿಃ ಕಥಮಭೂದಿತಿ ಸೂಚಯತಿ ।'** ಋಜುಭಿನ್ನ ದೇವತೆಗಳಲ್ಲಿ ಈದೃಶಗ್ರಂಥಕರಣ ಶಕ್ತಿಯನ್ನು ಪ್ರಕಟಮಾಡದಲೇ ಶ್ರೀರಾಜರಲ್ಲಿ ಮಾಡಿದ್ದಾನೆ. ಶ್ರೀವಾದಿರಾಜರನ್ನು ಜೀವೋತ್ತಮ ಅಧಿಷ್ಠಾನವೆಂದು ತಿಳಿಯಬಹುದಾಗಿದೆ ಎಂದು ವಿವರಿಸಿದರು. ಅದೇ ಸಂದರ್ಭದಲ್ಲಿ ಶ್ರೀವಾದಿರಾಜಗುರುಗಳ ಅನನ್ಯತೆಯನ್ನು ತೋರಿಸುವ ನಿಟ್ಟಿನಲ್ಲಿ ಫಲಸೌರಭದಲ್ಲಿಯ ವಾಯುಸ್ತುತಿ ಸಂಬಂಧಿ ಮೂಲಪಂಕ್ತಿ ಹಾಗು ಟಿಪ್ಪಣಿಯನ್ನು ನೇರವಾಗಿ ಉಲ್ಲೇಖಿಸಿ ಸಮರ್ಥಿಸಿದರು.

**ಯದ್ವಾಯೋಃ ಪವಮಾನಸ್ಯ ಪೂಯಮಾನಾಭಿದಸ್ಯ ಚ ।**
**ಸೂಕ್ತಸ್ಥರ್ಭಾಮಿಯಂ ಚರ್ಚಾ ತದ್ವಾಯುಸ್ತುತಿರೇವ ನಃ ॥**

**ವಾಯುಸ್ತುತೌ ಚ ಮಧ್ವಾಖ್ಯಾ ಸಕೃದೇವ ಪ್ರದರ್ಶಿತಾ ।**
**ಅಸಕೃನ್ಮಧ್ವಸನ್ನಾಮ್ನೀ ಸೇಯಂ ವಾಯೋರ್ಮಹಾಸ್ತುತಿಃ ॥**

**ಯದ್ಯಸ್ಮಾತ್ ಪವಮಾನಸ್ಯ ಪೂಯಮಾನಾಭಿಧಸ್ಯ ಚ ಸೂಕ್ತಸ್ಥರ್ಚಾಮಿಯಂ ಚರ್ಚಾ ವಾಯೋರೇವ ಚರ್ಚಾ ತತ್ ತಸ್ಮಾತ್ ಇಯಂ ಚರ್ಚಾ ನಃ ವಾಯುಸ್ತುತಿರೇವ ಇತಿ ಸಂಬಂಧಃ ।**

ಇಂತಹ ಉಕ್ತಿಗಳೆಲ್ಲ ಶ್ರೀರಾಜರ ಸ್ವಂತಿಕೆಯನ್ನು ಹಾಗು ವಿಶಿಷ್ಟ ಮಹಿಮೆಯನ್ನು ಸಾರುತ್ತವೆ ಎಂದು ಹೇಳಿದರು. '**ಅಯಮಿಹ ಸುಮತಿಂ ವಾಯುರ್ದೇವೋ ವಿದದ್ಯಾತ್...**' ಇತ್ಯಾದಿ ಉಲ್ಲೇಖಗಳು ಆಚಾರ್ಯ ಮಧ್ವರಿಂದ ಅನುಮೋದಿತ ಕೃತಿಯ ವಿಷಯದಲ್ಲಿ ಗೌರವಿಸುವ ಪ್ರಕಾರವೆಂದೂ, ಶಿಷ್ಟಶಿಕ್ಷಣವೆಂದೂ ಪ್ರತಿಪಾದಿಸಿದರು. ವ್ಯಾಪ್ತ್ಯೈಕ್ಯವನ್ನು ಶ್ರೀರಾಜರೇ ಸ್ವತಂತ್ರವಾಗಿ ಹಾಗು ಚೆನ್ನಾಗಿ ಪ್ರತಿಪಾದಿಸಿದವರು. ಆಚಾರ್ಯ ಮಧ್ವರೇ ಭೂಗೋಳ ವಿಷಯ ವಿಶೇಷದಂತೆ ಈ ಅಂಶವನ್ನು ಶ್ರೀರಾಜರಿಗೆ ವಿವರಿಸಲು ಅವಕಾಶ ನೀಡಿದ್ದಾರೆ ಎನ್ನುವುದು ಶ್ರೀಗಳವರ ಅಭಿಪ್ರಾಯವಾಗಿತ್ತು. ಇನ್ನು ಯುಕ್ತಿಮಲ್ಲಿಕಾದಲ್ಲಿಯ ಹಲವಾರು ವ್ಯಾಖ್ಯೆಗಳು ಅದ್ವಿತೀಯ. ಉದಾ:- ಪ್ರಾಮಾಣ್ಯಸ್ವತಸ್ತ್ವ, ವಿಶೇಷ, ಪ್ರತಿಬಂಧಕ, ಬಿಂಬ-ಪ್ರತಿಬಿಂಬಭಾವ, ಭಾವರೂಪ ಅಜ್ಞಾನ, ಭಕ್ತಿ ಮುಂತಾದವುಗಳು. '**ಭಕ್ತಿಶ್ಚ ಭಗವತ್ ಸ್ನೇಹಃ ।**' ಎಂಬ ವ್ಯಾಖ್ಯೆಯು ಚಿಕ್ಕದಾದರೂ ಆಕೂತಾರ್ಥಗರ್ಭಿತವಾದದ್ದು. ಪೂಜ್ಯ ಶ್ರೀಗಳವರು ಕೇವಲ ವ್ಯಾಖ್ಯೆಗಳನ್ನಷ್ಟೆ ಅಲ್ಲ, ಪ್ರತಿಯೊಂದು ವಿಷಯದ ವಿಮರ್ಶೆಯ ನಂತರ ಕೊನೆಯಲ್ಲಿ ಕಾಣಬಹುದಾದ ನಿರ್ಣೀತಾಭಿಪ್ರಾಯ ಬೋಧಕ ಉಕ್ತಿಯನ್ನು ಅದ್ಭುತವಾಗಿ ವಿಶ್ಲೇಷಿಸಿ ವಿವರಿಸುತ್ತಿದ್ದರು. ಸಿದ್ಧಾಂತ ತತ್ವ ಮಂಡನೆಯಲ್ಲಿ ಆ ನಿರ್ಣೀತೋಕ್ತಿಯು ಹೇಗೆ ನಿರ್ಣಾಯಕವಾಗಬಲ್ಲದು ಎಂದು ಮಾರ್ಮಿಕವಾಗಿ ಮಂಡಿಸುತ್ತಿದ್ದರು. ಶ್ರೀರಾಜರು ಪರಮತನಿರಾಕರಣ ಹಾಗು ಸ್ವಮತ ಸ್ಥಾಪನ ಸಂಬಂಧಿ ವಿಮರ್ಶೆಯಭಾಗದಲ್ಲಿ ಕೊಡತಕ್ಕ ಲೋಕೋತ್ತರ ದೃಷ್ಟಾಂತಗಳ ಭಾವವನ್ನು ಬಹು ಸೊಗಸಾಗಿ ವಿಶ್ಲೇಷಿಸುತ್ತಿದ್ದರು. ಅದ್ವೈತದ ಐಕ್ಯವಾದ ಎಲ್ಲಾ ನಿಮಿತ್ತದಿಂದಲೂ ಅಸಾಧು. ಇದು ಪ್ರಮಾಣ ಪ್ರಮಿತವೂ ಅಲ್ಲ; ಅನುಭವವೇದ್ಯವೂ ಅಲ್ಲ ಮತ್ತು ಬದುಕಿನ ಪ್ರಯೋಗ ಪರಿಕ್ರಮವೂ ಅಲ್ಲ ಎಂಬುದನ್ನು ಸಮರ್ಥಿಸುವಾಗ ಶ್ರೀರಾಜರು ಕೊಟ್ಟಿರುವ '**ಈಶೋಽಹಂಭಾವಧೀರ್ಭೋಗೇ ರೋಗೇ ಮೃತ್ಯುಂಜಯಾರ್ಚಕಃ**' ಎಂಬ ದೃಷ್ಟಾಂತದ ವಿವರಣೆ ನೀಡುವಾಗ ಅದ್ವೈತಿಗಳ ಬದುಕಿನಲ್ಲಿಯ ವೈರುಧ್ಯವನ್ನು ತಿಳಿಸುವ ಕ್ಷಣದಲ್ಲಿ ಶ್ರೀಗಳವರು ಬೀರಿದ ಮಂದಹಾಸದ ಲಾಸ್ಯವನ್ನು ಎಂದಿಗೂ ಮರೆಯಲಾಗದು. ಇಂತಹ ನೂರಾರು ಉದಾಹರಣೆಗಳನ್ನು ಪೂಜ್ಯ ಶ್ರೀಗಳವರ ವಿಷಯದಲ್ಲಿ ಸ್ಮರಿಸಿ ಮೆಲಕು ಹಾಕುತ್ತ ಸಂತಸಗೊಳ್ಳಬಹುದು.

ಶ್ರೀವಾದಿರಾಜೋಕ್ತಿಚಾತುರ್ಯದ ಗಾಂಭೀರ್ಯ ಅಗಾಧವಾದದ್ದು. ಶ್ರೀರಾಜರ ಕರುಣಾಪಾತ್ರ ಶ್ರೀಗಳವರು ಇತರರಿಗಿಂತ ಮಿಗಿಲಾಗಿ 'ವಾದಿರಾಜರವಾಗ್ವಿಲಾಸ' ದ ಅಂತರ್ಯವನ್ನು ಅರಿತಿದ್ದರೆಂಬುದು ಸ್ಪಷ್ಟ. ಸಾಮಾನ್ಯ ಯಾವಾಗಲೂ ಶ್ರೀರಾಜರ ಗ್ರಂಥಗಳನ್ನು ಮೆಲ್ಲುಕು ಹಾಕುವ ಸ್ವಭಾವದ ಪೂಜ್ಯ ಶ್ರೀಗಳವರು ಒಮ್ಮೆ ಯುಕ್ತಿಮಲ್ಲಿಕಾದಲ್ಲಿಯ ಫಲಸೌರಭದ **'ಅತಃ ಶುಭಗುಣಾಂಬೋಧಿಃ ಶುದ್ಧಃ ಸರ್ವವಿಲಕ್ಷಣಃ। ಸತ್ಯವಿಶ್ವಾಶ್ರಯೋ ಮುಕ್ತಾಮುಕ್ತೇಶೋ ಜಯತಿ ಪ್ರಭುಃ ॥'** ಶ್ಲೋಕವನ್ನು ಹೇಳೀ, ಶ್ರೀರಾಜರು ಈ ಶ್ಲೋಕ ಮುಖೇನ ಸಮಗ್ರಯುಕ್ತಿಮಲ್ಲಿಕಾಸಾರವನ್ನು ಸಂಗ್ರಹಿಸಿ ತಿಳಿಸಿರುವ ಪರಿ ಅನ್ಯಾದೃಶವಾದದ್ದು ಎಂದು ಅರುಹಿದರು. ಇಲ್ಲಿ ಅತಃ ಎನ್ನುವುದು ಉಪಯುಕ್ತ ಸಕಲ ಶ್ರುತಿ-ಸ್ಮೃತ್ಯುಕ್ತಿಗಳು ಹಾಗು ಯುಕ್ತಿ ವಿವೇಚನೆಯ ಫಲಿತಾರ್ಥವನ್ನು ಪ್ರಮುಖ ಮತ್ತು ಪ್ರಬಲ ಹೇತುವಾಗಿ ತಿಳಿಯಪಡಿಸುತ್ತದೆ. ಈ ಪದವನ್ನು 'ಶುಭಗುಣಾಂಬೋಧಿಃ....' ಮೊದಲಾದ ಪದಗಳಿಗೆ ಬಿಡಿಯಾಗಿ ನಂತರ ಇಡಿಯಾಗಿ ಅನ್ವಯಿಸಿ ಪ್ರತಿಯೊಂದು ಸೌರಭದ ನಿರ್ಣೀತ ಅಭಿಪ್ರಾಯವನ್ನು ಹಾಗು ಸಮಗ್ರ ಗ್ರಂಥದ ಸಮಷ್ಟಿ ಅಭಿಪ್ರಾಯವನ್ನೂ ತಿಳಿಸುತ್ತದೆ ಎಂದು ಪ್ರತಿಪಾದಿಸಿದರು. ಪ್ರತಿಪಾದನೆಯ ಸಂದರ್ಭದಲ್ಲಿ ಪೂಜ್ಯ ಶ್ರೀಗಳವರು ಉಲ್ಲೇಖಿಸುತ್ತಿದ್ದ ಮೂಲ ಪಂಕ್ತಿ ಹಾಗು ಟಿಪ್ಪಣಿ ವಾಕ್ಯಗಳು ನೂರಾರು.

ಮಗದೊಮ್ಮೆ ಸೋದೆಯಲ್ಲಿರುವಾಗ ಯುಕ್ತಿಮಲ್ಲಿಕಾ ಫಲಸೌರಭದಲ್ಲಿಯ ಪವಮಾನ-ಪೂಯಮಾನ ಸೂಕ್ತಗತ ಋಕ್‌ಗಳ ಮೂಲ ವಿವರಣೆ ಹಾಗು ವ್ಯಾಖ್ಯಾನಭಾಗದ ಬಗ್ಗೆ ಶ್ರೀಗಳವರು ಹೇಳುತ್ತಿದ್ದಾಗ ಅವರ ಅನಿಸಿಕೆ ಹೀಗಿತ್ತು. ಮೂಲ ವಿವರಣೆಯ ವ್ಯಾಖ್ಯಾನ ಭಾಗದಲ್ಲಿ ಶ್ರೀತ್ರಿವಿಕ್ರಮ ಪಂಡಿತಾಚಾರ್ಯ ವಿರಚಿತ ಶ್ರೀಹರಿವಾಯುಸ್ತುತಿಯ ಪಂಕ್ತಿಗಳು ಹೇರಳವಾಗಿ ಉಲ್ಲೇಖಿಸಲ್ಪಟ್ಟಿವೆ. ಇಲ್ಲಿ ಪಂಡಿತಾಚಾರ್ಯರ ಉಕ್ತಿ ಆಧರಿಸಿ ಯುಕ್ತಿಮಲ್ಲಿಕಾದ ಮೂಲ ರಚಿತವಾಗಿಲ್ಲ; ಪ್ರತ್ಯುತ ಪಂಡಿತಾಚಾರ್ಯರ ಹರಿವಾಯುಸ್ತುತಿಯ ಯಾವ ಪಂಕ್ತಿಗಳಿಗೆ ಪವಮಾನ-ಪೂಯಮಾನಸೂಕ್ತಗತ ಯಾವ ಋಕ್‌ಗಳ ಮೂಲ ಆಕಾರವಾಗಿವೆ ಎಂಬುದನ್ನು ಶ್ರೀರಾಜರು ನಿಖರವಾಗಿ ತೋರಿಸಿದ್ದಾರೆಂಬುದಾಗಿ ಅರಿಯಬೇಕೆಂದು ಶ್ರೀಗಳವರು ಅಭಿಪ್ರಾಯಪಟ್ಟರು. ಏತಾದೃಶ ವಿವರಣೆಯು ಅನ್ಯತ್ರ ಆಮೂಲಾಗ್ರವಾಗಿ ಕಾಣಸಿಗುವುದಿಲ್ಲ.

ಶ್ರೀವಾದಿರಾಜಗುರುಗಳ ಪ್ರಾರ್ಥನಾಪ್ರಭೇದ ಮತ್ತು ಪ್ರಕಾರಗಳ ಬಗ್ಗೆ ಮಾತನಾಡುವಾಗ ಯುಕ್ತಿಮಲ್ಲಿಕಾ ಫಲಸೌರಭದ ಟೀಕೆಯಲ್ಲಿಯ 'ಕದಾಚಿತ್ ಸಾಕ್ಷಾತ್ ಪ್ರಾರ್ಥನಾ' ಕ್ವಚಿತ್ ಸರ್ವೇಷಾಂ ಪರತಯಾ ಪ್ರಾರ್ಥನಾ...' ಎನ್ನುವುದನ್ನು ಹೇಳುತ್ತ ಶ್ರೀರಾಜರ ಪ್ರಾರ್ಥನಾಗತ ಧ್ಯೇಯೋದ್ದೇಶವನ್ನು ಅಹಹುತ್ತಿದ್ದರು.

ಇನ್ನು ಶ್ರೀವಿಶ್ವೋತ್ತಮತೀರ್ಥರು ಕೇವಲ ಪಾಠ ಪ್ರವಚನ ಸಂದರ್ಭದಲ್ಲಿ ಮಾತ್ರ 'ಯುಕ್ತಿಮಲ್ಲಿಕಾ' ದ ಉಕ್ತಿಗಳನ್ನು ಮುಖತಃ ಉಲ್ಲೇಖಿಸುತ್ತಿದ್ದರು ಎಂದಲ್ಲ. ಸಾಮಾನ್ಯ ಮಾತನಾಡುವ ಸಂದರ್ಭದಲ್ಲಿಯೂ ಪ್ರಾಸಂಗಿಕವಾಗಿ ಆ ಗ್ರಂಥರತ್ನದ ಯುಕ್ತಿಯುಕ್ತ ಉಕ್ತಿರತ್ನಗಳನ್ನು ಸರಾಗವಾಗಿ ಉಲ್ಲೇಖಿಸುತ್ತಿದ್ದರು. ಶ್ರೀರಾಜರ ವಿನಯೋಕ್ತಿಗಳನ್ನು ಅರ್ಥೈಸುವ ಪ್ರಕಾರವೂ ಪೂಜ್ಯರಿಗೆ ಹೃದ್ಗತವಾಗಿತ್ತು. ಸಂಪ್ರದಾಯ, ಸನ್ನಿಧಿ, ಸ್ವರೂಪ ಮಹಿಮೆ ಹಾಗು ಪ್ರಮಾಣಾಂತರಗಳನ್ನು ಮನ್ನಿಸಿ, ಉಲ್ಲೇಖಿಸಿ ಶ್ರೀರಾಜರ ಉಕ್ತಿಚಾತುರ್ಯವನ್ನು ಅರಿಯಬೇಕೆನ್ನುವ ಅಭಿಪ್ರಾಯ ಅವರದಾಗಿತ್ತು.

ಯುಕ್ತಿಮಲ್ಲಿಕಾದಲ್ಲಿ ಪೂರ್ವಪಕ್ಷದ ಒಂದು ವಿಷಯವನ್ನು ವಿಮರ್ಶಿಸಿ ಸಿದ್ಧಾಂತ ಪಕ್ಷವನ್ನು ನಿರ್ಣಯಿಸಿ ಹೇಳುವ 'ಅತಃ'; 'ತಸ್ಮಾತ್' ಎನ್ನುವ ಪದಗಳನ್ನು ಶ್ರೀರಾಜರು ಉಪಯೋಗಿಸುತ್ತಾರೆ. ಆ ಶ್ಲೋಕದಲ್ಲಿಯ ಪ್ರತಿಪದಕ್ಕೂ ಈ ಹೇತ್ವರ್ಥಕಪದಗಳು ಹೇಗೆ ಸಂಬಂಧಿಸಿವೆ ಎಂದು ಅಕ್ಲೇಶ ಮುಖೋದ್ಗತ ಹೇಳುತ್ತಿದ್ದರು.

ಹೀಗೆ ಶ್ರೀವಾದಿರಾಜಗುರುಗಳ 'ಯುಕ್ತಿಮಲ್ಲಿಕಾ' ವಿಷಯದಲ್ಲಿ ಶ್ರೀಶ್ರೀ ವಿಶ್ವೋತ್ತಮತೀರ್ಥರ ಅಧ್ಯಯನ ಕ್ರಮ, ಮನನ ಮಾರ್ಗ, ಚಿಂತನ ರೀತಿ, ಪಾಠನ ಪದ್ಧತಿ, ಸ್ಮರಣಶಕ್ತಿ, ಸಾಮಯಿಕ ಸ್ಫೂರ್ತಿ ಮುಂತಾದುದು ಅದ್ಭುತವೂ ಅನನ್ಯವೂ ಆಗಿತ್ತು. ಈ ಗ್ರಂಥವು ಪೂಜ್ಯರ ದೃಷ್ಟಿಯಲ್ಲಿ ಒಂದು ವಿಶ್ವಕೋಶ, ಸಿದ್ಧಾಂತದ ಪ್ರೌಢವಾದ ಹಾಗು ಪ್ರಮೇಯನಿರೂಪಣೆಗೆ ಸಂಬಂಧಿಸಿದ ಚರ್ಚೆಯು ಅನನ್ಯವೆಮ್ಬುದು ಅವರ ಅಭಿಪ್ರಾಯ. ಈ ನಿರೂಪಣೆಯ ನಿಖರತೆ, ವಾದದ ಪ್ರೌಢಿಮೆ, ವಿಮರ್ಶೆ- ವಿವರಣೆ, ಯುಕ್ತಿಚಾತುರ್ಯ - ಇವೇ ಮೊದಲಾದ ಅಂಶಗಳು ಕರ್ಕಶವೀಥಿ ವಿದೂರವಾಗಿ ಮನಮುಟ್ಟುವ ಮನೋಜ್ಞಶೈಲಿಯಲ್ಲಿ ಸಮರ್ಥ ನಿರೂಪಿಸಲ್ಪಟ್ಟಿವೆ ಎಂಬುದು ಶ್ರೀಗಳವರ ನಿಲುವು.

ಅಪ್ರತಿಮ ಜ್ಞಾನನಿಧಿ-ಮನನಶೀಲ ಮುನಿ ಶ್ರೀವಿಶ್ವೋತ್ತಮತೀರ್ಥಗುರುಗಳ ಪವಿತ್ರ ಪದಪಂಕೇರುಹಸನ್ನಿಧಿಗೆ ಪ್ರಣಾಮಗಳು.

॥ ಪ್ರೀತೋಽಸ್ತು ಕೃಷ್ಣಃಪ್ರಭುಃ ॥

# ರಾಜಸುಭಾಷಿತ

ತತ್ಸಂಪತ್ತೌ ವಿಪತ್ತೌ ಚ ಗತಿಃ ಶ್ರೀಪತಿರೇವ ನಃ ।
ಯೋ ಬ್ರಹ್ಮರುದ್ರವೀಂದ್ರೇಂದ್ರಚಂದ್ರಾದೀನಾಧೀಶ್ವರಃ ॥

ಯಾವ ಶ್ರೀಪತಿಯು ಬ್ರಹ್ಮ-ರುದ್ರ-ಗರುಡ-ಇಂದ್ರ-ಚಂದ್ರಾದಿಗಳಿಗೆ ಅಧಿಪತಿ-ಯಾಗಿದ್ದಾನೆಯೋ ಅವನೇ ನಮಗೂ ಸಹ ಸಂಪತ್ತಿನಲ್ಲಿಯೂ ಮತ್ತು ವಿಪತ್ತಿನಲ್ಲಿಯೂ ಗತಿಯಾಗಿದ್ದಾನೆ.

ನಾನ್ಯಂ ಭಜಾಮಿ ನ ಸ್ತೌಮಿ ನಾನುಯಾಮಿ ಕದಾಚನ ।
ಹರಿಂ ಚ ಹರಿಪತ್ನೀಂ ಚ ಸುರಾದೀಂಶ್ಚ ಗುರೂನ್ ವಿನಾ ॥

ಹರಿಯನ್ನು, ಹರಿಪತ್ನಿಯಾದ ಲಕ್ಷ್ಮಿಯನ್ನು, ಹರಿದಾಸರಾದ ದೇವತೆಗಳನ್ನು ಮತ್ತು ಗುರುಗಳನ್ನು ಬಿಟ್ಟು ಇನ್ನೊಬ್ಬನನ್ನು ಎಂದೂ ಭಜಿಸುವುದಿಲ್ಲ, ಎಂದೂ ಸ್ತೋತ್ರಮಾಡುವುದಿಲ್ಲ ಮತ್ತು ಎಂದೂ ಹಿಂಬಾಲಿಸುವುದಿಲ್ಲ.

ಭಕ್ತಿಃ ಸ್ಯಾತ್ ತ್ವಯಿ ಗೋವಿಂದ ತೃಪ್ತಿಃ ಸ್ಯಾತ್ ತ್ವನ್ನಿಷೇವಯಾ ।
ತ್ವತ್ತೋಽನ್ಯತ್ರ ವಿರಕ್ತಿಃ ಸ್ಯಾನ್ಮುಕ್ತಿಶ್ಚ ಸ್ಯಾನ್ಮುಕುಂದ ಮೇ ॥

ಎಲೈ ಗೋವಿಂದನೇ! ನನಗೆ ನಿನ್ನಲ್ಲಿ ಭಕ್ತಿ ಉಂಟಾಗಲಿ ಮತ್ತು ನಿನ್ನ ಸೇವೆಯಿಂದ ತೃಪ್ತಿ ಉಂಟಾಗಲಿ. ನಿನ್ನನ್ನು ಬಿಟ್ಟು ಬೇರೆ ವಿಷಯದಲ್ಲಿ ವೈರಾಗ್ಯ ಉಂಟಾಗಲಿ. ಎಲೈ ಮುಕುಂದನೇ! ನನಗೆ ನಿನ್ನ ಅನುಗ್ರಹದಿಂದ ಮುಕ್ತಿಯೂ ಉಂಟಾಗಲಿ.

ಅಸ್ಮಿನ್ ಭವೇ ಭವೇಽನ್ಯಸ್ಮಿನ್ ಭವಾಂತೇ ಚ ಭವಾಮ ತೇ ।
ದಾಸಾನುದಾಸಾಃ ಶ್ರೀನಾಥ ತ್ರಾತಾ ತ್ವಂ ನಃ ಸದಾ ಭವ ॥

ಎಲೈ ಶ್ರೀನಾಥನೇ! ಈ ಜನ್ಮದಲ್ಲಿ ಇನ್ನೊಂದು ಜನ್ಮದಲ್ಲಿ ಮತ್ತು ಸಂಸಾರದ ಕೊನೆಯಲ್ಲಿ ಮೋಕ್ಷದಲ್ಲಿಯೂ ನಾವು ನಿನ್ನ ದಾಸಾನುದಾಸರಾಗುತ್ತೇವೆ. ನೀನು ನಮ್ಮನ್ನು ಸದಾ ರಕ್ಷಿಸುವವನಾಗು.

**ಪದ್ಯಾಖ್ಯಸೂತ್ರಬದ್ಧೇಯಂ ಹೃದ್ಯಾ ಸ್ಯಾದ್ ಯುಕ್ತಿಮಲ್ಲಿಕಾ ।**
**ಪದ್ಮನಾಭಸ್ಯ ಮಧ್ವಸ್ಯ ವಿದ್ಯಾಯಾಶ್ಚ ಮನಃಪ್ರಿಯಾ ॥**

ಪದ್ಮನಾಭನಿಗೂ, ಮಧ್ವರಿಗೂ ಮತ್ತು ಸರಸ್ವತಿಗೂ ಮನಃಪ್ರಿಯವಾದ ಪದ್ಯ ಎಂಬ ಸೂತ್ರಗಳಿಂದ ರಚಿಸಲ್ಪಟ್ಟ ಈ ಯುಕ್ತಿಮಲ್ಲಿಕೆಯು ಎಲ್ಲ ಸಜ್ಜನರಿಗೆ ಹೃದಯಂಗಮವಾಗಲಿ.

**ಹಯಗ್ರೀವಪದಾಂಭೋಜಮಧುಮತ್ತಮಧುವ್ರತೈಃ।**
**ಸದಾ ಸೇವ್ಯಾ ವಾದಿರಾಜರಚಿತಾ ಯುಕ್ತಿಮಲ್ಲಿಕಾ ॥**

ವಾದಿರಾಜರು ರಚಿಸಿದ ಈ ಯುಕ್ತಿಮಲ್ಲಿಕಾ ಗ್ರಂಥವು ಹಯಗ್ರೀವದೇವರ ಪಾದಕಮಲಗಳ ಮಧುವಿನಿಂದ ಮತ್ತರಾದ ದುಂಬಿಗಳಿಂದ ಸಜ್ಜನರಿಂದ ಯಾವಾಗಲೂ ಸೇವ್ಯವಾದುದು.

**ಯೋ ಯುಕ್ತಿಮಲ್ಲಿ ತೇ ಫುಲ್ಲಪಲ್ಲವೋಲ್ಲಾಸವಲ್ಲಭಃ ।**
**ಅಂಚಾಹಿಮಂಚಂ ರಮ್ಯಂ ಚ ತಂ ಪ್ರಾಂಚಂ ತ್ವಂ ಚ ಸೌರಭ್ಯೈಃ ॥**

ಎಲೈ ಯುಕ್ತಿಮಲ್ಲಿಕೆಯೇ! ಯಾವನು ನಿನ್ನ ಅರಳಿದ ಚಿಗುರುಗಳ ನರ್ತನಕ್ಕೆ ಅಧಿಪತಿ-ಯಾಗಿದ್ದಾನೆಯೋ ಅಂತಹ ಅನಾದ್ಯಿಯಾದ, ಸುಂದರನಾದ ಶೇಷಶಾಯಿಯಾದ ನಾರಾಯಣನನ್ನು ನಿನ್ನ ಸೌರಭಗಳಿಂದ ಪೂಜಿಸು.

**ಬೀಜಾವಾಪಃ ಪ್ರರೋಹಶ್ಚ ಪಲ್ಲವಃ ಪ್ರಸವಾನಿ ಚ।**
**ಯತ್ಪ್ರಬಂಧಃ ಪ್ರಚಾರಶ್ಚ ವಿದ್ವನ್ಮಧ್ವಸ್ಯ ಶಕ್ತಿತಃ॥**

ಯುಕ್ತಿಮಲ್ಲಿಕೆಯ ಬೀಜವನ್ನು ನೆಡುವುದು, ಆ ಬೀಜವು ಮೊಳಕೆ ಒಡೆಯುವುದು, ಚಿಗುರೊಡೆಯುವುದು, ಪುಷ್ಪಗಳನ್ನು ಕೊಡುವುದು, ಆ ಪುಷ್ಪವನ್ನು ಕಟ್ಟುವುದು ಮತ್ತು ಆ ಕಟ್ಟಿದ ಮಾಲೆಗಳನ್ನು ಎಲ್ಲ ಕಡೆಗಳಲ್ಲಿಯೂ ತೆಗೆದುಕೊಂಡು ಹೋಗುವುದು. ಇವೆಲ್ಲವೂ ವಿದ್ವಾಂಸರಾದ ಮಧ್ವರ ಶಕ್ತಿಯಿಂದಲೇ ಆಗಿದೆ.

**ಸ್ವಕೋಶಸ್ಥಸದರ್ಥಾಖ್ಯವಿತ್ತೈರ್ದತ್ತೈಃ ಸ ಏವ ತತ್ ।**
**ವಿದ್ರಾವಯೇದ್ಧಿ ದಾರಿದ್ರ್ಯಂ ದದ್ಯಾನ್ಮಧ್ವೋ ಗತಿಂ ಚ ಮೇ ॥**

ತಮ್ಮ ಕೋಶದಲ್ಲಿರುವ ಶ್ರೇಷ್ಠವಾದ ಅರ್ಥಗಳೆಂಬ ಧನವನ್ನು ಕೊಟ್ಟು ಆ ಮಧ್ವರೇ ನನ್ನ ಜ್ಞಾನದಾರಿದ್ರ್ಯವನ್ನು ಬಡಿದೋಡಿಸುತ್ತಾರಷ್ಟೆ? ಆ ಮಧ್ವರೇ ನನಗೆ ಉತ್ತಮ ಗತಿಯನ್ನೂ ಕೊಡಲಿ.

## ಉಡುಪಿ ಶ್ರೀಕೃಷ್ಣ



ಕೃಷ್ಣಂ ವಂದೇ ಮಂಥಪಾಶಧರಂ ದಿವ್ಯಾರ್ಭಕಾಕೃತಿಮ್ ।
ಶಿಖಾಬಂಧತ್ರಯೋಪೇತಂ ಭೈಷ್ಮೀ ಮಧ್ವಕರಾರ್ಚಿತಮ್ ॥

## ಉಡುಪಿ ಶ್ರೀಕೃಷ್ಣ



ಕೃಷ್ಣಂ ವಂದೇ ಮಂಥಪಾಶಧರಂ ದಿವ್ಯಾರ್ಭಕಾಕೃತಿಮ್ ।
ಶಿಖಾಬಂಧತ್ರಯೋಪೇತಂ ಭೈಷ್ಮೀ ಮಧ್ವಕರಾರ್ಚಿತಮ್ ॥



ಶ್ರೀಮದಾಚಾರ್ಯ ಕರಾರ್ಚಿತ ಶ್ರೀಭೂವರಾಹ



ಶ್ರೀವಾದಿರಾಜ ಕರಾರ್ಚಿತ ಶ್ರೀಹಯಗ್ರೀವ



ಶ್ರೀಭೀಮಸೇನ ಕರಾರ್ಚಿತ ಶ್ರೀನರಸಿಂಹ



ಶ್ರೀವ್ಯಾಸಮುಷ್ಟಿ



ಹೂವಿನಕೆರೆ - ಶ್ರೀಮಠದ ಹೊರಾವರಣ



ಹೂವಿನಕೆರೆ



ಶ್ರೀವರಾಹನ ಪುಟ್ಟಪಾದಗಳು



ಶ್ರೀವರಾಹನ ಬಾಲ್ಯದ ಜಾರುಬಂಡೆ



ಮಳೆಗಾಲದಲ್ಲೂ ಪಾಚಿ ಇಲ್ಲದೆ ಶೋಭಿಸುತ್ತಿರುವ ಜಾರುಬಂಡೆ



ಕುಂಭಾಶಿ ಮಠ - ಶ್ರೀವಿದ್ಯಾನಿಧಿತೀರ್ಥರು
(ಬಿಡಿಸಂನ್ಯಾಸಿಗಳು) ಶ್ರೀನಿವಾಸಾಚಾರ್ಯರು
ರಾಜರಿಗೆ ಬಾಲ್ಯದಲ್ಲಿ ಪಾಠಹೇಳಿದ ವಿದ್ಯಾಗುರುಗಳು



ಶ್ರೀವಾಗೀಶತೀರ್ಥರು
ಶ್ರೀವಾದಿರಾಜರ ಗುರುಗಳು



ಮಹಾತಪಸ್ವಿ ಶ್ರೀರತ್ನಗರ್ಭತೀರ್ಥರು - ನಾರಳ ಮಠ



ಶ್ರೀವರಾಹಕುಂಡ - ನಾರಳ ಮಠ



ಶ್ರೀಭೂತರಾಜರ ಸನ್ನಿಧಿ - ನಾರಳ ಮಠ



ಭಗವತ್ ಸನ್ನಿಧಾನ - ರೆಂಜಾಲ



ಕೆಂಚಗಾರ ಮಠ - ನಿತ್ಯಪೂಜೆಗೊಳ್ಳುತ್ತಿರುವ
ಭಗವತ್ ಸನ್ನಿಧಾನ



ಕೆಂಚಗಾರ ಮಠ -
ಭೂತರಾಜರ ಸನ್ನಿಧಾನ



ರಾಜರು ಗ್ರಂಥಸ್ಥಾಪನೆ ಮಾಡಿದ ಸ್ಥಳ - ಬೀಳಗಿ
ಶ್ರೀವೇದವ್ಯಾಸ, ಗರುಡ, ಮುಖ್ಯಪ್ರಾಣ



ಶ್ರೀವೇದಾಂಗತೀರ್ಥರು - ಬೀಳಗಿ ಮಠ



ಬೀಳಗಿ ಮಠ - ಶ್ರೀಭೂತರಾಜರ ಸನ್ನಿಧಿ



ಭಂಡಾರಕೇರಿ ಮಠ - ಮುಖ್ಯಪ್ರಾಣದೇವರು



ಭಂಡಾರಕೇರಿ ಮಠ -

ಭೂತರಾಜರ ಸನ್ನಿಧಾನ



ಸೋದೆ ಶ್ರೀತ್ರಿವಿಕ್ರಮ ದೇವಾಲಯ - ಸೋಂದಾ ಕ್ಷೇತ್ರ



ಸೋದೆ ಶ್ರೀಭಾವಿಮರುತರ ಪಂಚವೃಂದಾವನ ಮಂದಿರ
ಮತ್ತು ಭೂತರಾಜರ ಗುಡಿ



ಸೋದೆ ಶ್ರೀವೇದವ್ಯಾಸರ ಸನ್ನಿಧಿ



ಶ್ರೀಭಾವಿಮರುತರ ಪಂಚವೃಂದಾವನ ಸನ್ನಿಧಿ



ಸೋದೆ ಶ್ರೀಧವಲಗಂಗಾ



ಸೋದೆ ಶ್ರೀಮಹರುದ್ರದೇವರ ಸನ್ನಿಧಿ



ಸೋದೆ ಶ್ರೀಮುಖ್ಯಪ್ರಾಣದೇವರ ಸನ್ನಿಧಿ



ಸೋದೆ ಶ್ರೀವೇಣುಗೋಪಾಲಕೃಷ್ಣ



ಸೋದೆ ಶ್ರೀಸ್ವಾಪ್ನವೃಂದಾವನಾಖ್ಯಾನ ಮಂದಿರ



ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು

श्रीलक्ष्मीसमेतश्रीपौरठभाजनायश्रीगोपालकृष्णायनमः॥श्रीकृष्ण॥हरिः ॐ॥श्रीएतद्व्याहितोनरकलानुरम्यसमी
रश्रीवादिराजगुरुसार्वभौमायनमः॥अधुनाविष्णोर्जीवजडात्मकप्रपंचादत्यंतभिन्नत्वंसाधयितुंतृतीयस्तोत्रमनुपक्र
मते॥सर्ववस्त्वात्मकंवंद्येति॥सत्यंज्ञानमनंतंब्रह्मेतिश्रुतौविधमानमनंतत्वंसर्ववस्त्वात्मकमित्व।तियदुच्यतेतदितिसंबंधः।
मायावादिनोति अनंतशब्दस्यदेशतःअनंतराहित्यंकालतःअनंतराहित्यंवस्तुतःअनंतराहित्यंच।यनंतशब्दार्थः॥नत्ववस्तु
तोंसराहित्यंनामसकलवस्तुभेदराहित्यमिति।नतुलमुप१मितिभावः॥कुतोनयुक्तमित्यतआह॥समस्तेति॥अत्रतज उ
विरोधिरूपमंतत्रयमलबंधनदुःखतोविरमितिग्रंथेब्रह्मणिजगतसमस्तवस्तुविरोधित्वकथनात्॥इदानींसमस्तवस्तु
भेदराहित्यकथनमिदंस्यमविरुध्यादयुक्तमितिभावः॥२॥दूषणांतरंचाह॥श्रुतिरितियतःश्रुतिःसत्यंज्ञानमनंतमितिश्रु
तिः॥आकृपूर्वकशब्देगेज्ञानमितिज्ञानरूपमाह।ततस्मात्तस्याश्रुतेरूपलक्षणंचैतत्॥सत्यमितिब्रह्मणःप्राकृसत्यलोकेः
अधुनोअनृतजगद्रूपत्वांगीकारेपरमतेश्रुतिविरोधश्चेत्यपिद्रष्टव्यं॥दोषांतरंचकुत्र१मारभते॥नायीति॥शब्दस्य
हृदयंगमा॥३॥अभिप्रेता॥कुतइत्यतआह।यदिति।यध्वस्मात्॥सत्याद्धःदेशतःअंतशून्यतादेशतोव्याप्तिमाह॥तथो
समाप्तीममेवार्थमाहेतियावत्॥अंतोस्यवधि।तत्रशून्यतानामसकलदेशावर्तित्वरूपव्याप्तिरेवेतिकालतःअंतशून्यतां
चकालोतोव्याप्तिमाचष्टेतियोऽना।त्तावस्तुवपुर्वदेव॥४॥ततस्मात्॥विभोःसकलदेशव्याप्तस्यापरपर्यायमहापरिणाः

इदंलेखनंशाके ७७ शार्वरीवत्सरमाघकृष्ण ७ सप्तमीभृगुवासरेसमाप्तं ॥ ॥अस्मद्गुर्वंतर्गत

ध्नतदव्यवहितोत्तरमुख्यसमीरश्रीमद्वेदव्येधसमेतश्रीमद्वादिराजहृदंबुजनिलय श्रीहनुमद्भीमम

ध्वांतःकरणरूढरामकृष्णवेदव्यासात्मकश्रीवृंदावनपगिअच्युतात्मकहयवदनःप्रीयतां ॥श्रीकृ

ष्णार्पणमस्तु ॥

# ಉಪೋದ್ಘಾತ

ವರ್ತಮಾನಸಮೀರರಾದ ಶ್ರೀಮದಾನಂದತೀರ್ಥಭಗವತ್ಪಾದರ ಮತಾನುಯಾಯಿಪಂಡಿತಮಂಡಲಿಗಿದು ತಿಳಿದ ಸಂಗತಿ. ಏನೆಂದರೆ ಕರಾಲಕಲಿಕಾಲ ಬಲದಿಂದ ನಾನಾವಿಧ ದುರ್ಮತಗಳ ದುರುಕ್ತಿಕುಯುಕ್ತಿಗಳ ನಿರಂತರ ಭಯಂಕರತರಂಗಗಳ ಪ್ರಚಂಡಮಾರುತದಿಂದಾಗಿ ತತ್ತರಿಸಿದ ಅಂತಃಕರಣವುಳ್ಳ; ಆದ್ದರಿಂದಲೇ ಸಾವಿರಾರು ಬಗೆಯ ತಾತ್ವಿಕ ಸಂಶಯ ವಿಪರೀತಜ್ಞಾನವೆಂಬ ಹಾಲಾಹಲ ಪ್ರವಾಹಪ್ರಹಾರದಿಂದ ಸಂಮೂರ್ಛಿತರಾಗಿ ದುಃಖವಿಹ್ವಲರಾಗಿರುವ ತತ್ವಜಿಜ್ಞಾಸು ಸಜ್ಜನರನ್ನು ಎಚ್ಚರಿಸಿ ಉತ್ತಮಬದುಕನ್ನು ಕರುಣಿಸಲು ಅಭಿನವಧನ್ವಂತರಿಯಂತೆ ಜಗತ್ಪ್ರಾಣರೆನಿಸಿರುವ ಸಂಜೀವಿನ್ಯಾಚಾರ್ಯರು ದಿವ್ಯಸಂಜೀವಿನಿಯಂತಿರುವ ಅನುವ್ಯಾಖ್ಯಾನವೆಂಬ ಅಮೃತವನ್ನು ನೀಡಿದರು. ಈ ಐತಿಹ್ಯವನ್ನು ಶ್ರೀನಾರಾಯಣ ಪಂಡಿತರು ಹೀಗೆ ಸ್ಪಷ್ಟಪಡಿಸಿದ್ದಾರೆ –

## ಭಾವಿಬ್ರಹ್ಮರ ಪ್ರಭುಸಂಹಿತೆ

**''ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ಯುಕ್ತಯೋ ನೋ ದುರುದ್ಧರಾಃ**
**ಮನೋಮಾಂದ್ಯಾತ್ ತತೋ ಗ್ರಂಥಂ ವ್ಯಕ್ತತರ್ಕತತಿಂ ಕುರು ॥೮೭॥**
**ಇತ್ಯರ್ಥಿತೋ ವ್ಯಧಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಸುಧಾಮ್ ।**
**ದುರ್ವಾದಿಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಮ್ ॥೮೮॥**
**ಯುಗಪತ್ ರಚಯನ್ನೇನಾಂ ಕದಾಚಿತ್ ಸ ನಿರಂತರಮ್ ।**
**ಚತುರಶ್ಚತುರಃ ಶಿಷ್ಯಾನ್ ಲೀಲಯಾಽಲೇಖಯತ್ ಖಲು ॥೮೯॥**
**ಯುಕ್ತಾಯಾಃ ಯುಕ್ತಿಮಾಲಾಯಾಃ ಪ್ರೋಕ್ತಾಯಾಸ್ತತ್ರ ಚಾತ್ಮನಾ ।**
**ವ್ಯಕ್ತಂ ಚಕ್ರೇ ವಿವರಣಂ ಕವೀಂದ್ರೈರೇಷ ದುಷ್ಕರಮ್ ॥೯೦॥'' ಎಂದು.**
**(ಮ.ವಿ. ಸರ್ಗ ೧೫)**

ಗುರುಗಳೇ ! ನಾವು ಮಂದಬುದ್ಧಿಯವರು. ತಾವೀಗ ರಚಿಸಿರುವ 'ಸೂತ್ರಭಾಷ್ಯ' ಮುಂತಾದ ಪ್ರೌಢಗ್ರಂಥಗಳಿಂದ ಯುಕ್ತಿಗಳನ್ನಾರಿಸಿ ತೆಗೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ನಮಗಾಗಿ ಸ್ಪಷ್ಟವಾಗುವ ಯುಕ್ತಿಗಳುಳ್ಳ ಹೊಸದೊಂದು ಗ್ರಂಥವನ್ನು ರಚಿಸಿ ಕೊಡಿ. ತ್ರಿವಿಕ್ರಮಪಂಡಿತರು ಹೀಗೆ ಪ್ರಾರ್ಥಿಸಿದ ಕೂಡಲೇ ಶ್ರೀಮದಾಚಾರ್ಯರು

ಅನುವ್ಯಾಖ್ಯಾನವೆಂಬ ಅಮೃತವನ್ನು ಜಗತ್ತಿಗೆ ನೀಡಿದರು. ಆ ಗ್ರಂಥ ಸಜ್ಜನರಿಗೆ ಅಮೃತಪ್ರಾಯವಾಗಿಯೂ, ದುರ್ವಾದಿಗಳ ಗರ್ವಪರ್ವತಗಳನ್ನು ಪುಡಿಹಿಟ್ಟು ಮಾಡುವುದರಲ್ಲಿ ವಜ್ರಾಯುಧದಂತೆಯೂ, ಮಾಯಾವಾದಿಗಳೆಂಬ ಕಗ್ಗತ್ತಲೆಯನ್ನು ಕಳೆಯುವುದರಲ್ಲಿ ಸೂರ್ಯನಂತೆಯೂ ಇತ್ತು.

ಇಂತಹ ನಾಲ್ಕು ಅಧ್ಯಾಯಗಳುಳ್ಳ ಅನುವ್ಯಾಖ್ಯಾನಗ್ರಂಥವನ್ನು ಹೇಳುತ್ತಾ ನಾಲ್ಕುಮಂದಿ ನಿಪುಣಶಿಷ್ಯರಿಂದ ಏಕಕಾಲದಲ್ಲಿ ಲೀಲೆಯಿಂದಲೇ ಬರೆಸಿದರು. ಶ್ರೀಮದಾಚಾರ್ಯರು ಆ ಅನುವ್ಯಾಖ್ಯಾನದಲ್ಲಿ ಯೋಗ್ಯವಾದ ಸದ್‌ಯುಕ್ತಿಸಮೂಹವನ್ನು ಉದಾಹರಿಸಿದ್ದರು. ಗಂಭೀರವಾದ ಎಷ್ಟೋ ಯುಕ್ತಿಗಳನ್ನು ಪ್ರಕಾಂಡಪಂಡಿತರಿಂದಲೂ ವಿವರಿಸಲು ಸಾಧ್ಯವಾಗಿರಲಿಲ್ಲ. ಆದ್ದರಿಂದ ತಾವೇ ಆ ಯುಕ್ತಿಗಳನ್ನು ಸ್ಪಷ್ಟವಾಗಿ ವಿವರಿಸುವ 'ನ್ಯಾಯವಿವರಣ'ವೆಂಬ ಮತ್ತೊಂದು ಗ್ರಂಥವನ್ನು ರಚಿಸಿದರು.

ಇಷ್ಟಾದರೂ ಈ ಗ್ರಂಥದಲ್ಲಿ ತುಂಬಿರುವ ಎಷ್ಟೋ ಪ್ರೌಢಯುಕ್ತಿಗಳನ್ನು ವಿಶಿಷ್ಟಪಂಡಿತರೂ ತಿಳಿಯಲಾಗುತ್ತಿರಲಿಲ್ಲ. ಆದ್ದರಿಂದ ಜಗತ್‌ಪ್ರಸಿದ್ಧರಾದ ಶ್ರೀಮತ್‌ಟೀಕಾಚಾರ್ಯರೇ ಹೀಗೆ ಸ್ಪಷ್ಟಪಡಿಸಿದ್ದಾರೆ -

''ಆನಂದತೀರ್ಥಭಗವದ್‌ವಚಸಾಂ ವಿಶಿಷ್ಟವ್ಯಾಖ್ಯಾನಕರ್ಮಣಿ ಸುರಾ ಅಧಿಕಾರಿಣೋಽತ್ರ । ಯನ್ಮಾದೃಶೋಽಪಿ ಯತತೇ ತದತೀವ ಹಾಸ್ಯಂ ಕಿಂ ನಾಮ ಭಕ್ತಿವಿವಶಸ್ಯ ವಿಭೂಷಣಂ ತತ್ ॥''

ಗರುಡಶೇಷಾದಿಗಳಿಗೆ ಗುರುಗಳಾದ ಶ್ರೀಮದಾನಂದತೀರ್ಥರ ಗಂಭೀರಗ್ರಂಥಗಳಿಗೆ ವ್ಯಾಖ್ಯಾನ ಮಾಡಲು ದೇವತೆಗಳೇ ಮುಖ್ಯಾಧಿಕಾರಿಗಳು. ಅಂದಮೇಲೆ ನನ್ನಂಥವರೂ ಟೀಕೆ ರಚಿಸುವುದೆಂದರೆ ಅತ್ಯಂತ ಹಾಸ್ಯಾಸ್ಪದ ಸಂಗತಿ. ಆದರೂ ಭಕ್ತಿವಿವಶನಾಗಿ ರಚಿಸುವುದರಿಂದ ವಿಶೇಷಭೂಷಣವಾಗಿರುತ್ತದೆ.

## ಭಾವಿಸಮೀರರ ಕಾಂತಾಸಂಹಿತೆ :

ಈ ಪ್ರಕಾರವಾಗಿ ಪ್ರಭುಸಂಹಿತಾಮಾರ್ಗದಿಂದ ಭಾವಿಬ್ರಹ್ಮ ಶ್ರೀಮದಾಚಾರ್ಯರು ಸಾರಿರುವ ವೇದಾಂತಪ್ರಮೇಯಸಾರಗಳನ್ನೇ, ಭಾವಿಸಮೀರರಾದ ಶ್ರೀಮದ್‌ವಾದಿರಾಜ ಗುರುಸಾರ್ವಭೌಮರು ಕಾಂತಾಸಂಹಿತಾಮಾರ್ಗದಿಂದ ಸದ್‌ಭಕ್ತರಿಗೆ ರಸವತ್ತಾಗಿ ಬೋಧಿಸುವ ಕೌಶಲ್ಯ ವಾತ್ಸಲ್ಯಧಾರೆಯನ್ನು ಹರಿಸಿದ್ದಾರೆ. ಕಾಮಧೇನು

ಕಲ್ಪವೃಕ್ಷಗಳಿಗಿಂತಲೂ ಮಿಗಿಲಾಗಿ ಸದ್‌ಭಕ್ತರ ಉತ್ಕೃಷ್ಟಕಾಮನೆಗಳನ್ನು ಪೂರೈಸುವ ಪರಮದಯಾಲುಗಳಾದ ಶ್ರೀಗುರುರಾಜರು, ಮನೋಭಿಮಾನಿಗಳಾದ ಗರುಡಶೇಷಾದಿಗಳ ಮನಸ್ಸುಗಳನ್ನೇ ನಿರಂತರ ಸೂರೆಗೊಳಿಸುವಂತಹ ಸುರಮುನಿನರಲೋಕಮಾನ್ಯವಾದ ದಿವ್ಯವಾದ "ಯುಕ್ತಿಮಲ್ಲಿಕಾ" ಎಂಬ ಗ್ರಂಥರತ್ನವನ್ನು ಲೀಲೆಯಿಂದಲೇ ರಚಿಸಿದರು. ಗುರುಸಾರ್ವಭೌಮರ ಈ ಯುಕ್ತಿಮಲ್ಲಿಕೆ ಅನಂತವೇದರಾಶಿಯನ್ನು ತನ್ನ ಮೂಗು ಮತ್ತು ಮುಖಕಮಲದಿಂದ ನಿರಂತರ ಹೊರಹೊಮ್ಮಿಸುತ್ತಿರುವ, ಆ ಅನಂತವೇದಗಳಿಂದ ಸದಾ ಪ್ರತಿಪಾದ್ಯನೂ ಆಗಿರುವ ಶ್ರೀಹಯಗ್ರೀವದೇವರ ಪಾವನಪಾದಕಮಲಗಳನ್ನೇ ಅತಿಗಾಢವಾಗಿ ಆಶ್ರಯಿಸಿಕೊಂಡಿದೆ. ಆದ್ದರಿಂದ ಅಪಾರಕೃಪಾಸಾಗರನಾದ ಹಯಗ್ರೀವದೇವರ ಪಾದಕಮಲಗಳ ಅನಂತ ಬಗೆಯ ಸದ್‌ಗುಣಸುಗಂಧಮಕರಂದ ವೈವಿಧ್ಯದಿಂದ ಸಂಮಿಶ್ರಣಗೊಂಡಿರುವ ಈ ಯುಕ್ತಿಮಲ್ಲಿಕೆ, ತನ್ನದೇ ಆದ ಅಗಾಧ ಭವಗದ್‌ಭಕ್ತಿಸ್ತುತಿಯ ದಿವ್ಯಕಂಪಿನಿಂದಲೂ ಕಂಗೊಳಿಸುತ್ತಾ ಸುರಮುನಿನರೋತ್ತಮರ ಮನೋಭ್ರಮರಗಳನ್ನು ಬಗೆಬಗೆಯಾಗಿ ಸೂರೆಗೊಳಿಸಿ ಬಳಿ ಸೆಳೆಯುತ್ತಿದೆ. ಮತ್ತು ಮಹಾಕಾವ್ಯದ ಎಲ್ಲ ಲಕ್ಷಣಗಳಿಗಿಂತಲೂ ಮಿಗಿಲಾದ ದಿವ್ಯಕಾವ್ಯಲಕ್ಷಣಗಳಿಂದ ಕಂಗೊಳಿಸುವ ಸರ್ವವಿಧಮಹಾಶಾಸ್ತ್ರಲಕ್ಷಣಗಳಿಂದಲೂ ವಿಶಿಷ್ಟವಾಗಿರುವ ಈ ಅಪೂರ್ವಶಾಸ್ತ್ರಕಾವ್ಯವು, ಸರಸಕವಿಸಾಹಿತ್ಯ, ಸರಲಪದಲಾಲಿತ್ಯ, ಹೊಸಹೊಸದಾದ ಆಧ್ಯಾತ್ಮಿಕಾರ್ಥ- ಗಾಂಭೀರ್ಯದ ಆವಿಷ್ಕಾರ ಮುಂತಾದ ಅನಿತರಸಾಧಾರಣಗುಣ-ಮಾಣಿಕ್ಯಾಭರಣಗಳಿಂದ ಸಾತ್ವಿಕಜಿಜ್ಞಾಸುಗಳ ಹೃದಯಮಂಟಪಗಳನ್ನು ಸುತ್ತಲೂ ಅಲಂಕರಿಸುತ್ತದೆ. ಅಲ್ಲದೆ ದಿವ್ಯಸುಗಂಧವೈವಿಧ್ಯದಿಂದ ಚಿರಕಾಲ ಪರಿಪರಿಯಾಗಿ ಪರಿಮಳಯುಕ್ತವನ್ನಾಗಿ ಮಾಡುತ್ತದೆ. ಇದರ ಜೊತೆಗೆ ಅಲೌಕಿಕಕೌಶಲ್ಯದಿಂದೊಳಗೊಂಡ ವಿಪುಲ ಗಂಭೀರಹಾಸ್ಯರಸಾನುರಂಜಿತವಾದ ನಾನಾವಿಧಸದಾಗಮಾನುಸಾರಿ ಸದ್‌ಯುಕ್ತಿಗಳೆಂಬ ಮಲ್ಲಿಗೆಮಾಲೆಗಳಿಂದಲೂ ಅತಿಚಮತ್ಕಾರಮಯಚಿತ್ರವೈಖರಿಯನ್ನು ರೂಪಿಸುತ್ತದೆ.

ಅಶಿಕ್ಷಿತಪತಿಯ ಅತಿಹಿತಸಾಧಕಳಾದ ಕುಶಲಕಾಂತೆಯು, ತನ್ನ ಸುಶಿಕ್ಷಿತಸರಸಮೃದುವಚನವಿಲಾಸಗಳಿಂದ ಮತ್ತು ಸುಗಂಧಮಾಲ್ಯಾದಿ ಅಲಂಕಾರಗಳಿಂದ ಪತಿಯನ್ನು ವಿಶೇಷವಾಗಿ ವಶಮಾಡಿಕೊಂಡು ನಿರಂತರ ಶ್ರೇಯೋಮಾರ್ಗದಲ್ಲೇ ಪ್ರೇರಿಸುವಂತೆ ಈ ಯುಕ್ತಿಮಲ್ಲಿಕಾಗ್ರಂಥವೂ ತನ್ನ ಅತ್ಯದ್ಭುತ ಅಧ್ಯಾತ್ಮರಸದ ಸೌಗಂಧ್ಯವೈವಿಧ್ಯದಿಂದ ಸಕಲವಿಧಸಾತ್ವಿಕಜಿಜ್ಞಾಸುಗಳನ್ನೂ ವಿಶೇಷವಾಗಿ ಆಕರ್ಷಿಸಿ

ಅನುವ್ಯಾಖ್ಯಾನವೆಂಬ ಅಮೃತವನ್ನು ಜಗತ್ತಿಗೆ ನೀಡಿದರು. ಆ ಗ್ರಂಥ ಸಜ್ಜನರಿಗೆ ಅಮೃತಪ್ರಾಯವಾಗಿಯೂ, ದುರ್ವಾದಿಗಳ ಗರ್ವಪರ್ವತಗಳನ್ನು ಪುಡಿಹಿಟ್ಟು ಮಾಡುವುದರಲ್ಲಿ ವಜ್ರಾಯುಧದಂತೆಯೂ, ಮಾಯಾವಾದಿಗಳೆಂಬ ಕಗ್ಗತ್ತಲೆಯನ್ನು ಕಳೆಯುವುದರಲ್ಲಿ ಸೂರ್ಯನಂತೆಯೂ ಇತ್ತು.

ಇಂತಹ ನಾಲ್ಕು ಅಧ್ಯಾಯಗಳುಳ್ಳ ಅನುವ್ಯಾಖ್ಯಾನಗ್ರಂಥವನ್ನು ಹೇಳುತ್ತಾ ನಾಲ್ಕುಮಂದಿ ನಿಪುಣಶಿಷ್ಯರಿಂದ ಏಕಕಾಲದಲ್ಲಿ ಲೀಲೆಯಿಂದಲೇ ಬರೆಸಿದರು. ಶ್ರೀಮದಾಚಾರ್ಯರು ಆ ಅನುವ್ಯಾಖ್ಯಾನದಲ್ಲಿ ಯೋಗ್ಯವಾದ ಸದ್‌ಯುಕ್ತಿಸಮೂಹವನ್ನು ಉದಾಹರಿಸಿದ್ದರು. ಗಂಭೀರವಾದ ಎಷ್ಟೋ ಯುಕ್ತಿಗಳನ್ನು ಪ್ರಕಾಂಡಪಂಡಿತರಿಂದಲೂ ವಿವರಿಸಲು ಸಾಧ್ಯವಾಗಿರಲಿಲ್ಲ. ಆದ್ದರಿಂದ ತಾವೇ ಆ ಯುಕ್ತಿಗಳನ್ನು ಸ್ಪಷ್ಟವಾಗಿ ವಿವರಿಸುವ 'ನ್ಯಾಯವಿವರಣ'ವೆಂಬ ಮತ್ತೊಂದು ಗ್ರಂಥವನ್ನು ರಚಿಸಿದರು.

ಇಷ್ಟಾದರೂ ಈ ಗ್ರಂಥದಲ್ಲಿ ತುಂಬಿರುವ ಎಷ್ಟೋ ಪ್ರೌಢಯುಕ್ತಿಗಳನ್ನು ವಿಶಿಷ್ಟಪಂಡಿತರೂ ತಿಳಿಯಲಾಗುತ್ತಿರಲಿಲ್ಲ. ಆದ್ದರಿಂದ ಜಗತ್‌ಪ್ರಸಿದ್ಧರಾದ ಶ್ರೀಮತ್‌ಟೀಕಾಚಾರ್ಯರೇ ಹೀಗೆ ಸ್ಪಷ್ಟಪಡಿಸಿದ್ದಾರೆ –

''ಆನಂದತೀರ್ಥಭಗವದ್‌ವಚಸಾಂ ವಿಶಿಷ್ಟವ್ಯಾಖ್ಯಾನಕರ್ಮಣಿ ಸುರಾ ಅಧಿಕಾರಿಣೋಽತ್ರ । ಯನ್ಮಾದೃಶೋಽಪಿ ಯತತೇ ತದತೀವ ಹಾಸ್ಯಂ ಕಿಂ ನಾಮ ಭಕ್ತಿವಿವಶಸ್ಯ ವಿಭೂಷಣಂ ತತ್ ॥''

ಗರುಡಶೇಷಾದಿಗಳಿಗೆ ಗುರುಗಳಾದ ಶ್ರೀಮದಾನಂದತೀರ್ಥರ ಗಂಭೀರಗ್ರಂಥಗಳಿಗೆ ವ್ಯಾಖ್ಯಾನ ಮಾಡಲು ದೇವತೆಗಳೇ ಮುಖ್ಯಾಧಿಕಾರಿಗಳು. ಅಂದಮೇಲೆ ನನ್ನಂಥವರೂ ಟೀಕೆ ರಚಿಸುವುದೆಂದರೆ ಅತ್ಯಂತ ಹಾಸ್ಯಾಸ್ಪದ ಸಂಗತಿ. ಆದರೂ ಭಕ್ತಿವಿವಶನಾಗಿ ರಚಿಸುವುದರಿಂದ ವಿಶೇಷಭೂಷಣವಾಗಿರುತ್ತದೆ.

## ಭಾವಿಸಮೀರರ ಕಾಂತಾಸಂಹಿತೆ :

ಈ ಪ್ರಕಾರವಾಗಿ ಪ್ರಭುಸಂಹಿತಾಮಾರ್ಗದಿಂದ ಭಾವಿಬ್ರಹ್ಮ ಶ್ರೀಮದಾಚಾರ್ಯರು ಸಾರಿರುವ ವೇದಾಂತಪ್ರಮೇಯಸಾರಗಳನ್ನೇ, ಭಾವಿಸಮೀರರಾದ ಶ್ರೀಮದ್‌ವಾದಿರಾಜ ಗುರುಸಾರ್ವಭೌಮರು ಕಾಂತಾಸಂಹಿತಾಮಾರ್ಗದಿಂದ ಸದ್‌ಭಕ್ತರಿಗೆ ರಸವತ್ತಾಗಿ ಬೋಧಿಸುವ ಕೌಶಲ್ಯ ವಾತ್ಸಲ್ಯಧಾರೆಯನ್ನು ಹರಿಸಿದ್ದಾರೆ. ಕಾಮಧೇನು

ಕಲ್ಪವೃಕ್ಷಗಳಿಗಿಂತಲೂ ಮಿಗಿಲಾಗಿ ಸದ್‌ಭಕ್ತರ ಉತ್ಕೃಷ್ಟಕಾಮನೆಗಳನ್ನು ಪೂರೈಸುವ ಪರಮದಯಾಲುಗಳಾದ ಶ್ರೀಗುರುರಾಜರು, ಮನೋಭಿಮಾನಿಗಳಾದ ಗರುಡಶೇಷಾದಿಗಳ ಮನಸ್ಸುಗಳನ್ನೇ ನಿರಂತರ ಸೂರೆಗೊಳಿಸುವಂತಹ ಸುರಮುನಿನರಲೋಕಮಾನ್ಯವಾದ ದಿವ್ಯವಾದ ''ಯುಕ್ತಿಮಲ್ಲಿಕಾ'' ಎಂಬ ಗ್ರಂಥರತ್ನವನ್ನು ಲೀಲೆಯಿಂದಲೇ ರಚಿಸಿದರು. ಗುರುಸಾರ್ವಭೌಮರ ಈ ಯುಕ್ತಿಮಲ್ಲಿಕೆ ಅನಂತವೇದರಾಶಿಯನ್ನು ತನ್ನ ಮೂಗು ಮತ್ತು ಮುಖಕಮಲದಿಂದ ನಿರಂತರ ಹೊರಹೊಮ್ಮಿಸುತ್ತಿರುವ, ಆ ಅನಂತವೇದಗಳಿಂದ ಸದಾ ಪ್ರತಿಪಾದ್ಯನೂ ಆಗಿರುವ ಶ್ರೀಹಯಗ್ರೀವದೇವರ ಪಾವನಪಾದಕಮಲಗಳನ್ನೇ ಅತಿಗಾಢವಾಗಿ ಆಶ್ರಯಿಸಿಕೊಂಡಿದೆ. ಆದ್ದರಿಂದ ಅಪಾರಕೃಪಾಸಾಗರನಾದ ಹಯಗ್ರೀವದೇವರ ಪಾದಕಮಲಗಳ ಅನಂತ ಬಗೆಯ ಸದ್‌ಗುಣಸುಗಂಧಮಕರಂದ ವೈವಿಧ್ಯದಿಂದ ಸಂಮಿಶ್ರಣಗೊಂಡಿರುವ ಈ ಯುಕ್ತಿಮಲ್ಲಿಕೆ, ತನ್ನದೇ ಆದ ಅಗಾಧ ಭಗವದ್‌ಭಕ್ತಿಸ್ತುತಿಯ ದಿವ್ಯಕಂಪಿನಿಂದಲೂ ಕಂಗೊಳಿಸುತ್ತಾ ಸುರಮುನಿನರೋತ್ತಮರ ಮನೋಭ್ರಮರಗಳನ್ನು ಬಗೆಬಗೆಯಾಗಿ ಸೂರೆಗೊಳಿಸಿ ಬಳಿ ಸೆಳೆಯುತ್ತಿದೆ. ಮತ್ತು ಮಹಾಕಾವ್ಯದ ಎಲ್ಲ ಲಕ್ಷಣಗಳಿಗಿಂತಲೂ ಮಿಗಿಲಾದ ದಿವ್ಯಕಾವ್ಯಲಕ್ಷಣಗಳಿಂದ ಕಂಗೊಳಿಸುವ ಸರ್ವವಿಧಮಹಾಶಾಸ್ತ್ರಲಕ್ಷಣಗಳಿಂದಲೂ ವಿಶಿಷ್ಟವಾಗಿರುವ ಈ ಅಪೂರ್ವಶಾಸ್ತ್ರಕಾವ್ಯವು, ಸರಸಕವಿಸಾಹಿತ್ಯ, ಸರಲಪದಲಾಲಿತ್ಯ, ಹೊಸಹೊಸದಾದ ಆಧ್ಯಾತ್ಮಿಕಾರ್ಥ- ಗಾಂಭೀರ್ಯದ ಆವಿಷ್ಕಾರ ಮುಂತಾದ ಅನಿತರಸಾಧಾರಣಗುಣ- ಮಾಣಿಕ್ಯಾಭರಣಗಳಿಂದ ಸಾತ್ವಿಕಜಿಜ್ಞಾಸುಗಳ ಹೃದಯಮಂಟಪಗಳನ್ನು ಸುತ್ತಲೂ ಅಲಂಕರಿಸುತ್ತದೆ. ಅಲ್ಲದೆ ದಿವ್ಯಸುಗಂಧವೈವಿಧ್ಯದಿಂದ ಚಿರಕಾಲ ಪರಿಪರಿಯಾಗಿ ಪರಿಮಳಯುಕ್ತವನ್ನಾಗಿ ಮಾಡುತ್ತದೆ. ಇದರ ಜೊತೆಗೆ ಅಲೌಕಿಕಕೌಶಲ್ಯದಿಂದೊಳಗೊಂಡ ವಿಪುಲ ಗಂಭೀರಹಾಸ್ಯರಸಾನುರಂಜಿತವಾದ ನಾನಾವಿಧಸದಾಗಮಾನುಸಾರಿ ಸದ್‌ಯುಕ್ತಿಗಳೆಂಬ ಮಲ್ಲಿಗೆಮಾಲೆಗಳಿಂದಲೂ ಅತಿಚಮತ್ಕಾರಮಯಚಿತ್ರವೈಖರಿಯನ್ನು ರೂಪಿಸುತ್ತದೆ.

ಅಶಿಕ್ಷಿತಪತಿಯ ಅತಿಹಿತಸಾಧಕಳಾದ ಕುಶಲಕಾಂತೆಯು, ತನ್ನ ಸುಶಿಕ್ಷಿತಸರಸಮೃದುವಚನವಿಲಾಸಗಳಿಂದ ಮತ್ತು ಸುಗಂಧಮಾಲ್ಯಾದಿ ಅಲಂಕಾರಗಳಿಂದ ಪತಿಯನ್ನು ವಿಶೇಷವಾಗಿ ವಶಮಾಡಿಕೊಂಡು ನಿರಂತರ ಶ್ರೇಯೋಮಾರ್ಗದಲ್ಲೇ ಪ್ರೇರಿಸುವಂತೆ ಈ ಯುಕ್ತಿಮಲ್ಲಿಕಾಗ್ರಂಥವೂ ತನ್ನ ಅತ್ಯದ್ಭುತ ಅಧ್ಯಾತ್ಮರಸದ ಸೌಗಂಧ್ಯವೈವಿಧ್ಯದಿಂದ ಸಕಲವಿಧಸಾತ್ವಿಕಜಿಜ್ಞಾಸುಗಳನ್ನೂ ವಿಶೇಷವಾಗಿ ಆಕರ್ಷಿಸಿ

ಉತ್ತರೋತ್ತರಪ್ರಗತಿಪರಪಥದಲ್ಲಿ ಮುನ್ನಡೆಸುತ್ತದೆ. ಶ್ರೀಗುರುರಾಜರ ಸಹೋದರರಾದ ಶ್ರೀಸುರೋತ್ತಮತೀರ್ಥರೇ ಸೂಚಿಸಿರುವಂತೆ 'ಯುಕ್ತಿಮಲ್ಲಿಕಾ' ಎಂಬ ಗ್ರಂಥನಾಮದ ಪರಮಾರ್ಥವ್ಯಾಪ್ತಿಯನ್ನು ಹೀಗೆ ಚಿಂತಿಸಬೇಕು -

ಲೋಕದಲ್ಲಿ ಸರ್ವಾನುರಾಗಕ್ಕೆ ಪಾತ್ರವಾದ ಮಲ್ಲಿಗೆಹೂಗಳು ನಾನಾಪ್ರದೇಶಗಳಲ್ಲಿ ನಾನಾಬಗೆಗಳಲ್ಲಿ ಪ್ರಸಿದ್ಧವಾಗಿವೆ. ಸುಗಂಧರಾಜಮಲ್ಲಿಗೆ, ರಾತ್ರಿರಾಣಿಮಲ್ಲಿಗೆ, ಕಾಡುಮಲ್ಲಿಗೆ, ಕೋಡುಮಲ್ಲಿಗೆ, ನಾಡುಮಲ್ಲಿಗೆ, ದುಂಡುಮಲ್ಲಿಗೆ, ಚಂಡುಮಲ್ಲಿಗೆ, ಚಂದ್ರಮಲ್ಲಿಗೆ, ಅಂಬರಮಲ್ಲಿಗೆ, ಜಾಲಿಮಲ್ಲಿಗೆ, ಜಾಜಿಮಲ್ಲಿಗೆ, ಸೂಜಿಮಲ್ಲಿಗೆ, ದೇವಮಲ್ಲಿಗೆ ಹೀಗೆ ಸುಗಂಧವೈವಿಧ್ಯಯುಕ್ತವಾದ ಬಗೆಬಗೆಯ ಕೋಮಲಮಲ್ಲಿಗೆಮಾಲೆಗಳು ಸಕಲ ಸಹೃದಯರ ಚಿತ್ತಭ್ರಮರಗಳನ್ನು ವಿಶೇಷವಾಗಿ ಆಕರ್ಷಿಸುತ್ತವೆ. ಅಂತೆಯೇ ಶ್ರೀಗುರುರಾಜರ ಸರಲಗಂಭೀರಕುಶಲಮಯ ಸುಯುಕ್ತಿಗಳೆಂಬ ಕಮನೀಯ ಕೋಮಲ ಮಲ್ಲಿಗೆಮಾಲೆಗಳು, ಸಹೃದಯ ಜಿಜ್ಞಾಸುವೃಂದವನ್ನು ಅಪೂರ್ವಪ್ರಕಾರದಲ್ಲಿ ಸೂರೆಗೊಳಿಸಿ ಕೃತಕೃತ್ಯರನ್ನಾಗಿಸುತ್ತವೆ. ಲೋಕಪ್ರಸಿದ್ಧಮಲ್ಲಿಗೆಗಳು ಹತ್ತಾರು ಬಗೆಗಳಲ್ಲಿದ್ದರೆ, ಶ್ರೀಗುರುರಾಜರ ಅಪೂರ್ವಚಾತುರ್ಯಯುಕ್ತಸುಯುಕ್ತಿಮಲ್ಲಿಗೆಗಳು ಸಾವಿರಾರು ಬಗೆಗಳಲ್ಲಿ ಸುಮನೋಹರವಾಗಿ ವಿರಾಜಮಾನವಾಗಿವೆ.

ದೇವತೆಗಳಿಗೆ ಅಮೃತಭೋಜನಾಸ್ವಾದವನ್ನು ಮಾಡಿಸುವ ಮೋಹಿನಿಯ ಸೌಟೇ ಚಕ್ರಾಯುಧವಾಗಿ ಪರಿಣಮಿಸಿ ರಾಹುವಿನ ಶಿರಶ್ಛೇದ ಮಾಡಿದಂತೆ; ಸುಜಿಜ್ಞಾಸುಗಳಿಗೆ ಸಾವಿರಾರು ಬಗೆಗಳಲ್ಲಿ ಅಧ್ಯಾತ್ಮಾಮೃತಸಂಜೀವಿನೀರಸಾಸ್ವಾದವನ್ನೊದಗಿಸುವ ಈ ಪ್ರಮಿತಲಲಿತಯುಕ್ತಿಮಲ್ಲಿಗೆಗಳೇ ಪರಮತನಿರಾಸಪ್ರಸಂಗದಲ್ಲಿ ಇಂದ್ರವಜ್ರಾಯುಧ, ಶಿವಶೂಲಾಯುಧಗಳಿಗಿಂತಲೂ ಮಿಗಿಲಾದ ನಾನಾವಿಧ ದಿವ್ಯಾಯುಧಗಳಾಗುವ ಚಮತ್ಕಾರಪಾತ್ರಗಳನ್ನು ಧರಿಸುತ್ತವೆ. 'ಅಶನಿಸಮಕಠೋರಮಲ್ಲಘಾತೋ ಮೃದುನಿ ಹರೇರಫಲಃ ಕಲೇವರೇಽಭೂತ್' (ರುಗ್ಮಿ-ವಿ-ಸ-10 ಶ್ಲೋ-44) ಎಂಬ ಗುರುರಾಜರ ಉಕ್ತಿಯಂತೆ ಕಮಲಕ್ಕಿಂತಲೂ ಅತಿಕೋಮಲವಾದ ಬಾಲಕೃಷ್ಣನ ಕಮನೀಯಕಲೇವರ (ಶರೀರ)ದಲ್ಲಿ ಪರ್ವತಗಾತ್ರದ ಚಾಣೂರನ ವಜ್ರಮುಷ್ಟಿಪ್ರಹಾರಗಳೆಲ್ಲವೂ ವಿಫಲವಾದದ್ದಲ್ಲದೇ ಕೃಷ್ಣನ ಕೋಮಲಕರಕಮಲಸ್ಪರ್ಶಮಾತ್ರದಿಂದಲೇ ತಾನೇ ಪುಡಿಹಿಟ್ಟಾದಂತೆ; ಗುರುರಾಜರ ಕುಶಲಮಯಲಲಿತ ಪ್ರಮಿತಯುಕ್ತಿಮಲ್ಲಿಗೆ-ಮಾಲೆಗಳೆದುರು ಪರವಾದಿಗಳೆಲ್ಲರ ವಿವಿಧದುರ್ವಾದಪರ್ವತಗಳೆಲ್ಲವೂ ನಿಶ್ಶೇಷವಾಗಿ

ವಿನಾಶವಾಗುವಂತಹ ಅತ್ಯಪೂರ್ವಚಮತ್ಕಾರವೈಖರಿಗಳನ್ನು ಈ ಗ್ರಂಥದಲ್ಲಿ ಹೆಜ್ಜೆಹೆಜ್ಜೆಗೂ ಅನುಭವಿಸಬಹುದು. ಇದಲ್ಲದೇ ಸಕಲವಿಧ ಸುಗಂಧಗಳಿಗೂ ಮೂಲಭೂತನಾದ ಅಮಿತಾನಂತ ಸುಗಂಧಮಯಸ್ವರೂಪನಾದ ಭಗವಂತನ ಸತ್ಯ, ಶೌಚ, ದಯೆ, ತ್ಯಾಗ, ಆನಂದ, ಜ್ಞಾನ, ಋಜುತ್ವ, ಸಹನೆ, ವೀರ್ಯ, ಶೌರ್ಯ, ಸ್ಥೈರ್ಯ, ಗಾಂಭೀರ್ಯ, ಐಶ್ವರ್ಯ, ಸ್ವಾತಂತ್ರ್ಯ, ಆಸ್ತಿಕ್ಯ, ಅನಹಂಕಾರ ಮುಂತಾದ ನಿತ್ಯಸತ್ಯಮಹಾಗುಣಗಳೆಂಬ ದಿವ್ಯಸುಗಂಧವೈವಿಧ್ಯವನ್ನು ಪ್ರತಿದಲಗಳಲ್ಲೂ ಅಕ್ಷಯವಾಗಿ ತುಂಬಿಸಿಕೊಂಡು ಸಹೃದಯ ಜಿಜ್ಞಾಸುವರ್ಗಕ್ಕೆ ಲೋಕವಿಲಕ್ಷಣಸಂತೃಪ್ತಿಯ ಸಮೃದ್ಧಿಯನ್ನುಂಟುಮಾಡುತ್ತವೆ. ಹೀಗೆ ಈ ಗ್ರಂಥದಲ್ಲಿ ಶ್ರೀಹರಿಯ ವಿವಿಧ ಸುಗುಣಸುಗಂಧಮಕರಂದವೈಖರಿಯನ್ನೂ, ಇದಕ್ಕೆ ಪ್ರತಿಬಂದಿಯಾಗುವ ದುರ್ವಾದಿಗಳ ದುರ್ವಾದಗಳೆಂಬ ದುರ್ಗಂಧಕುಸುಮಗಳ ದೂರೀಕರಣವೈಶಿಷ್ಟ್ಯವನ್ನೂ ಆಧ್ಯಾತ್ಮಿಕಭಕ್ತ್ಯುದ್ರೇಕದ ದಿವ್ಯಸುಗಂಧವನ್ನೂ, ಪ್ರಗತಿಪರಸೂಕ್ತಸಂದೇಶಗಳ ಸುಗಂಧವನ್ನೂ, ಮುಕ್ತಿಫಲಸುಗಂಧಮಕರಂದವನ್ನೂ ಸಾಧಕಮಧುಕರರೆಲ್ಲರೂ ಸುಲಭಕಾವ್ಯಶಾಸ್ತ್ರಮಾಧ್ಯಮದಿಂದ ಅನುಭವಿಸಿ ಕೃತಕೃತ್ಯರಾಗಬೇಕು.

## ವೃತ್ತಾಲಂಕಾರಗಳಿಗೂ ಅಧ್ಯಾತ್ಮಾರ್ಥಪರತ್ವ

ಈ ಗ್ರಂಥದಲ್ಲಿಯ ಪ್ರತಿ ಅಕ್ಷರಗಳು, ಪ್ರತಿಪದಗಳು ಪ್ರತಿ ಛಂದಸ್ಸುಗಳು, ಪ್ರತಿ ಅಲಂಕಾರಗಳೂ ಅನೇಕ ಆಧ್ಯಾತ್ಮಿಕಾರ್ಥಗರ್ಭಿತವಾಗಿವೆ. ಕಾಲ್ಪನಿಕ ಕಾವ್ಯಾಲಂಕಾರಗಳಲ್ಲಿ ಲೋಕವಿಖ್ಯಾತರಾದ ಭವಭೂತಿ ಕಾಲಿದಾಸಾದಿಮಹಾಕವಿಗಳೂ ಕೂಡ ಪಾರಮಾರ್ಥಿಕಕಾವ್ಯಾಲಂಕಾರಗಳನ್ನು ಅತ್ಯದ್ಭುತಪ್ರಕಾರಗಳಲ್ಲಿ ಪರಮಾದರ್ಶಪ್ರಾಯವಾಗಿ ನಿರ್ಮಿಸಿರುವ ಕವಿಕುಲಲಲಾಮರಾದ ಶ್ರೀಗುರುರಾಜರ ಕಾಲಿಗೆ ದಾಸರಾಗಬೇಕು. ಅಂತಹ ಕಾವ್ಯಶಾಸ್ತ್ರಚಿಂತಾಮಣಿಯಾದ ಈ ಗ್ರಂಥದಲ್ಲಿ 'ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ' ಎಂಬ ಗ್ರಂಥಕಾರರ ಸಂದೇಶದಂತೆ ಶ್ರೀಹರಿಗುರುಭಕ್ತಿಯಿಂದ ಸಾಧಕರು ನಿರ್ದುಷ್ಟವಿಶಿಷ್ಟ ಆಧ್ಯಾತ್ಮಿಕಾರ್ಥಸಮೃದ್ಧಿಯನ್ನು ಸಂಪಾದಿಸಬೇಕು. ಶ್ರೀಗುರುರಾಜರು ಆರಂಭದ ಮಂಗಲಾಚರಣೆಯಲ್ಲಿ ಸಮಗ್ರಗ್ರಂಥದ ಸಾರವನ್ನು ಸಂಗ್ರಹಿಸಿರುವುದಲ್ಲದೇ, ಈ ಪದ್ಯವನ್ನು 'ಸ್ರಗ್‌ಧರಾವೃತ್ತ'ದಿಂದ ಶ್ರೀಹಯಗ್ರೀವದೇವರನ್ನು ಕುರಿತು ಮಾಡಿದ್ದಾರೆ. ಗ್ರಂಥನಾಮಕ್ಕೆ ಅನ್ವರ್ಥವಾಗುವಂತಹ 'ಹೂವಿನ ಮಾಲೆಯನ್ನು ಧರಿಸಿದವನೆಂಬ' ಸಂದರ್ಭೋಚಿತವೃತ್ತವನ್ನೇ ಬಳಸಿಕೊಂಡು ತಮ್ಮ ಸದ್‌ಯುಕ್ತಿಮಲ್ಲಿಕೆಯ ಮಾಲೆಯನ್ನು ಉಪಾಸ್ಯಮೂರ್ತಿ ಶ್ರೀಹಯಗ್ರೀವದೇವರಿಗೆ

ಸಮರ್ಪಿಸಿದ್ದಾರೆ. ಹಯಗ್ರೀವದೇವರ ನಿರಂತರ ಉದದೇಶಧಾರೆಗೆ ಮತ್ತು ದಯಾಸಮುದ್ರಕ್ಕೆ ತಾವು ಪಾತ್ರರಾಗಿರುವುದನ್ನು ಶ್ರೀಗುರುರಾಜರೇ ಅನೇಕ ಪ್ರಸಂಗಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಶ್ರೀಹಯಗ್ರೀವದೇವರ ಅಪಾರ ಮೂಲವಿದ್ಯೋಪದೇಶವನ್ನೇ ಲೋಕದಲ್ಲಿ ಲೇಶತಃ ಪ್ರಸಾರ ಮಾಡಿದಂತಹ ಶ್ರೀವೇದವ್ಯಾಸದೇವರನ್ನು ಎರಡನೇ ಪದ್ಯದಲ್ಲಿ 'ವಸಂತತಿಲಕ' ವೃತ್ತದಿಂದ ಸ್ತುತಿಸಿದ್ದಾರೆ. ಎಲ್ಲ ದೇಶಕಾಲವಸ್ತುಗಳಲ್ಲೂ ಸ್ವತಂತ್ರನಿಯಾಮಕನಾಗಿದ್ದು, ಸಕಲಸದಾಗಮಗಳಲ್ಲೂ ಪ್ರತಿಪಾದ್ಯನಾಗಿ ನೆಲೆಸಿದ್ದು, ಮತ್ತು ಮುನಿಯಾಗಿದ್ದರೂ ವಸಂತಾಹ್ವಯಮನ್ಮಥನಿಗಿಂತಲೂ ಅನನ್ಯತಾರುಣ್ಯ ಲಾವಣ್ಯಾದಿ ಅನಂತಗುಣಗಳಿಂದ ಪರಮಸುಂದರಸ್ವರೂಪರಾದ ಶ್ರೀಹಯಗ್ರೀವಾಭಿನ್ನ ಶ್ರೀವೇದವ್ಯಾಸದೇವರಿಗೆ ಅಹಿಂಸೆ, ಇಂದ್ರಿಯನಿಗ್ರಹ, ಸರ್ವಭೂತದಯೆ, ಸತ್ಯ, ಜ್ಞಾನ, ತಪಸ್ಸು, ಶೌಚ, ಧ್ಯಾನಗಳೆಂಬ ಅಷ್ಟವಿಧ ವಿಶಿಷ್ಟಭಾವಪುಷ್ಪಗಳ ಅನನ್ಯಭಕ್ತಿಮಕರಂದಭರಿತ ಸುಗಂಧತಿಲಕವನ್ನು ಸಮರ್ಪಿಸಿದ್ದಾರೆ.

ಅನಂತರ ಜಗದ್ಗುರುಗಳಾದ ವಾಯುದೇವರ ಮಹಿಮೆಯನ್ನು 'ಶಾರ್ದೂಲವಿಕ್ರೀಡಿತ' ವೃತ್ತದಿಂದ ಅನ್ವರ್ಥಕವಾಗಿ ವರ್ಣಿಸಿದ್ದಾರೆ. ಶಾರ್ದೂಲಶಬ್ದಕ್ಕೆ ಸಿಂಹವೆಂದು ಮುಖ್ಯಾರ್ಥ. ವನರಾಜನಾದ ಸಿಂಹವು ಆನೆ, ಹುಲಿ ಮುಂತಾದ ಬಲಿಷ್ಠಪ್ರಾಣಿಗಳನ್ನು ಅನಾಯಾಸವಾಗಿ ಸಂಹರಿಸಿ ವಿಜಯಕ್ರೀಡೆಯನ್ನು ಪ್ರದರ್ಶಿಸಿ ಸ್ವಪರಿವಾರಕ್ಕೆ ಸಂತೋಷವನ್ನುಂಟುಮಾಡುವಂತೆ, ಅಮಿತವಿಕ್ರಮನರಸಿಂಹದೇವರು ಪ್ರಚಂಡದೈತ್ಯರನ್ನೂ ಲೀಲೆಯಿಂದಲೇ ಸಂಹರಿಸಿ, ಸಿಂಹಕ್ರೀಡೆಯನ್ನು ಅನುಕರಿಸಿ ಸ್ವಭಕ್ತವೃಂದವನ್ನು ಹರ್ಷೋತ್ಕರ್ಷಭರಿತರನ್ನಾಗಿ ಮಾಡುವಂತೆ, ಹನುಮಂತದೇವರೂ ಸಿಂಹಿಕಾದಿಸಂಹಾರಪೂರ್ವಕ ಸಮುದ್ರಲಂಘನ, ಮತ್ತು ಲೀಲೆಯಿಂದಲೇ ಲಂಕಾಸುರಸಮೂಹವೆಂಬ ಸಮುದ್ರದ ಉಲ್ಲಂಘನ ಮುಂತಾದ ವಿಜಯವಿಜೃಂಭಣೆಯಿಂದ ಸ್ವಪರಿವಾರವನ್ನು ಸಂತೋಷಗೊಳಿಸಿದಂತೆ, ಭೀಮಸೇನದೇವರೂ ಕ್ರೋಧವಶದೈತ್ಯಸಾಗರದ ಸಂಹಾರ, ದುಶ್ಶಾಸನಾದಿ ದೈತ್ಯಸಂಹಾರಗಳನ್ನು ಮಾಡಿ ಸಿಂಹಕ್ರೀಡೆಯಿಂದ ನರಸಿಂಹದೇವರನ್ನು ಆರಾಧಿಸಿ ಸ್ವಭಕ್ತವೃಂದವನ್ನು ಸಂತೋಷಗೊಳಿಸಿದಂತೆ, ಶ್ರೀಮದಾನಂದತೀರ್ಥರೂ ಅನಂತವೇದಸಮುದ್ರ ಮತ್ತು ನೂರಾರು ಕೋಟಿಪ್ರಮಾಣದಲ್ಲಿ ವಿಸ್ತಾರವಾದ ಮಹಾವ್ಯಾಕರಣ ಬ್ರಹ್ಮತರ್ಕಾದಿ ಸದಾಗಮಸಮುದ್ರಗಳ ನಿಗೂಢಪ್ರಮೇಯರಹಸ್ಯಗಳನ್ನು ಅನಾಯಾಸವಾಗಿ ಸ್ಪಷ್ಟವಾಗಿ ತಿಳಿಯುತ್ತಿರುವುದರ ಮೂಲಕ ನಿತ್ಯವೂ ಅನೇಕ ಕೋಟಿ ಯೋಜನಾತ್ಮಕ ವೇದಶಾಸ್ತ್ರಸಮುದ್ರವನ್ನು ದಾಟುತ್ತಾ, ಅವುಗಳ ಅಮೃತಸಾರವನ್ನು

ಸ್ವಜನವೃಂದಕ್ಕೆ ಉಣಿಸುತ್ತಾ ಸಂಸಾರಾರಣ್ಯದಲ್ಲಿ ಸ್ವಜನಸಮೂಹ ಸಂಪೀಡಿತರಾದ ಪರವಾದಿಗಳೆಂಬ ಕುವಲೆಯಪೀಡಾದಿಗಳನ್ನು ಶ್ರುತಿಸ್ಮೃತಿಯುಕ್ತಿಗಳೆಂಬ ಶಕ್ತ್ಯಾಯುಧಗಳಿಂದ ನಿರಂತರ ನಿಗ್ರಹಿಸುತ್ತಾ ವೀರನರಸಿಂಹದೇವರ ಲೀಲೆಯನ್ನು ಅನುಕರಿಸಿ, ವಿಹರಿಸಿ, ಆರಾಧಿಸುತ್ತಾ ವಿಜಯವಿಜೃಂಭಣೆಯಿಂದ ಭಾವಿಚತುರ್ಮುಖರಾಜರಾಗಿ ವಿರಾಜಮಾನರಾಗಿರುವಂತೆ, ಶ್ರೀಗುರುರಾಜರೂ ಕೂಡ ನರಸಿಂಹದೇವರ ಅನುಗ್ರಹಪೂರ್ವಕ ಕ್ರೀಡಾವೈಭವವನ್ನು ಶಾಸ್ತ್ರಮಾರ್ಗದಲ್ಲಿ ಅನುಕರಿಸುತ್ತಾ ಶ್ರೀಮದಾಚಾರ್ಯರಂತೆ ನಿತ್ಯವೂ ಅನೇಕ ಕೋಟಿ ಯೋಜನಾತ್ಮಕ ವೇದಶಾಸ್ತ್ರಸಮುದ್ರವನ್ನು ದಾಟಿ, ವಿಪುಲವಿವಿಧ ಪ್ರಮೇಯರತ್ನರಾಶಿಯನ್ನು ಸ್ವಜನವೃಂದಕ್ಕೆ ಅಕ್ಷಯವಾಗಿ ಸುರಿಸಿ, ಕುಮತೀಯರೆಂಬ ಕುವಲೆಯಪೀಡಾದಿಗಳನ್ನು ಸುಯುಕ್ತಿಗಳ ವಜ್ರಾಯುಧಗಳಿಂದ ಪರಿಪರಿಯಾಗಿ ಪರಾಭವಗೊಳಿಸುತ್ತಾ ಅನಂತ ವೇದವೇದಾಂತಸಾರಭೂತವಾದ ಈ ದೇವಶಾಸ್ತ್ರಕಾವ್ಯವನ್ನು, ಶ್ರೀಮದಾಚಾರ್ಯರ ಅನುವ್ಯಾಖ್ಯಾನದಂತೆ; ಆಶುಕವಿತೆಯಿಂದಲೇ ಅನಾಯಾಸವಾಗಿ ಸರ್ವೋತ್ಕೃಷ್ಟವಾಗಿ ರಚಿಸಿ ಶಿಷ್ಟಸಂರಕ್ಷಣ, ದುಷ್ಟಶಿಕ್ಷಣಗಳನ್ನು ವಿಶಿಷ್ಟವಾಗಿ ನಿರ್ವಹಿಸುತ್ತಾ ಭಾವಿಸಮೀರರಾಜರಾಗಿ ವಿರಾಜಮಾನರಾಗಿರುವುದನ್ನು ಅವರ ಎಲ್ಲ ಕೃತಿಗಳಲ್ಲೂ ಸಹೃದಯರು ಆದ್ಯಂತ ಅನುಭವಿಸಬಹುದು. ಮತ್ತು 'ಶಾರ್ದೂಲದಂತಾ ಇವಸಾಧಯಂತಿ' ಎಂಬ ಗುರುರಾಜರ ಉಕ್ತಿಯಂತೆ ಸಿಂಹದ ದಂತಗಳು ತನ್ನ ಮೃದುಶಿಶುಗಳನ್ನು ಹಿಡಿದು ನಡೆಯುವಾಗ ಅವುಗಳಿಗೆ ಮಲ್ಲಿಗೆಯಂತೆ ಹಿತಕರವಾಗಿಯೂ, ಕಠಿಣ ಕುಂಜರಾದಿಗಳನ್ನು ಬೇಟೆಯಾಡುವಾಗ ಅತಿಹರಿತವಾಗಿಯೂ ಇರುವಂತೆ_ಗುರುರಾಜರ ಸುಯುಕ್ತಿಗಳು ಸ್ವಜನಾನುಗ್ರಹಪ್ರಸಂಗದಲ್ಲಿ ಅತಿಹಿತಕರವಾಗಿ, ಅಭಯಂಕರವಾಗಿಯೂ ದುಷ್ಟಗರ್ವಿಷ್ಟವಾದಿಗಳ ನಿಗ್ರಹಪ್ರಸಂಗದಲ್ಲಿ ವಜ್ರಾಯುಧಗಳಂತೆ ಬಹುಭಯಂಕರವಾಗಿಯೂ ಇರುವಂತಹ, ಶಾರ್ದೂಲವಿಕ್ರೀಡೆಯ ವಿರುದ್ಧಗುಣ ವೈಶಿಷ್ಟ್ಯವನ್ನು ಈ ಗ್ರಂಥದಾದ್ಯಂತ ಶಿಷ್ಟರೆಲ್ಲರೂ ಸುಸ್ಪಷ್ಟವಾಗಿ ಅನುಭವಿಸಬಹುದು.

ಅನಂತರ 'ಮಂದಾಕ್ರಾಂತವೃತ್ತದ' ಮೂಲಕ ಗುರುರಾಜರು ತಮ್ಮ ಉಪಾಸ್ಯಮೂರ್ತಿಯಲ್ಲಿ ಆತ್ಮನಿವೇದನೆ ಮತ್ತು ಸ್ವಾಹಂಕಾರಖಂಡನೆಗಳನ್ನು ಶಿಷ್ಯಶಿಕ್ಷಣಕ್ಕಾಗಿ ಪ್ರಕಟಿಸಿದ್ದಾರೆ. ಬ್ರಹ್ಮದೇವರು ಜಿತಂತೇಸ್ತೋತ್ರದ ಮೂಲಕ ಸ್ವಾಹಂಕಾರಖಂಡನೆ ಆತ್ಮನಿವೇದನೆಗಳನ್ನು ಮಾಡಿಕೊಂಡಂತೆ, ಹನುಮಂತದೇವರು 'ಮತ್ತಃ ಪ್ರತ್ಯವರಃ ಕಶ್ಚಿತ್ ನಾಸ್ತಿ ಸುಗ್ರೀವಸನ್ನಿಧೌ' 'ಸುಗ್ರೀವಸೈನ್ಯದಲ್ಲಿ ನನಗಿಂತ ಕಡೆಯ ಕಪಿ ಇಲ್ಲ' ಎಂದು ವಿನಯೋತ್ಕರ್ಷದ ಶಿಕ್ಷಣ ಮಾಡಿದಂತೆ, ಗುರುರಾಜರೂ ಕೂಡ

ಸರ್ವಜ್ಞಭಗವಂತನೆದುರು ಜೀವರೆಲ್ಲರೂ 'ಮಂದತ್ವದಿಂದ ಆಕ್ರಾಂತರು' ಎಂಬ ಸಂದರ್ಭೋಚಿತ-ಮಂದಾಕ್ರಾಂತವೃತ್ತದ ಮೂಲಕ ಮಂದಮಂದ ಸುಂದರಗಂಭೀರಗತಿಯ ಮೃದುಸರಸಪದವಿನ್ಯಾಸಗಳಿಂದ ಅನಹಂಕಾರಪೂರ್ವಕ ವಿನಯಗುಣೋತ್ಕರ್ಷವನ್ನು ಪ್ರಕಟಿಸಿ, ಜಿಜ್ಞಾಸುವರ್ಗಕ್ಕೆ ಅಸಾರಸಂಸಾರಸಾಗರ ಸಂತಾರಕವಾದ ಭಗವದ್‌ವಿನಯಾನುಸಂಧಾನದ ದಿವ್ಯಮಾರ್ಗದರ್ಶನವನ್ನು ಮಾಡಿದ್ದಾರೆ. ಗ್ರಂಥದ ಉಪಸಂಹಾರಪ್ರಸಂಗದಲ್ಲೂ ಈ ಮಂದಾಕ್ರಾಂತಛಂದಸ್ಸಿನ ಮೂಲಕ 'ವಿನಯೋ ಹಿ ಭೂಷಯತಿ ಸರ್ವರಸಂ' ಎಂಬ ಉಕ್ತಿಯಂತೆ ಶಿಷ್ಯರಿಗೆ ಶ್ರೀಹರಿಗುರುವಿನಯಾನುಸಂಧಾನದ ಮಹತ್ತ್ವವನ್ನು ಸ್ಪಷ್ಟಪಡಿಸಿದ್ದಾರೆ.

ಅನಂತರದ ಐದು ಸಾವಿರಕ್ಕೂ ಮಿಗಿಲಾದ ಅನುಷ್ಟುಭ್‌ಛಂದಸ್ಸಿನ ನಿರವದ್ಯಹೃದ್ಯಪದ್ಯಗಳಿಂದ ಪಾರಮಾರ್ಥಿಕಪ್ರಕೃಷ್ಟಪ್ರಮೇಯಪರಿಜ್ಞಾನವನ್ನು ಇತರ ಮತಮೂಲೋತ್ಪಾಟನಪೂರ್ವಕ ಪ್ರಮಿತಯುಕ್ತಿಮಾಲೆಗಳಿಂದ ಸಹೃದಯ-ಹೃದಯಂಗಮವಾಗಿ ಪ್ರತಿಪಾದಿಸಿದ್ದಾರೆ. 'ಅನು = ನಿರಂತರಂ ಸ್ತುಭ್ನೋತಿ (ಸ್ತುಂಭು ನಿಷ್ಕೋಷಣೇ) = ಪ್ರಮೇಯಜಾತಂ ನಿಷ್ಕರ್ಷತಿ' ಎಂಬ ವ್ಯುತ್ಪತ್ತಿಯಂತೆ, ನಿರಂತರ ಆಕರ್ಷಕ ಪ್ರಮೇಯ ಪ್ರತಿಪಾದಕ ವಾಕ್‌ಪ್ರವಾಹವೆಂಬ ಪರಮಾರ್ಥವು 'ಅನುಷ್ಟುಭ್' ಎಂಬ ಶಬ್ದಕ್ಕೆ ಕೋಷಪ್ರಸಿದ್ಧವಾಗಿದೆ. ಗುರುರಾಜರು ತಮ್ಮ ಕಾವ್ಯಶಾಸ್ತ್ರಕ್ಕೆ ಅತ್ಯಂತ ಅನ್ವರ್ಥಕವಾದ ಈ ಅನುಷ್ಟುಭ್‌ಛಂದಸ್ಸನ್ನು ವ್ಯಾಪಕವಾಗಿ ಆಧ್ಯಾತ್ಮಿಕಾರ್ಥ-ಪ್ರತಿಪಾದಕವಾಗಿ ಬಳಸಿಕೊಂಡು ತಮ್ಮ ಅನವರತನವನವರಸಭರಿತ ಕುಶಲಮಯ ಸರಸ್ವತೀತರಂಗಿಣಿಯ ಮಂಗಲಮಯಸುಂದರತರಂಗಗಳ ಮೂಲಕ ಸದ್‌ಭಕ್ತವೃಂದವನ್ನು ಒಳಸೆಳೆದುಕೊಂಡು ಅನಂತ ಸದ್ಗುಣಸಾಗರ ಸ್ವರೂಪನಾದ ಭಗವಂತನ ಬಳಿ ಭರದಿಂದ ಸೇರಿಸುವಂತಹ ವಿಶ್ವತೋಮುಖ ಅನುಗ್ರಹಧಾರೆಯನ್ನು ಹರಿಸಿದ್ದಾರೆ.[1]

ಗರುಡಶೇಷಾದಿಗಳನ್ನು ಮೊದಲ್ಗೊಂಡು ಪಾಮರಸರಲಬಾಲಕವೃಂದವನ್ನೂ ಕೂಡ ತನ್ನ ಕಾಂತಾಸಂಹಿತೆಯ ಕೌಶಲ್ಯದಿಂದ ವಿಶೇಷವಾಗಿ ವಶೀಕರಿಸಿಕೊಂಡು, ಶಾಸ್ತ್ರೀಯ ಪಾರಮಾರ್ಥಿಕ ಪ್ರಕೃಷ್ಟ ಪ್ರಮೇಯಗಳನ್ನು ನಿರ್ಮಲಮನಸ್ಸಿನಲ್ಲಿ ನಿಶ್ಚಲವಾಗಿ ನೆಲೆಸುವಂತೆ ಮಾಡುವ ಈ ಗ್ರಂಥರತ್ನವು, ಸಕಲವಿಧಸಾಧಕರಿಗೂ ಯೋಗ್ಯತಾತಾರಮ್ಯಾನುಸಾರವಾಗಿ ಸಕಲವಿಧಶ್ರೇಯೋನಿಧಿಯಾದ ಸದ್‌ಭಕ್ತೈಕಚಿಂತಾಮಣಿಯಾಗಿದೆ. ಮುಮುಕ್ಷುಗಳಿಗೆ ಮೋಕ್ಷಾದಿಪುರುಷಾರ್ಥಸಾಧನೀಭೂತವಾದ ಈ ಮಹಾಭಾಗ್ಯಕರಗ್ರಂಥರತ್ನವು ಪಂಚವಿಧಸೌರಭಗಳಿಂದ ಅದ್ವಿತೀಯವಾಗಿ ವಿರಾಜಮಾನವಾಗಿದೆ. ಮೊದಲನೆಯ

ಗುಣಸೌರಭದಲ್ಲಿ ಭಗವಂತನ ಅನಂತಕಲ್ಯಾಣಗುಣಪರಿಪೂರ್ಣತ್ವವನ್ನು ಪ್ರತಿಪಾದಿಸಲಾಗಿದೆ. ಅದಕ್ಕೆ ಉಪೋದ್‌ಬಲಕವಾಗಿ ಎರಡನೆಯ ಶುದ್ಧಿಸೌರಭದಲ್ಲಿ ಭಗವಂತನ ನಿರ್ದೋಷತ್ವವನ್ನು ಸಮರ್ಥಿಸಲಾಗಿದೆ. ಮೂರನೆಯ ಭೇದಸೌರಭದಲ್ಲಿ ತಾರತಮ್ಯಾನುಗುಣವಾಗಿ ಭಗವಂತನ ಅನಂತಗುಣಪಾರಮ್ಯಸಿದ್ಧಿಗಾಗಿ ಪಂಚವಿಧಭೇದವನ್ನು ಸಾಧಿಸಲಾಗಿದೆ. ನಾಲ್ಕನೆಯ ವಿಶ್ವಸೌರಭದಲ್ಲಿ, ಭಗವಂತನ ಜಗಜ್ಜನ್ಮಾದ್ಯಷ್ಟಕರ್ತೃತ್ವಮಹಿಮೆಯ ಸ್ಥಾಪನೆಗಾಗಿ ವಿಶ್ವಸತ್ಯತ್ವವನ್ನು ಸಮರ್ಥಿಸಲಾಗಿದೆ. ಐದನೆಯ ಫಲಸೌರಭದಲ್ಲಿ, ಮುಕ್ತಿಫಲದಾತೃತ್ವ, ಮುಕ್ತನಿಯಾಮಕತ್ವ, ಅಪಾರದಯಾಮೃತಸಮುದ್ರಸ್ವರೂಪತ್ವ ಮುಂತಾದ ಭಗವನ್‌ಮಹಿಮೆಗಳ ಸಿದ್ಧಿಗಾಗಿ ಮುಕ್ತಿಯ ಪಾರಮಾರ್ಥಿಕಸತ್ಯತ್ವ ನಿತ್ಯತ್ವಾದಿ ವೈಭವವನ್ನು ಸೋಮಸೂಕ್ತಾದಿಗಳ ಮೂಲಕ ಸಮರ್ಥಿಸಲಾಗಿದೆ.

ಈ ಪಂಚವಿಧ ಸೌರಭಗಳಲ್ಲೂ ಅಲ್ಲಲ್ಲಿ ಪ್ರಸಂಗಾನೂಕೂಲ್ಯದಿಂದ ಇತರ ಸೌರಭಗಳಿಗೆ ಸಂಬಂಧಿಸಿದ ಪ್ರಮೇಯಸಮೂಹವನ್ನು ಸಮುಚಿತವಾಗಿ ಸಂಯೋಜಿಸಿ ತತ್ವವಿಷಯಗಳನ್ನು ಸ್ಪಷ್ಟಪಡಿಸಲಾಗಿದೆ. ಈ ವಿಷಯವನ್ನು ಗ್ರಂಥಕಾರರೇ ಹೀಗೆ ತಿಳಿಸಿದ್ದಾರೆ–

**''ಅತೋ ವಿಚಾರವಾತೋಽಯಂ ಸೌರಭಂ ಸೌರಭಾಂತರೇ ।**
**ಸಂಯೋಜಯತಿ ತದ್‌ಗ್ರಂಥಃ ಸೋಽಯಂ ಜನಮನೋಹರಃ॥''**

ಈ ಪ್ರಕಾರವಾಗಿ ನಾನಾವಿಧಚಮತ್ಕಾರ ಸುಚಾರು ಚಾಮರಮಾರುತದಿಂದ ಮಾರುತಿಯಂತೆಯೇ ಭಾವಿಮಾರುತಿಯಾದ ಗುರುಸಾರ್ವಭೌಮರು ಸದ್‌ಭಕ್ತಭ್ರಮರಗಳಿಗೆ ಅಪೂರ್ವವಾದ ಅಲೌಕಿಕಸೌರಭವೈವಿಧ್ಯವನ್ನು ರಂಗುರಂಗಾಗಿ ಕರುಣಿಸಿದ್ದಾರೆ.

ಈ ಶಾಸ್ತ್ರಕಾವ್ಯದ ಮೊದಲನೆಯ ಗುಣಸೌರಭದಲ್ಲಿ ವಿಷ್ಣುವಿನ ಗುಣೋತ್ಕರ್ಷವನ್ನು ಸದ್‌ಯುಕ್ತಿಜಾಲದಿಂದ ಸುಸ್ಪಷ್ಟಪಡಿಸಲಾಗಿದೆ. ಅದರ ಅಂಗವಾಗಿ ವೇದಾಪೌರುಷೇಯತ್ವ, ಪ್ರಾಮಾಣ್ಯಸ್ವತಸ್ತ್ವ ಮುಂತಾದ ಪ್ರಮೇಯಗಳನ್ನು ಹೃದಯಂಗಮವಾಗಿ ವಿವರಿಸಲಾಗಿದೆ. ಮತ್ತು ಚಾರ್ವಾಕ, ಜೈನ, ಬೌದ್ಧ, ಸಾಂಖ್ಯ, ತಾರ್ಕಿಕ, ಪ್ರಾಭಾಕರ, ಅದ್ವೈತಾದಿ ದುರ್ಮತಗಳ ದುರ್ವಾದಗಳೆಲ್ಲವನ್ನೂ ಪ್ರಮಿತಯುಕ್ತಿಚಮತ್ಕಾರಸರಮಾಲೆಗಳಿಂದಲೇ ಅನಾಯಾಸವಾಗಿ ಧೂಳೀಪಟ ಮಾಡಲಾಗಿದೆ. ವರ್ಣಗಳು ಅನಾದಿಯಾಗಿದ್ದರೂ ಸರ್ವಜ್ಞನಾದ ಶ್ರೀಹಯಗ್ರೀವದೇವರ

ಅಚಿಂತ್ಯವಾದ ಅನಾದಿ ನಿತ್ಯಬುದ್ಧಿಯಲ್ಲಿ ಎಂದೂ ವ್ಯತ್ಯಾಸ ಹೊಂದದೇ ನಿತ್ಯವಾಗಿ ನೆಲೆಸಿರುವ ಪರಮಾಶ್ಚರ್ಯಕರ ಅಪೂರ್ವತಮ ಪ್ರಮಿತ ಅನಾದಿನಿತ್ಯಪೌರ್ವಾಪರ್ಯವರ್ಣಕ್ರಮವನ್ನು 'ನಿತ್ಯೇಶಬುದ್ಧ್ಯುಪಾಧೇಸ್ತದ್ವರ್ಣೇ-ಷ್ವೌಪಾಧಿಕಃ ಕ್ರಮಃ' ಮುಂತಾದ ಆರ್ಷವಾಣಿಗಳಿಂದ ಪ್ರಕಾಶಪಡಿಸಿ, ಪ್ರಾಮಾಣ್ಯಸ್ವತಸ್ತ್ವವನ್ನೂ ಸ್ಪಷ್ಟಪಡಿಸಿ ವೇದಗಳಿಗೆ ಅಪೌರುಷೇಯತ್ವವನ್ನೂ ಪರಮಪ್ರಾಮಾಣ್ಯವನ್ನೂ ಪ್ರತಿಪಾದಿಸಲಾಗಿದೆ. ವೇದವಾಕ್ಯಗಳಲ್ಲಿ ಮೇಲ್ನೋಟಕ್ಕೆ ಕಂಡುಬರುವ ವಿರೋಧವನ್ನು ಪರಿಹರಿಸಿ, ಏಕಾಭಿಪ್ರಾಯವನ್ನು ಪ್ರಮಾಣಾನುಸಾರಿ-ಯುಕ್ತಿಗಳಿಂದಲೇ ಸಮರ್ಥಿಸಿ, ವಿಷ್ಣುವಿನ ಅನಂತಗುಣೋತ್ಕರ್ಷಪ್ರತಿಪಾದನೆಯಲ್ಲೇ ಸಕಲಸದಾಗಮಗಳಿಗಿರುವ ಮಹಾತಾತ್ಪರ್ಯವನ್ನು ನಿರ್ಧರಿಸಲಾಗಿದೆ.

ಗ್ರಂಥಕಾರರ ಪ್ರಮೇಯಪ್ರತಿಪಾದನಚಾತುರ್ಯಕ್ಕೆ ಕೆಲವು ನಿದರ್ಶನಗಳನ್ನಿಲ್ಲಿ ಪ್ರದರ್ಶಿಸಲಾಗಿದೆ.

ವೇದಾಪೌರುಷೇಯತ್ವವನ್ನು ಮತ್ತು ಅದರ ನಿತ್ಯತ್ವವನ್ನು ಹೀಗೆ ನಿರೂಪಿಸಿದ್ದಾರೆ-

**''ಕನ್ಯಾಕುಮಾರೀ ಕನ್ಯಾತ್ವಂ ಯಥಾ ಭರ್ತುರಭಾವತಃ ।**
**ಲೇಭೇ ಶ್ರುತಿಕುಮಾರೀಯಂ ತಥಾ ಕರ್ತುರಭಾವತಃ ।**
**ಅಕೃತತ್ವಂ ಧ್ರುವಂ ಲೇಭೇ ಯಾ ನಿತ್ಯೇತಿಶ್ರುತೌ ಶ್ರುತಾ ॥೧೦೧॥''**

ಕನ್ಯೆಯಾದ ಹುಡುಗಿಗೆ ಮದುವೆಯಾಗಿಲ್ಲವೆಂಬ ಪ್ರಸಿದ್ಧಿ ಇದ್ದು, ಗಂಡನೂ ಇಲ್ಲದಿದ್ದರೆ ಆ ಕನ್ಯೆಗೆ ಕನ್ಯಾತ್ವ ಹೇಗೆ ಸಿದ್ಧವಾಗುತ್ತದೋ, ಅಂತೆಯೇ ಶ್ರುತಿಕುಮಾರಿಗೆ ಕರ್ತೃವಿಲ್ಲವೆಂಬ ಪ್ರಸಿದ್ಧಿಯೂ, ತನಗೆ ಕರ್ತೃವೇ ಇಲ್ಲವೆಂದು 'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್' (ಪರಬ್ರಹ್ಮನಿರುವಷ್ಟು ಕಾಲವೂ ಅವನನ್ನು ಸ್ತುತಿಸುವ ವೇದವೂ ಇದೆ.) 'ಅನಾದಿನಿತ್ಯಾ ಸಾ' ಇತ್ಯಾದಿ ವಚನಗಳಿಂದ ತಾನೇ ಹೇಳುತ್ತಿರುವುದರಿಂದಲೂ ಅಪೌರುಷೇಯತ್ವ ಸಿದ್ಧಿಸುತ್ತದೆ.

ವೇದಗಳು ಅಪ್ರಮಾಣವೆಂದಲ್ಲಿ ಪೌರಾಣಿಕಬಾಧಕವನ್ನು ತಿಳಿಸುತ್ತಿದ್ದಾರೆ-

**''ಸುವಿತ್ತಸ್ಯೈವ ಚೋರೋಽಸ್ತಿ ದುರ್ವಿತ್ತಸ್ಯ ನ ತಸ್ಕರಃ ।**
**ಅಮಾನಂ ಚೇತ್ ಸ್ವತೋ ಜೀರ್ಣಂ ಕುತೋ ವೇದಮಚೂಚುರತ್ ॥೧೩೦॥**
**ಹಯಗ್ರೀವಮುಖೋದ್ಗೀರ್ಣಾ ಸಾ ವಾಣೀ ಧರ್ಮಶಾಸನಮ್ ।**
**ಅತಸ್ತದುದಿತೋ ಧರ್ಮೋ ಹ್ಯಧರ್ಮಸ್ತದ್‌ವಿಪರ್ಯಯಃ ॥೧೩೧॥''**

ಲೋಕದಲ್ಲಿ ಅನರ್ಘ್ಯರತ್ನಾದಿಗಳನ್ನಪಹರಿಸುವ ಚೋರರಿರುತ್ತಾರೆ. ಹೊರತು ಪ್ರಯೋಜನಕ್ಕೆ ಬಾರದ ಕ್ಷುದ್ರಪದಾರ್ಥಗಳನ್ನು ಅಪಹರಿಸುವ ಚೋರರಿರುವುದಿಲ್ಲ.

ಹಯಗ್ರೀವಾಸುರ ಮುಂತಾದವರು ವೇದಗಳನ್ನು ಕದ್ದರೆಂಬ ಪೌರಾಣಿಕ ಐತಿಹ್ಯವಿದೆ. ಸ್ವತಃ ಪ್ರಮಾಣವಲ್ಲದ ವಾಕ್ಯಗಳು ತಾವೇ ನಷ್ಟವಾಗುತ್ತವೆ. ಅವುಗಳನ್ನು ಅಪಹರಿಸುವ ಪ್ರಸಕ್ತಿಯೇ ಇಲ್ಲ. ಪರಮಪ್ರಮಾಣಗಳಾಗಿ ಸಂಸಾರಸಂತಾರಕವೂ ಸನ್ಮುಕ್ತಿಪ್ರಾಪಕವೂ ಆದ ಸನ್ಮಾರ್ಗವನ್ನು ಬೋಧಿಸುವ ವೇದವಾಕ್ಯಗಳು ಅತ್ಯಮೂಲ್ಯಮೌಲ್ಯವುಳ್ಳದ್ದರಿಂದಲೇ, ಅವುಗಳನ್ನು ವೇದಚೋರರು ಅಪಹರಿಸಿದರೆಂದು ಸಿದ್ಧವಾಗುತ್ತದೆ. ಅದರಿಂದ ವೇದಗಳ ಪರಮಪ್ರಾಮಾಣ್ಯವೂ ಸಿದ್ಧಿಸುತ್ತದೆ. ಶ್ರೀ ಹಯಗ್ರೀವದೇವರ ಮುಖದಿಂದ ಬ್ರಹ್ಮಾದಿಗಳಿಗೆ ಉಪದೇಶರೂಪವಾಗಿ ನಿರಂತರ ಹೊರಹೊಮ್ಮುವ; (ಹೊರತು ರಚಿತವಲ್ಲದ) ವೇದವಾಣಿಯೇ ಧರ್ಮವನ್ನು ಶಾಸನ ಮಾಡುತ್ತದೆ. ಅದು ಹೇಳುವುದೇ ಧರ್ಮ. ಆ ವೇದಕ್ಕೆ ವಿರುದ್ಧವಾದದ್ದೆಲ್ಲವೂ ಅಧರ್ಮವೆನಿಸುತ್ತದೆ.

ಹೀಗೆ ಹಯಗ್ರೀವದೇವರಿಂದ ವೇದಗಳಿಗೆ ಉಪದಿಷ್ಟತ್ವ ಮಾತ್ರ ಸ್ಪಷ್ಟವಾಗುತ್ತದೆ. ಹೊರತು ರಚಿತತ್ವವಿಲ್ಲವಾದ್ದರಿಂದ ವೇದಗಳಿಗೆ ಅಪೌರುಷೇಯ ನಿರ್ದೋಷಪ್ರಾಮಾಣ್ಯವು ಸ್ಥಾಪಿತವಾಗುತ್ತದೆ.

ಈ ವೇದಪ್ರಾಮಾಣ್ಯವನ್ನೇ ಅಪಲಾಪ ಮಾಡುವ ಚಾರ್ವಾಕಾದಿಗಳ ದುರ್ವಾದವನ್ನು ನಿರಾಕರಿಸುವುದು ಅನಿವಾರ್ಯವಾದ್ದರಿಂದ, ಆ ಮತವನ್ನು ಗುರುರಾಜರು ಹೀಗೆ ನಿರಾಕರಿಸುತ್ತಾರೆ –

**''ಚಾರ್ವಾಕಸ್ಯ ನ ವಾಕ್ ಚಾರ್ವೀ ಕುರ್ವೀತಾತ್ಮವಧಂ ಯತಃ ।**
**ಅಕ್ಷೈಕಮಾನತಾ ವಾಕ್ ಕಿಂ ರಕ್ಷೇದಾತ್ಮಪ್ರಮಾಣತಾಮ್ ॥೧೩೨॥**
**ಶಿಷ್ಯಪ್ರಮಾಯೈ ವಾಗ್ವಾಚ್ಯಾ ಸಾ ಶೋಚ್ಯಾ ಮಾನತಾ ನ ಚೇತ್ ।**
**ನ ಪ್ರಯೋಜ್ಯಾ ನ ತೈಃ ಪೂಜ್ಯಾ ಮೂಕೋ ಲೋಕಾಯತೋ ಭವೇತ್ ॥೧೩೩॥''**

ಆತ್ಮನಾಶಕ್ಕೇ ಕಾರಣವಾಗುವ ಚಾರ್ವಾಕಮತವು ಮನೋಹರವಲ್ಲ. ಪ್ರತ್ಯಕ್ಷ ಮಾತ್ರ ಪ್ರಮಾಣವೆನ್ನುವ ಆ ಮತ, ತನ್ನ ಶಾಸ್ತ್ರರೂಪದ ಮಾತುಗಳಿಗೇ ಪ್ರಾಮಾಣ್ಯವನ್ನು ರಕ್ಷಿಸಿಕೊಳ್ಳಲು ಸಾಧ್ಯವಾದೀತೇ ? ಅಂದ ಮೇಲೆ ಪ್ರತ್ಯಕ್ಷಗೋಚರವಲ್ಲದ ಅತೀಂದ್ರಿಯ ಆತ್ಮಾದಿವಸ್ತುಗಳನ್ನು ಸಾಧಿಸಿಕೊಡಲು ಸಾಧ್ಯವಿಲ್ಲದ್ದರಿಂದ ಚಾರ್ವಾಕಮತ ಚಾರುವಲ್ಲ. (ಸುಂದರವಲ್ಲ) ಆ ಮತ ಅತಿಶೋಚನೀಯವಾಗಿದೆ. ಏಕೆಂದರೆ ಶಿಷ್ಯರಿಗೆ ಜ್ಞಾನಪ್ರಾಪ್ತಿಗಾಗಿ ವ್ಯಾಖ್ಯಾನ ಮಾಡಬೇಕು. ಆ ವ್ಯಾಖ್ಯಾನಕ್ಕೆ ಪ್ರಾಮಾಣ್ಯವಿಲ್ಲದ್ದರಿಂದ ಏನು ಪ್ರಯೋಜನ? ಹೀಗಾಗಿ ಶಿಷ್ಯರ ಗೌರವಕ್ಕೆ ಚಾರ್ವಾಕಗುರು ಅರ್ಹನಾಗಲಾರ. ತನ್ನ ಶಾಸ್ತ್ರಕ್ಕೆ ಪ್ರಾಮಾಣ್ಯ

ಸಿದ್ಧಿಸಲು ತನ್ನ ವಚನರೂಪಶಬ್ದಕ್ಕೆ ಪ್ರಾಮಾಣ್ಯ ಒಪ್ಪಿದರೆ 'ಪ್ರತ್ಯಕ್ಷ ಒಂದೇ ಪ್ರಮಾಣ' ಎಂಬ ತನ್ನ ಸಿದ್ಧಾಂತದ ಭಂಗವಾಗುತ್ತದೆ. ಹೀಗೆ 'ಉಭಯತಃ ಪಾಶಾರಜ್ಜುವಿನಿಂದ (ಎರಡೂ ಬದಿಗಳಿಂದ ಕುತ್ತಿಗೆಗೆ ಹಗ್ಗ ಕಟ್ಟಿ ಎಳೆದಂತೆ) ಚಾರ್ವಾಕ ಮೂಕನೆನಿಸಿ ಹಾಸ್ಯಾಸ್ಪದನಾಗುತ್ತಾನೆ.

ಪೃಥಿವೀಜಲ, ತೇಜಸ್ಸುಗಳ ಸಮ್ಮೇಲನವೇ ಚೇತನತ್ವಕ್ಕೆ ಕಾರಣವೆಂಬ ಪ್ರಕ್ರಿಯೆಯನ್ನು ಗುರುರಾಜರು ತಮ್ಮ ಹರಿತವಾದ ಚಮತ್ಕಾರ ಕತ್ತರಿಯಿಂದ ಕತ್ತರಿಸುತ್ತಾರೆ -

**ಅತೋ ಯೋಗವಿಶೇಷೇಣ ಯಥಾ ತಾಂಬೂಲರಕ್ತಿಮಾ ।**
**ತಥಾ ಯೋಗವಿಶೇಷೇಣ ಜಡಸ್ಯೈವ ಪ್ರಮಾತೃತಾ ।**
**ಇತಿ ಯೋ ವಕ್ತಿ ತಸ್ಯಾಪಿ ಕುಣಪೋऽಭಣದುತ್ತರಮ್** ॥೧೫೫॥
**ಪೃಥಿವ್ಯಪ್‌ತೇಜಸಾಂ ಯೋಗೋ ಜೀವದೇಹೇऽಪಿ ನಾಪರಃ ।**
**ಸ ಸರ್ವಃ ಕುಣಪೇऽಪ್ಯಸ್ತಿ ವಾದೀ[1] ನಃ ಕುಣಪೋऽಭವತ್** ॥೧೫೬॥

ಅಡಿಕೆ ವೀಳ್ಯದೆಲೆ ಸುಣ್ಣಗಳ ಸಂಯೋಗದಿಂದ ಅವುಗಳಲ್ಲಿಲ್ಲದ ಕೆಂಬಣ್ಣ ಹೇಗೆ ಹುಟ್ಟುವುದೋ ಹಾಗೆಯೇ ಶರೀರದಲ್ಲಿ ಪೃಥಿವೀ, ಜಲ, ತೇಜಸ್ಸುಗಳ ಸಮ್ಮೇಲನದಿಂದ ಜ್ಞಾನಕ್ರಿಯಾಶಕ್ತಿಯುಳ್ಳ ಚೇತನತ್ವವು ಪ್ರಾಪ್ತವಾಗುತ್ತದೆಂಬ ಚಾರ್ವಾಕನ ಮೂರ್ಖವಾದಕ್ಕೆ ನಾವೇ ಉತ್ತರಿಸಬೇಕಿಲ್ಲ. ನಮ್ಮ ಪ್ರತಿನಿಧಿಯಾಗಿ ಜ್ಞಾನವಿಲ್ಲದ ಹೆಣವೇ ವಾದಿಯಾಗಿ ಚಾರ್ವಾಕನ ತುಚ್ಛವಾದವನ್ನು ಖಂಡಿಸಲು ಸಮರ್ಥವಾಗಿದೆ. ಜೀವಚ್ಛರೀರದಂತೆ ಹೆಣದಲ್ಲೂ ಕೂಡ ಭೂತತ್ರಯ ಸಂಮೇಲನವಿದೆ. ಆದರೆ ಅಲ್ಲಿ ಜ್ಞಾನಾದಿಕ್ರಿಯೆಗಳುಳ್ಳ ಚೇತನತ್ವವೆಲ್ಲೂ ಕಂಡುಬರುವುದಿಲ್ಲ. ಹೀಗಾಗಿ ಹೆಣದಲ್ಲಿಲ್ಲದ ಒಂದು ವಿಶೇಷವು ಜೀವಚ್ಛರೀರದಲ್ಲಿರಬೇಕೆಂಬ ಪರಿಶೇಷಪ್ರಮಾಣದಿಂದ ದೇಹಾತಿರಿಕ್ತ ಆತ್ಮನ ಅಸ್ತಿತ್ವವನ್ನು, ನಮ್ಮ ಪ್ರತಿನಿಧಿವಾದಿಯಾದ ಹೆಣವೇ ಸುದೃಢವಾಗಿ ಸಾಧಿಸಿಕೊಡುತ್ತದೆ.

ಹೀಗೆ ಗುರುರಾಜರು ಚಾರ್ವಾಕಮತದ ಸ್ವವ್ಯಾಹತ್ಯಾದಿ ದೋಷದುಷ್ಟವಾದ ಅಪ್ರಾಮಾಣಿಕವಾದಗಳೆಂಬ ಶುಷ್ಕಪಲಾಲಜಾಲವನ್ನು ತಮ್ಮ ನಾನಾಪ್ರಮಾಣಾನುಸಾರಿ ಸದ್‌ಯುಕ್ತಿಗಳೆಂಬ ಪ್ರಚಂಡ ಝಂಝಾವಾತದಿಂದ ಧೂಳೀಪಟ ಮಾಡಿದ್ದಾರೆ. ಹೀಗೆ ಧರ್ಮಾದ್ಯತೀಂದ್ರಿಯ ವಸ್ತುಗಳನ್ನಲ್ಲಗಳೆಯುವ ಚಾರ್ವಾಕಮತವನ್ನು ನಿರಾಕರಿಸಿದ ನಂತರ ಧರ್ಮಾದಿಗಳನ್ನೊಪ್ಪಿದರೂ ಸೃಷ್ಟ್ಯಾದ್ಯಷ್ಟೈಶ್ವರ್ಯವಿಶಿಷ್ಟನಾದ ಸರ್ವೋತ್ಕೃಷ್ಟ ಈಶ್ವರನನ್ನೇ ಅಲ್ಲಗಳೆಯುವ ಜಿನಬುದ್ಧಾದಿಗಳನ್ನು ಹೀಗೆ ಖಂಡಿಸುತ್ತಾರೆ -

"ಕರ್ತಾ ಸರ್ವಸ್ಯ ಕಾರ್ಯಸ್ಯ ಕಸ್ಮಾದೀಶೋ ವಿಸೃಜ್ಯತೇ ।
ಸ್ವಭಾವಾದೇವ ಸರ್ವಂ ಚ ಜಗತ್ ಸ್ಯಾತ್ ಸ ಚರಾಚರಮ್ ।
ಕಿಮೀಶ್ವರೇಣೇತಿ ವದನ್ ಪ್ರಷ್ಟವ್ಯಃ ಪ್ರತಿವಾದಿನಾ ॥೨೪೫॥
ಸ್ವಭಾವೋಽಪಿ ಜಡಶ್ಚೇತ್ ಸ್ಯಾದನ್ಯಪ್ರೇರ್ಯೋ ಘಟಾದಿವತ್ ।
ಜಾನತೀಚ್ಛತಿ ಪಶ್ಚಾಚ್ಚ ಗಚ್ಛತೀತಿ ನ ಕಿಂ ಶ್ರುತಮ್ ॥೨೪೬॥
ಅಜಡೋಽಪ್ಯಸ್ವತಂತ್ರಶ್ಚೇತ್ ಪ್ರಾಗುಕ್ತಂ ದೂಷಣಂ ಸ್ಮರ ।
ಸ್ವಾತಂತ್ರ್ಯೇ ತು ಕಿಮೀಶೇನಾಪರಾದ್ಧಂ ಲಘುಮೂರ್ತಿನಾ ॥೨೪೭॥"

ಜೈನಬೌದ್ಧವಾದಿಗಳು ಸರ್ವೇಶ್ವರನ ಅಸ್ತಿತ್ವವನ್ನು ಹೀಗೆ ಅಲ್ಲಗಳೆಯುತ್ತಾರೆ – ಈ ಚರಾಚರಾತ್ಮಕಪ್ರಪಂಚದ ಸರ್ವವ್ಯಾಪಾರಗಳೂ ಸ್ವಭಾವದಿಂದಲೇ ನಡೆಯುತ್ತವೆ. ಆದ್ದರಿಂದ ಈಶ್ವರನನ್ನು ಒಪ್ಪಿ ಏನಾಗಬೇಕಾಗಿದೆ ? ಎಂದು. ಈ ಸ್ವಭಾವವಾದವನ್ನು ಗುರುರಾಜರು ಹೀಗೆ ಖಂಡಿಸುತ್ತಾರೆ – ಆ ಸ್ವಭಾವವು ಜಡವೋ ಚೇತನವೋ ? ಆ ಸ್ವಭಾವ ಜಡವಾದರೆ ಘಟಾದಿಗಳಂತೆ ಪರರಿಂದ ಪ್ರೇರಿತವಾಗಿಯೇ ಚಲನಾದಿವ್ಯಾಪಾರವುಳ್ಳದ್ದಾಗಬೇಕು. ಜಡವೆಂದೂ ಸ್ವತಃ ಪ್ರವೃತ್ತಿಯುಳ್ಳದ್ದಲ್ಲ. ಏಕೆಂದರೆ – ತಿಳುವಳಿಕೆ ಬಯಕೆಗಳುಂಟಾದ ನಂತರವೇ ಕಾರ್ಯದಲ್ಲಿ ಪ್ರವೃತ್ತಿಯಾಗುವುದು ಚೇತನರಲ್ಲಿ ಮಾತ್ರ ಲೋಕಪ್ರಸಿದ್ಧವಾಗಿದೆ. ಇಂತಹ ಜ್ಞಾನೇಚ್ಛಾಪ್ರಯತ್ನ ಧರ್ಮಗಳು ಜಡದಲ್ಲೆಂದೂ ಕೂಡಲು ಸಾಧ್ಯವಿಲ್ಲದ್ದರಿಂದ ಜಡಕ್ಕೆ ಸ್ವತಃ ಪ್ರವೃತ್ತಿ ಇಲ್ಲ. ಇನ್ನು ಆ ಸ್ವಭಾವ ಅಜಡವಾದರೆ ಅಸ್ವತಂತ್ರವಾಗಿದ್ದರೆ ಹಿಂದೆ ಹೇಳಿದಂತೆ ಆ ಸ್ವಭಾವವೂ ಪರಪ್ರೇರಣೆಗೊಳಪಡಬೇಕು. ಸ್ವಭಾವವು ಅಜಡವೂ ಸ್ವತಂತ್ರವೂ ಎಂದು ಹೇಳಿದರೆ; ಜಗತ್ತಿನಲ್ಲಿರುವ ಅನಂತವಸ್ತುಗಳ ಸ್ವಭಾವಗಳು ಸ್ವತಂತ್ರವೆಂದಾಗಿ ಪರಸ್ಪರವಿರೋಧದಿಂದ ಜಗದ್‌ವಿನಾಶವೇ ಸಂಭವಿಸುತ್ತದೆ. ಹೀಗೆ ಎಲ್ಲ ಪಕ್ಷಗಳಲ್ಲೂ ಅಪ್ರಾಮಾಣಿಕ ಕಲ್ಪನಾಗೌರವದೋಷ ಸಂಭವಿಸುವುದರಿಂದ, ಇಂತಹ ಗೌರವ ದೋಷಕ್ಕೆ ಆಸ್ಪದವಿಲ್ಲದೇ ಎಲ್ಲ ವಿರೋಧಗಳನ್ನೂ ಸುಲಭವಾಗಿ ಪರಿಹರಿಸಲು ಮಾರ್ಗನಾದ ಸಕಲ ಸದಾಗಮೈಕಸಮಧಿಗಮ್ಯನಾದ ಲಘುಮೂರ್ತಿಯಾದ ಸರ್ವಕರ್ತೃ ಸರ್ವೇಶ್ವರನನ್ನು ಒಪ್ಪಿದರೆ ಏನು ಅಪರಾಧ? ಹೀಗೆ ಜಗತ್ತಿನ ಸರ್ವಕಾರ್ಯಗಳನ್ನು ನಿರಂತರ ನಿರ್ವಹಿಸುವ ಸರ್ವೇಶ್ವರನನ್ನು ಸ್ವತಂತ್ರತತ್ವವೆಂದು ಸರ್ವಥಾ ಒಪ್ಪಲೇಬೇಕೆಂದು ಗುರುರಾಜರು ಸದ್‌ಯುಕ್ತಿಗಳಿಂದ ಸಮರ್ಥಿಸಿದ್ದಾರೆ.

ಹೀಗೆ ನಾನಾಬಗೆಯ ಕುಬುದ್ಧಿಕಲ್ಪಿತ ಕುಯುಕ್ತಿಜಾಲದಿಂದ ಈಶ್ವರಾದ್ಯತೀಂದ್ರಿಯ ವಸ್ತುಗಳನ್ನಲ್ಲಗಳೆಯುವ ಪಾಷಂಡಿಚಾರ್ವಾಕಜೈನಬೌದ್ಧಾದಿಗಳ ಮತ್ತು ಅನೇಕ ಆಧುನಿಕ ಸ್ವಚ್ಛಂದ ಪಾಷಂಡಿಗಳ ಸಹವಾಸದೋಷದಿಂದ ಮುಮುಕ್ಷು ಸಜ್ಜನರು ಕಲುಷಿತರಾಗಬಾರದೆಂದು ಹೀಗೆ ಎಚ್ಚರಿಸುತ್ತಾರೆ –

''ವೃಥಾ ವೇದೇಷು ದೇವೇಷು ಸತ್ಸು ಯಜ್ಞಾದಿಕಾರಿಷು ।
ನ ಮತ್ಸರಂ ಕುರು ಮಹಾದೋಷಮಿಷತ್ ಪರಾಕುರು ॥೩೦೪॥''

ಪರಮಪ್ರಮಾಣಗಳಾದ ವೇದಗಳಲ್ಲಿ, ಭಗವದಪರೋಕ್ಷಜ್ಞಾನಿಗಳೂ ಆತ್ಮೋದ್ಧಾರಕಗುರುಗಳೂ ಆದ ದೇವತೆಗಳಲ್ಲಿ ಯಜ್ಞಾದಿ ಸತ್‌ಕರ್ಮಾನುಷ್ಠಾನನಿಷ್ಠರೂ ಶಮದಮಾದಿಗುಣಸಂಪನ್ನರಾದ ಸಜ್ಜನರಲ್ಲಿ ವ್ಯರ್ಥವಾಗಿ ದ್ವೇಷಮಾತ್ಸರ್ಯಗಳನ್ನು ಮಾಡಬೇಡ. ಮಹಾತ್ಮರ ದ್ವೇಷದೋಷದಿಂದಾಗುವ ಮಹಾನರಕಾದ್ಯನರ್ಥವನ್ನು ಸ್ವಲ್ಪವಾದರೂ ಪರಿಹರಿಸಿಕೊಂಡು ಆತ್ಮೋದ್ಧಾರದ ಸನ್ಮಾರ್ಗವನ್ನನುಸರಿಸು.

## ಸಾಕ್ಷಿಜ್ಞಾನದ ಪ್ರಾಮಾಣ್ಯ ಸ್ವತಃ ಸಿದ್ಧ :

ನಾವೆಲ್ಲರೂ ಅನುದಿನವೂ ಅನ್ನಪಾನೀಯ ವಸ್ತ್ರಾದಿವಸ್ತುಗಳನ್ನು ಕಂಡಾಗ, ತಂದೆ ತಾಯಿ ಬಂಧುಮಿತ್ರರನ್ನು ಕಂಡಾಗ, ಎಷ್ಟೋ ಹೊಸಹೊಸ ವಸ್ತುಗಳನ್ನು ಕಂಡಾಗ ಅವುಗಳ ಪ್ರಾಮಾಣ್ಯದ ಬಗ್ಗೆ ನಮಗೆ ಸಂದೇಹ ಬರುವುದಿಲ್ಲ. ಅವೆಲ್ಲವನ್ನೂ ಸಾಕ್ಷೀಂದ್ರಿಯದ ಸ್ವಭಾವಪ್ರಭಾವದಿಂದ ಯಥಾರ್ಥಗಳೆಂದೇ ವಿಶ್ವಾಸವಿಡುತ್ತೇವೆ. ಅವುಗಳ ಸತ್ಯತೆಯನ್ನು ನಿರ್ಧರಿಸಲು ತರ್ಕಯುಕ್ತಿಗಳನ್ನು ನಾವೇನು ಅವಲಂಬಿಸುವುದಿಲ್ಲ. ವಸ್ತು ಗೋಚರವಾಗುವಾಗಲೇ ಅದರ ಸತ್ಯತೆಯೂ ಗೋಚರವಾಗುತ್ತದೆ. ಕೆಲವೊಮ್ಮೆ ಇಂದ್ರಿಯದೋಷವಾಗಲೀ, ವಸ್ತುದೋಷವಾಗಲೀ, ಅವುಗಳ ಸನ್ನಿಕರ್ಷದೋಷವಾಗಲೀ ಇದ್ದಾಗಷ್ಟೇ ಸಾಕ್ಷೀಂದ್ರಿಯ, ವಸ್ತುಜ್ಞಾನವನ್ನು ಮಾತ್ರ ಗ್ರಹಿಸಿ ವಸ್ತುವಿನ ಸತ್ಯತೆಯ ಬಗ್ಗೆ ಔದಾಸೀನ್ಯ ಹೊಂದಿರುತ್ತದೆ. ಆಗ ಒಂದು ಜ್ಞಾನಕ್ಕೆ ಸಮಾನವಿಷಯಕ ಮಾನಾಂತರವೆಂಬ ಸಜಾತೀಯಸಂವಾದ, ಮತ್ತು ಒಂದು ಜ್ಞಾನಕ್ಕೆ ಸದ್‌ಯುಕ್ತ್ಯಾದಿ ವಿಭಿನ್ನವಿಷಯಕಮಾನಾಂತರವೆಂಬ ವಿಜಾತೀಯಸಂವಾದ ಇವುಗಳ ಮೂಲಕ ವಿಮರ್ಶೆಪರೀಕ್ಷೆಗಳನ್ನು ಮಾಡಿ ನಿರ್ಧರಿಸಿದ ಮೇಲೆ ಆ ವಸ್ತುವಿನ ಸತ್ಯತೆಯನ್ನೂ ನಿಶ್ಚಯವಾಗಿ ಗ್ರಹಿಸುತ್ತದೆ. ಮತ್ತು ಸಾಕ್ಷೀಂದ್ರಿಯಕ್ಕೆ ಸಾಕ್ಷಾದ್ ವಿಷಯಗಳಾದ ದೇಶ, ಕಾಲ, ಸುಖ, ದುಃಖ, ಭಯ, ಮೋಹ ಮುಂತಾದವುಗಳ ಬಗ್ಗೆ ಎಂದೆಂದೂ ಸಂದೇಹವಿಲ್ಲದೆ ಅವುಗಳ ಪ್ರಾಮಾಣ್ಯನಿಶ್ಚಯವನ್ನು ಗ್ರಹಿಸುತ್ತದೆ. ಹೀಗೆ ಎಷ್ಟೋ ಪ್ರಸಂಗಗಳಲ್ಲಿ ಸಜಾತೀಯ ವಿಜಾತೀಯಸಂವಾದಗಳಿಲ್ಲದಿದ್ದರೂ ವಸ್ತುಗಳ ಯಾಥಾರ್ಥ್ಯಜ್ಞಾನ ಸರ್ವಾನುಭವಾರೂಢವಾಗಿರುವುದನ್ನು ಶ್ರೀಗುರುರಾಜರು ದೃಢಪಡಿಸಿ ಜ್ಞಾನಪ್ರಾಮಾಣ್ಯದ ಸ್ವತಃಸಿದ್ಧತ್ವವನ್ನು ಸಮರ್ಥಿಸಿದ್ದಾರೆ –

''ಶಿಶುಃ ಕಿಂ ಜಾತಮಾತ್ರೋಽಂಬಾಸ್ತನಂ ಸಂದಿಹ್ಯ ಚುಂಬತಿ ।
ಪಶುಶ್ಚ ನವಘಾಸಾದೌ ನ ವಿಶ್ವಸಿತಿ ಕಿಂ ವನೇ ॥೩.೨೧॥
ಅನಾನುಭವಿಕೀ ಸರ್ವತ್ರಾಪಿ ಸಂದಿಗ್ಧತಾ ನೃಣಾಮ್ ।
ವಿನೋನ್ಮತ್ತಶಿರಃಪಿತ್ತಿಪಿಶಾಚಗ್ರಸ್ತಚೇತನಾನ್ ॥೩.೨೨॥''

ಆಗ ತಾನೇ ಹುಟ್ಟುವ ಶಿಶುಗಳಾಗಲೀ ಕರುಗಳಾಗಲೀ ತಾಯಿಯ ಸ್ತನ್ಯಪಾನವನ್ನು ಸಂಶಯಪಟ್ಟು ಎಂದಾದರೂ ಮಾಡುತ್ತವೆಯೇ ? ಕಾಡಿನಲ್ಲಿ ಪಶುಗಳು ಹಸಿರುಹುಲ್ಲು ಮುಂತಾದ ತಮ್ಮ ಹೊಸಹೊಸ ಆಹಾರಗಳ ಬಗ್ಗೆ ದೃಢವಿಶ್ವಾಸದಿಂದಲೇ ಪ್ರವೃತ್ತಿ ಮಾಡುತ್ತವೆಯಷ್ಟೇ. ಇಂತಹ ಸರ್ವಾನುಭವಾನುರೂಢವಾದ ನಿಶ್ಶಂಕ ಪ್ರವೃತ್ತಿಗಳ ಹೇರಳ ನಿದರ್ಶನಗಳಿಂದ ಜ್ಞಾನವಾಗುವುದರ ಜೊತೆಗೆ ಆ ಜ್ಞಾನದ ಪ್ರಾಮಾಣ್ಯನಿಶ್ಚಯವನ್ನೂ ಸಾಕ್ಷೀಂದ್ರಿಯವು ಸ್ವಾಭಾವಿಕವಾಗಿಯೇ ಗ್ರಹಿಸುತ್ತದೆಂದು ಸಿದ್ಧವಾಗುತ್ತದೆ. ವಸ್ತುವಿಷಯಕಜ್ಞಾನದಲ್ಲಿ ಪ್ರಾಮಾಣ್ಯಸಂದೇಹವು, ಉನ್ಮತ್ತ ಮತ್ತು ಪಿತ್ತವಿಕಾರವುಳ್ಳ ವ್ಯಕ್ತಿ ಹಾಗೂ ಪಿಶಾಚಾದಿ ದುಷ್ಟಗ್ರಹಗ್ರಸ್ತ ಪುರುಷರಿಗೆ ಹೊರತು ಇತರ ಪ್ರಮಿತ ಪುರುಷರಿಗೆ ಎಲ್ಲ ವಸ್ತುಗಳ ಬಗ್ಗೆ ಅನುಭವಸಿದ್ಧವಲ್ಲ. ಪೂರ್ವಾನುಭವವಿಲ್ಲದ ಸ್ಥಿತಿಯಲ್ಲೂ ಸಹ ಸಮೀಪಸ್ಥವಸ್ತುಗಳ ಪ್ರಾಮಾಣ್ಯದ ಬಗ್ಗೆ ಸಂದೇಹ ಉಂಟಾಗುವುದಿಲ್ಲ. ಆ ಹೊಸವಸ್ತುಗಳನ್ನು ನೋಡಿದ ಕೂಡಲೇ ಸತ್ಯವೆಂದೇ ಜ್ಞಾನಗೋಚರವಾಗುತ್ತದೆ. ಆ ಜ್ಞಾನಪ್ರಾಮಾಣ್ಯವನ್ನೂ ಪ್ರತ್ಯೇಕವಾಗಿ ಸಾಧಿಸಿಕೊಳ್ಳಬೇಕೆಂಬ ಸಂಶಯವೂ ಯಾರಿಗೂ ಇಲ್ಲ.

ಇಂತಹ ಸಾಕ್ಷಿಪ್ರಾಮಾಣ್ಯದ ವೈಶಿಷ್ಟ್ಯವನ್ನು ಶಿಷ್ಟಮುಮುಕ್ಷುಗಳಿಗೆ ಸ್ಪಷ್ಟಪಡಿಸುತ್ತಾ ಶ್ರೀಗುರುರಾಜರು ಹೀಗೆ ಸಂದೇಶಿಸಿದ್ದಾರೆ –

''ಸಾಕ್ಷ್ಯುಚ್ಛಿಷ್ಟಕೃತಾಹಾರಾ ತೇಽನುಮಾಽಸ್ಯೋಪಜೀವಿನೀ ।
ಸಾಕ್ಷೀ ತದಕ್ಷಾದ್ಯಧ್ಯಕ್ಷೋ ನೋಪೇಕ್ಷ್ಯೋಽಯಂ ಮುಮುಕ್ಷುಭಿಃ ॥೪೦೭॥''

ಸಮೀಪಸ್ಥವಸ್ತುವಿನ ಪ್ರಾಮಾಣ್ಯನಿರ್ಣಯವನ್ನು ಊಹಿಸಿ ತಿಳಿಯುವ ಮೊದಲೇ ಸಾಕ್ಷಿಯು ಸಹಜಸ್ವಸಾಮರ್ಥ್ಯದಿಂದ ಗ್ರಹಿಸಿರುತ್ತದೆ. ನಿನ್ನ ಅನುಮಾನವು ಸಾಕ್ಷಿಯ ಉಚ್ಛಿಷ್ಟವನ್ನೇ ತನ್ನ ಆಹಾರವನ್ನಾಗಿ ಮಾಡಿಕೊಳ್ಳುತ್ತದೆ. ಪ್ರತ್ಯಕ್ಷ ಅನುಮಾನಾದಿ ಎಲ್ಲ ಪ್ರಮಾಣಗಳಿಗೂ ಸಾಕ್ಷಿಯೇ ಅಧ್ಯಕ್ಷವಾಗಿರುತ್ತದೆ. ಏಕೆಂದರೆ ಎಲ್ಲ ಪ್ರಮಾಣಗಳಿಂದ ಸಿದ್ಧಿಸುವ ಪ್ರಾಮಾಣ್ಯವನ್ನು ಸಾಕ್ಷಿಯೇ ಗ್ರಹಿಸುತ್ತದೆ. ಆದ್ದರಿಂದ ಪ್ರಾಮಾಣ್ಯನಿರ್ಣಯದಲ್ಲಿ ಸಾಕ್ಷಿಗೆ ಪ್ರಧಾನಸ್ಥಾನವಿರುವುದನ್ನು ಮುಮುಕ್ಷುಗಳೆಂದೂ ಉಪೇಕ್ಷಿಸಬಾರದು.

ಹೀಗೆ ಸಾಕ್ಷಿಯು ಸರ್ವಪ್ರಮಾಣಗಳಿಗೂ ಅಧ್ಯಕ್ಷಸ್ಥಾನದಲ್ಲಿರುವುದರಿಂದ; ಮುಮುಕ್ಷುಗಳಿಗುಂಟಾಗುವ ವೇದಾದಿಪ್ರಮಾಣಜನ್ಯಜ್ಞಾನದಲ್ಲಿ ಪ್ರಾಮಾಣ್ಯ-ನಿರ್ಣಯವನ್ನು ಸಾಕ್ಷಿಯಿಂದಲೇ ಅಪೇಕ್ಷಿಸಬೇಕು. ಇಂತಹ ಅಧ್ಯಕ್ಷವಾದ ಸಾಕ್ಷಿಯನ್ನೇ ಉಪೇಕ್ಷಿಸಿ, ಪ್ರಾಮಾಣ್ಯಪರತಸ್ತ್ವವನ್ನು ಅಪ್ರಾಮಾಣಿಕವಾಗಿ ಸಾಧಿಸಲೆತ್ನಿಸುವ ಪರವಾದಿಗಳಿಗೆ ಮೋಕ್ಷಾನರ್ಹತೆಯೂ ಸ್ಪಷ್ಟವಾಗುತ್ತದೆ.

ಹೀಗೆಯೇ ತಾರ್ಕಿಕ ಪ್ರಾಭಾಕರಾದಿ ದುರ್ಮತಗಳ ಅಪ್ರಾಮಾಣಿಕ ಪ್ರಕ್ರಿಯೆಗಳನ್ನು ಲೀಲಾಕೌಶಲ್ಯದಿಂದ ಗುರುರಾಜರು ಖಂಡಿಸಿ ಶ್ರೀಮದಾಚಾರ್ಯರ ಪರಿಶುದ್ಧಸಿದ್ಧಾಂತ ಪದ್ಧತಿಯನ್ನು ಸ್ತುತಿಸುತ್ತಾರೆ –

**''ತಸ್ಮಾದಾಚಾರ್ಯತರಣಿಸರಣಿಃ ಶೋಭತೇತರಾಮ್ ।**
**ಯಃ ಸ್ವಾನ್ ವಿತಿಮಿರಾನ್ ಕುರ್ವನ್ ಸದಾ ಹೃದ್ವ್ಯೋಮ್ನಿ ಜೃಂಭತೇ**
**॥೫೧೯॥''**

ಚಾರ್ವಾಕ ಪ್ರಾಭಾಕರಾದಿಗಳ ಮಾರ್ಗವು ಅಪ್ರಾಮಾಣಿಕವಾಗಿ ಇಷ್ಟಸಾಧನತ್ವರಹಿತವಾದ್ದರಿಂದ ಶ್ರೀಮಧ್ವಾಚಾರ್ಯರೆಂಬ ದಿವ್ಯಸೂರ್ಯಪ್ರಕಾಶಿತ ಮೋಕ್ಷಮಾರ್ಗವು ಅತಿಶಯವಾಗಿ ಶೋಭಿಸುತ್ತದೆ. ಸ್ವಭಕ್ತರ ಹೃದಯಮಂಟಪದಲ್ಲಿ ಅವರು ಸ್ಥಿರವಾಗಿದ್ದು ಅಜ್ಞಾನಾಂಧಕಾರವನ್ನು ಪರಿಹರಿಸಿ ಪರಮಮಂಗಳಕರ ತತ್ವಜ್ಞಾನಪ್ರಕಾಶವನ್ನುಂಟುಮಾಡಿ ನಿರಂತರ ಅನುಗ್ರಹಿಸುವಂತೆ ಸಾಧಕರು ಚಿಂತಿಸಬೇಕು.

ಅದ್ವೈತಮತ ನಿರಾಕರಣೆ

ಅಪೌರುಷೇಯವಾದ ನಿರ್ದುಷ್ಟವೇದದಲ್ಲಿ 'ದ್ವಾ ಸುಪರ್ಣಾ ಸಯುಜಾ ಸಖಾಯೌ' ಮುಂತಾದ ಭೇದಬೋಧಕವಾಕ್ಯಗಳೆಲ್ಲವೂ ಅತತ್ವಾವೇದಕವೆಂದೂ (ಅಪ್ರಮಾಣವೆಂದೂ) 'ತತ್ ತ್ವಮಸಿ', 'ಅಹಂ ಬ್ರಹ್ಮಾಽಸ್ಮಿ' ಮುಂತಾದ ವಾಕ್ಯಗಳಷ್ಟೇ ತತ್ವಾವೇದಕ (ಪ್ರಮಾಣ)ವೆಂದು ಅದ್ವೈತಿಗಳು ಹೇಳುವುದನ್ನು ಗುರುರಾಜರು ''ವೇದವೇದಾನುಸಾರೇಷು ವಿರೋಧೇಽನ್ಯಾರ್ಥಕಲ್ಪನಾ'' ಎಂಬ ವ್ಯಾಸಸ್ಮೃತಿಗೆ ಅನುಸಾರವಾಗಿ ಹೀಗೆ ನಿರಾಕರಿಸುತ್ತಾರೆ –

**''ಗೃಷ್ಟ್ಯೋರ್ಮಿಥೋ ವಿರೋಧೇ ಹಿ ಹತ್ವೈಕಾಮಪರಾಙ್ಮುಖೀಮ್ ।**
**ವಿರೋಧಶಾಂತಿಂ ಕಃ ಕುರ್ಯಾದ್ ವಿನಾ ಮ್ಲೇಂಛಕುಮಾರಕಾನ್ ॥೫೨೦॥**
**ತೃಣಪಿಣ್ಯಾಕದಾನೇನ ಕೃತ್ವಾರ್ಥಾಂತರಲಾಲಸಾಮ್ ।**
**ತತಃ ಪ್ರಚ್ಯಾವಯೇದೇಕಾಂ ಕೃದ್ಧಾಽಪ್ಯನ್ಯಾಧ್ವನಾ ವ್ರಜೇತ್ ॥೫೨೧॥**

ಏವಂ ಶ್ರುತ್ಯೋರ್ವಿರೋಧೇऽಪಿ ಯಾ ವಾಗನ್ಯಾರ್ಥವರ್ತಿನೀ ।
ತಾಂ ತದರ್ಥಪರಾಂ ಕೃತ್ವಾ ಮೋಚಯೇತ್ ಕಲಹಂ ತಯೋಃ ॥೫೨॥
ಅತತ್ತ್ವಾವೇದಿಕಾ ತ್ವೇಕಾ ತತ್ತ್ವಸ್ಯಾವೇದಿಕಾ ಪರಾ ।
ಇತ್ಯಾದ್ಯುಕ್ತಿಸ್ತ್ವಮಾನತ್ವ ಪ್ರಾಪ್ತ್ಯಾऽಸುತ್ಯಾಜನಂ ಶ್ರುತೇಃ ॥೫೩॥''

ಮೊದಲ ಕರುವುಳ್ಳ ಎರಡು ತರುಣ ಗೋವುಗಳು ಪರಸ್ಪರ ಕಲಹ ಮಾಡುವಾಗ, ಅವುಗಳಲ್ಲಿ ಒಂದನ್ನು ಕೊಂದು ಜಗಳ ನಿಲ್ಲಿಸುವುದನ್ನು ಮ್ಲೇಂಛರಲ್ಲದೇ ಮತ್ತಾರು ಮಾಡಿಯಾರು. ಸಜ್ಜನರು ಹುಲ್ಲನ್ನೋ ಹಿಂಡಿಯನ್ನೋ ಅವುಗಳ ಮುಂದಿಟ್ಟು ಆಸೆ ಹುಟ್ಟಿಸಿ ಉಪಾಯವಾಗಿ ಎರಡಕ್ಕೂ ಹಿತವನ್ನು ಸಾಧಿಸುವರು. ಹೀಗೆಯೇ ಸಾಧುಗುಣವುಳ್ಳ ಗೋಗಳಂತೆ ವೇದವಾಕ್ಯಗಳೂ ಪವಿತ್ರಪ್ರಮಾಣವಾಗಿರುತ್ತವೆ. ಅವುಗಳಿಗೆ ಆಪಾತತಃ ತೋರುವ ವಿರೋಧವನ್ನು ಅರ್ಥಾಂತರದ ಆಹಾರವನ್ನು ನೀಡುವುದರ ಮೂಲಕ ಪರಿಹರಿಸಬೇಕು. ಹೊರತು ಅತತ್ತ್ವಾವೇದಕವೆಂದು ದೂಷಿಸಿ ನಾಶಮಾಡುವುದು ಮ್ಲೇಂಛಪದ್ಧತಿಯನ್ನೇ ಅನುಸರಿಸಿದಂತಾಗುತ್ತದೆ. ಭೇದಬೋಧಕ ಶ್ರುತಿಗಳಿಗೆ ಭೇದವನ್ನು ಬಿಟ್ಟರೆ ಬೇರೆ ಅವಕಾಶವೇ ಇಲ್ಲ. ಐಕ್ಯಬೋಧಕಶ್ರುತಿಗಳಿಗೆ ಸಾದೃಶ್ಯೈಕ್ಯ, ಸ್ಥಾನೈಕ್ಯ, ಮತ್ಯೈಕ್ಯ, ಸ್ವಾತಂತ್ರ್ಯೈಕ್ಯ, ವೈಶಿಷ್ಟ್ಯೈಕ್ಯ, ವ್ಯಾಪ್ತ್ಯೈಕ್ಯ, ನಿಮಿತ್ತೈಕ್ಯ ಮುಂತಾದ (ಸಾದೃಶ್ಯೈಕ್ಯ = ಸಿಂಹಸದೃಶ ದೇವದತ್ತ, ಸ್ಥಾನೈಕ್ಯ = ಸಾಯಂಕಾಲ ಹಟ್ಟಿಯಲ್ಲಿ ಗೋವುಗಳು ಒಟ್ಟಾದವು, ಮತ್ಯೈಕ್ಯ = ಈ ಊರಿನ ಬ್ರಾಹ್ಮಣರು ಒಂದೇ ಅಭಿಪ್ರಾಯವುಳ್ಳವರಾದರು, ಸ್ವಾತಂತ್ರ್ಯೈಕ್ಯ = ಈ ಗ್ರಾಮದಲ್ಲಿ ಸಮಗ್ರಗ್ರಾಮವನ್ನು ವಶವಾಗಿಟ್ಟುಕೊಂಡ ಇವನೊಬ್ಬನೇ ಪುರುಷ, ವೈಶಿಷ್ಟ್ಯೈಕ್ಯ = ಈ ಗ್ರಾಮದಲ್ಲಿ ಜ್ಞಾನಕರ್ಮಾನುಷ್ಠಾನವಿಶಿಷ್ಟನಾದ ಇವನೊಬ್ಬನೇ ಬ್ರಾಹ್ಮಣ, ವ್ಯಾಪ್ತ್ಯೈಕ್ಯ = ಈ ನೀರೆಲ್ಲ ಉಪ್ಪಾಗಿದೆ, ಅಥವಾ ಸತಿಯು ಆಹಾರವಿಹಾರಗಳಲ್ಲಿ ಪತಿಯನ್ನು ವ್ಯಾಪಿಸಿಕೊಂಡಿರುತ್ತಾಳೆ, ನಿಮಿತ್ತೈಕ್ಯ = ಆಯುಷ್ಯವೇ ಘೃತ, ಹೀಗೆಯೇ ಯಜಮಾನನ ಕಾರ್ಯವನ್ನು ದರ್ಭಮುಷ್ಟಿ ನಿರ್ವಹಿಸುವುದರಿಂದ 'ಯಜಮಾನಃ ಪ್ರಸ್ತರಃ' ಎಂದು ಹೇಳುವಂತೆ ಸರ್ವಜೀವರ ಕಾರ್ಯವನ್ನು ಭಗವಂತನೇ ಪ್ರಧಾನವಾಗಿ ನಿರ್ವಹಿಸುವುದರಿಂದ 'ಸರ್ವವೂ ಭಗವಂತನೇ' ಇತ್ಯಾದಿ ಪ್ರಮಾಣಪ್ರಸಿದ್ಧಪ್ರಕಾರಗಳಿಂದ) ಅನೇಕ ಬಗೆಯ ಅವಕಾಶವಿರುವುದರಿಂದ ಸಾವಕಾಶಪ್ರಮಾಣಗಳೆಂದು ಪ್ರಾಮಾಣ್ಯಯೋಜನೆ ಮಾಡಬೇಕು.

ಹೀಗೆಯೇ ''ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ಶ್ವೇತಾಶ್ವತರಶ್ರುತಿಯಲ್ಲಿರುವ ನಿರ್ಗುಣಪದವನ್ನಷ್ಟೇ

ಮಾಯಾವಾದಿಗಳು ಆಶ್ರಯಿಸಿ ಉಳಿದೆಲ್ಲ ಪದಗಳಿಗೂ ಮುಖ್ಯಾರ್ಥವನ್ನು ಬಿಟ್ಟು ಯಾವೊಂದು ಗುಣಧರ್ಮವೂ ಬ್ರಹ್ಮನಲ್ಲಿಲ್ಲವೆಂಬ ಶೂನ್ಯತತ್ವವನ್ನು ವಾದಿಸುತ್ತಾರೆ. ಆದರೆ ಆ ಶ್ರುತಿಯಲ್ಲಿ ಅನಿರ್ಗುಣಶ್ಚ ಎಂದೂ ಪದವಿಭಾಗ ಮಾಡಬಹುದೆಂದು ಅವರು ಅಂಗೀಕರಿಸುವುದಿಲ್ಲ. ಈ ಶ್ರುತಿಯ ವಾಸ್ತವಾರ್ಥ ಹೀಗಿದೆ – ಏಕಃ = ಪ್ರಧಾನನೂ, ತನ್ನ ರೂಪಗುಣಗಳಲ್ಲಿ ಭೇದಶೂನ್ಯನೂ ಆದ, ದೇವಃ = ದಿವ್ಯಕಾಂತಿ, ವಿಜಯ, ಕ್ರೀಡಾದಿಗುಣವಿಶಿಷ್ಟನಾದ, ಸರ್ವಭೂತೇಷು ಗೂಢಃ = ಸರ್ವಪ್ರಾಣಿಗಳಲ್ಲಿ ಗುಪ್ತನಾಗಿ ನೆಲೆಸಿರುವ, ಅಲ್ಲದೇ ಸರ್ವವ್ಯಾಪೀ = ದೇಶತಃ ಕಾಲತಃ ಗುಣತಃ ಸರ್ವವನ್ನೂ ವ್ಯಾಪಿಸಿರುವ, ಸರ್ವಭೂತಾಂತರಾತ್ಮಾ = ಎಲ್ಲ ಪ್ರಾಣಿಗಳೊಳಗಿದ್ದು ಅವುಗಳನ್ನು ಚೆನ್ನಾಗಿ ನಿಯಮಿಸುತ್ತಿರುವ, ಕರ್ಮಾಧ್ಯಕ್ಷಃ = ಕರ್ಮಗಳಿಗೆ ಸಾಕ್ಷಾತ್ ಸಾಕ್ಷಿಯಾಗಿ ಕರ್ಮಾಧಿಪತಿಯಾಗಿರುವ, ಸರ್ವಭೂತಾಧಿವಾಸಃ = ಸರ್ವಪ್ರಾಣಿಗಳಿಗೂ ಆಶ್ರಯನಾಗಿರುವ, ಸಾಕ್ಷೀ = ಎಲ್ಲವನ್ನೂ ಸಾಕ್ಷಾತ್ ಕಾಣುತ್ತಿರುವ, ಚೇತಾ = ಜ್ಞಾನಸ್ವರೂಪನಾದ, ಕೇವಲಃ = ಜಡಾಮಿಶ್ರನೂ, ಸಮಾಭ್ಯಧಿಕರಹಿತನೂ, ನಿರ್ಗುಣಶ್ಚ = ಸತ್ತ್ವಾದಿ ಪ್ರಾಕೃತಗುಣಬಂಧರಹಿತನೂ ಆಗಿರುವವನು ಪರಬ್ರಹ್ಮನೆನಿಸಿದ್ದಾನೆ.

ಶ್ರೀಗುರುರಾಜರು ಮಾಯಾವಾದಿಗಳ ಈ ನಿರ್ಗುಣಶ್ರುತಿ ವ್ಯಾಖ್ಯಾನವನ್ನು ನೂರಾರು ಸದ್‌ಯುಕ್ತಿಯುಕ್ತಪದ್ಯಗಳಿಂದ ಸಹಸ್ರಶಃ ಖಂಡಿಸಿದ್ದಾರೆ.

''ಯೋಽಸೌ ನಿರ್ಗುಣ ಇತ್ಯುಕ್ತಃ ಶಾಸ್ತ್ರೇಷು ಜಗದೀಶ್ವರಃ ।
ಪ್ರಾಕೃತೈರ್ಹೇಯಸಂಯುಕ್ತೈರ್ಗುಣೈರ್ಹೀನತ್ವಮುಚ್ಯತೇ ।
ಇತಿ ಪಾದ್ಮೇ ತ್ರಯಸ್ತ್ರಿಂಶಾಧ್ಯಾಯೇ ರುದ್ರಸ್ಯ ವಾಗಿಯಮ್ ॥೫೩೨॥
ಶಬ್ದಸ್ಯ ಲಬ್ಧ್ವಾ ಯೋಗ್ಯಾರ್ಥಮಯೋಗ್ಯಾರ್ಥೋ ನ ಮೃಗ್ಯತೇ
ದುಗ್ಧಾರ್ಥೀ ಬುದ್ಧಿಮಾನ್ ದೋಗ್ಧಿ ಕಸ್ತಂ ಬಸ್ತಗಲಸ್ತನಮ್ ॥೫೩೩॥''

ವೇದಾದಿಶಾಸ್ತ್ರಗಳಲ್ಲಿ ನಿರ್ಗುಣನೆಂದು ನಿರೂಪಿಸಲ್ಪಡುವ ಭಗವಂತನು ಜಗದೀಶ್ವರನೆಂದು ಪ್ರತಿಪಾದ್ಯನಾಗಿದ್ದಾನೆ. ಆ ನಿರ್ಗುಣಶಬ್ದಾಭಿಪ್ರಾಯವನ್ನು ಹೇಗೆ ತಿಳಿಯಬೇಕೆಂಬುದನ್ನು ಪದ್ಮಪುರಾಣದ ಮೂವತ್ತಮೂರನೇ ಅಧ್ಯಾಯದಲ್ಲಿ ರುದ್ರದೇವರೇ ಸ್ಪಷ್ಟಪಡಿಸಿದ್ದಾರೆ – ಅಪ್ರಾಕೃತಾನಂತಕಲ್ಯಾಣಗುಣಪೂರ್ಣನಾದ ವಿಷ್ಣುವಿಗೆ ತುಚ್ಛವಾದ ಸತ್ತ್ವಾದಿ ಪ್ರಾಕೃತಗುಣಬಂಧನ ಸಂಬಂಧವಿಲ್ಲ. ಅರ್ಥಾತ್ ಪ್ರಾಕೃತಗುಣವಿಕಾರವಾದ ಶೋಕ, ಭಯ, ಭವಬಂಧನಾದಿ ಯಾವ ದೋಷಲೇಶವೂ ಭಗವಂತನಲ್ಲಿಲ್ಲ. ಹೀಗೆ ಪದ್ಮಪುರಾಣಾದಿ ಪ್ರಮಾಣಪ್ರಮಿತವಿಶಿಷ್ಟಾರ್ಥವನ್ನು ಬಿಟ್ಟು, ಪ್ರಮಾಣಗಣವಿರುದ್ಧವಾದ ಸರ್ವವಿಧಗುಣಧರ್ಮಶೂನ್ಯತ್ವಾರ್ಥವನ್ನು ಅರಸುವುದು

ಎಷ್ಟು ಹಾಸ್ಯಾಸ್ಪದ. ಹಾಲನ್ನು ಬಯಸುವ ವಿವೇಕಿಯು ಉತ್ತಮಗೋವಿನ ಸ್ತನವನ್ನು ಅರಸುತ್ತಾನೆ; ಹೊರತು ಗಂಡು ಆಡಿನ ಕತ್ತಿನಲ್ಲಿ ಬರಡಾಗಿರುವ ಸ್ತನವನ್ನು ಸುತರಾಂ ಅರಸುವುದಿಲ್ಲವಷ್ಟೇ. ಅರ್ಥಾತ್ ಮಾಯಾವಾದಿಗಳು ನಾನಾ ಪುರಾಣಾದಿ ಪ್ರಮಾಣಗಳಿಂದಲೇ ಪ್ರಮಿತವಾದ ಪ್ರಾಕೃತಗುಣರಹಿತನೆಂಬ ಪರಮಾರ್ಥವನ್ನು ಬಿಟ್ಟು, ಯಾವೊಂದು ಗುಣಧರ್ಮವೂ ಇಲ್ಲವೆಂಬ ಶೂನ್ಯವಾದವನ್ನರಸುವುದು ಕ್ಷೀರರಹಿತ ಹೋತದ ಕುತ್ತಿಗೆಯಲ್ಲಿರುವ ಸ್ತನವನ್ನರಸಿದಂತೆಯೇ ಅವಿವೇಕದ ಪರಾಕಾಷ್ಠೆಯಾಗಿರುತ್ತದೆ.

ಅಲ್ಲದೇ ಈ ನೈರ್ಗುಣ್ಯವಾದವನ್ನು ಗುರುರಾಜರು ಮತ್ತೊಂದು ಬಗೆಯಿಂದ ಹೀಗೆ ವಿಕಲ್ಪಿಸಿ ಖಂಡಿಸುತ್ತಾರೆ -

**''ವಾಚ್ಯತ್ವೇನೈವ ಗುಣಿತಾ ವಾಚ್ಯತ್ವೇ ನಿರ್ಗುಣೋಕ್ತಿತಃ ।**
**ಲಕ್ಷ್ಯತ್ವೇನೈವ ಗುಣಿತಾ ಲಕ್ಷ್ಯತ್ವೇ ನಿರ್ಗುಣೋಕ್ತಿತಃ ।**
**ನೋಭಯಂ ಚೇದಶಾಬ್ದತ್ವಧರ್ಮೇಣ ಸ್ಯಾದ್ಧಿ ಧರ್ಮಿತಾ ॥೮೦೧॥**
**ವ್ಯಾವಹಾರಿಕತಾಯಾಂ ಚ ಬಾಧಾದ್ ಧರ್ಮೋ ನ ಸೋಽರ್ಥಕೃತ್ ।**
**ಗುಂಜಾಪುಂಜಾಗ್ನಿನಾ ಕುಂಜೇ ಕಿಂ ಜಾಯೇತ ಹಿಮೌಷಧಮ್ ॥೮೦೨॥''**

ಬ್ರಹ್ಮನು ನಿರ್ಗುಣಶಬ್ದವಾಚ್ಯನೆಂದರೆ, ನಿರ್ಗುಣತ್ವವೆಂಬ ಧರ್ಮವುಳ್ಳವನು ಎಂಬರ್ಥದಿಂದಲೇ ಸಗುಣತ್ವವೇ ಪ್ರಾಪ್ತವಾಗುತ್ತದೆ. ಹಾಗಲ್ಲದೇ ಲಕ್ಷಣಾರ್ಥದಿಂದ ತಿಳಿಯಲ್ಪಡುತ್ತಾನೆಂದರೆ ಲಕ್ಷ್ಯತ್ವಧರ್ಮವುಳ್ಳವನೆಂದೇ ಪ್ರಾಪ್ತವಾಗುತ್ತದೆ. ವಾಚ್ಯತ್ವ, ಲಕ್ಷ್ಯತ್ವಗಳೆಂಬ ಯಾವ ಬಗೆಯ ಶಬ್ದದಿಂದಲೂ ಬೋಧ್ಯನಲ್ಲವೆಂದರೆ - ಮುಖ್ಯಾಮುಖ್ಯವೃತ್ತಿಗಳೆಂಬ ಶಬ್ದಗಳಿಂದ ಬೋಧ್ಯನಲ್ಲವೆಂಬ ಧರ್ಮವೇ ಪ್ರಾಪ್ತವಾಗುತ್ತದೆ. ಹೀಗೆ ವೇದವಾಣಿಯು ತನಗೆ ಆಶ್ರಯನಾದ ಬ್ರಹ್ಮನ ಧರ್ಮವನ್ನು ಯಾವ ಬಗೆಯಿಂದಲೂ ವಿರೋಧಿಸದೇ ಬ್ರಹ್ಮನ ಭಾವರೂಪಧರ್ಮಗಳನ್ನೇ ನಿರೂಪಿಸುವುದು ಸುದೃಢವಾಗುತ್ತದೆ. ಆ ವೇದೋಕ್ತಧರ್ಮವನ್ನು ವ್ಯಾವಹಾರಿಕವೆಂದರೆ ಅದು ಬಾಧಿತವಾದ ಮಿಥ್ಯಾಧರ್ಮವೆಂದಾಗುತ್ತದೆ. ಅಂಥ ಧರ್ಮ ಅರ್ಥಕ್ರಿಯಾಕಾರಿಯಲ್ಲ. ಪೊದೆಯಲ್ಲಿರುವ ಗುಲಗಂಜಿಗುಂಪನ್ನು ಕಂಡು ಬೆಂಕಿಯೆಂದು ಭ್ರಮಿಸಿದರೆ, ಅಂತಹ ಸುಳ್ಳಾದ ಬೆಂಕಿಯಿಂದ ಶೈತ್ಯನಿವಾರಣೆಯೆಂಬ ಕಾರ್ಯಸಿದ್ಧಿಯಾಗುತ್ತದೆಯೇ. ಹೀಗೆ ಮಾಯಾವಾದಿಗಳು ಹೇಳುವ ಅಪ್ರಾಮಾಣಿಕವ್ಯಾಖ್ಯಾನದಲ್ಲಿ ವ್ಯಾಹತಿದೋಷಗಳು ಸುದೃಢವಾದ್ದರಿಂದ ನಿರ್ಗುಣಶಬ್ದಕ್ಕೆ

ತಿಳಿಯಬೇಕು. ಮಾಯಾವಾದಿಗಳು ಬ್ರಹ್ಮನಲ್ಲಿ ಸತ್ತಾಧರ್ಮವಿಲ್ಲದಿದ್ದರೂ 'ಸದ್‌ರೂಪ' ಎನ್ನುತ್ತಾರೆ. ಈ ವಾದವನ್ನು ಶ್ರೀಗುರುರಾಜರು ಹೀಗೆ ಗೇಲಿ ಮಾಡಿದ್ದಾರೆ –

''ಕಿಂ ವ್ಯಾಹತಿಪುರಂಧ್ರೀಣಾಂ ಪಾಣಿಗ್ರಹಣಮಸ್ತಿ ತೇ ।
ವಿಪ್ರಃ ಸ್ಯಾದ್ ವಿಪ್ರತಾ ನೈವ ಗೋಮಾನ್ ಸ್ಯಾದ್ ಗೌರ್ನ ಕಾಚನ ಧನೀ ನೈವ ಧನಂ ಚೇತಿ ಕೋ ನೂನ್ಮತ್ತೋ ವದೇದ್ ವದ ॥772॥''

ನೂರಾರು ಬಗೆಯ ವ್ಯಾಹತಿಗಳೆಂಬ ಸ್ತ್ರೀಯರ ಪಾಣಿಗ್ರಹಣವಿವಾಹ ನಿನಗಾಗಿದೆಯೇ? ಇವನು ವಿಪ್ರನಾಗಿದ್ದಾನೆ. ಆದರೆ ವಿಪ್ರತ್ವ ಇವನಲ್ಲಿಲ್ಲ. ಇವನು ಗೋವುಗಳುಳ್ಳವನಾಗಿದ್ದಾನೆ. ಆದರೆ ಒಂದು ಗೋವೂ ಇವನಿಗಿಲ್ಲ. ಇವನು ಮಹಾಧನಿಕನಾಗಿದ್ದಾನೆ. ಆದರೆ ಇವನಲ್ಲಿ ಸ್ವಲ್ಪವೂ ಧನವಿಲ್ಲವೆಂದು ಸ್ವವ್ಯಾಹತಭಾಷಿಯಾದ ವ್ಯಕ್ತಿಯನ್ನು ವಿವೇಕಿಗಳು ಉನ್ಮತ್ತನೆನ್ನುವುದಿಲ್ಲವೇ? ಅಂತೆಯೇ ಬ್ರಹ್ಮ ಸದ್‌ರೂಪನಾಗಿದ್ದಾನೆ. ಅವನಲ್ಲಿ ಸತ್ತಾಧರ್ಮವೇ ಇಲ್ಲವೆಂಬ ಬಹುವ್ಯಾಹತಭಾಷಿಯಾದ ನಿನ್ನನ್ನು ವಿವೇಕಿಗಳೆಲ್ಲರೂ ಉನ್ಮತ್ತನೆಂದು ಉಪಹಾಸ ಮಾಡುತ್ತಾರಷ್ಟೇ.

ಸಮಸ್ತ ಸದ್ಭಕ್ತ ಕೃಪಾಲುಗಳಾದ ಶ್ರೀಮದ್‌ವಾದಿರಾಜಗುರುಸಾರ್ವಭೌಮರು –

**''ಹರಿಸ್ತು ನಿರ್ಗುಣಃ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।**
**ಸ ಸರ್ವದೃಗುಪದ್ರಷ್ಟಾ ತಂ ಭಜನ್ನಿರ್ಗುಣೋ ಭವೇತ್ ॥೮೬೭॥''**

ಎಂಬ ಭಾಗವತಪ್ರಮಾಣವನ್ನು ಉಲ್ಲೇಖಿಸಿ ಸಾಧಕರಿಗೆ ಹೀಗೆ ಸಂದೇಶಿಸಿದ್ದಾರೆ. ಶ್ರೀಹರಿಯಾದರೂ ಸ್ವರೂಪದಿಂದಲೇ ಯಾವಾಗಲೂ ಪ್ರಾಕೃತವಿಕೃತಗುಣಸಂಬಂಧ-ರಹಿತನಾಗಿದ್ದಾನೆ. ಪ್ರಕೃತಿಯಿಂದ ಭಿನ್ನನೂ, ಅತ್ಯುತ್ತಮನೂ ಸ್ವರೂಪಭೂತ-ಸರ್ವಸದ್ಗುಣಪೂರ್ಣನೂ, ಸರ್ವದರ್ಶಿಯೂ, ಸರ್ವಪ್ರೇರಕನೂ ಆಗಿದ್ದಾನೆ. ಅಂತಹ ಪ್ರಾಕೃತ ಗುಣರಹಿತ ಹರಿಯನ್ನು ಸೇವಿಸುವವನೂ ನಿರ್ಗುಣನಾಗುತ್ತಾನೆ. ಅರ್ಥಾತ್ ಷೋಡಶ (ದಶೇಂದ್ರಿಯ, ಪಂಚಭೂತ, ಮನೋರೂಪ) ತತ್ವಾತ್ಮಕ ಪ್ರಾಕೃತ ವಿಕೃತಶರೀರದಲ್ಲಿ ಸಂಚರಿಸುವುದೆಂಬ ಸಂಸಾರಬಂಧರಹಿತನಾಗಿ, ಶ್ರೀಹರಿಶರೀರಸದೃಶವಾದ ಅಪ್ರಾಕೃತದಿವ್ಯಶರೀರವನ್ನು ಪಡೆದು ಶಾಶ್ವತಶುದ್ಧಾನಂದ ಸಂದೋಹತುಂದಿಲನಾಗುತ್ತಾನೆ.

ಹೀಗೆ ಶ್ರೀಗುರುರಾಜರು ಈ ಗುಣಸೌರಭದಲ್ಲಿ ಅನಾದಿ ವೇದರಾಶಿಗಳಿಗಿರುವ ಅಪೌರುಷೇಯತ್ವವನ್ನು, ಶ್ರೀಹಯಗ್ರೀವದೇವರ ಮುಖನಾಸಿಕಗಳಿಂದ

ಜಗದುಪದೇಶರೂಪವಾಗಿ ನಿರಂತರ ಅತಿಸುಶ್ರಾವ್ಯವಾಗಿ ಮಂಗಳಕರವಾಗಿ ಹೊರಹೊಮ್ಮುತ್ತಿರುವುದರ ಮೂಲಕ ಅವುಗಳಿಗಿರುವ ಮಹತ್ತರಪ್ರಾಮಾಣ್ಯವನ್ನು, ಆ ಮಂಗಲಮಯವೇದವಾಣಿಗಳಿಂದ ಮತ್ತು ಸಾಕ್ಷಾತ್ ಭಗವಂತನೇ ಸರ್ವಜ್ಞಬುದ್ಧಿಯಿಂದ ನಿರ್ಮಿಸಿದ ಬ್ರಹ್ಮಸೂತ್ರಭಾಗವತಾದಿಪ್ರಮಾಣಗಳಿಂದ ಪ್ರಧಾನವಾಗಿ ಸಮಗ್ರವಾಗಿ ಪ್ರತಿಪಾದ್ಯನಾದ ಸರ್ವದೇವದೇವೋತ್ತಮಶ್ರೀಹರಿಯ ಮಂಗಲಮಯ ಮಹತ್ತಮಮಹಿಮೆಗಳ ಸೊಬಗನ್ನು ಸಕಲ ಸುಜನಸುಮನೋರಂಜಕವಾಗಿ ಪ್ರಕಾಶಿಸಿದ್ದಾರೆ. ಕಾವ್ಯಮಯಕಾಂತಾಸಂಹಿತಾಮಾಧ್ಯಮದಿಂದ ಸಮಸ್ತ ಸದ್ಭಕ್ತರಿಗೂ ರಮಣೀಯತಮ ಸಮೀರಸಮಯ ಸಮೀಚೀನಸರಣಿಯಲ್ಲಿ ಅಚಲ ಶ್ರದ್ಧೆ ಉತ್ಸಾಹ ಭಾವುಕತೆಗಳ ನಾನಾವಿಧ ವಿಮಲಾನುರಾಗರಂಜಿತ-ಕಾರಂಜಿಗಳನ್ನು ಹೆಜ್ಜೆಹೆಜ್ಜೆಗೂ ಅವರವರ ತಾರತಮ್ಯಾನುಸಾರವಾಗಿ ಮುಗಿಲಿಗಿಂತಲೂ ಮಿಗಿಲಾಗಿ ಚಿಮ್ಮಿಸಲು ಸಮರ್ಥವಾಗಿರುವ ಚಮತ್ಕಾರಚಾಮೀಕರ (ಸುವರ್ಣ)ರತ್ನಾಕರಗಳನ್ನು ಈ ಗ್ರಂಥರತ್ನದಲ್ಲಿ ಅಕ್ಷಯವಾಗಿ ತುಂಬಿಸಿ ತುಳುಕಿಸಿ ಹರಿಸಿ ಹರಸಿದ್ದಾರೆ.

ಈ ಯುಕ್ತಿಮಲ್ಲಿಕೆಯ ಅಪೂರ್ವಮಹತ್ತ್ವವನ್ನು ಶ್ರೀಮದ್ವಾದಿರಾಜ ಗುರುಸಾರ್ವಭೌಮರ ಅವರಜರೇ ಆದ ಮತ್ತು ಶ್ರೀ ಶ್ರೀಸತ್ಯತೀರ್ಥಶುಭಸಂಪ್ರದಾಯ ಪ್ರವರ್ತಕರಾದ ಶ್ರೀ ಸುರೋತ್ತಮತೀರ್ಥರೇ ಹೀಗೆ ಭಕ್ತಿಯಿಂದ ಉದ್ಗರಿಸಿದ್ದಾರೆ –

**''ಯತ್ರಾಶ್ರುತಚರ್ಾ ಚರ್ಚಾಽಸ್ತಿ ಯುಕ್ತಯಶ್ಚಾಶ್ರುತಾಃ ಪುರಾ ।**
**ತನ್ಮೂಲಂ ಸಾ ಚ ಟೀಕೇಯಂ ಕಿಂ ಮಾನುಷಕೃತಿರ್ಭವೇತ್ ॥''**

ಹಿಂದೆಂದೂ ಕೇಳಿರದ ಮಹರ್ಷಿಮೂರ್ಧನ್ಯರ ದಿವ್ಯಸಾಕ್ಷಾತ್ಕಾರಸಾರಭೂತವಾದ ಅಪೂರ್ವಚರ್ಚಾಚಾತುರ್ಯ, ಮತ್ತು ಹಿಂದೆಂದೂ ಕೇಳಿರದ ಅಪೂರ್ವಪ್ರಮಿತ-ಯುಕ್ತಿಚಮತ್ಕಾರಗಳು ಈ ಗ್ರಂಥದಲ್ಲಿ ವಿಪುಲವಾಗಿ ತುಂಬಿವೆ. ವಿಪುಲಗಂಭೀರಾರ್ಥಗರ್ಭಿತವಾದ ಈ ಗ್ರಂಥಕ್ಕೆ ಮಾನವಮಾತ್ರರಿಂದ ವ್ಯಾಖ್ಯಾನ ಮಾಡಲು ಸಾಧ್ಯವೇ ಇಲ್ಲ. ಶ್ರೀಗುರುರಾಜರೇ ದಯೆಯಿಂದ ನನ್ನ ಮನಸ್ಸಿನಲ್ಲಿ ಸನ್ನಿಹಿತರಾಗಿ ಲೇಶತಃ ಈ ವ್ಯಾಖ್ಯಾನ ಮಾಡಿದ್ದಾರೆ.

ಹೀಗೆ ಜ್ಞಾನಿಮೂರ್ಧನ್ಯರಿಂದಲೇ ಪರಮಮಾನ್ಯವಾದ, ಅನಿತರಸಾಧಾರಣ ನಾನಾಗುಣಸಮಲಂಕೃತವಾದ, ಸಕಲ ಲೌಕಿಕಸಾಂಸಾರಿಕದುರಂತಚಿಂತಾ-ಸಂತಾಪಸಂತಾರಿಣಿಯಾದ, ಅಲೌಕಿಕಮಂಗಲಮಯ ಮೋಕ್ಷಾದಿ ಪುರುಷಾರ್ಥಪ್ರಾಪಕವಾದ, ಸಮಸ್ತವಿಧಸದ್ಭಕ್ತರಿಗೂ ಅನರ್ಘ್ಯಚಿಂತಾಮಣಿಯಾದ,

ತಮ್ಮ ಉಪಾಸ್ಯ ಶ್ರೀಹಯಗ್ರೀವದೇವರ ಮಂಗಲಮಹಿಮೆಗಳ ದರ್ಶನಭಾಗ್ಯವನ್ನೊದಗಿಸುವ, ಕುವಾದಿಗಳ ಅಮಂಗಲ ಕುಯುಕ್ತಿಜಾಲವನ್ನು ಧೂಳೀಪಟ ಮಾಡುವ ಈ ಯುಕ್ತಿಮಲ್ಲಿಕಾಗ್ರಂಥರತ್ನವನ್ನು ವೃಂದಾವನಾಚಾರ್ಯಗ್ರಂಥಪ್ರಕಾಶನ ಸಮಿತಿಯು ಉತ್ಸಾಹಾಭಿಮಾನದಿಂದ ನೀಡುತ್ತಿದೆ. ನಿರ್ಮತ್ಸರ ಸಹೃದಯ ಸಜ್ಜನಭ್ರಮರಗಳು ಈ ದೇವಗ್ರಂಥದ ಸೌರಭವೈಭವವೈವಿಧ್ಯವನ್ನನುಭವಿಸಿ ಕೃತಕೃತ್ಯರಾಗಬೇಕೆಂಬ ಉದಾತ್ತಮನೋಭಾವದಿಂದ ಶ್ರೀಶ್ರೀವಿಶ್ವೋತ್ತಮತೀರ್ಥ ಕರಕಮಲ ಸಂಜಾತರಾದ ಶ್ರೀಶ್ರೀ ವಿಶ್ವವಲ್ಲಭತೀರ್ಥರು ಈ ವೃಂದಾವನಾಚಾರ್ಯ ಗ್ರಂಥಪ್ರಕಾಶನ ಕಾರ್ಯವನ್ನು ಕೈಕೊಂಡಿದ್ದಾರೆ. ಸೋಂದಾಮಠಾಧೀಶರ ಸತ್ತತ್ವಸುಧಾಪ್ರಸಾರಯೋಜನೆಯ ಅಪೂರ್ವ ಸದುಪಯೋಗವನ್ನು ಸದ್‌ಭಕ್ತರೆಲ್ಲರೂ ಪಡೆಯುವಂತಾಗಲೆಂಬುದೇ ಈ ಪ್ರಕಾಶನ ಸಮಿತಿಯ ಸದಾಶಯ.

**– ವಿದ್ವಾನ್ ಬಿ.ಎನ್. ಸೀತಾರಾಮಾಚಾರ್ಯ**



## ಗುಣಸೌರಭ ಲೇಖನಯಜ್ಞದಲ್ಲಿ ಭಾಗವಹಿಸಿದ ವಿದ್ವಾಂಸರುಗಳು

★ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು,
ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ, ಉಡುಪಿ.

★ ವಿದ್ವಾನ್ ಶ್ರೀರಾಮವಿಟ್ಠಲಾಚಾರ್ಯ, ಬೆಂಗಳೂರು
★ ವಿದ್ವಾನ್ ಕರ್ನೂಲ್ ಶ್ರೀನಿವಾಸಾಚಾರ್ಯ, ಬೆಂಗಳೂರು
★ ಡಾ॥ ನರಸಿಂಹಾಚಾರ್ಯ ಪುರೋಹಿತ್, ತಿರುಪತಿ
★ ವಿದ್ವಾನ್ ಎ. ಹರಿದಾಸಭಟ್, ಬೆಂಗಳೂರು
★ ವಿದ್ವಾನ್ ಸಿ.ಎಚ್. ಬದರಿನಾಥಾಚಾರ್ಯ, ಬೆಂಗಳೂರು
★ ವಿದ್ವಾನ್ ಶ್ಯಾಮಸುಂದರ ಆಚಾರ್ಯ, ಮಂತ್ರಾಲಯ
★ ವಿದ್ವಾನ್ ಬಿ.ಎನ್. ವೇಂಕಟೇಶಾಚಾರ್ಯ, ಬೆಂಗಳೂರು
★ ವಿದ್ವಾನ್ ವೇಂಕಟೇಶಾಚಾರ್ಯ ಕುಲಕರ್ಣಿ, ಬೆಂಗಳೂರು
★ ವಿದ್ವಾನ್ ರಾಘವೇಂದ್ರ ಭಟ್ ಗೋಪಾಡಿ, ಬೆಂಗಳೂರು

**ಮೂಲಪ್ರತಿಶೋಧಕರು :-**

★ ವಿದ್ವಾನ್ ಕೆ. ಮುರಳೀಧರ ಭಟ್

★ ಗುಣಸೌರಭದ ಅನೇಕ ಭಾಗಗಳನ್ನು ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಅನುವಾದ ಮಾಡಿರುತ್ತಾರೆ.

ತಮ್ಮ ಉಪಾಸ್ಯ ಶ್ರೀಹಯಗ್ರೀವದೇವರ ಮಂಗಲಮಹಿಮೆಗಳ ದರ್ಶನಭಾಗ್ಯವನ್ನೊದಗಿಸುವ, ಕುವಾದಿಗಳ ಅಮಂಗಲ ಕುಯುಕ್ತಿಜಾಲವನ್ನು ಧೂಳೀಪಟ ಮಾಡುವ ಈ ಯುಕ್ತಿಮಲ್ಲಿಕಾಗ್ರಂಥರತ್ನವನ್ನು ವೃಂದಾವನಾಚಾರ್ಯಗ್ರಂಥಪ್ರಕಾಶನ ಸಮಿತಿಯು ಉತ್ಸಾಹಾಭಿಮಾನದಿಂದ ನೀಡುತ್ತಿದೆ. ನಿರ್ಮತ್ಸರ ಸಹೃದಯ ಸಜ್ಜನಭ್ರಮರಗಳು ಈ ದೇವಗ್ರಂಥದ ಸೌರಭವೈಭವವೈವಿಧ್ಯವನ್ನನುಭವಿಸಿ ಕೃತಕೃತ್ಯರಾಗಬೇಕೆಂಬ ಉದಾತ್ತಮನೋಭಾವದಿಂದ ಶ್ರೀಶ್ರೀವಿಶ್ವೋತ್ತಮತೀರ್ಥ ಕರಕಮಲ ಸಂಜಾತರಾದ ಶ್ರೀಶ್ರೀ ವಿಶ್ವವಲ್ಲಭತೀರ್ಥರು ಈ ವೃಂದಾವನಾಚಾರ್ಯ ಗ್ರಂಥಪ್ರಕಾಶನ ಕಾರ್ಯವನ್ನು ಕೈಕೊಂಡಿದ್ದಾರೆ. ಸೋಂದಾಮಠಾಧೀಶರ ಸತ್ತತ್ವಸುಧಾಪ್ರಸಾರಯೋಜನೆಯ ಅಪೂರ್ವ ಸದುಪಯೋಗವನ್ನು ಸದ್‌ಭಕ್ತರೆಲ್ಲರೂ ಪಡೆಯುವಂತಾಗಲೆಂಬುದೇ ಈ ಪ್ರಕಾಶನ ಸಮಿತಿಯ ಸದಾಶಯ.

**- ವಿದ್ವಾನ್ ಬಿ.ಎನ್. ಸೀತಾರಾಮಾಚಾರ್ಯ**



## ಗುಣಸೌರಭ ಲೇಖನಯಜ್ಞದಲ್ಲಿ ಭಾಗವಹಿಸಿದ ವಿದ್ವಾಂಸರುಗಳು

★ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು,
ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ, ಉಡುಪಿ.

★ ವಿದ್ವಾನ್ ಶ್ರೀರಾಮವಿಟ್ಠಲಾಚಾರ್ಯ, ಬೆಂಗಳೂರು
★ ವಿದ್ವಾನ್ ಕರ್ನೂಲ್ ಶ್ರೀನಿವಾಸಾಚಾರ್ಯ, ಬೆಂಗಳೂರು
★ ಡಾ|| ನರಸಿಂಹಾಚಾರ್ಯ ಪುರೋಹಿತ್, ತಿರುಪತಿ
★ ವಿದ್ವಾನ್ ಎ. ಹರಿದಾಸಭಟ್, ಬೆಂಗಳೂರು
★ ವಿದ್ವಾನ್ ಸಿ.ಎಚ್. ಬದರಿನಾಥಾಚಾರ್ಯ, ಬೆಂಗಳೂರು
★ ವಿದ್ವಾನ್ ಶ್ಯಾಮಸುಂದರ ಆಚಾರ್ಯ, ಮಂತ್ರಾಲಯ
★ ವಿದ್ವಾನ್ ಬಿ.ಎನ್. ವೇಂಕಟೇಶಾಚಾರ್ಯ, ಬೆಂಗಳೂರು
★ ವಿದ್ವಾನ್ ವೇಂಕಟೇಶಾಚಾರ್ಯ ಕುಲಕರ್ಣಿ, ಬೆಂಗಳೂರು
★ ವಿದ್ವಾನ್ ರಾಘವೇಂದ್ರ ಭಟ್ ಗೋಪಾಡಿ, ಬೆಂಗಳೂರು

**ಮೂಲಪ್ರತಿಶೋಧಕರು :-**

★ ವಿದ್ವಾನ್ ಕೆ. ಮುರಳೀಧರ ಭಟ್

★ ಗುಣಸೌರಭದ ಅನೇಕ ಭಾಗಗಳನ್ನು ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಅನುವಾದ ಮಾಡಿರುತ್ತಾರೆ.

# ಗುಣಸೌರಭಮ್ - ಸಂಪುಟ - ೧

## ವಿಷಯಾನುಕ್ರಮಣಿಕೆ



—o—

॥ ಶ್ರೀಮದ್‌ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-

ಲಕ್ಷ್ಮೀಹಯಗ್ರೀವಾಯನಮಃ ॥

ಭಕ್ತ್ಯಾ ಸ್ತುತ್ಯಾ ವಿರಕ್ತ್ಯಾ ಭಜದಮಲಜನೌನ್ನತ್ಯಭೂತ್ಯರ್ಪಕಾಯ
ಕ್ಷ್ಮಾಯಾಮತ್ಯಲ್ಪಭೃತ್ಯೇಷ್ವಪಿ ಕುಜನಕೃತೌದ್ಧತ್ಯಭೂತ್ಯಾಜಕಾಯ ।
ಕರ್ತ್ರೇ ಧರ್ತ್ರೇಽಥ ಹರ್ತ್ರೇ ಹಯಮುಖಹರಯೇಽಮುತ್ರ ಪಾತ್ರೇ ನಮಸ್ತೇ
ತಸ್ಮೈ ಕಸ್ಮೈಚಿದಸ್ಮನ್ಮನಸಿ ಧೃತಕಥಾವಿಸ್ಮೃತೌ ಸ್ಮಾರಕಾಯ ॥ ೧ ॥

**ಅರ್ಥ–** ಭಕ್ತ್ಯಾ =ಭಕ್ತಿಯಿಂದ ಕೂಡಿದ, ಸ್ತುತ್ಯಾ=ಸ್ತೋತ್ರದಿಂದ ವಿರಕ್ತ್ಯಾ =ವಿರಕ್ತಿಯಿಂದಲೂ, ಭಜದ-ಮಲಜನೌನ್ನತ್ಯಭೂತ್ಯರ್ಪಕಾಯ =ಭಜಿಸುವ ಮಾತ್ಸರ್ಯ ರಹಿತರಾದ ಸಜ್ಜನರಿಗೆ ಉನ್ನತಿಯನ್ನು ಸಂಪತ್ತನ್ನೂ ತಂದುಕೊಡುವವನಾದ, ಕ್ಷ್ಮಾಯಾಂ =ಭೂಮಿಯಲ್ಲಿರುವ, ಅತ್ಯಲ್ಪಭೃತ್ಯೇ-ಷ್ವಪಿ = ಕಡಿಮೆ ಭಕ್ತಿಯುಳ್ಳ ಭೃತ್ಯರಲ್ಲಿಯೂ ಸಹ (ಪ್ರೀತಿಯಿಂದ), ಕುಜನಕೃತೌದ್ಧತ್ಯ-ಭೂತ್ಯಾಜಕಾಯ = ದುರ್ಜನರಿಂದ ಮಾಡಲ್ಪಡುವ ಉದ್ಧಟತನ, ಅದಕ್ಕೆ ಕಾರಣವಾದ ದುರ್ಜನರ ಸಂಪದಾದಿಗಳನ್ನು ನಾಶಪಡಿಸುವವನಾದ, ಕರ್ತ್ರೇ = ಸೃಷ್ಟಿಕರ್ತೃವಾದ, ಅಥ ಧರ್ತ್ರೇ = ಸೃಷ್ಟಿಸಿದ ಕೂಡಲೇ ಪಾಲಿಸುವವನಾದ, ಹರ್ತ್ರೇ = ಸಂಹಾರಕರ್ತೃವೂ ಆದ, ಅಸ್ಮನ್ಮನಸಿ ಧೃತಕಥಾವಿಸ್ಮೃತೌ = ನಮ್ಮ ಮನಸ್ಸಿನಲ್ಲಿ ಸ್ಥಿರವಾಗಿ ಧರಿಸಲ್ಪಟ್ಟ ಹರಿಯ ಸೃಷ್ಟ್ಯಾದಿ ವ್ಯಾಪಾರಗಳ ಕಥೆಯು ಮರೆಯುತ್ತಿರಲು, ಸ್ಮಾರಕಾಯ = ಸ್ಮರಣೆಗೆ ತಂದುಕೊಡುವ, ಅಮುತ್ರ = ಪರಲೋಕದಲ್ಲಿ ಎಂದರೆ ಮೋಕ್ಷದಲ್ಲಿಯೂ, ಪಾತ್ರೇ = ಪಾಲಕನಾದ, ತಸ್ಮೈ = ವ್ಯಾಪ್ತನಾದ, ಕಸ್ಮೈಚಿತ್ = ಸಾಕಲ್ಯೇನ ಜ್ಞಾತನಲ್ಲದ, ಹಯಮುಖಹರಯೇ = ಹಯಗ್ರೀವನಾದ ಹರಿಯೇ, ತೇ = ನಿನಗೋಸ್ಕರ, ನಮಃ = ನಮಸ್ಕಾರವು.

**ಅನುವಾದ–** ಭಕ್ತಿಯಿಂದ ಗೈದ ಸ್ತುತಿ, ಭಕ್ತಿಯಿಂದ ಕೂಡಿದ ವಿರಕ್ತಿಯಿಂದ ನಿತ್ಯ ಭಜಿಸುವ ಸಜ್ಜನರಿಗೆ ಅಭಿವೃದ್ಧಿ ಸಂಪತ್ತುಗಳನ್ನೀಯುವ, ಅಧಮ ಭಕ್ತರಿಗೂ ದುರ್ಜನರಿಂದ ಪೀಡೆಯಾದಲ್ಲಿ, ದುರ್ಜನರ ಸೊಕ್ಕು ಮುರಿದು ಅಧಮ ಭಕ್ತರನ್ನೂ ಸಂರಕ್ಷಿಸುವ ಕಾರುಣ್ಯವುಳ್ಳ, ಸೃಷ್ಟಿ-ಸ್ಥಿತಿ-ಲಯಕಾರಣನಾದ, ಮೋಕ್ಷದಲ್ಲಿಯೂ

ಪಾಲಕನಾದ ಮನದಲ್ಲಿ ನೆಲೆನಿಂತಿರುವ, ಹರಿಕಥೆಯು ಮರೆಯದಿರುವಂತೆ ಅನುಗ್ರಹಿಸುವ, ವ್ಯಾಪ್ತನಾದ, ಸುಖರೂಪಿಯಾದ ಹರಿಯೇ, ನಿನಗೆ ನಮನ.

**ಅವ್ಯಹಿತೋತ್ತರಕಲ್ಪಮುಖ್ಯಸಮೀರಪದಚಂಚರೀಕಶ್ರೀಶ್ರೀಸತ್ಯತೀರ್ಥಪರಂಪರಾಪ್ರಾಪ್ತ-**
**ಶ್ರೀಶ್ರೀಸುರೋತ್ತಮಭಿಕ್ಷುವಿರಚಿತಾ ಭಾವವಿಲಾಸಿನೀ ಟೀಕಾ**

**ಯಸ್ಮಿನ್ ಜ್ಞಾನಂ ಸುಪೂರ್ಣಂ ಸುಖಮಪಿ ಸುಮಹದ್‌ವೀರ್ಯಮೌದಾರ್ಯಶೌರ್ಯೇ**
**ಕಾಂತಿರ್ದಾಂತಿರ್ವಿರಕ್ತಿರ್ಧೃತಿರತಿಮಹತೀ ತೇಜ ಓಜೋ ಬಲಂ ಚ ।**
**ರೂಪಂ ಸೌಂದರ್ಯಮತ್ಯುಜ್ಜ್ವಲವಿಭವದಯಾಪೂರ್ವಸದ್ಧರ್ಮಸಂಘಃ-**
**ಸೋಽವ್ಯಾದಾಧ್ಯಾದಿಹಾರೀ ವಿಧಿ ಭವಗರುಡೇಂದ್ರಾದಿವಂದ್ಯೋಮುಕುಂದಃ ॥ ★ ॥**

**ಅರ್ಥ–** ಯಾವ ಮುಕುಂದನಲ್ಲಿ ಜ್ಞಾನ-ಸುಖಗಳು ಪೂರ್ಣವಾಗಿದ್ದಾವೆಯೋ, ಶ್ರೇಷ್ಠವಾದ ವೀರ್ಯ, ಔದಾರ್ಯ–ಶೌರ್ಯ–ಕಾಂತಿ–ದಾಂತಿ–ವಿರಕ್ತಿ–ಧೃತಿ–ರತಿ, ಶ್ರೇಷ್ಠವಾದ ತೇಜಸ್ಸು-ಓಜಸ್ಸು-ಬಲ- ರೂಪ-ಸೌಂದರ್ಯ, ಅತ್ಯುಜ್ಜ್ವಲವಾದ ಐಶ್ವರ್ಯ–ದಯಾ ಮೊದಲಾದ ಅದ್ಭುತವಾದ ಗುಣಗಳು ತುಂಬಿಕೊಂಡಿದ್ದಾವೆಯೋ, ಅಂತಹ ಬ್ರಹ್ಮ-ರುದ್ರ–ಗರುಡ-ಇಂದ್ರಾದಿ ದೇವಗಣದಿಂದ ವಂದ್ಯನಾದ, ಚಿಂತೆ ಮೊದಲಾದ ರೋಗನಿವಾರಕನಾದ ಮುಕುಂದನು ನಮ್ಮನ್ನು ರಕ್ಷಿಸಲಿ.

**ಅನಂತಕಲ್ಯಾಣಗುಣೈಕದೇಹಂ ಸಮಸ್ತದೋಷೋಜ್ಝಿತಮಪ್ರಮೇಯಮ್ ।**
**ನಿರಂತರಾಬಾಧ್ಯಜಗದ್ವಿಭಿನ್ನಂ ನಮಾಮಿ ನಾರಾಯಣಮಾದರೇಣ ॥ ★ ॥**

**ಅನುವಾದ– ಅನಂತ ಕಲ್ಯಾಣ ಗುಣಗಳೇ ಮುಖ್ಯವಾಗಿ ಶರೀರವಾಗಿ ಉಳ್ಳ, ಸಮಸ್ತ ದೋಷದೂರನಾದ, ಊಹಿಸಲು ಅಸಾಧ್ಯನಾದ, ಎಂದೂ ಬಾಧಿತವಾಗದ ಜಗತ್ತಿಗಿಂತಲೂ ಅತ್ಯಂತ ಭಿನ್ನನಾದ ನಾರಾಯಣನನ್ನು ಭಕ್ತಿಯಿಂದ ನಮಿಸುತ್ತೇನೆ.**

ಈ ಶ್ಲೋಕದಲ್ಲಿ ಸುರೋತ್ತಮತೀರ್ಥರು ಗ್ರಂಥಪ್ರತಿಪಾದ್ಯ ಗುಣವಿಶಿಷ್ಟನಾದ ನಾರಾಯಣನಿಗೆ ನಮಸ್ಕಾರವನ್ನು ಮಾಡುತ್ತಾರೆ. ಅನಂತಕಲ್ಯಾಣಗುಣಂ, ಅಪ್ರಮೇಯಂ ಎಂಬ ಗುಣವಿಶೇಷಣಗಳಿಂದ ಗುಣಸೌರಭಸರ್ವಸ್ವವನ್ನೂ, ಸಮಸ್ತದೋಷೋಜ್ಝಿತಂ ಎಂಬ ವಿಶೇಷಣದಿಂದ ಶುದ್ಧಿಸೌರಭಸಾರವನ್ನೂ, ನಿರಂತರಾಬಾಧ್ಯಜಗದ್ವಿಭಿನ್ನಂ ಎಂಬಲ್ಲಿ ಅಬಾಧ್ಯಜಗತ್ ಎಂಬ ಶಬ್ದದಿಂದ ವಿಶ್ವಸೌರಭಸಾರವನ್ನೂ, ಜಗದ್ವಿಭಿನ್ನಂ ಎಂಬ ಅಂಶದಿಂದ ಭೇದಸೌರಭಸಾರವನ್ನೂ ನಾರಾಯಣಂ ಎಂಬ ಪದಗಳಿಂದ ಫಲಸೌರಭಸಾರವನ್ನೂ ಸಂಗ್ರಹಿಸಿದ್ದಾರೆ.

**ಪೀಯೂಷಧಾಮಸಚ್ಛಾಯಕಾಯಂ ಹೇಯವಿವರ್ಜಿತಮ್ ।**
**ಧ್ಯೇಯಂ ಹಯಾಸ್ಯಂ ಕವಿಭಿರ್ಗೇಯಂ ವೇದಗಣೈರ್ನುಮಃ ॥ ★ ॥**

ಅಮೃತಧಾಮನಾದ ಚಂದ್ರನಂತೆ ನಿರ್ದುಷ್ಟವಾದ ಶ್ವೇತಕಾಂತಿಯ ಶರೀರವುಳ್ಳ, ತ್ಯಾಜ್ಯಗುಣವರ್ಜಿತನಾದ, ವೇದಸಮೂಹದಿಂದ ಮತ್ತು ಜ್ಞಾನಿಗಳಿಂದ ಸ್ತುತ್ಯನಾದ, ಧ್ಯಾನಕ್ಕೆ ಯೋಗ್ಯನಾದ ಹಯಗ್ರೀವನನ್ನು ನಮಸ್ಕರಿಸುತ್ತೇನೆ

**ವಾದಿರಾಜಮುಖಾಂಭೋಜನಿಸ್ಸೃತಾ ವಾಕ್ಸರಸ್ವತೀ ।**
**ಅಶ್ವಗ್ರೀವಯಶೋಗಂಗಾಸಂಗಾಽಸ್ಮಾನ್ ಪಾವಯತ್ವಲಮ್ ॥ ★ ॥**

ವಾದಿರಾಜರ ಮುಖಕಮಲದಿಂದ ಹೊರಹೊಮ್ಮಿದ ಮಾತೆಂಬ ಸರಸ್ವತಿಯು ಹಯಗ್ರೀವನ ಕೀರ್ತಿ ಎಂಬ ಗಂಗೆಯ ಸಂಗವನ್ನು ಹೊಂದಿ ನಮ್ಮನ್ನು ಚೆನ್ನಾಗಿ ಪವಿತ್ರೀಕರಿಸಲಿ.

**ವ್ಯಾಸಂ ಮಧ್ವಂ ತಥಾ ಮಧ್ವಶಿಷ್ಯಾನ್ ಜಯಮುನೀನಪಿ ।**
**ವಾದಿರಾಜಗುರೂನ್ನತ್ವಾ ವ್ಯಾಕುರ್ವೇ ಯುಕ್ತಿಮಲ್ಲಿಕಾಮ್ ॥ ★ ॥**

ವೇದವ್ಯಾಸರನ್ನೂ, ಮಧ್ವಾಚಾರ್ಯರನ್ನೂ, ಹಾಗೆಯೇ ಮಧ್ವರ ಶಿಷ್ಯರುಗಳಾದ ಜಯಮುನಿಗಳನ್ನೂ, ವಾದಿರಾಜ ಗುರುಗಳನ್ನೂ ನಮಿಸಿ ಯುಕ್ತಿಮಲ್ಲಿಕಾ ಗ್ರಂಥಕ್ಕೆ ವ್ಯಾಖ್ಯಾನ ಬರೆಯುತ್ತೇನೆ.

**ಶ್ರೀವಾದಿರಾಜಯತಿರಾಜಕೃತಪ್ರಬಂಧ -**
**ವ್ಯಾಖ್ಯಾನಕರ್ಮಣಿ ಸುರೋತ್ತಮಯೋಗಿವರ್ಯಾಃ ।**
**ದಕ್ಷಾ ವಯಂ ತು ತದುದೀರಣಶಿಕ್ಷಿತಾರ್ಥಾಸ್ತ-**
**ಚ್ಛ್ಲೋಕ್ಯವಾಕ್ಯಚಯಲೇಖನತಃ ಕೃತಾರ್ಥಾಃ ॥ ★ ॥**

ಶ್ರೀವಾದಿರಾಜ ಯತಿರಾಜರಿಂದ ರಚಿಸಲ್ಪಟ್ಟ ಯುಕ್ತಿಮಲ್ಲಿಕಾ ಪ್ರಬಂಧದ ವ್ಯಾಖ್ಯಾನವೆಂಬ ಸತ್ಕರ್ಮದಲ್ಲಿ ದೇವಶ್ರೇಷ್ಠರಾದ ಯೋಗಿವರ್ಯರು ದಕ್ಷರಾಗಿದ್ದಾರೆ. ನಾವಾದರೂ ಅವರು ಹೇಳಿ ಕಲಿಸಿದ ಸ್ತುತ್ಯವಾದ ವಾಕ್ಯಗಳನ್ನು ಬರೆಯುವುದರಿಂದಲೇ ಧನ್ಯರಾದವರು.

**ಅಬೋಧಾದ್ವಾ ಪ್ರಮಾದಾದ್ವಾಽಯುಕ್ತಂ ಚೇಲ್ಲಿಖಿತಂ ಯದಿ ।**
**ಪರಿಶೋಧ್ಯ ತದಸ್ಮಾಸು ದಯಾಂ ಕುರ್ವಂತು ಸೂರಯಃ ॥ ★ ॥**

ತಿಳಿಯದೆ ಆಗಲಿ, ಪ್ರಮಾದದಿಂದಾಗಲಿ, ಒಂದು ವೇಳೆ ತಪ್ಪಾಗಿ ಬರೆಯಲ್ಪಟ್ಟಿದ್ದಲ್ಲಿ, ಅದನ್ನು ಪರಿಶೋಧಿಸಿ ನಮ್ಮಲ್ಲಿ ದಯೆ ಉಳ್ಳವರಾಗಬೇಕೆಂದು ಜ್ಞಾನಿಗಳಲ್ಲಿ ಬಿನ್ನಹ.

**ಭಾವವಿಲಾಸಿನೀ–** ಶ್ರೀಮಧ್ವಾಚಾರ್ಯಮತೋಕ್ತಯುಕ್ತಿಮುವಲಂಬ್ಯ ಯುಕ್ತಿರಸಿಕತಯಾ ಯುಕ್ತಿಮಲ್ಲಿಕಾಖ್ಯ ಗ್ರಂಥಂ ಕರಿಷ್ಯಮಾಣೋ ಭಗವಾನ್ ವಾದಿರಾಜಮುನಿಶ್ಚಿಕೀರ್ಷಿತಸ್ಯ

ಗ್ರಂಥಸ್ಯಾವಿಘ್ನ ಪರಿಸಮಾಪ್ತ್ಯರ್ಥಂ ಶಿಷ್ಟಾಚಾರಪರಂಪರಾಪ್ರಾಪ್ತಂ ಸ್ವೇಷ್ಟದೇವತಾ-ಪ್ರಣಾಮರೂಪಂ ಮಂಗಲಮಾದಾವಾಚರತಿ – **ಭಕ್ತ್ಯೇತಿ** ॥

ಶ್ರೀಮನ್ಮಧ್ವಾಚಾರ್ಯರ ಮತದಲ್ಲಿ ಹೇಳಲ್ಪಟ್ಟ ಯುಕ್ತಿಗಳನ್ನು ಆಶ್ರಯಿಸಿ, ಯುಕ್ತಿರಸಿಕರಾದುದರಿಂದ ಯುಕ್ತಿಮಲ್ಲಿಕಾ ಎಂಬ ಗ್ರಂಥವನ್ನು ರಚಿಸುವವರಾಗಿ ಭಗವಾನ್ ವಾದಿರಾಜ ಮುನಿಗಳು ಮಾಡಲಿಚ್ಛಿಸಿದ ಗ್ರಂಥಕ್ಕೆ ವಿಘ್ನಗಳುಯಾವುದೂ ಬರಬಾರದೆಂದೂ, ನಿರ್ವಿಘ್ನವಾಗಿ ಪರಿಸಮಾಪ್ತಿ ಹೊಂದಬೇಕೆಂದೂ, ಉದ್ದೇಶಿಸಿ ಶಿಷ್ಟಾಚಾರಪರಂಪರಾಪ್ರಾಪ್ತವಾದ ಸ್ವೇಷ್ಟದೇವತಾಪ್ರಣಾಮ ರೂಪವಾದ ಮಂಗಳವನ್ನು ಆರಂಭದಲ್ಲಿ ಆಚರಿಸುತ್ತಿದ್ದಾರೆ.

**ಭಾವವಿಲಾಸಿನೀ–** ಭಕ್ತ್ಯಾ ಸ್ತುತ್ಯಾ ವಿರಕ್ತ್ಯಾ ಚ ಭಕ್ತಿರಹಿತಸ್ತುತ್ಯಾದೇರಪ್ರಯೋಜಕತ್ವಾದ್ ಭಕ್ತ್ಯಾ ಸ್ತುತ್ಯಾ, ಭಕ್ತ್ಯಾ ವಿರಕ್ತ್ಯೇತಿ ವಾ । ಭಜಂತಃ ಯೇ ಅಮಲಜನಾಃ ಮಾತ್ಸರ್ಯಾದಿದೋಷರಹಿತಾಃ ನಿರ್ವ್ಯಾಜಭಕ್ತಾ ವಾ, ತೇಷಾಂ ಔನ್ನತ್ಯಂ ಚ ಭೂತಿಶ್ಚ ಔನ್ನತ್ಯಭೂತೀ, ತದರ್ಪಕಾಯ ಅನೇನೇಷ್ಟಪ್ರದತ್ವಮುಕ್ತಂ ಭವತಿ । ಅತ್ಯಲ್ಪಭೃತ್ಯೇಷ್ವಿತ್ಯನೇನಾ ತಿಶಯಿತಭಕ್ತ್ಯಭಾವೋ ದರ್ಶಿತಃ । ಕುಜನೈಃ ಕೃತಂ ಕ್ರಿಯಮಾಣಂ ಚ ಯದೌದ್ಧತ್ಯಂ ತಸ್ಯ ಭೂಃ ಸ್ಥಾನಂ ಸಂಪದಾದಿನಿಮಿತ್ತಮಿತಿ ಯಾವತ್ । ತತ್ತ್ಯಾಜಕಾಯ। ಅನೇನಾನಿಷ್ಟ ನಿವರ್ತಕತ್ವಮುಕ್ತಮ್ । ಅಪಿಪದೇನ ಅಲ್ಪಭಕ್ತೇಷು ದಯಾಂ ಕರೋತಿ ಕಿಲ, ಕಿಂ ಮಹಾಭೃತ್ಯೇಷ್ವಿತಿ ಕೈಮುತ್ಯಂ ದ್ಯೋತ್ಯತೇ । ಏತದ್ದ್ವಯಂ ಕಥಂ ಹರಾವಿತ್ಯತಃ ಕರ್ತ್ರೆ ಇತ್ಯಾದಿ ಹೇತುತ್ರಯಮುಕ್ತಮ್ । ಜಗತ ಇತಿ ಶೇಷಃ । ಧರ್ತ್ರೇ ಪೋಷಕಾಯ । ಅನೇನ ಹರೇಃ ಪಾಲಕತ್ವಪ್ರಸಿದ್ಧಾವಪಿ ಕರ್ತೃತ್ವಸಂಹರ್ತೃತ್ವಯೋರನ್ಯತ್ರ ಪ್ರಸಿದ್ಧತ್ವಾತ್ತಯೋಸ್ತ ಇತಿ ಶಂಕಾ ನಿರಸ್ತಾ । ತಯೋಸ್ತತ್ರ ನಿಮಿತ್ತಮಾತ್ರತ್ವೇನ ತತ್ಪ್ರಸಿದ್ಧಿಸದ್ಭಾವೇऽಪಿ ಸ್ವಾತಂತ್ರ್ಯೇಣ ಕರ್ತೃತ್ವಾದೇರಸಂಭವಾತ್ । ತಥಾಚೋಕ್ತಂ ಭಾಗವತೇ 'ನಿಮಿತ್ತಮಾತ್ರಮೀಶಸ್ಯ' ಇತ್ಯಾದಿ । ಹಯಮುಖಹರಯ ಇತ್ಯನೇನಾಪಿ ಹರೇರ್ವಿರಿಂಚಾದ್ಯುತ್ತಮತ್ವಂ ಸೂಚಿತಮ್ । ಹಯಗ್ರೀವಾವತಾರಸ್ಯ ವಿರಿಂಚಾದೀನಾಂ ವೇದೋಪದೇಶಾರ್ಥತ್ವಾತ್ । ಆಮುಷ್ಮಿಕ-ಬಂಧುತ್ವೇನಾಪಿ ಹರೇರ್ನತಿರಿತಿ ಭಾವೇನೋಕ್ತಮ್ – **ಅಮುತ್ರ ಪಾತ್ರ ಇತಿ** ॥ ಅಮುತ್ರ ಪರ-ಲೋಕೇ । ನನು ಹರಿಃ ಪ್ರಸಿದ್ಧೋ ನವಾ, ಆದ್ಯೇ ತಸ್ಯ ಚೈತ್ರವತ್ ಸಾಕಲ್ಯೇನ ನಿರ್ದೇಶಃ ಸ್ಯಾತ್ । ದ್ವಿತೀಯೇ ನತ್ಯಯೋಗ ಇತ್ಯತ ಉಕ್ತಮ್ – **ತಸ್ಮೈ ಕಸ್ಮೈಚಿದಿತಿ** ॥ ಸ ಕಶ್ಚಿದ್ದೇವ ಇತಿ ಪ್ರಸಿದ್ಧಿಸದ್ಭಾವೇऽಪಿ ಕೃತ್ಸ್ನವಿಶೇಷಯುಕ್ತತಯಾ ತದಭಾವಾಚ್ಚೈತ್ರವತ್ಸಾಕಲ್ಯೇನ ನಿರ್ದೇ-ಶಾಯೋಗಃ। ಅತಿಪ್ರಸಿದ್ಧ್ಯಭಾವೇऽಪಿ ಕಿಂಚಿತ್ಪ್ರಸಿದ್ಧಿಸದ್ಭಾವಾದ್ಯುಕ್ತಾ ತನ್ನತಿರಿತಿ ಭಾವಃ। ಅಸ್ಮನ್ಮನಸಿ ಧೃತಾ ಅನುಭೂತಾ ಯಾ ಸ್ವಕಥಾ ತದ್ವಿಸ್ಮೃತೌ ಸತ್ಯಾಂ ಸ್ಮಾರಕಾಯೇತ್ಯನೇನೈತದ್ಗ್ರಂಥೋಪಯುಕ್ತ ಪ್ರಮೇಯಸ್ಮಾರಕತ್ವೇನಾಪಿ ತನ್ನತಿರಿತ್ಯುಕ್ತಮ್ । ಐಹಿಕಾಮುಷ್ಮಿಕಸಕಲಪುರುಷಾರ್ಥ-ಪ್ರದತ್ವಾದನಿಷ್ಟನಿವರ್ತಕತ್ವಾತ್ ಸಮಸ್ತಜಗಜ್ಜನ್ಮಾದಿಕಾರಣತ್ವೇನಾನಂತಗುಣಪೂರ್ಣತಯಾ ಸರ್ವೋತ್ತಮತ್ವಾದ್ವಿರಿಂಚಾದೀನಾಮಪಿ ವೇದೋಪದೇಷ್ಟೃತ್ವಾದಯಮೇವ ನಮಸ್ಕಾರ್ಯೋ

**ನಾನ್ಯ ಇತಿ ಸಮುದಾಯಾರ್ಥಃ। ಅಸ್ಮಿನ್ ಪದ್ಯೇಽಂತಿಮಪಾದೋ ಗ್ರಂಥಕರ್ತುಸ್ಸ್ವಾಪ್ನಃ, ಪಾದತ್ರಯಂ ತು ತದನುಸಾರೇಣ ಗ್ರಂಥಕೃತಾ ಕೃತಮಿತಿ ಬೋಧ್ಯಮ್ ॥ ೧ ॥**

**ವಿವರಣೆ–** ಭಕ್ತಿರಹಿತವಾದ ಸ್ತುತಿಯು ಅಪ್ರಯೋಜಕವಾದುದರಿಂದ ಮೋಕ್ಷವೆಂಬ ಮಹಾಫಲಕ್ಕೆ ಕಾರಣವಾದ ಸ್ತುತಿಯು ಆಗಬೇಕಾದರೆ ಭಕ್ತಿಯು ಸ್ತುತಿಯಲ್ಲಿ ಸೇರಬೇಕೆಂಬ ಅಭಿಪ್ರಾಯದಿಂದ 'ಭಕ್ತ್ಯಾ ಸ್ತುತ್ಯಾ' ಎಂದಿದ್ದಾರೆ. 'ಭಕ್ತ್ಯಾ' ಎನ್ನುವುದನ್ನು 'ವಿರಕ್ತ್ಯಾ' ಎಂಬಲ್ಲಿಯೂ ಅನ್ವಯಿಸಿಕೊಳ್ಳಬೇಕು. ಭಕ್ತಿಯಿಂದ ಕೂಡಿದ ವಿರಕ್ತಿಯಿಂದ ಎಂದರ್ಥ. 'ಭಜದಮಲಜನೌನ್ನತ್ಯಭೂತ್ಯರ್ಪಕಾಯ' ಎಂಬ ಮಾತಿನಿಂದ ಹರಿಯು ಇಷ್ಟಪ್ರದನಾಗಿದ್ದಾನೆಂದು ಸೂಚಿಸಿದ್ದಾರೆ. 'ಅತ್ಯಲ್ಪಭೃತ್ಯೇಷ್ವಪಿ' ಎಂಬ ಪದದಿಂದ ಅತಿಶಯಿತವಾದ ಭಕ್ತಿ ಇಲ್ಲದಿದ್ದರೂ ಎಂದು ಸೂಚಿಸಿದ್ದಾರೆ. 'ಕುಜನಕೃತೌದ್ಧತ್ಯ ಭೂತ್ಯಾಜಕಾಯ' ಎಂಬ ಪದದಿಂದ ಅನಿಷ್ಟಪರಿಹಾರಕನಾಗಿದ್ದಾನೆಂದು ಸೂಚಿಸಿದ್ದಾರೆ. 'ಅತ್ಯಲ್ಪಭೃತ್ಯೇಷ್ವಪಿ' ಎಂಬಲ್ಲಿನ 'ಅಪಿ' ಪದದಿಂದ ಶ್ರೀಹರಿಯು ಅತ್ಯಂತ ಅಲ್ಪಭಕ್ತನಲ್ಲಿಯೂ ದಯೆಯನ್ನು ತೋರುತ್ತಾನಷ್ಟೇ. ಇನ್ನು ಮಹಾಭಕ್ತರಲ್ಲಿ ದಯೆ ತೋರುತ್ತಾನೆಂದು ಹೇಳುವುದೇನು? ಎಂಬ ಕೈಮುತ್ಯ ನ್ಯಾಯವನ್ನು ಸೂಚಿಸಿದ್ದಾರೆ. ಅನಿಷ್ಟನಿವರ್ತಕತ್ವ- ಇಷ್ಟಪ್ರದತ್ವವೆಂಬ ಗುಣಗಳು ಶ್ರೀಹರಿಯಲ್ಲಿ ಹೇಗೆ ಬಂದಿದ್ದಾವೆ ಎಂಬುದನ್ನು ತಿಳಿಸಲು 'ಕರ್ತ್ರೇ- ಧರ್ತ್ರೇ-ಸಂಹರ್ತ್ರೇ' ಎಂಬ ಮೂರು ಕಾರಣಗಳನ್ನು ಹೇಳಿದ್ದಾರೆ. 'ಜಗತಃ ಕರ್ತ್ರೇ, ಜಗತಃ ಧರ್ತ್ರೇ, ಜಗತಃ ಸಂಹರ್ತ್ರೇ' ಎಂದು ಶೇಷಪೂರಣ ಮಾಡಿಕೊಳ್ಳಬೇಕು. ಭಗವಂತನು ಪಾಲಕನು ಎಂಬುದು ಪ್ರಸಿದ್ಧ. ಸೃಷ್ಟಿಕರ್ತೃತ್ವ, ಸಂಹಾರಕರ್ತೃತ್ವಗಳು ಅಜ್ಞರ ದೃಷ್ಟಿಯಿಂದ ಇತರ ದೇವತೆಗಳಲ್ಲಿ ಪ್ರಸಿದ್ಧವಾಗಿವೆ. ಆದರೆ ಅವುಗಳನ್ನೂ ರಾಜರು ಶ್ರೀಹರಿಯಲ್ಲಿಯೇ ಪ್ರಸಿದ್ಧವೆಂದಿದ್ದಾರೆ. ಏಕೆಂದರೆ, ಬ್ರಹ್ಮ-ರುದ್ರರು ಸೃಷ್ಟಿ-ಸಂಹಾರಗಳಿಗೆ ಕೇವಲ ನಿಮಿತ್ತರು. ಸ್ವತಂತ್ರವಾಗಿ ಸೃಷ್ಟಿಸಂಹಾರಗಳನ್ನು ಮಾಡುವವನು ಶ್ರೀಹರಿಯೇ ಆಗಿದ್ದಾನೆ. ಸ್ವತಂತ್ರಕರ್ತೃತ್ವ ಬ್ರಹ್ಮ-ರುದ್ರರಲ್ಲಿ ಕೂಡುವುದಿಲ್ಲ. ಇದು ಭಾಗವತದಲ್ಲಿ ಹೀಗೆ ಹೇಳಲ್ಪಟ್ಟಿದೆ.

ನಿಮಿತ್ತಮಾತ್ರಮೀಶಸ್ಯ ವಿಶ್ವಸರ್ಗನಿರೋಧಯೋಃ ।
ಹಿರಣ್ಯಗರ್ಭಃ ಶರ್ವಶ್ಚ ಕಾಲಾಖ್ಯಾರೂಪಿಣಸ್ತವ ॥

ಕಾಲರೂಪಿಯಾದ ಶ್ರೀಹರಿಯು ಮಾಡುವ ಸೃಷ್ಟಿ-ಸ್ಥಿತಿಗಳಿಗೆ ಬ್ರಹ್ಮ-ರುದ್ರರು ನಿಮಿತ್ತಮಾತ್ರರಾಗಿದ್ದಾರೆ ಎಂದು ತಾತ್ಪರ್ಯ.

'ಹಯಮುಖಹರಯೇ' ಎಂಬುದರಿಂದ ಶ್ರೀಹರಿಗೆ ಬ್ರಹ್ಮಾದಿಗಳಿಗಿಂತಲೂ ಉತ್ತಮತ್ವವು ಸೂಚಿತವಾಗಿದೆ. ಹೇಗೆಂದರೆ ಹಯಗ್ರೀವ ಅವತಾರವು ಬ್ರಹ್ಮಾದಿಗಳಿಗೆ ವೇದೋಪದೇಶಕ್ಕಾಗಿಯೇ ಆದುದಾಗಿದೆ. ಉಪದೇಶ್ಯ-ಉಪದೇಶಕರಲ್ಲಿ ಉಪದೇಶಕನೇ ಉತ್ತಮನಷ್ಟೇ!

ಹರಿಯು ಇಲ್ಲಿಮಾತ್ರ ಬಂಧುವಾಗಿರುವುದಲ್ಲದೆ ಪರಲೋಕದ ಬಂಧುವೂ ಆಗಿದ್ದಾನೆ ಎಂದು ತಿಳಿಸಲು 'ಅಮುತ್ರ ಪಾತ್ರೇ' ಎಂದಿದ್ದಾರೆ. ಇಲ್ಲಿ ಒಂದು ಜಿಜ್ಞಾಸೆ. ಹರಿಯು ಪ್ರಸಿದ್ಧನೋ? ಅಲ್ಲವೋ? ಅವನು ಪ್ರಸಿದ್ಧನಾಗಿದ್ದ ಪಕ್ಷದಲ್ಲಿ ಅವನ ಉಲ್ಲೇಖವನ್ನು ಚೈತ್ರನಂತೆ ಸಮಗ್ರವಾಗಿ ಮಾಡಬೇಕು. ಅಪ್ರಸಿದ್ಧನಾದ ಪಕ್ಷದಲ್ಲಿ ನಮಸ್ಕಾರವೇ ಕೂಡದು. ಈ ಶಂಕೆಗೆ ಉತ್ತರವಾಗಿ 'ತಸ್ಮೈ ಕಸ್ಮೈಚಿತ್' ಎಂದು ರಾಜರು ಉತ್ತರಿಸಿದ್ದಾರೆ.

ಶ್ರೀಹರಿಯು ಒಬ್ಬ ದೇವೋತ್ತಮನೆಂಬ ಪ್ರಸಿದ್ಧಿ ಇದ್ದರೂ ಸಮಗ್ರ ವಿಶೇಷಗುಣಯುಕ್ತನಾಗಿ ಪ್ರಸಿದ್ಧಿ ಇಲ್ಲದ ಕಾರಣ ಚೈತ್ರನಂತೆ ಸಾಕಲ್ಯೇನ ನಿರ್ದೇಶಿಸಲಾಗುವುದಿಲ್ಲ. ಅತಿಪ್ರಸಿದ್ಧಿ ಇಲ್ಲದಿದ್ದರೂ ಸ್ವಲ್ಪ ಪ್ರಸಿದ್ಧಿ ಇರುವುದರಿಂದ ಅವನ ನಮನ ಯುಕ್ತವೇ ಆಗಿದೆ ಎಂದು ಭಾವ.

'ಅಸ್ಮನ್ಮನಸಿ ಧೃತಕಥಾವಿಸ್ಮೃತೌ ಸ್ಮಾರಕಾಯ' ಎಂಬ ವಚನದಿಂದ ಗ್ರಂಥಕ್ಕೆ ಉಪಯೋಗಿಯಾದ ಪ್ರಮೇಯಗಳನ್ನು ಸ್ಮರಣೆಗೆ ತಂದುಕೊಡುವನಾದುದರಿಂದಲೂ ಅವನ ನಮನ ಉಚಿತವೇ ಆಗಿದೆ ಎಂದು ಸೂಚಿತವಾಗುತ್ತದೆ.

ಐಹಿಕ-ಆಮುಷ್ಮಿಕ ಸಕಲ ಪುರುಷಾರ್ಥಪ್ರದನಾದುದರಿಂದ, ಅನಿಷ್ಟನಿವರ್ತಕ ನಾದುದರಿಂದ, ಸಮಸ್ತ ಜಗತ್ತಿನ ಜನ್ಮಾದಿಗಳಿಗೆ ಮುಖ್ಯ ಕಾರಣನಾದುದರಿಂದ, ಅನಂತಗುಣಪೂರ್ಣನಾದುದರಿಂದ, ಸರ್ವೋತ್ತಮನಾದುದರಿಂದ, ಬ್ರಹ್ಮಾದಿಗಳಿಗೂ ವೇದೋಪದೇಶಕನಾದುದರಿಂದ .ಶ್ರೀಹರಿಯೇ ನಮಸ್ಕಾರಾರ್ಹನು. ಹೊರತು, ಬೇರೆಯವರಲ್ಲ ಎಂದು ಸಮಗ್ರ ಶ್ಲೋಕಾಭಿಪ್ರಾಯ.

ಈ ಪದ್ಯದಲ್ಲಿ ಕೊನೆಯ ಪಾದವು ಗ್ರಂಥಕರ್ತೃಗಳಿಗೆ ಸ್ವಪ್ನದಲ್ಲಿ ಸ್ಫುರಣವಾದದ್ದು. ಕೊನೆಯ ಪಾದಕ್ಕನುಗುಣವಾಗಿ ಮೂರು ಪಾದಗಳು ಗ್ರಂಥಕರ್ತೃಗಳಾದ ವಾದಿರಾಜರಿಂದ ರಚಿತವಾಗಿದೆ ಎಂದು ತಿಳಿಯಬೇಕು.

ಈಗ ಸೂತ್ರಕಾರರಾದ ವೇದವ್ಯಾಸದೇವರ ಸ್ತುತಿ –

**ಪಾರಂ ಭವಾಖ್ಯಜಲಧೇರ್ಭುವನೈಕಸಾರಂ ಸ್ವೈರಂ**
**ಕೃತೋರುವಿಧವೇದಪಥಪ್ರಚಾರಮ್ ।**
**ಆರಂಜಿತಾಮರಜನಂ ಸುಖಚಿಚ್ಛರೀರಂ**
**ಧೀರಂ ಸ್ಮರಾಮಿ ಹೃದಿ ಸತ್ಯವತೀಕುಮಾರಮ್ ॥ ೨ ॥**

**ಅರ್ಥ–** ಭವಾಖ್ಯಜಲಧೇಃ = ಸಂಸಾರವೆಂಬ ಸಮುದ್ರದ, ಪಾರಂ =ದಡ ಮುಟ್ಟಿಸುವವನೂ. ಭುವನೈಕಸಾರಂ =ಜಗತ್ತಿನ ಮುಖ್ಯ ಸಾರಭೂತನೂ. ಸ್ವೈರಂ =ಸ್ವೇಚ್ಛೆಯಿಂದ, ಕೃತೋರು–ವಿಧವೇದಪಥಪ್ರಚಾರಂ = ಬಹುವಿಧದಿಂದ ವೇದಮಾರ್ಗ ವನ್ನು ಪ್ರಚಾರ ಮಾಡಿದವನೂ, ಆರಂಜಿತಾಮರಜನಂ = ಸಂತೋಷಗೊಳಿಸಲ್ಪಟ್ಟ ಬ್ರಹ್ಮಾದಿ

ದೇವತೆಗಳುಳ್ಳವನೂ ಆದ. ಸತ್ಯವತೀ - ಕುಮಾರಂ (ಸತ್ಯವತ್ಯಾಃ ಕುತ್ಸಿತಂ ಸಂಸಾರಮಲಂ ಮಾರಯತಿ ನಾಶಯತೀತಿ ಸತ್ಯವತೀ - ಕುಮಾರಃ, ತಂ ಇತಿ ವ್ಯುತ್ಪತ್ತ್ಯಾ) = ಸತ್ಯವತೀ ದೇವಿಯ ಕುತ್ಸಿತವಾದ ಸಂಸಾರವೆಂಬ ಮಲವನ್ನು ನಾಶಪಡಿಸುವವನಾದುದರಿಂದ ಸತ್ಯವತೀಕುಮಾರನೆನಿಸಿದ, ಸುಖಚಿಚ್ಛರೀರಂ = ಆನಂದ-ಜ್ಞಾನ ಸ್ವರೂಪವಾದ ಶರೀರವುಳ್ಳ, ಧೀರಂ = ತನ್ನ ಬುದ್ಧಿಯಿಂದ ರಮಣವುಳ್ಳ ವೇದವ್ಯಾಸರನ್ನು, ಹೃದಿ = ಹೃದಯದಲ್ಲಿ, ಸ್ಮರಾಮಿ = ನೆನೆಯುತ್ತೇನೆ.

**ಅನುವಾದ–** ಶ್ರೀವೇದವ್ಯಾಸದೇವರು ಸಮಗ್ರ ಜಗತ್ತಿನ ಜೀವರಾಶಿಗಳಿಗೆ ಬೇಕಾದ ಜ್ಞಾನವನ್ನು ನೀಡಿ ಆ ಜ್ಞಾನದ ಸಹಾಯದಿಂದ ಸಂಸಾರವೆಂಬ ಸಮುದ್ರವನ್ನು ದಾಟಿಸುತ್ತಾರೆ. ಅವತರಿಸಿದ ತರುವಾಯದಲ್ಲಿಯೇ ವೇದವಿಭಾಗಗಳನ್ನು ಮಾಡಿ ಸೂತ್ರಗಳನ್ನು ರಚಿಸಿ ಸಜ್ಜನಸಮುದಾಯಕ್ಕೆ ಬೇಕಾಗುವಂತೆ ವೇದಮಾರ್ಗವನ್ನು ಬೆಳೆಸಿದವರು. ವೇದವ್ಯಾಸರ ಜ್ಞಾನೋಪದೇಶವು ಬ್ರಹ್ಮಾದಿದೇವತೆಗಳಿಗೆ ಚಿತ್ತ ರಂಜನೆಯನ್ನುಂಟು ಮಾಡಿತು. ಅವರೆಲ್ಲರಿಗೂ ಆನಂದೋನ್ಮಾಹವನ್ನುಂಟು ಮಾಡಿದವರು. ಜ್ಞಾನಾನಂದಗಳೇ ಶರೀರವಾಗಿ ಉಳ್ಳ ವ್ಯಾಸರು ಸತ್ಯವತೀ ಕುಮಾರನೆಂದು ಪ್ರಸಿದ್ಧರಾಗಿದ್ದಾರೆ. ಇವರನ್ನು ನನ್ನ ಹೃದಯದಲ್ಲಿ ನೆನೆಯುತ್ತೇನೆ.

**ಭಾವವಿಲಾಸಿನೀ–** ಇದಾನೀಂ ಸೂತ್ರಕೃತಂ ಸ್ಮರತಿ – **ಪಾರಮಿತಿ** ॥ ಭವಾಖ್ಯಜಲಧೇಃ ಪಾರಂ, ಪಾರದಮ್ । ಪಾರದೇ ಪಾರವ್ಯಪದೇಶಃ ಅನ್ನದೇ ಅನ್ನವ್ಯಪದೇಶವತ್ । ಭವಾಖ್ಯಜಲಧೇಃ ಸ್ವಭೃತ್ಯಾನ್ ಪಾರಯತಿ ಸಂತಾರಯತೀತಿ ವಾ । ಸಂಸಾರನಿವರ್ತಕಮಿತ್ಯರ್ಥಃ । ಆರಂಜಿತಾ-ಮರಜನಂ ಮಹಾಮೇರೌ ವೇದ- ವ್ಯಾಖ್ಯಾನಾದಿನಾ ಆರಂಜಿತಬ್ರಹ್ಮಾದಿದೇವಗಣಮ್ । ಸತ್ಯವತೀಕುಮಾರತ್ವೋಕ್ತ್ಯಾ ತತ್ಕುಮಾರಾಂತರಚಿತ್ರಾಂಗದಾದಿವತ್ ಪ್ರಾಕೃತವಿಗ್ರಹವತ್ತ್ವಶಂಕಾ-ಮಪಾಕರೋತಿ– **ಸುಖಚಿಚ್ಛರೀರಮಿತಿ** ॥ ೨ ॥

**ವಿವರಣೆ–** 'ಭವಾಖ್ಯಜಲಧೇಃ ಪಾರಂ' ಎಂದರೆ 'ಪಾರದಂ' ಎಂದು ಅರ್ಥ. 'ಅನ್ನದ'ನಿಗೆ 'ಅನ್ನ' ಎಂಬ ಹೆಸರಿನಂತೆ 'ಪಾರದ'ನಿಗೆ 'ಪಾರ' ಎಂದು ಹೆಸರು. ಅಥವಾ, 'ಪಾರಯತೀತಿ ಪಾರಂ'. ತನ್ನ ಭೃತ್ಯರನ್ನು ದಾಟಿಸುತ್ತಾರಾದ್ದರಿಂದ 'ಪಾರಂ', ಸಂಸಾರನಿವರ್ತಕರೆಂದರ್ಥ. 'ಆರಂಜಿತಾಮರಜನಂ' ಎಂದರೆ ಮಹಾಮೇರು ಪರ್ವತದಲ್ಲಿ ಕುಳಿತು ವೇದವ್ಯಾಖ್ಯಾನ ಮೊದಲಾದವುಗಳಿಂದ ಬ್ರಹ್ಮಾದಿ ದೇವತಾಗಣವನ್ನು ರಂಜಿಸಿದ್ದಾರೆಂದು ಅರ್ಥ. 'ಸತ್ಯವತೀ- ಕುಮಾರಂ' ಎಂದು ಹೇಳಿದ್ದರಿಂದ ಸತ್ಯವತಿಯ ಇತರ ಮಕ್ಕಳಾದ ಚಿತ್ರಾಂಗದ-ವಿಚಿತ್ರವೀರ್ಯರಿಗೆ ಹೇಗೆ ಪ್ರಾಕೃತದೇಹವಿದ್ದು ಅವರೂ ಸತ್ಯವತೀಕುಮಾರರಾದಂತೆ ವ್ಯಾಸರೂ ಸತ್ಯವತೀ ಕುಮಾರರಾಗಿ ಪ್ರಾಕೃತದೇಹವುಳ್ಳವರೇನೋ ಎಂದು ಭ್ರಮೆ ಬರುತ್ತದೆ. ಅದಕ್ಕಾಗಿ 'ಸುಖಚಿಚ್ಛರೀರಮ್' ಎಂದು ವಿಶೇಷಣವನ್ನು ಕೊಟ್ಟು ಇವರು ಅವರಂತಲ್ಲ, ಜ್ಞಾನಾನಂದಶರೀರಉಳ್ಳವರೆಂದು ತಿಳಿಸಿ ಭ್ರಮೆಯನ್ನು ಪರಿಹರಿಸಿದ್ದಾರೆ

ಭಾಷ್ಯಕಾರ ಸ್ತುತಿ –

**ಯತ್ಪೂರ್ವಂ ತ್ವಮಪೂರ್ವಸಿಂಧುಮತರಃ ಸದ್ವಂದ್ಯಮಧ್ವಾಚಲಾ-**
**ದುದ್ಯಾತಃ ಶತಯೋಜನಂ ಪರಮದಃ ಶಂಸಂತಿ ಸಂತಃ ಕ್ಷಿತೌ ।**
**ಚಿತ್ರಂ ಜೈತ್ರ ಭವಚ್ಚರಿತ್ರಮಧುನಾ ಯದ್ವೇದವಾರ್ಧಿಂ ತರನ್**
**ನಿತ್ಯಂ ಕೋಟಿಸಹಸ್ರಯೋಜನಮಪಿ ತ್ವಂ ರಾಜವದ್ ರಾಜಸೇ ॥ ೩ ॥**

**ಅರ್ಥ–** ಸದ್ವಂದ್ಯಮಧ್ವ = ಸಜ್ಜನರಿಂದ ವಂದ್ಯರಾದ ಮಧ್ವಾಚಾರ್ಯರೇ!, ತ್ವಂ = ನೀವು, ಪೂರ್ವಂ =ಹಿಂದಿನ ಹನುಮದವತಾರದಲ್ಲಿ, ಅಚಲಾತ್ = ಮಹೇಂದ್ರ ಪರ್ವತದಿಂದ, ಉದ್ಯಾತಃ = ಹಾರಿದವರಾಗಿ, ಶತಯೋಜನಂ =ನೂರು ಯೋಜನ ವಿಸ್ತಾರವಾದ, ಅಪೂರ್ವಸಿಂಧುಂ = ದಕ್ಷಿಣಸಮುದ್ರವನ್ನು, ಅತರಃ = ದಾಟಿದಿರಿ ಎಂಬ, ಯತ್= ಯಾವ ಕರ್ಮವಿದೆಯೋ, ಅದಃ = ಈ ಕರ್ಮವನ್ನು, ಸಂತಃ = ಸಜ್ಜನರು, ಕ್ಷಿತೌ =ಭೂಮಿಯಲ್ಲಿ, ಪರಂ =ಶ್ರೇಷ್ಠವಾದ (ಕೃತಿಯೆಂದು), ಶಂಸಂತಿ = ಪ್ರಶಂಸಿಸುತ್ತಿದ್ದಾರೆ. ಆದರೆ, ಅಧುನಾ = ಮಧ್ವಾವತಾರದಲ್ಲಿ, ನಿತ್ಯಂ = ಪ್ರತಿದಿನವೂ (ವೇದವು), ಕೋಟಿಸಹಸ್ರಯೋಜನಮಪಿ = ಕೋಟಿ–ಸಾವಿರ ಸಂಖ್ಯಾಕವಾದ ವಾಕ್ಯಯೋಜನಗಳಿಂದ ಕೂಡಿದ್ದರೂ, ವೇದವಾರ್ಧಿಂ = ವೇದವೆಂಬ ಸಮುದ್ರವನ್ನು, ತರನ್ = ದಾಟುವವರಾಗಿದ್ದೀರಿ ಎಂಬುದು ಏನಿದೆಯೋ, ಅಂತಹ, ಭವಚ್ಚರಿತ್ರಂ = ನಿಮ್ಮ ಚರಿತ್ರೆಯು, ಜೈತ್ರ = ಜಯಶೀಲರಾದ ಮಧ್ವರೇ!, ಚಿತ್ರಂ =ಆಶ್ಚರ್ಯಕರವಾಗಿದೆ. ಅಂತಹ, ತ್ವಂ =ನೀವು, ರಾಜವತ್ =ರಾಜನಂತೆ, ರಾಜಸೇ =ಶೋಭಿಸುತ್ತಿದ್ದೀರಿ.

**ಅನುವಾದ– ಸಜ್ಜನರಿಂದ ವಂದ್ಯರಾದ ಮಧ್ವರೇ! ತಾವು ಹಿಂದೆ, ಅರ್ಥಾತ್ ಹನುಮದವತಾರದಲ್ಲಿ ಮಹೇಂದ್ರಪರ್ವತದಿಂದ ಹಾರಿ ನೂರು ಯೋಜನ ವಿಸ್ತಾರದ ದಕ್ಷಿಣ ಸಮುದ್ರವನ್ನು ದಾಟಿದಿರಿ. ಇಂದಿಗೂ ಎಲ್ಲರೂ ಆ ಕಥೆಯನ್ನು ಕೊಂಡಾಡುತ್ತಿದ್ದಾರೆ. ಆದರೆ ನಿತ್ಯ ಜಯಶೀಲರಾದ ಈಗಿನ ನಿಮ್ಮ ಮಧ್ವಾವತಾರದ ಚರಿತ್ರೆಯು ಆಶ್ಚರ್ಯಕರವಾಗಿದೆ. ಏಕೆಂದರೆ, ವೇದವು ಕೋಟಿ-ಸಹಸ್ರ ವಾಕ್ಯ ಯೋಜನೆಯಿಂದ ಕೂಡಿದೆ. ಇಂತಹ ಅನಂತ ವೇದಸಮುದ್ರವನ್ನು ವ್ಯಾಖ್ಯಾನದ ಮೂಲಕ ದಾಟುತ್ತಾ ರಾಜಾಧಿರಾಜನಂತೆ ಪ್ರಕಾಶಿಸುತ್ತಿದ್ದೀರಿ ಎಂಬುದು ಅತ್ಯಂತ ಆಶ್ಚರ್ಯಕರವಾದ ಸಂಗತಿಯಾಗಿದೆ.**

**ಭಾವವಿಲಾಸಿನೀ–** ಇದಾನೀಂ ಭಾಷ್ಯಕೃತಂ ಸ್ತೌತಿ– **ಯತ್ಪೂರ್ವಮಿತಿ ॥** ಪೂರ್ವಂ ಹನೂಮದವತಾರೇ ಪ್ರಾದಕ್ಷಿಣ್ಯೇನ ಪೂರ್ವವ್ಯತಿರಿಕ್ತಸಿಂಧುಃ ದಕ್ಷಿಣಸಿಂಧುಃ ಅಪೂರ್ವಸಿಂಧುಃ ತಮತರ ಇತಿ ಯತ್, ಅದ ಇತಿ ಸಂಬಂಧಃ । ಅದಸ್ತತ್ ಸಿಂಧುತರಣಂ ಶತಯೋಜನಂ ಶತಯೋಜನಸಂಖ್ಯಾಕಂ ಶಂಸಂತಿ । ಅಧುನಾ ಮಧ್ವಾವತಾರೇ ಕೋಟಿಸಹಸ್ರಯೋಜನಂ

**ಕೋಟಿಸಹಸ್ರಸಂಖ್ಯಾಕವಾಕ್ಯಯೋಜನಾವಂತ ಮಿತ್ಯರ್ಥಃ । ಏತಾದೃಶಂ ವೇದವಾರ್ಧಿಂ ನಿತ್ಯಂ ತರನ್ ತ್ವಂ ರಾಜವದ್ ರಾಜಸ ಇತಿ ಸಂಬಂಧಃ । ವೇದವಾರ್ಧಿತರಣಂ ನಾಮ ತದ್ವ್ಯಾಖ್ಯಾನ-ಕರಣಮ್ । ಪೂರ್ವಂ ಸಿಂಧುತರಣಂ ಶತಯೋಜನಮ್, ಅಧುನಾ ವೇದವಾರ್ಧಿತರಣಂ ಕೋಟಿಸಹಸ್ರಯೋಜನಮಿತಿ ಧ್ವನಿಃ । ಅತಶ್ಚಿತ್ರಮಿತಿ । ರಾಜವದಿತ್ಯನೇನ ತದವತಾರ-ಕಾರ್ಯಾದಪ್ಯತ್ರಾತಿಶಯಿತಕಾರ್ಯಕರಣೇ ಬಹುಪ್ರಯತ್ನಾಭಾವಃ ಸೂಚಿತಃ ॥ ೩ ॥**

**ವಿವರಣೆ–** 'ಅಪೂರ್ವಸಿಂಧು' ಎಂದರೆ ದಕ್ಷಿಣ ಸಮುದ್ರ ಎಂದು ಅರ್ಥ. ಪೂರ್ವ ವ್ಯತಿರಿಕ್ತವಾದುದು ಅಪೂರ್ವ. ಎಂದರೆ ಯಾವುದು ಬೇಕಾದರೂ ಅಪೂರ್ವ ವಾಗಬಹುದು. ಅದಕ್ಕೆ ಪ್ರದಕ್ಷಿಣಾಕಾರವಾಗಿ ಪೂರ್ವವ್ಯತಿರಿಕ್ತವಾದುದು ಎಂದು ಇಟ್ಟುಕೊಳ್ಳಬೇಕು. ಆಗ ದಕ್ಷಿಣ ಎಂದೇ ಅರ್ಥವಾಗುತ್ತದೆ. 'ಶತಯೋಜನ' ಎಂದರೆ ಶತಸಂಖ್ಯಾಕ ಯೋಜನ ಎಂದರ್ಥ. ('ಅನಂತಾ ವೈ ವೇದಾಃ' ಎಂದಿದೆ. ಇಲ್ಲಿ ಕೋಟಿ ಸಹಸ್ರ ವಾಕ್ಯಯೋಜನೆಯಿಂದ ಕೂಡಿದ್ದು ವೇದ ಎಂದಿದ್ದಾರಲ್ಲ. ಎಂದರೆ, ರಾಜರು ಪುರುಷಸೂಕ್ತ ವ್ಯಾಖ್ಯಾನ ಸಂದರ್ಭದಲ್ಲಿ 'ಸಹಸ್ರಶಬ್ದೋ ಅನಂತವಾಚೀ' ಎಂದು ವ್ಯಾಖ್ಯಾನಿಸಿದ್ದಾರೆ. ಆದ್ದರಿಂದ, ಇಲ್ಲಿಯೂ ಸಹಸ್ರ ಎಂದರೆ ಅನಂತ ಎಂದೇ ಅರ್ಥ. ಅನಂತ ವೇದಗಳಿಂದ ಭಗವಂತನ ಗುಣವನ್ನು ಉಪಸಂಹಾರ ಮಾಡುವ ಸಾಮರ್ಥ್ಯ ಬ್ರಹ್ಮದೇವನದ್ದಾಗಿದೆ ಎಂದು ಸಾಧನಾಧ್ಯಾಯದಲ್ಲಿ ನಿರ್ಣೀತವಾಗಿದೆ. ಆದ್ದರಿಂದ, ಇಲ್ಲಿ ವೇದಸಮುದ್ರವನ್ನು ದಾಟುವುದೆಂದರೆ ವೇದಗಳಿಗೆ ವ್ಯಾಖ್ಯಾನ ಮಾಡುವುದೆಂದೇ ಅರ್ಥ.)

ಹಿಂದೆ ಸಿಂಧುತರಣ ನೂರು ಯೋಜನವಾಗಿದ್ದರೆ, ಇಂದು ವೇದಸಮುದ್ರತರಣ ಕೋಟಿಸಹಸ್ರಯೋಜನದ್ದಾಗಿದೆ ಎಂಬುದು ಧ್ವನಿತಾರ್ಥ. ಮಧ್ವರು ವಾಕ್ಯಾರ್ಥ ಸಭೆಗಳಲ್ಲಿ ಸಾವಿರಾರು ಕೋಟಿ ಕ್ರಮಗಳನ್ನು ಯೋಜನ ಮಾಡಿದ್ದಾರೆ ಎಂಬ ಅರ್ಥವೂ ಧ್ವನಿತವಾಗಿದೆ. ಆದ್ದರಿಂದ ಆಶ್ಚರ್ಯವೆಂದು ಭಾವ. ಹನುಮದವತಾರಕ್ಕಿಂತ ಮಧ್ವಾವತಾರದಲ್ಲಿ ಮಾಡಿದ ಕಾರ್ಯ ಗುರುತರವಾಗಿದ್ದರೂ ಈ ಕಾರ್ಯವನ್ನು ಮಾಡಲು ಮುಖ್ಯಪ್ರಾಣನಿಗೆ ಬಹಳ ಪ್ರಯತ್ನವೆಂದು ರಾಜನಂತೆ ಎಂಬ ಸೂಚಿತವಾಗಿದೆ.

**ಸೂತ್ರ-ಭಾಷ್ಯಕಾರರು ವೇದಾರ್ಥನಿರ್ಣಯದ ವಿಷಯದಲ್ಲಿ ಒಟ್ಟಿಗೆ ಪ್ರವೃತ್ತರಾದುದರಿಂದ ಈರ್ವರಿಗೂ ಒಟ್ಟಿಗೆ ನಮಸ್ಕರಿಸುತ್ತಿದ್ದಾರೆ –**

**ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।**
**ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥ ೪ ॥**

**ಅರ್ಥ–** ಭವನಾಶಾಯ = ಸಂಸಾರದುಃಖನಿವರ್ತಕರಾದ, ಶ್ರೀಶಾಯ= ಲಕ್ಷ್ಮೀ ಪತಿಯಾದ, ಗುಣರಾಶಯೇ=ಗುಣಸಮುದಾಯಸ್ವರೂಪರಾದ, ವ್ಯಾಸಾಯ =

ವೇದವ್ಯಾಸದೇವರಿಗೆ, ಚ = ಮತ್ತು, ಹೃದ್ಯಾಯ = ಮನಸ್ಸನ್ನು ಸಂತೋಷಪಡಿಸುವವರೂ, ಶುದ್ಧವಿದ್ಯಾಯ = ಪರಿಶುದ್ಧ ವಾದ ವೇದವಿದ್ಯೆ ಉಳ್ಳವರೂ ಆದ, ಮಧ್ವಾಯ = ಮಧ್ವಾಚಾರ್ಯರಿಗೋಸ್ಕರ, ನಮೋ ನಮಃ = ನಮಸ್ಕಾರವು (ಅನಂತ ನಮಸ್ಕಾರಗಳು).

**ಅನುವಾದ–** ವೇದವ್ಯಾಸದೇವರು ವೇದವಿಭಾಗ-ಇತಿಹಾಸ-ಪುರಾಣರಚನೆ-ಬ್ರಹ್ಮಸೂತ್ರರಚನೆ ಮುಂತಾದ ಮಹತ್ತರವಾದ ಜ್ಞಾನಕಾರ್ಯದಿಂದ ಸಜ್ಜನರ ಸಂಸಾರನಿವರ್ತಕರಾಗಿದ್ದಾರೆ. ಸ್ವಯಂ ಲಕ್ಷ್ಮೀಪತಿಯಾದುದರಿಂದ ಅಜ್ಞಾನಾದಿಗಳಾಗಲೀ ಪರಾವಲಂಬನೆಗಳಾಗಲೀ ಇವರಿಗಿರುವುದಿಲ್ಲ. ಸ್ವಯಂ ಗುಣಪರ್ವತ ಸ್ವರೂಪರಾಗಿದ್ದಾರೆ. ಇಂತಹ ವೇದವ್ಯಾಸರಿಗೆ ಅನಂತ ನಮಸ್ಕಾರಗಳು. ಪ್ರಿಯವೂ ಮನೋಹರವೂ ಆದ ಭಾಷ್ಯವನ್ನು ಬರೆಯುವುದರ ಮೂಲಕ ಮಧ್ವಗುರುಗಳು ಹೃದ್ಯರೆನಿಸಿದ್ದಾರೆ. ಪರಿಶುದ್ಧವಾದ ವೇದವಿದ್ಯೆ ಉಳ್ಳವರಾಗಿದ್ದಾರೆ. ಇಂತಹ ವೇದಪ್ರತಿಪಾದ್ಯರಾದ ಮಧ್ವಗುರುಗಳಿಗೆ ಅನಂತನಮಸ್ಕಾರವು.

**ಭಾವವಿಲಾಸಿನೀ–** ಅಧುನಾ ಸೂತ್ರಭಾಷ್ಯಕಾರಯೋರ್ವೇದಾರ್ಥನಿರ್ಣಯೇ ಸಹೈವ ಪ್ರವೃತ್ತತ್ವಾತ್ತೌ ಯೌಗಪದ್ಯೇನ ಪ್ರಣಮತಿ – **ವ್ಯಾಸಾಯೇತಿ** ॥ ೪ ॥

ಮುಂದಿನ ಪದ್ಯದಲ್ಲಿ ಈ ಗ್ರಂಥವನ್ನು ಶ್ರವಣ ಮಾಡತಕ್ಕವರಿಗೂ ಹೇಳುವವರಿಗೂ ಶ್ರೀಹರಿಯು ಸಂಪದಾದಿಗಳನ್ನು ಕೊಡಲಿ ಎಂದು ಆಶೀರ್ವಾದರೂಪವಾದ ಮಂಗಳವನ್ನು ಮಾಡುತ್ತಿದ್ದಾರೆ.

**ಶ್ರೀಶಸ್ತೇ ಸುಶ್ರಿಯಂ ದದ್ಯಾದಾಯುರ್ವಾಯುಸುತಪ್ರಿಯಃ ।**
**ಭೂಮಿಂ (ತೇ) ಶ್ರೀವಾಮನೋ ದದ್ಯಾದರೀನ್ ಹಂತು ನೃಕೇಸರೀ ॥ ೫ ॥**

**ಅರ್ಥ–** ತೇ = ನಿನಗೆ, ಶ್ರೀಶಃ =ಲಕ್ಷ್ಮೀಪತಿಯಾದ ಶ್ರೀಹರಿಯು, ಸುಶ್ರಿಯಂ = ಮೋಕ್ಷಜನಕವಾದ ಸಂಪತ್ತನ್ನು, ದದ್ಯಾತ್ = ಕೊಡಲಿ. ವಾಯುಸುತಪ್ರಿಯಃ = ವಾಯುದೇವನ ಮಗನಾದ ಹನುಮಂತನಿಗೆ ಪ್ರಿಯನಾದ ಶ್ರೀರಾಮಚಂದ್ರನು, ಆಯುಃ = ಆಯುಷ್ಯವನ್ನು, ದದ್ಯಾತ್ = ಕೊಡಲಿ. (ತೇ = ನಿನಗೆ), ಶ್ರೀವಾಮನಃ = ಶ್ರೀವಾಮನ ರೂಪಿಯಾದ ಹರಿಯು, ಭೂಮಿಂ =ಭೂಮಿಯನ್ನು, ದದ್ಯಾತ್ = ಕೊಡಲಿ. ನೃಕೇಸರೀ = ನರಸಿಂಹನಾದ ಹರಿಯು, ಅರೀನ್ = ಶತ್ರುಗಳನ್ನು, ಹಂತು = ಸಂಹರಿಸಲಿ!!

**ಅನುವಾದ–** ಲಕ್ಷ್ಮೀಪತಿಯಾದ ಶ್ರೀಕರನು ಈ ಗ್ರಂಥವನ್ನು ಅಧ್ಯಯನ-ಅಧ್ಯಾಪನ ಮಾಡುವವರಿಗೆ ಯೋಗ್ಯವಾದ ಸಂಪತ್ತನ್ನು ನೀಡಲಿ. ರಾಮನು ಬಹುಕಾಲ ಅಧ್ಯಯನಕ್ಕೆ ಬೇಕಾದ ಆಯುಷ್ಯವನ್ನು ನೀಡಲಿ! ವಾಮನನು ಅಧ್ಯಯನಕ್ಕೆ ಉಚಿತವಾದ ಸ್ಥಾನವನ್ನು ಕಲ್ಪಿಸಿಕೊಡಲಿ. ನರಸಿಂಹನು ವಿಘ್ನಕಾರಕರಾದ ಒಳ-ಹೊರಗಿನ ಶತ್ರುಗಳನ್ನು ಸದೆಬಡೆಯಲಿ!!

**ಭಾವವಿಲಾಸಿನೀ–** ಶ್ರೀಶಸ್ತೇ ಸುಶ್ರಿಯಂ ದದ್ಯಾದಿತ್ಯನೇನೈತದ್ಗ್ರಂಥಸ್ಯ ಶ್ರೋತುಃ ಪ್ರವಕ್ತುಶ್ಚ ಆಶೀರ್ದಾನರೂಪಂ ಮಂಗಲಮಕಾರಿ । ವಾಯುರ್ಮುಖ್ಯವಾಯುಃ ತತ್ಸುತಃ ಹನೂಮಾನ್ ತಸ್ಯ ಪ್ರಿಯೋ ರಾಮಃ । ಅನೇನ ವಾಯುಃ ಶ್ವಾಸನಿಯಾಮಕಃ, ತತ್ಸುತೋ ಮೃತಸಂಜೀವನಾದಿನೇತಾ, ತತ್ಪ್ರಿಯೋ ವಿಭೀಷಣಾಯುರ್ದಾತೇತಿ ತ್ರೇಧಾಪ್ಯಾಯುರ್ದಾನಸಾಮರ್ಥ್ಯಂ ಧ್ವನಯತಿ । ಅನೇನ ಶ್ರೋತೃಪ್ರವಕ್ತೄಣಾಂ ಸಂಪದಾಯುಃಪ್ರತಿಷ್ಠಾದುರಿತನಿವೃತ್ತೀನಾಮಾಶಂಸನಂ ಕೃತಮಿತಿ ಜ್ಞೇಯಮ್ ॥ ೫ ॥

**ವಿವರಣೆ–** 'ವಾಯುಸುತಪ್ರಿಯಃ' ಎಂಬ ವಾಕ್ಯಪ್ರಯೋಗದ ಮೂಲಕ ರಾಜರು ಮೂರು ಪ್ರಕಾರದಿಂದ ಶ್ರೀಹರಿಗೆ ಆಯುರ್ದಾನಸಾಮರ್ಥ್ಯವಿದೆ ಎಂದು ಸೂಚಿಸಿದ್ದಾರೆ. ಇಲ್ಲಿ 'ವಾಯು' ಎಂದರೆ ಮುಖ್ಯವಾಯು ಎಂದರ್ಥ. ಇವನ ಮೂಲಕ ಶ್ರೀಹರಿಯು ಸರ್ವದಾ ಶ್ವಾಸೋಚ್ಛ್ವಾಸರೂಪವಾದ ವ್ಯಾಪಾರ ಮಾಡಿಸುವ ಮೂಲಕ ಆಯುರ್ದಾತಾ ಎನಿಸಿದ್ದಾನೆ.

'ವಾಯುಸುತ' ಎಂದರೆ ಹನುಮಂತ ಎಂದರ್ಥ. ಹನುಮಂತನು ಮೃತರಾದ ಕಪಿಗಳನ್ನು ಮೃತಸಂಜೀವನಾದಿ ಔಷಧಗಳನ್ನು ತಂದು ಬದುಕಿಸಿದ್ದಾನೆ. ರಾಮನು ಸತ್ತವರನ್ನೂ (ಅಜ್ಞಾನದಿಂದ ಜೀವಚ್ಛವಗಳಂತಿರುವ ನಮ್ಮನ್ನು ವಾಯುದೇವರ ದ್ವಾರಾ ಜ್ಞಾನದಾನ ಮಾಡಿಸಿ) ಬದುಕಿಸುತ್ತಾನೆ.

ಸ್ವತಃ 'ವಾಯುಸುತಪ್ರಿಯ'ನೆನಿಸಿದ ಶ್ರೀರಾಮನು ವಿಭೀಷಣನಿಗೆ ಲಂಕಾಧಿಪತ್ಯದ ಜೊತೆಗೆ ಚಿರಂಜೀವಿತ್ವ ವರವನ್ನು ಕೊಟ್ಟು ಸಂರಕ್ಷಿಸಿದ್ದಾನೆ.

ಇಂತಹ ಹರಿಯನ್ನು ನಂಬಿದರೆ ಆಯುಷ್ಯಕ್ಕೆ ಕೊರತೆ ಇಲ್ಲ ಎಂದು ರಾಜರು ಸೂಚಿಸಿದ್ದಾರೆ.

ಹೀಗೆ ಗ್ರಂಥವನ್ನು ಶ್ರವಣ ಮಾಡುವ, ಪ್ರವಚನ ಮಾಡುವ ಸಜ್ಜನರಿಗೆ ಸಂಪತ್ತು, ಆಯುಷ್ಯ, ಉತ್ತಮ ಸ್ಥಾನ, ದುರಿತಪರಿಹಾರಗಳು ಆಗಲಿ ಎಂದು ಶ್ರೇಯಃಪ್ರಾರ್ಥನೆಯನ್ನು ಮಾಡಿದ್ದಾರೆಂದು ತಿಳಿಯಬೇಕು.

ಇಲ್ಲಿ ಶ್ರೀಶ ಎಂದರೆ ಇಷ್ಟಾರ್ಥದಾಯಕನಾದ ಕೃಷ್ಣನೆಂದು ಗ್ರಹಿಸಬಹುದು. ಶ್ರೀಕೃಷ್ಣನು ಭಕ್ತರಾದ ದರಿದ್ರರೂ ಆದ ಅಕ್ರೂರ-ಕುಚೇಲ-ಶ್ರುತದೇವ ಮೊದಲಾದವರಿಗೆ ಅಜ್ಞಾನಕ್ಕೆ ಕಾರಣವಾಗದಿರುವಂತಹ ಸಂಪತ್ತನ್ನು ನೀಡಿ ಅವರನ್ನು ರಕ್ಷಿಸಿದ್ದಾನೆ. ಶ್ರೀರಾಮನಾದರೂ ತನ್ನ ರಾಜ್ಯದಲ್ಲಿ ಯಾರಿಗೂ ಅಕಾಲಮರಣ ಬಾರದಿರುವಂತೆ ರಕ್ಷಿಸಿದ್ದಾನೆ. ವಾಮನರೂಪಿ ಹರಿಯು ಇಂದ್ರನ ಸ್ವತ್ತನ್ನು ಬಲಿಯು ಅಪಹರಿಸಿದಾಗ ಬಲಿಯನ್ನು ದಮನಮಾಡಿ ಇಂದ್ರನಿಗೆ ಸುರಾಧಿಪತ್ಯವನ್ನು ದೊರಕಿಸಿಕೊಟ್ಟಿದ್ದಾನೆ.

ತ್ರೈಲೋಕ್ಯರಾಜ್ಯಮಾಚ್ಛಿದ್ಯ ಬಲೇರಿಂದ್ರಾಯ ಯೋ ದದೌ ।
ನಮಸ್ತಸ್ಮೈ ಸುರೇಶಾಯ ಸದಾ ವಾಮನರೂಪಿಣೇ ॥

ಇನ್ನು ನರಸಿಂಹನು ಪ್ರಹ್ಲಾದನಿಗೆ ಮಾರಕನಾದ ಅಂತಃ-ಬಾಹ್ಯಶತ್ರುವೆನಿಸಿದ ಹಿರಣ್ಯಕಶಿಪುವನ್ನು ಸದೆಬಡಿದು ಪ್ರಹ್ಲಾದನನ್ನು ಸಂರಕ್ಷಿಸಿದ್ದಾನೆ. ಹೀಗೆ ನಾಲ್ಕು ರೂಪಗಳ ಸ್ಮರಣೆಯ ಮೂಲಕ ಈ ಗ್ರಂಥವನ್ನು ಅಧ್ಯಯನ ಮಾಡುವ ನಮ್ಮ ಪಾಲಿಗೂ ಸಂಪದಾದಿಗಳು ಒದಗಿ ಬರಲೆಂದು ರಾಜರು ಹರಸಿದ್ದಾರೆ.

ಈ ಗ್ರಂಥರಚನೆಗೆ ಹಯಗ್ರೀವ ದೇವನ ದಯೆಯೇ ಮುಖ್ಯಕಾರಣ ಎಂದು ರಾಜರು ತಮಗೆ ಅತಿಶಯವಾಗಿ ಒಲಿದ ಹಯಗ್ರೀವನ ಕರುಣಾಬಲವನ್ನು ಭಕ್ತ್ಯತಿಶಯದಿಂದ ನೆನೆಯುತ್ತಾರೆ –

ನ ವಿತ್ತೈರುನ್ಮತ್ತಾ ನಚ ಕುಹಕದುರ್ಮಂತ್ರಬಲಿನೋ
ನವಾ ಮಿಶ್ರೈರ್ಮಿಶ್ರಾ ನಚ ಕುಜನಸಾಚಿವ್ಯಸಹಿತಾಃ ।
ನ ದುಶ್ಶಾಸ್ತ್ರಂ ಶಸ್ತ್ರಂ ವಿರಸಮುಪಜೀವ್ಯೋದ್ಧತಧಿಯಃ
ಹಯಗ್ರೀವಂ ದೇವಂ ವಯಮಿಮಮುಪಾಸ್ಯೈವ ಕೃತಿನಃ ॥ ೬ ॥

**ಅರ್ಥ–** ವಯಂ = ನಾವು, ವಿತ್ತೈಃ = ಧನಾದಿ ಸಂಪತ್ತಿನಿಂದ, ನ ಉನ್ಮತ್ತಾಃ = ಮದಭರಿತರಲ್ಲ. ಕುಹಕ–ದುರ್ಮಂತ್ರಬಲಿನಃ = ವಂಚಕಗಳಾದ ದುರ್ಮಂತ್ರಗಳನ್ನು ಜಪಿಸಿ ಅವುಗಳಿಂದ ಬಲಿಷ್ಠರಾದವರು, ನಚ = ಅಲ್ಲವೇ ಅಲ್ಲ. ವಾ = ಅಥವಾ, ಮಿಶ್ರೈಃ = ಮಿಶ್ರಬುದ್ಧಿಯವರೊಡನೆ (ಸಂಶೋಧನೆ ಬುದ್ಧಿಉಳ್ಳ ಜನಗಳ ಮಿಶ್ರಣದಿಂದ), ಮಿಶ್ರಾಃ = ಸೇರಿಕೊಂಡವರು, ನ = ಅಲ್ಲ. ಕುಜನಸಾಚಿವ್ಯಸಹಿತಾಃ = ದುರ್ಜನರ ಸಹಕಾರದಿಂದ ಸಹಿತರಾದವರೂ ನಚ =ಅಲ್ಲ. ವಿರಸಂ =ರಸವಿಲ್ಲದ, ದುಶ್ಶಾಸ್ತ್ರಂ =ದುಷ್ಟಶಾಸ್ತ್ರವೆಂಬ, ಶಸ್ತ್ರಂ =ಆಯುಧವನ್ನು, ಉಪಜೀವ್ಯ = ಆಶ್ರಯಿಸಿ, ಉದ್ಧತಧಿಯಃ ನ =ಉದ್ಧತವಾದ ಬುದ್ಧಿಯುಳ್ಳವರಲ್ಲ (ಕಿಂತು) ದೇವಂ =ಕ್ರೀಡಾದಿಗುಣ ವಿಶಿಷ್ಟನಾದ, ಇಮಂ = ಈ, ಹಯಗ್ರೀವಂ = ಹಯಗ್ರೀವನನ್ನು, ಉಪಾಸ್ಯೈವ = ಉಪಾಸನೆ ಮಾಡಿಯೇ, ಕೃತಿನಃ = ವಿವೇಕಿಗಳಾಗಿದ್ದೇವೆ / ಪುಣ್ಯಶಾಲಿಗಳಾಗಿದ್ದೇವೆ.

**ಅನುವಾದ–** ಶ್ರೀವಾದಿರಾಜಯತಿಗಳೆನಿಸಿದ ನಾವು ಧನದ ಮದವುಳ್ಳವರಲ್ಲ. ಧನದ ಮದದಿಂದ ವಿದ್ವಾಂಸರನ್ನು ಪೋಷಿಸಿ ಅವರ ಕೈಯಲ್ಲಿ ಬರೆಸಿದ ಗ್ರಂಥವಿದಲ್ಲ. ವಾಮಾಚಾರ ಮಂತ್ರಗಳಿಂದ ಬಲಿಷ್ಠರಾಗಿ ದುರ್ಮಂತ್ರಬಲದಿಂದ ಬರೆದ ಗ್ರಂಥವಿದಲ್ಲ. ಎಲ್ಲ ವಿಚಾರ ಗಳನ್ನು ಸ್ವಲ್ಪ ಸ್ವಲ್ಪ ತಿಳಿದ ಅನೇಕರ ಜೊತೆ ಸೇರಿಕೊಂಡು ಬರೆದ ಗ್ರಂಥವೂ ಇದಲ್ಲ. ದುಷ್ಟರ ಸಂಗದಿಂದ ಕೂಡಿದವರು ಅಲ್ಲ. ನೀರಸ

ದುಶ್ಶಾಸ್ತ್ರಗಳೆಂಬ ಶಸ್ತ್ರಗಳನ್ನು ಆಶ್ರಯಿಸಿ ಉದ್ಧತರಾದವರು ಅಲ್ಲವೇ ಅಲ್ಲ. ಕಿಂತು ಕ್ರೀಡಾದಿಗುಣವಿಶಿಷ್ಟನಾದ ಈ ಹಯಗ್ರೀವ ದೇವನನ್ನು ಉಪಾಸನೆ ಮಾಡಿಯೇ ನಾವು ಇಂಥಹ ಗ್ರಂಥವನ್ನು ರಚಿಸಿರುತ್ತೇವೆ.

**ಭಾವವಿಲಾಸಿನೀ– ನ ವಿತ್ತೈರಿತಿ ॥** ನ ವಿತ್ತೈರುನ್ಮತ್ತಾ ಇತ್ಯನೇನ ವಿತ್ತಾದಿಸಂಪತ್ತ್ಯಾ ವಿದುಷಸ್ಸಂಪಾದ್ಯ ನ ಕೃತೋಽಯಂ ಗ್ರಂಥಃ, ಕಿಂತು ಸ್ವೇಷ್ಟದೇವತಾಕೃಪಯೈವ ಕೃತ ಇತಿ ಸೂಚಯತಿ । ದುಶ್ಶಾಸ್ತ್ರಂ ದುಶ್ಶಾಸ್ತ್ರಾಖ್ಯಂ ಶಸ್ತ್ರಮಿತ್ಯನೇನ ಕೇವಲಕಂಠ- ಶೋಷಣಹೇತುತಯಾ ದುಶ್ಶಾಸ್ತ್ರಸ್ಯ ದುಃಖದತ್ವಂ ಧ್ವನಯತಿ ॥ ೬ ॥

**ವಿವರಣೆ–** ವಾದಿರಾಜರು ಈ ಪದ್ಯದಲ್ಲಿ ಗ್ರಂಥರಚನೆಗಳು ಹೇಗೆ ಆಗುತ್ತವೆ ಎಂಬ ರಹಸ್ಯವನ್ನು ಹೊರಗೆಡಹಿದ್ದಾರೆ. ಕೆಲವರು ದುಡ್ಡು ಕೊಟ್ಟು ವಿದ್ವಾಂಸರಿಂದ ಗ್ರಂಥ ಬರೆಸಿ ತಮ್ಮ ಹೆಸರನ್ನು ಹಾಕಿಕೊಳ್ಳುತ್ತಾರೆ. ಇನ್ನು ಕೆಲವರು ಕೆಟ್ಟ ಮಂತ್ರಗಳನ್ನು ಸಿದ್ಧಿಪಡಿಸಿಕೊಂಡು ಮಂತ್ರಾಭಿಮಾನಿ ದೇವತೆಗಳ ಮೂಲಕ ಪ್ರಾಚೀನ ಗ್ರಂಥಗಳ ವಿಷಯಗಳನ್ನು ಜೋಡಿಸಿಕೊಂಡು ತಮ್ಮ ಗ್ರಂಥವೆಂದು ಪ್ರಕಟಿಸುತ್ತಾರೆ. ಇನ್ನು ಕೆಲವರು ಕೃತಿಚೌರ್ಯ ಮಾಡಿ ತಮ್ಮ ಹೆಸರು ಹಾಕಿಕೊಳ್ಳುತ್ತಾರೆ. ಇಷ್ಟೆಲ್ಲ ಮಾಡಿ ಅದು ಪ್ರಚಾರವಾಗಬೇಕೆಂದು ದುರ್ಬುದ್ಧಿಗಳ ಸಂಗವನ್ನು ಹುಟ್ಟುಹಾಕಿ ಅವರ ಮೂಲಕ ಪ್ರಚಾರ ಗಿಟ್ಟಿಸಿಕೊಳ್ಳುತ್ತಾರೆ. ಇನ್ನು ಕೆಲವರು ಸ್ವಯಂ ತಾವೇ ಬರೆದರೂ ಕೆಟ್ಟ ಶಾಸ್ತ್ರಗಳ ಅಧ್ಯಯನದ ಸಂಸ್ಕಾರದಿಂದ ನೀರಸವಾಗಿ ರಚಿಸಿರುತ್ತಾರೆ. ಇಂತಹ ಯಾವ ಅಲ್ಪತೆಗಳೂ ನಮ್ಮ ಗ್ರಂಥದಲ್ಲಿಲ್ಲ ಎಂದು ರಾಜರು ಮುಕ್ತ ಮನಸ್ಸಿನಿಂದ ಈ ಗ್ರಂಥದ ವೈಭವವನ್ನು ತಿಳಿಸುತ್ತಾರೆ. ನಾವು ನಿರಂತರ ಹಯಗ್ರೀವ ದೇವರ ಉಪಾಸನೆ ಮಾಡಿ ಅವರ ದಯೆಯಿಂದ ಮೂಡಿಬಂದ ಈ ಗ್ರಂಥದಲ್ಲಿ ರಹಸ್ಯವಾದ ಮತ್ತು ಸ್ವಾರಸ್ಯವಾದ ಯುಕ್ತಿಗಳೆಂಬ ಮಲ್ಲಿಕೆಗಳನ್ನು ಪೋಣಿಸಿದ್ದೇವೆ ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಈ ಮೂಲಕ ಹಯಗ್ರೀವ ದೇವರ ಕರುಣೆಯಿಂದ ಮೂಡಿ ಬಂದ ಈ ಕೃತಿಯ ಅಧ್ಯಯನವು ಸಾಧಕರಿಗೆ ಹಯಗ್ರೀವನ ಒಲುಮೆಗೆ ಪಾತ್ರರಾಗಲು ಸಹಾಯಕವಾಗಿದೆ ಎಂದೂ ಸೂಚಿಸಿದ್ದಾರೆ. ಜೊತೆಗೆ ಹಯಗ್ರೀವನ ನೇರವಾದ ಒಲುಮೆಗೆ ಪಾತ್ರರಾಗುವ ಅರ್ಹತೆಯುಳ್ಳ ಸ್ವಯಂ ತಾವು ಋಜುಯೋಗಿಗಳೆಂಬುದನ್ನೂ ಸೂಚ್ಯವಾಗಿ ಹೇಳಿದ್ದಾರೆ.

ಇಲ್ಲಿ 'ಉಪಾಸ್ಯೈವ' ಎಂಬ ಶಬ್ದದ ಸ್ವಾರಸ್ಯವನ್ನು ನೋಡಬೇಕಿದೆ. 'ಹಯಗ್ರೀವಂ ಉಪಾಸ್ಯೈವ' ಎಂಬುದನ್ನು 'ಹಯಗ್ರೀವಂ ಏವ ಉಪಾಸ್ಯ' ಎಂದು ಅನ್ವಯ ಮಾಡಿಕೊಳ್ಳಬೇಕು. ನೇರವಾಗಿ ಹಯಗ್ರೀವನನ್ನೇ ಉಪಾಸನೆ ಮಾಡುವ ಅರ್ಹತೆ ಋಜುಗಳಿಗಷ್ಟೇ?

ಶ್ಲೋಕದಲ್ಲಿನ 'ಮಿಶ್ರೈಃ' ಎಂಬ ಶಬ್ದಕ್ಕೆ ಮಿಶ್ರಬುದ್ಧಿಯ ಕುಹಕಿಗಳು ಎಂದೂ ಅರ್ಥ ಮಾಡಬಹುದು. ಎಲ್ಲವನ್ನೂ ಸ್ವಲ್ಪ ತಿಳಿದವರು. ಅಥವಾ ಸಂಘಟಿತವಾಗಿ ಕಾರ್ಯ ಮಾಡುವವರು ಎಂದೂ ಹೇಳಬಹುದು.

**ವ್ಯಾಖ್ಯಾನವಿಶೇಷ–** 'ನ ವಿತ್ತೈರುನ್ಮತ್ತಾಃ' ಎಂಬ ಮಾತಿಗೆ ಧನಾದಿಸಂಪತ್ತಿನಿಂದ ವಿದ್ವಾಂಸರನ್ನು ಸಂಪಾದಿಸಿ, ಅವರ ಮೂಲಕ ರಚಿಸಿದ ಗ್ರಂಥವಿದಲ್ಲ ಎಂದರ್ಥ. (ಇಲ್ಲವಾದಲ್ಲಿ ಗ್ರಂಥರಚನೆಗೂ ದುಡ್ಡಿನ ಅಹಂಕಾರಕ್ಕೂ ಸಂಬಂಧ ತಿಳಿಯದು. ಅದಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ ಸುರೋತ್ತಮತೀರ್ಥರು.) 'ದುಶ್ಶಾಸ್ತ್ರಂ' ಎಂಬ ಮಾತಿನ ಮೂಲಕ ದುಷ್ಟ ಶಾಸ್ತ್ರಗಳು ಕೇವಲ ಕಂಠಶೋಷಣೆಗೆ ಕಾರಣವಾದುದಾಗಿದೆ ಎಂದೂ ಶಸ್ತ್ರಶಬ್ದದಿಂದ ದುಃಖದಾಯಕವೂ ಆಗಿದೆ ಎಂದೂ ಸೂಚಿಸಿದ್ದಾರೆ.

ಮುಂದಿನ ಪದ್ಯದಲ್ಲಿ ತಮಗೆ ಉಪಕರಿಸಿದ, ಹಿಂದೆ ಹೇಳಿದ ಎಲ್ಲರನ್ನೂ ಚಿಕೀರ್ಷಿತ ಗ್ರಂಥಪರಿಸಮಾಪ್ತಿಗೆ ಬೇಕಾದ ಮನಸ್ಸಿನ ಏಕಾಗ್ರತೆಯನ್ನು ಹೊಂದಲು ಒಂದೇ ಪದ್ಯದಿಂದ ಸಂಗ್ರಹಿಸಿ, ಅವರೆಲ್ಲರ ಕರುಣೆಯನ್ನು ಬಯಸಿದ್ದಾರೆ. ಜೊತೆಗೆ ತಾವು ಮಾಡಲಿರುವ ಗ್ರಂಥವೇನೆಂಬುದನ್ನು ಪ್ರತಿಜ್ಞೆ ಮಾಡುತ್ತಿದ್ದಾರೆ

**ಹಯಗ್ರೀವಸ್ಯ ಮಧ್ವಸ್ಯ ವಾಣ್ಯಾ ವಿದ್ಯಾಗುರೋರ್ಗುರೋಃ ।**
**ಕೃಪಯಾ ವಾದಿರಾಜೋಽಹಂ ರಚಯೇ ಯುಕ್ತಿಮಲ್ಲಿಕಾಮ್ ॥ ೭ ॥**

**ಅರ್ಥ–** ಹಯಗ್ರೀವಸ್ಯ = ಹಯಗ್ರೀವನ, ಮಧ್ವಸ್ಯ = ಮಧ್ವಾಚಾರ್ಯರ, ವಾಣ್ಯಾಃ = ಸರಸ್ವತೀ ದೇವಿಯ, ವಿದ್ಯಾಗುರೋಃ = ವಿದ್ಯಾನಿಧಿ ಮುನಿಗಳು ಮೊದಲಾದ ಗುರುಗಳ, ಗುರೋಃ = ಗುರುಗಳಾದ ವಾಗೀಶತೀರ್ಥರ, ಕೃಪಯಾ = ದಯೆಯಿಂದ, ವಾದಿರಾಜೋಽಹಂ = ವಾದಿರಾಜನೆಂಬ ನಾನು, ಯುಕ್ತಿಮಲ್ಲಿಕಾಂ = ಯುಕ್ತಿಮಲ್ಲಿಕಾ ಎಂಬ ಗ್ರಂಥವನ್ನು, ರಚಯೇ = ರಚಿಸುತ್ತೇನೆ.

**ಅನುವಾದ–** ಹಯಗ್ರೀವ ದೇವರ, ಶ್ರೀಮನ್ಮಧ್ವಾಚಾರ್ಯರ, ಸರಸ್ವತೀ ದೇವಿಯ, ವಿದ್ಯಾಗುರುಗಳಾದ ವಿದ್ಯಾನಿಧಿತೀರ್ಥರ, ಆಶ್ರಮಗುರುಗಳಾದ ವಾಗೀಶತೀರ್ಥರ ಅನುಗ್ರಹದಿಂದ ವಾದಿರಾಜನೆಂಬ ನಾನು 'ಯುಕ್ತಿಮಲ್ಲಿಕಾ' ಎಂಬ ಗ್ರಂಥವನ್ನು ವಿರಚಿಸುತ್ತೇನೆ.

**ಭಾವವಿಲಾಸಿನೀ–** ಇದಾನೀಂ ಸ್ವೋಪಕಾರಿಣಸ್ಸರ್ವಾನೇತಾನ್ ಸ್ವಪ್ರಯೋಜನಸಾಧನೇ ಏಕಾಗ್ರಮನಸಃ ಕರ್ತುಮೇಕೇನೈವ ಪದ್ಯೇನ ಸಂಗೃಹ್ಯ ತತ್ಕೃಪಾಂ ಪ್ರಾರ್ಥಯ ಮಾನಶ್ಚಿಕೀರ್ಷಿತಂ ಪ್ರತಿಜಾನೀತೇ – **ಹಯಗ್ರೀವಸ್ಯೇತಿ ॥** ವಿದ್ಯಾಗುರೋಃ ವಿದ್ಯಾನಿಧಿಮುನ್ಯಾದೇಃ ಗುರೋಃ ವಾಗೀಶಮುನೇಃ । ಸ್ವಸ್ಯ ವಾದಿರಾಜತ್ವಮಪಿ ತೇಷಾಂ ಕೃಪಯೇತಿ ಸೂಚಯಿತುಂ ಕೃಪಯೇತ್ಯೇತತ್ ಕೃಪಯಾ ವಾದಿರಾಜೋಽಹಂ ಕೃಪಯಾ ಯುಕ್ತಿಮಲ್ಲಿಕಾಂ ರಚಯ

ಇತ್ಯುಭಯತ್ರಾಪಿ ಸಂಬದ್ಧ್ಯತೇ । ಯುಕ್ತಯ ಏವ ಮಲ್ಲಿಕಾಃ ಮಲ್ಲಿಕಾಕುಸುಮಾನಿ ಯಸ್ಯಾಂ ಕೃತೌ ಸಾ ಯುಕ್ತಿಮಲ್ಲಿಕಾ । ಅಥವಾ ಯುಕ್ತಯ ಏವ ಮಲ್ಲಿಕಾ ಯುಕ್ತಿಮಲ್ಲಿಕಾ । ಮಲ್ಲಿಕಾಕುಸುಮಾನಾಂ ಕಸ್ತೂರೀಮಲ್ಲಿಕಾ ತ್ವಾದ್ಯವಾಂತರಜಾತಿಭೇದೇಽಪಿ ಮಲ್ಲಿಕಾತ್ವ-ಜಾತೇರೇಕತ್ವಾಜ್ಜಾತ್ಯೇಕವಚನಮ್ । ಅತ ಏವ ಸೌರಭಭೇದಃ । ಅನೇನ ಸ್ವಕೃತೇಸ್ಸಕಲ-ಮನೋರಂಜಕಯುಕ್ತಿಬಾಹುಲ್ಯಂ ಧ್ವನಯತಿ ॥ ೭ ॥

**ವಿವರಣೆ–** ನನಗೆ ವಾದಿರಾಜತ್ವವೂ ಶ್ರೀಹರಿ-ವಾಯು-ಗುರುಗಳ ದಯೆಯಿಂದ ಎಂದು ಸೂಚಿಸಲು 'ಕೃಪಯಾ' ಎಂಬ ಪದವನ್ನು ಎರಡು ಕಡೆ ಅನ್ವಯ ಮಾಡಿಕೊಳ್ಳಬೇಕು. 'ಗುರೋಃ ಕೃಪಯಾ ವಾದಿರಾಜೋಽಹಂ ಕೃಪಯಾ ಯುಕ್ತಿಮಲ್ಲಿಕಾಂ ರಚಯೇ' ಎಂದು. 'ಯುಕ್ತಯಃ ಏವ ಮಲ್ಲಿಕಾಃ ಯಸ್ಯಾಂ ಸಾ', ಅಥವಾ, 'ಯುಕ್ತಯಃ ಏವ ಮಲ್ಲಿಕಾಃ' ಎಂದು ಎರಡು ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. 'ಯಾವ ಕೃತಿಯಲ್ಲಿ ಯುಕ್ತಿಗಳೇ ಮಲ್ಲಿಗೆ ಕುಸುಮಗಳಾಗಿವೆಯೋ, ಅವಳು ಯುಕ್ತಿಮಲ್ಲಿಕಾ', ಅಥವಾ 'ಯುಕ್ತಿಗಳೇ ಮಲ್ಲಿಗೆಯಾಗಿವೆಯಾದ್ದರಿಂದ ಯುಕ್ತಿಮಲ್ಲಿಕಾ'. ಮಲ್ಲಿಗೆ ಹೂವುಗಳಲ್ಲಿ ಕಸ್ತೂರಿ ಮಲ್ಲಿಗೆ, ದುಂಡು ಮಲ್ಲಿಗೆ, ಜಾಜಿ ಮಲ್ಲಿಗೆ, ನಿತ್ಯ ಮಲ್ಲಿಗೆ, ಕಾಡು ಮಲ್ಲಿಗೆ, ಸೂಜಿ ಮಲ್ಲಿಗೆ ಮುಂತಾದ ಅವಾಂತರ ಅನೇಕ ಜಾತಿಭೇದಗಳಿದ್ದರೂ ರಾಜರು 'ಯುಕ್ತಿಮಲ್ಲಿಕಾ' ಎಂದು ಏಕವಚನವನ್ನು ಪ್ರಯೋಗಿಸಿದ್ದು 'ಮಲ್ಲಿಕಾತ್ವಜಾತಿ'ಯು ಒಂದೇ ಎಂದು ತಿಳಿಸಲು. ಇದನ್ನು 'ಜಾತ್ಯೇಕವಚನ' ಎನ್ನುತ್ತಾರೆ. ಅವಾಂತರ ಜಾತಿ ಇದೆ ಎಂದು ತಿಳಿಸಲು ಸೌರಭಗಳನ್ನಾಗಿ ವಿಭಾಗಿಸಿದ್ದಾರೆ. ಮಲ್ಲಿಕಾಶಬ್ದವುಎಲ್ಲ ಮಲ್ಲಿಗೆಗಳಲ್ಲಿದ್ದರೂ ಸೌರಭಭೇದ ಎಲ್ಲ ಮಲ್ಲಿಗೆಗಳಲ್ಲಿರುವಂತೆ, ಯುಕ್ತಿಮಲ್ಲಿಕಾ ಎಂಬ ಗ್ರಂಥದಲ್ಲಿಯೂ ಒಂದೊಂದು ಸೌರಭದಲ್ಲಿಯೂ ಸೌಗಂಧ್ಯಭೇದ ಇದೆ ಎಂದು ಸೌರಭಭೇದಗಳಿಂದ ಸೂಚಿಸಿದ್ದಾರೆ.

ಈ ಮೂಲಕ ತಮ್ಮ ಕೃತಿಯಲ್ಲಿ ಎಲ್ಲ ಜನರ ಮನಸ್ಸಿಗೆ ರಂಜನೆಯನ್ನುಂಟುಮಾಡುವ ಯುಕ್ತಿಬಾಹುಲ್ಯವಿದೆ ಎಂದು ಸೂಚಿಸಿದ್ದಾರೆ.

ಶ್ರೀಮದಾಚಾರ್ಯರು ಶಿವಾಲಯಗಳಲ್ಲಿ ನಮಸ್ಕರಿಸಿದರು. ಅಚ್ಯುತ ಪ್ರೇಕ್ಷಾಚಾರ್ಯರಿಗೆ, ತಮ್ಮ ತಂದೆ-ತಾಯಿಗಳಿಗೆ, ತೋಟಂತಿಲ್ಲಾಯರಿಗೆ, ತಮ್ಮ ಮನೆಯ ಗೋಡೆಗೆ ನಮಸ್ಕರಿಸಿದ್ದಾರೆ. ಆ ಎಲ್ಲ ಸ್ಥಳಗಳಲ್ಲಿಯೂ ಅಧಿಷ್ಠಾನ ಬಿಟ್ಟು ಅಂತರ್ಯಾಮಿ ರೂಪವನ್ನೇ ಗ್ರಹಿಸಿದ್ದಾರೆ. ನಮಸ್ಕರಿಸಿದ್ದಾರೆ. ವೃಕ್ಷಗಳಿಗೆಲ್ಲ ನಾವು ನಮಸ್ಕರಿಸೆವು. ಆದರೆ ಅಶ್ವತ್ಥ ವೃಕ್ಷಕ್ಕೆ ನಮಸ್ಕರಿಸುತ್ತೇವೆ. ಇಲ್ಲಿ ಅಂತರ್ಯಾಮಿಗೆ ಹೇಗೆ ನಮಸ್ಕಾರವೋ, ಇದರಂತೆ ರಾಜರು ವಿದ್ಯಾನಿಧಿತೀರ್ಥರು, ವಾಗೀಶತೀರ್ಥರು ಇವರಲ್ಲಿರುವ ಅಂತರ್ಯಾಮಿ ರೂಪಗಳಿಗೆ ನಮಸ್ಕರಿಸಿದ್ದಾರೆ ಎಂದು ತಿಳಿಯಬೇಕು.

ಅನೇಕ ಮತಗಳಿರಲು ಅವೆಲ್ಲವನ್ನೂ ಬಿಟ್ಟು ಮಧ್ವಮತವನ್ನೇ ಆಶ್ರಯಿಸಿ ಯುಕ್ತಿಮಲ್ಲಿಕಾ ಎಂಬ ಗ್ರಂಥವನ್ನು ವಿರಚಿಸಲು ಏನು ಕಾರಣ ಎಂಬ ಸಂದೇಹ ಬಂದರೆ, ಅದಕ್ಕೆ ಉತ್ತರಿಸಲು ಪೂರ್ವಪೀಠಿಕೆ ರಚಿಸುತ್ತಿದ್ದಾರೆ.

ಬೌದ್ಧಜೈನಾಗಮೌ ಪೂರ್ವಪಕ್ಷೌ ಸರ್ವಾಗಮಸ್ಯ ಹಿ ।
ತತಃ ಪರಸ್ತಾಜ್ಜಾತೇಷು ಮತೇಷು ಚ ಯಥಾಕ್ರಮಮ್ ।
ಪೂರ್ವಃ ಪೂರ್ವಃ ಪೂರ್ವಪಕ್ಷಃ ಯಾವನ್ಮಧ್ವಮತೋದಯಃ ॥ ೮ ॥
ಅಂತೇ ಸಿದ್ಧಸ್ತು ಸಿದ್ಧಾಂತೋ ಮಧ್ವಸ್ಯಾಗಮ ಏವ ಹಿ ।
ನಿರ್ಣೇತುಂ ಶಕ್ಯತೇ ಯುಕ್ತಾಯುಕ್ತಪಕ್ಷವಿಮರ್ಶಿಭಿಃ ॥ ೯ ॥

**ಅರ್ಥ–** ಸರ್ವಾಗಮಸ್ಯ = ಎಲ್ಲ ಮತಗಳಿಗೆ, ಬೌದ್ಧಜೈನಾಗಮೌ = ಬೌದ್ಧ-ಜೈನ ಮತಗಳು, ಪೂರ್ವಪಕ್ಷೌ = ಪೂರ್ವಪಕ್ಷಗಳು. ತತಃ ಪರಸ್ತಾತ್ = ಆ ಮತಗಳ ಪ್ರವೃತ್ತಿಯಾದ ಬಳಿಕ, ಜಾತೇಷು = ಹುಟ್ಟಿದ, ಮತೇಷು ಚ = ಮತಗಳಲ್ಲಿಯಾದರೂ, ಯಥಾಕ್ರಮಂ = ಕ್ರಮವಾಗಿ ಒಂದಕ್ಕೊಂದು, ಪೂರ್ವಃ ಪೂರ್ವಃ = ಮೊದಲ-ಮೊದಲಿನ ಆಗಮಗಳು, ಪೂರ್ವಪಕ್ಷಃ = ಪೂರ್ವಪಕ್ಷವೇ (ನಿರಾಕಾರ್ಯ ಪಕ್ಷವೇ) ಆಗಿರುತ್ತದೆ. ಈ ನಿಯಮವು, ಯಾವತ್ = ಯಾವಾಗ ಮಧ್ವಮತೋದಯಃ= ಮಧ್ವಮತವು ಉದಯವಾಗುತ್ತದೆಯೋ, (ತಾವತ್ =ಅಲ್ಲಿಯ ತನಕ ಮಾತ್ರ), ಅಂತೇ =ಕೊನೆಯಲ್ಲಿ, ಸಿದ್ಧಸ್ತು = ಸಿದ್ಧವಾದುದೇ, ಸಿದ್ಧಾಂತಃ ಹಿ = ಸಿದ್ಧಾಂತವಷ್ಟೇ. ಆ ಕಾರಣದಿಂದ, ಯುಕ್ತಾಯುಕ್ತಪಕ್ಷವಿಮರ್ಶಿಭಿಃ = ಮತಗಳ ಯುಕ್ತಾಯುಕ್ತತೆಗಳನ್ನು ವಿಮರ್ಶಿಸಿ ತಿಳಿಯುವ ಪ್ರಾಮಾಣಿಕರಿಂದ, ಮಧ್ವಸ್ಯ = ಮಧ್ವರ, ಆಗಮ ಏವ = ಆಗಮವೇ, ನಿರ್ಣೇತುಂ = ಸಿದ್ಧಾಂತವೆಂದು ನಿಶ್ಚಯಿಸಲು, ಶಕ್ಯತೇ = ಸಾಧ್ಯವಾಗುತ್ತದೆ.

**ಅನುವಾದ–** ಜಗತ್ತಿನ ಅನೇಕ ಮತಗಳ ನಡುವೆ ಬೌದ್ಧ-ಜೈನ ಮತಗಳು ಮೊತ್ತ ಮೊದಲಿನ ಮತಗಳು. ಆದ್ದರಿಂದ ಆ ಮತಗಳು (ಎಲ್ಲ ಮತಗಳಿಗೂ) ಪೂರ್ವಪಕ್ಷ ಎಂದು ಪರಿಗಣಿಸಲ್ಪಡುವುವು. ಇವೆರಡು ಮತಗಳು ಪ್ರವೃತ್ತಿಯಾದ ಬಳಿಕ ಅನೇಕ ಮತಗಳು ಪ್ರವೃತ್ತವಾಗಿವೆ. ಅನಂತರ ಪ್ರವೃತ್ತವಾದ ಮತಗಳಲ್ಲಿ ಮೊದಲು ಪ್ರವೃತ್ತವಾದ ಮತವು ಪೂರ್ವಪಕ್ಷವೆಂದೂ (ಆ ಮತದ ಅಭಿಪ್ರಾಯವು ನಿರಾಕಾರ್ಯವೆಂದೂ) ನಂತರ ಬರುವ ಮತವು ಸಿದ್ಧಾಂತವೆಂದೂ ಎಲ್ಲರೂ ಒಪ್ಪಬೇಕಾಗುತ್ತದೆ. ಅನಂತರ ಬಂದ ಮತವು ತನಗಿಂತ ಮೊದಲು ಬಂದ ಮತವನ್ನು ನಿರಾಕರಿಸುತ್ತದೆ ಎಂದು ನಿರ್ಣಯವಾಗಿದೆ. ಈ ಮತಗಳ ಪಟ್ಟಿಯಲ್ಲಿ ಕೊನೆಗೆ ಸಿದ್ಧವಾದುದು ಮಧ್ವಮತ. ಆದ್ದರಿಂದ ಹಿಂದಿನ ಮತಗಳೆಲ್ಲವೂ ಪೂರ್ವಪಕ್ಷವೆಂದೇ ನಿರ್ಣಯವಾಯಿತು. ಮಧ್ವಮತದ ಉದಯವಾದ ಬಳಿಕ, ಇಲ್ಲಿಯ ತನಕ ಇದನ್ನು ನಿರಾಕರಿಸುವ ಸಯುಕ್ತಿಕವಾದ ಇನ್ನೊಂದು ಯಾವ

ಮತವೂ ತಲೆ ಎತ್ತಿಲ್ಲವಾದ ಕಾರಣ, ಮಧ್ವಮತವೇ ಸಿದ್ಧಾಂತವೆಂದು ಯುಕ್ತಾಯುಕ್ತವನ್ನು ವಿಮರ್ಶಿಸುವ ವಿದ್ವಾಂಸರಿಂದ ನಿರ್ಣಯಿಸಲು ಸಾಧ್ಯವಾಗುತ್ತದೆ.

**ಭಾವವಿಲಾಸಿನೀ–** ನನು ಮತಾಂತರಂ ಪರಿತ್ಯಜ್ಯ ಮಧ್ವಮತಾವಲಂಬನೇನ ಯುಕ್ತಿಮಲ್ಲಿಕಾಖ್ಯ-ಗ್ರಂಥಕರಣೇ ಕಿಂ ನಿಮಿತ್ತಮಿತ್ಯತಸ್ತದ್ವಕ್ತುಮುಪೋದ್ಘಾತಮಾಹ– **ಬೌದ್ಧಜೈನಾಗಮಾವಿತಿ** ॥ ೮ ॥

ಪೂರ್ವಃ ಪೂರ್ವಾಗಮಃ । ಪೂರ್ವಶ್ಚಾಸೌ ಪಕ್ಷಶ್ಚೇತಿ ಪೂರ್ವಪಕ್ಷಃ । ಅನೇನ ತೇಷಾಂ ಪೂರ್ವಪಕ್ಷತಾ ಶಬ್ದಲಭ್ಯೇತಿ ಧ್ವನಯತಿ । ಪೂರ್ವಪೂರ್ವಮತಸ್ಯೈವ ಸಾಮೀಚೀನ್ಯೇ ಉತ್ತರೋತ್ತರಮತಪ್ರವೃತ್ತೇರೇವಾಯೋಗಾದರ್ಥದೋಷವತ್ತ್ವಾಚ್ಚ ಪೂರ್ವಃ ಪೂರ್ವಃ ಪೂರ್ವಪಕ್ಷ ಇತಿ ಗ್ರಂಥಕೃತೋ ಹೃದಯಮ್ । ಅಂತೇ ಸರ್ವಾಗಮಪ್ರವೃತ್ತೇರವಸಾನೇ ಸಿದ್ಧಸ್ಸಾಧಕಪ್ರಮಾಣತ್ರಯಸಹಿತತಯಾ ನಿಷ್ಪನ್ನಃ । ಅನೇನೈತದ್ಗ್ರಂಥಾದಪ್ಯುಪರಿತನ-ಪರಿಹಾಸಕಭಾಷ್ಯಕಾರವಾಕ್ಯಪ್ರಬಂಧಸ್ಯಾಭಿಮಾನಿಕಪ್ರಾಮಾಣ್ಯಕ ವಾಕ್ಯಪ್ರಬಂಧಸ್ಯ ಚ ಸಿದ್ಧಾಂತತ್ವಂ ನಿವಾರಯತಿ । ಮಧ್ವಸ್ಯಾಗಮ ಏವ ಸಿದ್ಧಾಂತ ಇತಿ ನಿರ್ಣೇತುಂ ಶಕ್ಯತ ಇತಿ ಸಂಬಂಧಃ । ಆಹಿತಾಗ್ನಿರಿತ್ಯಾದಿವದುತ್ತರಪದಸ್ಯ ಪೂರ್ವನಿಪಾತೇನ ಅಂತೇ ಸಿದ್ಧಸ್ಸಿದ್ಧಾಂತ ಇತಿ ವ್ಯುತ್ಪತ್ತ್ಯಾ ನಿಷ್ಪನ್ನಸಿದ್ಧಾಂತಪದಾರ್ಥಸ್ಯ ಮಧ್ವಮತ ಏವ ಯುಕ್ತಿಯುಕ್ತತ್ವಾತ್ । ಅತ ಏವ ಯುಕ್ತಾಯುಕ್ತಪಕ್ಷವಿಮರ್ಶಿಭಿರಿತ್ಯುಕ್ತಮ್। ಯದ್ಯಪಿ ಸಿದ್ಧಾಂತಲಕ್ಷಣಮನ್ಯಥಾಪಿ ವರ್ಣಯಂತಿ, ತಥಾಪಿ ತಸ್ಯಾಭಾಸಾನಾಭಾಸಸಾಧಾರಣತಯಾ ಸಂಕೇತಿತಸ್ಯಾಮುಖ್ಯತ್ವಾದ್ ಅಂತೇ ಸಿದ್ಧಸ್ಸಿದ್ಧಾಂತ ಇತಿ ಪದಯೋಗಲಭ್ಯತ್ವೇನಾಸ್ಯೈವ ಮುಖ್ಯತ್ವಮಿತಿ ಜ್ಞಾತವ್ಯಮ್ ॥ ೯ ॥

**ವಿವರಣೆ–** ಜೈನ-ಬೌದ್ಧ ಮತಗಳು ಪೂರ್ವಪಕ್ಷವೆಂಬುದು ಶಬ್ದದಿಂದಲೇ ತಿಳಿಯುತ್ತದೆ. ಪೂರ್ವಃ–ಮೊದಲಿನ, ಪಕ್ಷಃ–ಸಿದ್ಧಾಂತ ಅಥವಾ ಗುಂಪು ಎಂದು ಪೂರ್ವಪಕ್ಷಶಬ್ದದ ಅರ್ಥ. ಜೈನ-ಬೌದ್ಧಾಗಮಗಳು ಆ ಅರ್ಥದಲ್ಲಿ ಪೂರ್ವಪಕ್ಷಗಳೇ ಆಗಿವೆ. ಹಿಂದಿನ ಹಿಂದಿನ ಮತಗಳು ಸರಿ ಎಂದಾದಲ್ಲಿ ಮುಂದೆ ಮುಂದೆ ಹೊರಟ ಬೇರೆ ಬೇರೆ ಮತಗಳ ಪ್ರವೃತ್ತಿಯೇ ಕೂಡುವುದಿಲ್ಲ. ಹಿಂದಿನ ಮತವೇ ಸರಿಯಾದ ಬಳಿಕ ಮುಂದಿನ ಮತವೇಕೆ? ಅದಕ್ಕೆ ಹಿಂದಿನ ಮತಗಳಲ್ಲಿ ಅರ್ಥದೋಷವೂ ಇರುವುದರಿಂದ 'ಪೂರ್ವಃ ಪೂರ್ವಃ ಪೂರ್ವಪಕ್ಷಃ' ಎಂದಿದ್ದಾರೆ ರಾಜರು.

ಸಿದ್ಧಾಂತ ಎಂದರೆ ಅಂತೇ – ಎಲ್ಲಾ ಆಗಮಗಳ ಪ್ರವೃತ್ತಿಯು ಕೊನೆಗೊಳ್ಳುತ್ತಿರಲು, ಸಿದ್ಧಃ–ಮೂರು ಸಾಧಕ ಪ್ರಮಾಣಗಳ ಮೂಲಕ ನಿಷ್ಪನ್ನವಾದ ಮತವು ಎಂದು ಭಾವ. ಈ ಅರ್ಥ ಹೇಳುವ ಮೂಲಕ ಮಧ್ವಭಾಷ್ಯಕ್ಕಿಂತ ಅನಂತರದ ಭಾಷ್ಯಕಾರರ ಭಾಷ್ಯ ಪ್ರಬಂಧಗಳು ಪ್ರಮಾಣವನ್ನೇ ಕೊಡದೆ ಅನ್ಯಮತವನ್ನು ಪರಿಹಾಸಮಾಡುವ ವಾಕ್ಯ ಪ್ರಬಂಧಗಳು ಮತ್ತು ತಾವು ಮಾತ್ರ ಅಂಗೀಕರಿಸಿದ ಪ್ರಮಾಣಗಳನ್ನು ನೀಡಿ ರಚಿಸಿದ ವಾಕ್ಯ ಪ್ರಬಂಧಗಳು. ಆದ್ದರಿಂದ ಸಿದ್ಧಾಂತವಾಗಲಾರವು ಎಂದು ಸೂಚಿಸಿದ್ದಾರೆ.

ಅಂತೇ ಸಿದ್ಧಃ ಎಂಬ ವಿಗ್ರಹವಾಕ್ಯದಿಂದ ಅಂತಸಿದ್ಧಃ ಎಂದು ಸಮಾಸವಾಗಬೇಕು. ಸಿದ್ಧಾಂತಃ ಎಂದು ಹೇಗಾಗುತ್ತದೆ ಎಂದು ಪ್ರಶ್ನೆ. ಅಗ್ನಿಃ ಆಹಿತಃ ಯೇನ ಸಃ ಆಹಿತಾಗ್ನಿಃ ಎಂದು ಹೇಗೆ ಆಗುತ್ತದೆಯೋ ಅದರಂತೆ ಇಲ್ಲಿಯೂ ಕೂಡ ಸಿದ್ಧ ಶಬ್ದಕ್ಕೆ ಪೂರ್ವನಿಪಾತವು ಬರುತ್ತದೆ ಎಂದು ಪರಿಹಾರ.

ವಸ್ತುತಃ ಸಿದ್ಧಾಂತ ಶಬ್ದಕ್ಕೆ ಆಯಾ ಪಕ್ಷದವರು ತಮ್ಮ ತಮ್ಮ ಪಕ್ಷದ ಪರವಾಗಿ ತೆಗೆದುಕೊಂಡ ಕೊನೆಯ ನಿಲುವು ಎಂಬ ಅರ್ಥವೂ ಪ್ರಚಲಿತವಿದೆ. ಹಾಗಾಗಿ ಸಿದ್ಧಾಂತ ಶಬ್ದವು ದುರ್ಮತ ಹಾಗೂ ಸನ್ಮತಗಳೆರಡಕ್ಕೂ ರೂಢಿಯಿಂದ ವಾಚಕವಾಗಿದೆ. ಹಾಗಿದ್ದರೂ ರೂಢಿಗಿಂತಲೂ 'ಅಂತೇ ಸಿದ್ಧಃ ಸಿದ್ಧಾಂತಃ' ಎಂದು ಯೋಗದಿಂದಲೇ ಲಭ್ಯವಾದ ಅರ್ಥವು ದೊರೆಯುತ್ತಿರಲು ಸಿದ್ಧಾಂತಶಬ್ದಕ್ಕೆ ಇದೇ ಮುಖ್ಯವಾದ ಅರ್ಥ ಎಂದು ತಿಳಿಯಬೇಕು. 'ಅಂತೇ ಸಿದ್ಧಸ್ತು ಸಿದ್ಧಾಂತಃ' ಎಂಬಲ್ಲಿ 'ತು'ಶಬ್ದವು ಏವಾರ್ಥದಲ್ಲಿ 'ಅಂತೇ ಸಿದ್ಧ ಏವ ಸಿದ್ಧಾಂತಃ' ಎಂದು ಭಾವ.

**ಅಸ್ಮಾದುತ್ತರಪಕ್ಷೋಽನ್ಯೋ ಯಸ್ಮಾನ್ನಾದ್ಯಾಪಿ ದೃಶ್ಯತೇ ।**
**ತಸ್ಮಾತ್ ಸ ಏವ ಸಿದ್ಧಾಂತ ಇತಿ ನಿಶ್ಚಿತ್ಯ ಚೇತಸಾ ॥ ೧೦ ॥**

**ಅವಲಂಬ್ಯ ಮತಂ ಸರ್ವೋತ್ಕೃಷ್ಟಂ ಶ್ರುತಿಪುರಸ್ಕೃತಮ್ ।**
**ಮಯೇತ್ಥಂ ಯುಕ್ತಿರುಚಿನಾ ಕ್ರಿಯತೇ ಯುಕ್ತಿಮಲ್ಲಿಕಾ ॥ ೧೧ ॥**

**ಅರ್ಥ–** ಅಸ್ಮಾತ್ = ಮಧ್ವಾಗಮಕ್ಕಿಂತಲೂ, ಅನ್ಯಃ = ಬೇರೆಯಾದ, ಉತ್ತರಃ ಪಕ್ಷಃ = ಬ್ರಹ್ಮಸೂತ್ರಭಾಷ್ಯಾತ್ಮಕವಾದ ಇನ್ನೊಂದು ಮತವು, ಯಸ್ಮಾತ್ = ಯಾವ ಕಾರಣದಿಂದ, ಅದ್ಯಾಪಿ = ಇಂದಿನ ತನಕವೂ, ನ ದೃಶ್ಯತೇ = ಕಂಡುಬಂದಿಲ್ಲವೋ, ತಸ್ಮಾತ್=ಎಲ್ಲಾ ಆಗಮಗಳ ಕೊನೆಗೆ ಸಿದ್ಧವಾದ ಕಾರಣದಿಂದ, ಸ ಏವ = ಮಧ್ವಾಗಮವೇ, ಸಿದ್ಧಾಂತ ಇತಿ = ಸಿದ್ಧಾಂತವೆಂದು, ಚೇತಸಾ = ಬುದ್ಧಿಯಿಂದ, ನಿಶ್ಚಿತ್ಯ=ನಿರ್ಣಯಿಸಿ, ಸರ್ವೋತ್ಕೃಷ್ಟಂ = ಸರ್ವೋತ್ಕೃಷ್ಟವಾದ, ಶ್ರುತಿಪುರಸ್ಕೃತಂ = ವೇದಸಮ್ಮತವಾದ, ಮತಂ = ಮತವನ್ನು, ಅವಲಂಬ್ಯ = ಆಶ್ರಯಿಸಿ, ಯುಕ್ತಿರುಚಿನಾ = ಯುಕ್ತಿಗಳಲ್ಲಿ ಆಸಕ್ತಿಯುಳ್ಳ, ಮಯಾ = ನನ್ನಿಂದ, ಇತ್ಥಂ = ಹಿಂದೆ ಹೇಳಿದ ಕ್ರಮದಲ್ಲಿ, ಯುಕ್ತಿಮಲ್ಲಿಕಾ = ಯುಕ್ತಿಮಲ್ಲಿಕೆ ಗ್ರಂಥವು, ಕ್ರಿಯತೇ= ರಚಿಸಲ್ಪಡುತ್ತದೆ.

**ಅನುವಾದ–** ಈ ಮಧ್ವಸಿದ್ಧಾಂತಕ್ಕಿಂತಲೂ ಮಿಗಿಲಾದ ಬೇರೊಂದು ಪಕ್ಷವು ಈವರೆಗೂ ಎಲ್ಲಿಯೂ ಕಂಡುಬಂದಿಲ್ಲ. ಆದ್ದರಿಂದ ಮಧ್ವಾಚಾರ್ಯರ ಸಿದ್ಧಾಂತವೇ ನ್ಯಾಯಸಮ್ಮತವಾದುದು. ಇದನ್ನು ನನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿದ್ದೇನೆ. ಸರ್ವೋತ್ಕೃಷ್ಟವಾದ ವೇದಸಮ್ಮತವಾದ ಮತವನ್ನು ಆಶ್ರಯಿಸಿದ್ದೇನೆ. ಯುಕ್ತಿಗಳಲ್ಲಿ

ಒಳ್ಳೆಯ ಅಭಿರುಚಿಯುಳ್ಳವನಾಗಿದ್ದೇನೆ. ಇಂತಹ ದೃಢನಿಶ್ಚಯವುಳ್ಳ ನನ್ನಿಂದ ಯುಕ್ತಿಮಲ್ಲಿಕಾಗ್ರಂಥವು ರಚಿಸಲ್ಪಡುತ್ತದೆ.

**ಭಾವವಿಲಾಸಿನೀ–** ಅಸ್ಮಾನ್ಮಧ್ವಾಗಮಾದ್ ಉತ್ತರಪಕ್ಷಃ ಬ್ರಹ್ಮಸೂತ್ರಭಾಷ್ಯಾತ್ಮಕಮತಾಂತರಂ ಸಕಲಾಗಮಾನಾಮುಪರಿಕೃತಮಧ್ವಭಾಷ್ಯಾದನಂತರಮದ್ಯಾಪಿ ಭಾಷ್ಯಾಂತರಾಪ್ರವೃತ್ತೇರಿತಿ ಭಾವಃ। ಯದರ್ಥಮುಪೋದ್ಘಾತಸ್ತದಿದಾನೀಮಾಹ – **ತಸ್ಮಾದಿತಿ** ॥ ತಸ್ಮಾತ್ ಸರ್ವಾಗಮಾಂತೇ ಸಿದ್ಧತ್ವಾತ್ ॥ ೧೦ ॥

ಇತ್ಥಂ ಪೂರ್ವೋಕ್ತಪ್ರಕಾರೇಣ ಯುಕ್ತಿರುಚಿನಾ ಮಯೇತಿ ಸಂಬಂಧಃ। ಅನೇನ ಯಸ್ಯ ಗ್ರಂಥಕೃತಃ ಮತಾಂತರಂ ವಿಹಾಯೈಕಮತಾವಲಂಬನೇಽಪಿ ಯುಕ್ತ್ಯನುಸರಣಮ್, ಕಿಮು ತಸ್ಯ ಸ್ವಗ್ರಂಥೇ ತತ್ರ ತತ್ರ ವಕ್ಷ್ಯಮಾಣಪ್ರಮೇಯೇಷು ತದನುಸರಣಮಿತಿ ಸೂಚಿತಮ್ । ಅತ ಏವ ಯುಕ್ತಿಮಲ್ಲಿಕಾ ಕ್ರಿಯತ ಇತ್ಯುಕ್ತಮ್ ॥ ೧೧ ॥

**ವಿವರಣೆ–** ಮಧ್ವಾಗಮದ ಅನಂತರ ಯಾವುದೇ ಸಿದ್ಧಾಂತ ಬಂದಿಲ್ಲ. ಮಧ್ವಮತವು ಎಲ್ಲಾ ಆಗಮಗಳ ಅನಂತರ ಬಂದುದಾಗಿದೆ. ಮಧ್ವಭಾಷ್ಯದ ಅನಂತರ ಇಲ್ಲಿಯ ತನಕ ಬೇರೆ ಯಾವ ಭಾಷ್ಯಗಳು ರಚನೆಯಾಗಿ ಪ್ರಚಲಿತವಾಗಿಲ್ಲವೆಂದು 'ನಾದ್ಯಾಪಿ ದೃಶ್ಯತೇ' ಎಂಬುದರ ಭಾವ. 'ಯುಕ್ತಿರುಚಿನಾ ಮಯಾ' ಎಂದಿದ್ದಾರೆ ರಾಜರು. ಇದರಿಂದ ಗ್ರಂಥಕರ್ತೃಗಳಾದ ರಾಜರು ಬೇರೆ ಮತಗಳನ್ನು ಬಿಟ್ಟು ಒಂದು ಮತವನ್ನಾಶ್ರಯಿಸಬೇಕಾದರೂ ಯುಕ್ತಿಯನ್ನು ಅನುಸರಿಸುತ್ತಾರೆ ಎಂದ ಬಳಿಕ ತಮ್ಮದೇ ಆದ ಗ್ರಂಥದಲ್ಲಿ ಅಲ್ಲಲ್ಲಿ ಹೇಳಲ್ಪಡುವ ಪ್ರಮೇಯಗಳಲ್ಲಿ ಯುಕ್ತಿಯನ್ನು ಅನುಸರಿಸುತ್ತಾರೆಂದು ಪ್ರತ್ಯೇಕ ಹೇಳಬೇಕೇನು ಎಂಬುದು ಸೂಚಿತವಾದ ಭಾವ. ಆದ್ದರಿಂದಲೇ ರಾಜರು 'ಯುಕ್ತಿಮಲ್ಲಿಕಾ' 'ಕ್ರಿಯತೇ' ಎಂದಿದ್ದಾರೆ.

ಈಗ ಮಾಯಾವಾದಿಮತವನ್ನು ಆಶ್ರಯಿಸದಿರುವುದಕ್ಕೆ ಅಸಾಧಾರಣವಾದ ಹಾಗೂ ಪ್ರಬಲವಾದ ಇನ್ನೊಂದು ದೋಷವನ್ನು ಹೇಳುತ್ತಿದ್ದಾರೆ –

**ತ್ವಂ ಚಂಡಾಲಃ ಪಶುರ್ಮ್ಲೇಚ್ಛಃ ಚೋರೋ ಜಾರಃ ಖರಃ ಕಪಿಃ ।**
**ಕುಂಡೋ ಗೋಳಕ ಇತ್ಯಾದ್ಯಾ ಯಾ ನಿಂದಾ ಲೋಕಸಮ್ಮತಾಃ ।**
**ತಾಃ ಸರ್ವಾಃ ಸರ್ವಜೀವೈಕ್ಯವಾದೇ ಸ್ಯುರ್ಹಿ ಪರಾತ್ಮನಿ ॥ ೧೨ ॥**

**ಅರ್ಥ–** ತ್ವಂ = ನೀನು, ಚಂಡಾಲಃ = ಚಂಡಾಲನು, ಪಶುಃ = ಪಶುವು, ಮ್ಲೇಚ್ಛಃ = ಅನಾರ್ಯನು, ಚೋರಃ = ಕಳ್ಳನು, ಜಾರಃ = ವ್ಯಭಿಚಾರಿ ಪುರುಷನು, ಖರಃ = ಕತ್ತೆಯು, ಕಪಿಃ = ಕೋತಿಯು, ಕುಂಡಃ = ಜಾರಸ್ತ್ರೀಪುತ್ರನು, ಗೋಳಕಃ = ವಿಧವಾಸ್ತ್ರೀಪುತ್ರನು, ಇತ್ಯಾದ್ಯಾಃ = ಇವೇ ಮೊದಲಾದ, ಲೋಕಸಮ್ಮತಾಃ = ಜನಸಮ್ಮತವಾದ ಯಾವ, ನಿಂದಾಃ = ನಿಂದನೆಗಳಿವೆಯೋ, ತಾಃ ಸರ್ವಾಃ = ಆ ಎಲ್ಲವೂ, ಸರ್ವಜೀವೈಕ್ಯವಾದೇ = ಸರ್ವಜೀವರೂ

ಬ್ರಹ್ಮಾಭಿನ್ನರೆಂಬ ಮಾಯಾ ವಾದಿಯ ಮತದಲ್ಲಿ, ಪರಾತ್ಮನಿ= ಪರಮಾತ್ಮನಲ್ಲಿ, ಸ್ಯುಃ= ಸಂಭವಿಸುವವುಗಳಾಗುತ್ತವೆಯಷ್ಟೇ!

**ಅನುವಾದ–** ಪರಮಾತ್ಮನಿಗೆ ನೀನು ಸಕಲ ಜೀವರಿಂದ ಅಭೇದವನ್ನೇ ಹೇಳುತ್ತೀಯೆ ಎಂದಾದರೆ ಚಾಂಡಾಲ-ಪಶು-ಅಯೋಗ್ಯ-ಚೋರ-ಜಾರ-ಕತ್ತೆ-ಕೋತಿ-ರಂಡೆಮಗ-ಮುಂಡೆ ಮಗ, ಇವೇ ಮೊದಲಾದ ಜಗತ್ತಿನ ಯಾವ ನಿಂದನಾ ಶಬ್ದಗಳಿವೆ ಅವುಗಳೆಲ್ಲವೂ ಪರಮಾತ್ಮನಲ್ಲಿ ಸಂಭವಿಸುತ್ತವೆ ಎಂದಾಗುತ್ತದೆ.

**ಭಾವವಿಲಾಸಿನೀ–** ಅಧುನಾ ಮಾಯಾವಾದಿಮತಾನವಲಂಬನೇ ಅಸಾಧಾರಣಂ ಪ್ರಬಲಂ ದೋಷಾಂತರಂ ಚಾಹ – **ತ್ವಂ ಚಂಡಾಲ ಇತ್ಯಾದಿನಾ** ॥ ೧೨-೧೩ ॥

**ಬ್ರಹ್ಮೈವ ಹೀನಯೋನೀಸ್ತಾಃ ಪ್ರಾಪ್ಯ ಸ್ವೇನೈವ ಕರ್ಮಣಾ ।**
**ಸಂಸರೇಚ್ಚೇದಿಯಂ ಸರ್ವಾ ಗಾಳೀ ಕಸ್ಯ ಗಳೇ ವದ ॥ ೧೩ ॥**

**ಅರ್ಥ–** ಬ್ರಹ್ಮೈವ = ಪರಬ್ರಹ್ಮನೇ, ಸ್ವೇನ್ಯೆವ ಕರ್ಮಣಾ (ಪಾಪ್ಮನಾ) = ತನ್ನದೇ ಆದ ಪಾಪಕರ್ಮದಿಂದ, ತಾಃ = ಹಿಂದೆ ಹೇಳಿದ ಎಲ್ಲಾ, ಹೀನಯೋನೀಃ = ಕೀಳು ಜನ್ಮಗಳನ್ನೂ, ಪ್ರಾಪ್ಯ = ಹೊಂದಿ, ಸಂಸರೇತ್ ಚೇತ್ = ದುಃಖಮಯವಾದ ಈ ಸಂಸಾರದಲ್ಲಿ ಬಂಧನದಲ್ಲಿರುತ್ತಾನೆಂದು ಒಪ್ಪುವ ಪಕ್ಷದಲ್ಲಿ, ಇಯಂ ಸರ್ವಾ ಗಾಲೀ = ಈ ಎಲ್ಲಾ ನಿಂದನೆಗಳೂ, ಕಸ್ಯ = ಯಾರ, ಗಲೇ = ಕಂಠದಲ್ಲಿ ಬಂದು ಬೀಳಬೇಕು, ವದ = ಹೇಳು.

**ಅನುವಾದ–** ಪರಿಪೂರ್ಣನಾದ ಬ್ರಹ್ಮನೂ ಕರ್ಮಬಂಧನಕ್ಕೆ ತುತ್ತಾಗಿದ್ದಾನೆ. ಕರ್ಮದ ಹಿನ್ನೆಲೆಯಲ್ಲಿ ಇಂತಹ ದುಃಖಮಯವಾದ ಕ್ರಿಮಿ-ಕೀಟ-ಪಶ್ವಾದಿ ಯೋನಿಗಳಲ್ಲಿ ಹುಟ್ಟುತ್ತಾನೆ. ದುಃಖಮಯವಾದ ಸಂಸಾರಬಂಧನದಲ್ಲಿ ಬಂಧಿತನಾಗಿದ್ದಾನೆ ಎಂದು ನೀನು ಒಪ್ಪುತ್ತೀಯೆ ಎಂದಾದರೆ, ಹಿಂದೆ ಹೇಳಿದ ನಿಂದನೆಗಳೆಲ್ಲ ಯಾರ ಕುತ್ತಿಗೆಗೆ ಕಟ್ಟಬೇಕು ಎಂದು ನೀನೇ ಹೇಳು? ಅನಿವಾರ್ಯವಾಗಿ ಲೋಕದ ನಿಂದನೆಗಳೆಲ್ಲವೂ ಬ್ರಹ್ಮನ ಕಂಠಕ್ಕೆ ಬಿಗಿಯುತ್ತವೆ ಎಂದು ಭಾವ.

**ವಿವರಣೆ–** 'ಅನಂತದೋಷದುಷ್ಟತ್ವಾದ್ ಹೇಯಂ ಮಾಯಾಮತಂ ಶುಭೈಃ ।' ಎಂಬುದರ ಅಭಿಪ್ರಾಯ.

ಬ್ರಹ್ಮನಿಗೆ ಜೀವೈಕ್ಯವನ್ನು ಹೇಳಿದರೆ ಆಗಬಹುದಾದ ಅನರ್ಥವನ್ನು ಹೇಳಿ ಬ್ರಹ್ಮನು ನಿರಾಕಾರನೆಂದರೆ ಆಗುವ ಅನರ್ಥವೇನೆಂದು ಹೇಳುತ್ತಿದ್ದಾರೆ –

**ಅಂಧಶ್ಚ ಬಧಿರೋ ಮೂಕಃ ಪಂಗುಃ ಷಂಡೋ ವಿನಾಸಿಕಃ ।**
**ಇತ್ಯಾದ್ಯಾ ವ್ಯಂಗತಾಹೇತೋರ್ಯಾ ನಿಂದಾ ಲೋಕಸಮ್ಮತಾಃ ।**
**ತಾಃಸರ್ವಾಶ್ಚ ನಿರಾಕಾರವಾದೇ ಕಿಂ ನ ಸ್ಯುರೀಶ್ವರೇ ॥ ೧೪ ॥**

ಒಳ್ಳೆಯ ಅಭಿರುಚಿಯುಳ್ಳವನಾಗಿದ್ದೇನೆ. ಇಂತಹ ದೃಢನಿಶ್ಚಯವುಳ್ಳ ನನ್ನಿಂದ ಯುಕ್ತಿಮಲ್ಲಿಕಾಗ್ರಂಥವು ರಚಿಸಲ್ಪಡುತ್ತದೆ.

**ಭಾವವಿಲಾಸಿನೀ–** ಅಸ್ಮಾನ್ಮಧ್ವಾಗಮಾದ್ ಉತ್ತರಪಕ್ಷಃ ಬ್ರಹ್ಮಸೂತ್ರಭಾಷ್ಯಾತ್ಮಕಮತಾಂತರಂ ಸಕಲಾಗಮಾನಾಮುಪರಿಕೃತಮಧ್ವಭಾಷ್ಯಾದನಂತರಮದ್ಯಾಪಿ ಭಾಷ್ಯಾಂತರಾಪ್ರವೃತ್ತೇರಿತಿ ಭಾವಃ । ಯದರ್ಥಮುಪೋದ್ಘಾತಸ್ತದಿದಾನೀಮಾಹ – **ತಸ್ಮಾದಿತಿ** ॥ ತಸ್ಮಾತ್ ಸರ್ವಾಗಮಾಂತೇ ಸಿದ್ಧತ್ವಾತ್ ॥ ೧೦ ॥

ಇತ್ಥಂ ಪೂರ್ವೋಕ್ತಪ್ರಕಾರೇಣ ಯುಕ್ತಿರುಚಿನಾ ಮಯೇತಿ ಸಂಬಂಧಃ । ಅನೇನ ಯಸ್ಯ ಗ್ರಂಥಕೃತಃ ಮತಾಂತರಂ ವಿಹಾಯ್ಯೈಕಮತಾವಲಂಬನೇಽಪಿ ಯುಕ್ತ್ಯನುಸರಣಮ್, ಕಿಮು ತಸ್ಯ ಸ್ವಗ್ರಂಥೇ ತತ್ರ ತತ್ರ ವಕ್ಷ್ಯಮಾಣಪ್ರಮೇಯೇಷು ತದನುಸರಣಮಿತಿ ಸೂಚಿತಮ್ । ಅತ ಏವ ಯುಕ್ತಿಮಲ್ಲಿಕಾ ಕ್ರಿಯತ ಇತ್ಯುಕ್ತಮ್ ॥ ೧೧ ॥

**ವಿವರಣೆ–** ಮಧ್ವಾಗಮದ ಅನಂತರ ಯಾವುದೇ ಸಿದ್ಧಾಂತ ಬಂದಿಲ್ಲ. ಮಧ್ವಮತವು ಎಲ್ಲಾ ಆಗಮಗಳ ಅನಂತರ ಬಂದುದಾಗಿದೆ. ಮಧ್ವಭಾಷ್ಯದ ಅನಂತರ ಇಲ್ಲಿಯ ತನಕ ಬೇರೆ ಯಾವ ಭಾಷ್ಯಗಳು ರಚನೆಯಾಗಿ ಪ್ರಚಲಿತವಾಗಿಲ್ಲವೆಂದು 'ನಾದ್ಯಾಪಿ ದೃಶ್ಯತೇ' ಎಂಬುದರ ಭಾವ. 'ಯುಕ್ತಿರುಚಿನಾ ಮಯಾ' ಎಂದಿದ್ದಾರೆ ರಾಜರು. ಇದರಿಂದ ಗ್ರಂಥಕರ್ತೃಗಳಾದ ರಾಜರು ಬೇರೆ ಮತಗಳನ್ನು ಬಿಟ್ಟು ಒಂದು ಮತವನ್ನಾಶ್ರಯಿಸಬೇಕಾದರೂ ಯುಕ್ತಿಯನ್ನು ಅನುಸರಿಸುತ್ತಾರೆ ಎಂದ ಬಳಿಕ ತಮ್ಮದೇ ಆದ ಗ್ರಂಥದಲ್ಲಿ ಅಲ್ಲಲ್ಲಿ ಹೇಳಲ್ಪಡುವ ಪ್ರಮೇಯಗಳಲ್ಲಿ ಯುಕ್ತಿಯನ್ನು ಅನುಸರಿಸುತ್ತಾರೆಂದು ಪ್ರತ್ಯೇಕ ಹೇಳಬೇಕೇನು ಎಂಬುದು ಸೂಚಿತವಾದ ಭಾವ. ಆದ್ದರಿಂದಲೇ ರಾಜರು 'ಯುಕ್ತಿಮಲ್ಲಿಕಾ' 'ಕ್ರಿಯತೇ' ಎಂದಿದ್ದಾರೆ.

ಈಗ ಮಾಯಾವಾದಿಮತವನ್ನು ಆಶ್ರಯಿಸದಿರುವುದಕ್ಕೆ ಅಸಾಧಾರಣವಾದ ಹಾಗೂ ಪ್ರಬಲವಾದ ಇನ್ನೊಂದು ದೋಷವನ್ನು ಹೇಳುತ್ತಿದ್ದಾರೆ –

**ತ್ವಂ ಚಂಡಾಲಃ ಪಶುರ್ಮ್ಲೇಚ್ಛಃ ಚೋರೋ ಜಾರಃ ಖರಃ ಕಪಿಃ ।**
**ಕುಂಡೋ ಗೋಳಕ ಇತ್ಯಾದ್ಯಾ ಯಾ ನಿಂದಾ ಲೋಕಸಮ್ಮತಾಃ ।**
**ತಾಃ ಸರ್ವಾಃ ಸರ್ವಜೀವೈಕ್ಯವಾದೇ ಸ್ಯುರ್ಹಿ ಪರಾತ್ಮನಿ ॥ ೧೨ ॥**

**ಅರ್ಥ–** ತ್ವಂ = ನೀನು, ಚಂಡಾಲಃ = ಚಂಡಾಲನು, ಪಶುಃ = ಪಶುವು, ಮ್ಲೇಚ್ಛಃ = ಅನಾರ್ಯನು, ಚೋರಃ = ಕಳ್ಳನು, ಜಾರಃ = ವ್ಯಭಿಚಾರಿ ಪುರುಷನು, ಖರಃ = ಕತ್ತೆಯು, ಕಪಿಃ = ಕೋತಿಯು, ಕುಂಡಃ = ಜಾರಸ್ತ್ರೀಪುತ್ರನು, ಗೋಳಕಃ = ವಿಧವಾಸ್ತ್ರೀಪುತ್ರನು, ಇತ್ಯಾದ್ಯಾಃ = ಇವೇ ಮೊದಲಾದ, ಲೋಕಸಮ್ಮತಾಃ = ಜನಸಮ್ಮತವಾದ ಯಾವ, ನಿಂದಾಃ = ನಿಂದನೆಗಳಿವೆಯೋ, ತಾಃ ಸರ್ವಾಃ = ಆ ಎಲ್ಲವೂ, ಸರ್ವಜೀವೈಕ್ಯವಾದೇ = ಸರ್ವಜೀವರೂ

ಬ್ರಹ್ಮಾಭಿನ್ನರೆಂಬ ಮಾಯಾ ವಾದಿಯ ಮತದಲ್ಲಿ, ಪರಾತ್ಮನಿ= ಪರಮಾತ್ಮನಲ್ಲಿ, ಸ್ಯುಃ= ಸಂಭವಿಸುವವುಗಳಾಗುತ್ತವೆಯಷ್ಟೇ!

**ಅನುವಾದ–** ಪರಮಾತ್ಮನಿಗೆ ನೀನು ಸಕಲ ಜೀವರಿಂದ ಅಭೇದವನ್ನೇ ಹೇಳುತ್ತೀಯೆ ಎಂದಾದರೆ ಚಾಂಡಾಲ-ಪಶು-ಅಯೋಗ್ಯ-ಚೋರ-ಜಾರ-ಕತ್ತೆ-ಕೋತಿ-ರಂಡೆಮಗ-ಮುಂಡೆ ಮಗ, ಇವೇ ಮೊದಲಾದ ಜಗತ್ತಿನ ಯಾವ ನಿಂದನಾ ಶಬ್ದಗಳಿವೆ ಅವುಗಳೆಲ್ಲವೂ ಪರಮಾತ್ಮನಲ್ಲಿ ಸಂಭವಿಸುತ್ತವೆ ಎಂದಾಗುತ್ತದೆ.

**ಭಾವವಿಲಾಸಿನೀ–** ಅಧುನಾ ಮಾಯಾವಾದಿಮತಾನವಲಂಬನೇ ಅಸಾಧಾರಣಂ ಪ್ರಬಲಂ ದೋಷಾಂತರಂ ಚಾಹ – ತ್ವಂ ಚಂಡಾಲ ಇತ್ಯಾದಿನಾ || ೧೨-೧೩ ||

**ಬ್ರಹ್ಮೈವ ಹೀನಯೋನೀಸ್ತಾಃ ಪ್ರಾಪ್ಯ ಸ್ವೇನೈವ ಕರ್ಮಣಾ |**
**ಸಂಸರೇಚ್ಚೇದಿಯಂ ಸರ್ವಾ ಗಾಳೀ ಕಸ್ಯ ಗಳೇ ವದ || ೧೩ ||**

**ಅರ್ಥ–** ಬ್ರಹ್ಮೈವ = ಪರಬ್ರಹ್ಮನೇ, ಸ್ವೇನೈವ ಕರ್ಮಣಾ (ಪಾಪ್ಮನಾ) = ತನ್ನದೇ ಆದ ಪಾಪಕರ್ಮದಿಂದ, ತಾಃ = ಹಿಂದೆ ಹೇಳಿದ ಎಲ್ಲಾ, ಹೀನಯೋನೀಃ = ಕೀಳು ಜನ್ಮಗಳನ್ನೂ, ಪ್ರಾಪ್ಯ = ಹೊಂದಿ, ಸಂಸರೇತ್ ಚೇತ್ = ದುಃಖಮಯವಾದ ಈ ಸಂಸಾರದಲ್ಲಿ ಬಂಧನದಲ್ಲಿರುತ್ತಾನೆಂದು ಒಪ್ಪುವ ಪಕ್ಷದಲ್ಲಿ, ಇಯಂ ಸರ್ವಾ ಗಾಲೀ = ಈ ಎಲ್ಲಾ ನಿಂದನೆಗಳೂ, ಕಸ್ಯ = ಯಾರ, ಗಲೇ = ಕಂಠದಲ್ಲಿ ಬಂದು ಬೀಳಬೇಕು, ವದ = ಹೇಳು.

**ಅನುವಾದ–** ಪರಿಪೂರ್ಣನಾದ ಬ್ರಹ್ಮನೂ ಕರ್ಮಬಂಧನಕ್ಕೆ ತುತ್ತಾಗಿದ್ದಾನೆ. ಕರ್ಮದ ಹಿನ್ನೆಲೆಯಲ್ಲಿ ಇಂತಹ ದುಃಖಮಯವಾದ ಕೃಮಿ-ಕೀಟ-ಪಶ್ವಾದಿ ಯೋನಿಗಳಲ್ಲಿ ಹುಟ್ಟುತ್ತಾನೆ. ದುಃಖಮಯವಾದ ಸಂಸಾರಬಂಧನದಲ್ಲಿ ಬಂಧಿತನಾಗಿದ್ದಾನೆ ಎಂದು ನೀನು ಒಪ್ಪುತ್ತೀಯೆ ಎಂದಾದರೆ, ಹಿಂದೆ ಹೇಳಿದ ನಿಂದನೆಗಳೆಲ್ಲ ಯಾರ ಕುತ್ತಿಗೆಗೆ ಕಟ್ಟಬೇಕು ಎಂದು ನೀನೇ ಹೇಳು? ಅನಿವಾರ್ಯವಾಗಿ ಲೋಕದ ನಿಂದನೆಗಳೆಲ್ಲವೂ ಬ್ರಹ್ಮನ ಕಂಠಕ್ಕೆ ಬಿಗಿಯುತ್ತವೆ ಎಂದು ಭಾವ.

**ವಿವರಣೆ–** 'ಅನಂತದೋಷದುಷ್ಟತ್ವಾದ್ ಹೇಯಂ ಮಾಯಾಮತಂ ಶುಭೈಃ |' ಎಂಬುದರ ಅಭಿಪ್ರಾಯ.

ಬ್ರಹ್ಮನಿಗೆ ಜೀವೈಕ್ಯವನ್ನು ಹೇಳಿದರೆ ಆಗಬಹುದಾದ ಅನರ್ಥವನ್ನು ಹೇಳಿ ಬ್ರಹ್ಮನು ನಿರಾಕಾರನೆಂದರೆ ಆಗುವ ಅನರ್ಥವೇನೆಂದು ಹೇಳುತ್ತಿದ್ದಾರೆ –

**ಅಂಧಶ್ಚ ಬಧಿರೋ ಮೂಕಃ ಪಂಗುಃ ಷಂಡೋ ವಿನಾಸಿಕಃ |**
**ಇತ್ಯಾದ್ಯಾ ವ್ಯಂಗತಾಹೇತೋರ್ಯಾ ನಿಂದಾ ಲೋಕಸಮ್ಮತಾಃ |**
**ತಾಃಸರ್ವಾಶ್ಚ ನಿರಾಕಾರವಾದೇ ಕಿಂ ನ ಸ್ಯುರೀಶ್ವರೇ || ೧೪ ||**

**ಅರ್ಥ–** ಚ = ಮತ್ತು, ವ್ಯಂಗತಾಹೇತೋಃ = ಅಂಗವೈಕಲ್ಯಕಾರಣದಿಂದ, ಅಂಧಃ = ಕುರುಡನು, ಬಧಿರಃ = ಕಿವುಡನು, ಮೂಕಃ = ಮಾತುಬಾರದವನು, ಪಂಗುಃ = ಕುಂಟನು, ಷಂಡಃ = ನಪುಂಸಕನು, ವಿನಾಸಿಕಃ = ಮೂಗಿಲ್ಲದವನು, ಇತ್ಯಾದ್ಯಾಃ = ಇವೇ ಮೊದಲಾದ, ಲೋಕಸಮ್ಮತಾಃ = ಲೋಕ- ವ್ಯವಹಾರಸಿದ್ಧವಾದ, ಯಾಃ =ಯಾವ, ನಿಂದಾಃ =ನಿಂದನೆಗಳು ಇವೆಯೋ, ತಾಃ ಸರ್ವಾಶ್ಚ =ಆ ಎಲ್ಲಾ ನಿಂದನೆಗಳೂ, ನಿರಾಕಾರವಾದೇ = ನಿರಾಕಾರ ವಾದದಲ್ಲಿ, ಈಶ್ವರೇ = ಬ್ರಹ್ಮನಲ್ಲಿ, ಕಿಂ ನ ಸ್ಯುಃ = ಉಂಟಾಗಲಾರವೇನು?

**ಅನುವಾದ– ಕಣ್ಣು, ಕಿವಿ, ಬಾಯಿ, ಕೈ, ಕಾಲು, ಮೂಗು ಮೊದಲಾದ ಇಂದ್ರಿಯಗಳು ಊನವಾದರೆ ಲೋಕದಲ್ಲಿ ಅವನನ್ನು ಜನರು ಕುರುಡ, ಕಿವುಡ, ಮೂಕ, ಕುಂಟ, ಮೊದಲಾದ ನಿಂದನಾತ್ಮಕ ಶಬ್ದಗಳಿಂದ ಕರೆಯುತ್ತಾರೆ. ನೀನು ಬ್ರಹ್ಮನನ್ನು ನಿರಾಕಾರನೆಂದರೆ ಈ ಲೋಕನಿಂದನೆಗಳೆಲ್ಲವೂ ಬ್ರಹ್ಮನಲ್ಲೇ ಸಂಭವಿಸಿ ದಂತಾಗುವುದಿಲ್ಲವೇ?**

**ಭಾವವಿಲಾಸಿನೀ–** ಬ್ರಹ್ಮಣೋ ಜೀವೈಕ್ಯವಾದಾತ್ ಪ್ರಾಪ್ತಾಂ ಗಾಲೀಮುಕ್ತ್ವಾ ನಿರಾಕಾರತ್ವೋಕ್ತ್ಯಾ ಲಬ್ಧಾಂ ತಾಮಾಹ **ಅಂಧಶ್ಚೇತಿ** ॥ ★ ನಿರಾಕಾರೇತ್ಯುಪಲಕ್ಷಣಮ್ । ಸಾಕಾರತ್ವೇಽಪಿ ಭಿನ್ನಕರ್ಣನಾಸಾದೀನಾಂ ಚೋರಾಣಾಂ ಜಾತ್ಯಂಧಬಧಿರಾದೀನಾಂ ಚ ಬ್ರಹ್ಮರೂಪತ್ವೇನ ತತ್ರೈವ ಗಾಲೀನಾಂ ಪರ್ಯವಸಾನಾತ್ । ಏತೇನೈವ ವ್ಯಾವಹಾರಿಕದೇಹವತ್ತ್ವಾನ್ನ ಗಾಲೀತ್ಯಪಿ ನಿರಸ್ತಮ್ । ಪಾರಮಾರ್ಥಿಕ-ದಶಾಯಾಂ ಯುಗಪದೇವಾಪಾತಾಚ್ಚ ॥ ೧೪ ॥

**ವಿವರಣೆ–** ನಿರಾಕಾರೇತಿ ... ಅಪಾತಾಚ್ಚ. ಇಷ್ಟು ಭಾಗವು ಪ್ರಕ್ಷಿಪ್ತವಾದುದು. ಮೂಲಗ್ರಂಥದಲ್ಲಿ ಈ ಭಾಗವಿಲ್ಲ. ಮಾಯಾವಾದಿಗಳು ಸಾಕಾರವಾದಿಗಳು ಎಂದು ಹೇಳಲಾಗುವುದಿಲ್ಲ.

ಬ್ರಹ್ಮನು ನಿರ್ಗುಣನೆಂದು ಹೇಳಿದರೆ ಆಗಬಹುದಾದ ಮಹತ್ತರವಾದ ಅನರ್ಥವೇನೆಂದು ಮುಂದಿನ ಪದ್ಯಗಳಲ್ಲಿ ಹೇಳುತ್ತಾರೆ –

ವಿದ್ಯಾವಿನಯಹೀನಸ್ತ್ವಂ ನಿರ್ದಯೋ ನಿರ್ವ್ರತೋಽಶುಚಿಃ ।
ಔದಾರ್ಯಧೈರ್ಯಶೌರ್ಯಾದ್ಯೈರ್ಹೀನ ಇತ್ಯಾದಿಕಾಶ್ಚ ಯಾಃ ॥ ೧೫ ॥

ಸದ್ಗುಣಾಭಾವತೋ ನಿಂದಾಸ್ತಾಸ್ತು ನೈರ್ಗುಣ್ಯವಾದಿನಾಮ್ ।
ಮತೇ ಸ್ಯುರ್ಬ್ರಹ್ಮಣಿ ಪರೇ ಸರ್ವಾಃ ಸರ್ವಸ್ಯ ಸಮ್ಮತಾಃ ॥ ೧೬ ॥

**ಅರ್ಥ–** ಚ = ಮತ್ತು, ತ್ವಂ = ನೀನು, ವಿದ್ಯಾವಿನಯವಿಹೀನಃ = ವಿದ್ಯಾ ವಿನಯಗಳಿಲ್ಲದವನು, ನಿರ್ದಯಃ = ದಯಾಶೂನ್ಯನು, ನಿರ್ವ್ರತಃ =ಆಚರಣಹೀನನು,

ಅಶುಚಿಃ = ಮೈಲಿಗೆಯವನು, ಔದಾರ್ಯ- ಧೈರ್ಯಶೌರ್ಯಾದ್ಯೈಃ = ಔದಾರ್ಯ-ಧೈರ್ಯ-ಶೌರ್ಯಾದಿಗಳಿಂದ, ಹೀನಃ = ರಹಿತನು, ಇತ್ಯಾದಿಕಾಃ = ಇವೇ ಮೊದಲಾದ, ಸದ್ಗುಣಾಭಾವತಃ = ಸದ್ಗುಣಗಳ ಕೊರತೆಯಿಂದ ಆಡುವ, ಸರ್ವಸ್ಯ ಸಮ್ಮತಾಃ = ಲೋಕದ ಜನರಿಗೆ ಸಮ್ಮತವಾದ, ಯಾಃ= ಯಾವ, ನಿಂದಾಃ= ನಿಂದನೆಗಳಿವೆಯೋ, ತಾ ಸರ್ವಾಃ ನಿಂದಾಃ = ಆ ಎಲ್ಲಾ ನಿಂದನೆಗಳೂ, ನೈರ್ಗುಣ್ಯವಾದಿನಾಂ = ಬ್ರಹ್ಮನು ಗುಣರಹಿತನೆಂದು ವಾದಿಸುವವರ, ಮತೇ = ಮತದಲ್ಲಿ, ಪರೇ ಬ್ರಹ್ಮಣಿ ಸ್ಯುಃ = ಪರಬ್ರಹ್ಮನಲ್ಲಿಯೂ ಇರಬೇಕಾದೀತು.

**ಅನುವಾದ–** ಬ್ರಹ್ಮನು ನಿರ್ಗುಣನೆಂದು ಹೇಳುವುದಾದರೆ ಜಗತ್ತಿನಲ್ಲಿ ಜನರು ಗುಣಾಭಾವಪ್ರಯುಕ್ತ ಆಡುವ ನಿಂದನೆಗಳೂ ಬ್ರಹ್ಮನಲ್ಲಿ ಸಂಭವಿಸಿದಂತಾಗುತ್ತವೆ. ಜನರು ವಿದ್ಯಾ-ವಿನಯ-ದಯಾ-ವ್ರತ-ಆಚಾರ-ಔದಾರ್ಯ-ಧೈರ್ಯ-ಶೌರ್ಯ ಮೊದಲಾದ ಗುಣಗಳಿಂದ ಹೀನರಾದವರನ್ನು ಜಗತ್ತಿನಲ್ಲಿ ನಿರ್ಗುಣರೆಂದು ನಿಂದಿಸುತ್ತಾರೆ. ಈ ಎಲ್ಲಾ ನಿಂದನೆಗಳು (ಐಕ್ಯಪ್ರಯುಕ್ತ) ಪರಬ್ರಹ್ಮನಲ್ಲಿಯೇ ಸಂಭವಿಸಿದಂತಾಗುತ್ತದೆ.

**ಭಾವವಿಲಾಸಿನೀ–ನಿರ್ಗುಣತ್ವೋಕ್ತ್ಯಾ ಲಬ್ಧಾಂ ತಾಮಾಹ–ವಿದ್ಯೇತಿ ॥ (ಉಪಲಕ್ಷಣಮೇತತ್ । ಗುಣಹೀನನಾನಾಪುರುಷರೂಪತ್ವೋಕ್ತ್ಯಾ ಚೋಕ್ತದೋಷಾಪತ್ತಿರಿತಿ ಜ್ಞೇಯಮ್) (ಪ್ರಕ್ಷಿಪ್ತೋಽಯಂ ಗ್ರಂಥಃ) ॥ ೧೫-೧೬ ॥**

ಜಗತ್ತನ್ನು ಮಿಥ್ಯಾ ಎಂದು ಹೇಳುವ ಮಾಯಾವಾದಿಗಳಿಗೆ ಒದಗುವ ನಿಂದನೆಯನ್ನು ಮುಂದಿನ ಪದ್ಯದಲ್ಲಿ ಹೇಳುತ್ತಿದ್ದಾರೆ –

**ಯಾ ಚ ಗ್ರಾಮತಟಾಕಾದೇರಾರಾಮಾದೇಃ ಕೃತಸ್ಯ ಹಿ ।**
**ಮಿಥ್ಯಾತ್ವಕಥನಾನ್ನಿಂದಾ ಮತ್ಸರಗ್ರಸ್ತಚೇತಸಾಮ್ ।**
**ತಾಸ್ಸರ್ವಾಸ್ಸರ್ವಮಿಥ್ಯಾತ್ವವಾದೇ ಸ್ಯಾದೇವ ಮಾಧವೇ ॥ ೧೭ ॥**

**ಅರ್ಥ–** ಕೃತಸ್ಯ = ನಿರ್ಮಿಸಲ್ಪಟ್ಟ, ಗ್ರಾಮತಟಾಕದೇಃ= ಗ್ರಾಮಕೆರೆ ಮೊದಲಾದವುಗಳಿಗೆ ಸಂಬಂಧಿಸಿದಂತೆ, ಚ= ಮತ್ತು, ಆರಾಮಾದೇಃ= ಉದ್ಯಾನವನ ಮೊದಲಾದವುಗಳಿಗೆ ಸಂಬಂಧಿಸಿದಂತೆ, ಮಿಥ್ಯಾತ್ವ ಕಥನಾತ್= ಸುಳ್ಳು ಎಂಬ ಹೇಳಿಕೆಯಿಂದ, ಯಾ ನಿಂದಾ= ಯಾವ ನಿಂದನೆಯಿದೆಯೋ, ತಾಃ ಸರ್ವಾಃ = ಅವೆಲ್ಲವೂ, ಸರ್ವಮಿಥ್ಯಾತ್ವವಾದೇ= ಬ್ರಹ್ಮವ್ಯತಿರಿಕ್ತವಾದುದೆಲ್ಲವೂ ಮಿಥ್ಯಾ ಎಂದು ಹೇಳುವ ಮತದಲ್ಲಿ , ಮಾಧವೇ = ಪರಮಾತ್ಮನಲ್ಲಿ, ಸ್ಯಾದೇವ ಹಿ = ನಿಶ್ಚಿತವಾಗಿ ಬಂದೇ ಬರುತ್ತದೆ.

**ಅನುವಾದ–** 'ಪ್ರಪಂಚವು ಮಿಥ್ಯಾ, ಪಾರಮಾರ್ಥಿಕವಲ್ಲ' ಎಂದು ಹೇಳುವುದಾದರೆ, ಇದು ದೇವರನ್ನೇ ನಿಂದಿಸಿದಂತೆ. ಒಬ್ಬ ರಾಜನು ಜನರ ಸೌಕರ್ಯಕ್ಕಾಗಿ ಕೆರೆ,

ಬಾವಿ, ಉದ್ಯಾನವನ, ಗ್ರಾಮಗಳನ್ನು ನಿರ್ಮಿಸುತ್ತಾನೆ. ಈ ರಾಜನ ಎಲ್ಲ ಸತ್ಕೃತ್ಯಗಳನ್ನು ಕಂಡು ಸಹಿಸಲಾರದೆ ಒಬ್ಬ ಮಾತ್ಸರ್ಯಬುದ್ಧಿಯವನು ರಾಜನ ಈ ಕೃತಿಗಳೆಲ್ಲವೂ 'ಸುಳ್ಳು' ಎಂದು ಹೇಳಿದರೆ, ಕೃತಿಗಳು ಸುಳ್ಳಾಗುವುದಿಲ್ಲ. ಹೊರತಾಗಿ, ಅವನ ಮಾತ್ಸರ್ಯವೇ ನಿಶ್ಚಯವಾಗುತ್ತದೆ. ಅದರಂತೆ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳನ್ನು ದೇವರು ಮಾಡಿದ್ದಾನೆ. ಇವುಗಳನ್ನು ದಿನಂಪ್ರತಿ ಅನುಭವಿಸುತ್ತಿದ್ದೇವೆ. ಇಂತಹ ಜಗತ್ತನ್ನು 'ಮಿಥ್ಯಾ' ಎಂದು ಹೇಳಿದರೆ ಈ ನಿಂದನೆಯು ಜಗನ್ನಿರ್ಮಾತೃವಾದ ಲಕ್ಷ್ಮೀಪತಿಯನ್ನೇ ಮುಟ್ಟುತ್ತದೆ. 'ಭಗವಂತನು ಸೃಷ್ಟಿಕರ್ತನಲ್ಲ' ಎಂದು ನಿಂದಿಸಿದಂತಾಗುತ್ತದೆ. ಇದರಿಂದ 'ಜಗತ್ತು ಮಿಥ್ಯಾ' ಎಂದು ಸಿದ್ಧ ಆಗುವುದಿಲ್ಲ. ಹೊರತಾಗಿ, ನಿನ್ನ ಮಾತ್ಸರ್ಯ ಬುದ್ಧಿಯು ಸಿದ್ಧವಾಗುವುದು ಎಂದು ಭಾವ.

**ಭಾವವಿಲಾಸಿನೀ–** ಜಗನ್ಮಿಥ್ಯಾತ್ವೋಕ್ತಿಲಬ್ಧಾಂ ಗಾಲೀಮಾಹ – **ಯಾ ಚೇತಿ** ॥ ೧೭ ॥

> ಅಜ್ಞೋಽಸೀತಿ ತು ಯಾ ನಿಂದಾ ಸಾ ಮಾಯಾಶ್ರಯತೋಕ್ತಿತಃ ।
> ಭಗವತ್ಯುಚ್ಯತೇ ಕರ್ಮಬದ್ಧತ್ವೋಕ್ತ್ಯಾ ಚ ಪಾಪಿತಾ ॥ ೧೮ ॥

**ಅರ್ಥ–** ಮಾಯಾಶ್ರಯತೋಕ್ತಿತಃ = ಬ್ರಹ್ಮನಿಗೆ ಅಜ್ಞಾನಾಶ್ರಯದಿಂದ ಜೀವಭಾವವನ್ನು ಹೇಳುವುದರಿಂದ, ಅಜ್ಞೋಽಸಿ = ದಡ್ಡನಾಗಿದ್ದಿ, ಇತಿ ತು ಯಾ ನಿಂದಾ = ಎಂಬಂಥ ಯಾವ ನಿಂದೆ ಇದೆಯೋ, ಸಾ = ಆ ನಿಂದೆಯು, ಭಗವತಿ = ಭಗವಂತನಲ್ಲಿ, ಉಚ್ಯತೇ = ಹೇಳಲ್ಪಡುತ್ತದೆ. ಕರ್ಮಬದ್ಧತ್ವೋಕ್ತ್ಯಾ = ಕರ್ಮಬದ್ಧತ್ವವನ್ನು ಹೇಳಿದ್ದರಿಂದ, ಪಾಪಿತಾ ಚ = ಪಾಪ ಉಳ್ಳವನೆಂದೂ, ಉಚ್ಯತೇ = ಹೇಳಲ್ಪಡುತ್ತದೆ.

**ಅನುವಾದ–** ಮಾಯಾವಾದವು ಬ್ರಹ್ಮನಿಗೆ ಅಜ್ಞಾನಾಶ್ರಯತ್ವವನ್ನು ಹೇಳುವುದರಿಂದ ಬ್ರಹ್ಮನನ್ನು 'ಅಜ್ಞ'ನೆಂದು ನಿಂದಿಸಿದಂತಾಗುತ್ತದೆ. ಬ್ರಹ್ಮನಿಗೆ ಕರ್ಮಬದ್ಧತ್ವವನ್ನು ಹೇಳಿದ್ದರಿಂದ ಕರ್ಮವೆಂದರೆ ಪಾಪಪುಣ್ಯಗಳಾದ್ದರಿಂದ 'ಬ್ರಹ್ಮನು ಪಾಪ ಉಳ್ಳವನು' ಎಂದು ನಿಂದಿಸಿದಂತಾಗುತ್ತದೆ.

**ಭಾವವಿಲಾಸಿನೀ–** ಮಾಯಾಶ್ರಯತೋಕ್ತಿತಃ ಅಜ್ಞಾನಾಶ್ರಯತ್ವೋಕ್ತೇಃ ಅಜ್ಞೋಽಸೀತಿ ತು ಯಾ ನಿಂದಾ ಸಾ ಭಗವತ್ಯುಚ್ಯತ ಇತಿ ಸಂಬಂಧಃ । ಬ್ರಹ್ಮೈವಾಜ್ಞಾನವಶಾತ್ ಸಂಸರತೀತ್ಯುಕ್ತತ್ವಾದ್ ಬ್ರಹ್ಮಣ ಏವ ಕರ್ಮಬದ್ಧತ್ವೋಕ್ತಿರಿತಿ ಜ್ಞಾತವ್ಯಮ್ ॥ ೧೮ ॥

**ವಿವರಣೆ–** ಬ್ರಹ್ಮನೇ ಅಜ್ಞಾನವಶದಿಂದ ಸಂಸಾರ ಉಳ್ಳವನಾಗಿದ್ದಾನೆ ಎಂದು ಮಾಯಾವಾದಿಗಳು ಹೇಳಿದ್ದರಿಂದ, ಅರ್ಥಾತ್ ಬ್ರಹ್ಮನಿಗೇ ಕರ್ಮಬದ್ಧತ್ವವನ್ನು ಹೇಳಿದಂತಾಯಿತೆಂದು ತಿಳಿಯಬೇಕು. (ಬ್ರಹ್ಮನಿಗೇ ಸಂಸಾರವನ್ನು ಹೇಳಿದುದರಿಂದ,

ಸಂಸಾರವು ಕರ್ಮಬದ್ಧನಿಗೇ ಇರುವ ಪ್ರಯುಕ್ತ ಬ್ರಹ್ಮನನ್ನು ಕರ್ಮಬದ್ಧನೆಂದು ಹೇಳಿದಂತಾಯಿತು)

**ಇತ್ಥಂ ವಿಚಾರ್ಯಮಾಣೇಽಭೂದ್ಯಸ್ಮಾನ್ಮಾಯಾವಿನಾಂ ಮತಮ್ ।**
**ಸರ್ವಂ ಚ ಲೋಕಸಮ್ಮತ್ಯಾ ಭಗವನ್ನಿಂದನಾತ್ಮಕಮ್ ॥ ೧೯ ॥**

**ಅರ್ಥ–** ಇತ್ಥಂ = ಈ ಪ್ರಕಾರವಾಗಿ, ವಿಚಾರ್ಯಮಾಣೇ = ವಿಚಾರ ಮಾಡುತ್ತಿರಲಾಗಿ, ಯಸ್ಮಾತ್ = ಯಾವ ಕಾರಣದಿಂದ, ಮಾಯಾವಿನಾಂ ಸರ್ವಂ ಚ ಮತಂ = ಮಾಯಾವಾದಿಗಳ ಪರಾಪರತತ್ವಗಳ ವಿಷಯವಾದ ಸಮಗ್ರ ಮತವು, ಲೋಕಸಮ್ಮತ್ಯಾ = ಜಗತ್ತು ಒಪ್ಪುವಂತೆ, ಭಗವನ್ನಿಂದನಾತ್ಮಕಮ್ = ಭಗವಂತನ ನಿಂದಾರೂಪವೇ, ಅಭೂತ್ = ಆಯಿತು.

**ಅನುವಾದ– ಈ ಪ್ರಕಾರವಾಗಿ ವಿಚಾರ ಮಾಡುತ್ತಾ ಹೊರಟರೆ ದೇವರನ್ನು ನಿಂದಿಸಲೆಂದೇ ಸಮಗ್ರ ಮಾಯಾವಾದವು (ಭಗವನ್ನಿಂದನಾತ್ಮಕವಾಗಿ ಪರಿಣಮಿಸುತ್ತಿದೆ) ಹೊರಟಿದೆ ಎಂದು ಲೋಕದ ಜನರಿಗೆಲ್ಲ ತಿಳಿಯುತ್ತದೆ.**

**ಭಾವವಿಲಾಸಿನೀ–** ಮಾಯಾವಿನಾಂ ಸರ್ವಮ್, ಮಾಯಾವಾದಶಾಸ್ತ್ರೋಕ್ತ-ಪರಾಪರಪ್ರಮೇಯಮ್ ॥ ೧೯ ॥ .

ಮಾಯಾವಾದ ಮತದ ಅಲ್ಪತೆಯನ್ನು ನಿರೂಪಿಸಿ ಉಪಸಂಹರಿಸುತ್ತಾ ಮತ್ತೊಂದು ದೋಷವನ್ನು ಹೇಳುತ್ತಾರೆ–

**ಅತೋ ಮಾಯಾವಾದಮತಾನ್ನಾಮ್ನೈವಾತಿಜುಗುಪ್ಸಿತಾತ್ ।**
**ಭೀತೋಽಹಮಭಜಂ ತತ್ವವಾದಿನಾಮೇವ ಪದ್ಧತಿಮ್ ॥ ೨೦ ॥**

**ಅರ್ಥ–** ಅತಃ = ಆದ್ದರಿಂದ, ನಾಮ್ನೈವ = ಹೆಸರಿನಿಂದಲೇ, ಅತಿಜುಗುಪ್ಸಿತಾತ್ = ಅತ್ಯಂತ ಹೇಯವಾದ ಕಾರಣದಿಂದ, ಮಾಯಾವಾದಮತಾತ್ = ಮಾಯಾವಾದ ಮತದಿಂದ, ಭೀತಃ = ಹೆದರಿದ, ಅಹಂ= ನಾನು, ತತ್ವವಾದಿನಾಂ= ತತ್ವವಾದಿಗಳ, ಪದ್ಧತಿಂ ಏವ = ಮಾರ್ಗವನ್ನೇ, ಅಭಜಮ್ = ಹೊಂದಿದೆನು.

**ಅನುವಾದ– ಮಾಯಾ ಎಂಬ ಶಬ್ದವೇ ವಂಚನೆಯನ್ನು ಸೂಚಿಸುವುದರಿಂದ ಮಾಯಾವಾದ ಎಂಬ ಶಬ್ದವು ಬಹಳ ಜುಗುಪ್ಸಿತವಾದದು. ತತ್ವವಾದವೆಂಬ ಹೆಸರಾದರೋ ತತ್ವ ಎಂದರೆ ಯಥಾರ್ಥಜ್ಞಾನವಿಷಯ ಎಂದು ಅರ್ಥವಾದ್ದರಿಂದ ಹೆಸರಿನಿಂದಲೇ ಆಕರ್ಷಕವಾದದು. ಆದ್ದರಿಂದ ತತ್ವವಾದವನ್ನೇ ಅನುಸರಿಸಿದ್ದೇನೆ.**

**ಭಾವವಿಲಾಸಿನೀ–** ಉಪಸಂಹರನ್ ದೋಷಾಂತರಮಾಹ – **ಅತ ಇತಿ** ॥ ನಾಮ್ನಾ ಮಾಯಾವಾದ ಇತಿ ಪ್ರಸಿದ್ಧನಾಮ್ನಾ ಭೀತಃ 'ನಿಂದಾಂ ಭಗವತಃ ಶೃಣ್ವಂಸ್ತತ್ಪರಸ್ಯ ಜನಸ್ಯ ವಾ । ತತೋ ನಾಪೈತಿ

**ಯಸ್ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥ ' ಇತ್ಯಾದಿ ವಚನಾರ್ಥಪರ್ಯಾಲೋಚನಯಾ ಭೀತಃ ॥ ೨೦ ॥**

**ವಿವರಣೆ–** ರಾಜರಿಗೆ ಮಾಯಾವಾದಿಗಳ ಭಯವಿಲ್ಲ. 'ಮಾಯಾವಾದ' ಎಂಬ ಪ್ರಸಿದ್ಧ ನಾಮದ ಭಯ. ಇಂತಹ ಭಯ ಶಾಸ್ತ್ರಸಮ್ಮತ.

**ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ ।**
**ತತೋ ನಾಪೈತಿ ಯಸ್ಸೋಽಪಿ ಯಾತ್ಯಧಸ್ಸುಕೃತಾಚ್ಚ್ಯುತಃ ॥**

'ಹರಿನಿಂದನೆ-ಹರಿಭಕ್ತರ ನಿಂದನೆ ನಡೆಯುವ ಸ್ಥಳದಿಂದ ಹೆದರಿ, ಅಲ್ಲಿಂದ ಕದಲದಿದ್ದರೆ ಅವನು ಪುಣ್ಯದಿಂದ ವಂಚಿತನಾಗಿ ಅಧಃಪತನಕ್ಕೆ ತುತ್ತಾಗುತ್ತಾನೆ.' ಮುಂತಾದ ವಚನಗಳ ಭಾವವನ್ನು ತಿಳಿದು ಮಾಯಾವಾದ ಎಂಬ ಹೆಸರಿನಿಂದ ಹೆದರಿದ್ದೇನೆ, ಹೊರತು ಮಾಯಾವಾದಮತವನ್ನು ಖಂಡಿಸಲು ಸಾಮರ್ಥ್ಯವಿಲ್ಲವೆಂದಾಗಲೀ, ಮಾಯಾವಾದಿ ಗಳಿಗಾಗಲಿ ಹೆದರಿದ್ದೇನೆಂದು ಅಭಿಪ್ರಾಯವಲ್ಲ.

**ಇನ್ನೊಂದು ರೀತಿಯಿಂದ ಮಧ್ವಮತದ ಉತ್ತಮತ್ವವನ್ನು ಸಮರ್ಥನೆ ಮಾಡುತ್ತಾರೆ. ಪರನ್ಯಾಯದಂತೆಯೇ ತತ್ವವಾದಕ್ಕೆ ಮಹತ್ತ್ವವಿದೆ ಎನ್ನುತ್ತಾರೆ.**

**ಪರಸ್ಮಾತ್ ಪೂರ್ವದೌರ್ಬಲ್ಯೇ ನಿಷೇಧಾದ್ವಿಧಿಬಾಧನೇ ।**
**ಯತೋ ಮಹಾಗ್ರಹಸ್ತೇಷಾಂ ಸರ್ವೇಷಾಂ ವಿದುಷಾಮಪಿ ॥ ೨೧ ॥**

**ತತ್ಪೂರ್ವಸರ್ವರಾದ್ಧಾಂತಸಿದ್ಧಾರ್ಥಾನಾಂ ನಿಷೇದ್ಧರಿ ।**
**ಪರೇ ಚ ತತ್ವವಾದೇಽಸ್ಮಿನ್ ಗರೀಯಸಿ ಭರೋ ಮಮ ॥ ೨೨ ॥**

**ಅರ್ಥ–** ಯತಃ = ಯಾವಕಾರಣದಿಂದ, ತೇಷಾಂ = ಅದ್ವೈತಿಗಳಿಗೆ, ಸರ್ವೇಷಾಂ ವಿದುಷಾಮಪಿ = ಮತ್ತು ಎಲ್ಲಾ ಭಾಟ್ಟಾದಿ ವಿದ್ವಾಂಸರಿಗೆ, ಪರಸ್ಮಾತ್ = ಅನಂತರಭಾವಿಯಾದ ವಿಕೃತ್ಯಾದಿಗಳ ದೆಸೆಯಿಂದ, ಪೂರ್ವಸ್ಯ = ಮೊದಲಿರುವ ಪ್ರಕೃತ್ಯಾದಿಗಳಿಗೆ, ದೌರ್ಬಲ್ಯೇ = ದುರ್ಬಲತ್ವವಿರುವ ವಿಷಯದಲ್ಲಿಯೂ ಮತ್ತು ನಿಷೇಧಾತ್ = ಪ್ರತಿಷೇಧರೂಪವಾಕ್ಯದಿಂದ, ವಿಧೇಃ = ವಿಽವಾಕ್ಯಕ್ಕೆ, ಬಾಧನೇ = ಬಾಧವಿರುವವಿಷಯದಲ್ಲಿಯೂ, ಮಹಾಗ್ರಹಃ = ಮಹಾಗ್ರವಿದೆಯೋ

ತತ್ = ಅದೇ ಕಾರಣದಿಂದ, ಪೂರ್ವಸರ್ವರಾದ್ಧಾಂತಸಿದ್ಧಾರ್ಥಾನಾಂ = ಹಿಂದಿನ ಎಲ್ಲಾ ಸಿದ್ಧಾಂತಗಳ ನಿಶ್ಚಿತ ಅಭಿಪ್ರಾಯವನ್ನು, ನಿಷೇದ್ಧರಿ = ಖಂಡಿಸುವ, ಅಸ್ಮಿನ್ = ಈ ಯಾವ, ಪರೇ= ಅನಂತರದ, ಗರೀಯತಿ= ಶ್ರೇಷ್ಠವಾದ, ತತ್ವವಾದೇ ಚ= ತತ್ವವಾದ ದಲ್ಲಿಯಾದರೋ, ಮಮ = ನನಗೆ, ಭರಃ = ಅತಿಯಾದ ವಿಶ್ವಾಸವು.

**ಅನುವಾದ–** ಮೊದಲಿನದ್ದನ್ನು ನಂತರದ್ದು ಬಾಧಿಸುತ್ತದೆ ಎಂಬ ಸಿದ್ಧಾಂತವನ್ನು ಮಾಯಾವಾದಿಗಳೂ ಒಪ್ಪಿದ್ದಾರೆ. ಮೀಮಾಂಸಕರೂ ಒಪ್ಪಿದ್ದಾರೆ. 'ನೇಹ ನಾನಾಸ್ತಿ' ಎಂಬ ಮಾಯಾವಾದಿಗಳು ಹೇಳುವ ಶ್ರುತಿಯು ಮೀಮಾಂಸಕರು ಹೇಳುವ ಜಗತ್ಸತ್ಯತ್ವಶ್ರುತಿಯನ್ನು ಖಂಡಿಸುತ್ತದೆ. ಪೌರ್ವಾಪರ್ಯಗಳಲ್ಲಿ ಪೂರ್ವವಾದದ್ದು ದುರ್ಬಲ ಎಂದು ಮೀಮಾಂಸಕರು ಒಪ್ಪಿದ್ದಾರೆ. ಒಪ್ಪಿದ್ದು ಮಾತ್ರವಲ್ಲ, ಮುಂದಿನದ್ದು ಹಿಂದಿನದ್ದಕ್ಕೆ ಬಾಧಕ ಎಂಬುದರಲ್ಲಿ ಈರ್ವ ಮತಾಚಾರ್ಯರಿಗೂ ವಿಪರೀತವಾದ ಆಗ್ರಹವಿದೆ. (ರಾಜರು ಹೇಳುತ್ತಾರೆ. ಈ ಆಗ್ರಹಕ್ಕೆ ನಾನು ಮನ್ನಣೆ ನೀಡುತ್ತೇನೆ.). ಇವರು ಹೇಳುವ ಕಾರಣವನ್ನೇ ಇಟ್ಟುಕೊಂಡರೆ ಪೂರ್ವ ಸಿದ್ಧಾಂತ ಮಾಯಾವಾದ ಸಿದ್ಧಾಂತ, ನಂತರದ ಸಿದ್ಧಾಂತ ತತ್ವವಾದ. ಈ ತತ್ವವಾದವು ಹಿಂದಿನ ಎಲ್ಲಾ ಸಿದ್ಧಾಂತಗಳನ್ನು ಖಂಡಿಸುತ್ತಿದೆ. ಆದ್ದರಿಂದ, ಅವರು ಒಪ್ಪಿದ ನ್ಯಾಯದಿಂದ ಮಾಯಾವಾದಾದಿಮತಗಳು ಖಂಡಿತವಾಗಿದ್ದಾವೆ. ಮಧ್ವಮತವನ್ನು ಬಾಧಿಸುವ ಮತ್ತೊಂದು ಮತ ಇಲ್ಲಿಯ ತನಕ ಬಂದಿಲ್ಲವಾದ್ದರಿಂದ ಮಧ್ವಮತದಲ್ಲಿ ನನಗೆ (ವಾದಿರಾಜರಿಗೆ) ಎಲ್ಲಿಲ್ಲದ ವಿಶ್ವಾಸ.

**ಭಾವವಿಲಾಸಿನೀ–** ರೀತ್ಯಂತರೇಣ ಮಧ್ವಮತಸ್ಯೋತ್ತಮತ್ವಂ ಸಾಧಯತಿ – **ಪರಸ್ಮಾದಿತಿ** ॥ ಪರಸ್ಮಾದ್ವಿಕೃತ್ಯಾದೇಃ ಪೂರ್ವಸ್ಯ ಪ್ರಕೃತ್ಯಾದೇರ್ದೌರ್ಬಲ್ಯ ಇತ್ಯರ್ಥಃ । ಪೌರ್ವಾಪರ್ಯೇ ಪೂರ್ವದೌರ್ಬಲ್ಯಂ ಪ್ರಕೃತಿವದಿತಿ ಸೂತ್ರಾತ್ । ನಿಷೇಧಾನ್ನಿಷೇಧರೂಪನಿರ್ಗುಣ ವಾಕ್ಯಾದ್ ವಿಧಿಬಾಧನೇ ವಿಧಾಯಕಸಗುಣಶ್ರುತಿಬಾಧನೇ ತೇಷಾಂ ಮಾಯಿನಾಂ ಸರ್ವೇಷಾಂ ವಿದುಷಾಂ ಭಟ್ಟಾದೀನಾಮಿತ್ಯರ್ಥಃ ॥ ೨೧ ॥

ವಾದಿದ್ವಯರೀತ್ಯಾ ಪ್ರಾಪ್ತಂ ಮಧ್ವಮತೋತ್ತಮತ್ವಂ ಸಂಕಲಯ್ಯಾಹ– **ತತ್ಪೂರ್ವೇತಿ** ॥ **ತತ್** ತಸ್ಮಾತ್ । ಪರೇ ಪಶ್ಚಾತ್ತನೇ ॥ ೨೨ ॥

**ವಿವರಣೆ–** 'ಪೌರ್ವಾಪರ್ಯೇ ಪೂರ್ವದೌರ್ಬಲ್ಯಂ ಪ್ರಕೃತಿವತ್' (ಜೈಮಿನಿಸೂತ್ರ 16-5-19) ಎಂಬ ಸೂತ್ರವಿದೆ. ಅಪ್ರಾಮಾಣ್ಯಜ್ಞಾನ ಅನಾಸ್ಕಂದಿತವಾದ ಎರಡು ಜ್ಞಾನಗಳಿಗೆ ಪೌರ್ವಾಪರ್ಯಗಳಿದ್ದಾಗ ಪರತ್ವಾತ್ ಪೂರ್ವವು ದುರ್ಬಲವಾಗುವುದು ಎಂದು ಸೂತ್ರಾರ್ಥ. ಪ್ರಕೃತಿಯಂತೆ ಎಂಬುದು ಪೂರ್ವೋಕ್ತನ್ಯಾಯದಲ್ಲಿ ದೃಷ್ಟಾಂತಸೂಚನೆ.

ಈ ನ್ಯಾಯದ ಸ್ವರೂಪದಲ್ಲಿ ಪೌರ್ವಾಪರ್ಯವು ಹೇಗೆ ಘಟಿತವಾಗಿದೆಯೋ ಅದರಂತೆ ಪೂರ್ವಾಪರವಾದ ಎರಡು ಜ್ಞಾನಗಳಿಗೆ ವಿರೋಧವೂ ಘಟಿತವಾಗಿದೆ. ಈ ಅಂಶವು 'ಪೂರ್ವದೌರ್ಬಲ್ಯಂ' ಎನ್ನುವ ಪದಪ್ರಯೋಗದಿಂದ ಪ್ರಾಪ್ತವಾಗುವುದು.

'ಪ್ರಕೃತಿವತ್' ಅನ್ನುವ ದೃಷ್ಟಾಂತದ ವಿವರಣೆ -ದರ್ಶಪೂರ್ಣಮಾಸಯಾಗವು ಪ್ರಕೃತಿ. ಈ ಪ್ರಕೃತಿಯಾಗದಲ್ಲಿ 'ಕೌಶಂ ಬರ್ಹಿಃ' ಎನ್ನುವ ವಿಧಿವಾಕ್ಯದಿಂದ ಬರ್ಹಿ ಕಾರ್ಯದಲ್ಲಿ ಕುಶವನ್ನು ವಿಧಾನಮಾಡಿದ್ದಾರೆ.

'ರೌದ್ರೀಂ ರೋಹಿಣೀಂ ಆಲಭೇತ ಅಭಿಚರನ್' ಅನ್ನುವ ವಾಕ್ಯದಿಂದ ವಿಹಿತವಾದ ಅಭಿಚಾರೇಷ್ಟಿಯು ದರ್ಶಪೂರ್ಣಮಾಸದ ವಿಕೃತಿಯಾಗವು. ಈ ವಿಕೃತಿಯಲ್ಲಿ 'ಶರಮಯಂ ಬರ್ಹಿಃ' ಅನ್ನುವ ವಾಕ್ಯದಿಂದ ಬರ್ಹಿಕಾರ್ಯದಲ್ಲಿ ಶರವನ್ನು ವಿಧಾನ ಮಾಡಿದ್ದಾರೆ. ತಥಾಚ ಅತಿದೇಶದಿಂದ ಪ್ರಾಪ್ತವಾದ ಪ್ರಾಕೃತವಾದ ಕುಶವು ವೈಕೃತವಾದ ಶರದಿಂದ ಬಾಧಿಸಲ್ಪಡುತ್ತದೆ. ಶರಕುಶಗಳನ್ನು ಒಂದೇ ಕಾರ್ಯವನ್ನು ಉದ್ದೇಶಿಸಿಕೊಂಡು ವಿಧಾನಮಾಡಿದ್ದರಿಂದ ವಿರೋಧ. ಮತ್ತು ಪೌರ್ವಾಪರ್ಯವು ಇರುವ ಪ್ರಯುಕ್ತ ವೈಕೃತವಾದ ಶರವು ಪರವಾದದ್ದರಿಂದ ಪೂರ್ವದಲ್ಲಿ ವಿಹಿತವಾದ ಕುಶವು ದುರ್ಬಲವಾಗುವುದು.

ಪ್ರಕೃತಿವತ್ ಅನ್ನುವುದಕ್ಕೆ 'ಪ್ರಾಕೃತಸ್ಯ ಯಥಾ' ಎಂಬುದಾಗಿ ಒಂದು ವಿಧವಾದ ಅರ್ಥವನ್ನು ಸಮನ್ವಯಗೊಳಿಸಿದ್ದಾಯಿತು. ಪ್ರಕೃತಿವತ್ ಅನ್ನುವುದಕ್ಕೆ 'ಪ್ರಕೃತೌ ಇವ' ಎಂಬುದಾಗಿಯೂ ಅರ್ಥವನ್ನು ಭಾಷ್ಯಾದಿ ಗ್ರಂಥದಲ್ಲಿ ನಿರೂಪಣೆ ಮಾಡಿದ್ದಾರೆ.

ಪ್ರಕೃತಿಭೂತವಾದ ಜ್ಯೋತಿಷ್ಟೋದಲ್ಲಿಯೇ ದ್ವಾದಶ ಶತದಕ್ಷಿಣೆಯು ಸರ್ವಸ್ವದಕ್ಷಿಣೆಯನ್ನು ಬಾಧಿಸುತ್ತದೆ.

ಪೂರ್ವೋಕ್ತವಾದ ಅಪಚ್ಛೇದ ನ್ಯಾಯವು 'ತತ್ತ್ವವಾದವು ಪರಮಸತ್ಯ' ಅನ್ನುವ ವಿಶ್ವಾದಲ್ಲಿ ಅನುಕೂಲವೇ ಹೊರತು ಪ್ರತಿಕೂಲವಲ್ಲ. ತಥಾಹಿ ಮಾಯಾವಾದದ ಅಭಿವ್ಯಕ್ತಿಯು ಮೊದಲಿಗೆ. ಅನಂತರದಲ್ಲಿ 'ತತ್ತ್ವವಾದದ ಅಭಿವ್ಯಕ್ತಿ'.

ಮಾಯಾವಾದಕ್ಕೂ ತತ್ತ್ವವಾದಕ್ಕೂ ಪರಸ್ಪರ ಆತ್ಮಾದಿವಿಷಯಗಳಲ್ಲಿ ವಿರೋಧವೂ ಇದೆ. ತಥಾಹಿ ಪರಮಾರ್ಥವಾದ ಆತ್ಮನು ಏಕ, ನಿರ್ಗುಣ ಎಂಬುದಾಗಿ ಮಾಯಾವಾದ. ಪರಮಾರ್ಥವಾದ ಆತ್ಮನು ಅನಂತ ಸಗುಣ ಎಂಬುದಾಗಿ ತತ್ತ್ವವಾದ. ಹೀಗಿರಲು ಆತ್ಮವಿಷಯದಲ್ಲಿ ಮಾಯಾವಾದವು ಪೂರ್ವವದ್ದಾಗಿದೆ. ತತ್ತ್ವವಾದವು ಪರದಲ್ಲಿ ಇರುವ ಪ್ರಯುಕ್ತ ವಿರೋಧ ಇರುವ ಪೂರ್ವಭೂತವಾದ ಅದ್ವೈತಸಿದ್ಧಾಂತ ದುರ್ಬಲ. ಆದ್ದರಿಂದ ಪರವಾದ ತತ್ತ್ವವಾದದಲ್ಲಿ ವಿಶ್ವಾಸಾಧಿಕ್ಯವು ಸಿದ್ಧವಾಗುವುದು.

ನಿಷೇಧಾತ್ ವಿಧಿಬಾಧನೇ ಅನ್ನುವ ವಾಕ್ಯಕ್ಕೆ ಈ ರೀತಿಯಾಗಿ ವಿವರಣೆ. ವಿಧಿವಾಕ್ಯದಿಂದ ಪ್ರಾಪ್ತವಾದ ಅರ್ಥವು ನಿಷೇಧವಾಕ್ಯದಿಂದ ಬಾಧಿಸಲ್ಪಟ್ಟಾಗ ವಿಧಿವಾಕ್ಯದಿಂದ ಪ್ರಾಪ್ತವಾದ ಅರ್ಥವು ದುರ್ಬಲವಾಗುವುದು. ಇಲ್ಲಿಯೂ ಪ್ರಬಲದುರ್ಬಲ ಭಾವದಲ್ಲಿ ವಿನಿಗಮಕವಾಗಿ ಅಪಚ್ಛೇದನ್ಯಾಯವೇ ಪ್ರವೃತ್ತವಾಗುವುದು.

ತಥಾಹಿ ದರ್ಶಪೂರ್ವಮಾಸಪ್ರಕರಣದಲ್ಲಿ ಆಜ್ಯಭಾಗೌ ಯಜತಿ ಎನ್ನುವ ವಿಧಿ ವಾಕ್ಯದಿಂದ ಆಜ್ಯಭಾಗವನ್ನು ವಿಧಾನ ಮಾಡಿದ್ದಾರೆ. ಆದರೆ ದರ್ಶಯಾಗದ

ವಿಕೃತಿಭೂತವಾದ ಪಶುಯಾಗದಲ್ಲಿರುವ 'ನ ತೌ ಪಶೌ ಕರೋತಿ' ಎಂಬ ನಿಷೇಧವಾಕ್ಯದಿಂದ ಆಜ್ಯಭಾಗವನ್ನು ನಿಷೇಧಮಾಡಿದ್ದಾರೆ. ನಿಷೇಧವು ಯಾವಾಗಲೂ ಪ್ರಾಪ್ತಿಸಾಪೇಕ್ಷವಾಗಿರುತ್ತದೆ. ತಥಾಚ ವಿಧಿವಾಕ್ಯದಿಂದ ಪ್ರಾಪ್ತವಾದ ಆಜ್ಯಭಾಗವನ್ನು ಉಪಜೀವಿಸಿ ನಿಷೇಧವಾಕ್ಯವು ನಿಷೇಧಮಾಡುತ್ತದೆ. ತಥಾಚ ವಿಧೇಯಕ್ಕೂ, ನಿಷೇಧ್ಯಕ್ಕೂ ಪರಸ್ಪರ ವಿರೋಧವಿದೆ. ಪೌರ್ವಾಪರ್ಯವಿದೆ. ಪರತ್ವಾತ್ ನಿಷೇಧವು ಪ್ರಬಲವಾದಂತೆ. ದ್ವೈತಸಿದ್ಧಾಂತದ ಪ್ರಮೇಯವೂ ಅಪಚ್ಛೇದನ್ಯಾಯಾನುಸಾರೇಣ ಪ್ರಬಲವಾಗುವುದು.

**ಈಗ ಮಧ್ವಮತದ ಉತ್ತಮತ್ವಕ್ಕೆ ಪೂರಕವಾದ 'ಬೌದ್ಧಜೈನಾಗಮೌ' ಎಂಬ ವಚನದಿಂದ ಆರಂಭಿಸಿ ಇಲ್ಲಿಯ ತನಕ ಹೇಳಿದ ಐದು ಕಾರಣಗಳನ್ನು ಸಂಗ್ರಹಿಸಿ ಹೇಳುತ್ತಿದ್ದಾರೆ–**

**ತತ್ಪರತ್ವಾನ್ನಿಷೇದ್ಧೃತ್ವಾದಂತೇ ಸಿದ್ಧೇಃ ಪ್ರಭುಸ್ತುತೇಃ ।**
**ನಾಮ್ನಾ ಚಾತ್ಯುಲ್ಲಸಂತ್ಯಾಸೀತ್ ವಲ್ಲೀ ತೇ ಯುಕ್ತಿಮಲ್ಲಿಕೇ ॥ ೨೩ ॥**

**ಅರ್ಥ–** ತತ್ = ಆ ಕಾರಣದಿಂದ, ಪರತ್ವಾತ್ = ಸರ್ವಸಿದ್ಧಾಂತಗಳ ನಂತರ ಬಂದ ಕಾರಣದಿಂದ, ನಿಷೇದ್ಧೃತ್ವಾತ್ = ಪರಮತಗಳನ್ನು ತಪ್ಪೆಂದು ನಿರಾಕರಿಸುವುದರಿಂದ, ಅಂತೇ ಸಿದ್ಧೇಃ = ಎಲ್ಲ ಮತಗಳ ನಂತರ ಸಿದ್ಧವಾದುದರಿಂದ, ಪ್ರಭುಸ್ತುತೇಃ = ಹರಿಯನ್ನು ಸ್ತುತಿಸುತ್ತಿದೆಯಾದುದರಿಂದಲೂ, ನಾಮ್ನಾ ಚ = 'ತತ್ವವಾದ' ಎಂದು ಜಗತ್ತಿಗೆ ಸತ್ಯತ್ವವನ್ನು ಹೇಳುವ ನಾಮದಿಂದಲೂ, ಯುಕ್ತಿಮಲ್ಲಿಕೇ = ಹೇ ಯುಕ್ತಿಮಲ್ಲಿಕೆಯೇ! ತೇ = ನಿನ್ನ, ವಲ್ಲೀ = ಬಳ್ಳಿಯು, ಉಲ್ಲಸಂತೀ = ಪರತ್ವಾದಿ ಹೇತುಪಂಚಕಗಳಿಂದ ಬಲಿಷ್ಠವಾಗಿ ಬೇರೂರಿ ಶೋಭಿಸುವಂತಹದ್ದು, ಆಸೀತ್ = ಆಯಿತು.

**ಅನುವಾದ–** ೧. ಎಲ್ಲಾ ಸಿದ್ಧಾಂತಗಳ ನಂತರ ಸಿದ್ಧವಾದ ಕಾರಣದಿಂದ, ೨. ಎಲ್ಲಾ ಸಿದ್ಧಾಂತಗಳನ್ನು ನಿರಾಕರಿಸುವ ಕಾರಣದಿಂದ, ೩. ಎಲ್ಲಾ ಆಗಮಗಳ ಪ್ರವೃತ್ತಿಯು ಕೊನೆಗೊಳ್ಳುತ್ತಿರಲು, ಮೂರು ಸಾಧಕ ಪ್ರಮಾಣಗಳ ಮೂಲಕ ನಿಷ್ಪನ್ನವಾದ ಮತವಾದುದರಿಂದ, ೪. ನಾರಾಯಣನ ಗುಣಪೂರ್ಣತ್ವವನ್ನು ವರ್ಣನೆ ಮಾಡುವ ಕಾರಣದಿಂದ, ೫. ಜಗತ್ಸತ್ಯತ್ವವನ್ನು ಹೇಳುವ 'ತತ್ವವಾದ' ಎಂಬ ನಾಮ ಇರುವ ಕಾರಣದಿಂದಲೂ, ಹೇ ಯುಕ್ತಿಮಲ್ಲಿಕೆಯೇ! ನಿನಗೆ ಆಶ್ರಯಭೂತವಾದ ಮಧ್ವಮತವೆಂಬ ಬಳ್ಳಿಯು ಐದು ಕಾರಣಗಳಿಂದ ಅತಿಶಯವಾಗಿ ಬಲವನ್ನು ಹೊಂದಿ ಶೋಭಿಸುತ್ತಿದೆ.

**ಭಾವವಿಲಾಸಿನೀ–** ಅಧುನಾ ಮಧ್ವಮತಸ್ಯೋತ್ತಮತ್ವೇ ಬೌದ್ಧಜೈನಾಗಮಾವಿತ್ಯಾದಿನೋಕ್ತಂ ಹೇತುಪಂಚಕಂ ಸಂಗೃಹ್ಣಾತಿ **– ತದಿತಿ ॥** ತತ್ತಸ್ಮಾತ್ ಪರತ್ವಾತ್ ಸರ್ವರಾದ್ಧಾಂತಪಶ್ಚಾತ್ತ-ನತ್ವಾತ್ । ನಿಷೇದ್ಧೃತ್ವಾತ್ ಸರ್ವರಾದ್ಧಾಂತ ನಿಷೇದ್ಧೃತ್ವಾತ್ । ಅಂತೇ ಸಿದ್ಧೇರಿತ್ಯನೇನ ಅಂತೇ ಸಿದ್ಧಸ್ಸಿದ್ಧಾಂತ ಇತಿ ಸಿದ್ಧಾಂತಪದಲಭ್ಯಾರ್ಥವತ್ತ್ವಾಂ ಮಧ್ವಮತೇ ದರ್ಶಯತಿ । ಪ್ರಭುಸ್ತುತೇಃ

ಪ್ರಭೋರ್ನಾರಾಯಣಸ್ಯ ಸಗುಣತ್ವಾದಿವರ್ಣನೇನ ಸ್ತುತಿರೂಪತ್ವಾದಿತ್ಯರ್ಥಃ । ನಾಮ್ನಾ ಚ ತತ್ತ್ವವಾದ ಇತಿ ಪ್ರಸಿದ್ಧನಾಮ್ನಾ ಚ । ಯುಕ್ತಿಮಲ್ಲಿಕಾಯಾಃ ಪುಷ್ಪತ್ವೇನ ತದುತ್ಪತ್ತಿಹೇತುಭೂತಾ ಮಧ್ವಮತಾಖ್ಯವಲ್ಲೀತ್ಯರ್ಥಃ । ಹೇ ಯುಕ್ತಿಮಲ್ಲಿಕೇ ತೇ ವಲ್ಲೀ ಪರತ್ವಾದೇರ್ಹೇತುಪಂಚಕಾ-ದತ್ಯುಲ್ಲಸಂತ್ಯಾಸೀದಿತಿ ಯುಕ್ತಿಮಲ್ಲಿಕಾಖ್ಯ ಗ್ರಂಥಂ ಪ್ರತಿ ಗ್ರಂಥಕರ್ತುರ್ವಚನಮ್ । (ತಚ್ಚ 'ಸ್ಥಾನಾದಸ್ಮಾತ್ ಸರಸನಿಚುಲಾದುತ್ಪತೋದಙ್ಮುಖಃ ಖಮ್' ಇತಿ ಕಾವ್ಯಕಾರಶೈಲೀಮನುಸೃತ್ಯೇತಿ ಜ್ಞಾತವ್ಯಮ್ । ಕಾಲಿದಾಸೇನ ಕೃತಮೇಘಸಂದೇಶಾಖ್ಯಗ್ರಂಥಂ ಪ್ರತಿ ವಚನಪರತಯಾಪಿ ತಟ್ಟೀಕಾಯಾಂ ವ್ಯಾಖ್ಯಾನಾತ್) (ಪ್ರಕ್ಷಿಪ್ತೋಽಯಂ ಗ್ರಂಥಃ)

**ವಿವರಣೆ–** 'ಹೇ ಯುಕ್ತಿಮಲ್ಲಿಕೇ! ತೇ ವಲ್ಲೀ ಪರತ್ವಾದೇಃ ಹೇತುಪಂಚಕಾತ್ ಅತ್ಯುಲ್ಲಸಂತೀ' ಎಂಬುದು ಗ್ರಂಥಕರ್ತೃಗಳು ಸ್ವಗ್ರಂಥವನ್ನು ಕುರಿತು ಹೇಳಿದ್ದು. (ಇದೊಂದು ಕಾವ್ಯಶೈಲಿ. ಮೇಘದೂತ ದಲ್ಲಿ ಕಾಳಿದಾಸನೂ ಹೀಗೆ ಹೇಳಿದ್ದಿದೆ. 'ಸ್ಥಾನಾದಸ್ಮಾತ್ಸರಸನಿಚುಲಾದುತ್ಪತೋದಙ್ಮುಖಃ ಖಂ' ಎಂಬ ಮಾತಿಗೆ ವ್ಯಾಖ್ಯಾನಕಾರನಾದ ಮಲ್ಲಿನಾಥನು ಗ್ರಂಥಪ್ರತಿವಚನಪರತಯಾಪಿ ವ್ಯಾಖ್ಯಾನ ಮಾಡಿದ್ದಾನೆ. 'ಮೇಘವೇ! ನೀನು ಇಲ್ಲಿಂದ ಉತ್ತರಾಭಿಮುಖವಾಗಿ ಆಕಾಶದ ಎತ್ತರಕ್ಕೆ ಹೋಗು!' ಎಂಬ ಅರ್ಥದ ಜೊತೆಗೆ 'ಗ್ರಂಥವೇ ನೀನು ಉನ್ನತ ಸ್ಥಾನವನ್ನು ಏರು' ಎಂಬ ಅಭಿಪ್ರಾಯವೂ ಇದೆ.)

(ಅಥವಾ ರಾಜರ ವ್ಯಾಖ್ಯಾನ ಶೈಲಿಯು ವೈದಿಕವಾದುದು. ವೇದದಲ್ಲಿ 'ನಿತ್ಯಯಾ ನಿತ್ಯಯಾ ಸ್ತೌಮಿ' ಎಂಬ ಮಾತಿನಂತೆ ಇದು ಎಂದು ತಿಳಿಯಬೇಕು.)

ನ ಸ್ನೇಹಾನ್ನಚ ವಿಸ್ನೇಹಾದ್ಯುಕ್ತ್ಯಾಕೃಷ್ಟೇನ ಕೇವಲಮ್ ।
ಯತಃ ಕೃತಾಽಸಿ ತತ್ತರ್ಕರಸಿಕಾನಾಂ ಮುದೇ ಭವ ॥ ೨೪ ॥

**ಅರ್ಥ–** ಹೇ ಯುಕ್ತಿಮಲ್ಲಿಕೆಯೇ !, ಯತಃ = ಯಾವ ಕಾರಣದಿಂದ ನೀನು, ಸ್ನೇಹಾತ್ = ನನ್ನ ಮತ ಎಂಬ ಸ್ನೇಹದಿಂದ, ನ ಕೃತಾಸಿ = ರಚಿಸಲ್ಪಟ್ಟಿರುವವಳಲ್ಲ. ವಿಸ್ನೇಹಾತ್ = ಪರಮತದ್ವೇಷ ದಿಂದಲೂ, ನ ಕೃತಾಸಿ = ರಚಿಸಲ್ಪಟ್ಟಿರುವವಳಲ್ಲ. ಕೇವಲಂ = ಕೇವಲ, ಯುಕ್ತ್ಯಾಕೃಷ್ಟೇನ = ಯುಕ್ತಿಯಿಂದ ಆಕರ್ಷಿತನಾದ (ಮಯಾ = ನನ್ನಿಂದ) ಕೃತಾಸಿ = ರಚಿಸಲ್ಪಟ್ಟವಳಾಗಿರುತ್ತೀಯೆ. ತತ್ = ಆ ಕಾರಣದಿಂದ, ತರ್ಕರಸಿಕಾನಾಂ = ಯುಕ್ತಿಯನ್ನು ಆಸ್ವಾದಿಸುವ ರಸಿಕರ, ಮುದೇ = ಸಂತೋಷಕ್ಕೆ, ಭವ = ಕಾರಣಳಾಗು.

**ಅನುವಾದ–** ರಾಜರು ತಮ್ಮ ಗ್ರಂಥಾಭಿಮಾನಿಯನ್ನೇ ಸಂಬೋಧಿಸಿ ಹೇಳುತ್ತಿದ್ದಾರೆ. 'ಹೇ ಯುಕ್ತಿಮಲ್ಲಿಕೆಯೇ ! ನಿನ್ನನ್ನು ಪೋಣಿಸುವ ನನಗೆ ಯಾರ ಬಗ್ಗೆಯೂ ಸಿಟ್ಟು ಮಮತೆಗಳಿಲ್ಲ. ಪರಮತದ್ವೇಷದಿಂದಾದಗಲೀ, ಸ್ವಮತಸ್ನೇಹದಿಂದಾಗಲೀ ನಿನ್ನನ್ನು ರಚಿಸಿಲ್ಲ. ಯುಕ್ತಿಗಳಿಗೆ ಆಕರ್ಷಿತನಾಗಿ ನಿನ್ನನ್ನು ರಚಿಸಿದ್ದೇನೆ. ಆದ ಕಾರಣ ಯುಕ್ತಿವಾದ-ಕುಶಲರಾದ ಸಜ್ಜನರ ಮನಸ್ಸಿಗೆಲ್ಲ ಸಂತೋಷದಾಯಕಳಾಗಿರು.

**ಭಾವವಿಲಾಸಿನೀ–** ಸ್ನೇಹಾತ್ ಸ್ವಮತಸ್ನೇಹಾತ್, ವಿಸ್ನೇಹಾತ್ ಪರಮತದ್ವೇಷಾದಿತ್ಯರ್ಥಃ । ಯುಕ್ತ್ಯಾಕೃಷ್ಟೇನ ಮಯೇತಿ ಶೇಷಃ । ಕೇವಲಂ ಯತಃ ಕೃತಾಸಿ ತತ್ ತತ ಇತಿ ಸಂಬಂಧಃ ॥೨೪॥

**ವಿವರಣೆ–** ಪದ್ಯದಲ್ಲಿ ರಾಜರು 'ನಚ ವಿಸ್ನೇಹಾತ್' ಇತರ ಮತಗಳ ದ್ವೇಷವಿಲ್ಲ ಎಂದು ಹೇಳಿದ್ದಾರೆ. 'ಅಂಧಂತಮಃ ಪ್ರವಿಶಂತಿ' ಮುಂತಾದ ವಚನಗಳಲ್ಲಿ 'ಅನ್ಯಥಾ ಉಪಾಸಕರ ನಿಂದನೆ ಕರ್ತವ್ಯ' ಎಂದು ಆಚಾರ್ಯರು ಹೇಳಿದ್ದಾರೆ. ಆದಕ್ಕೆ ಇದು ವಿರುದ್ಧವಾಯಿತಲ್ಲ ಎಂದರೆ ಪರಮತವನ್ನು ಆಗ್ರಹದಿಂದ ದ್ವೇಷಿಸಬಾರದು. ಯುಕ್ತಿಯುಕ್ತವಾದ ವಚನಗಳಿಂದ ನಿಂದಿಸಬೇಕು ಎಂಬುದು ಉಪನಿಷತ್ತಿನ ಅಭಿಪ್ರಾಯವೇ ಹೊರತು, ಕ್ರೋಧದ ವಿಕಾರವಾದ ಪ್ರದ್ವೇಷ ವರ್ಜ್ಯ. 'ನಚ ಸ್ನೇಹಾತ್' 'ಸ್ವಮತದಲ್ಲಿ ಪ್ರೀತಿಯಿಂದ ಅಲ್ಲ' ಎಂದಿದ್ದಾರಲ್ಲ? ಗ್ರಂಥರಚನೆಗೆ ಅಭಿಮಾನವು ಕಾರಣವಾದರೆ ಅದು ದೋಷ ಎಂಬ ಆಚಾರ್ಯರ ಮಾತನ್ನನುಸರಿಸಿ ರಾಜರು ಗ್ರಂಥರಚನೆಗೆ ಸದ್ಯುಕ್ತಿಗಳೇ ಮುಖ್ಯ ಕಾರಣ ಎಂದು ತಿಳಿಸಿದ್ದಾರೆ. ಅಂದರೆ ಸ್ವಮತದಲ್ಲಿಯೂ ದುರಾಗ್ರಹವಿಲ್ಲ.

ಈ ಗ್ರಂಥವು ಕೇವಲ ಯುಕ್ತಿಯಿಂದ ಮಾತ್ರ ಕೂಡಿದ್ದಲ್ಲ. ಕಿಂತು ಇದೊಂದು ಕಾವ್ಯ ಶಾಸ್ತ್ರವೂ ಆಗಿದೆ. ಕಾವ್ಯದಂತೆ ವರ್ಣ-ಅನುಪ್ರಾಸಾದಿ ರಸದಿಂದಲೂ ಕೂಡಿದೆ ಎಂದು ಮುಂದೆ ವರ್ಣಸುತ್ತಾರೆ –

> ಹೃದ್ಯಪದ್ಯರಸಸ್ನಿಗ್ಧಾಂ ಸದ್ಯೋ ಹೃದ್ರೋಚನೋದ್ಯತಾಮ್ ।
> ವಿದ್ಯಾಮದ್ಯಾನವದ್ಯಾಂ ಮೇ ಕೋ ದ್ವೇಷ್ಟ್ಯುದ್ಧತಪದ್ಧತಿಃ ॥ ೨೫ ॥

**ಅರ್ಥ–** ಹೃದ್ಯಪದ್ಯರಸಸ್ನಿಗ್ಧಾಂ = ಹೃದ್ಯ – ಮನಸ್ಸಿಗೆ ಸಂತೋಷವನ್ನುಂಟುಮಾಡುವ ಪದ್ಯ–ಪದ್ಯಗಳಿಂದಲೂ ರಸ–ಅಲಂಕಾರರಸಗಳಿಂದಲೂ ಸ್ನಿಗ್ಧಾಂ–ಮನೋಹರವಾದ, ಸದ್ಯಃ = ಕೂಡಲೇ, ಹೃದ್ರೋಚನೋದ್ಯತಾಮ್ = ಹೃದಯಾಹ್ಲಾದವನ್ನುಂಟು ಮಾಡುವುದರಲ್ಲಿ ಪ್ರವೃತ್ತವಾದ, ಅನವದ್ಯಾಂ = ನಿರ್ದುಷ್ಟವಾದ, ಮೇ = ನನ್ನ, ವಿದ್ಯಾಂ = ವಿದ್ಯೆಯನ್ನು, ಅದ್ಯ = ಈ ಸಮಯದಲ್ಲಿ, ಉದ್ಧತಪದ್ಧತಿಃ = ಉದ್ಧಟ ಸ್ವಭಾವದವನಾದ, ಕಃ = ಯಾವನು, ದ್ವೇಷ್ಟಿ = ದ್ವೇಷಿಸುತ್ತಾನೆ. ಅಥವಾ ಕೋ ದ್ವೇಷ್ಟಿ = ಯಾರು ದ್ವೇಷಿಸುತ್ತಾರೋ, ಅವನು, ಉದ್ಧತಪದ್ಧತಿಃ = ಉದ್ಧಟಸ್ವಭಾವದವನು.

**ಅನುವಾದ–** ನನ್ನ ಈ ಗ್ರಂಥವು ಮನಸ್ಸಿನಲ್ಲಿ ಚಿರಕಾಲ ನಿಲ್ಲುವಂತಹ ಪದ್ಯಗಳಿಂದ, ಅಲಂಕಾರ ರಸಗಳಿಂದ ಮನೋಹರವಾಗಿದೆ. ಓದಿದ ಮಾತ್ರಕ್ಕೆ ಹೃದಯಾಹ್ಲಾದವನ್ನುಂಟು ಮಾಡುವುದರಲ್ಲಿ ಸಮರ್ಥವಾಗಿದೆ. ಇಂತಹ ನಿರ್ದುಷ್ಟವಾದ ನನ್ನ ವಿದ್ಯೆಯನ್ನು ಇಂದು ದ್ವೇಷಿಸುವ ವ್ಯಕ್ತಿ ಯಾರಿದ್ದಾನೆ? ಉದ್ಧಟ ಸ್ವಭಾವವಿಲ್ಲದವನು ದ್ವೇಷ ಮಾಡದೆ ಗುಣದಿಂದ ಆಕರ್ಷಿತನಾಗುತ್ತಾನೆ. ಒಂದು ವೇಳೆ ದ್ವೇಷವನ್ನೇ ಮಾಡುತ್ತಾನೆಂದಾದರೆ ಅವನು ಉದ್ಧಟಸ್ವಭಾವದವನೆಂದರ್ಥ.

**ಭಾವವಿಲಾಸಿನೀ–** 'ಹೃದ್ಯಪದ್ಯರಸಸ್ನಿಗ್ಧಾಮ್' ಇತ್ಯನೇನ ನ ಕೇವಲಂ ಯುಕ್ತಿಯುಕ್ತತ್ವಮಸ್ಯ ಗ್ರಂಥಸ್ಯ, ಅಪಿ ತು ಕಾವ್ಯವದ್ ವರ್ಣಾನುಪ್ರಾಸಾದಿರಸಯುಕ್ತತ್ವಮಪ್ಯಸ್ತೀತ್ಯಾಹ ॥ ೨೫ ॥

ವಾದಿರಾಜರ ಗ್ರಂಥವು ಯುಕ್ತಿಯುಕ್ತವಾಗಿದ್ದರೂ ಮಾತ್ಸರ್ಯವುಳ್ಳ ಆಧುನಿಕ ಪಂಡಿತರು ಸ್ವೀಕರಿಸದಿದ್ದರೆ ಪ್ರಚಾರಕ್ಕೆ ಬಾರದಿರುವ ಸ್ಥಿತಿ ಉಂಟಾಗುತ್ತದಲ್ಲ? ಎಂದರೆ ಈ ಸಮಸ್ಯೆಯನ್ನು ಬೇರೊಂದು ಉಪಾಯವನ್ನು ಹೇಳಿ ಪರಿಹರಿಸುತ್ತಾರೆ –

ಅಧುನಾ ವಿಧುನಾ ರುದ್ಧಂ ಮಧು ನಾಸೀನ್ಮಧುವ್ರತ ।
ಉದಿತೇ ಮುದಿತೇಽಬ್ಜೇ ಸ್ಯಾದದಿತೇರ್ವಿದಿತೇ ಸುತೇ ॥ ೨೬ ॥

**ಅರ್ಥ–** ಮಧುವ್ರತ = ಎಲೈ ದುಂಬಿಯೇ, ಎಲೈ ಗ್ರಂಥಶ್ರವಣಾಧಿಕಾರಿಯೇ, ಅಧುನಾ = ಈಗ, ವಿಧುನಾ = ಕಳಂಕಿತ ಚಂದ್ರನಿಂದ, ಮತ್ಸರಕಳಂಕಿತ ವಿದ್ವಾಂಸನಿಂದ, ರುದ್ಧಂ = ತಡೆಯಲ್ಪಟ್ಟದ್ದಾಗಿ (ಕಮಲ ಪುಷ್ಪದ ಗ್ರಂಥದ), ಮಧು = ಜೇನುತುಪ್ಪವು, ಗ್ರಂಥದ ಅರ್ಥಜ್ಞಾನವು, ನಾಸೀತ್ = ದೊರೆತಿಲ್ಲ. ಅದಿತೇಃ = ಅದಿತಿದೇವಿಯ, ವಿದಿತೇ = ಪ್ರಸಿದ್ಧನಾದ, ಸುತೇ = ಮಗನು, 'ಆದಿತ್ಯ' ಎಂಬ ನಾಮ ದಿಂದ ಪ್ರಸಿದ್ಧನಾದ ಸೂರ್ಯನು, ನಿರ್ಮತ್ಸರರಸಗ್ರಾಹಿ ವಿದ್ವಾಂಸನು, ಉದಿತೇ ಸತಿ = ಉದಯಿಸುತ್ತಿರಲು, ಅಬ್ಜೇ = ಕಮಲವು, ಸಜ್ಜನರ ಹೃದಯಕಮಲವು, ಮುದಿತೇ ಸತಿ = ಅರಳುತ್ತಿರಲು, ಮಧು = ಜೇನು ತುಪ್ಪವು, ಗ್ರಂಥದ ಅರ್ಥಜ್ಞಾನವು, ಸ್ಯಾತ್ = ದೊರೆಯುತ್ತದೆ.

**ಅನುವಾದ–** ರಾತ್ರಿಯಲ್ಲಿ ಕಳಂಕ ಉಳ್ಳ ಚಂದ್ರನ ಉದಯವಾದಾಗ ಕಮಲ ಪುಷ್ಪಗಳೆಲ್ಲವೂ ಮುಚ್ಚಿಕೊಳ್ಳುತ್ತವೆ. ಇದರಿಂದ ದುಂಬಿಗಳಿಗೆ ಕಮಲದ ಮಕರಂದವನ್ನು ಆಸ್ವಾದಿಸಲಾಗುವುದಿಲ್ಲ. ಮರುದಿನ ಆದಿತ್ಯೋದಯ ಆದೊಡನೆ ಕಮಲವು ಅರಳುತ್ತದೆ. ದುಂಬಿಗೆ ಬೇಕಾದ ಮಕರಂದವು ದೊರೆಯುತ್ತದೆ. ಇದರಂತೆ ಈ ಕಾಲದಲ್ಲಿ ಮಾತ್ಸರ್ಯಾದಿಗಳಿಂದ ಕೂಡಿದ ಕೆಲವು ಪಂಡಿತರಿಂದ ದೂಷಿಸಲ್ಪಟ್ಟು ಈ ಗ್ರಂಥದ ಅರ್ಥಜ್ಞಾನವೆಂಬ ರಸವು ಭ್ರಮರದಂತಹ ಜಿಜ್ಞಾಸುರಸಿಕರಿಗೆ ದೊರೆಯದಿದ್ದರೂ ನಿರ್ಮತ್ಸರರಾದ ಯೋಗ್ಯ ಪಂಡಿತರು ಕಾಲಾಂತರದಲ್ಲಿ ಪ್ರಚಾರ ಪಡಿಸಿ ಎಲ್ಲ ಜಿಜ್ಞಾಸು ರಸಿಕರಿಗೆ ಈ ಗ್ರಂಥದ ಅರ್ಥಜ್ಞಾನವೆಂಬ ರಸವು ದೊರೆಯುವಂತೆ ಮಾಡುತ್ತಾರೆ.

**ಭಾವವಿಲಾಸಿನೀ–** ಸ್ವಗ್ರಂಥಸ್ಯ ಯುಕ್ತಿಯುಕ್ತತ್ವೇಽಪಿ ಮತ್ಸರಗ್ರಸ್ತೈರಾಧುನಿಕವಿದ್ವದ್ಭಿರಪರಿಗ್ರಹೇ ಪ್ರಚಯೋ ನ ಸ್ಯಾದಿತ್ಯತೋಽನ್ಯಾಪದೇಶೇನ ಪರಿಹರತಿ – **ಅಧುನೇತಿ** ॥ ವಿಧುಸ್ಥಾನೀಯೋ ಮತ್ಸರಗ್ರಸ್ತವಿದ್ವಾನ್, ವಿಧೋಃ ಕಲಂಕಿತ್ವಾತ್ । ಮಧುಸ್ಥಾನೀಯಮೇತದ್ ಗ್ರಂಥಾರ್ಥಜ್ಞಾನಮ್ । ಮಧುವ್ರತಸ್ಥಾನೀಯ ಏತದ್ಗ್ರಂಥಂ ಶ್ರೋತುಕಾಮಃ । ಅದಿತೇರ್ವಿದಿತೇ ಸುತೇ, ಆದಿತ್ಯ ಇತಿ ನಾಮ್ನಾ ಪ್ರಸಿದ್ಧೇ ಸೂರ್ಯೇ । ನಿರ್ಮತ್ಸರರಸಗ್ರಾಹಿ-

ವಿದ್ವತ್‌ಸ್ಥಾನೀಯೋಽಯಮ್। ಅಬ್ಜೇ ಮುದಿತೇ ಸತಿ, ಸ್ಯಾನ್ಮಧ್ವಿತಿ ಪೂರ್ವಾವೃತ್ತ್ಯಾ ಯೋಜ್ಯಮ್ । ಯದ್ಯಪಿ ರಾತ್ರೌ ವಿಧುನಾ ವಿಕಸನರೋಧಾತ್ ಪದ್ಮರಸಾಭಾವವ-ದಿದಾನೀಂತನಮತ್ಸರಗ್ರಸ್ತವಿದ್ವದ್ಭಿರಪರಿಗ್ರಹಾದರ್ಥ ಬೋಧಾಭಾವಃ, ತಥಾಪಿ ಸೂರ್ಯವತ್ ಕಸ್ಮಿಂಶ್ಚಿದ್ವಿದುಷಿ ಅರ್ಥಪ್ರದರ್ಶಕೇ ಸತಿ ಬೋಧಃ ಸ್ಯಾದಿತಿ ಭಾವಃ ॥ ೨೬ ॥

**ವಿವರಣೆ–** ಚಂದ್ರನ ಸ್ಥಾನದಲ್ಲಿ ಮಾತ್ಸರ್ಯವುಳ್ಳ ವಿದ್ವಾಂಸನನ್ನು ತಿಳಿಯಬೇಕು. ಚಂದ್ರನಲ್ಲಿನ ಕಳಂಕದಂತೆ ವಿದ್ವಾಂಸರಲ್ಲಿ ಮಾತ್ಸರ್ಯವಿದೆ. ಜೇನುತುಪ್ಪದ ಸ್ಥಾನದಲ್ಲಿ ಈ ಗ್ರಂಥದ ಯಥಾರ್ಥಜ್ಞಾನವನ್ನಿಟ್ಟುಕೊಳ್ಳಬೇಕು. ದುಂಬಿಯ ಸ್ಥಾನದಲ್ಲಿ ಈ ಗ್ರಂಥವನ್ನು ಶ್ರವಣ ಮಾಡಬೇಕೆಂಬ ಕಾಮನೆಯುಳ್ಳ ಜಿಜ್ಞಾಸುವನ್ನಿಟ್ಟುಕೊಳ್ಳಬೇಕು. ಆದಿತ್ಯನ ಸ್ಥಾನದಲ್ಲಿ ಮಾತ್ಸರ್ಯವಿಲ್ಲದ ರಸವನ್ನು ಗ್ರಹಿಸುವ ವಿದ್ವಾಂಸನನ್ನು ಇಟ್ಟುಕೊಳ್ಳಬೇಕು. ಮಧು ಎಂಬ ಶಬ್ದವನ್ನು ಒಂದು ಬಾರಿ ಆವೃತ್ತಿ ಮಾಡಿಕೊಳ್ಳಬೇಕು.

ವಾಸ್ತವಿಕವಾಗಿ ರಾತ್ರಿಯಲ್ಲಿ ಚಂದ್ರನ ಕಿರಣವು ಪುಷ್ಪ ಅರಳಲು ವಿಘ್ನ ಒಡ್ಡಿದ್ದರಿಂದ ಕಮಲದ ರಸವನ್ನು ದುಂಬಿಗೆ ಆಸ್ವಾದಿಸಲಾಗುವುದಿಲ್ಲ, ಹೊರತು ರಸವಿಲ್ಲವೆಂದಲ್ಲ. ಇದರಂತೆ ಇಂದಿನ ವಿದ್ವಾಂಸರಲ್ಲಿ ಮಾತ್ಸರ್ಯ ಎಂಬ ದೋಷವಿರುವುದರಿಂದ ಈ ಗ್ರಂಥವನ್ನು ಹೃತ್ಪೂರ್ವಕವಾಗಿ ಸ್ವಾಗತಿಸದೆ ಅರ್ಥ ತಿಳಿಯಲಾಗುತ್ತಿಲ್ಲ. ಹಾಗಿದ್ದರೂ ಕಳಂಕವಿಲ್ಲದ ಸೂರ್ಯನ ಉದಯವಾದಾಗ ಕಮಲವು ಅರಳಿ ದುಂಬಿಗೆ ರಸ ದೊರೆಯುವಂತೆ ಮಾತ್ಸರ್ಯವಿಲ್ಲದ ವಿದ್ವಾಂಸನಿಂದ ಇದರ ಅರ್ಥ ಬೆಳಕಿಗೆ ಬಂದರೆ ಜ್ಞಾನರಸವು ಶ್ರೋತೃವೃಂದಕ್ಕೆ ಖಂಡಿತ ದೊರೆಯುತ್ತದೆ ಎಂಬ ವಿಶ್ವಾಸ ನನಗಿದೆ ಎನ್ನುತ್ತಾರೆ ರಾಜರು.

ಜೈನಾದ್ಯಾಗಮಗಳಲ್ಲಿ ಆದರವುಳ್ಳ ದುರಾಗ್ರಹಗಳಿಂದ ಕೂಡಿದ ರಾಜರುಗಳೇ ಇದ್ದಾಗ ಸನ್ಮತಸ್ಥಾಪನೆಗೆ ಅವರು ಅಡ್ಡಿ ಪಡಿಸುತ್ತಾರಲ್ಲ ಎಂದರೆ ಅದಕ್ಕೆ ಉತ್ತರರೂಪವಾಗಿ ಅಂತಹ ರಾಜರಿಗೆ ಹೇಗೆ ಉತ್ತರಿಸಬೇಕು ಎಂದು ಮುಂದಿನ ಪದ್ಯದಲ್ಲಿ ಹೇಳುತ್ತಿದ್ದಾರೆ–

**ತಾರ್ಣೇ ವೌಕಸಿ ಪಾರ್ಣೇ ವಾ ತಾಪಸೋ ಭೂಪ ಸೋಽವಸತ್ ।**
**ತಿಥೌ ತೇಽತಿಥಿರೇತದ್ವದ್ವಿದ್ವಾನ್ ಕ್ವಾಗಣ್ಯಪುಣ್ಯದಃ ॥ ೨೭ ॥**

**ಅರ್ಥ–** ಭೂಪ = ದುರಾಗ್ರಹಗ್ರಸ್ತ ರಾಜನೇ !, ಸಃ ತಾಪಸಃ = ಈ ಗ್ರಂಥವನ್ನು ರಚಿಸಿದವನು, ಕೇಳುವ ಸಾಧಕನು, ತಾರ್ಣೇ = ತೃಣಮಯವಾದ, ಪಾರ್ಣೇ = ಪರ್ಣಮಯವಾದ, ಓಕಸಿ = ಮನೆಯಲ್ಲಿ, ಅವಸತ್ = ವಾಸಿಸಿದನು. ತೇ = ನಿನಗೆ, ತಿಥೌ = ಪುಣ್ಯತಿಥಿಯಲ್ಲಿ, ಏತದ್ವತ್ = ಈ ರೀತಿಯಾಗಿ, ಅಗಣ್ಯಪುಣ್ಯದಃ = ಲೆಕ್ಕಿಸಲಾಗದಷ್ಟು ಪುಣ್ಯವನ್ನು ನೀಡುವ, ವಿದ್ವಾನ್ = ವಿದ್ವಾಂಸನಾದ, ಅತಿಥಿಃ = ಅತಿಥಿಯು, ಕ್ವ = ಎಲ್ಲಿರುವನು? ವಿಚಾರ ಮಾಡು.

**ಅನುವಾದ–** ಜೈನಾಗಮಬದ್ಧಾದರನಾದ ರಾಜನೇ ! ನಿನ್ನ ಅರಮನೆಗೆ ಪುಣ್ಯತಿಥಿಯ ದಿವಸ ಒಬ್ಬ ಶ್ರೇಷ್ಠನಾದ ಅಗಣ್ಯ ಪುಣ್ಯರಾಶಿಯನ್ನೇ ನೀಡುವ ಅತಿಥಿಯು ಬಂದಾಗ ಸತ್ಕರಿಸುವುದು ನಿನ್ನ ಶ್ರೇಯಸ್ಸಿಗೇ ಕಾರಣ. ಒಂದು ವೇಳೆ ದುರಾಗ್ರಹದಿಂದ ಕೂಡಿದವನಾಗಿ ನೀನು ಆಹ್ವಾನಿಸಿ ಸತ್ಕರಿಸದಿದ್ದರೆ, ಅವನಿಗೆ ಯಾವ ಹಾನಿಯೂ ಆಗುವುದಿಲ್ಲ. ಆದರೆ ನಿನಗೆ ಪುಣ್ಯ ಕೊಡುವವರು ಇಲ್ಲದ ಕಾರಣದಿಂದ ಹಾನಿಯು ನಿನಗೇ ಉಂಟಾಗುತ್ತದೆ. ತಾಪಸನು ಎಲ್ಲಿ ಬೇಕಾದರೂ ವಾಸ ಮಾಡಿ ಸುಖ ಹೊಂದುತ್ತಾನೆ. ಹುಲ್ಲಿನ ಮನೆಯೂ ಆಗಬಹುದು. ಎಲೆಯ ಮನೆಯೂ ಆಗಬಹುದು. ಅವನು ನಿತ್ಯತೃಪ್ತ.

**ಭಾವವಿಲಾಸಿನೀ–** ಜೈನಾದ್ಯಾಗಮದುರಾಗ್ರಹಗ್ರಸ್ತರಾಜಪೀಡಾಯಾಂ ಸತ್ಯಾಂ ತಂ ಪ್ರತಿ ವಕ್ತವ್ಯಂ ಪದ್ಯಮಾಹ – **ತಾರ್ಣ ಇತಿ ॥** ತಾರ್ಣೇ ತೃಣಮಯೇ ಪಾರ್ಣೇ ಪರ್ಣಮಯೇ ಓಕಸಿ ಗೃಹೇ ತಾಪಸಃ ಏತದ್ಗ್ರಂಥಸ್ಯ ಕರ್ತಾ ಶ್ರೋತಾ ಚ । ಭೂಪೇತಿ ದುರಾಗ್ರಹಗ್ರಸ್ತಂ ರಾಜಾನಂ ಪ್ರತಿ ಸಂಬುದ್ಧಿಃ । ಅವಸದಾವಾಸಮಕರೋತ್ । ತಥಾಚ ತ್ವತ್ಪೀಡಯಾ ನ ಕಾಚಿತ್ತಸ್ಯ ಕ್ಷತಿರಿತಿ ಭಾವಃ । ಕಿಂತು ತವೈವೈತಾದೃಶಸ್ತಾಪಸೋ ದುರ್ಲಭ ಇತ್ಯಾಹ–**ತಿಥಾವಿತಿ ॥** ತಿಥೌ ಪುಣ್ಯತಿಥೌ । ಏತದ್ವದಗಣ್ಯಪುಣ್ಯದೋ ವಿದ್ವಾನತಿಥಿಃ ಕ್ವೇತಿ ಸಂಬಂಧಃ । ತಥಾಚ ತವೈವ ತದಪೇಕ್ಷೇತಿ ಭಾವಃ ॥ ೨೭ ॥

**ವಿವರಣೆ–** ಕುಂದು ಕೊರತೆಗಳೆಲ್ಲ ರಾಜನಿಗೆ ಹೊರತು ತಾಪಸನಿಗಿರುವುದಿಲ್ಲ. ತಾಪಸನನ್ನು ಸ್ವಾಗತಿಸದೆ ಅನರ್ಥಕ್ಕೀಡಾಗುವವನು ರಾಜನೇ ಹೊರತು ತಾಪಸನಲ್ಲ. ಇದರಂತೆ ಈ ಗ್ರಂಥವನ್ನು ಓದದೆ ತಿರಸ್ಕರಿಸಿದವನಿಗೆ ಸುಕೃತಹಾನಿಯೇ ಹೊರತು ಗ್ರಂಥಕಾರನಿಗೆ ಯಾವ ಕುಂದು ಕೊರತೆಗಳೂ ಬಾರವು.

ಪ್ರಸಿದ್ಧವಾದ ಕಥೆಯೊಂದನ್ನು ಈ ಶ್ಲೋಕದ ಹಿನ್ನೆಲೆಯಲ್ಲಿ ಸಮನ್ವಯ ಮಾಡಿರ ಬಹುದೆಂದೆನಿಸುತ್ತದೆ. ಜೈನಮತಾವಲಂಬಿಯಾದ (ಅರಸಪ್ಪ ನಾಯಕನು) ರಾಜನು ತನ್ನ ತಂದೆಯ ಪುಣ್ಯ ತಿಥಿಯಂದು ರಾಜರಿಗೆ ಆಹ್ವಾನ ನೀಡಿ, ನಂತರ ಇವರು ತನ್ನ ಸಿದ್ಧಾಂತ ವಿರೋಧಿ ಎಂದು ಬೇರೆ ಧರ್ಮಗುರುವನ್ನೇ ಸತ್ಕರಿಸುತ್ತಾನೆ. (ಕಾಲಾನಂತರದಲ್ಲಿ ರಾಜರಿಂದ ಪ್ರಭಾವಿತನಾಗುತ್ತಾನೆ.). ಇದಕ್ಕೆ ರಾಜರು ಹೇಳುವ ಮಾತಿದು. ಅನರ್ಥಪರಂಪರೆಯನ್ನೇ ಸುಡಬಲ್ಲವನಾದ ನನ್ನಂತಹ ಅತಿಥಿಯನ್ನು ಸ್ವಾಗತಿಸದಿದ್ದರೆ, ಇದರ ಅನರ್ಥ ಅತಿಥಿಯಾದ ನನಗೆ ಯತ್ಕಿಂಚಿತ್ತೂ ಸೋಂಕದು. ಹೊರತು, ಅವನೇ ಪುಣ್ಯಚ್ಯುತನಾಗುತ್ತಾನೆ. ನಾವು ಸನ್ಯಾಸಿಗಳು. ನಮಗೆ ಅರಮನೆಯ ರಾಜೋಪಚಾರ ಬೇಡ. ಎಲೆ-ಹುಲ್ಲಿನ ಗುಡಿಸಿಲಿನಲ್ಲಿಯೂ ಸುಖವಾಗಿ ಬದುಕಬಲ್ಲೆವು. ಇದನ್ನು ರಾಜ ಅರ್ಥೈಸಿಕೊಳ್ಳಲಿಲ್ಲ ಎನ್ನುತ್ತಾರೆ. ಈ ಪ್ರಸಂಗವನ್ನು ಗ್ರಂಥಕ್ಕೂ ಹೊಂದಿಕೆಯಾಗುವಂತೆ ಸಮನ್ವಯ ಮಾಡಿದ್ದಾರೆ ಎಂಬುದು ವಿದ್ವಾಂಸರ ಅಭಿಪ್ರಾಯ.

ಪಂಡಿತಾಭಾಸರಿಂದ ಮಾಡಲ್ಪಟ್ಟ ಆಭಾಸಗ್ರಂಥದಂತೆ ಈ ಯುಕ್ತಿಮಲ್ಲಿಕಾ ಗ್ರಂಥವಲ್ಲವೆಂದು ತಿಳಿಸಲು ಬೇರೊಂದು ದೃಷ್ಟಾಂತವನ್ನು ಹೇಳುತ್ತಿದ್ದಾರೆ –

**ತುಲಯಾ ಮಲಯಾದ್ರ್ಯುತ್ಥಚಂದನೇನೇಂಧನಂ ಖಲಃ ।**
**ಸಮಂ ಸಮಂತಾತ್ಕುರುತಾತ್ ಗ್ರಂಥೌ ಗಂಧಂ ಕರೋತಿ ಕಃ ॥ ೨೮ ॥**

**ಅರ್ಥ–** ಖಲಃ = ದುಷ್ಟನು, ಮಲಯಾದ್ರ್ಯುತ್ಥಚಂದನೇನ = ಮಲಯ ಪರ್ವತದಲ್ಲಿ ಹುಟ್ಟಿದ ಗಂಧದ ಮರದ ಜೊತೆಗೆ, ಇಂಧನಂ = ಸಾಮಾನ್ಯ ಕಟ್ಟಿಗೆಯನ್ನು, ತುಲಯಾ = ತಕ್ಕಡಿಯಲ್ಲಿ (ಒಂದು ಭಾಗದಲ್ಲಿ ಗಂಧದತುಂಡುಗಳನ್ನೂ, ಇನ್ನೊಂದು ಭಾಗದಲ್ಲಿ ಕಟ್ಟಿಗೆಗಳ ಒಂದು ಕಟ್ಟನ್ನೂ) ಇಟ್ಟು, ಸಮಂತಾತ್ = ಸರ್ವರೀತಿಯಲ್ಲಿ, ಸಮಂ ಕುರುತಾತ್= ಸಮಾನವಾಗಿ ಮಾಡಲಿ ! ಹಾಗಿದ್ದರೂ ಗ್ರಂಥೌ = ಸಾಮಾನ್ಯ ಕಟ್ಟಿಗೆಯ ಗಂಟಿನಲ್ಲಿ (ಚಂದನದ ಕಟ್ಟಿಗೆಯಂತೆ), ಗಂಧಂ = ಪರಿಮಳವನ್ನು, ಕಃ ಕರೋತಿ = ಯಾರು ಮಾಡುತ್ತಾರೆ?

**ಅನುವಾದ–** ಒಬ್ಬ ದುಷ್ಟನು ಮಲಯ ಪರ್ವತದಲ್ಲಿ ಹುಟ್ಟಿದ ದಿವ್ಯವಾದ ಗಂಧದ ತುಂಡಿಗೆ ಸರಿಯಾಗಿ ಒಂದು ಸಾಮಾನ್ಯ ಕಟ್ಟಿಗೆಯ ತುಂಡನ್ನು ತಂದು ಒಂದೇ ಭಾರವನ್ನಾಗಿಸಲು ತಕ್ಕಡಿಯ ಎರಡು ಭಾಗಗಳಲ್ಲಿಟ್ಟು ಸಮಾನವಾಗಿ ತೂಗುತ್ತಾನೆ. ಸಮಾನವಾಗಿ ತೂಗಿದ ಮಾತ್ರಕ್ಕೆ ಸಾಮಾನ್ಯ ಕಟ್ಟಿಗೆಯಲ್ಲಿ ಗಂಧದ ಕೊರಡಿನ ದಿವ್ಯ ಗಂಧವು ಉಂಟಾಗುವುದೇ? ಭಾರಸಾಮ್ಯವಿದ್ದರೂ ಗಂಧದ ಮೌಲ್ಯ ಕಟ್ಟಿಗೆಯ ತುಂಡಿಗೆ ಬರುವುದಿಲ್ಲ. ಕಟ್ಟಿಗೆಯಲ್ಲಿ ಗಂಧವನ್ನು ತುಂಬುವ ಸಾಮರ್ಥ್ಯ ಯಾರಿಗೂ ಇಲ್ಲ. ಅಂತೆಯೇ ಈ ಗ್ರಂಥಕ್ಕೆ ಸರಿಯಾಗಿ ಇನ್ನೊಂದು ಗ್ರಂಥವನ್ನು ಸರಿಹೋಲಿಸಿದರೂ ಇದರಲ್ಲಿರತಕ್ಕ ರಸಿಕಮನೋರಂಜಕಗಳಾದ ಯುಕ್ತಿಪುಂಜಗಳು ಇನ್ನಿತರ ಯಾವ ಗ್ರಂಥಗಳಲ್ಲೂ ಬರಲಾರವು.

**ಭಾವವಿಲಾಸಿನೀ–** ಆಭಾಸವಿದ್ವತ್ಕೃತಾಭಾಸಗ್ರಂಥಸಾಮ್ಯಂ ಸ್ವಗ್ರಂಥಸ್ಯ ಪರಿಹರ್ತುಮನ್ಯಾಪದೇಶಮಾಹ –**ತುಲಯೇತಿ** ॥ ಮಲಯಾದ್ಯುತ್ಥಚಂದನೇನ ಮಲಯಜೇನ ಚಂದನೇನೇತ್ಯರ್ಥಃ । ತೇನ ಸಹ ಯಃ ಕಶ್ಚಿತ್ಖಲಃ ಇಂಧನಂ ತುಲಾಭಾಗಯೋರ್ನಿಕ್ಷಿಪ್ಯ ಸಮಂತಾತ್ ಸಮಂ ಕುರುತಾನ್ನಾಮ, ತಥಾಪಿ ಚಂದನಗ್ರಂಥಾವಿವ ಗ್ರಂಥೌ ಇಂಧನಗ್ರಂಥೌ ಗಂಧಂ ಕಃ ಕರೋತಿ, ನ ಕೋಽಪೀತ್ಯನೇನ ಚಂದನೇಂಧನಯೋಸ್ಸಮತ್ವಾಭಾವವನ್ನಿರ್ಯುಕ್ತಿಕ ಸಯುಕ್ತಿಕಯೋರ್ಗ್ರಂಥಯೋರ್ನ ಸಾಮ್ಯಮಿತಿ ಭಾವಃ ॥ ೨೮ ॥

**ವಿವರಣೆ–** ಚಂದನ-ಇಂಧನಗಳಲ್ಲಿ ಎಂದಿಗೂ ಸಮತ್ವ ಬಾರದು. ಅಂತೆಯೇ ನಿರ್ಯುಕ್ತಿಕ ಗ್ರಂಥ-ಸಯುಕ್ತಿಕ ಗ್ರಂಥಗಳಿಗೂ ಸಾಮ್ಯ ಬಾರದು ಎಂದು ಭಾವ.

ಯುಕ್ತಿಮಲ್ಲಿಕಾ ಗ್ರಂಥವು ಯುಕ್ತಿಯಿಂದ ಕೂಡಿದ ಕಾರಣದಿಂದಾಗಿ ವಿದ್ವಾಂಸರಿಂದ ಗ್ರಾಹ್ಯವಾಗಿದೆ ಎಂದು ಹೇಳುತ್ತಾರೆ –

**ಸೂಕ್ತಿರತ್ನಸ್ವಭಾವಾಭಾ ಪೂಜ್ಯಾ ತ್ಯಾಜ್ಯಾ ನ ಕೋವಿದೈಃ ।**
**ಗುಣೇ ಮಣೇರ್ಹಿ ಮಾತ್ಸರ್ಯಂ ನಾರ್ಯೈಃ ಕಾರ್ಯಂ ಕದಾಚನ ॥೨೯॥**

**ಅರ್ಥ–** ಸೂಕ್ತಿರತ್ನಸ್ವಭಾವಾಭಾ = ಯುಕ್ತಿಯುಕ್ತ ವಚನಗಳೆಂಬ ರತ್ನಗಳ ಸ್ವಾಭಾವಿಕ ಕಾಂತಿಯಿಂದ ವಿರಾಜಿಸುವ ಈ ಗ್ರಂಥವು, ಕೋವಿದೈಃ = ಜ್ಞಾನಿಗಳಿಂದ, ಪೂಜ್ಯಾ = ಗೌರವಿಸಲ್ಪಡಬೇಕಾದುದು, ನ ತ್ಯಾಜ್ಯಾ = ತ್ಯಜಿಸುವಂತಹುದಲ್ಲ. ಮಣೇಃ = ಮಣಿಯ, ಗುಣೇ = ಪ್ರಕಾಶದಲ್ಲಿ, ಕದಾಚನ = ಎಂದಿಗೂ, ಆರ್ಯೈಃ = ಜ್ಞಾನಿಗಳಿಂದ, ಮಾತ್ಸರ್ಯಂ = ಹೊಟ್ಟೆಕಿಚ್ಚು, ನ ಕಾರ್ಯಂ ಹಿ = ಮಾಡಲ್ಪಡತಕ್ಕದ್ದಲ್ಲವಷ್ಟೇ!

**ಅನುವಾದ–** ಯುಕ್ತಿಯುಕ್ತವಾದ ವಚನಗಳೆಂಬ ರತ್ನಗಳ ಸ್ವಾಭಾವಿಕ ಕಾಂತಿಯಿಂದ ಕೂಡಿರುವ ಈ ಗ್ರಂಥವನ್ನು ಸಜ್ಜನರಾದ ವಿದ್ವಜ್ಜನರು ಖಂಡಿತವಾಗಿಯೂ ಆದರದಿಂದ ಸ್ವೀಕರಿಸುತ್ತಾರೆ. ತಿರಸ್ಕರಿಸುವುದಿಲ್ಲ. ರತ್ನಮಣಿಯ ಪ್ರಕಾಶದಲ್ಲಿ ಜ್ಞಾನಿಗಳು ಎಂದಿಗೂ ಮಾತ್ಸರ್ಯ ಪಡಲಾರರು.

**ಭಾವವಿಲಾಸಿನೀ–** ತಥಾಚ ಸಯುಕ್ತಿಕತ್ವಾದ್ಯುಕ್ತಿಮಲ್ಲಿಕಾ ವಿದುಷಾಂ ಗ್ರಾಹ್ಯೇತ್ಯಾಹ – **ಸೂಕ್ತೀತಿ** ॥ ಸೂಕ್ತಯ ಏವ ರತ್ನಾನಿ ತೇಷಾಂ ಸ್ವಭಾವಾಭಾ ಸ್ವಾಭಾವಿಕಕಾಂತಿರಿತ್ಯನೇನ ಬಲಾತ್ಕಾರಯುಕ್ತಿರ್ನಾಸ್ತೀತಿ ಸೂಚಯತಿ । ಪೂಜ್ಯಾ , ಕೋವಿದೈರ್ನ ತ್ಯಾಜ್ಯೇತ್ಯ-ತ್ರಾರ್ಥಾಂತರನ್ಯಾಸಂ ಕರೋತಿ – **ಗುಣ ಇತಿ** ॥ ಮಣೇರ್ಗುಣೇ ಪ್ರಕಾಶ ಇತ್ಯರ್ಥಃ । ಕದಾಚನ ಕದಾಪಿ ॥ ೨೯ ॥

**ವಿವರಣೆ–** ಸ್ವಭಾವಾಭಾ–'ಸ್ವಾಭಾವಿಕ ಕಾಂತಿ' ಎಂಬ ಮಾತಿನ ಮೂಲಕ ಬಲಾತ್ಕಾರದ ಯುಕ್ತಿಗಳು ಇಲ್ಲ ಎಂದು ಸೂಚಿಸಿದ್ದಾರೆ. ಪೂಜ್ಯವಾದದ್ದು ತ್ಯಾಜ್ಯವಲ್ಲ ಎಂಬಲ್ಲಿ ಅರ್ಥಾಂತರನ್ಯಾಸವನ್ನು ಹೇಳಿದ್ದಾರೆ. 'ಗುಣೇ ಮಣೇರ್ಹಿ' ಎಂದು.

'ಉಕ್ತಿರರ್ಥಾಂತರನ್ಯಾಸಃ ಸ್ಯಾತ್ ಸಾಮಾನ್ಯವಿಶೇಷಯೋಃ ।
ಹನೂಮಾನಗ್ನಿಮತರದ್ ದುಷ್ಕರಂ ಕಿಂ ಮಹಾತ್ಮನಾಮ್ ।'

ಇಲ್ಲಿ 'ಹನೂಮಾನಗ್ನಿಮತರತ್' ಎಂಬುದು ವಿಶೇಷ 'ದುಷ್ಕರಂ ಕಿಂ ಮಹಾತ್ಮನಾಮ್' ಎಂಬುದು ಸಾಮಾನ್ಯ-ಸಾಮಾನ್ಯ-ವಿಶೇಷಭಾವ ಇದ್ದಲ್ಲಿ ಅರ್ಥಾಂತರನ್ಯಾಸ ಅಲಂಕಾರ. 'ಮಾತ್ಸರ್ಯಂ ನಾರ್ಯೈಃ ಕಾರ್ಯಂ' ಎಂಬುದು ಸಾಮಾನ್ಯ. ಗುಣೇಮಣೇರ್ಹಿ ಎಂಬುದು ವಿಶೇಷ ರಾಜರು ಇಲ್ಲಿಂದ ಮೂರು ಪದ್ಯಗಳಲ್ಲಿ ಅರ್ಥಾಂತರನ್ಯಾಸ ಅಲಂಕಾರವನ್ನು ಬಳಸಿದ್ದಾರೆ.

ಇದು ಯುಕ್ತಿಸಹಿತವೇ ಹೊರತು, ರಸಸಹಿತವಲ್ಲ. ಆದ್ದರಿಂದ ಈ ವಿದ್ಯೆಯು ಮಾನ್ಯವಲ್ಲ ಎಂದರೆ ಉತ್ತರಿಸುತ್ತಾರೆ –

**ವಿದುಷೋಽವಿದುಷೋಽಪೀಷ್ಟಾ ಕಂ ಜನಂ ರಂಜಯೇನ್ನ ಗೀಃ ।**
**ಅಮರೈರ್ಭ್ರಮರೈಶ್ಚಾರ್ಥ್ಯಂ ಕುಸುಮಂ ಕೋಽಸುಮಾಂಸ್ತ್ಯಜೇತ್ ॥ ೩೦ ॥**

**ಅರ್ಥ–** ವಿದುಷಃ = ವಿದ್ವಜ್ಜನರಿಗೆ, ಅವಿದುಷಃ ಅಪಿ = ಅಪಂಡಿತರಿಗೂ, ಇಷ್ಟಾ ಗೀಃ = ಪ್ರಿಯವಾದ ಈ ವಾಣಿಯು, ಕಂ ಜನಂ = ಯಾವ ಮನುಷ್ಯನನ್ನು, ನ ರಂಜಯೇತ್ = ಸಂತೋಷಗೊಳಿಸುವುದಿಲ್ಲ? (ಎಲ್ಲರನ್ನೂ ಸಂತೋಷಗೊಳಿಸಿಯೇ ತೀರುವುದು). ಅಮರೈಃ = ದೇವತೆಗಳಿಂದಲೂ, ಭ್ರಮರೈಶ್ಚ = ದುಂಬಿಗಳಿಂದಲೂ, ಅರ್ಥ್ಯಂ = ಪ್ರಾರ್ಥಿತವಾದ, ಕುಸುಮಂ = ಪುಷ್ಪವನ್ನು, ಅಸುಮಾನ್ = ಪ್ರಾಣ ಉಳ್ಳ, ಕಃ = ಯಾವನು, ತ್ಯಜೇತ್ = ಬಿಟ್ಟಾನು?

**ಅನುವಾದ–** ಈ ಗ್ರಂಥದಲ್ಲಿ ಉತ್ತಮ ಯುಕ್ತಿಗಳು ಇರುವುದರಿಂದ ಪಂಡಿತರು ಮಾನ್ಯ ಮಾಡುತ್ತಾರೆ. ಅಲಂಕಾರಾದಿ ಕಾವ್ಯ ರಸಗಳಿಂದ ಕೂಡಿರುವ ಕಾರಣ ಸಾಮಾನ್ಯ ಜನರಿಗೂ ಇಷ್ಟವಾಗುತ್ತದೆ. ಹಾಗಾಗಿ, ಎಲ್ಲರನ್ನೂ ಸಂತೋಷ ಪಡಿಸುತ್ತದೆ. ಇದನ್ನು ಅರ್ಥಾಂತರನ್ಯಾಸ ಅಲಂಕಾರದಿಂದ ಸಮರ್ಥಿಸುತ್ತಾರೆ. ಒಂದು ಪುಷ್ಪವನ್ನು ದುಂಬಿಗಳೂ ದೇವತೆಗಳೂ ಬಯಸುತ್ತಾರೆಂದರೆ ಬದುಕಿರುವ ಯಾವ ಮನುಷ್ಯನು ಬಿಟ್ಟಾನು ?

**ಭಾವವಿಲಾಸಿನೀ–** ಯುಕ್ತಿಸಾಹಿತ್ಯೇನ ರಸಸಾಹಿತ್ಯೇನ ಚ ಮಾನ್ಯೇಯಂ ವಿದ್ಯೇತ್ಯಾಹ – ವಿದುಷ ಇತಿ ॥ ಯುಕ್ತಿಸಾಹಿತ್ಯಾದ್ವಿದುಷಃ ರಸಸಾಹಿತ್ಯಾದವಿದುಷೋಽಪೀಷ್ಟೇತ್ಯರ್ಥಃ । ಕಂ ಜನಂ ನ ರಂಜಯೇತ್ ? ಸರ್ವಮಪಿ ಜನಂ ರಂಜಯೇದೇವ । ಅಸ್ಮಿನ್ನರ್ಥೇಽರ್ಥಾಂತರನ್ಯಾಸಃ ॥ ಭ್ರಮರೈರಿತಿ ॥ ಅವಿದ್ವತ್ಸ್ಥಾನೀಯಾ ಭ್ರಮರಾಃ ವಿದ್ವತ್ಸ್ಥಾನೀಯಾ ಅಮರಾಃ ಕುಸುಮಸ್ಥಾನೀಯಾ ವಿದ್ಯೇತಿ ಜ್ಞಾತವ್ಯಮ್ ॥ ೩೦ ॥

**ವಿವರಣೆ–** ಯುಕ್ತಿಸಾಹಿತ್ಯವಿರುವುದರಿಂದ ವಿದ್ವಾಂಸರಿಗೆ ಇಷ್ಟ. ರಸಸಾಹಿತ್ಯವಿರುವುದರಿಂದ ಅವಿದ್ವಾಂಸರಿಗೂ ಇಷ್ಟ ಎಂದರ್ಥ. ಅವಿದ್ವತ್ ಸ್ಥಾನದಲ್ಲಿ ದುಂಬಿಗಳು, ವಿದ್ವತ್‌ಸ್ಥಾನೀಯರು ದೇವತೆಗಳು. ಕುಸುಮಸ್ಥಾನೀಯವಾದದ್ದು ವಿದ್ಯೆ ಎಂದು ತಿಳಿಯಬೇಕು.

ಈಗ ವಿದ್ವತ್ಪರಿಗ್ರಹ - ಅವಿದ್ವತ್ಪರಿಗ್ರಹಗಳಲ್ಲಿ ವಿದ್ವತ್ಪರಿಗ್ರಹಕ್ಕೇ ಮಹತ್ತ್ವವು. ಏಕೆಂದರೆ ವಿದ್ವಾಂಸರೇ ಮಾನ್ಯರಾದ ಕಾರಣದಿಂದ ಎಂಬ ಭಾವದಲ್ಲಿ ಈಪದ್ಯವು ಹೊರಟಿದೆ–

**ವಿದ್ಯಾಽವಿದ್ಯಾವಿಭಾಗಜ್ಞಃ ಕಿಮಜ್ಞಃ ಪ್ರಾಜ್ಞವದ್ಭವೇತ್ ।**
**ಅಂಧಸ್ಯೇಂದೂದಯೇಽಪ್ಯಾಂಧ್ಯಂ ಅಂಧಕಾರೋದಯೇಽಪಿ ಹಿ ॥ ೩೧ ॥**

**ಅರ್ಥ–** ಅಜ್ಞಃ= ದಡ್ಡನು, ಪ್ರಾಜ್ಞವತ್= ವಿದ್ವಾಂಸನಂತೆ, ವಿದ್ಯಾ= ಸದ್ವಿದ್ಯೆಯ, ಅವಿದ್ಯಾ= ಅಸದ್ವಿದ್ಯೆಯ, ವಿಭಾಗಜ್ಞಃ= ವಿಭಾಗವನ್ನು ತಿಳಿದವನು, ಭವೇತ್ ಕಿಂ= ಆಗುತ್ತಾನೇನು?, ಅಂಧಸ್ಯ = ಕುರುಡನಿಗೆ, ಇಂದೂದಯೇಽಪಿ = ಚಂದ್ರೋದಯ ವಾದಾಗಲು, ಆಂಧ್ಯಂ = ಕುರುಡತನವು, ಅಂಧಕಾರೋದಯೇಽಪಿ = ಕತ್ತಲಾದಾಗಲೂ ಕೂಡ, ಆಂಧ್ಯಂ ಹಿ = ಕುರುಡುತನವಷ್ಟೇ!

**ಅನುವಾದ–** ಚಂದ್ರೋದಯವಾಗಲೀ, ಕತ್ತಲೆಯಾಗಲೀ ಕುರುಡನ ಅಂಧತ್ವದಲ್ಲಿ ಯಾವ ಬದಲಾವಣೆಯೂ ಇರುವುದಿಲ್ಲ. ಪದಾರ್ಥದ ಅದರ್ಶನವು ಉಭಯತ್ರ ಸಮಾನ. ಹೀಗೆಯೇ ವಿದ್ಯೆ-ಅವಿದ್ಯೆಗಳ ವಿಭಾಗವನ್ನು ತಿಳಿಯದ ಜ್ಞಾನಾಂಧನು ಈ ಗ್ರಂಥದ ಯುಕ್ತಿಸ್ವಾರಸ್ಯವನ್ನು ಪ್ರಾಜ್ಞನಂತೆ ಗ್ರಹಿಸಲು ಅಸಮರ್ಥನಾಗುತ್ತಾನೆ ಎಂದು ಅರ್ಥಾಂತರನ್ಯಾಸ ಅಲಂಕಾರದಿಂದ ವರ್ಣಿಸಿದ್ದಾರೆ.

**ಭಾವವಿಲಾಸಿನೀ–** ಅಧುನಾ ವಿದ್ವದವಿದ್ವತ್ಪರಿಗ್ರಹಯೋರ್ವಿದ್ವತ್ಪರಿಗ್ರಹ ಏವ ಜ್ಯಾಯಾನ್, ವಿದುಷ ಏವ ಮಾನ್ಯತ್ವಾದಿತಿ ಭಾವೇನಾಹ – **ವಿದ್ಯೇತಿ** ॥ ವಿದ್ಯಾ ಸದ್ವಿದ್ಯಾ, ಅವಿದ್ಯಾ ತದ್ವಿರೋಧಿನೀ । ಏತದ್ವಿಭಾಗಂ ಜಾನಾತೀತಿ ಸ ತಥೋಕ್ತಃ । ಅಜ್ಞಃ ಪ್ರಾಜ್ಞವದ್ವಿದ್ಯಾಽವಿದ್ಯಾವಿಭಾಗಜ್ಞೋ ಭವೇತ್ಕಿಮಿತಿ ಸಂಬಂಧಃ । ತತ್ರಾರ್ಥಾಂತರಂ ನ್ಯಸ್ಯತಿ – **ಅಂಧಸ್ಯೇತಿ** ॥ ಯಥಾಂಧಸ್ಯೇಂದೂ-ದಯೇಽಪಿ ಪದಾರ್ಥಾದರ್ಶನಲಕ್ಷಣಮಾಂಧ್ಯಂ ತಥಾಂಧಕಾರೋ- ದಯೇಽಪ್ಯಾಂಧ್ಯಂ ದೃಷ್ಟಂ ಹಿ, ತದ್ವದಜ್ಞಸ್ಸರ್ವದಾಽಜ್ಞ ಏವೇತಿ ಭಾವಃ ॥ ೩೧ ॥

ಯುಕ್ತಿಯಲ್ಲಿ ಆಸಕ್ತನಾದ ಮನುಷ್ಯನು ಒಮ್ಮೆ ಈ ಗ್ರಂಥವನ್ನು ಅವಲೋಕಿಸಿ ಹೇಳಿದ ಅರ್ಥವನ್ನು ಪರಿಗ್ರಹಿಸಿದರೂ, ನಂತರ ಮರೆತರೆ ಅದು ದೋಷ ಎನ್ನುತ್ತಾರೆ –

ಗೃಹೀತಮರ್ಥಂ ಯಃ ಪಶ್ಚಾನ್ನ ಜಹಾತಿ ಸ ವೈ ಮಹಾನ್ ।
ತೃಣಗ್ರಾಹೀ ಮಣಿರ್ಮಾನ್ಯಃ ಪೌರ್ಣಮಾಸೀ ವಿಧುಶ್ಶಶೀ ॥ ೩೨ ॥

**ಅರ್ಥ–** ಯಃ = ಯಾರು, ಗೃಹೀತಮರ್ಥಂ = ಒಮ್ಮೆ ಗ್ರಹಣ ಮಾಡಿದ ಅರ್ಥವನ್ನು, ಪಶ್ಚಾತ್ = ನಂತರವೂ, ನ ಜಹಾತಿ = ಬಿಡುವುದಿಲ್ಲವೋ, ಸಃ = ಅವನೇ, ಮಹಾನ್ ವೈ = ದೊಡ್ಡವನಷ್ಟೇ. ತೃಣಗ್ರಾಹೀ = ತೃಣವನ್ನು ಗ್ರಹಿಸುವ, ಮಣಿಃ = ಮಣಿಯು, ಮಾನ್ಯಃ = ಆದರಣೀಯವು, ಪೌರ್ಣಮಾಸೀ = ಹುಣ್ಣಿಮೆಯ ಶಶೀ = ಶಶಯುಕ್ತನಾದ, ವಿಧುಃ = ಚಂದ್ರನು, ಮಾನ್ಯಃ = ಮಾನ್ಯನು.

**ಅನುವಾದ–** ರತ್ನಗಳಲ್ಲಿ ಹುಲ್ಲು ಕಡ್ಡಿಯನ್ನು ಹಿಡಿಯುವ ರತ್ನವು ಶ್ರೇಷ್ಠವಾದುದು. ಇದರಂತೆ ಹೇಳಿದ ಅರ್ಥವನ್ನು ಗ್ರಹಿಸುವವನು ಶ್ರೇಷ್ಠನು. ಹುಣ್ಣಿಮೆ ಚಂದ್ರನು ತನ್ನಲ್ಲಿರುವ ಶಶವನ್ನು (ಮೊಲದ ಚಿಹ್ನವನ್ನು) ಬಿಡದೆ ತಾನು ಬೆಳಗುತ್ತಾನೆ. ಹಿಡಿದದ್ದನ್ನು ಬಿಡದಿರುವುದು ಗುಣ. ಹಾಗೇ ಯಾವನು ಈ ಗ್ರಂಥದ ಅರ್ಥವನ್ನು ಸ್ವೀಕರಿಸಿ ಮರೆತು ಬಿಡುವುದಿಲ್ಲವೋ, ಅವನೇ ಉತ್ತಮನೆನಿಸುತ್ತಾನೆ.

**ಭಾವವಿಲಾಸಿನೀ–** ಇದಾನೀಂ ಯುಕ್ತಿಪಾರವಶ್ಯೇನ ಸಕೃದೇತದ್ಗ್ರಂಥಾರ್ಥಪರಿಗ್ರಹೇಽಪಿ ಪಶ್ಚಾದ್ವಿಸ್ಮರತೋ ದೋಷಮಾಹ – **ಗೃಹೀತಮಿತಿ** ॥ ಯೋ ಗೃಹೀತಮರ್ಥಂ ಪಶ್ಚಾನ್ನ ಜಹಾತಿ ನ ವಿಸ್ಮರತಿ, ಸ ಮಹಾನ್ ವಾ ಇತ್ಯತ್ರಾರ್ಥಾಂತರನ್ಯಾಸಃ ॥ **ತೃಣಗ್ರಾಹೀತಿ** ॥ 'ಪೌರ್ಣಮಾಸೀ-ವಿಧುಶ್ಶಶೀ' ಇತ್ಯನೇನ ಗೃಹೀತಶಶಾಪರಿತ್ಯಾಗಂ ವಿಧೋಃಸೂಚಯತಿ । ತಥಾಚ ಗೃಹೀತಾರ್ಥಾವಿಸ್ಮೃತ್ಯೈವ ಮಾನ್ಯ ಇತಿ ಭಾವಃ ॥ ೩೨ ॥

**ವಿವರಣೆ–** 'ತೃಣಗ್ರಾಹೀ ಮಣಿಃ' ಇದು ಸ್ವಲ್ಪ ಅರ್ಥವಾಗದ ಮಾತು. ರತ್ನಗಳ ಪರೀಕ್ಷೆಯಲ್ಲಿ ಯಾವುದು ನಿಜವಾದ ರತ್ನ ಎಂದು ಪರೀಕ್ಷಿಸಬೇಕಾದರೆ ರತ್ನವನ್ನು ಹಾಲಿನಲ್ಲಿ ಹಾಕಿ ತೆಗೆದು, ಅದನ್ನು ತೃಣದಲ್ಲಿ ಇಡುತ್ತಾರೆ. ಯಾವ ರತ್ನವು ತೃಣವನ್ನು ಹಿಡಿದುಕೊಳ್ಳುವುದೇ, ಅದು ನಿಜವಾದ ರತ್ನ. ಯಾವುದು ತೃಣವನ್ನು ಹಿಡಿಯುವುದಿಲ್ಲವೋ, ಅದು ನಿಜವಾದದ್ದಲ್ಲ. ಇದು ಪಚ್ಚೆ ಮಣಿಯನ್ನು ಪರೀಕ್ಷಿಸುವ ಪದ್ಧತಿ ಎಂದು ವಿದ್ವಾಂಸರ ಅಭಿಪ್ರಾಯ.

ಪ್ರಕೃತ ಶಿಷ್ಯರ ಮನಸ್ಸಮಾಧಾನಕ್ಕೋಸ್ಕರ ಸಮಯಪಾದದಲ್ಲಿ ಹೇಳಿದ ಪರಮತನಿರಾಕರಣೆಯನ್ನು ಮೊದಲು ಪ್ರಸ್ತಾಪಿಸುತ್ತಾರೆ. ಪುನಃ ಸಮನ್ವಯಾಧ್ಯಾಯದಲ್ಲಿ ಪ್ರತಿಪಾದ್ಯವಾದ ಸರ್ವಗುಣ ಪೂರ್ಣತ್ವವನ್ನು ಗುಣಸೌರಭದಲ್ಲಿ ಸಮಗ್ರವಾಗಿ ಮನಸ್ಸಿಗೆ ಹಿಡಿಸುವಂತೆ ನಿರೂಪಿಸುತ್ತಾರೆ.

ಅನಂತರ ಅವಿರೋಧಾಧ್ಯಾಯದಲ್ಲಿ ಪ್ರಸ್ತುತವಾದ ಭಗವಂತನ ನಿರ್ದೋಷತ್ವವನ್ನು ಶುದ್ಧಿಸೌರಭದಲ್ಲಿ ಸಮಗ್ರವಾಗಿ ಮನಸ್ಸಿಗೆ ಮುದ ಸಿಗುವಂತೆ ವರ್ಣಿಸುತ್ತಾರೆ.

ಪುನಃ ಮೂರುನಾಲ್ಕನೆಯ ಅಧ್ಯಾಯಗಳಲ್ಲಿ ಪ್ರತಿ ಸೂತ್ರದಲ್ಲಿ ಪ್ರತಿಪಾದಿತವಾದ ಜೀವೇಶ್ವರ ಭೇದವನ್ನು ಭೇದಸೌರಭದಲ್ಲಿ ಸಮಗ್ರವಾಗಿ ಪ್ರತಿಪಾದಿಸುತ್ತಾರೆ.

ಅನಂತರ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಪ್ರತಿಪಾದಿತವಾದ ಜಗಜ್ಜನ್ಮಾದಿಕಾರಣತ್ವಲಕ್ಷಣವನ್ನು ಪರಿರಕ್ಷಿಸಲು ಸಮಗ್ರವಿಶ್ವಸೌರಭದಲ್ಲಿ ಜಗತ್ತಿನ ಸತ್ಯತ್ವವನ್ನು ಸಂಸ್ಥಾಪನೆ ಮಾಡುತ್ತಾರೆ.

ನಂತರ ಸಾಧನಾಧ್ಯಾಯ-ಫಲಾಧ್ಯಾಯಪ್ರತಿಪಾದ್ಯವಾದ ಸಾಧನ ಮತ್ತು ಫಲ ಇವುಗಳನ್ನು ಸಮಗ್ರಫಲಸೌರಭದಲ್ಲಿ ಸಂಗ್ರಹಿಸಿದ್ದಾರೆ.

ಪ್ರಕೃತ, 'ಪ್ರಮಾಣಾಧೀನಾ ಪ್ರಮೇಯಸಿದ್ಧಿಃ' ಎಂಬ ನ್ಯಾಯದಿಂದ ಐದು ಸೌರಭಗಳಲ್ಲಿ ಹೇಳಿದ ಪ್ರಮೇಯಗಳಿಗೂ ಪ್ರಮಾಣದ ಅಪೇಕ್ಷೆ ಇರುವುದರಿಂದ, ಪ್ರಮಾಣಗಳಲ್ಲಿಯಾದರೂ ಪ್ರಾಬಲ್ಯವು ಆಗಮಕ್ಕೇ ಇರುವುದರಿಂದ 'ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್' ಎಂಬ ಪ್ರಮಾಣಾನುಸಾರ ಅಲೌಕಿಕವಾದ ಅರ್ಥದಲ್ಲಿ ಪ್ರಬಲ ಪ್ರಮಾಣವಾದುದು ವೇದವು. ಈ ವೇದಕ್ಕೆ 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಬ್ರಹ್ಮಸೂತ್ರದಲ್ಲಿ ನಿತ್ಯತ್ವವನ್ನು ಸಮರ್ಥಿಸಿದ್ದಾರೆ. ವೇದಗಳು ಸ್ವತಃ ಪ್ರಮಾಣವಾದವುಗಳು. ಇದನ್ನು ಸಮರ್ಥಿಸಲು ವೇದಗಳಿಗೆ ಅಪೌರುಷೇಯತ್ವವನ್ನು ಸಾಧಿಸಬೇಕು. ಅದಕ್ಕಾಗಿ ವೇದಾಪೌರುಷೇಯತ್ವವನ್ನು ಸಾಧಿಸಲು ರಾಜರು ಉಪಕ್ರಮಿಸುತ್ತಾರೆ. ವೇದಾಪೌರುಷೇಯತ್ವವಾದ –

ಗೃಹ್ಣೀಯಾತ್ತಿಂತ್ರಿಣೀಶಾಖಾಂ ಶಿಗ್ರುಶಾಖಾಗ್ರಹೇಣ ಕಿಮ್ ।
ಜಗೃಹುಸ್ತದ್ವಿದೋ ವೇದಂ ವಾದಿವಾಕ್ಯಾನ್ಯಕೋವಿದಾಃ ॥ ೩೩ ॥

**ಅರ್ಥ–** ತಿಂತ್ರಿಣೀಶಾಖಾಂ = ಹುಣಸೇಮರದ ರೆಂಬೆಯನ್ನು ಗೃಹ್ಣೀಯಾತ್ = ಹಿಡಿದುಕೊಳ್ಳಬೇಕು (ಆಶ್ರಯಿಸಬೇಕು). ಶಿಗ್ರುಶಾಖಾಗ್ರಹೇಣ = ನುಗ್ಗೇ ಮರದ ಕೊಂಬೆಯನ್ನು ಆಶ್ರಯಿಸುವುದರಿಂದ, ಕಿಂ = ಏನು ಪ್ರಯೋಜನ? ತದ್ವಿದಃ = ಗ್ರಹಣಾಗ್ರಹಣವನ್ನು ತಿಳಿದ ಜ್ಞಾನಿಗಳು, ವೇದಂ (ಏವ) = ವೇದವನ್ನೇ, ಜಗೃಹುಃ = ಹಿಡಿದರು. ಅಕೋವಿದಾಃ = ಇದನ್ನರಿಯದ ಜೈನಾದಿಗಳು, ವಾದಿವಾಕ್ಯಾನಿ = ಆಯಾ ಮತಾಚಾರ್ಯರ ವಾಕ್ಯಗಳನ್ನು, ಜಗೃಹುಃ = ಹಿಡಿದರು (ಆಶ್ರಯಿಸಿದರು).

**ಅನುವಾದ–** ಮೇಲಿಂದ ಜಾರಿ ಬೀಳುವವನಿಗೆ, ಅಥವಾ ನೀರಿನ ಪ್ರವಾಹದಲ್ಲಿದ್ದವನಿಗೆ ಆಶ್ರಯ ಬೇಕು. ಆಶ್ರಯ ಬಯಸಿದಾಗ ಒಂದು ಹುಣಸೆಮರ-ನುಗ್ಗೇಮರ ಎರಡು ಕಾಣುತ್ತವೆ ಎಂದಿಟ್ಟುಕೊಳ್ಳಿ. ಜಾಣನಾದವ ಟೊಳ್ಳಾದ ನುಗ್ಗೇ ಗಿಡದ ಟೊಂಗೆಯನ್ನಾಶ್ರಯಿಸದೆ ಹುಣಸೇಮರದ ಗೆಲ್ಲನ್ನೇ ಆಶ್ರಯಿಸುತ್ತಾನೆ. ಇದರಂತೆ ಸಂಸಾರಪ್ರವಾಹದಲ್ಲಿ ಸಿಲುಕಿ ಉದ್ಧಾರದ ಮಾರ್ಗವನ್ನು ಅರಸುವ ನಮಗೆ ಹುಣಸೇ ಮರದಂತಹ ದೃಢವಾದ ಗುರಿಯುಳ್ಳ ವೇದಗಳು ಕೈಬೀಸಿ ಕರೆಯುತ್ತಿವೆ. ಜೊತೆಗೆ ದುರ್ಬಲವಾದ ಇತರ ಮತಗಳೂ ನುಗ್ಗೇ ಮರದಂತೆ ತೋರುತ್ತಿವೆ. ಇಂತಹ ವಿಷಮಸ್ಥಿತಿಯಲ್ಲಿ ಜಾಣನಾದವನು ವೇದವನ್ನೇ ಆಶ್ರಯಿಸುತ್ತಾನೆ. ದಡ್ಡನಾದವ ಹುಣಸೇ ಮರದ ಗೆಲ್ಲಿಗಿಂತಲೂ ಕೆಳಗೆ ಸಿಗುವ ಗೆಲ್ಲು ಎಂದು ನುಗ್ಗೇ ಮರವನ್ನು ಆಶ್ರಯಿಸಿದಂತೆ ಸುಲಭದಂತೆ ಕಾಣುವ ಇತರ ಮತಗಳನ್ನೇ ಆಶ್ರಯಿಸುತ್ತಾನೆ.

**ಭಾವವಿಲಾಸಿನೀ–** ಅಧುನಾ ಶಿಷ್ಯಮನಸ್ಸಮಾಧಾನಾಯ ಪರಮತನಿರಾಕರಣಾತ್ಮಕಸಮಯ ಪಾದೋಕ್ತಮಪಿ ಸಮಯನಿರಾಕರಣಂ ಪ್ರಾಕ್ ಪ್ರಸ್ತಾವ್ಯ ಪುನಃ ಸಮನ್ವಯಾಧ್ಯಾಯಪ್ರತಿಪಾದ್ಯಂ ಸರ್ವಗುಣಪೂರ್ಣತ್ವಂ ಗುಣಸೌರಭಸರ್ವಸ್ವೇನ ಮನಃಪ್ರಿಯಂ ಕುರ್ವನ್ ತದನಂತರಮವಿರೋಧಾಧ್ಯಾಯಪ್ರತಿಪಾದ್ಯಂ ನಿರ್ದೋಷತ್ವಂ ಶುದ್ಧಿಸೌರಭಸರ್ವಸ್ವೇನ ರಂಜಯನ್ ಪುನರೇತದಧ್ಯಾಯದ್ವಯೇಽಪಿ ಸೂತ್ರೇ ಸೂತ್ರೇ ಪ್ರತಿಪಾದಿತಂ ಜೀವೇಶ್ವರಭೇದಂ ಭೇದಸೌರಭಸರ್ವಸ್ವೇನ ಪ್ರತಿಪಾದಯನ್, ತದನು 'ಜನ್ಮಾದ್ಯಸ್ಯ ಯತ' ಇತಿ ಇತಿ ಸೂತ್ರಪ್ರತಿ ಪಾದಿತಜಗಜ್ಜನ್ಮಾದಿಕಾರಣತ್ವ ಲಕ್ಷಣಪರಿರಕ್ಷಣಾಯ ವಿಶ್ವಸೌರಭಸರ್ವಸ್ವೇನ ಜಗತಸ್ಸತ್ಯತಾ ಸಂಸ್ಥಾಪಯನ್ ಪುನಸ್ಸಾಧನಫಲಾಧ್ಯಾಯಪ್ರತಿಪಾದ್ಯಂ ಸಾಧನಂ ಫಲಂ ಚ ಫಲಸೌರಭಸರ್ವಸ್ವೇನ ಸಂಗೃಹ್ಣನ್ ಪ್ರಮಾಣಸಾಪೇಕ್ಷತ್ವಾತ್ ಪ್ರಮಾಣೇಷು ಚ ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮಿತಿ ವಚನಾದಲೌಕಿಕೇಽರ್ಥೇ ಪ್ರಬಲಪ್ರಮಾಣಭೂತವೇದಸ್ಯ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾದ್ ಇತಿ ಸೂತ್ರೇ ನಿತ್ಯತಯಾ ಪ್ರತಿಪಾದಿತಂ ಸ್ವತಃಪ್ರಾಮಾಣ್ಯಂ ಸಮರ್ಥಯಿತುಂ ವೇದಾಪೌರುಷೇಯತಾಂ ತಾವದಾದೌ ಸಾಧಯಿತುಮುಪಕ್ರಮತೇ **ಗೃಹ್ಣೀಯಾದಿತಿ** ॥ ಸೂತ್ರಕೃತ್ತು ನಿಶ್ಚಿತವೇದ-

ಪ್ರಾಮಾಣ್ಯಾನ್ ಬ್ರಹ್ಮಾದೀನ್ ಸ್ವಶಿಷ್ಯಾನ್ ಪ್ರತಿ ನೇದಮಾದಾವಸಾಧಯತ್ । ಪರನಿರಾಕರಣಪ್ರಸ್ತಾವೇ ಪ್ರಾಸ್ತಾವಯಚ್ಚ । ಅಯಂ ತು ಗ್ರಂಥಕೃದ್ಬಾಷ್ಯದಿಶಾ ಮಂದೋಪಕಾರಾಯ ಪ್ರವೃತ್ತಸ್ತದೇವಾದೌ ಸಾಧಯತೀತಿ ಹೃದಯಮ್ । ತತ್ತಸ್ಮಾದ್ದೃಢಾದೃಢಯೋರ್ಮಧ್ಯೇ ದೃಢಸ್ಯೈವ ಗ್ರಾಹ್ಯತ್ವಾತ್ । ವಿದೋ ಜ್ಞಾನಿನಃ ವೇದಂ ವೇದಮೇವ ಜಗೃಹುರಿತಿ ಸಂಬಂಧಃ। ವಾದಿವಾಕ್ಯಾನಿ ತತ್ತದಾಚಾರ್ಯವಾಕ್ಯಾನಿ । ಅಕೋವಿದಾಃ ಜೈನಾದಯಃ ॥ ೩೩ ॥

**ವಿವರಣೆ–** ಸೂತ್ರಕಾರರಾದ ವೇದವ್ಯಾಸರು ಬ್ರಹ್ಮಸೂತ್ರದ ಆರಂಭದಲ್ಲಿ ವೇದಪ್ರಾಮಾಣ್ಯವನ್ನು ಸಾಧಿಸಲಿಲ್ಲ. ಏಕೆಂದರೆ ವ್ಯಾಸರ ಶಿಷ್ಯರಾದ ಬ್ರಹ್ಮಾದಿಗಳಿಗೆ, ಜೈಮಿನ್ಯಾದಿಗಳಿಗೆ ವೇದ-ಪ್ರಾಮಾಣ್ಯವು ನಿಶ್ಚಿತ. ಆದ್ದರಿಂದ ತಮ್ಮ ಶಿಷ್ಯರಿಗೆ ಅಗತ್ಯವಿಲ್ಲವೆಂದು ಪರಮತನಿರಾಕರಣೆಯ ಪ್ರಸಂಗದಲ್ಲಿ ವೇದಪ್ರಾಮಾಣ್ಯದ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ರಾಜರಾದರೂ ದಡ್ಡರಿಗೆ ಉಪಕಾರವಾಗಲಿ ಎಂದು ಶ್ರೀಮದಾಚಾರ್ಯರಂತೆ ತಿಳಿಸಲು ಹೊರಟವರಾದ್ದರಿಂದ ಆರಂಭದಲ್ಲಿಯೇ ವೇದಪ್ರಾಮಾಣ್ಯವನ್ನು ಸಾಧಿಸುತ್ತಿದ್ದಾರೆ ಎಂದು ತಿಳಿಯಬೇಕು.

(ರಾಜರು ಇಲ್ಲಿ ಇತರ ಮತಗಳನ್ನು ನುಗ್ಗೇಮರಕ್ಕೆ ಮಧ್ವಮತವನ್ನು ಹುಣಸೇಮರಕ್ಕೆ ಹೋಲಿಸಿದ್ದಾರೆ. ನುಗ್ಗೇಮರವು ದುರ್ಬಲವಾದುದು ಎಂಬ ವೃಕ್ಷವಿಜ್ಞಾನ ರಾಜರಿಗಿದೆ. ಜೊತೆಗೆ 'ಶಿಗ್ರುಶಾಖಾಗ್ರಹೇಣ' ಎಂಬಲ್ಲಿ 'ಆಗ್ರಹೇಣ' ಎಂದು ಪದವಿಭಾಗ ಮಾಡಿದಲ್ಲಿ, ಹುಣಸೇ ಮರವಿದ್ದಾಗಲೂ ಶಿಗ್ರುವನ್ನೇ ಆಶ್ರಯಿಸಬೇಕೆಂಬ ಆಗ್ರಹವೇಕೆ? ಎಂಬ ಪ್ರಶ್ನೆಯಿದೆ? ಏಕೆಂದರೆ ನುಗ್ಗೇ ಮರದ ಬುಡಕ್ಕೆ ಹೋದರೆ ಪುನರುಪನಯನ ಆಗಬೇಕೆಂದು ಧರ್ಮಶಾಸ್ತ್ರದಲ್ಲಿದೆ. ಆದ್ದರಿಂದ ಆಗ್ರಹ ಬೇಡ ಎನ್ನುವ ಮೂಲಕ ಧರ್ಮಶಾಸ್ತ್ರದ ಪ್ರಾವೀಣ್ಯವನ್ನು ತೋರಿದ್ದಾರೆ. ಜೊತೆಗೆ 'ಶಿಗ್ರುಶಾಖಾಗ್ರಹೇಣ' ಎಂಬಲ್ಲಿ 'ಗ್ರಹ' ಶಬ್ದಕ್ಕೆ 'ಪಿಶಾಚಿ' ಎಂದರ್ಥ. ನುಗ್ಗೇಗಿಡದಲ್ಲಿ ಪಿಶಾಚಿಗಳಿರುತ್ತವೆ ಎಂದು ವಾಡಿಕೆ. ಅಂತಹ ಪೈಶಾಚಮತಗಳನ್ನಾಶ್ರಯಿಸದಿರಿ! ಎಂಬ ಕಾಕುಧ್ವನಿಯೂ ಇಲ್ಲಿ ಅಡಕವಾಗಿದೆ. ರಾಜರ ಮಾತುಗಳಲ್ಲಿ ಹೀಗೆ ಅಂತರ್ಗರ್ಭಿತ ಅನೇಕ ಯುಕ್ತಿಸರಮಾಲೆಗಳೇ ಇವೆ. ಅಧ್ಯಾತ್ಮರಸಿಕರಿಗಿದು ಭೂಷಾಮಣಿಗಳಾಗಿ ಶೋಭಿಸುತ್ತವೆ. ಇಂತಹ ಅಧ್ಯಯನಕ್ಕೆ ಬೇಕಾದ ಸೂಕ್ಷ್ಮ ದೃಷ್ಟಿಯನ್ನು ರಾಜರೇ ದಯಪಾಲಿಸಬೇಕು).

ವೇದವನ್ನು ಪ್ರಮಾಣವನ್ನಾಗಿ ಸ್ವೀಕರಿಸದೆ ಧರ್ಮಸಿದ್ಧಿಗಾಗಿ ಅನ್ಯಮತಾಚಾರ್ಯರ ಮತವನ್ನು ಆಶ್ರಯಿಸಿದರೆ ಏನು ದೋಷ ? ಎಂದು ಹೇಳುತ್ತಾರೆ –

ಏಕಸ್ಯ ವಾದಿನೋ ವಾಕ್ಯಾತ್ ಧರ್ಮಾಧರ್ಮವ್ಯವಸ್ಥಿತೌ ।
ತದ್ವ್ಯತ್ಯಾಸಃ ಕುತೋ ನ ಸ್ಯಾದ್ವಾಕ್ಯೈಸ್ತತ್ಪ್ರತಿವಾದಿನಾಮ್ ॥
ಬಹುತ್ವೇನ ಬಲೀಯಾಂಸಿ ವಚನಾನೀತಿ ಮೇ ಮತಿಃ ॥ ೩೪ ॥

**ಅರ್ಥ–** ಏಕಸ್ಯ ವಾದಿನೋ ವಾಕ್ಯಾತ್ = ಒಬ್ಬ ಮತಾಚಾರ್ಯನ ಮಾತಿನಂತೆ, ಧರ್ಮಾಧರ್ಮ ವ್ಯವಸ್ಥಿತೌ = ಧರ್ಮ, ಅಧರ್ಮಗಳ ವ್ಯವಸ್ಥೆಯು ಆಗುವುದಾದರೆ, ತತ್ಪ್ರತಿವಾದಿನಾಂ = ಆ ಮತಕ್ಕೆ ವಿರುದ್ಧವಾಗಿ ವಾದಿಸುವವರ, ವಾಕ್ಯೈಃ = ಮಾತುಗಳಿಂದ, ತದ್ವ್ಯತ್ಯಾಸಃ = ಧರ್ಮಾಧರ್ಮದ ವ್ಯತ್ಯಾಸವು, ಕುತಃ ನ ಸ್ಯಾತ್ = ಯಾವ ಕಾರಣದಿಂದಾಗಬಾರದು? ತತ್ಪ್ರತಿವಾದಿನಾಂ = ಅವನ ಪ್ರತಿವಾದಿಗಳಲ್ಲಿ, ಬಹುತ್ವೇನ = ಬಹುಸಂಬಂಧವುಳ್ಳ ಕಾರಣ, ಅಥವಾ ಬಹುಸಂಖ್ಯಾಕಗಳಾದ ಕಾರಣದಿಂದ, ವಚನಾನಿ = ಪ್ರತಿವಾದಿಗಳ ವಚನಗಳೇ, ಬಲೀಯಾಂಸಿ = ಪ್ರಬಲಗಳಾಗುತ್ತವೆ, ಇತಿ = ಎಂದು, ಮೇ = ನನ್ನ, ಮತಿಃ = ಅಭಿಪ್ರಾಯವು.

**ಅನುವಾದ–** ಅನೇಕ ಪ್ರತಿವಾದಿಗಳ ಮಧ್ಯದಲ್ಲಿ ಒಬ್ಬ ವಾದಿಯ ಮಾತಿಗೆ ಮಾನ್ಯತೆಯನ್ನು ನೀಡಿ ಅತೀಂದ್ರಿಯ ವಾದ ಧರ್ಮ-ಅಧರ್ಮ, ಪುಣ್ಯ-ಪಾಪಗಳ ವ್ಯವಸ್ಥಿತಿಯನ್ನು ನೀನು ಒಪ್ಪುತ್ತೀಯೆ ಎಂದಾದರೆ ಇತರ ಎಲ್ಲಾ ಮತಾಚಾರ್ಯರು ಆ ಒಬ್ಬನ ಮತವನ್ನು ಅಲ್ಲಗಳೆಯುವ ಕಾರಣ (ಅವನು ಹೇಳಿದ ಧರ್ಮವು ಧರ್ಮವಲ್ಲವೆಂದು ಹೇಳುವ ಕಾರಣ) ಇವರ ಸಂಖ್ಯೆಯ ಬಾಹುಲ್ಯ ಪ್ರಯುಕ್ತ ಇವರ ಮಾತು ಪ್ರಬಲವಾದ ಕಾರಣ ಒಬ್ಬ ಮತಾಚಾರ್ಯನಿಂದ ಹೇಳಲ್ಪಟ್ಟ ಧರ್ಮಕ್ಕೆ ವಿಪರೀತವಾದ ಧರ್ಮ ನಿರ್ಣಯವು ಸುಲಭವಾಗುತ್ತದೆ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ನನು ವೇದಂ ವಿಹಾಯ ಧರ್ಮಸಿದ್ಧ್ಯರ್ಥಂ ತತ್ತದಾಚಾರ್ಯ- ವಾಕ್ಯಗ್ರಹಣೇ ಕೋ ದೋಷ ಇತ್ಯತ ಆಹ – **ಏಕಸ್ಯೇತಿ** ॥ ತದ್ವ್ಯತ್ಯಾಸಃ ತೇನೈಕೇನೋಕ್ತಧರ್ಮಾಧರ್ಮವ್ಯತ್ಯಾಸಃ ವೈಪರೀತ್ಯಮ್ । ತತ್ಪ್ರತಿವಾದಿನಾಂ ತದಾಚಾರ್ಯಪ್ರತಿವಾದಿಭೂತಾನಾಮಿತರೇಷಾ ಮಾಚಾರ್ಯಾಣಾಮ್ । ತರ್ಹಿ ಕಿಂ ಸಾಮ್ಯಮ್? ನೇತ್ಯಾಹ – **ಬಹುತ್ವೇನೇತಿ** ॥ ತತ್ಪ್ರತಿ-ವಾದಿನಾಮಿತ್ಯಸ್ಯಾವೃತ್ತಿಃ । ಬಹುತ್ವೇನ ಬಹುಸಂಬಂಧಿತ್ವೇನ ಬಹುಸಂಖ್ಯಾಕತ್ವೇನ ವಾ । ಅಯಂ ಧರ್ಮ ಇತಿ ವಚನಸ್ಯ ಏಕಾಚಾರ್ಯವಚನತ್ವಾತ್ತದಪೇಕ್ಷಯಾ ಸಧರ್ಮೋ ನ ಭವತೀತಿ ವಕ್ತೃಣಾಂ ಬಹುತ್ವೇನ ತದ್ವಚನಾನಾಂ ಪ್ರಬಲತ್ವಾದ್ ಏಕಾಚಾರ್ಯೋಕ್ತಧರ್ಮ-ವೈಪರೀತ್ಯನಿರ್ಣಯ ಏವ ಸುಶಕ ಇತಿ ಭಾವಃ ॥ ೩೪ ॥

ಇದನ್ನೇ ಮುಂದೆ ಸ್ಪಷ್ಟಪಡಿಸುತ್ತಾರೆ –

> **ಶುಷ್ಕತರ್ಕಶತೋದರ್ಕಾಂಸ್ತೈಸ್ತೈರಾಪ್ತತಯಾದೃತಾನ್ ।**
> **ಅನೇಕದರ್ಶನಾಚಾರ್ಯಾನ್ ಕಥಮೇಕೋ ನಿವಾರಯೇತ್ ॥ ೩೫ ॥**

**ಅರ್ಥ–** ಶುಷ್ಕತರ್ಕಶತೋದರ್ಕಾನ್ = ದುರ್ಬಲವಾದ ನೂರಾರು ಯುಕ್ತಿಗಳನ್ನು ಹೊಂದಿರುವ, ತೈಸ್ತೈಃ = ಆಯಾ ಮತಪ್ರವರ್ತಕಾಚಾರ್ಯ ಶಿಷ್ಯರಿಂದ, ಆಪ್ತತಯಾ =

ಆಪ್ತರೆಂದು, ಆದೃತಾನ್ = ಅಂಗೀಕರಿಸಲ್ಪಟ್ಟ ಅನೇಕ ದರ್ಶನಾಚಾರ್ಯಾನ್ = ಅನೇಕ ಮತಾಚಾರ್ಯರನ್ನು, ಏಕಃ = ಒಬ್ಬ ಮತಾಚಾರ್ಯನು, ಕಥಂ = ಹೇಗೆ, ನಿವಾರಯೇತ್ = ನಿವಾರಿಸಲು ಸಮರ್ಥನಾದಾನು?

**ಅನುವಾದ–** ಎಲ್ಲ ದರ್ಶನಾಚಾರ್ಯರೂ ಸ್ವಕಪೋಲಕಲ್ಪಿತವಾದ ದುರ್ಬಲವಾದ ಯುಕ್ತಿಗಳನ್ನು ಬಳಸಿ ಮತಗಳನ್ನು ಸ್ಥಾಪಿಸಿದ್ದಾರೆ. ಆಯಾ ಮತಾಚಾರ್ಯರ ಶಿಷ್ಯರುಗಳು ಗುರುಗಳು ಹೇಳಿದ್ದನ್ನು ವಿಚಾರ ಮಾಡದೆ ಜೈ-ಜೈ ಎಂದು ಅವರು ಹೇಳಿದ್ದೇ ಪ್ರಮಾಣವೆಂದು ಒಪ್ಪಿಕೊಂಡು ಬಂದಿದ್ದಾರೆ. ಇಂತಹ ಮತಗಳ ವಿರುದ್ಧ ಒಬ್ಬ ಮತಾಚಾರ್ಯನು ವಾದದ ಸಮರಕ್ಕೆ ಹೇಗೆ ನಿಲ್ಲಬಲ್ಲನು? ಒಬ್ಬ ಮತಾಚಾರ್ಯನು ಖಂಡಿಸಲಾರನು.

**ಭಾವವಿಲಾಸಿನೀ–** ತದೇವ ವಿಶದಯತಿ । ತೈಸ್ತೈಃ ತತ್ತದಾಚಾರ್ಯಶಿಷ್ಯೈಃ । ಏಕಃ ಆಚಾರ್ಯಃ ॥ ೩೫ ॥

**ಅಸರ್ವಜ್ಞವಚಾಂಸ್ಯೇವಂ ವಿರುದ್ಧಾನಿ ಪರಸ್ಪರಮ್ ।**
**ನ ಧರ್ಮನಿರ್ಣಯಾಯಾಲಂ ತತ್ತ್ವಜ್ಞಾನಸ್ಯ ಶಂಕಯಾ ।**
**ತೇಷ್ವೇಕಸ್ಯ ನ ಸಾರ್ವಜ್ಞಮನ್ಯಸ್ಯೇವ ಪ್ರಸಿದ್ಧ್ಯತಿ ॥ ೩೬ ॥**

**ಅರ್ಥ–** ಏವಂ = ಹಿಂದೆ ಹೇಳಿದ ರೀತಿಯಿಂದ, ಅಸರ್ವಜ್ಞವಚಾಂಸಿ = ಅಸರ್ವಜ್ಞರಾದ ಮತಾಚಾರ್ಯರ ಮಾತುಗಳು, ಪರಸ್ಪರಂ = ಪರಸ್ಪರವಾಗಿ, ವಿರುದ್ಧಾನಿ = ವಿರುದ್ಧವಾದವುಗಳು ಆದುದರಿಂದ, ತತ್ತ್ವಜ್ಞಾನಸ್ಯ ಶಂಕಯಾ = ತತ್ತ್ವವನ್ನು ತಿಳಿದು ಹೇಳುತ್ತಾರೋ ತಿಳಿಯದೆ ಹೇಳುತ್ತಾರೋ ಎಂಬ ಸಂಶಯವಿರುವುದರಿಂದ, ಧರ್ಮನಿರ್ಣಯಾಯ = ಅವರ ಮಾತುಗಳಿಂದ ಧರ್ಮವನ್ನು ನಿರ್ಣಯಿಸಲು, ನ ಅಲಂ = ಸಮರ್ಥವಾಗುವುದಿಲ್ಲ. ತೇಷು = ಆ ಭಿನ್ನ ಭಿನ್ನ ಮತಾಚಾರ್ಯರಲ್ಲಿ, ಏಕಸ್ಯ = ಒಬ್ಬನಿಗೆ (ಜಿನನಿಗೆ), ಅನ್ಯಸ್ಯ ಇವ =ಅವನಿಗಿಂತ ಬೇರೆ ವಿಚಾರ ಮಂಡಿಸುವ ತಾರ್ಕಿಕಾಚಾರ್ಯನಂತೆ, ಸಾರ್ವಜ್ಞಂ = ಸರ್ವಜ್ಞತ್ವವು, ನ ಪ್ರಸಿದ್ಧ್ಯತಿ= ಸಿದ್ಧಿಸುವುದಿಲ್ಲ.

**ಅನುವಾದ– ಹಿಂದೆ ಹೇಳಿದಂತೆ ಯಾವ ಮತಾಚಾರ್ಯರೂ ಸರ್ವಜ್ಞರಲ್ಲದ ಕಾರಣ ಅವರ ಮಾತುಗಳಲ್ಲಿ ಪರಸ್ಪರ ವಿರೋಧವಿದ್ದೇ ಇರುತ್ತದೆ. ಸರ್ವಜ್ಞರೆಂದು ಹೇಳುತ್ತೇವೆ ಎಂದರೆ, ಎಲ್ಲ ಮತದವರೂ ತಮ್ಮ ಗುರುಗಳನ್ನು ಸರ್ವಜ್ಞರೆಂದೇ ಹೇಳುತ್ತಾರೆ. ಆದ್ದರಿಂದ ಸರ್ವಜ್ಞತ್ವವಿಷಯದಲ್ಲಿಯೇ ಸಂಶಯವಿರುವುದರಿಂದ ಧರ್ಮನಿರ್ಣಯಕ್ಕೆ ಯಾರ ಮಾತೂ ಸಮರ್ಥವಾಗುವುದಿಲ್ಲ. ಇಷ್ಟು**

ಮತಾಚಾರ್ಯರಲ್ಲಿ ಯಾರೊಬ್ಬರಿಗೂ ಸರ್ವಜ್ಞತ್ವವು ಸಿದ್ಧಿಸುವುದಿಲ್ಲ. ಏಕೆಂದರೆ ಜಿನನ ಸರ್ವಜ್ಞತ್ವವನ್ನು ತಾರ್ಕಿಕನು ಹೇಗೆ ಒಪ್ಪಲಾರನೋ, ತಾರ್ಕಿಕನ ಸರ್ವಜ್ಞತ್ವವನ್ನು ಜಿನನೂ ಒಪ್ಪಲಾರ. ಆದ್ದರಿಂದ ಅವರವರ ಮಾತಿನಿಂದ ಯಾರೊಬ್ಬರ ಮಾತಿಗೂ ಪ್ರಾಮಾಣ್ಯವನ್ನು ನಿಶ್ಚಯಿಸಲಾಗುವುದಿಲ್ಲ.

**ಭಾವವಿಲಾಸಿನೀ–** ಏವಂ ಏಕವಾದಿನೋಕ್ತಸ್ವಾಭಿಮತಧರ್ಮನಿರ್ಣಾಯಕವಾಕ್ಯವತ್ । ಸ್ವಸ್ವಾಗಮೋಕ್ತಧರ್ಮನಿರ್ಣಾಯಕಾಸರ್ವಜ್ಞತತ್ತದಾಚಾರ್ಯವಚಾಂಸಿ ತತ್ವಜ್ಞಾನಸ್ಯೇತಿ ತತ್ತ್ವಜ್ಞಾನಸ್ಯ ತತ್ತ್ವಮವಬುದ್ಧ್ಯ ವದಂತಿ ಅನವಬುದ್ಧ್ಯ ವಾ ವದಂತೀತಿ ಶಂಕಯೇತ್ಯರ್ಥಃ । ನಿರ್ಣಯಾಯ ನಾಲಮಿತಿ ಯೋಜನಾ । ಏಕೇನೋಕ್ತಧರ್ಮಪ್ರತಿಷೇಧಮಾತ್ರೇ ಬಹೂನಾಂ ಸಮ್ಮತಾವಪಿ ಸ್ವಸ್ವಾಗಮೋಕ್ತಧರ್ಮವಿಷಯೇ ಸಮ್ಮತ್ಯಭಾವಾದಿತಿ ಭಾವಃ (ಪ್ರ.ಗ್ರಂಥಃ) ನನು ಜಿನಸ್ಸರ್ವಜ್ಞಃ ತದ್ವಚಸಾಽಸ್ಮಾಕಂ ನಿರ್ಣಯೋ ಭವತೀತ್ಯತ ಆಹ – **ತೇಷ್ವಿತಿ** ॥ ತೇಷ್ವಾಚಾರ್ಯೇಷ್ವೇಕಸ್ಯ ಜಿನಾದೇರನ್ಯಸ್ಯೇವ ತದ್ವಿಪರೀತಭಿನ್ನತಾರ್ಕಿಕಾಚಾರ್ಯಾದೇರಿವ ॥ ೩೬ ॥

**ವಿವರಣೆ–** ತಾರ್ಕಿಕವಾದವೂ ಸರಿಯಲ್ಲ : 'ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್' ಎಂಬ ಅನುಮಾನದಿಂದ ಕ್ಷಿತ್ಯಾದಿಗಳಿಗೆ ಕರ್ತೃ ನಿಶ್ಚಯವಾಯಿತು. ಕ್ಷಿತ್ಯಾದಿಕರ್ತಾ ಇದ್ದಾನೆಂದಬಳಿಕ ಅವನು 'ಉಪಾದಾನಗೋಚರ ಅಪರೋಕ್ಷಜ್ಞಾನವುಳ್ಳವನು' (ಕ್ಷಿತ್ಯಾದಿನಿರ್ಮಾಣ- ಸಾಮರ್ಥ್ಯವಿದೆ ಎಂದರೆ ನಿರ್ಮಾಣಕ್ಕೆ ಬೇಕಾದ ಉಪಾದಾನವಿಷಯಕ ಅಪರೋಕ್ಷಜ್ಞಾನವೂ ಇದೆ) ಎಂದು ನಿಶ್ಚಯವಾಯಿತು. ಉಪಾದಾನ ಗೋಚರ ಅಪರೋಕ್ಷಜ್ಞಾನ ಉಳ್ಳವನು ಸರ್ವಜ್ಞನೇ ಆಗಿರಬೇಕು ಎಂದು ಅವನಿಗೆ ಸಾರ್ವಜ್ಞತ್ವವೂ ಸಿದ್ಧವಾಯಿತು. ಹಾಗಾಗಿ ಸರ್ವಜ್ಞನಾದ ಈಶ್ವರನ ಮಾತಿನಿಂದ ಧರ್ಮಾದಿನಿರ್ಣಯವು ಆಗುತ್ತದೆ ಎಂದರೆ ಅದಕ್ಕೆ ಉತ್ತರಿಸುತ್ತಾರೆ–

**ಕ್ಷಿತ್ಯಾದಿಕರ್ತಾ ಸರ್ವಜ್ಞೋ ನ ಸರ್ವಸ್ಯಾಪಿ ಸಮ್ಮತಃ ।**
**ಯಸ್ಯಾಸೌ ಸಮ್ಮತಸ್ತಂ ಚ ಬುದ್ಧೋ ಯುದ್ಧೇ ಜಿಗೀಷತಿ ॥ ೩೭ ॥**

**ಅರ್ಥ–** ಕ್ಷಿತ್ಯಾದಿಕರ್ತಾ = ಭೂಮ್ಯಂತರಿಕ್ಷಾದಿಗಳನ್ನು ನಿರ್ಮಿಸಿದವನು, ಸರ್ವಜ್ಞಃ = ಸರ್ವಜ್ಞನು ಎಂದು, ಸರ್ವಸ್ಯಾಪಿ = ಎಲ್ಲರಿಗೂ (ಜೈನಬೌದ್ಧಾದಿಗಳಿಗೆ), ನ ಸಮ್ಮತಃ = ಸಮ್ಮತನಾಗಿಲ್ಲ, ಯಸ್ಯ = ಯಾವ ತಾರ್ಕಿಕನಿಗೆ, ಸಮ್ಮತಃ = ಸಮ್ಮತನಾಗಿ, ಅಸೌ = ಸರ್ವಜ್ಞನಾದ ಈಶ್ವರನು ಇದ್ದಾನೋ, ತಂ ಚ = ಆ ಈಶ್ವರನನ್ನಾದರೂ, ಬುದ್ಧಃ = ಬುದ್ಧನು, ಯುದ್ಧೇ = ಯುದ್ಧದಲ್ಲಿ, ಜಿಗೀಷತಿ = ಗೆಲ್ಲುತ್ತಾನೆ.

**ಅನುವಾದ–** 'ಕ್ಷಿತ್ಯಾದಿಕರ್ತೃವು ಸರ್ವಜ್ಞನು' ಎಂಬ ತಾರ್ಕಿಕನ ವಾದವನ್ನು ಎಲ್ಲ ವಾದಿಗಳೂ ಒಪ್ಪುವುದಿಲ್ಲ. ತಾರ್ಕಿಕ ಮತದಲ್ಲಿ ನಿರ್ಣೀತನಾದ ಈಶ್ವರನು

ನಿರೂಪಿಸಿದ ಧರ್ಮಕ್ಕಿಂತ ವಿರುದ್ಧವಾದ ಧರ್ಮವನ್ನು ನಿರೂಪಿಸುವ ಕಾರಣದಿಂದ ಈಶ್ವರಾವತಾರನಾದ ಸರ್ವಜ್ಞಬುದ್ಧನು ಅವನನ್ನು ಜಯಿಸುತ್ತಾನೆ.

**ಭಾವವಿಲಾಸಿನೀ–** ನನು ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾದಿತ್ಯನೇನ ಕ್ಷಿತ್ಯಾದಿಕರ್ತೃಸಿದ್ಧಾವುಪಾದಾನಗೋಚರಾಪರೋಕ್ಷಜ್ಞಾನವತ ಏವ ಕರ್ತೃತ್ವೇನ ತಸ್ಯ ಸಾರ್ವಜ್ಞಮಪಿ ಸಿದ್ಧ್ಯತಿ । ತಥಾಚ ಸರ್ವಜ್ಞೇಶ್ವರವಚಸಾ ಧರ್ಮಾದಿನಿರ್ಣಯೋ ಭವತೀತ್ಯತ ಆಹ – **ಕ್ಷಿತ್ಯಾದೀತಿ** ॥ ಸರ್ವಸ್ಯಾಪಿ ಜೈನಾದೇಃ । ಯಸ್ಯ ತಾರ್ಕಿಕಸ್ಯ । ಅಸೌ ಸರ್ವಜ್ಞೇಶ್ವರಃ । ತಮೀಶ್ವರಮ್ । ಬುದ್ಧಸ್ಯಾಪೀಶ್ವರಾವತಾರತ್ವೇನ ಸರ್ವಜ್ಞತ್ವಾತ್ತೇನ ಚ ತದುಕ್ತವಿಪರೀತಧರ್ಮಸ್ಯೈವೋಕ್ತತ್ವಾದ್ ಯಜ್ಞಾದೇ ರೀಶ್ವರೋಕ್ತಮಾರ್ಗೇಣ ನ ಧರ್ಮತ್ವನಿರ್ಣಯೋ ಭವತೀತಿ ಭಾವಃ ॥ ೩೭ ॥

**ವಿವರಣೆ–** ಬುದ್ಧನು ಈಶ್ವರನ ಅವತಾರವೆಂದು ಬೌದ್ಧರು ಹೇಳುತ್ತಾರೆ. ಈ ಬುದ್ಧನು ಸರ್ವಜ್ಞನೆಂದೂ ಹೇಳುತ್ತಾರೆ. ಆದ್ದರಿಂದ ಸರ್ವಜ್ಞನಾದ ಬುದ್ಧನು ತಾರ್ಕಿಕರಿಗಿಂತ ವಿಪರೀತವಾದ ಧರ್ಮವನ್ನು ಬೋಧಿಸಿದ್ದಾನೆ. ಬುದ್ಧನ ಮಾತಿನ ಪ್ರಕಾರ ಯಜ್ಞಾದಿ ಕರ್ಮಗಳು ಪ್ರಶಸ್ತವಲ್ಲ. ಬುದ್ಧನೂ ಸರ್ವಜ್ಞನಾದುದರಿಂದ ಅವನ ಮತಕ್ಕೆ ವಿರುದ್ಧವಾದ ತಾರ್ಕಿಕಮತವು ಅವನೆದುರಿಗೆ ಸೋಲುತ್ತದೆ ಎಂದು ಅಭಿಪ್ರಾಯ.

(ತಾರ್ಕಿಕರು ಹೀಗೆ ಹೇಳುತ್ತಾರೆ. ನಮ್ಮ ಕಣ್ಣಿಗೆ ಕಾಣುವ ಭೂಮಿ-ಗಿರಿ-ಅಂಕುರಾದಿಗಳಿಗೆ ನಾವುಯಾರೂ ಕಾರಣರಲ್ಲ. ಆದರೆ ಇವೆಲ್ಲವೂ 'ಕಾರ್ಯ' ಎಂದು ಕರೆಸಿಕೊಳ್ಳುವ ಕಾರಣದಿಂದ ಇವುಗಳಿಗೊಬ್ಬ ಕಾರಣಪುರುಷನು ಇದ್ದಿರಲೇಬೇಕು. ಅವನಾದರೂ ಚಿತ್ರವಿಚಿತ್ರ ಪ್ರಪಂಚವನ್ನು ಸೃಷ್ಟಿ ಮಾಡುವವನು ಎಂದಾದ ಮೇಲೆ ಮಹಾತ್ಮನೂ ಸರ್ವಜ್ಞನೂ ಆಗಿರಲೇಬೇಕು. ಇಲ್ಲದಿದ್ದರೆ ಇಂತಹ ಪ್ರಪಂಚವನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ. ಇಂತಹ ಜಗತ್ತಿಗೆ ಕಾರಣನಾದವನೇ ಈಶ್ವರನು. ಅವನ ಮಾತುಗಳೇ ವೇದಗಳು. ಅಂತಹ ವೇದಗಳಿಂದಲೇ ಧರ್ಮಾಧರ್ಮಗಳನ್ನು ನಿರ್ಣಯಮಾಡಬಹುದು. ಹೀಗೆ ಈಶ್ವರನನ್ನು ಒಪ್ಪಿ, ಆ ಈಶ್ವರನು ಹೇಳಿದ ವೇದಗಳನ್ನು ಪ್ರಮಾಣವೆನ್ನುತ್ತಾರೆ. ಇದಕ್ಕೆ ವಾದಿರಾಜರು ಹೀಗೆ ಉತ್ತರಿಸಿದ್ದಾರೆ. ವೇದಗಳ ಆಧಾರದಲ್ಲಿ ಸಿದ್ಧವಾಗದೆ, ನಿನ್ನ ಯುಕ್ತಿಯಿಂದ ಈಶ್ವರನನ್ನು ಅಂಗೀಕರಿಸುತ್ತೀಯೇ ಎಂದಾದರೆ, ನಿನ್ನ ಈಶ್ವರನು ದುರ್ಬಲನಾದ. ಈ ಈಶ್ವರನನ್ನು ಬುದ್ಧನು ಜಯಿಸುತ್ತಾನೆ. ಹೇಗೆಂದರೆ, ಬೌದ್ಧನು ತನ್ನ ಮತಪ್ರವರ್ತಕನಾದ ಬುದ್ಧನನ್ನು ಈಶ್ವರಾವತಾರನೆಂದೂ ಸರ್ವಜ್ಞನೆಂದೂ ಅಂಗೀಕರಿಸಿದ್ದಾನೆ. ಆ ಬುದ್ಧನು ವೇದೋಕ್ತ ಯಜ್ಞ-ಯಾಗಾದಿಗಳಿಗೆ ವಿರುದ್ಧವಾದ ಧರ್ಮವನ್ನು ಬೋಧಿಸಿದ್ದಾನೆ. ಸರ್ವಜ್ಞನಾದ ಬುದ್ಧನು ಹೇಳಿದ ಈ ವಿಷಯವೂ ಪ್ರಮಾಣವಾಗಲಿ ಎಂದು ಹೇಳಿದರೆ, ಇದಕ್ಕೆ ತಾರ್ಕಿಕನು ನಿರುತ್ತರನಾಗಿ ಸೋಲಲೇಬೇಕಾಗುತ್ತದೆ. ಆದ್ದರಿಂದ ತಮ್ಮ ತಲೆಗೆ ತೋರಿದಂತೆ ಈಶ್ವರನನ್ನೂ, ಸರ್ವಜ್ಞನನ್ನೂ ನಿರ್ಣಯಿಸಬಾರದೆಂದು ಅಭಿಪ್ರಾಯ).

ಇದಕ್ಕೆ ತಾರ್ಕಿಕನು ಹೀಗೆ ಹೇಳಬಹುದು. 'ಬುದ್ಧನು ದೈತ್ಯರ ಮೋಹಕ್ಕಾಗಿ ಅವತರಿಸಿದ್ದಾನೆ. ಆದ್ದರಿಂದ ಅವನ ಮಾತಿನಲ್ಲಿ ವಿಶ್ವಾಸವಿಡಬಾರದು' ಎಂದರೆ ಅದಕ್ಕೆ ರಾಜರು ಉತ್ತರಿಸುತ್ತಾರೆ –

**ದೈತ್ಯಾನ್ ಸ ವಿಪ್ರಲಿಪ್ಸುಶ್ಚೇದ್ದೇವಾಂಶ್ಚಾನುಜಿಘೃಕ್ಷತಿ ।**
**ಅಧರ್ಮಮಪಿ ತತ್ತೃಪ್ತ್ಯೈಧರ್ಮಂ ವಕ್ತೀತಿ ಸಂಶಯಾತ್ ॥ ೩೮ ॥**

**ಕಥಂ ತದುಕ್ತಿಮಾತ್ರಾಚ್ಚ ಕ್ರತ್ವಾದೇಃ ಸ್ಯಾತ್ ಪ್ರವರ್ತನಮ್ ।**
**ಅತಃ ಪುಂವಾಕ್ಯತೋ ಧರ್ಮಃ ಕಥಂ ನಿರ್ಣೀಯತೇ ವದ ॥ ೩೯ ॥**

**ಅರ್ಥ–** ಸಃ = ಆ ಬುದ್ಧನು, ದೈತ್ಯಾನ್ = ದೈತ್ಯರನ್ನು, ವಿಪ್ರಲಿಪ್ಸುಃ = ವಂಚಿಸುವ ಇಚ್ಛೆಯುಳ್ಳವನಾಗಿ, ದೇವಾನ್ = ದೇವತೆಗಳನ್ನು, ಅನುಜಿಘೃಕ್ಷತಿ = ಅನುಗ್ರಹಿಸಲು ಇಚ್ಛಿಸುತ್ತಾನೆ, ಚೇತ್ = ಎಂದಾದರೆ, ಸಃ = ಈಶ್ವರನು, ತತ್ತೃಪ್ತ್ಯೈ = ಆ ದೇವತೆಗಳ ತೃಪ್ತಿಗೋಸ್ಕರ, ಅಧರ್ಮಮಪಿ = ಅಧರ್ಮವನ್ನೂ, ಧರ್ಮಂ = ಧರ್ಮವೆಂದು, ವಕ್ತಿ = ಹೇಳುತ್ತಾನೆ, ಇತಿ = ಎಂದು, ಸಂಶಯಾತ್ = ಸಂಶಯ ಬರುವುದರಿಂದ, ತದುಕ್ತಿಮಾತ್ರಾತ್ = ಯುಕ್ತಿಯಿಂದ ನಿರ್ಣೀತನಾದ ತಾರ್ಕಿಕರ ಈಶ್ವರನ ಉಕ್ತಿಮಾತ್ರದಿಂದಲೇ, ಕ್ರತ್ವಾದೇಃ = ಯಜ್ಞಾದಿಗಳ, ಪ್ರವರ್ತನಂ = ಆಚರಣೆಯು, ಕಥಂ ಸ್ಯಾತ್ = ಹೇಗೆ ಯುಕ್ತವಾಗುತ್ತದೆ? ಅತಃ = ಆದ್ದರಿಂದ, ಪುಂವಾಕ್ಯತಃ = ಈಶ್ವರಾದಿ ಪುರುಷವಾಕ್ಯದಿಂದ, ಧರ್ಮಃ = ಧರ್ಮವು, ಕಥಂ ನಿರ್ಣೀಯತೇ = ಹೇಗೆ ನಿಶ್ಚಯಿಸಲ್ಪಡುತ್ತದೆ ಎಂದು, ವದ = ಹೇಳು!!

**ಅನುವಾದ–** ಈಶ್ವರನು ದೈತ್ಯರನ್ನು ವಂಚಿಸಲು ವಿಪರೀತವಾದ ಧರ್ಮಗಳನ್ನು ಹೇಳಿದ್ದಾನೆ. ಆದ್ದರಿಂದ ಅದು ಧರ್ಮವಲ್ಲ ಎಂದು ಹೇಳಿದರೆ ಈಶ್ವರನು ದೇವತೆಗಳನ್ನು ಅನುಗ್ರಹಿಸುವ ಉದ್ದೇಶವನ್ನೂ ಹೊಂದಿರುವುದರಿಂದ ಪ್ರಸಂಗಾನುಕೂಲ್ಯವಿಲ್ಲದೆ ಇದ್ದಾಗ. ಧರ್ಮವನ್ನು ಅಧರ್ಮವೆಂದು ಹೇಳಿದರೆ ದೇವತೆಗಳಿಗೆ ತೃಪ್ತಿಯಾಗುತ್ತದೆಂದು ಅಧರ್ಮವನ್ನೇ ಧರ್ಮವೆಂದು ಏಕೆ ಹೇಳಿರಬಾರದು ಎಂಬ ಸಂಶಯವು ಉಂಟಾಗುತ್ತದೆ. ಆದ್ದರಿಂದ ಪೌರುಷೇಯವಾಕ್ಯದಿಂದ ಧರ್ಮವನ್ನು ನಿರ್ಣಯಿಸಲು ಆಗುವುದಿಲ್ಲ ಎಂದು ಅಭಿಪ್ರಾಯ.

ಕೇವಲ ಯುಕ್ತಿನಿರ್ಮಿತ ಈಶ್ವರನ ಮಾತಿನಿಂದ ವೇದಗಳನ್ನು ಪ್ರಮಾಣವೆಂದು ನಂಬಿ 'ಯಜ್ಞಯಾಗಾದಿಗಳು ಪ್ರವೃತ್ತವಾದವು' ಎಂದು ಹೇಳಲೂ ಆಗದು. ಆದ್ದರಿಂದ ಈಶ್ವರಾದಿ ಪುರುಷವಾಕ್ಯಗಳಿಂದಲೂ ಧರ್ಮವನ್ನು ಹೇಗೆ ನಿರ್ಣಯಿಸಲಾದೀತು? ನೀನೇ ಹೇಳು !!

**ಭಾವವಿಲಾಸಿನೀ–** ನನು ದೈತ್ಯಮೋಹನಾರ್ಥಂ ಬುದ್ಧಸ್ಯಾವತೀರ್ಣತ್ವೇನ ನ ತದ್ವಚಸಿ ವಿಶ್ವಾಸ ಇತ್ಯತ ಆಹ – **ದೈತ್ಯಾನಿತಿ** ॥ ಅನುಜಿಘೃಕ್ಷತಿ ಅನುಗ್ರಹಂ ಕರ್ತುಮಿಚ್ಛತಿ । ಈಶ್ವರ ಇತಿ.ಶೇಷಃ । ತತ್ತೃಪ್ತ್ಯೈ ತೇಷಾಂ ದೇವಾನಾಂ ತೃಪ್ತ್ಯೈ ॥ ೩೮ ॥

ತದುಕ್ತಿಮಾತ್ರಾತ್ ತಸ್ಯೇಶ್ವರಸ್ಯೋಕ್ತಿಮಾತ್ರಾತ್ । ಕ್ರತ್ವಾದೇರ್ಯಜ್ಞಾದೇಃ। ಉಕ್ತಮರ್ಥ-ಮುಪಸಂಹರತಿ – **ಅತ ಇತಿ** ॥ ಪುಂವಾಕ್ಯತಃ ಈಶ್ವರಾದಿಪುರುಷವಾಕ್ಯತಃ ॥ ೩೯ ॥

**ವಿವರಣೆ–** ಪುರುಷವಾಕ್ಯದಿಂದಲೇ ಧರ್ಮನಿರ್ಣಯವಾಗುತ್ತದೆ ಎಂಬ ತಾರ್ಕಿಕರ ಮತದ ನಿರಾಕರಣೆಯನ್ನು ಉಪಸಂಹಾರ ಮಾಡುತ್ತಿದ್ದಾರೆ 'ಅತಃ' ಎಂಬುದಾಗಿ.

ಯುಕ್ತಿಯಿಂದಲೇ ಧರ್ಮನಿರ್ಣಯವಾಗುತ್ತದೆ ಎಂಬುದಕ್ಕೆ ಉತ್ತರಿಸುತ್ತಾರೆ–

**ಯಸ್ತು ಯುಕ್ತ್ಯೈವ ಧರ್ಮಸ್ಯ ನಿರ್ಣಯಂ ವರ್ಣಯೇದ್ ಬುಧಃ ।**
**ಲಾಘವಾತ್ಸ ಸಕೃಚ್ಛುದ್ಧ್ಯೈ ಪಿಬೇದಾಚಮನೋದಕಮ್ ॥ ೪೦ ॥**

**ಅರ್ಥ–** ಯಸ್ತು ಬುಧಃ = ಜ್ಞಾನಿ ಎಂದು ತಿಳಿದ ಯಾವನು, ಧರ್ಮಸ್ಯ = ಧರ್ಮದ, ನಿರ್ಣಯಂ = ನಿರ್ಣಯವನ್ನು, ಯುಕ್ತ್ಯಾ ಏವ = ಕೇವಲ ಯುಕ್ತಿಯಿಂದಲೇ, ವರ್ಣಯೇತ್ = ಹೇಳುತ್ತಾನೋ, ಸಃ = ಅವನು, ಶುದ್ಧ್ಯೈ = ಶುದ್ಧಿಗಾಗಿ, ಆಚಮನೋದಕಂ= ಆಚಮನದ ನೀರನ್ನು, ಲಾಘವಾತ್= ಲಾಘವ ಯುಕ್ತಿಯನ್ನಾಶ್ರಯಿಸಿ, ಸಕೃತ್ =ಒಂದು ಬಾರಿಯೇ, ಪಿಬೇತ್ = ಕುಡಿಯಲಿ!

**ಅನುವಾದ– ಕೇವಲ ಯುಕ್ತಿಯಿಂದಲೇ ಧರ್ಮದ ನಿರ್ಣಯವನ್ನು ಹೇಳುವುದು ತಪ್ಪಾಗುತ್ತದೆ. ಯಾರು ಹೀಗೆ ಹೇಳುತ್ತಾರೋ, ಆ ಜಾಣರು ಲಾಘವಯುಕ್ತಿಯಿಂದ ಆಚಮನ ಮಾಡುವಾಗ ಮೂರು ಬಾರಿ ಜಲಪ್ರಾಶನ ಮಾಡುವುದನ್ನು ಬಿಟ್ಟು ಒಂದೇ ಬಾರಿ ಮಾಡಲಿ ಎಂಬ ಆಪತ್ತಿಯು ಬರುತ್ತದೆ.**

**ಭಾವವಿಲಾಸಿನೀ–** ನನು ಮಾಸ್ತು ವಚನಂ ಯುಕ್ತ್ಯೈವ ಧರ್ಮನಿರ್ಣಯೋ ಭವತೀತ್ಯತ ಆಹ – **ಯಸ್ತ್ವಿತಿ** ॥ ಶುದ್ಧ್ಯೈ ಸಕೃದಾಚಮನೋದಕಂ ಪಿಬೇದಿತ್ಯನ್ವಯಃ ॥ ೪೦ ॥

**ವಿವರಣೆ–** ಮೂರು ಬಾರಿ ಆಚಮನ ಗೌರವ ಎನಿಸುತ್ತದೆ ಎಂದು ಯುಕ್ತಿಯಿಂದ ನಿರ್ಣಯಿಸಿ ಪುನಃಪುನಃ ಪ್ರಾಶನವು ಬೇಡವೆಂದು ಒಂದೇ ಬಾರಿ ಲಾಘವವೆಂದು ಆಚಮನ ಮಾಡಬೇಕಾಗುತ್ತದೆ. ಆದ್ದರಿಂದ ಧರ್ಮವನ್ನು ಯುಕ್ತಿಯಿಂದ ನಿರ್ಣಯಿಸಬಾರದೆಂದು ಅಭಿಪ್ರಾಯ. ಗೀತೆಯಲ್ಲಿ ಕೃಷ್ಣನ ವಚನವೂ ಇದಕ್ಕೆ ಸಂವಾದಿಯಾಗಿದೆ

'ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ' ಎಂದು.

**ಪುನರುಕ್ತತ್ವಯುಕ್ತ್ಯಾ ಚ ಮಂತ್ರಾವೃತ್ತಿಂ ಪರಿತ್ಯಜೇತ್ ।**
**ಪರೋಪಕಾರಯುಕ್ತ್ಯಾ ಚ ಗಚ್ಛೇತ್ ಕಾಮಾತುರಾಂಗನಾಮ್ ॥ ೪೧ ॥**

**ದೇಹಬಂಧಾದ್ಬಹಿರ್ಜೀವಾನ್ ಕುರ್ಯಾತ್ಕಾರಾಗೃಹಾದಿವ ।**
**ಅನಾದಿನಿತ್ಯಾ ವಾಗ್ ವಾಚ್ಯಾ ಧರ್ಮಸಿದ್ಧ್ಯೈ ತತೋಽಖಿಲೈಃ ॥ ೪೨ ॥**

**ಅರ್ಥ–** ಪುನರುಕ್ತತ್ವಯುಕ್ತ್ಯಾ = 'ಪುನರುಕ್ತಿ' ಎಂಬ ಯುಕ್ತಿಯನ್ನಾಶ್ರಯಿಸಿ, ಮಂತ್ರಾವೃತ್ತಿಂ ಚ = ಮಂತ್ರದ ಪುನಃಪುನಃ ಉಚ್ಚಾರಣೆ ಎಂಬ ಜಪವನ್ನೂ, ಪರಿತ್ಯಜೇತ್ = ಬಿಡಬೇಕು. ಪರೋಪಕಾರಯುಕ್ತ್ಯಾ ಚ = 'ಪರೋಪಕಾರ ಮಾಡಬೇಕು' ಎಂಬ ಯುಕ್ತಿಯನ್ನಾಶ್ರಯಿಸಿ, ಕಾಮಾತುರಾಂಗನಾಂ = ಕಾಮಾತುರಳಾದ ಪರಸ್ತ್ರೀಯನ್ನು, ಗಚ್ಛೇತ್ = ಗಮನ ಮಾಡಬೇಕು. ಕಾರಾಗೃಹಾದಿವ=ಬಂದೀ ಖಾನೆಯಿಂದ ಖೈದಿಗಳ ಬಂಧನವನ್ನು ಬಿಡಿಸಿ ಉಪಕರಿಸುವಂತೆ, ದೇಹಬಂಧಾತ್ = ದೇಹ ಎಂಬ ಬಂಧನದಿಂದ, ಜೀವಾನ್ = ಜೀವರನ್ನು, ಬಹಿಃ ಕುರ್ಯಾತ್ = ತಲೆ ಕಡಿದು ದೇಹದಿಂದ ಹೊರಗೆ ಕಳುಹಿಸಬೇಕು. (ಇಂತಹ ಯುಕ್ತಿಗಳನ್ನು ಯಾರೂ ಒಪ್ಪುವುದಿಲ್ಲ). ತತಃ = ಆದುದರಿಂದ, ಅಖಿಲೈಃ = ಸರ್ವರಿಂದ, ಧರ್ಮಸಿದ್ಧ್ಯೈ= ಧರ್ಮದ ಸಿದ್ಧಿಗಾಗಿ, ಅನಾದಿನಿತ್ಯಾ= ಅನಾದಿನಿತ್ಯವಾದ, ವಾಗ್ = ವಾಣಿಯು (ಇದೆ ಎಂದು), ವಾಚ್ಯಾ = ಹೇಳಲ್ಪಡಬೇಕು.

**ಅನುವಾದ–** ಮಂತ್ರಗಳನ್ನು ಪುನಃಪುನಃ ಹೇಳುವುದು ಗೌರವಗ್ರಸ್ತವಾಗುತ್ತದೆ, 'ಪುನರುಕ್ತಿ'ದೋಷವೂ ಬರುತ್ತದೆ ಎಂಬ ಯುಕ್ತಿಯನ್ನು ಆಶ್ರಯಿಸಿ ಮಂತ್ರಾವೃತ್ತಿಯನ್ನು ಬಿಟ್ಟುಬಿಡಲಿ! ಕಾಮಾತುರಳಾದ ಅಂಗನೆಯು ನನಗೆ ದೇಹಸುಖ ನೀಡೆಂದು ಬಯಸಿ ಬಂದರೆ ಮಹಾಪಾಪಕಾರಿಯಾದ ಸ್ತ್ರೀಗಮನ ಕರ್ಮವನ್ನು ಪರೋಪಕಾರಯುಕ್ತಿಯನ್ನಾಶ್ರಯಿಸಿ ಮಾಡಬೇಕಾಗುತ್ತದೆ. ಅಪರಾಧಿಗಳನ್ನು ಕಾರಾಗೃಹಬಂಧನದಿಂದ ಬಿಡಿಸುವುದು ಒಂದು 'ಲೋಕೋಪಕಾರ'. ಈ ಯುಕ್ತಿಯನ್ನಾಶ್ರಯಿಸಿ ಜೀವರು ದೇಹವೆಂಬ ಬಂಧನದಲ್ಲಿದ್ದಾರೆಂದು ಲೋಕೋಪಕಾರಬುದ್ಧಿಯಿಂದ ಜೀವರ ಶಿರಶ್ಛೇದನ ಮಾಡಿ ಅವರನ್ನು ದೇಹಬಂಧನದಿಂದ ಮುಕ್ತರನ್ನಾಗಿಸಲಿ! ಎಲ್ಲಾ ಪ್ರಾಣಿಹಿಂಸೆಯೂ ಲೋಕೋಪಕಾರವೇ ಆಗಲಿ!! ಆದ್ದರಿಂದ ಕೇವಲ ಯುಕ್ತಿಯನ್ನೇ ಆಶ್ರಯಿಸಿ ಮತಸ್ಥಾಪನೆ ಮಾಡಹೊರಟರೆ ಅಧರ್ಮಯುಕ್ತ ಅನರ್ಥಪರಂಪರೆಯೇ ಬಂದೊದಗುತ್ತದೆ. ಆದ್ದರಿಂದ ಧರ್ಮಾಧರ್ಮವ್ಯವಸ್ಥೆಗೆ ಅನಾದಿನಿತ್ಯವಾದ ಅಪೌರುಷೇಯವಾದ ವೇದವಾಣಿಯನ್ನೇ ಅಂಗೀಕರಿಸಬೇಕು !!

**ಭಾವವಿಲಾಸಿನೀ–**ಮಂತ್ರಾವೃತ್ತಿಂ ಮಂತ್ರಸ್ಯ ಪೌನಃಪುನ್ಯೇನ ಕಥನರೂಪಜಪಮಿತ್ಯರ್ಥಃ ॥೪೧॥

ದೇಹಬಂಧಾದ್ದೇಹಾಖ್ಯಬಂಧನಾತ್ । ಜೀವಾನ್ ಬಹಿಃ ಕುರ್ಯಾತ್ ಶಿರಶ್ಛಿತ್ವಾ ದೇಹಾದ್ ಬಹಿರ್ನಿಸ್ಸಾರಯೇದಿತ್ಯರ್ಥಃ । ಕಾರಾಗೃಹಾದಿವೇತಿ ತತ್ರ ದೃಷ್ಟಾಂತಃ । ತಥಾಚ ದೇಹಬಂಧ-ಧ್ವಂಸರೂಪಹಿಂಸಾಪಿ ಪುಣ್ಯಸಾಧನಂ ಸ್ಯಾದಿತಿ ಭಾವಃ । ಪರಿಶೇಷಸಿದ್ಧಮರ್ಥಮಾಹ **ಅನಾದೀತಿ।** ತತಃ ಪುರುಷವಚನಯುಕ್ತಿಪ್ರತ್ಯಕ್ಷಾಣಾಮತೀಂದ್ರಿಯಧರ್ಮಾನಿಶ್ಚಾಯಕತ್ವಾತ್ ॥ ೪೨ ॥

**ವಿವರಣೆ–** 'ಕಾರಾಗೃಹಬಂಧಿತರನ್ನು ಬಿಡುಗೆ ಮಾಡುವುದು ಪುಣ್ಯಕರ್ಮವಾದಂತೆ, ದೇಹಬಂಧನ ದಿಂದ ಬಿಡಿಸುವ ಕೊಲೆ ಎಂಬ ಹಿಂಸೆಯೂ ಪುಣ್ಯಸಾಧನ ವಾಗಬೇಕಾದೀತು ಎಂದು ಭಾವ. 'ತತಃ' ಎಂದರೆ 'ಪುರುಷರ ವಚನಗಳು, ಪುರುಷರ ಯುಕ್ತಿಗಳು, ಪುರುಷರ ಪ್ರತ್ಯಕ್ಷಗಳು, ಅತೀಂದ್ರಿಯಗಳಾದ ಧರ್ಮಾಧರ್ಮಗಳನ್ನು ನಿಶ್ಚಯಿಸಲು ಅಸಮರ್ಥಗಳಾದ ಕಾರಣದಿಂದ' ಎಂದು ಅರ್ಥ.

ಅನಾದಿನಿತ್ಯವಾದ ಮಾತಿನಿಂದ ಧರ್ಮಸಿದ್ಧಿಯು ಸುಲಭ ಎನ್ನುತ್ತಾರೆ –

**ಅಸ್ಮದಾದಿಕೃತಂ ಕಾರ್ಯಂ ವ್ಯರ್ಥಂ ಸಾರ್ಥಮನರ್ಥಕೃತ್ ।**
**ದೃಶ್ಯತೇ ಗೇಹಕುಡ್ಯಾದಿ ಕೇನಾಪಿ ನ ಕೃತಾ ತು ಯಾ ॥ ೪೩ ॥**

**ಅನಾದಿತಃ ಪೂರ್ವಪೂರ್ವಸಂಪ್ರದಾಯಬಲಾಗತಾ ।**
**ಸಾ ತು ನಾರ್ಥಂ ವ್ಯಭಿಚರೇತ್ ಕರ್ತೃದೋಷವಿವರ್ಜಿತಾ ॥**
**ಕಿಂ ಕ್ವಚಿನ್ನಾವಕಾಶೋಽಸ್ತಿ ನಿತ್ಯಾಕಾಶೇ ಶರೀರಿಣಾಮ್ ॥ ೪೪ ॥**

**ಅರ್ಥ–** ಅಸ್ಮದಾದಿಕೃತಂ= ನಾವು ಮೊದಲಾದವರಿಂದ ಮಾಡಲ್ಪಟ್ಟ, ಗೇಹಕುಡ್ಯಾದಿ = ಗೃಹ-ಗೋಡೆ ನಿರ್ಮಾಣಾದಿ, ಕಾರ್ಯಂ= ಕಾರ್ಯವು, ಸಾರ್ಥಂ = ಕೆಲವು ಸಫಲವಾದವುಗಳು. ವ್ಯರ್ಥಂ = ಕೆಲವು ವ್ಯರ್ಥವು, ಅನರ್ಥಕೃತ್ = ಕೆಲವು ಅನರ್ಥ ಉಂಟುಮಾಡುವವುಗಳಾಗಿಯೂ, ದೃಶ್ಯತೇ = ಕಂಡುಬರುತ್ತವೆ. ಯಾ ತು= ಯಾವ ವೇದವಾದರೂ, ಕೇನಾಪಿ = ಯಾರಿಂದಲೂ, ನ ಕೃತಾ = ರಚಿಸಲ್ಪಟ್ಟಿಲ್ಲವೋ, ಅನಾದಿತಃ = ಅನಾದಿಕಾಲದಿಂದಲೂ, ಪೂರ್ವಪೂರ್ವ ಸಂಪ್ರದಾಯಬಲಾಗತಾ = ಹಿಂದಿನ ಹಿಂದಿನವರ ಉಪದೇಶವೆಂಬ ಸಂಪ್ರದಾಯಬಲದಿಂದ ಅನೂಚಾನವಾಗಿ ಹರಿದು ಬಂದಿದೆಯೋ, ಕರ್ತೃದೋಷವಿವರ್ಜಿತಾ = ಕರ್ತಾರನಿಲ್ಲದ ಕಾರಣ ತತ್ಕೃತದೋಷಗಳಿಂದ ದೂರವಾಗಿದೆಯೋ, ಸಾ ತು = ಅಂತಹ ವೇದವಾದರೂ, ಅರ್ಥಂ = ವೇದೋಕ್ತವಾದ ವಿಷಯವನ್ನು ಎಂದಿಗೂ, ನ ವ್ಯಭಿಚರೇತ್ = (ಬಾಧಿಸದು) ತಪ್ಪಾಗಿಸುವುದಿಲ್ಲ. (ಹೇಗೆಂದರೆ), ನಿತ್ಯಾಕಾಶೇ = ನಿತ್ಯವಾದ ಆಕಾಶದಲ್ಲಿ, ಶರೀರಿಣಾಮ್ = ಸಂಚರಿಸುವ ಜೀವರಿಗೆ, ಕ್ವಚಿತ್ = ಕೆಲವು ಕಡೆ, ಅವಕಾಶಃ= ಅವಕಾಶವು, ನಾಸ್ತಿ ಕಿಮ್= ಇಲ್ಲವೆಂದಾಗುತ್ತದೆಯೇನು?

**ಪುನರುಕ್ತತ್ವಯುಕ್ತ್ಯಾ ಚ ಮಂತ್ರಾವೃತ್ತಿಂ ಪರಿತ್ಯಜೇತ್ ।**
**ಪರೋಪಕಾರಯುಕ್ತ್ಯಾ ಚ ಗಚ್ಛೇತ್ ಕಾಮಾತುರಾಂಗನಾಮ್ ॥ ೪೧ ॥**

**ದೇಹಬಂಧಾದ್ಬಹಿರ್ಜೀವಾನ್ ಕುರ್ಯಾತ್ಕಾರಾಗೃಹಾದಿವ ।**
**ಅನಾದಿನಿತ್ಯಾ ವಾಗ್ ವಾಚ್ಯಾ ಧರ್ಮಸಿದ್ಧ್ಯೈ ತತೋಽಖಿಲೈಃ ॥ ೪೨ ॥**

**ಅರ್ಥ–** ಪುನರುಕ್ತತ್ವಯುಕ್ತ್ಯಾ = 'ಪುನರುಕ್ತಿ' ಎಂಬ ಯುಕ್ತಿಯನ್ನಾಶ್ರಯಿಸಿ, ಮಂತ್ರಾವೃತ್ತಿಂ ಚ = ಮಂತ್ರದ ಪುನಃಪುನಃ ಉಚ್ಚಾರಣೆ ಎಂಬ ಜಪವನ್ನೂ, ಪರಿತ್ಯಜೇತ್ = ಬಿಡಬೇಕು. ಪರೋಪಕಾರಯುಕ್ತ್ಯಾ ಚ = 'ಪರೋಪಕಾರ ಮಾಡಬೇಕು' ಎಂಬ ಯುಕ್ತಿಯನ್ನಾಶ್ರಯಿಸಿ, ಕಾಮಾತುರಾಂಗನಾಂ = ಕಾಮಾತುರಳಾದ ಪರಸ್ತ್ರೀಯನ್ನು, ಗಚ್ಛೇತ್ = ಗಮನ ಮಾಡಬೇಕು. ಕಾರಾಗೃಹಾದಿವ=ಬಂದೀ ಖಾನೆಯಿಂದ ಖೈದಿಗಳ ಬಂಧನವನ್ನು ಬಿಡಿಸಿ ಉಪಕರಿಸುವಂತೆ, ದೇಹಬಂಧಾತ್ = ದೇಹ ಎಂಬ ಬಂಧನದಿಂದ, ಜೀವಾನ್ = ಜೀವರನ್ನು, ಬಹಿಃ ಕುರ್ಯಾತ್ = ತಲೆ ಕಡಿದು ದೇಹದಿಂದ ಹೊರಗೆ ಕಳುಹಿಸಬೇಕು. (ಇಂತಹ ಯುಕ್ತಿಗಳನ್ನು ಯಾರೂ ಒಪ್ಪುವುದಿಲ್ಲ). ತತಃ = ಆದುದರಿಂದ, ಅಖಿಲೈಃ = ಸರ್ವರಿಂದ, ಧರ್ಮಸಿದ್ಧ್ಯೈ= ಧರ್ಮದ ಸಿದ್ಧಿಗಾಗಿ, ಅನಾದಿನಿತ್ಯಾ= ಅನಾದಿನಿತ್ಯವಾದ, ವಾಗ್ = ವಾಣಿಯು (ಇದೆ ಎಂದು), ವಾಚ್ಯಾ = ಹೇಳಲ್ಪಡಬೇಕು.

**ಅನುವಾದ–** ಮಂತ್ರಗಳನ್ನು ಪುನಃಪುನಃ ಹೇಳುವುದು ಗೌರವಗ್ರಸ್ತವಾಗುತ್ತದೆ, 'ಪುನರುಕ್ತಿ'ದೋಷವೂ ಬರುತ್ತದೆ ಎಂಬ ಯುಕ್ತಿಯನ್ನು ಆಶ್ರಯಿಸಿ ಮಂತ್ರಾವೃತ್ತಿಯನ್ನು ಬಿಟ್ಟುಬಿಡಲಿ! ಕಾಮಾತುರಳಾದ ಅಂಗನೆಯು ನನಗೆ ದೇಹಸುಖ ನೀಡೆಂದು ಬಯಸಿ ಬಂದರೆ ಮಹಾಪಾಪಕಾರಿಯಾದ ಸ್ತ್ರೀಗಮನ ಕರ್ಮವನ್ನು ಪರೋಪಕಾರಯುಕ್ತಿಯನ್ನಾಶ್ರಯಿಸಿ ಮಾಡಬೇಕಾಗುತ್ತದೆ. ಅಪರಾಧಿ ಗಳನ್ನು ಕಾರಾಗೃಹಬಂಧನದಿಂದ ಬಿಡಿಸುವುದು ಒಂದು 'ಲೋಕೋಪಕಾರ'. ಈ ಯುಕ್ತಿಯನ್ನಾಶ್ರಯಿಸಿ ಜೀವರು ದೇಹವೆಂಬ ಬಂಧನದಲ್ಲಿದ್ದಾರೆಂದು ಲೋಕೋಪಕಾರಬುದ್ಧಿಯಿಂದ ಜೀವರ ಶಿರಶ್ಛೇದನ ಮಾಡಿ ಅವರನ್ನು ದೇಹಬಂಧನದಿಂದ ಮುಕ್ತರನ್ನಾಗಿಸಲಿ! ಎಲ್ಲಾ ಪ್ರಾಣಿಹಿಂಸೆಯೂ ಲೋಕೋಪಕಾರವೇ ಆಗಲಿ!! ಆದ್ದರಿಂದ ಕೇವಲ ಯುಕ್ತಿಯನ್ನೇ ಆಶ್ರಯಿಸಿ ಮತಸ್ಥಾಪನೆ ಮಾಡಹೊರಟರೆ ಅಧರ್ಮಯುಕ್ತ ಅನರ್ಥಪರಂಪರೆಯೇ ಬಂದೊದಗುತ್ತದೆ. ಆದ್ದರಿಂದ ಧರ್ಮಾಧರ್ಮವ್ಯವಸ್ಥೆಗೆ ಅನಾದಿನಿತ್ಯವಾದ ಅಪೌರುಷೇಯವಾದ ವೇದವಾಣಿಯನ್ನೇ ಅಂಗೀಕರಿಸಬೇಕು !!

**ಭಾವವಿಲಾಸಿನೀ–** ಮಂತ್ರಾವೃತ್ತಿಂ ಮಂತ್ರಸ್ಯ ಪೌನಃಪುನ್ಯೇನ ಕಥನರೂಪಜಪಮಿತ್ಯರ್ಥಃ ॥೪೧॥

**ದೇಹಬಂಧಾದ್ದೇಹಾಖ್ಯಬಂಧನಾತ್ । ಜೀವಾನ್ ಬಹಿಃ ಕುರ್ಯಾತ್ ಶಿರಶ್ಛಿತ್ವಾ ದೇಹಾದ್ ಬಹಿರ್ನಿಸ್ಸಾರಯೇದಿತ್ಯರ್ಥಃ । ಕಾರಾಗೃಹಾದಿವೇತಿ ತತ್ರ ದೃಷ್ಟಾಂತಃ । ತಥಾಚ ದೇಹಬಂಧ-ಧ್ವಂಸರೂಪಹಿಂಸಾಪಿ ಪುಣ್ಯಸಾಧನಂ ಸ್ಯಾದಿತಿ ಭಾವಃ । ಪರಿಶೇಷಸಿದ್ಧಮರ್ಥಮಾಹ ಅನಾದೀತಿ। ತತಃ ಪುರುಷವಚನಯುಕ್ತಿಪ್ರತ್ಯಕ್ಷಾಣಾಮತೀಂದ್ರಿಯಧರ್ಮಾನಿಶ್ಚಾಯಕತ್ವಾತ್ ॥ ೪೨ ॥**

**ವಿವರಣೆ–** 'ಕಾರಾಗೃಹಬಂಧಿತರನ್ನು ಬಿಡುಗೆ ಮಾಡುವುದು ಪುಣ್ಯಕರ್ಮವಾದಂತೆ, ದೇಹಬಂಧನ ದಿಂದ ಬಿಡಿಸುವ ಕೊಲೆ ಎಂಬ ಹಿಂಸೆಯೂ ಪುಣ್ಯಸಾಧನ ವಾಗಬೇಕಾದೀತು ಎಂದು ಭಾವ. 'ತತಃ' ಎಂದರೆ 'ಪುರುಷರ ವಚನಗಳು, ಪುರುಷರ ಯುಕ್ತಿಗಳು, ಪುರುಷರ ಪ್ರತ್ಯಕ್ಷಗಳು, ಅತೀಂದ್ರಿಯಗಳಾದ ಧರ್ಮಾಧರ್ಮಗಳನ್ನು ನಿಶ್ಚಯಿಸಲು ಅಸಮರ್ಥಗಳಾದ ಕಾರಣದಿಂದ' ಎಂದು ಅರ್ಥ.

**ಅನಾದಿನಿತ್ಯವಾದ ಮಾತಿನಿಂದ ಧರ್ಮಸಿದ್ಧಿಯು ಸುಲಭ ಎನ್ನುತ್ತಾರೆ –**

**ಅಸ್ಮದಾದಿಕೃತಂ ಕಾರ್ಯಂ ವ್ಯರ್ಥಂ ಸಾರ್ಥಮನರ್ಥಕೃತ್ ।**
**ದೃಶ್ಯತೇ ಗೇಹಕುಡ್ಯಾದಿ ಕೇನಾಪಿ ನ ಕೃತಾ ತು ಯಾ ॥ ೪೩ ॥**

**ಅನಾದಿತಃ ಪೂರ್ವಪೂರ್ವಸಂಪ್ರದಾಯಬಲಾಗತಾ ।**
**ಸಾ ತು ನಾರ್ಥಂ ವ್ಯಭಿಚರೇತ್ ಕರ್ತೃದೋಷವಿವರ್ಜಿತಾ ॥**
**ಕಿಂ ಕ್ವಚಿನ್ನಾವಕಾಶೋಽಸ್ತಿ ನಿತ್ಯಾಕಾಶೇ ಶರೀರಿಣಾಮ್ ॥ ೪೪ ॥**

**ಅರ್ಥ–** ಅಸ್ಮದಾದಿಕೃತಂ= ನಾವು ಮೊದಲಾದವರಿಂದ ಮಾಡಲ್ಪಟ್ಟ, ಗೇಹಕುಡ್ಯಾದಿ = ಗೃಹ-ಗೋಡೆ ನಿರ್ಮಾಣಾದಿ, ಕಾರ್ಯಂ= ಕಾರ್ಯವು, ಸಾರ್ಥಂ = ಕೆಲವು ಸಫಲವಾದವುಗಳು. ವ್ಯರ್ಥಂ = ಕೆಲವು ವ್ಯರ್ಥವು, ಅನರ್ಥಕೃತ್ = ಕೆಲವು ಅನರ್ಥ ಉಂಟುಮಾಡುವವುಗಳಾಗಿಯೂ, ದೃಶ್ಯತೇ = ಕಂಡುಬರುತ್ತವೆ. ಯಾ ತು= ಯಾವ ವೇದವಾದರೂ, ಕೇನಾಪಿ = ಯಾರಿಂದಲೂ, ನ ಕೃತಾ = ರಚಿಸಲ್ಪಟ್ಟಿಲ್ಲವೋ, ಅನಾದಿತಃ = ಅನಾದಿಕಾಲದಿಂದಲೂ, ಪೂರ್ವಪೂರ್ವ ಸಂಪ್ರದಾಯಬಲಾಗತಾ = ಹಿಂದಿನ ಹಿಂದಿನವರ ಉಪದೇಶವೆಂಬ ಸಂಪ್ರದಾಯಬಲದಿಂದ ಅನೂಚಾನವಾಗಿ ಹರಿದು ಬಂದಿದೆಯೋ, ಕರ್ತೃದೋಷವಿವರ್ಜಿತಾ = ಕರ್ತಾರನಿಲ್ಲದ ಕಾರಣ ತತ್ಕೃತದೋಷಗಳಿಂದ ದೂರವಾಗಿದೆಯೋ, ಸಾ ತು = ಅಂತಹ ವೇದವಾದರೂ, ಅರ್ಥಂ = ವೇದೋಕ್ತವಾದ ವಿಷಯವನ್ನು ಎಂದಿಗೂ, ನ ವ್ಯಭಿಚರೇತ್ = (ಬಾಧಿಸದು) ತಪ್ಪಾಗಿಸುವುದಿಲ್ಲ. (ಹೇಗೆಂದರೆ), ನಿತ್ಯಾಕಾಶೇ = ನಿತ್ಯವಾದ ಆಕಾಶದಲ್ಲಿ, ಶರೀರಿಣಾಮ್ = ಸಂಚರಿಸುವ ಜೀವರಿಗೆ, ಕ್ವಚಿತ್ = ಕೆಲವು ಕಡೆ, ಅವಕಾಶಃ= ಅವಕಾಶವು, ನಾಸ್ತಿ ಕಿಮ್= ಇಲ್ಲವೆಂದಾಗುತ್ತದೆಯೇನು?

**ಅನುವಾದ–** ನಾವುಗಳು ಮನೆ-ಗೋಡೆ-ಕೆರೆ-ಭಾವಿ ಇತ್ಯಾದಿಗಳ ನಿರ್ಮಾಣವನ್ನು ಮಾಡುತ್ತೇವೆ. ಇವುಗಳಲ್ಲಿ ಕೆಲವು ಕಾರ್ಯಗಳು ಯಶಸ್ವಿ ಎನಿಸುತ್ತವೆ. ಕೆಲವು ನೀರು ಸಿಗಲಿಲ್ಲ, ಅದೃಷ್ಟ ಒದಗಲಿಲ್ಲ ಮುಂತಾಗಿ ವಿಫಲವಾಗುತ್ತವೆ. ಇನ್ನು ಕೆಲವು ಕುಸಿದು ಮೈಮೇಲೆ ಬಿದ್ದು ಅನರ್ಥಕಾರಕಗಳೂ ಆಗುತ್ತವೆ. ಕರ್ತೃನಿರ್ಮಿತ ಕ್ರಿಯೆಗಳಲ್ಲಿ ದೋಷಕ್ಕೆ ಅವಕಾಶವಿದೆ. ವೇದವು ಕರ್ತೃನಿರ್ಮಿತವೆಂದರೆ ಈ ದೋಷ ತಪ್ಪಿದ್ದಲ್ಲ. ಆದ್ದರಿಂದ ವೇದಗಳನ್ನು ಅಪೌರುಷೇಯವೆಂದು ಅಂಗೀಕರಿಸಲೇಬೇಕು. ವೇದವು ಅನಾದಿಕಾಲದಿಂದಲೂ ಪೂರ್ವಪೂರ್ವ ಸಂಪ್ರದಾಯವನ್ನನುಸರಿಸಿ ಉಪದೇಶಬಲದಿಂದ ಪರಂಪರೆಯಿಂದ ಬಂದಿದೆ ಎಂದು ಹೇಳಿದರೆ ವೇದದಲ್ಲಿ ಯಾವ ದೋಷಗಳಿಗೂ ಅವಕಾಶವಿರುವುದಿಲ್ಲ. ಇದನ್ನು ರಾಜರು ಅರ್ಥಾಂತರನ್ಯಾಸ ಅಲಂಕಾರದಿಂದ ಸಮರ್ಥಿಸುತ್ತಾರೆ. ನಿತ್ಯವಾದ ಆಕಾಶದಲ್ಲಿ ಎಲ್ಲಾ ಜೀವರಿಗೂ ಸಂಚಾರ ಅವಕಾಶವಿದೆ. ಈ ಸ್ವಭಾವ ನಿತ್ಯವಾಗಿದೆ. ಇದರಂತೆ ನಿತ್ಯವಾದ ವೇದದಲ್ಲಿಯೂ ಕರ್ತೃನಿರ್ಮಿತವಲ್ಲದ ಕಾರಣ ಎಂದಿಗೂ ಯಾವ ದೋಷಗಳಿಗೂ ಅವಕಾಶವಿಲ್ಲ.

**ಭಾವವಿಲಾಸಿನೀ–** ಅನಾದಿನಿತ್ಯವಾಚಾ ಧರ್ಮಸಿದ್ಧಿಃ ಸುಶಕೇತ್ಯಾಹ– ಅಸ್ಮದಾದಿಕೃತಮಿತ್ಯಾ-ದಿನಾ ॥ ಕಿಂಚಿದ್ ವ್ಯರ್ಥಂ ಕಿಂಚಿತ್ ಸಾರ್ಥಂ ಕಿಂಚಿದನರ್ಥಕೃಚ್ಚ ದೃಶ್ಯತ ಇತಿ ಸಂಬಂಧಃ। ಮಹತಾ ಪ್ರಯತ್ನೇನ ಕೃತಗೇಹಾದಿ ರಾಜಾದಿಭಿರ್ನಿಷ್ಕಾಸಿತೇ ಸತಿ ವ್ಯರ್ಥಂ ತದಭಾವೇ ಸುಖೇನಾವಸ್ಥಾನಾತ್ ಸಾರ್ಥಂ ತುಲಾಭಿತ್ತಿಪಾತಾದಿನಾ ಕ್ವಚಿತ್ ಸ್ವಸ್ಯೈವ ನಾಶಾಚ್ಚಾನರ್ಥಕೃದಿತಿ ಭಾವಃ ॥ ೪೩ ॥

ಸಾ ವಾಕ್ ಕರ್ತೃದೋಷಪದಮಜ್ಞಾನವಿಪರೀತಜ್ಞಾನಾದಿಕರ್ತೃದೋಷ ನಿಮಿತ್ತಾಬೋಧಕತ್ವ ವಿಪರೀತಬೋಧಕತ್ವರೂಪವಾಕ್ಯದೋಷೋಪಲಕ್ಷಣಮ್ । ಕರ್ತುರ್ನಿಮಿತ್ತಾತ್ ಪ್ರಾಪ್ತದೋಷಃ ಕರ್ತೃದೋಷ ಇತಿ ವಾ ಅಸ್ಮಿನ್ನರ್ಥೇಽರ್ಥಾಂತರನ್ಯಾಸಃ ಕಿಮಿತಿ। ಅವಕಾಶದಾನಂ ಹ್ಯಾಕಾಶಸಾಧ್ಯೋಽರ್ಥಃ । ತದ್ವ್ಯಭಿಚಾರಸ್ತು ನಿತ್ಯಾಕಾಶೇ ಯಥಾ ನಾಸ್ತಿ ತಥಾ ನಿತ್ಯವಚಸ್ಯಪ್ಯರ್ಥವ್ಯಭಿಚಾರೋ ನಾಸ್ತೀತಿ ಭಾವಃ ॥ ೪೪ ॥

**ವಿವರಣೆ–** ಮಹಾಪ್ರಯತ್ನದಿಂದ ಗೃಹನಿರ್ಮಾಣ ಮಾಡಿರಲು ರಾಜಾದಿಗಳು ಇಲ್ಲಿಂದ ಹೊರಡು ಎಂದು ಆದೇಶ ಹೊರಡಿಸಿದರೆ ಗೃಹನಿರ್ಮಾಣವು ಕರ್ತೃವಿಗೆ ಪ್ರಯೋಜನವಿಲ್ಲದ್ದಾಗುತ್ತದೆ. ಇಂತಹ ಉಪದ್ರವಗಳಿಲ್ಲದಿದ್ದರೆ ಸುಖವಾಗಿ ವಾಸಮಾಡಿಕೊಂಡಿರುತ್ತಾನಾದ ಕಾರಣ ಪ್ರಯೋಜನವೂ ದೊರೆತಂತಾಗುತ್ತದೆ. ಮನೆಯ ಜಂತಿ-ಗೋಡೆಗಳು ಮಲಗಿದಾಗ ಕುಸಿದುಬಿದ್ದರೆ ಮನೆಯ ಯಜಮಾನನೇ ಸಾಯುವ ಅಪಾಯವಿದೆಯಾದ್ದರಿಂದ 'ಅನರ್ಥಕೃತ್' ಎಂದು ಹೇಳಿದ್ದಾರೆ ಎಂದು ತಿಳಿಯಬೇಕು. 'ಕರ್ತೃದೋಷವಿವರ್ಜಿತಾ' ಎಂಬಲ್ಲಿ 'ಕರ್ತೃದೋಷ' ಪದವು ಉಪಲಕ್ಷಣ. ಕರ್ತೃವಿನಲ್ಲಿರುವ ಅಜ್ಞಾನವಿಪರೀತಜ್ಞಾನಾದಿಕರ್ತೃ ದೋಷನಿಮಿತ್ತ ಅಬೋಧಕತ್ವ

ವಿಪರೀತ ಬೋಧಕತ್ವರೂಪ ವಾಕ್ಯದೋಷಗಳಿಗೆ ಉಪಲಕ್ಷಣವೆಂದು ತಿಳಿಯಬೇಕು. ಕರ್ತೃನಿಮಿತ್ತದಿಂದ ಪ್ರಾಪ್ತವಾದ ದೋಷವು ಕರ್ತೃದೋಷವು. ಈ ಅರ್ಥದಲ್ಲಿ ಅರ್ಥಾಂತರನ್ಯಾಸ 'ಕಿಂ ಕ್ವಚಿನ್ನಾವಕಾಶೋಽಸ್ತಿ' ಎಂಬುದು ವಿಶೇಷ.

ಎಲ್ಲ ಕಾರ್ಯಗಳಿಗೆ ಹಾಗೂ ವಸ್ತುಗಳಿಗೆ ಅವಕಾಶವನ್ನು ಒದಗಿಸುವುದು ಆಕಾಶದಿಂದ ಆಗತಕ್ಕ ಪ್ರಯೋಜನವಾಗಿದೆ. ಇದಕ್ಕೆ ವ್ಯಭಿಚಾರವು ನಿತ್ಯಾಕಾಶದಲ್ಲಿ ಹೇಗೆ ಇಲ್ಲವೋ, ಹಾಗೆಯೇ ಯಥಾರ್ಥಜ್ಞಾನವನ್ನು ಹುಟ್ಟಿಸುವುದು ನಿತ್ಯವಚನವಾದ ವೇದದಿಂದ ಆಗತಕ್ಕ ಪ್ರಯೋಜನವಾದ್ದರಿಂದ ಅರ್ಥವ್ಯಭಿಚಾರವು ಇಲ್ಲ ಎಂದು ಅಭಿಪ್ರಾಯ.

(ಅನಾದಿನಿತ್ಯವಾದ ವೇದವಾಣಿಯಿಂದ ಧರ್ಮನಿರ್ಣಯವನ್ನು ಹೇಳುವುದು ಸುಲಭಸಾಧ್ಯವಾದುದು. ಏಕೆಂದರೆ ವಾಕ್ಯದೋಷಕ್ಕೆ ಕಾರಣ ಪುರುಷನಲ್ಲಿರುವ ದೋಷಗಳು. ಮನುಷ್ಯನಲ್ಲಿರುವ ಅಜ್ಞಾನಾದಿ ದೋಷಗಳಿಂದ ವಾಕ್ಯಗಳಲ್ಲಿ ಅರ್ಥವನ್ನು ತಿಳಿಸುವ ಶಕ್ತಿ ಇಲ್ಲದಿರುವಿಕೆ, ವಿಪರೀತವಾಗಿ ತಿಳಿಸುವಿಕೆ ಮೊದಲಾದ ದೋಷಗಳು ಸಂಭವಿಸುತ್ತವೆ. ಯಾವಾಗ ವೇದಗಳಿಗೆ ಕರ್ತೃವೇ ಇಲ್ಲವೆಂದಾಯಿತೋ, ಆಗ ಕರ್ತೃದೋಷ ಮೂಲಕವಾದ ದೋಷಗಳಿಗೆ ಎಲ್ಲಿಂದ ಅವಕಾಶ? ಸರ್ವಥಾ ವೇದಗಳಲ್ಲಿ ದೋಷವಿಲ್ಲವೆಂದು ಅಭಿಪ್ರಾಯ.)

ನಿತ್ಯವಾದ ವೇದವು ಜಿನಾದಿವಾದಿಗಳ ಮಾತಿನಲ್ಲಿ ಯಾವುದೋ ಒಂದಾಗಿದೆ ಎಂದು ಏಕಾಗಬಾರದು ಎಂಬುದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ –

**ಸಾ ಚ ಶ್ರುತಿರ್ಭವೇದೇಷಾ ಶ್ರೌತವಾದಿಪ್ರವಾದತಃ ।**
**ಶ್ರುತಿನಾಮ್ನಾ ಚ ಸರ್ವೈಶ್ಚ ಶ್ರುತಾ ಯಾ ಸೈವ ಹಿ ಶ್ರುತಿಃ ॥ ೪೫ ॥**

**ಅರ್ಥ–** ಶ್ರೌತವಾದಿಪ್ರವಾದತಃ = ವೈದಿಕಸಂಪ್ರದಾಯದಂತೆ ಬಂದ, ಏಷಾ ಶ್ರುತಿಃ = ಈ ಅಗ್ನಿಮೀಳೇ ಇತ್ಯಾದಿ ವಾಕ್ಯಸಮೂಹವೇ, ಸಾ ಭವೇತ್ = ಆ ಅಪೌರುಷೇಯ ವಾಕ್ಯವಾಗುತ್ತದೆ. ಚ = ಮತ್ತು , ಯಾ = ಯಾವುದು, ಸರ್ವೈಃ = ಎಲ್ಲರಿಂದಲೂ, ಶ್ರುತಿನಾಮ್ನಾ = ಶ್ರುತಿ ಎಂಬ ಹೆಸರಿನಿಂದ, ಶ್ರುತಾ = ಕೇಳಲ್ಪಟ್ಟಿದೆ, ಸೈವ = ಅದೇ, ಶ್ರುತಿರ್ಹಿ = ಶ್ರುತಿ ಎಂಬ ಪದದಿಂದ ಕರೆಸಿಕೊಳ್ಳಲು ಯೋಗ್ಯವಾಗುವುದಷ್ಟೆ!.

**ಅನುವಾದ–** ನಿತ್ಯವಾದ ವಾಣಿಯು ಶ್ರುತಿ ಎಂದು ಕರೆಯುವ ವೇದವೇ ಆಗಿದೆ. ವೇದಾಭ್ಯಾಸಿಯಾದ ವೈದಿಕರೆಲ್ಲರೂ 'ಈ ವೇದವು ಅನಾದಿಯು' 'ಪರಂಪರೆಯಿಂದ ಕಿವಿಯಿಂದ ಕಿವಿಗೆ ಹರಿದು ಬಂದಿದ್ದು' ಎಂದೇ ಹೇಳುತ್ತಾರೆ. (ಹೊರತು ಜಿನನ ಮಾತೆಂದು ಯಾರೂ ಹೇಳುವುದಿಲ್ಲ) ಯಾರೂ ರಚಿಸದೆ ಅವಿಗೀತವೈದಿಕಶಿಷ್ಟಾಚಾರ ಪರಂಪರೆಯಿಂದ ಕೇಳಿಕೊಂಡು ಬಂದಿರುವ

ಕಾರಣದಿಂದ ವೇದಕ್ಕೆ 'ಶ್ರುತಿ' ಎಂದು ಹೆಸರು. 'ಕೇಳಲ್ಪಟ್ಟದ್ದು' ಎಂದೇ ಇದಕ್ಕೆ ಹೆಸರು. ಆದ್ದರಿಂದ 'ಶ್ರುತಿ' ಎನಿಸಿದೆ. (ರಚಿಸಲ್ಪಟ್ಟದ್ದರೆ 'ಶ್ರುತಿ' ಎಂದು ಯಾರೂ ಕರೆಯುತ್ತಿರಲಿಲ್ಲ ಎಂದು ಭಾವ.)

**ಭಾವವಿಲಾಸಿನೀ–** ನನು ಸಾ ನಿತ್ಯಾ ವಾಗ್ ಜಿನಾದಿವಾಗನ್ಯತಮಾ ಕಿಂ ನ ಸ್ಯಾದಿತ್ಯತ ಆಹ – **ಸಾ ಚೇತಿ** ॥ ಶ್ರೌತವಾದಿಪ್ರವಾದತಃ ಶ್ರೌತವಾದಿನೋ ವೈದಿಕಾಃ । ತೇಷಾಂ ಪ್ರವಾದಃ ವೇದೋಽನಾದಿರಿತಿ ಪಾರಂಪರ್ಯೇಣಾಗತಾ ಕಥಾ ಜಿನಾದಿವಾಚಾಂ ಜಿನಾದಿಕೃತವಾಕ್ಯತ್ವೇನೈವ ಲೋಕಪ್ರಸಿದ್ಧೇರಿತಿ ಭಾವಃ ॥ ೪೫ ॥

**ವಿವರಣೆ–** ಶ್ರೌತವಾದಿಪ್ರವಾದ ಎಂದರೆ ವೈದಿಕರ ಪ್ರವಾದ. ಪ್ರವಾದ ಎಂದರೆ ವೇದವು ಅನಾದಿ ಎಂದು ಪಾರಂಪರ್ಯೇಣ ನಡೆದು ಬಂದ ಕಥೆ.

(ಜಿನಾದಿ ಮಾತುಗಳು ಜಿನಾದಿಗಳಿಂದ ರಚಿಸಲ್ಪಟ್ಟದ್ದು ಎಂದೇ ಲೋಕದಲ್ಲಿ ಪ್ರಸಿದ್ಧಿ ಇದೆ. ಆದ್ದರಿಂದ ಜಿನಾದಿ ಮಾತುಗಳು ವೇದ ಎನ್ನಲು ಬರುವುದಿಲ್ಲ ಎಂದು ಅಭಿಪ್ರಾಯ.)

**ಕರ್ತೃ ಅಪ್ರಸಿದ್ಧನಾದ ಕಾರಣದಿಂದಲೂ ವೇದವನ್ನು ನಿತ್ಯವೆಂದು ಹೇಳಲು ಬರುತ್ತದೆ ಎಂದು ತಿಳಿಸಲು ಕರ್ತೃವಿನ ಅಪ್ರಸಿದ್ಧಿಯನ್ನು ಇಲ್ಲಿ ತಿಳಿಸುತ್ತಿದ್ದಾರೆ**

**ನ ಷಡ್ಭಿರ್ದರ್ಶನಾಚಾರ್ಯೈಃ ಕೃತೋ ವೇದೋ ವಿಚಾರಣೇ ।**
**ದ್ವಯೋರಸಮ್ಮತತ್ವೇನ ಚತುರ್ಣಾಮಪಿ ಸಮ್ಮತೇಃ ॥ ೪೬ ॥**

**ಅರ್ಥ–** ವಿಚಾರಣೇ (ಸತಿ) = ವಿಚಾರ ಮಾಡುತ್ತಿರಲು, ಷಡ್ಭಿಃ = ಮೀಮಾಂಸಕ-(ಜೈನ-ಬೌದ್ಧ) ಚಾರ್ವಾಕ-ತಾರ್ಕಿಕ-ಸಾಂಖ್ಯ-ವೇದಾಂತಿ ಎಂಬ ಆರು, ದರ್ಶನಾಚಾರ್ಯೈಃ = ದರ್ಶನಾಚಾರ್ಯ ಪುರುಷರಿಂದಲೂ, ವೇದಃ = ವೇದವು, ನ ಕೃತಃ = ಮಾಡಲ್ಪಟ್ಟದ್ದಲ್ಲ (ಎಂದು ತಿಳಿದುಬರುತ್ತದೆ. ಅದು ಹೇಗೆಂದರೆ, ದ್ವಯೋಃ = ಬೌದ್ಧ-ಚಾರ್ವಾಕ ಇವರಿಬ್ಬರಿಗೆ, ಅಸಮ್ಮತತ್ವೇನ = (ವೇದವು ಪ್ರಮಾಣವೆಂದು ಅಂಗೀಕರಿಸದ ಕಾರಣ) ವೇದಪ್ರಾಮಾಣ್ಯವೇ ಅಸಮ್ಮತವಾದ ಕಾರಣ, ಚತುರ್ಣಾಮಪಿ = ತಾರ್ಕಿಕ-ಮೀಮಾಂಸಕ- ಸಾಂಖ್ಯ-ವೇದಾಂತಿ ಈ ನಾಲ್ವರಿಗೂ, ಸಮ್ಮತೇಃ= ಸಮ್ಮತವಾದ ಕಾರಣ (ಇವರಿಂದಲೂ ವೇದವು ರಚಿಸಲ್ಪಟ್ಟಿಲ್ಲ ಎಂದು ತಿಳಿದು ಬರುತ್ತದೆ).

**ಅನುವಾದ–** ಚಾರ್ವಾಕ, ಬೌದ್ಧ, ಮೀಮಾಂಸಕ, ತಾರ್ಕಿಕ, ಸಾಂಖ್ಯ, ವೇದಾಂತಿಗಳೆಂಬ ಆರು ದರ್ಶನಗಳ ಆಚಾರ್ಯಪುರುಷರುಗಳೂ ವೇದವನ್ನು ರಚಿಸಿಲ್ಲ ಎಂಬುದು ನಮಗೆ ಸ್ಪಷ್ಟವಾಗಿ ತಿಳಿದುಬರುತ್ತದೆ. ಹೇಗೆಂದರೆ ಚಾರ್ವಾಕ-ಬೌದ್ಧರು ವೇದಪ್ರಾಮಾಣ್ಯವನ್ನೇ ಒಪ್ಪದ ಕಾರಣ ನಿಂದಕರಾದ

ಈರ್ವರು ರಚಿಸಿಲ್ಲವೆಂದೇ ಅರ್ಥ. ಉಳಿದ ಮೀಮಾಂಸಕ-ತಾರ್ಕಿಕ-ಸಾಂಖ್ಯ-ವೇದಾಂತಿಗಳು ವೇದಪ್ರಾಮಾಣ್ಯವನ್ನು ಅಂಗೀಕರಿಸಿದ್ದರಿಂದ (ಅವರು ಯಾರೂ ರಚಿಸಿಲ್ಲವಾದ್ದರಿಂದ) ಅಕರ್ತೃಕತ್ವವು ವೇದಕ್ಕೆ ನಿಶ್ಚಯವಾಗುತ್ತದೆ.

**ಭಾವವಿಲಾಸಿನೀ–** ಕರ್ತುರಪ್ರಸಿದ್ಧೇರಪಿ ವೇದೋ ನಿತ್ಯ ಇತಿ ವಕ್ತುಂ ಸಂಭಾವಿತಕರ್ತೃನಿಷೇಧಂ ಕರೋತಿ – **ನ ಷಡ್ಭಿರಿತಿ** ॥ ಷಡ್ಭಿರ್ಲೋಕಾಯತಾದಿಭಿಃ । ತತ್ರ ಹೇತುಮಾಹ – **ದ್ವಯೋರಿತಿ** ॥ ದ್ವಯೋರ್ಬೌದ್ಧಲೋಕಾಯತಯೋರಸಮ್ಮತೇರ್ವೇದಸ್ಯ ಪ್ರಮಾಣತ್ವೇನಾಸಮ್ಮತೇರಿತ್ಯರ್ಥಃ । ನಹಿ ವೇದೋಽಪ್ರಮಾಣಮಿತ್ಯಂಗೀಕುರ್ವಾತೇ ತತ್ಕರ್ತಾರೌ ಚೇತಿ ಯುಜ್ಯತೇ । ಚತುರ್ಣಾಂ ತಾರ್ಕಿಕ-ಮೀಮಾಂಸಕಸಾಂಖ್ಯವೇದಾಂತಿನಾಮ್ । ನಹಿ ತನ್ಮಧ್ಯೇ ಏಕೈಕಾಚಾರ್ಯಕೃತತ್ವೇ ತದ್ವಿರೋಧಿನಾಮನ್ಯೇಷಾಮಾಚಾರ್ಯಾಣಾಂ ತತ್ಪ್ರಾಮಾಣ್ಯೇ ಸಮ್ಮತಿರ್ಭವತಿ । ತತ್ತತ್ಕೃತಭಾಷ್ಯಾದೌ ತದದರ್ಶನಾತ್ । ಅಸ್ತಿ ಚತುರ್ಣಾ- ಮಾಚಾರ್ಯಾಣಾಂ ವೇದಪ್ರಾಮಾಣ್ಯೇ ಸಮ್ಮತಿಃ । ತಸ್ಮಾನ್ನೈಕೈಕಾಚಾರ್ಯಕೃತೋ ವೇದ ಇತಿ ಭಾವಃ (ಯಾ ತು ಜೈನಬೌದ್ಧಕಣಾದಾನಾಂ ರೀತ್ಯಾ ಕಾಲಾಸುರಾಷ್ಟಕಚತುರ್ಮುಖಕೃತತ್ವೋಕ್ತಿಃ, ಸಾಽಪಿ ತೇಷಾಮೇವಾನ್ಯಂ ವಿಪ್ರತಿಪತ್ತ್ಯಾ ನೈಕಕರ್ತೃಕತ್ವಸ್ಯಾಪಿ ಸಾಧಿಕಾ, ಯಾವದ್ವಿಶೇಷಬಾಧೇ ಸಾಮಾನ್ಯಸ್ಯಾಪಿ ಬಾಧಾನ್ನ ಕೃತತ್ವಸಾಮಾನ್ಯಸಾಧಿಕಾ ಚ । ವಿಸ್ತೃತಮೇತತ್ ಕಲ್ಪಲತಾಯಾಮ್ (ಪ್ರ.ಗ್ರಂಥಃ) ॥ ೪೬ ॥

**ವಿವರಣೆ–** ವೇದವನ್ನು ಪ್ರಮಾಣವೆಂದೇ ಅಂಗೀಕರಿಸದ ಬೌದ್ಧ-ಚಾರ್ವಾಕರು ವೇದವನ್ನು ರಚಿಸಿದ್ದಾರೆ ಎಂದು ಹೇಳಲಾಗುವುದಿಲ್ಲ. ಇನ್ನು ಉಳಿದ ನಾಲ್ವರಲ್ಲಿ ಯಾರಾದರೂ ರಚಿಸಿರಬಹುದು ಎಂದೂ ಹೇಳಲಾಗದು. ಏಕೆಂದರೆ ನಾಲ್ವರಲ್ಲಿ ಒಬ್ಬ ರಚಿಸಿದ ವೇದವನ್ನು ಮತ್ತೊಬ್ಬ ಮತಾಚಾರ್ಯನು ಪ್ರಮಾಣವೆಂದು ಹೇಗೆ ಅಂಗೀಕರಿಸಿಯಾನು? ಹೀಗಾಗಿ ಒಬ್ಬ ಮಾಡಿದ್ದು ಎಂದರೆ ಮೂವರ ವಿರೋಧ ಬರುತ್ತದೆ. ಪ್ರಾಮಾಣ್ಯವಿಷಯದಲ್ಲಿ ವಿರೋಧವಿಲ್ಲವಾದ್ದರಿಂದ ನಾಲ್ವರಲ್ಲಿ ಯಾರೂ ವೇದಕರ್ತೃಗಳು ಅಲ್ಲವೆಂದೇ ನಿಶ್ಚಯ. ಇಷ್ಟೇ ಅಲ್ಲದೆ, ಆಯಾ ವೇದಪ್ರಾಮಾಣ್ಯವಾದಿಗಳ ಮತಗಳ ಭಾಷ್ಯವಾಕ್ಯಗಳಲ್ಲಿ ಎಲ್ಲೂ ಇಂತಹವರಿಂದ ರಚಿತವಾದದ್ದು ಎಂಬ ಉಲ್ಲೇಖವಿಲ್ಲ. ಎಲ್ಲರಿಗೂ ವೇದಪ್ರಾಮಾಣ್ಯದಲ್ಲಿ ಸಮ್ಮತಿಯೇ ಇದೆ. ಆದ್ದರಿಂದ ಯಾರೋ ಒಬ್ಬ ಆಚಾರ್ಯರು ಮಾಡಿದ್ದಾರೆ ಎಂಬುವಂತೆಯೂ ಇಲ್ಲ.

ವೇದವು (ತಾರ್ಕಿಕರ) ಈಶ್ವರನಿಂದಲೇ ರಚಿತವಾಗಿದೆ ಎಂದೂ ಹೇಳಲಾಗದು ಎಂದು ಇಲ್ಲಿ ತಿಳಿಸುತ್ತಾರೆ–

ನಾಪೀಶ್ವರಕೃತೋ ವೇದೋ ಭಾಟ್ಟಾದ್ಯೈಸ್ತ್ರಿಭಿರುಚ್ಯತೇ ।
ಯೇನೈಕೇನೋಚ್ಯತೇ ತೇನ ಮುಚ್ಯತೇ ಯುಕ್ತಿಮಾರ್ಗತಃ ।
ಅಶರೀರಸ್ತದೀಶಸ್ತಾನ್ ನೈವ ವಕ್ತಿ ಕದಾಚನ ॥ ೪೭ ॥

**ಅರ್ಥ–** ವೇದಃ = ವೇದವು, ಈಶ್ವರಕೃತಃ = ಈಶ್ವರನಿಂದ ರಚಿಸಲ್ಪಟ್ಟಿದ್ದು ಎಂಬುದು, ಭಾಟ್ಟಾದ್ಯೈಃ = ಮೀಮಾಂಸಕ-ಸಾಂಖ್ಯ-ವೇದಾಂತಿಗಳೆಂಬ, ತ್ರಿಭಿಃ = ಮೂರು ದಾರ್ಶನಿಕರಿಂದ, ನಾಪಿ ಉಚ್ಯತೇ = ಹೇಳಲ್ಪಡುವುದಿಲ್ಲ. ಯೇನ = ಯಾವ, ಏಕೇನ=ಒಬ್ಬನಿಂದ (ತಾರ್ಕಿಕನಿಂದ), ಉಚ್ಯತೇ = (ಸೃಷ್ಟಿಕಾಲದಲ್ಲಿ ಈಶ್ವರನಿಂದ ರಚಿತವಾಯಿತೆಂದು) ಹೇಳಲ್ಪಡುತ್ತದೆಯೋ, ತೇನ= ಆ ತಾರ್ಕಿಕರಿಂದ ಅದು, ಯುಕ್ತಿಮಾರ್ಗತಃ = ಯುಕ್ತಿಮಾರ್ಗದಿಂದ, ಮುಚ್ಯತೇ = ಬಿಡಲ್ಪಟ್ಟದ್ದಾಗಿದೆ. (ಏಕೆಂದರೆ), ತದೀಶಃ = ತಾರ್ಕಿಕನ ಈಶ್ವರನು, ಅಶರೀರಃ = ಶರೀರವಿಲ್ಲದವನು. (ಹೀಗೆ ಅವನು ಅಂಗೀಕರಿಸಿದ್ದಾನೆ.). (ಈ ಈಶ್ವರನು), ತಾನ್ = ವೇದಗಳನ್ನು, ಕದಾಚನ = ಎಂದೆಂದಿಗೂ, ನೈವ ವಕ್ತಿ = ಹೇಳುವುದೇ ಇಲ್ಲ.

**ಅನುವಾದ– ವೇದಗಳು ಈಶ್ವರಕೃತ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಭಾಟ್ಟ-ಸಾಂಖ್ಯ- ವೇದಾಂತಿಗಳು ಈಶ್ವರಕೃತ ಎಂದು ಒಪ್ಪುವುದಿಲ್ಲ. ತಾರ್ಕಿಕನೊಬ್ಬನು ಸೃಷ್ಟಿಕಾಲದಲ್ಲಿ ಈಶ್ವರನಿಂದ ರಚಿತವಾದುದು ಎಂದು ಹೇಳುತ್ತಾನಾದರೂ ಯುಕ್ತಿಗೆ ಈ ಮಾತು ವಿರುದ್ಧವಾಗಿದೆ. ಏಕೆಂದರೆ ತಾರ್ಕಿಕನ ಪ್ರಕಾರ ಈಶ್ವರನು ಶರೀರವಿಲ್ಲದವ. ಅಶರೀರಿಯಾದ ಅವನಿಗೆ ವಾಗಿಂದ್ರಿಯವೇ ಇಲ್ಲವಾದ ಕಾರಣ ವೇದೋಚ್ಚಾರಣೆಯನ್ನಾದರೂ ಹೇಗೆ ಮಾಡಿಯಾನು? ಎಂದೆಂದಿಗೂ ಮಾಡಲಾರ. (ಆದ್ದರಿಂದ ವೇದಾಪೌರುಷೇಯತ್ವವಾದವನ್ನು ನಿರಾಕರಿಸಲು ಸಾಧ್ಯವಿಲ್ಲವೆಂದು ಅಭಿಪ್ರಾಯ.)**

**ಭಾವವಿಲಾಸಿನೀ– ನನ್ವೀಶ್ವರಕೃತೋ ವೇದ ಇತ್ಯತ ಆಹ – ನಾಪೀತಿ ॥ ಭಾಟ್ಟಾದ್ಯೈರಪ್ಯಪೌರುಷೇಯತ್ವಾಂಗೀಕಾರಾತ್ । ಯೇನೈಕೇನ ನೈಯ್ಯಾಯಿಕೇನೋಚ್ಯತೇ ವೇದ ಈಶ್ವರಕೃತ ಇತಿ । ಯುಕ್ತಿಮಾರ್ಗತಃ ಕಥಂ ಮುಚ್ಯತೇ? ಇತ್ಯತ ಆಹ – ಅಶರೀರ ಇತಿ ॥ ಅಶರೀರಃ ಅಶರೀರತ್ವೇನಾಂಗೀಕೃತಃ । ತದೀಶಸ್ತಾರ್ಕಿಕಾಣಾಮೀಶ್ವರಃ । ತಾಂ ವೇದವಾಚಮ್ ॥ ೪೭ ॥**

**ತತ್ಕರ್ತೃತಾ ಕಥಂ ತಸ್ಯ ನ ಹ್ಯಣೋಃ ಚೋದನಾದಿನಾ ।**
**ನಭೋಗುಣಸ್ಯಾಸ್ಯ ಜನ್ಮ ಕಿಂತೂಚ್ಚಾರಣತಸ್ತವ ॥ ೪೮ ॥**

**ಅರ್ಥ–** ತಸ್ಯ = ಆ ಈಶ್ವರನಿಗೆ, ತತ್ಕರ್ತೃತಾ = ವೇದಕರ್ತೃತ್ವವು, ಕಥಂ = ಯಾವ ಪ್ರಕಾರದಿಂದ ಹೇಳಲ್ಪಡುತ್ತದೆ, ಅಣೋಃ = ಪರಮಾಣುವಿನಲ್ಲಿ ನಡೆಯುವ, ಚೋದನಾದಿನಾ = ದ್ವ್ಯಣುಕೋತ್ಪತ್ತಿಗೆ ಕಾರಣವಾದ ವ್ಯಾಪಾರದಿಂದ (ಜಗತ್ತಿನ ಸೃಷ್ಟಿ ನಡೆಯುವಂತೆ), ಅಸ್ಯ = ಈ ವರ್ಣಾತ್ಮಕವಾದ ವೇದಕ್ಕೆ (ಉತ್ಪತ್ತಿಯು), ನಹಿ = ಇಲ್ಲವಷ್ಟೆ? ಕಿಂತು = ಮತ್ತೇನೆಂದರೆ, ನಭೋಗುಣಸ್ಯ = ಆಕಾಶದ ಗುಣವಾದ, (ಅಸ್ಯ = ವರ್ಣಾತ್ಮಕವಾದ ವೇದದ), ಜನ್ಮ = ಉತ್ಪತ್ತಿಯು, ತವ = ನಿನ್ನ,(ನಿನ್ನಂತೆಯೂ) ಉಚ್ಚಾರಣತಃ = ಉಚ್ಚಾರಣೆಯಿಂದಲೇ (ಎಂದು ಹೇಳಬೇಕು.).

**ಅನುವಾದ–** ತಾರ್ಕಿಕರು ಪರಮಾಣುವಿನಿಂದ ದ್ವ್ಯಣುಕಾದಿ ಕ್ರಮದಿಂದ ವಸ್ತುಗಳು ಸೃಷ್ಟಿಯಾಗುತ್ತವೆ. ಹೀಗೆ ಹುಟ್ಟುತ್ತಾ ಸ್ಥೂಲಪ್ರಪಂಚದ ಸೃಷ್ಟಿಯಾಗುತ್ತದೆ ಎಂದು ಹೇಳುತ್ತಾರೆ. ಅದರಂತೆ ವೇದಗಳ ಸೃಷ್ಟಿಯಾಗಲಿ ಎನ್ನಲಾಗದು. ಏಕೆಂದರೆ ತಾರ್ಕಿಕರು ವೇದವನ್ನು ಶಬ್ದರೂಪವೆಂದು ಅಂಗೀಕರಿಸಿದ್ದಾರೆ. ಶಬ್ದವು ಆಕಾಶದ ಗುಣವಾಗಿದೆ. ಉಚ್ಚಾರಣೆಯಿಂದ ಶಬ್ದದ ಉತ್ಪತ್ತಿಯಾಗುತ್ತದೆ. ಆದ್ದರಿಂದ ಉಚ್ಚಾರಣೆಯಿಂದಲೇ ಶಬ್ದರೂಪವಾದ ವೇದವು ಉತ್ಪತ್ತಿಯಾಗಬೇಕಲ್ಲದೇ ಪೃಥಿವ್ಯಾದಿ ಸೃಷ್ಟಿಯಂತೆ ಹೇಳಲಾಗುವುದಿಲ್ಲ. (ಉಚ್ಚಾರಣೆಯಿಂದ ಸೃಷ್ಟಿ ಎನ್ನಲೂ ಸಾಧ್ಯವಿಲ್ಲ ಏಕೆಂದರೆ ಹಿಂದಿನಂತೆ ಈಶ್ವರನು ಅಶರೀರಿಯಾದ್ದರಿಂದ ಉಚ್ಚರಿಸಲು ಅಸಮರ್ಥನಾಗಿದ್ದಾನೆ.)

**ಭಾವವಿಲಾಸಿನೀ–** ತತ್ಕರ್ತೃತಾ ವೇದಕರ್ತೃತಾ । ನನ್ವೀಶ್ವರಸ್ಯಾಶರೀರತ್ವೇಽಪಿ ಪರಮಾಣು-ನೋದನಾದಿನಾ ದ್ವ್ಯಣುಕಾದ್ಯುತ್ಪತ್ತಿವದೀಶ್ವರಾದ್ವೇದಸ್ಯ ಜನ್ಮ ಭವತೀತ್ಯತ ಆಹ – **ನಹೀತಿ** ॥ ಅಸ್ಯ ವರ್ಣಾತ್ಮಕಸ್ಯ ವೇದಸ್ಯ । ನಭೋಗುಣಸ್ಯೇತಿ ಹೇತುಗರ್ಭವಿಶೇಷಣಮ್ । ವೇದಸ್ಯ ವರ್ಣಾತ್ಮಕಶಬ್ದತ್ವೇನ ತನ್ಮತೇ ನಭೋಗುಣತ್ವಾತ್ । ನಹಿ ನಿತ್ಯದ್ರವ್ಯಸ್ಯ ಗುಣೇ ಪರಮಾಣು-ನೋದನಾದೇಃ ಪ್ರಾಪ್ತಿಸ್ತನ್ಮತೇ । ಕಿಂತು ದ್ವ್ಯಣುಕಾದಿಕಾರ್ಯೋತ್ಪತ್ತಾವೇವ ತಸ್ಯೋಪ-ಯೋಗಃ । ನತು ಗುಣೋತ್ಪತ್ತೌ । ಕಾರಣಗುಣಾದೇವ ಕಾರ್ಯೇ ಗುಣೋತ್ಪತ್ತ್ಯಂಗೀಕಾ-ರಾತ್ । ನಿತ್ಯದ್ರವ್ಯಗುಣೇ ತು ನೇಯಮಪಿ ಪ್ರಕ್ರಿಯಾ ಸಂಭವತಿ । ತರ್ಹಿ ತನ್ಮತೇ ವೇದಸ್ಯ ಕಥಂ ಜನ್ಮೇತ್ಯಾಶಂಕತೇ – **ಕಿಂತ್ವಿತಿ** ॥ ಉತ್ತರಮಾಹ – **ಉಚ್ಚಾರಣತ ಇತಿ** ॥ ೪೮ ॥

**ವಿವರಣೆ–** ಈಶ್ವರನು ಅಶರೀರಿಯಾಗಿದ್ದರೂ ಪರಮಾಣುಗತ ಕ್ರಿಯೆಯಿಂದ ದ್ವ್ಯಣುಕಾದ್ಯುತ್ಪತ್ತಿ ಯಾಗುವಂತೆ ಈಶ್ವರನಿಂದ ವೇದಗಳ ಜನ್ಮವಾಗುತ್ತದೆ ಎಂದೇಕೆ ಹೇಳಬಾರದು ಎಂದರೆ, ಅದಕ್ಕೆ 'ನಹಿ' ಎಂದು ಉತ್ತರಿಸಿದ್ದಾರೆ.

'ನಭೋಗುಣಸ್ಯ' ಎಂಬುದು ಹೇತುಗರ್ಭವಿಶೇಷಣ. ವೇದವು ವರ್ಣಾತ್ಮಕ-ಶಬ್ದವಾಗಿರುವುದರಿಂದ ತಾರ್ಕಿಕನ ಪ್ರಕಾರ ವರ್ಣಾತ್ಮಕ ಶಬ್ದವು ನಭೋಗುಣವಾಗಿರುವುದರಿಂದ (ಪರಮಾಣುವಿನ ದ್ವಾರಾ ಉತ್ಪತ್ತಿಯನ್ನು ಹೇಳುವಂತೆ ಹೇಳಲಾಗದು.) ತಾರ್ಕಿಕನ ಪ್ರಕಾರ ನಿತ್ಯದ್ರವ್ಯದ ಗುಣದಲ್ಲಿ ಪರಮಾಣುವಿನ ಚೋದನೆ ಇರುವುದಿಲ್ಲ. ಹೊರತು, ದ್ವ್ಯಣುಕಾದಿ ಕಾರ್ಯೋತ್ಪತ್ತಿಯಲ್ಲಿ ಮಾತ್ರ ಪರಮಾಣುವಿನ ಉಪಯೋಗ, ಗುಣೋತ್ಪತ್ತಿಯಲ್ಲಿ ಅಲ್ಲ. ಕಾರಣಗುಣದಿಂದಲೇ ಕಾರ್ಯದಲ್ಲಿ ಗುಣೋತ್ಪತ್ತಿಯನ್ನು ಅಂಗೀಕರಿಸಿದ್ದಾನೆ. ನಿತ್ಯದ್ರವ್ಯ ಗುಣದಲ್ಲಿಯಾದರೂ ಈ ಪ್ರಕ್ರಿಯೆಯೂ ಸಂಭವಿಸುವುದಿಲ್ಲ. ಹಾಗಾದರೆ, ಅವನ ಮತದಲ್ಲಿ ವೇದಗಳ ಉತ್ಪತ್ತಿ ಹೇಗೆ ಎಂದರೆ ಉಚ್ಚಾರಣೆಯಿಂದಲೇ ಎಂದು ಹೇಳಬೇಕು. (ಆದರೆ ಹಿಂದೆ ಹೇಳಿದ ಯುಕ್ತಿಯಿಂದ ಅದೂ ಕೂಡುವುದಿಲ್ಲ ಎಂದು ಅಭಿಪ್ರಾಯ.)

ಹಿಂದೆ ಹೇಳಿದ ವಿಷಯವನ್ನೇ ವಿಸ್ತರಿಸುತ್ತಾರೆ–

**ಉತ್ಪತ್ತಯೇ ವ್ಯಕ್ತಯೇ ವಾ ಶಬ್ದಾನಾಂ ಸರ್ವವಾದಿಭಿಃ ।**
**ವಾಚ್ಯೈವ ಕಿಲ ತಾಲ್ವೋಷ್ಠಪುಟವ್ಯಾಪಾರಮೂಲತಾ ॥ ೪೯ ॥**

**ಅರ್ಥ–** ಶಬ್ದಾನಾಂ = ಶಬ್ದಗಳ, ಉತ್ಪತ್ತಯೇ = ಸೃಷ್ಟಿಗಾಗಲಿ, ವ್ಯಕ್ತಯೇ ವಾ = ಅಭಿವ್ಯಕ್ತಿಗಾಗಲೀ, ತಾಲ್ವೋಷ್ಠಪುಟವ್ಯಾಪಾರಮೂಲತಾ ಏವ= ತಾಲು (ಬಾಯಿಯೊಳಗೆ ಮೇಲ್ಭಾಗ), ತುಟಿಗಳ, ಸ್ಪಂದನರೂಪ ವ್ಯಾಪಾರ ಮೂಲಕತ್ವವೇ, ಸರ್ವವಾದಿಭಿಃ = ಎಲ್ಲ ದಾರ್ಶನಿಕರಿಂದ, ವಾಚ್ಯಾ ಕಿಲ= ಹೇಳಲ್ಪಡಬೇಕಷ್ಟೇ!

**ಅನುವಾದ–** ವೇದವು ಸೃಷ್ಟಿಯಾದವು ಎಂದು ಯಾರಾದರೂ ಹೇಳಲಿ! ಅಥವಾ ವ್ಯಕ್ತವಾದವು ಎಂದೇ ಹೇಳಲಿ. ಹೇಗೆ ಹೇಳಿದರೂ ಶಬ್ದರೂಪವಾಗಿರುವುದರಿಂದ ವಾಗಿಂದ್ರಿಯದ ಕಂಠ-ತಾಲು-ಓಷ್ಠಪುಟಗಳ ವ್ಯಾಪರದ ಅವಶ್ಯಕತೆ ಇದೆ ಎಂದು ಎಲ್ಲ ವಾದಿಗಳು ಅವಶ್ಯವಾಗಿ ಅಂಗೀಕರಿಸಲೇಬೇಕು (ಅಂಗೀಕರಿಸಿದ್ದಾರೆ).

**ಭಾವವಿಲಾಸಿನೀ–** ಉಕ್ತಮೇವಾರ್ಥಂ ವಿಶದಯತಿ – **ಉತ್ಪತ್ತಯ ಇತಿ** ॥ ೪೯ ॥

ಈಶ್ವರನಿಗೂ ಶರೀರವಿದೆ. ಅವತಾರಗಳಲ್ಲಿ ಲೀಲಾವಿಗ್ರಹವನ್ನು ಸ್ವೀಕರಿಸುವುದರಿಂದ ಶರೀರವಿದೆ, ಆ ಶರೀರದಿಂದ ವೇದಸೃಷ್ಟಿಯಾಯಿತು ಎಂದು ತಾರ್ಕಿಕನು ಹೇಳಿದರೆ, ಅದಕ್ಕೆ ಉತ್ತರಿಸುತ್ತಾರೆ–

**ಸೃಷ್ಟ್ಯಾದೌ ನಿಗಮಸ್ರಷ್ಟುರ್ನಹಿ ದೇಹೋಽಸ್ತಿ ಭೌತಿಕಃ ।**
**ಕಿಂಚೇಶಮೂಲತಾಮಾದೌ ಶ್ರುತೀನಾಂ ನ ದದರ್ಶ ಸಃ ॥ ೫೦ ॥**

**ಅರ್ಥ–** ಸೃಷ್ಟ್ಯಾದೌ = ಜಗತ್ತಿನ ಸೃಷ್ಟಿಯ ಆರಂಭದಲ್ಲಿ, ನಿಗಮಸ್ರಷ್ಟುಃ = ವೇದಗಳನ್ನು ಸೃಷ್ಟಿಸುವ ತಾರ್ಕಿಕರ ಈಶ್ವರನಿಗೆ, ಭೌತಿಕಃ ದೇಹಃ = ಪಾಂಚಭೌತಿಕ ಶರೀರವು, ನಹಿ ಅಸ್ತಿ = ಇರಲಿಲ್ಲವಷ್ಟೇ! ಕಿಂಚ = ಇಷ್ಟೇ ಅಲ್ಲದೆ, ಸಃ = ಆಧುನಿಕನಾದ ತಾರ್ಕಿಕನು, ಆದೌ = ಸೃಷ್ಟಿಯ ಆರಂಭದಲ್ಲಿ, ಶ್ರುತೀನಾಂ = ವೇದಗಳಿಗೆ, ಈಶಮೂಲತಾಂ = ಈಶ್ವರನು ಕಾರಣನೆಂಬುದನ್ನು, ನ ದದರ್ಶ = ನೋಡಿದವನಲ್ಲ.

**ಅನುವಾದ–** ಪಂಚಭೂತಗಳ ಸೃಷ್ಟಿಗಿಂತಲೂ ಮೊದಲು ಈಶ್ವರನಿದ್ದಾನಾದ್ದರಿಂದ ಪಂಚಭೂತಾತ್ಮಕವಾದ ಶರೀರವು ಈಶ್ವರನಿಗಿಲ್ಲ. (ಅಪ್ರಾಕೃತ ಶರೀರವನ್ನು ತಾರ್ಕಿಕನು ಒಪ್ಪುವುದಿಲ್ಲ. ಹೀಗಾಗಿ ಯಾವ ದೇಹದಿಂದ ವೇದೋಚ್ಚಾರಣೆ ಮಾಡಿದ?) ಮತ್ತು ತಾರ್ಕಿಕರು ವೇದವನ್ನು ದೇವರು ಸೃಷ್ಟಿ ಮಾಡಿದ ಎಂದು ಹೇಳುತ್ತಾರೆ. ಆದರೆ ಸೃಷ್ಟಿಕಾಲದಲ್ಲಿ ತಾರ್ಕಿಕನೇ ಇಲ್ಲದಿರುವ ಕಾರಣ ವೇದಗಳನ್ನು ಈಶ್ವರನು ಮಾಡಿದನೆಂಬ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಲಾರದು.

**ಭಾವವಿಲಾಸಿನೀ–** ನನ್ವೀಶ್ವರಸ್ಯಾಪಿ ತೈರವತಾರೇ ಲೀಲಾವಿಗ್ರಹಸ್ವೀಕಾರಾಚ್ಛರೀರಮಸ್ತೀತ್ಯತ ಆಹ – **ಸೃಷ್ಟ್ಯಾದಾವಿತಿ** ॥ ಭೌತಿಕ ಇತಿ ಹೇತುಗರ್ಭವಿಶೇಷಣಮ್ । ಭೂತಾನಾಂ ಪೃಥಿವ್ಯಾದೀನಾಂ ಪಶ್ಚಾದುತ್ಪನ್ನತ್ವೇನ ಸೃಷ್ಟೇಃ ಪೂರ್ವಂ ಭೌತಿಕದೇಹಾಭಾವಾತ್ । 'ತಸ್ಮಾದ್ ಯಜ್ಞಾತ್ ಸರ್ವಹುತ ಋಚಸ್ಸಾಮಾನಿ ಜಜ್ಞಿರೇ' ಇತಿ ಭೂತೇಭ್ಯೋಽಪ್ಯಾದೌ ವೇದ-ಸೃಷ್ಟೇರುಕ್ತತ್ವಾದವತಾರೇ ಕಥಂಚಿದ್ದೇಹಾಂಗೀಕಾರೇಽಪಿ ಮೂಲರೂಪೇ ತದನಂಗೀಕಾರಾಚ್ಚೇತಿ ಭಾವಃ । ಕಿಂಚ ವೇದಸ್ಯೇಶಕೃತತ್ವಂ ತವ ಪ್ರತ್ಯಕ್ಷೇಣ ಸಿದ್ಧಮ್, ಉತಾನುಮಾನೇನ, ಆಗಮೇನ ವೇತ್ಯಾಶಂಕ್ಯ ತ್ರಿತಯಮಪಿ ಕ್ರಮೇಣ ನಿರಾಕರೋತಿ **ಕಿಂಚೇತಿ** ॥ ಸ ಇತ್ಯನೇನಾಧುನಿಕತ್ವಂ ದ್ಯೋತಯತಿ ॥ ೫೦ ॥

**ವ್ಯಾಖ್ಯಾನವಿಶೇಷ–** 'ಭೌತಿಕ' ಎಂಬ ಶಬ್ದ ಹೇತುಗರ್ಭವಿಶೇಷಣ. ಪಂಚಭೂತಗಳಾದ ಪೃಥಿವ್ಯಾದಿಗಳು ಅನಂತರ ಉತ್ಪನ್ನವಾಗಿರುವುದರಿಂದ ಭೂತಾದಿ ಸೃಷ್ಟಿಗಿಂತ ಮೊದಲೇ ಇರುವ ಈಶ್ವರನಿಗೆ ಭೌತಿಕವಾದ ದೇಹವಿಲ್ಲ. 'ತಸ್ಮಾದ್ಯಜ್ಞಾತ್ ಸರ್ವಹುತ ಋಚಸ್ಸಾಮಾನಿ ಜಜ್ಞಿರೇ' ಎಂದು ಪಂಚಭೂತ ಗಳಿಗಿಂತಲೂ ಮೊದಲು ವೇದಗಳ ಸೃಷ್ಟಿಯನ್ನು ಹೇಳಿದ್ದರಿಂದ, ಅವತಾರರೂಪದಲ್ಲಿ ಕಥಂಚಿತ್ ಭೌತಿಕ ದೇಹವನ್ನು ಈಶ್ವರನಿಗೆ ಅಂಗೀಕರಿಸಿದರೂ ಮೂಲರೂಪದಲ್ಲಿ ಅಂಗೀಕರಿಸಲು ಬರುವುದಿಲ್ಲ ಎಂದು ಅಭಿಪ್ರಾಯ. ಇಷ್ಟೇ ಅಲ್ಲದೆ, ವೇದವನ್ನು ದೇವರು ಸೃಷ್ಟಿ ಮಾಡಿದ್ದಾನೆಂದು ತಾರ್ಕಿಕನು ಹೇಳಿದರೆ, ಈ ವಿಷಯದಲ್ಲಿ ಏನು ಪ್ರಮಾಣವೆಂದು ಕೇಳುತ್ತೇವೆ. ಪ್ರತ್ಯಕ್ಷವೋ, ಅನುಮಾನವೋ, ಆಗಮವೋ? ಈ ಮೂರು ಪ್ರಶ್ನೆಗಳನ್ನು ಮಾಡಿಕೊಂಡು ಕ್ರಮೇಣ ಒಂದೊಂದನ್ನೇ ನಿರಾಕರಿಸುತ್ತಿದ್ದಾರೆ. (ಇಲ್ಲಿ ಪ್ರತ್ಯಕ್ಷದ ನಿರಾಕರಣೆ ಆಗಿದೆ.)

**ವಿವರಣೆ–** ತಾರ್ಕಿಕರು ದೇವರಿಗೆ ಅವತಾರಕಾಲಗಳಲ್ಲಿ ಲೀಲಾವಿಗ್ರಹ ಸ್ವೀಕಾರವನ್ನು ಹೇಳುತ್ತಾರೆ. ಆದರೆ ಆದಿಸೃಷ್ಟಿಕಾಲದಲ್ಲಿ ಪಂಚಭೂತಸೃಷ್ಟಿಗಿಂತಲೂ ಮೊದಲು ಇರುವ ಈಶ್ವರನಿಗೆ ಪಂಚಭೂತಗಳಿಂದ ತಯಾರಿಸಲ್ಪಟ್ಟ ದೇಹವಿರುತ್ತದೆ ಎಂದು ಹೇಳಲು ಬರುವುದೇ ಇಲ್ಲ. ವೇದಮಂತ್ರಗಳಲ್ಲಿ ಪಂಚಭೂತಸೃಷ್ಟಿಗಿಂತಲೂ ಮೊದಲು ವೇದಸೃಷ್ಟಿಯಾಗಿದೆ ಎಂದು ತಿಳಿಯುತ್ತದೆ. ಇದರಿಂದ ವೇದಸೃಷ್ಟಿಯಾಗುವ ಸಮಯದಲ್ಲಿ ಪಂಚಭೂತಸೃಷ್ಟಿಯಾಗಿಲ್ಲ ವಾದ್ದರಿಂದ ವೇದಸೃಷ್ಟಿ ಕಾಲದಲ್ಲಿರುವ ಪರಮಾತ್ಮನಿಗೆ ಭೌತಿಕದೇಹವಿದೆ ಎಂದು, ಅದರಿಂದ ಸೃಷ್ಟಿಯಾಯಿತೆಂದು ಹೇಳುವುದು ಹೇಗೆ? ಎಂದು ಭಾವ. 'ಕಿಂಚ' ಎಂದು ದೋಷಾಂತರವನ್ನು ಹೇಳುತ್ತಿದ್ದಾರೆ.

ಇಲ್ಲಿ ಈಶ್ವರಕೃತತ್ವಕ್ಕೆ ಅನುಮಾನವು ಪ್ರಮಾಣವಾಗಲಾರದೆನ್ನುತ್ತಾರೆ–

**ಸಂದಿಗ್ಧಾ ಕಾರ್ಯತಾನಾದೌ ತತೋಽಪೀಶಕೃತಾ ನ ಸಾ ।**
**ಗುಣತ್ವಮಿವ ವಾಕ್ಯತ್ವಂ ನಾನಿತ್ಯತ್ವಪ್ರಯೋಜಕಮ್ ॥ ೫೧ ॥**

**ಅರ್ಥ–** ಅನಾದೌ = ಅನಾದಿಯಾದ ವೇದದ ವಿಷಯದಲ್ಲಿ, ಕಾರ್ಯತಾ = ಕಾರ್ಯತ್ವವು, ಸಂದಿಗ್ಧಾ = ಸಂದೇಹವಿಷಯವಾದುದು. ತತೋಽಪಿ = ಆ

ಕಾರಣದಿಂದಲೂ, ಸಾ = ಆ ವೇದವು, ಈಶಕೃತಾ ನ = ಈಶ್ವರನಿಂದ ರಚಿತವಾದುದಲ್ಲ. (ವಾಕ್ಯವಾದ್ದರಿಂದ ಅನಿತ್ಯ ಎಂದರೆ), ಗುಣತ್ವಂ = ಗುಣತ್ವವು, ಇವ = ಹೇಗೆ, ನ ಅನಿತ್ಯತ್ವಪ್ರಯೋಜಕಮ್ = ಅನಿತ್ಯತ್ವಕ್ಕೆ ಪ್ರಯೋಜಕವಲ್ಲವೋ, ಹಾಗೆ, ವಾಕ್ಯತ್ವಂ = ವಾಕ್ಯತ್ವವೂ, ಅನಿತ್ಯತ್ವಪ್ರಯೋಜಕಂ = ಅನಿತ್ಯತ್ವಕ್ಕೆ ಪ್ರಯೋಜಕವು, ನ = ಅಲ್ಲ.

**ಅನುವಾದ– ವೇದದ ಉತ್ಪತ್ತಿಯು ನಿಶ್ಚಿತವಾಗಿಲ್ಲ. ವೇದವು ಅನಾದಿ ಎಂಬ ವಾದವೂ ಇದೆಯಷ್ಟೇ! ಅನಾದಿಯಾದುದನ್ನು ಹುಟ್ಟಿತು ಎಂದು ಹೇಳಲಾಗುವುದಿಲ್ಲ. (ಘಟಪ್ರಾಗಭಾವವು ಹುಟ್ಟಿತು ಎಂದು ಹೇಳಲಾಗುವುದಿಲ್ಲ). ಆದ ಕಾರಣದಿಂದಲೂ ವೇದವು ಈಶ್ವರಕೃತವಲ್ಲ. ಏಕೆಂದರೆ ಈಶ್ವರಕೃತವಾಗಿದೆ ಎಂಬುದು ಸಂದಿಗ್ಧ. ವೇದವು ವಾಕ್ಯರೂಪವಾದುದರಿಂದ ಅನಿತ್ಯ ಹೊರತು, ಅನಾದಿನಿತ್ಯವಲ್ಲ ಎಂದೂ ಹೇಳಲಾಗದು. ವಾಕ್ಯತ್ವವು ಗುಣತ್ವದಂತೆ ಅನಿತ್ಯತ್ವಕ್ಕೆ ಅಸಾಧಕ. ಗುಣಗಳಲ್ಲಿ ಕೆಲವು ನಿತ್ಯಗುಣಗಳು, ಕೆಲವು ಅನಿತ್ಯ ಗುಣಗಳು ಎಂದಿವೆ. ಅದರಂತೆ ವಾಕ್ಯದಲ್ಲಿ ನಿತ್ಯ-ಅನಿತ್ಯ ವಿಭಾಗವಿರಬಹುದಾದ್ದರಿಂದ ವಾಕ್ಯತ್ವವು ಅನಿತ್ಯತ್ವಸಾಧಕವಲ್ಲ.**

**ಭಾವವಿಲಾಸಿನೀ– ಅನಾದೌ ಶ್ರುತಿಸ್ಮೃತಿಭ್ಯಾಂ ವಾದಿಭಿಶ್ಚ ಅನಾದಿತ್ವೇನ ವರ್ಣ್ಯತೇ । ಕಾರ್ಯತ್ವಂ ನಾಮ ಅಭೂತ್ವಾ ಭಾವಿತ್ವಮ್ । ವೇದಸ್ಯ ಸೃಷ್ಟೇಃ ಪೂರ್ವಮಭವನಂ ಆದಿಕಾಲೇ ಭವನಂ ಚ ಆಧುನಿಕೇನ ಭವತಾ ದ್ರಷ್ಟುಮಶಕ್ಯಮಿತಿ ಹೇತೋರ್ವಾದಿವಿಪ್ರತಿಪತ್ತೇಶ್ಚ ಕಾರ್ಯತ್ವಂ ಸಂದಿಗ್ಧಮಿತಿ ಭಾವಃ । ನಾಪಿ ವಾಕ್ಯತ್ವಮನಿತ್ಯತ್ವಸಾಧಕಮಿತ್ಯಾಹ – ಗುಣತ್ವಮಿತಿ ॥ ಅನಿತ್ಯತ್ವಮತ್ರೋತ್ಪತ್ತಿವಿನಾಶವತ್ತ್ವಂ ವಿವಕ್ಷಿತಮ್ । ಯಥಾ ಗುಣತ್ವಂ ನಾನಿತ್ಯತ್ವಪ್ರಯೋಜಕಮ್, ಏವಂ ವಾಕ್ಯತ್ವಮಪಿ ವೇದಾನಿತ್ಯತ್ವಪ್ರಯೋಜಕಂ ನ ಭವತೀತಿ ಭಾವಃ ॥ ೫೧ ॥**

**ವ್ಯಾಖ್ಯಾನವಿಶೇಷ–** ಅನಾದಿ ಎಂದರೆ ವೇದ, ಪುರಾಣ ಮತ್ತು ವಿವಿಧ ವಾದಿಗಳಿಂದ ಅನಾದಿಯೆಂದು ವರ್ಣಿಸಲ್ಪಟ್ಟದ್ದು ಎಂದರ್ಥ. ಹಿಂದೆ ಇಲ್ಲದ್ದು ಮುಂದೆ ಹುಟ್ಟುವುದೇ ಕಾರ್ಯ. ವೇದವು ಸೃಷ್ಟಿಗಿಂತ ಮೊದಲು ಇರಲಿಲ್ಲ. ನಂತರ ಹುಟ್ಟಿತು ಎಂಬ ವಿಷಯವನ್ನು ಇತ್ತೀಚಿನವನಾದ ನಿನ್ನಿಂದ ನೋಡಲಾಗುವುದಿಲ್ಲವಾದ ಕಾರಣದಿಂದ ಈ ವಿಷಯದಲ್ಲಿ ವಾದಿವಿಪ್ರತಿಪತ್ತಿಯು ನಿಶ್ಚಯವಾಯಿತು. ಆದ್ದರಿಂದ ಕಾರ್ಯತ್ವವು ಸಂದಿಗ್ಧವಾಯಿತು ಎಂದು ಭಾವ. ವಾಕ್ಯತ್ವವೂ ಅನಿತ್ಯತ್ವಕ್ಕೆ ಸಾಧಕವಲ್ಲ. ಇಲ್ಲಿ ಅನಿತ್ಯ ಎಂದರೆ ಉತ್ಪತ್ತಿವಿನಾಶವುಳ್ಳದ್ದು ಎಂದರ್ಥ. ಗುಣಗಳಲ್ಲಿ ನಿತ್ಯವಾದ ಗುಣಗಳು, ಅನಿತ್ಯವಾದ ಗುಣಗಳು ಎಂದು ಇರುವುದರಿಂದ ಗುಣತ್ವವು ಅನಿತ್ಯತ್ವಕ್ಕೆ ಹೇಗೆ ಪ್ರಯೋಜಕವಲ್ಲವೋ, ಇದರಂತೆ ವಾಕ್ಯದಲ್ಲಿಯೂ ನಿತ್ಯವಾದ ವಾಕ್ಯ (ವೇದ), ಅನಿತ್ಯವಾದ ವಾಕ್ಯ ಎಂದು ವಿಭಾಗವಿರುವುದರಿಂದ ವಾಕ್ಯತ್ವವೂ ವೇದಾನಿತ್ಯತ್ವಕ್ಕೆ ಪ್ರಯೋಜಕವಾಗುವುದಿಲ್ಲ ಎಂದು ಅಭಿಪ್ರಾಯ.

ವೇದಗಳಿಗೆ ಆಗಮದಿಂದ ಅನಿತ್ಯತ್ವವು ಸಿದ್ಧಿಸುವುದಿಲ್ಲ ಎನ್ನುತ್ತಾರೆ–

**ಸುಷ್ಟುತಿಂ ನಿತ್ಯಯಾ ವಾಚಾ ಚೋದಸ್ವೇತ್ಯೃಗ್ಯತೋಽಬ್ರವೀತ್ ।**
**ಪ್ರಾದುರ್ಭಾವರ್ಜನೇಸ್ತಸ್ಮಾದೃಚಸ್ಸಾಮಾನಿ ಜಜ್ಞಿರೇ ॥ ೫೨ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಸುಷ್ಟುತಿಂ = ಶೋಭನವಾದ ಸ್ತುತಿಯನ್ನು, ನಿತ್ಯಯಾ ವಾಚಾ = ನಿತ್ಯವಾದ ವೇದವಾಕ್ಯದಿಂದ, ಚೋದಸ್ವ = ಪ್ರೇರಿಸು (ಮಾಡು), ಇತಿ ಋಕ್ = ಎಂಬ ವೇದಮಂತ್ರವು, ಅಬ್ರವೀತ್ = ಹೇಳಿತೋ, ತಸ್ಮಾತ್ = ಆ ಕಾರಣದಿಂದ, ಋಚಃ = ಋಗ್ವೇದಗಳು, ಸಾಮಾನಿ = ಸಾಮವೇದಗಳು, ಜಜ್ಞಿರೇ = ಹುಟ್ಟಿದವು ಎಂಬ ಮಾತು ಪ್ರಾದುರ್ಭಾವಜನೇಃ = ಪ್ರಾದುರ್ಭಾವವೆಂಬ ಉತ್ಪತ್ತಿಯ ಕಾರಣದಿಂದ ಹೇಳಲ್ಪಟ್ಟದ್ದು.

**ಅನುವಾದ– 'ಋಚಃ ಸಾಮಾನಿ ಜಜ್ಞಿರೇ' ಎಂಬ ವೇದಮಂತ್ರಭಾಗವು ವೇದಗಳಿಗೆ ಉತ್ಪತ್ತಿಯನ್ನು ಹೇಳಿದೆಯಲ್ಲ ಎಂದರೆ, ಇದರಂತೆ ಉತ್ಪತ್ತಿಯಿಲ್ಲವೆಂಬ ಮಂತ್ರವೂ ಇದೆ. 'ವಾಚಾ ವಿರೂಪ ನಿತ್ಯಯಾ' ಎಂಬ ಮಂತ್ರವು ವೇದನಿತ್ಯತ್ವವನ್ನು ಹೇಳುತ್ತಿದೆ. ಆದ್ದರಿಂದ ಉತ್ಪತ್ತಿಯನ್ನು ಹೇಳುವ ವಾಕ್ಯಗಳಿಗೆ ಪ್ರಾದುರ್ಭಾವವೆಂಬ ಅರ್ಥವನ್ನೇ ಹೇಳಬೇಕು.**

**ಭಾವವಿಲಾಸಿನೀ–**ನಾಪ್ಯಾಗಮೇನಾನಿತ್ಯತ್ವಸಿದ್ಧಿರಿತ್ಯಾಹ–**ಸುಷ್ಟುತಿಮಿತಿ॥** 'ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಮ್ ॥ 'ಇತ್ಯೃಚಮರ್ಥತೋಗೃಹ್ಣಾತಿ। ಹೇ ವಿರೂಪ ವಿರೂಪಾಖ್ಯ ಋಷೇ ಅಭಿದ್ಯವೇ ಅಭಿತೋ ದ್ಯೋತನಶೀಲಾಯ ವೃಷ್ಣೇ ಭಕ್ತಾಭೀಷ್ಟವರ್ಷಿತ್ರೇ ತಸ್ಮೈ ಪರಮೇಶ್ವರಾಯ ನಿತ್ಯಯಾ ನಿತ್ಯಭೂತಯಾ ವಾಚಾ ವೇದವಾಚಾ ಸುಷ್ಟುತಿಂ ಶೋಭನಾಂ ಸ್ತುತಿಂ ಚೋದಸ್ವ ಪ್ರೇರಯ ಕುರ್ವಿತಿ । ಮಂತ್ರೇ ಯಸ್ಮಾದ್ವೇದಸ್ಯ ನಿತ್ಯತ್ವಮುಕ್ತಮ್, ತಸ್ಮಾತ್ಪ್ರಾದುರ್ಭಾವಜನೇರೇವ 'ಋಚಸ್ಸಾಮಾನಿ ಜಜ್ಞಿರೇ' ಇತ್ಯುಕ್ತಿಃ, ನತೂತ್ಪತ್ತಿವಿವಕ್ಷಯೇತ್ಯರ್ಥಃ ॥ ೫೨ ॥

**ವ್ಯಾಖ್ಯಾನವಿಶೇಷ–** 'ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಮ್ ॥ ' ಎಂಬ ಶ್ರುತಿಯನ್ನು ರಾಜರೂ ಪೂರ್ಣವಾಗಿ ಈ ಪದ್ಯದಲ್ಲಿ ಸಂಗ್ರಹಿಸಿದ್ದಾರೆ.

'ಹೇ ವಿರೂಪ=ವಿರೂಪನೆಂಬ ಋಷಿಯೇ, ಅಭಿದ್ಯವೇ=ಎಲ್ಲೆಡೆ ಪ್ರಕಾಶಿಸುವ ಸ್ವಭಾವವುಳ್ಳ, ವೃಷ್ಣೇ=ಭಕ್ತರಿಗೆ ಇಷ್ಟಾರ್ಥಗಳನ್ನು ಮಳೆಗರೆಯುವ, ತಸ್ಮೈ=ಆ ಪರಮೇಶ್ವರನಿಗೋಸ್ಕರ, ನಿತ್ಯಯಾ=ನಿತ್ಯವಾದ, ವಾಚಾ=ವೇದವಾಕ್ಯದಿಂದ, ಸುಷ್ಟುತಿಂ=ಮಂಗಳಕರವಾದ ಸ್ತುತಿಯನ್ನು, ಚೋದಸ್ವ=ಪ್ರೇರಣೆ ಮಾಡು ಎಂಬ ಮಂತ್ರದಲ್ಲಿ ಯಾವ ಕಾರಣದಿಂದ ವೇದಕ್ಕೆ ನಿತ್ಯತ್ವವನ್ನು ಹೇಳಿದ್ದಾರೋ, ಆದ್ದರಿಂದ ' ಋಚಸ್ಸಾಮಾನಿ ಜಜ್ಞಿರೇ' ಎಂಬಲ್ಲಿ ಪ್ರಾದುರ್ಭಾವರೂಪವಾದ ಜನಿಯನ್ನೇ ಹೇಳಿದ್ದಾರೆ, ಹೊರತು ಉತ್ಪತ್ತಿಯನ್ನಲ್ಲ.

ಇಷ್ಟೇ ಅಲ್ಲದೆ ಪುರುಷಸೂಕ್ತದಲ್ಲಿ ವೇದೋತ್ಪತ್ತಿಗಿಂತ ಮೊದಲೇ ದೇವತೆಗಳು ಯಜ್ಞ ಮಾಡಿದರು. 'ತೇನ ದೇವಾ ಅಯಜಂತ' ಎಂದು ಹೇಳಿದ್ದಾರೆ. ವೇದಗಳು ನಂತರ ಹುಟ್ಟಿದ್ದರೆ, ಮೊದಲು ಮಂತ್ರವೇ ಇಲ್ಲವಾದ ಕಾರಣ, ದೇವತೆಗಳಿಗೆ ಯಜ್ಞ ಮಾಡಲು ಸಾಧ್ಯವಾಗಬಾರದಾಗಿದ್ದಿತು ಎಂಬ ಯುಕ್ತಿಯನ್ನು ಇಲ್ಲಿ ಹೇಳುತ್ತಿದ್ದಾರೆ–

**ಋಕ್‌ಸಾಮಾದೇರಭಾವೇ ಪ್ರಾಗ್ ಯಜ್ಞಸ್ಸೋऽಜ್ಞಕೃತೋऽಭವತ್ ।**
**ದೇವಾಸ್ತೇನಾಯಜಂತೇತಿ ಪೂರ್ವಂ ಶ್ರುತಿಮನುಸ್ಮರ ॥ ೫೩ ॥**

**ಅರ್ಥ–** ಋಕ್ಸಾಮಾದೇಃ= ಋಕ್, ಸಾಮ, ಯಜುರ್ ಮೊದಲಾದ ವೇದಗಳ, ಅಭಾವೇ= ಅಭಾವವಿದ್ದರೆ, ಪ್ರಾಕ್= ವೇದೋತ್ಪತ್ತಿಗಿಂತ ಮೊದಲು, ಯಃ=ಯಾವ, ಯಜ್ಞಃ= ಯಜ್ಞವು, ದೇವೈಃ= ದೇವತೆಗಳಿಂದ, ಕೃತಃ= ಮಾಡಲ್ಪಟ್ಟಿತೋ, ಸಃ= ಆ ಯಜ್ಞವು, ಅಜ್ಞಕೃತಃ= ಅಜ್ಞಾನಿಗಳಿಂದ ಮಾಡಲ್ಪಟ್ಟಿದ್ದು ಅಭವತ್= ಆಯಿತು.

**ಅನುವಾದ–** ವೇದಗಳ ಆವಿರ್ಭಾವಕ್ಕಿಂತ ಮೊದಲೇ ದೇವತೆಗಳು ಯಜ್ಞ ಮಾಡಿದರೆಂದು ಪುರುಷ ಸೂಕ್ತ ಹೇಳುತ್ತದೆ. ಇದರಿಂದ ಯಜ್ಞನಡೆಯುವುದಕ್ಕಿಂತ ಮೊದಲೇ ಯಜ್ಞಾಂಗಗಳಾದ ಮಂತ್ರಗಳು ಇದ್ದವೆಂದು ಸಿದ್ಧವಾಯಿತು. ಇಲ್ಲವಾದಲ್ಲಿ ಮಂತ್ರವಿಲ್ಲದೆ ಯಜ್ಞ ಮಾಡಿದ ದೇವತೆಗಳನ್ನು ಅಜ್ಞರೆಂದು, ಯಜ್ಞವು ಅಜ್ಞಕೃತವೆಂದೂ ಹೇಳಿದಂತಾಗುತ್ತದೆ. ಆದ್ದರಿಂದ, 'ಋಚಃ ಸಾಮಾನಿ ಜಜ್ಞಿರೇ' ಎಂಬ ವೇದೋತ್ಪತ್ತಿಯನ್ನು ಹೇಳುವ ವಾಕ್ಯಕ್ಕಿಂತ ಮೊದಲು 'ತೇನ ದೇವಾ ಅಯಜಂತ' ಎಂಬ ವಾಕ್ಯವನ್ನು ನೆನಪಿಸಿಕೊಳ್ಳಿ.

**ಭಾವವಿಲಾಸಿನೀ–** ಕಿಂಚ 'ಋಚಸ್ಸಾಮಾನಿ ಜಜ್ಞಿರೇ' ಇತಿ ಋಗಾದ್ಯುತ್ಪತ್ತಿಃ ಪಶ್ಚಾದುಕ್ತಾ । 'ತೇನ ದೇವಾ ಅಯಜಂತ' ಇತಿ ದೇವಾನಾಂ ಯಜ್ಞಕರಣಂ ತತಃ ಪ್ರಾಗುಕ್ತಮ್। ತಥಾಚ ವೇದಸ್ಯ ಪಶ್ಚಾದುತ್ಪತ್ತೌ ಪೂರ್ವಂ ಮಂತ್ರಾಭಾವಾದ್ಯಜ್ಞಕರಣಂ ನ ಸ್ಯಾದಿತ್ಯಾಹ – **ಋಕ್ಸಾಮಾದೇರಿತಿ ॥** ಪೂರ್ವಾಂ 'ಋಚಃ ಸಾಮಾನಿ ಜಜ್ಞಿರೇ' ಇತಿ ವಾಕ್ಯಾತ್ಪೂರ್ವಾಮ್ । ತಥಾಚ ಮಂತ್ರಾಭಾವೇ ಯಜ್ಞಾಸಂಭವಾತ್, ತದಂಗಮಂತ್ರಾ ಅಪಿ ಪೂರ್ವಂ ಸತೀತಿ ಹೇತೋ 'ಋಚಸ್ಸಾಮಾನಿ ಜಜ್ಞಿರೇ' ಇತಿ ವಾಕ್ಯಸ್ಯ ವೇದಾವಿರ್ಭಾವ ಏವ ತ್ವಯಾಪ್ಯರ್ಥೋ ವಕ್ತವ್ಯ ಇತಿ ಭಾವಃ ॥ ೫೩ ॥

**ವ್ಯಾಖ್ಯಾನವಿಶೇಷ–** ಮಂತ್ರವೇ ಇಲ್ಲದೆ ಯಜ್ಞ ನಡೆಯುವುದು ಅಸಂಭವವಾದುದರಿಂದ ಯಜ್ಞಾಂಗವಾದ ಮಂತ್ರಗಳೂ ಮೊದಲಿಂದ ಇವೆ ಎಂಬ ಕಾರಣದಿಂದ 'ಋಚಃ ಸಾಮಾನಿ ಜಜ್ಞಿರೇ' ಎಂಬ ವಾಕ್ಯಕ್ಕೆ ವೇದಗಳ ಆವಿರ್ಭಾವವೆಂಬ ಅರ್ಥವೇ ನಿನ್ನಿಂದಲೂ ಹೇಳಲ್ಪಡಬೇಕು ಎಂದು ಅಭಿಪ್ರಾಯ.

**ಆದಿಸರ್ಗೇऽಪ್ಯುಪಾಧ್ಯಾಯಃ ಪುತ್ರೇऽಧ್ಯೇತರಿ ಕೇಶವಃ ।**
**ನ ಕರ್ತೋಕ್ತಪ್ರಕಾರೇಣ ಯಜ್ಞಭೋಕ್ತೃತ್ವವಿಘ್ನವಿತ್ ॥ ೫೪ ॥**

**ಅರ್ಥ–** ಆದಿಸರ್ಗೇऽಪಿ = ಆದಿಸೃಷ್ಟಿಯಲ್ಲಿಯೂ, ಪುತ್ರೇ = ಚತುರ್ಮುಖ ಬ್ರಹ್ಮನು, ಅಧ್ಯೇತರಿ ಸತಿ = ವೇದವನ್ನು ಅಧ್ಯಯನ ಮಾಡುತ್ತಿರಲು, ಕೇಶವಃ = ಬ್ರಹ್ಮರುದ್ರ ನಿಯಾಮಕನಾದ ಶ್ರೀಹರಿಯು, ಉಪಾಧ್ಯಾಯಃ = ಉಪಾಧ್ಯಾಯನು. ಹೊರತು, ನ ಕರ್ತಾ = ವೇದನಿರ್ಮಾತೃವಲ್ಲ. ಏಕೆಂದರೆ ಹರಿಯು, ಉಕ್ತಪ್ರಕಾರೇಣ = ವೇದೋತ್ಪತ್ತಿ ವಚನಕ್ಕಿಂತ ಮೊದಲೇ ದೇವತೆಗಳು ಯಜ್ಞ ಮಾಡಿದರು ಎಂಬ ಉಕ್ತಿಯ ಹೊಂದಾಣಿಕೆಗಾಗಿ ಎಂಬ ಪ್ರಕಾರದಿಂದ ಮತ್ತು, ಯಜ್ಞಭೋಕ್ತೃತ್ವವಿಘ್ನವಿತ್ = ತನ್ನ ಯಜ್ಞಭೋಕ್ತೃತ್ವವಿಘ್ನವನ್ನು ತಿಳಿದವನಾದ್ದರಿಂದ (ವೇದಕರ್ತೃವಲ್ಲ).

**ಅನುವಾದ–** ಸೃಷ್ಟಿಯ ಆರಂಭದಲ್ಲಿ ಚತುರ್ಮುಖ ಬ್ರಹ್ಮನಿಗೆ ಭಗವಂತನು ವೇದಗಳನ್ನು ಉಪದೇಶಿಸಿದ ಎಂಬ ಮಾತುಗಳಿವೆ. ಉಪಾಧ್ಯಾಯರಂತೆ ಹರಿಗೆ ಉಪದೇಶಕತ್ವವನ್ನು ಹೇಳಲಾಗಿದೆ. ಉಪಾಧ್ಯಾಯರು ಅಧ್ಯಯನದ ವಿಷಯವನ್ನು ನಿರ್ಮಿಸುವುದು ಎಲ್ಲಿಯೂ ಕಂಡುಬಂದಿಲ್ಲ. ಇಷ್ಟೇ ಅಲ್ಲದೆ, ವೇದೋತ್ಪತ್ತಿಗಿಂತ ಮೊದಲೇ ಯಜ್ಞವನ್ನು ದೇವತೆಗಳು ಮಾಡಿದ್ದಾರೆ ಎಂಬ ವಚನವಿದೆ. ಆ ಸಮಯದಲ್ಲಿ ವೇದವೇ ಇಲ್ಲದಿದ್ದರೆ ಯಜ್ಞಭೋಕ್ತೃತ್ವವು ಸರ್ವೋತ್ತಮನಾದ ತನಗೆ (ಶ್ರೀಹರಿಗೆ) ಕೂಡುವುದಿಲ್ಲ. ಈ ಭೋಕ್ತೃತ್ವನಿಯಮಕ್ಕೆ ವಿಘ್ನವನ್ನು ಸ್ವತಃ ತಾನೇ ತಂದುಕೊಳ್ಳನಾರನಷ್ಟೇ? (ಆದ್ದರಿಂದ 'ಜಜ್ಞಿರೇ' ಎಂಬ ಮಾತಿಗೆ ಪ್ರಾದುರ್ಭಾವ ವೆಂದೇ ಹೇಳಬೇಕು.)

**ಭಾವವಿಲಾಸಿನೀ–** ತಸ್ಮಾದಾದಿಸರ್ಗೇऽಪಿ ಪುತ್ರೇ ಬ್ರಹ್ಮಣಿ ಅಧ್ಯೇತರಿ ಸತಿ ಕೇಶವ ಉಪಾಧ್ಯಾಯ ಏವ ನ ಕರ್ತೇತ್ಯತ್ರೈವ ಹೇತ್ವಂತರಸೂಚನಮ್ **ಉಕ್ತಪ್ರಕಾರೇಣ ಯಜ್ಞಭೋಕ್ತೃತ್ವ ವಿಘ್ನವದಿತಿ ॥** ವೇದೋತ್ಪತ್ತೇಃ ಪ್ರಾಗ್ ಯಜ್ಞಸ್ಯೋಕ್ತತ್ವಾತ್ ತತ್ಸಮಯೇ ವೇದಾಭಾವೇ ದೇವಯಜ್ಞ-ಭೋಕ್ತೃತ್ವಂ ಮಮ ನ ಸ್ಯಾದಿತ್ಯತ್ರೈವೋಕ್ತರೀತ್ಯಾ ದೇವಾನನುಜಿಘೃಕ್ಷತೀತ್ಯಾದಿ ನ್ಯಾಯೇನ ಸಕಲಯಜ್ಞಭೋಕ್ತೃತ್ವಂ ಚ ನ ಸ್ಯಾದಿತಿ ಪ್ರಾಗುಕ್ತರೀತ್ಯಾ ಚ ವಿಘ್ನವಿದಿತ್ಯರ್ಥಃ ॥ ೫೪ ॥

**ವ್ಯಾಖ್ಯಾನವಿಶೇಷ–** ವೇದಕರ್ತಾ ಈಶ್ವರನಲ್ಲ ಎನ್ನಲು ಎರಡು ಕಾರಣಗಳನ್ನು ರಾಜರು ಈ ಪದ್ಯದಲ್ಲಿ ತಿಳಿಸಿದ್ದಾರೆ.

೧. ಶ್ರೀಹರಿಯು ಬ್ರಹ್ಮನಿಗೆ ಉಪಾಧ್ಯಾಯ. ಬ್ರಹ್ಮನು ಶಿಷ್ಯ. ವೇದವನ್ನು ಉಪಾಧ್ಯಾಯನಾಗಿ ಉಪದೇಶಿಸಿದ್ದರಿಂದ ನಿರ್ಮಾತೃವಲ್ಲ ಎಂದು ತಿಳಿದುಬರುತ್ತದೆ.

೨. ಪುಂಸೂಕ್ತವು ವೇದೋತ್ಪತ್ತಿಗಿಂತ ಮೊದಲೇ ಯಜ್ಞ ನಡೆಯಿತೆಂದು ತಿಳಿಸಿದೆ. ಆ ಸಮಯದಲ್ಲಿ ವೇದವೇ ಇಲ್ಲವೆಂದಾದರೆ 'ದೇವಯಜ್ಞಭೋಕ್ತೃತ್ವವು ನನಗೆ ಕೂಡುವುದಿಲ್ಲ, ಮಾತ್ರವಲ್ಲ, ಸಕಲಯಜ್ಞಭೋಕ್ತೃತ್ವವೂ ಕೂಡುವುದಿಲ್ಲ' ಎಂಬ ತನ್ನ ಭೋಕ್ತೃತ್ವವಿಘ್ನವನ್ನು ತಿಳಿದಿದ್ದಾನಾದ್ದರಿಂದ ವೇದಗಳಿಗೆ ಈಶ್ವರನು ಕರ್ತಾರನಲ್ಲ ಎಂದು ತಿಳಿಯಬೇಕು.

ಬೇರೊಂದು ಯುಕ್ತಿಯಿಂದಲೂ ವೇದಗಳ ಅನಾದಿತ್ವವನ್ನು ತಿಳಿಸುತ್ತಾರೆ–

**ನಿದ್ರಾವಿದ್ರಾವಣೇ ಯಸ್ಯ ಛಂದಾಂಸಿ ಕಿಲ (ವ)ಬಂದಿನಃ ।**
**ತಂ ವೇದಂ ಸ ಕಥಂ ಕುರ್ಯಾತ್ ದುರ್ಗಾಸ್ಯಾತ್ಪ್ರಾಗ್ವಿನಿರ್ಗತಮ್ ॥ ೫೫ ॥**

**ಅರ್ಥ–** ಯಸ್ಯ = ಯಾವ ಯೋಗಶಾಯಿಯಾದ ಭಗವಂತನ, ನಿದ್ರಾವಿದ್ರಾವಣೇ = ಯೋಗನಿದ್ರೆಯನ್ನು ಓಡಿಸುವುದರಲ್ಲಿ, ಛಂದಾಂಸಿ = ಶ್ರುತಿಗಳು, ಬಂದಿನಃ ಕಿಲ = ಸ್ತುತಿಪಾಠಕರಾಗಿದ್ದಾರೋ, ದುರ್ಗಾಸ್ಯಾತ್ = ದುರ್ಗೆಯ ಮುಖದಿಂದ, ಪ್ರಾಕ್ = ಹರಿಯು ಯೋಗನಿದ್ರೆಯಿಂದ ಎಚ್ಚೆತ್ತುಕೊಳ್ಳುವುದಕ್ಕಿಂತ ಮೊದಲೇ, ವಿನಿರ್ಗತಮ್ = ಹೊರಹೊಮ್ಮಿದ, ತಂ ವೇದಂ = ಅಂತಹ ಅನಾದಿಯಾದ ವೇದವನ್ನು, ಸಃ = ಶ್ರೀಹರಿಯು, ಕಥಂ = ಹೇಗೆ ತಾನೆ, ಕುರ್ಯಾತ್ = ಮಾಡಿಯಾನು?

**ಅನುವಾದ–** ಪ್ರಳಯಕಾಲದಲ್ಲಿ ಯೋಗನಿದ್ರಾವಶನಾದ ಹರಿಯನ್ನು ಸೃಷ್ಟಿಕಾಲದಲ್ಲಿ ಎಬ್ಬಿಸಬೇಕೆಂದು ದುರ್ಗೆಯು ವೇದಮಂತ್ರಗಳಿಂದ ಸ್ತೋತ್ರಮಾಡುತ್ತಾಳೆ. ಆಗ ಈ ಮಂತ್ರಗಳು ಸ್ತುತಿಪಾಠಕರಂತೆ ಹರಿಯನ್ನು ಎಬ್ಬಿಸುತ್ತವೆ. ಇದು ಪುರಾಣದಲ್ಲಿ ಪ್ರಸಿದ್ಧ. ಆದ ಕಾರಣ ಪರಮಾತ್ಮನು ಯೋಗನಿದ್ರೆಯಿಂದ ಏಳುವ ಮುನ್ನವೇ ದುರ್ಗಾಮುಖದಿಂದ ಹೊರಹೊಮ್ಮಿದ ವೇದಗಳನ್ನು ಶ್ರೀಹರಿಯು ರಚಿಸಿದ ಎಂದು ಹೇಳುವುದು ಎಷ್ಟು ಸಮಂಜಸ?

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪ್ಯಾದಿಕಾಲೇ ವೇದಸ್ಯ ಸತ್ತ್ವಂ ಸಾಧಯತಿ –**ನಿದ್ರೇತಿ** ॥ ಪ್ರಲಯೇ ಖಲು ಪರಮಾತ್ಮನೋ ಯೋಗನಿದ್ರಾತದುದ್ಬೋಧನಾಯ ದುರ್ಗಾ ವೇದೈರಸ್ತೌಷೀದಿತಿ ಪೌರಾಣಿಕೀ ಪ್ರಸಿದ್ಧಿಃ, 'ತದಂತೇ ಬೋಧಯಾಂಚಕ್ರುಸ್ತಮ್ರಾಜಮಿವ ಬಂದಿನಃ' ಇತ್ಯಾದೌ । ಜಡಾನಾಂ ವೇದಾನಾಂ ಬಂದಿತ್ವಕಥನಂ ತದಭಿಮಾನಿದೇವತಾಭಿಪ್ರಾಯೇಣೇತಿ ಜ್ಞಾತವ್ಯಮ್ । ಅತ ಏವಾಹ – **ದುರ್ಗಾಸ್ಯಾದಿತಿ** ॥ **ಪ್ರಾಕ್** ಸೃಷ್ಟಿಕರ್ತುರ್ನಾರಾಯಣಸ್ಯ ಪ್ರಬೋಧಾತ್ ಪ್ರಾಕ್ ॥ ೫೫ ॥

ಈಗ ಹಯಗ್ರೀವದೇವರು ತನ್ನ ಕೈಯಲ್ಲಿ ಪುಸ್ತಕಧರಿಸಿರುವುದರಿಂದ ತಿಳಿಯಬಹುದಾದ ವಿಚಾರವನ್ನು ಪ್ರತಿಪಾದಿಸುತ್ತಿದ್ದಾರೆ.

**ಯಸ್ಯಾಸ್ತಿ (ಪಶ್ಯಾಸ್ತಿ) ಪುಸ್ತಕಂ ಹಸ್ತೇ ಹಯಾಸ್ಯಸ್ಯ ವಿಧೇರ್ಗುರೋಃ ।**
**ಸ ಚ ವಕ್ತಾಽನಾದಿನಿತ್ಯಸಿದ್ಧಬುದ್ಧಿಕ್ರಮಾತ್ ಕ್ರಮಂ ।**
**ವರ್ಣಾನಾಂ ಕ್ರಮಶೂನ್ಯಾನಾಮಪಿ ಪಶ್ಯೇದ್ಧಿ ಸರ್ವದಾ ॥ ೫೬ ॥**

**ಅರ್ಥ–** ವಿಧೇಃ = ಚತುರ್ಮುಖಬ್ರಹ್ಮದೇವರಿಗೆ, ಗುರೋಃ = ಉಪದೇಶಕರಾದ, ಯಸ್ಯ = ಯಾವ, ಹಯಾಸ್ಯಸ್ಯ = ಹಯಗ್ರೀವದೇವರ, ಹಸ್ತೇ = ಕೈಯಲ್ಲಿ, ಪುಸ್ತಕಂ ಅಸ್ತಿ =

ಪುಸ್ತಕವಿದೆಯೋ, ಸ ಚ =ಅವನಾದರೋ, ವಕ್ತಾ = ವೇದಗಳ ಉಪದೇಶಕನು, ಸಃ = ಆ ಹಯಗ್ರೀವ ದೇವರು, ಅನಾದಿನಿತ್ಯಸಿದ್ಧ ಬುದ್ಧಿಕ್ರಮಾತ್ =ಮೂರುಕಾಲದಲ್ಲೂ ಏಕಪ್ರಕಾರವಾದ ಸಿದ್ಧಿಯುಳ್ಳ ಬುದ್ಧಿಕ್ರಮದಿಂದ, ಕ್ರಮಶೂನ್ಯಾನಾಂ = ಸ್ವತಃಕ್ರಮ ರಹಿತವಾದ, ವರ್ಣಾನಾಂ = ವರ್ಣಗಳಿಗೆ, ಕ್ರಮಂ = ಕ್ರಮವನ್ನು, ಸರ್ವದಾ = ಯಾವಾಗಲೂ, ಪಶ್ಯೇತ್= ಕಾಣುತ್ತಲೇ ಇರುವವನು, ಹಿ = ಇದು ಪ್ರಸಿದ್ಧವು.

**ಅನುವಾದ–** ಬ್ರಹ್ಮದೇವರ ಗುರುವಾದ ಯಾವ ಹಯಗ್ರೀವದೇವರ ಹಸ್ತದಲ್ಲಿ ಪುಸ್ತಕವಿದೆಯೋ, ಆ ಹಯಗ್ರೀವದೇವರೂ ಸಹ ಪುಸ್ತಕದಲ್ಲಿ ಸಿದ್ಧವಾಗಿರುವ ಅನಾದಿನಿತ್ಯಕ್ರಮವನ್ನು ಅನುಸರಿಸಿಕೊಂಡೇ, ಸ್ವತಃ ಕ್ರಮಶೂನ್ಯವಾದ ವರ್ಣಗಳಿಗೆ ಯಾವಾಗಲೂ ಕ್ರಮವನ್ನು ನೋಡುತ್ತಾರೆ.

ಇನ್ನು ಹಯಗ್ರೀವದೇವರು ತಮ್ಮ ಕೈಯಲ್ಲಿ ಪುಸ್ತಕವನ್ನು ಹಿಡಿದಿರುವುದರಿಂದ ಪುಸ್ತಕದಲ್ಲಿರುವ ವಿದ್ಯೆಯನ್ನೇ ನಾನು ಉಪದೇಶ ಮಾಡುತ್ತೇನೆ. ಹೊಸದಾಗಿ ರಚಿಸಿ ಉಪದೇಶವನ್ನು ಮಾಡುವುದಿಲ್ಲ ಎಂಬ ಅಭಿಪ್ರಾಯವನ್ನು ಸೂಚಿಸುವುದರಿಂದ ವೇದಕ್ಕೆ ಉತ್ಪತ್ತಿಯನ್ನು ಹೇಳುವುದು ಹಯಗ್ರೀವದೇವರ ಅಭಿಪ್ರಾಯಕ್ಕೆ ವಿರುದ್ಧವಾದುದು, ಮತ್ತು ಅಯುಕ್ತವಾದುದೆಂದು ಇಲ್ಲಿ ಹೇಳುತ್ತಾರೆ. ಹಿಂದೆ 'ಸ್ವಪುತ್ರೇ ಅಧ್ಯೇತರಿ' ಎಂದು ಹೇಳಿದ್ದರು. ಸ್ವಪುತ್ರರು ಎಂದರೆ ಬ್ರಹ್ಮದೇವರು. ಅವರಿಗೆ ಉಪದೇಶ ಮಾಡುವವರು ತಾವೇ ಎಂದು ಇಲ್ಲಿ ಸ್ಪಷ್ಟಪಡಿಸಿದ್ದಾರೆ. 'ದೇವಸ್ಯೈಷ ಸ್ವಭಾವೋಽಯಮ್' ಎಂಬ ಶ್ರುತಿಯಿರುವುದರಿಂದ, ದೇವರು ತಮ್ಮ ಬುದ್ಧಿಸ್ವಭಾವದಿಂದಲೇ ವೇದದಲ್ಲಿರುವ ವರ್ಣಗಳಿಗೆ ಪೂರ್ವಾಪರ್ಯಗಳನ್ನು ನಿರ್ವಹಿಸುತ್ತಾರೆ. ಹೊರತಾಗಿ ತಾವು ಸರ್ವಜ್ಞರಾದುದರಿಂದ ಸಾಕ್ಷಾತ್ತಾಗಿ ಅರ್ಥಗಳನ್ನು ತಿಳಿದು, ಅದಕ್ಕೆ ಅನುಗುಣವಾದ ಶಬ್ದಗಳನ್ನು ರಚಿಸುತ್ತೇವೆಂದು ಸಂಕಲ್ಪ ಮಾಡಿ, ವೇದವನ್ನು ಉಚ್ಚಾರಣೆ ಮಾಡುವುದಿಲ್ಲ. ಆದ್ದರಿಂದ ವೇದರೂಪವಾದ ಉಪದೇಶದಲ್ಲಿ ರಾಗಾದಿದೋಷ ಮೂಲತ್ವ ಶಂಕೆಯು ಉಂಟಾಗುವುದಿಲ್ಲ. ಅರ್ಥಸತ್ಯತ್ವವಾದರೂ ಪ್ರಾಮಾಣ್ಯಾಪವಾದಕವಾದ ದೋಷವಿಲ್ಲದಿದ್ದ ಸ್ಥಳದಲ್ಲಿ ಪ್ರಾಮಾಣ್ಯಕಸ್ವತಸ್ತ್ವವಿರುವುದರಿಂದ ತಾನಾಗಿಯೇ ಸಿದ್ಧವಾಗುತ್ತದೆ. ಕಾಲತಃ ನಿತ್ಯವಾದ ದೇಶತಃ ವ್ಯಾಪ್ತವಾದ ವರ್ಣಗಳಿಗೆ ಪೌರ್ವಾಪರ್ಯರೂಪವಾದ ಕ್ರಮವು ಹೇಗೆ ಸಂಘಟಿಸುತ್ತದೆ ಎಂಬ ಪ್ರಶ್ನೆಗೆ ಈಶ್ವರ ಬುದ್ಧಿಯು ನಿತ್ಯವಾದರೂ ಬುದ್ಧಿಯಲ್ಲಿರುವ ಶಕ್ತಿರೂಪವಾದ ವಿಶೇಷದ ಸಾಮರ್ಥ್ಯದಿಂದ ಬುದ್ಧಿಗಳಲ್ಲೇ ಒಂದು ಕ್ರಮವಿದೆ. ಆದ್ದರಿಂದ ಸ್ವತಃ ಕ್ರಮಶೂನ್ಯವಾದ ವರ್ಣಗಳಿಗೆ ತಮ್ಮ ಬುದ್ಧಿಕ್ರಮದಿಂದ ಪ್ರಾಪ್ತವಾದ ಒಂದು ಕ್ರಮವಿರುವುದರಿಂದ ಆ ಕ್ರಮವನ್ನು ನೋಡಿ ಹಯಗ್ರೀವದೇವರು ವೇದವನ್ನು ಉಚ್ಚಾರ ಮಾಡುತ್ತಾರೆ ಎಂದು ಸಮಾಧಾನವನ್ನು ಹೇಳುತ್ತಾರೆ.

**ಭಾವವಿಲಾಸಿನೀ–** ಇದಾನೀಂ ಹಯಗ್ರೀವೇಣ ಸ್ವಹಸ್ತೇ ಪುಸ್ತಕಧಾರಣಾತ್ತುಸ್ತಕಸ್ಥೈವ ವಿದ್ಯಾ ಮಯೋಪದಿಶ್ಯತೇ ನತು ನೂತನತಯಾ ಕೃತ್ವೇತಿ ಹಯಾಸ್ಯಭಾವವಿರೋಧಾದಪಿ ವೇದೋತ್ಪತ್ತಿಕಥನಮಯುಕ್ತಮಿತ್ಯಾಹ ಯಸ್ಯೇತಿ (ಪಶ್ಯೇತಿ) ॥ ವಿಧೇರ್ಗುರೋರಿತ್ಯನೇನ ಪುತ್ರೇಽಧ್ಯೇತರೀತಿ ಸಾಮಾನ್ಯೇನೋಕ್ತಂ ಸ್ಪಷ್ಟೀಕೃತಮಿತಿ ಜ್ಞಾತವ್ಯಮ್ । 'ದೇವಸ್ಯೈಷ ಸ್ವಭಾವೋಽಯಮ್' ಇತಿ ಶ್ರುತೇಸ್ಸ್ವಬುದ್ಧಿಸ್ವಭಾವಾದೇವ ವೇದಸ್ಥವರ್ಣಪೌರ್ವಾಪರ್ಯಂ ಘಟಯೇನ್ನತು ಸ್ವಸರ್ವಜ್ಞತ್ವಶಕ್ತ್ಯಾ ಸ್ವಾತಂತ್ರ್ಯೇಣ ದೃಷ್ಟಮಪಿ ತಂ ತಮರ್ಥಮನೇನ ವಾಕ್ಯೇನ ವದಾಮೀತ್ಯಾಶಯಾ । ಅತೋ ನ ರಾಗಾದಿದೋಷಮೂಲತ್ವಶಂಕಾ । ಅರ್ಥಯಾಥಾರ್ಥ್ಯಂ ತ್ವಪವಾದಕದೋಷಾಭಾವೇ ಪ್ರಾಮಾಣ್ಯಸ್ಯ ಸ್ವತಸ್ತ್ವಾದೇವೇತಿ ಜ್ಞೇಯಮ್ । ನನು ನಿತ್ಯಾನಾಂ ಸರ್ವಗತಾನಾಂ ವರ್ಣಾನಾಂ ಕಥಂ ಪೌರ್ವಾಪರ್ಯರೂಪಃ ಕ್ರಮ ಇತ್ಯತ ಆಹ ಸ ಚೇತಿ ॥ ವಕ್ತಾ ವೇದಾನಾಮಿತಿ ಶೇಷಃ। ನಿತ್ಯಾನಾಮಪೀಶ್ವರಬುದ್ಧೀನಾಂ ತಚ್ಛಕ್ತಿವಿಶೇಷಾತ್ಕ್ರಮೋಽಸ್ತ್ಯೇವ, ಅತೋ ಬುದ್ಧಿಕ್ರಮಾದಿತ್ಯುಕ್ತಮ್ । ಕ್ರಮಶೂನ್ಯಾನಾಂ ಸ್ವತಃಕ್ರಮಶೂನ್ಯಾನಾಮ್ । ಪಶ್ಯೇತ್ಕ್ರಮಮಿತಿ ಸಂಬಂಧಃ ॥ ೫೬ ॥

**ವಿವರಣೆ–** ಶ್ರೀಹಯಗ್ರೀವ ದೇವರು ವಿದ್ಯಾಪ್ರದಪ್ರಭು. ಆದಕ್ಕಾಗಿಯೇ ಕೈಯಲ್ಲಿ ಪುಸ್ತಕವನ್ನು ಧರಿಸಿರುವರು. ಭಗವಂತನು ಚತುರ್ಮುಖಬ್ರಹ್ಮದೇವರಿಗೆ ಮೊದಲಿಗೆ ವೇದವಿದ್ಯೆಯನ್ನು ಉಪದೇಶಿಸಿ ಗುರುವೆನಿಸಿದ್ದಾನೆ. ಇದಕ್ಕೆ ಇನ್ನೊಂದು ಸಂವಾದಿ ಪ್ರಮಾಣ ಶ್ರೀಮದ್ಭಾಗವತ - ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಇತ್ಯಾದಿ. ದೇವಸ್ಯೈಷ ಸ್ವಭಾಯೋಽಯಂ ಎಂಬ ವೇದವಾಕ್ಯವು ಪರಮಾತ್ಮನ ಬುದ್ಧಿಸ್ವಭಾವವನ್ನು ಹೇಳುತ್ತದೆ. ವೇದಗತ ವರ್ಣಗಳ ಪೌರ್ವಾಪರ್ಯವು ಯುಕ್ತವಾಗಿರುತ್ತದೆ. ಅಂದರೆ, ಒಂದು ವರ್ಣದ ನಂತರ ಇನ್ನೊಂದು ವರ್ಣ ಎಂದು ವರ್ಣಗಳ ಕ್ರಮವು ಕೂಡುತ್ತದೆ. ಪರಮಾತ್ಮನ ಸರ್ವಜ್ಞತ್ವಶಕ್ತಿಯಿಂದಲ್ಲ, ಶ್ರೀಹರಿಯು ಸ್ವತಂತ್ರ. ವೇದವಾಕ್ಯಗಳನ್ನು ನೋಡಿ ವೇದಾರ್ಥವನ್ನು ಹೇಳುವವನು ಮಾತ್ರ. ಪರಮಾತ್ಮನಿಂದ ದೃಷ್ಟವಾದ ವೇದಾರ್ಥವನ್ನು ಹೇಳುವುದಾದರೆ, ರಾಗಾದಿ ದೋಷವನ್ನು ಶಂಕಿಸಬಾರದು. ಏಕೆಂದರೆ ಶ್ರುತಿಗಳು ಸ್ವತಃ ಪ್ರಮಾಣಗಳು. ಅಯಥಾರ್ಥ್ಯಕ್ಕೆ ಬೇಕಾದ ದೋಷವಿಲ್ಲದ್ದರಿಂದ. ಕ್ರಮವು ಎರಡು ವಿಧ. ದೈಶಿಕ ಹಾಗೂ ಕಾಲಿಕ, ದೈಶಿಕ ಕ್ರಮವು ಬ್ರಾಹ್ಮಣಭೋಜನ ಸಮಯದಲ್ಲಿ ಇವರು ಮೊದಲಿನವರು, ಇವರು ಎರಡನೆಯವರು ಇತ್ಯಾದಿ. ಕಾಲಿಕ ಕ್ರಮವು ತಂದೆ, ಮೊದಲ ಮಗ, ಎರಡನೆಯ ಮಗ ಇತ್ಯಾದಿ. ಈ ಎರಡೂ ಕ್ರಮಗಳೂ ವೇದಗಳಿಗೆ ಕೂಡುವುದಿಲ್ಲ. ಏಕೆಂದರೆ, ವರ್ಣಗಳು ನಿತ್ಯವಾದ್ದರಿಂದ ಹಾಗೂ ವ್ಯಾಪ್ತವಾದ್ದರಿಂದ. ಆದ್ದರಿಂದ ವೇದಗಳಿಗೆ ಕ್ರಮವನ್ನು ಉಪಪಾದಿಸುತ್ತಿದ್ದಾರೆ. ಸ ಚ ವಕ್ತಾ ಎಂಬುದಾಗಿ, ಈಶ್ವರ ಬುದ್ಧಿಕ್ರಮವು, ನಿತ್ಯವಾಗಿದ್ದರೂ ಕೂಡ ವಿಶೇಷ ಶಕ್ತಿಯಿಂದ ಕ್ರಮವು ಕೂಡುತ್ತದೆ. ಎಂಬುವುದಾಗಿ ಅತೋ ಬುದ್ಧಿಕ್ರಮಾತ್ ಕ್ರಮಂ ಎಂದು ಹೇಳಿದ್ದಾರೆ. ವೇದಗತವಾದ ವರ್ಣದ ಕ್ರಮವು ಸ್ವತಃ ಶೂನ್ಯವಾದ್ದರಿಂದ ಅವಿದ್ಯಮಾನವಾದ ಕ್ರಮವನ್ನು ಪರಮಾತ್ಮನು

ನೋಡಿದರೆ ಪರಮಾತ್ಮನು ಭ್ರಮೆವುಳ್ಳವನಾಗಲಿ ಎಂಬ ಶಂಕೆ ಬಂದರೆ, ಅದನ್ನು ನಿವಾರಿಸುತ್ತಾರೆ, ಸ್ವತಃ ಕ್ರಮಶೂನ್ಯಾನಾಂ ಎಂಬುವುದಾಗಿ, ಸ್ವಾಭಾವಿಕವಾಗಿ ವರ್ಣಗಳಿಗೆ ಕ್ರಮವಿಲ್ಲದಿದ್ದರೂ ಪರಮಾತ್ಮನ ಬುದ್ಧಿಯಲ್ಲಿ ಕ್ರಮವು ಇರುವುದರಿಂದ ಅದನ್ನು ನೋಡಿರುವುದರಿಂದ ಅವನು ಭ್ರಾಂತನಲ್ಲ.

ನಿತ್ಯವಾದ ವರ್ಣಗಳಿಗೆ ಔಪಾಧಿಕಕ್ರಮವನ್ನು ಅಂಗೀಕರಿಸಿದರೆ, ಕ್ರಮವು ಜನ್ಯವಾಗುತ್ತದೆ ಎಂಬ ಶಂಕೆಗೆ ದೃಷ್ಟಾಂತಪೂರ್ವಕವಾಗಿ ಉತ್ತರಿಸುತ್ತಿದ್ದಾರೆ

**ನಿತ್ಯೇಶಬುದ್ಧ್ಯುಪಾಧೇಸ್ತದ್ವರ್ಣೇಷ್ವೌಪಾಧಿಕಃ ಕ್ರಮಃ ।**
**ಮಠಾಕಾಶಘಟಾಕಾಶಕ್ರಮವತ್ಸ್ಯಾದನಾದಿತಃ ॥ ೫೭ ॥**

**ಅರ್ಥ–** ಆ ವೇದಗಳ ವರ್ಣಗಳಲ್ಲಿ, ನಿತ್ಯೇಶಬುದ್ಧ್ಯುಪಾಧೇಃ = ನಿತ್ಯನಾದ ಪರಮಾತ್ಮನ ಬುದ್ಧಿನಿಮಿತ್ತಕವಾಗಿ, ಔಪಾಧಿಕಃ ಕ್ರಮಃ =ಉಪಾಧಿನಿಮಿತ್ತಕವಾದ ಕ್ರಮವು, ಅನಾದಿತಃ= ಅನಾದಿಯಾದ, ಖಾತ್= ಆಕಾಶದಿಂದ, ಮಠಾಕಾಶ ಘಟಾಕಾಶ ಕ್ರಮವತ್= ಮಠಾಕಾಶ ಘಟಾಕಾಶ ಕ್ರಮದಂತೆ, ಸ್ಯಾತ್= ಆಗುತ್ತದೆ.

**ಅನುವಾದ–** ನಿತ್ಯವಾದ ಈಶ್ವರಬುದ್ಧಿರೂಪವಾದ ಉಪಾಧಿಯಿಂದ ವರ್ಣಗಳಲ್ಲಿ ಔಪಾಧಿಕವಾದ ಕ್ರಮವಿದೆ. ಆಕಾಶವು ಅನಾದಿಯಾದರೂ ಮಠಾಕಾಶ ಮತ್ತು ಘಟಾಕಾಶಗಳಲ್ಲಿ ಕ್ರಮವಿರುವಂತೆ ವರ್ಣಗಳಲ್ಲಿಯೂ ಕ್ರಮವು ಉಪಪನ್ನವಾಗುತ್ತದೆ.

**ಭಾವವಿಲಾಸಿನೀ–** ನಿತ್ಯಾನಾಮಪ್ಯೌಪಾಧಿಕತ್ವೇ ಕ್ರಮವತ್ತ್ವೇ ಚ ದೃಷ್ಟಾಂತಃ – **ಮಠಾಕಾಶಘಟಾಕಾಶಕ್ರಮವದಿತಿ ॥** ಯಥಾ ನಿತ್ಯಸ್ಯೈವಾಕಾಶಪ್ರದೇಶಸ್ಯ ಮಠಾವಚ್ಛಿನ್ನತ್ವೇನ ಮಠಾಕಾಶತ್ವಂ ಮಠಾಂತರ್ಗಘಟಚ್ಛಿನ್ನತ್ವೇನ ಮಠಾಕಾಶಾದಪಿ ಸೂಕ್ಷ್ಮತರಘಟಾಕಾಶತ್ವಂ ಪೂರ್ವಂ ಘಟಾಕಾಶಾವಚ್ಛೇದಕಘಟಸ್ಯಾಭಾವಾನ್ಮಠಾಕಾಶಾದಪಿ ಘಟಾಕಾಶಸ್ಯ ಪಶ್ಚಾದ್ಭಾವಿತಾ ಚ ತದ್ವದನಾದಿಷ್ವಪಿ ವರ್ಣೇಷು ಅನಾದಿತ್ವಂ ಪೌರ್ವಾಪರ್ಯಲಕ್ಷಣಃ ಕ್ರಮುಶ್ಚ ಸ್ಯಾದಿತಿ ಪಿಂಡಿತಾರ್ಥಃ । ಘಟಮಠಾದೀನಾಂ ತತ್ಸಂಯೋಗಸ್ಯ ಚೋತ್ಪನ್ನತ್ವೇಽಪಿ ತದವಚ್ಛಿನ್ನಾಕಾಶಸ್ಯ ದೇಹಾವಚ್ಛಿನ್ನಾತ್ಮವದನುತ್ಪತ್ತೇರ ಪರಿಹಾರಾತ್ಉಪಾಧೇರೇವ ನಿತ್ಯತ್ವೇ ಕ್ರಮಿಕತ್ವೇ ಚ ಕಿಮು ವಕ್ತವ್ಯಮೌಪಾಧಿಕಸ್ಯ ನಿತ್ಯತ್ವಾದಿಕಮಿತಿ ಭಾವಃ ॥ ೫೭ ॥

**ವಿವರಣೆ–** ನಿತ್ಯವಾದ ವಸ್ತುಗಳಿಗೂ ಔಪಾಧಿಕತ್ವವೂ ಮತ್ತು ಕ್ರಮವೂ ಇರಬಹುದು ಎಂಬ ವಿಷಯದಲ್ಲಿ ಈ ಶ್ಲೋಕದಲ್ಲಿ ಮಠಾಕಾಶ ಮತ್ತು ಘಟಾಕಾಶಗಳ ದೃಷ್ಟಾಂತವನ್ನು ಕೊಡುತ್ತಾರೆ. ನಿತ್ಯವಾದ ಆಕಾಶಪ್ರದೇಶವೇ ಮಠಾವಚ್ಛಿನ್ನವಾದರೆ ಮಠಾಕಾಶವೆಂದೂ, ಮಠಾಂರ್ತಗತವಾದ ಘಟಾವಚ್ಛಿನ್ನವಾದರೆ ಮಠಾಕಾಶಕ್ಕಿಂತ ಚಿಕ್ಕದಾದ ಘಟಾಕಾಶವೆಂದೂ ಕರೆಸಿಕೊಳ್ಳಲ್ಪಡುತ್ತದೆ. ಮೊದಲು ಘಟವು ಇಲ್ಲದಿರುವಾಗ

ಅವಚ್ಛೇದಕವು ಇರದಿದ್ದ ಕಾರಣ ಘಟಾಕಾಶವೆನಿಸದಿದ್ದರೂ ಮಠಾಕಾಶದೊಳಗೆ ಘಟವು ಬಂದಮೇಲೆ, ಘಟದಿಂದ ಅವಚ್ಛಿನ್ನವಾಗಿ ಘಟಾಕಾಶವೆನಿಸುತ್ತದೆ. ಘಟಾಕಾಶವು ಅಪರ ಮತ್ತು ಮಠಾಕಾಶವು ಪರ ಎನಿಸುತ್ತದೆ. ಘಟ-ಮಠ ಮೊದಲಾದ ಉಪಾಧಿಗಳು ಮತ್ತು ಸಂಯೋಗಗಳು ಉತ್ಪನ್ನವಾದರೂ ಸಹ ತದವಚ್ಛಿನ್ನವಾದ ಆಕಾಶವು ದೇಹಾವಚ್ಛಿನ್ನ ಆತ್ಮನಂತೆ ನಿತ್ಯವೇ ಆಗಿರುತ್ತದೆ. ಉಪಾಧಿಯು ಅನಿತ್ಯವಾದರೂ ಔಪಾಧಿಕವು ನಿತ್ಯವಾಗಿರುವಾಗ ಇಲ್ಲಿ ಈಶ್ವರಬುದ್ಧಿಯ ರೂಪವಾದ ಉಪಾಧಿಯು ನಿತ್ಯವಾಗಿರುವಾಗ ಔಪಾಧಿಕವಾದ ಕ್ರಮವು ನಿತ್ಯವಾಗಿರುವುದಕ್ಕೆ ಯಾವ ಬಾಧಕವೂ ಇಲ್ಲ ಎಂದು ಇಲ್ಲಿ ಸಮರ್ಥನೆ ಮಾಡುತ್ತಾರೆ.

ನಿತ್ಯವಾದ ಆಕಾಶ ಪ್ರದೇಶದಲ್ಲಿ ಮಠಸಂಬಂಧದಿಂದ ಮಠಾಕಾಶವೂ, ಘಟಸಂಬಂಧದಿಂದ ಘಟಾಕಾಶವೂ ಹೇಗೆ ಇರುವುದೋ, ಮಠಾಕಾಶನಂತರದಲ್ಲಿ ಘಟಾಕಾಶದ ಇರುವಿಕೆಯು ಹೇಗೆ ಕಂಡಿದೆಯೋ, ಅದೇ ರೀತಿಯಲ್ಲಿ ಪರಮಾತ್ಮನ ಬುದ್ಧಿನಿಮಿತ್ತಕವಾಗಿ ಪೌರ್ವಾಪರ್ಯರೂಪವಾದ ಕ್ರಮವು ಕೂಡುತ್ತದೆ. ಘಟ ಪಟಾದಿಗಳಿಗೆ ಆಕಾಶಸಂಬಂಧವು ಉತ್ಪನ್ನವಾದರೂ ಕೂಡ, ದೇಹ ಅನಿತ್ಯವಾದರೂ, ದೇಹಾವಚ್ಛಿನ್ನನಾದ ಆತ್ಮನು ಹೇಗೆ ನಿತ್ಯನೋ, ಹಾಗೆಯೇ ಘಟಾವಚ್ಛಿನ್ನ ಆಕಾಶವೂ ನಿತ್ಯವಾಗಿದೆ. ಆದರೆ ಇಲ್ಲಿ ಉಪಾಧಿಯೂ ನಿತ್ಯವಾದ್ದರಿಂದ, ಕ್ರಮವು ನಿತ್ಯವಾಗಿದೆ ಎಂಬುದು ಕೈಮುತ್ಯನ್ಯಾಯದಿಂದ ಸಿದ್ಧ.

**ನಿತ್ಯನಾದ ಪರಮಾತ್ಮನ ಮತಿಯೆಂಬ ಉಪಾಧಿಯಿಂದ ವರ್ಣಕ್ರಮವು ನಿತ್ಯತ್ವವುಳ್ಳದ್ದು ಯುಕ್ತವಾಗಿಯೇ ಇದೆ ಎಂದು ಪ್ರತಿಪಾದಿಸುತ್ತಾರೆ.**

**ಉಪಾಧಿನಿತ್ಯತಾಯಾಂ ತು ನಿತ್ಯತಾಪ್ಯಸ್ಯ ಶೋಭತೇ ।**
**ಅನಾದ್ಯಜ್ಞಾನತೋಽನಾದಿ ಯಥಾ ಸಂಸಾರಬಂಧನಂ ।**
**ಯಥಾ ವಾ ಪ್ರತಿಬಿಂಬಾತ್ಮಾ ಜೀವೋಽನಾದಿಃ ಶ್ರುತೌ ಶ್ರುತಃ ॥ ೫೮ ॥**

**ಅರ್ಥ–** ಉಪಾಧಿನಿತ್ಯತಾಯಾಂ ತು =ಉಪಾಧಿಯು ನಿತ್ಯವಾಗಿರುವಾಗ (ಇಲ್ಲಿ ತು ಶಬ್ದದಿಂದ ಅನಿತ್ಯತ್ವಪಕ್ಷವನ್ನು ನಿರಾಕರಿಸಿದ್ದಾರೆ.) ಅಸ್ಯ = ವೇದಗತ ವರ್ಣಕ್ರಮಕ್ಕೆ, ನಿತ್ಯತಾ ಅಪಿ =ನಿತ್ಯತ್ವವೂ ಕೂಡ, ಶೋಭತೇ = ಶೋಭಿಸುತ್ತದೆ. ಅನಾದ್ಯಜ್ಞಾನತಃ = ಅನಾದಿಯಾದ ಅಜ್ಞಾನದ ದೆಸೆಯಿಂದ, ಯಥಾ = ಹೇಗೆ, ಅನಾದಿಸಂಸಾರಬಂಧನಂ = ಅನಾದಿಯಾದ ಸಂಸಾರ ಬಂಧನವು, ವಾ = ಅಥವಾ, ಪ್ರತಿಬಿಂಬಾತ್ಮಾ = ಪ್ರತಿಬಿಂಬ ಸ್ವರೂಪನಾದ, ಜೀವಃ = ಜೀವನೂ, ಶ್ರುತೌ = ವೇದಗಳಲ್ಲಿ, ಅನಾದಿಃ ಶ್ರುತಃ = ಅನಾದಿ ಎಂದು ಪ್ರಸಿದ್ಧವನಾಗಿರುವನೋ, ಹಾಗೆಯೇ ಪರಮಾತ್ಮನ ಮತಿಯಿಂದ ಕ್ರಮವೂ ನಿತ್ಯವೆಂದು ತಿಳಿಯಬೇಕು.

**ಅನುವಾದ–** ಉಪಾಧಿಯೇ ನಿತ್ಯವಾಗಿರುವುದರಿಂದ ಇಲ್ಲಿ ಔಪಾಧಿಕವಾದ ಕ್ರಮಕ್ಕೂ ನಿತ್ಯತ್ವವು ಶೋಭಿಸುತ್ತದೆ. ಅಜ್ಞಾನವು ಅನಾದಿಯಾಗಿದ್ದರೂ ಅಜ್ಞಾನಾಧೀನವಾದ ಸಂಸಾರ ಬಂಧನವೂ ಹೇಗೆ ಅನಾದಿಯಾಗಿದೆಯೋ, ಅಥವಾ ಜೀವನು ಪ್ರತಿಬಿಂಬನಾಗಿದ್ದರೂ ಹೇಗೆ ಅನಾದಿಯೆಂದು ಶ್ರುತಿಯಲ್ಲಿ ಹೇಳಲ್ಪಡುತ್ತಾನೆಯೋ, ಹಾಗೇ ಈಶ್ವರಬುದ್ಧಿಯು ಅನಾದಿಯಾಗಿರುವುದರಿಂದ ಈಶ್ವರಬುದ್ಧ್ಯುಪಾಧಿಕಕ್ರಮವು ಅನಾದಿನಿತ್ಯವೇ ಆಗಿರುತ್ತದೆ. ನಿತ್ಯವಾದ ಈಶ್ವರಬುದ್ಧ್ಯುಪಾಧಿಕವಾದ ವರ್ಣಗಳ ಕ್ರಮಕ್ಕೂ ಸಹ ನಿತ್ಯತ್ವವೇ ಯೋಗ್ಯವಾದುದು ಎಂದು ಇಲ್ಲಿ ಹೇಳುತ್ತಾರೆ. ಅದಕ್ಕೆ ಅನಾದಿಯಾದ ಅಜ್ಞಾನ ಮತ್ತು ಬಂಧದ ದೃಷ್ಟಾಂತವನ್ನು ಬಿಂಬ-ಪ್ರತಿಬಿಂಬದ ದೃಷ್ಟಾಂತವನ್ನೂ ಕೊಡುತ್ತಾರೆ. ಬಿಂಬನಾದ ಈಶ್ವರನು ಅನಾದಿನಿತ್ಯನಾಗಿರುವುದರಿಂದ ಅವನಿಗೆ ಅಧೀನನಾದರೂ ಪ್ರತಿಬಿಂಬನಾದ ಜೀವನು ಹೇಗೆ ಅನಾದಿನಿತ್ಯನೋ, ಹಾಗೆ ಈಶ್ವರಬುದ್ಧಿಯು ಅನಾದಿನಿತ್ಯವಾದುದರಿಂದ ಈಶ್ವರಬುದ್ಧ್ಯಧೀನವಾದ ವರ್ಣಕ್ರಮವು ಅನಾದಿನಿತ್ಯವೇ ಆಗಿರುತ್ತದೆಯೆಂದು ಅಭಿಪ್ರಾಯ.

**ಭಾವವಿಲಾಸಿನೀ–** ನಿತ್ಯೇಶಬುದ್ಧ್ಯುಪಾಧಿಕವರ್ಣಕ್ರಮಸ್ಯ ನಿತ್ಯತ್ವಮೇವ ಯುಕ್ತಮಿತ್ಯಾಹ – **ಉಪಾಧೀತಿ ॥** ತತ್ರ ದೃಷ್ಟಾಂತಃ – **ಅನಾದೀತಿ ॥** ಯಥಾ ವೇತಿ ದೃಷ್ಟಾನ್ತಾಂತರಮ್ । ಬಿಂಬಸ್ಯೇಶ್ವರಸ್ಯಾನಾದಿನಿತ್ಯಾತ್ತತ್ಪ್ರತಿಬಿಂಬರೂಪೋ ಜೀವೋ ಯಥಾ ಅನಾದಿಃ ತದ್ವತ್ಕ್ರಮೋಽಪಿ ಸ್ವೋಪಾಧೇರೀಶ್ವರ- ಬುದ್ಧೇರ್ನಿತ್ಯತ್ವಾನ್ನಿತ್ಯ ಇತಿ ಭಾವಃ ॥ ೫೮ ॥

ವರ್ಣಗಳು ನಿತ್ಯಮತ್ತು ಸರ್ವತ್ರ ವ್ಯಾಪ್ತ ಎಂದಮೇಲೆ ಇದು ಪೂರ್ವವರ್ಣ, ಇದು ಉತ್ತರ ವರ್ಣ ಎಂಬುದು ಹೇಗೆ ಯುಕ್ತವಾಗುತ್ತದೆ ಎಂಬುದು ಇಲ್ಲಿ ಹೇಳುತ್ತಾರೆ-

> **ಪೂರ್ವಂ ಬುದ್ಧ್ಯಾ ಗ್ರಹಣತಃ ಪೂರ್ವತ್ವಂ ವರ್ಣಗಂ ಹಿ ತತ್ ।**
> **ಪಶ್ಚಾದ್ಬುದ್ಧ್ಯಾ ಗ್ರಹಣತಃ ಪರತ್ವಂ ತಚ್ಚ ವರ್ಣಗಮ್ ॥ ೫೯ ॥**

**ಅರ್ಥ–** ಪೂರ್ವಂ = ಮೊದಲಿಗೆ, ಬುದ್ಧ್ಯಾಗ್ರಹಣತಃ = ಪರಮಾತ್ಮನ ಮತಿಯಿಂದ ಗ್ರಹಿಸಲ್ಪಡುವುದರಿಂದ, ಪೂರ್ವತ್ವಂ = ಪೂರ್ವತ್ವವು (ಉಂಟಾಗುತ್ತದೆ), ತತ್ = ಅಪೂರ್ವತ್ವವು, ವರ್ಣಗಂ ಹಿ = ವರ್ಣದಲ್ಲಿಯೇ ಇರುವುದುಷ್ಟೆ, ಪಶ್ಚಾತ್ = ಅನಂತರ, ಬುದ್ಧ್ಯಾಗ್ರಹಣತಃ = ಈಶಬುದ್ಧಿಯಿಂದ ಗ್ರಹಿಸಲ್ಪಡುವುದರಿಂದ, ಪರತ್ವಂ = ಪರತ್ವವು (ಉಂಟಾಗುತ್ತದೆ), ತಚ್ಚ = ಅದೂ ಸಹ, ವರ್ಣಗಂ = ವರ್ಣಗತವಾದದ್ದೇ.

**ಅನುವಾದ–** ಯಾವ ವರ್ಣವು ಮೊದಲು ಈಶ್ವರಬುದ್ಧಿಗೆ ವಿಷಯವಾಗುತ್ತದೆಯೋ, ಅದು ಪೂರ್ವವರ್ಣವೆನಿಸುತ್ತದೆ. ಯಾವುದು ಈಶ್ವರನ ಬುದ್ಧಿಗೆ ಅನಂತರ ವಿಷಯವಾಗುತ್ತದೆಯೋ, ಅದು ಪರವರ್ಣವೆನಿಸುತ್ತದೆ. ಈ ಪೂರ್ವತ್ವ ಮತ್ತು ಪರತ್ವಗಳು ವರ್ಣಗಳಲ್ಲಿಯೇ ಇವೆ.

**ಭಾವವಿಲಾಸಿನೀ– ನನು ನಿತ್ಯೇಷು ಸರ್ವಗತೇಷು ವರ್ಣೇಷು ಅಯಂ ಪೂರ್ವವರ್ಣಃ ಅಯ-ಮುತ್ತರವರ್ಣ ಇತಿ ಕಥಂ ಘಟತೇ? ಇತ್ಯತ ಆಹ – ಪೂರ್ವಮಿತಿ ॥ ೫೯ ॥**

**ವಿವರಣೆ–** ನಿತ್ಯವಾದ ಮತ್ತು ಸರ್ವಗತವಾದ ವರ್ಣದಲ್ಲಿ ಒಂದು ಪೂರ್ವ ಮತ್ತು ಇನ್ನೊಂದು ಉತ್ತರ ಎಂಬ ವಿಭಾಗವು ಹೇಗೆ ಕೂಡುತ್ತದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಯಾವ ವರ್ಣವು ಮೊದಲು ಗೃಹೀತವಾಗುತ್ತದೆಯೋ, ಅದು ಪೂರ್ವ, ಯಾವ ವರ್ಣವು ಅನಂತರ ಗೃಹೀತವಾಗುತ್ತದೆಯೋ ಅದು ಉತ್ತರ ಎಂದು ಸಮಾಧಾನ.

**ಹಿಂದೆ ಹೇಳಿದ ಪ್ರಮೇಯವನ್ನು ವಿಶದಗೊಳಿಸುತ್ತಾರೆ -**

**ಏವಂ ಬುದ್ಧ್ಯಾಪೂರ್ವತೈವ ಕಾಚಿದ್ವರ್ಣೇऽಸ್ತ್ಯುಪಾಹಿತಾ ।**
**ಪಶ್ಚಾದ್ಬುದ್ಧ್ಯಾಪರತ್ವಂ ಚ ವರ್ಣೇಷ್ವಸ್ತಿ ನ ಸಂಶಯಃ ॥ ೬೦ ॥**

**ಅರ್ಥ–** ಏವಂ = ಈ ರೀತಿಯಲ್ಲಿ, ಬುದ್ಧ್ಯಾ = ಈಶ್ವರಬುದ್ಧಿಯಿಂದ, ವರ್ಣೇ= ಒಂದು ವರ್ಣದಲ್ಲಿ, ಕಾಚಿತ್ ಪೂರ್ವತಾ ಏವ= ಒಂದು ಬಗೆಯ ಪೂರ್ವತ್ವವೇ, ಉಪಾಹಿತಾ = ಉಪಾಹಿತವಾಗಿರುತ್ತದೆ. ಚ = ಮತ್ತು, ಪಶ್ಚಾದ್‌ಬುದ್ಧ್ಯಾ = ಅನಂತರದ ಬುದ್ಧಿಯಿಂದ, ವರ್ಣೇಷು = ಕೆಲವುವರ್ಣಗಳಲ್ಲಿ, ಅಪರತ್ವಂ = ಪರತ್ವವು, ಉಪಾಹಿತಾ ಅಸ್ತಿ = ಉಪಾಹಿತವಾಗಿರುತ್ತದೆ. ನ ಸಂಶಯಃ = ಈ ವಿಷಯದಲ್ಲಿ ಸಂಶಯವಿಲ್ಲ.

**ಅನುವಾದ–** ಮೊದಲನೆಯ ಬುದ್ಧಿಗೆ ಯಾವುದು ವಿಷಯವಾಗುತ್ತದೆಯೋ, ಆ ವರ್ಣದಲ್ಲಿ ಪೂರ್ವತ್ವವೇ ಉಪಹಿತವಾಗುತ್ತದೆ. ಅನಂತರ ಬುದ್ಧಿಯಲ್ಲಿ ಯಾವುದು ವಿಷಯೀಕೃತವಾಗುತ್ತದೆಯೋ, ಅದರಲ್ಲಿ ಪರತ್ವವು ಉಪಾಹಿತವಾಗುತ್ತದೆ.

**ಭಾವವಿಲಾಸಿನೀ– ತದೇವ ವಿಶದಯತಿ – ಪೂರ್ವಂ ಬುದ್ಧ್ಯಾಪೂರ್ವತೈವೇತ್ಯಾದಿನಾ ॥ ೬೦ ॥**

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಅಭಿಪ್ರಾಯವನ್ನೇ ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ. ಈಶ್ವರ ಬುದ್ಧಿಯ ಗ್ರಹಣದಕ್ರಮವನ್ನು ಅನುಸರಿಸಿಯೇ ವರ್ಣಗಳಲ್ಲಿ ಕ್ರಮವನ್ನು ಹೇಳಬೇಕು. ಬೇರೆ ಉಪಾಯವಿಲ್ಲವೆಂದು ತಾತ್ಪರ್ಯ.

**ಪೂರ್ವೋಕ್ತಪ್ರಮೇಯವನ್ನು ಒಪ್ಪದಿದ್ದ ಪಕ್ಷದಲ್ಲಿ ಬಾಧಕವನ್ನು ಹೇಳುತ್ತಾರೆ-**

**ನ ಚೇನ್ನದೀದೀನಶಬ್ದೌ ಭಿನ್ನಭಿನ್ನಾರ್ಥಕೌ ಕಥಂ ।**
**ಕಥಂ ಚ ಸ್ಯಾತ್ಪೂರ್ವವರ್ಣಾತ್ಪೂರ್ವ ಇತ್ಯಾದಿಕಂ ವಚಃ ॥ ೬೧ ॥**

**ಅರ್ಥ–** ನ ಚೇತ್ = ಪೂರ್ವೋಕ್ತಪ್ರಮೇಯವನ್ನು ಅಂಗೀಕರಿಸದಿದ್ದರೆ, ನದೀ ದೀನ ಶಬ್ದೌ= ನದೀ ಮತ್ತು ದೀನ ಶಬ್ದಗಳು, ಕಥಂ = ಹೇಗೆ, ಭಿನ್ನ ಭಿನ್ನಾರ್ಥಕೌ = ಪ್ರತ್ಯೇಕವಾದ

ಅರ್ಥವುಳ್ಳವು ಆದಾವು? ಚ = ಮತ್ತು, ಪೂರ್ವವರ್ಣಾತ್ = ಮೊದಲಿನ ವರ್ಣಕ್ಕಿಂತ, ಪೂರ್ವಃ = ಮೊದಲನೆಯದು, ಇತ್ಯಾದಿಕಂ = ಇವೇ ಮುಂತಾದ, ಪ್ರಾಚಾಂ ವಚಃ = ಪ್ರಾಚೀನರ ಮಾತು, ಕಥಂ = ಹೇಗೆ, ಸ್ಯಾತ್ = ಯುಕ್ತವಾಗುತ್ತದೆ.

**ಅನುವಾದ–** ಹಾಗಿಲ್ಲದಿದ್ದರೆ ನದೀ ಮತ್ತು ದೀನ ಶಬ್ದಗಳು ಹೇಗೆ ಭಿನ್ನ-ಭಿನ್ನವಾದ ಅರ್ಥಗಳನ್ನು ಹೇಳುತ್ತವೆ. ಅಷ್ಟೇ ಅಲ್ಲದೇ ಪೂರ್ವವರ್ಣಕ್ಕಿಂತ ಪೂರ್ವ ಎಂಬ ಪ್ರಾಚೀನರ ಪ್ರಯೋಗಗಳಾದರೂ ಹೀಗೆ ಕೂಡುತ್ತವೆ ?

**ಭಾವವಿಲಾಸಿನೀ–** ತದನಂಗೀಕಾರೇ ಬಾಧಕಮಾಹ – **ನಚೇದಿತಿ** ॥ ನದೀಶಬ್ದೇ ನಕಾರಸ್ಯ ಪೂರ್ವತ್ವಾಭಾವೇ ದೀಕಾರಸ್ಯ ಪರತ್ವಾಭಾವೇ ದೀನಶಬ್ದೇ ತದ್ವೈಪರೀತ್ಯಸ್ಯ ಚಾಭಾವೇ ನದೀದೀನಶಬ್ದೌ ನದೀದುಃಖಿತಲಕ್ಷಣಭಿನ್ನಭಿನ್ನಾರ್ಥಕೌ ಕಥಂ ಸ್ಯಾತಾಮ್? ಇತ್ಯರ್ಥಃ। ಅಸ್ತಿಚ ಭಿನ್ನಭಿನ್ನಾರ್ಥಬೋಧಃ। ತಸ್ಮಾದ್ವರ್ಣೇಷೂಪಾಧಿನಿಮಿತ್ತಕಂ ಪೌರ್ವಾಪರ್ಯಂ ಚಾಸ್ತೀತಿ ಭಾವಃ। ಬಾಧಕಾಂತರಮಾಹ – **ಕಥಂ ಚ ಸ್ಯಾದಿತಿ** ॥ ಪ್ರಾಚಾಮಿತಿ ಶೇಷಃ ॥ ೬೧ ॥

**ವಿವರಣೆ–** ಅಷ್ಟೇ ಅಲ್ಲದೇ ವರ್ಣಗಳಲ್ಲಿ ಪೂರ್ವತ್ವ ಮತ್ತು ಉತ್ತರತ್ವವನ್ನು ಅಂಗೀಕಾರ ಮಾಡದಿದ್ದರೆ, ಈ ಶ್ಲೋಕದಲ್ಲಿ ಬಾಧಕವನ್ನು ಹೇಳುತ್ತಾರೆ. ನದೀ-ದೀನ ಎಂಬ ಎರಡು ಶಬ್ದಗಳಿವೆ. ಒಂದರಲ್ಲಿ 'ನ'ಕಾರ ಪೂರ್ವ, 'ದೀ'ಕಾರ ಉತ್ತರ. ಇನ್ನೊಂದರಲ್ಲಿ 'ದೀ' ಕಾರ ಪೂರ್ವ, 'ನ'ಕಾರ ಉತ್ತರ. ''ನದೀ' ಎಂದರೆ 'ಪ್ರವಾಹ' ಎಂದು ಅರ್ಥ. 'ದೀನ' ಎಂದರೆ 'ದುಃಖೀ' ಎಂದು ಅರ್ಥ. ವರ್ಣದಲ್ಲಿ ಪೌರ್ವಾಪರ್ಯಗಳಿಲ್ಲದಿದ್ದರೆ ನದೀ, ದೀನ ಎರಡು ಶಬ್ದಗಳು ಪೂರ್ವಾಪರ್ಯವಿಲ್ಲದ 'ನ' ಮತ್ತು 'ದೀ' ಎಂಬ ವರ್ಣಗಳ ಸಮುದಾಯ ಎಂದಂತಾಯಿತು. ಹಾಗಾದರೆ ಅರ್ಥವ್ಯತ್ಯಾಸವು ಹೇಗೆ ಬಂದಿತು? ಈ ಪ್ರಶ್ನೆಗೆ ಉತ್ತರವನ್ನು ಹೇಳಬೇಕಾದರೆ, ನದೀ ಶಬ್ದದಲ್ಲಿ ವರ್ಣಗಳ ಕ್ರಮವು ಏನಿದೆಯೋ, ಅದಕ್ಕಿಂತ ಭಿನ್ನವಾದ ಕ್ರಮವು ದೀನ ಶಬ್ದದಲ್ಲಿದೆ. ಆದ್ದರಿಂದ ನದೀ ಶಬ್ದದ ಅರ್ಥವೇ ಬೇರೆ, ದೀನ ಶಬ್ದದ ಅರ್ಥವೇ ಬೇರೆ ಎಂದು ಹೇಳಬೇಕು. ಹಾಗೇ ಹೇಳಬೇಕಾದರೆ ವರ್ಣದಲ್ಲಿ ಕ್ರಮವನ್ನು ಒಪ್ಪಿದರೆ ಮಾತ್ರ ಸಾಧ್ಯ. ಅದೂ ಅಲ್ಲದೆ ಪ್ರಾಚೀನರು ಪೂರ್ವವರ್ಣಕ್ಕಿಂತ ಪೂರ್ವದಲ್ಲಿ ಇಂತಹ ಕಾರ್ಯವುಬರುತ್ತದೆ ಎಂದು ಹೇಳುತ್ತಾರೆ. ವರ್ಣದಲ್ಲಿ ಪೂರ್ವತ್ವವೇ ಇಲ್ಲದಿದ್ದರೆ ಇಂತಹ ಸಂಪ್ರತಿಪನ್ನ ಪ್ರಯೋಗವು ಹೇಗೆ ಕೂಡುತ್ತದೆ? ಈ ಎರಡು ಕಾರಣಗಳಿಂದ ವರ್ಣದಲ್ಲಿ ಕ್ರಮವನ್ನು ಒಪ್ಪಬೇಕು ಎಂದು ಸಮರ್ಥನೆ ಮಾಡುತ್ತಾರೆ. ನಿತ್ಯವಾದ ಈಶ್ವರಬುದ್ಧಿಯಲ್ಲಿ ಹೇಗೆ ವಿಶೇಷ ಸಾಮರ್ಥ್ಯದಿಂದ ಪೌರ್ಯಾಪರ್ಯವು ಉಪಪನ್ನವಾಗುತ್ತದೆಯೋ, ಆದರಂತೆ ನಿತ್ಯವಾದ ಉಪಾಧಿಯ ಪ್ರಯುಕ್ತವಾಗಿ ವರ್ಣಗಳಲ್ಲಿಯೂ ಸಹ ಪೌರ್ವಾಪರ್ಯಗಳನ್ನು ಅಂಗೀಕರಿಸಬೇಕು.

ವರ್ಣಗಳು ನಿತ್ಯವಾದರೂ ಅವುಗಳಲ್ಲಿ ಪೌರ್ವಾಪರ್ಯವು ಯುಕ್ತವೆಂದು ದೃಷ್ಟಾಂತಮುಖದಿಂದ ಮತ್ತೊಮ್ಮೆ ಉಪಪಾದಿಸುತ್ತಿದ್ದಾರೆ-

**ಯಥೈಕಸ್ಯಾಮೀಶಬುದ್ಧೌ ಪೌರ್ವಾಪರ್ಯಂ ವಿಶೇಷತಃ ।**
**ವರ್ಣೇಷು ತದ್ವತ್ಸ್ವೀಕಾರ್ಯಂ ಪೌರ್ವಾಪರ್ಯಂ ಸದೋಪಧೇಃ ॥ ೬೨ ॥**

**ಅರ್ಥ–** ಏಕಸ್ಯಾಂ = ಒಂದೇ ಆದ, ಈಶಬುದ್ಧೌ = ಪರಮಾತ್ಮನ ಮತಿಯಲ್ಲಿ, ವಿಶೇಷತಃ = ವಿಶೇಷಬಲದಿಂದ, ಪೌರ್ವಾಪರ್ಯಂ = ಪೂರ್ವಾಪರತ್ವವೆಂಬ ಕ್ರಮವು, ಯಥಾ = ಹೇಗೆ, ಇದೆಯೋ, ತದ್ವತ್ = ಅದರಂತೆ, ಸದೋಪಧೇಃ = ಸತ್ಯವಾದ ಪರಮಾತ್ಮನ ಮತಿಯೆಂಬ ಉಪಾಧಿಯ ದೆಸೆಯಿಂದ, ವರ್ಣೇಷು = ವರ್ಣಗಳಲ್ಲಿ, ಪೌರ್ವಾಪರ್ಯಂ = ಹಿಂದೆ ಮುಂದೆ ಎಂಬ ಕ್ರಮವು, ಸ್ವೀಕಾರ್ಯಂ = ಸ್ವೀಕರಿಸಲ್ಪಡಬೇಕು.

**ಅನುವಾದ– ಹೇಗೆ ಒಂದೇ ಈಶ್ವರಬುದ್ಧಿಯಲ್ಲಿ ವಿಶೇಷಬಲದಿಂದ ಪೌರ್ವಾಪರ್ಯವು ಉಪಪನ್ನವಾಗುತ್ತದೆಯೋ ಅದರಂತೆ ನಿತ್ಯವಾದ ಈಶ್ವರಬುದ್ಧಿರೂಪಕವಾದ ಉಪಾಧಿಯ ಪ್ರಯುಕ್ತವಾಗಿ ವರ್ಣಗಳಲ್ಲಿಯೂ ಪೌರ್ವಾಪರ್ಯವನ್ನು ಅಂಗೀಕರಿಸಬೇಕಾಗುತ್ತದೆ.**

**ಭಾವವಿಲಾಸಿನೀ–** ನಿತ್ಯೇಷ್ವಪಿ ಪೂರ್ವಾಪರ್ಯಂ ವಿಸ್ಪಷ್ಟದೃಷ್ಟಾಂತಮುಖೇನ ಪುನರಪ್ಯುಪಪಾದಯತಿ – **ಯಥೈಕಸ್ಯಾಮಿತಿ** ॥ ನಚೇಶಬುದ್ಧೌ ಪೌರ್ವಾಪರ್ಯಂ ನಾಸ್ತೀತಿ ವಾಚ್ಯಮ್ । ನಿತ್ಯೇಷ್ವೇವೇಶ್ವರಜ್ಞಾನೇಚ್ಛಾಪ್ರಯತ್ನೇಷು ಪೌರ್ವಾಪರ್ಯದರ್ಶನಾದ್ಬುದ್ಧೀನಾಮಪಿ ಪೌರ್ವಾಪರ್ಯಸ್ಯ ನ್ಯಾಯಪ್ರಾಪ್ತತ್ವಾತ್ । ಉಪಧೇರೀಶ್ವರಬುದ್ಧಿಲಕ್ಷಣೋಪಾಧೇರಿತ್ಯರ್ಥಃ ॥ ೬೨ ॥

**ವಿವರಣೆ–** ನಿತ್ಯವಸ್ತುಗಳಲ್ಲಿಯೂ ಪೌರ್ವಾಪರ್ಯವುಂಟೆಂದು ಸ್ಪಷ್ಟವಾದ ದೃಷ್ಟಾಂತವನ್ನು ಉದಾಹರಿಸಿ ಉಪಪಾದನೆ ಮಾಡುತ್ತಾರೆ. ನಿತ್ಯವಾದ ಈಶ್ವರಜ್ಞಾನದಲ್ಲಿ ಪೌರ್ವಾಪರ್ಯವಿರುತ್ತದೆ. ವರ್ಣದಲ್ಲಿಯೂ ಪೌರ್ವಾಪರ್ಯವನ್ನು ಅಂಗೀಕರಿಸಬೇಕು. ಈಶ್ವರಜ್ಞಾನದಲ್ಲೇ ಏಕೆ ಪೌರ್ವಾಪರ್ಯವನ್ನು ಅಂಗೀಕರಿಸಬೇಕು ಎಂದು ಪ್ರಶ್ನೆಯನ್ನು ಮಾಡಿದರೆ ಜ್ಞಾನೇಚ್ಛಾಪ್ರಯತ್ನಗಳಿಗೆ ಲೋಕದಲ್ಲಿ ಕಾರ್ಯಕಾರಣ ಭಾವವಿದೆ. ಈಶ್ವರನಲ್ಲಿ ಅವೆಲ್ಲವೂ ನಿತ್ಯವಾದರೂ ಅವುಗಳಿಗೆ ಪ್ರಯೋಜ್ಯ ಪ್ರಯೋಜಕಭಾವವಿದೆ. ಆದ್ದರಿಂದ ಮೊದಲು ಜ್ಞಾನ, ಅನಂತರ ಇಚ್ಛೆ, ಅನಂತರ ಪ್ರಯತ್ನ ಎಂದು ಅಂಗೀಕರಿಸಬೇಕು. ಹೀಗೆ ನಿತ್ಯವಾದ ಜ್ಞಾನೇಚ್ಛಾ ಪ್ರಯತ್ನಗಳಲ್ಲಿ ಕ್ರಮವಿರುವಾಗ ನಿತ್ಯವಾದ ಈಶ್ವರಬುದ್ಧಿಗಳಲ್ಲಿಯೂ ಕ್ರಮವಿರುವುದಕ್ಕೆ ಏನೂ ಬಾಧಕವಿಲ್ಲ. ಆದ್ದರಿಂದ ಉಪಾಧಿಯಾದ ಈಶ್ವರಬುದ್ಧಿಗಳಲ್ಲೇ ಕ್ರಮವಿರುವುದರಿಂದ ಅದರಿಂದ ಉಪಹಿತವಾದ ವರ್ಣಗಳಲ್ಲಿ ಕ್ರಮವಿರುವುದಕ್ಕೆ ಯಾವ ಬಾಧಕವೂ ಇಲ್ಲ.

ಉದಾಹರಣಾಂತರವನ್ನು ಹೇಳುತ್ತಿದ್ದಾರೆ

**ತ್ವಯಾಪಿ ಕಾಲೇ ಮಹತಿ ಯಾಮಾದೀನಾಮುಪಾಧಿಜಂ ।**
**ಪೌರ್ವಾಪರ್ಯಂ ಕಥಂ ವಾರ್ಯಂ ಕಾರ್ಯಂ ಕುರ್ಯುರ್ಯತೋಽ-**
**ಖಿಲಮ್ ॥ ೬೩ ॥**

**ಅರ್ಥ–** ತ್ವಯಾ ಅಪಿ = ನಿನ್ನಿಂದಲಾದರೂ, ಮಹತಿಕಾಲೇ = ಮಹಾಕಾಲದಲ್ಲಿ ಉಪಾಧಿಜಂ = ಉಪಾಧಿಯಿಂದ ಹುಟ್ಟಿದಂತಹ, ಯಾಮಾದೀನಾಂ = ಯಾಮಾದಿಗಳಿಗೆ, ಪೌರ್ವಾಪರ್ಯಂ = ಹಿಂದೆ ಮುಂದೆ ಎಂಬ ಕ್ರಮವನ್ನು, ಕಥಂ = ಹೇಗೆ, ವಾರ್ಯಂ = ನಿವಾರಿಸಿಕೊಳ್ಳಲಾಗುತ್ತದೆ? ಯತಃ = ಏಕೆಂದರೆ, ಅಖಿಲಂ= ಸಕಲವಾದ, ಕಾರ್ಯಂ = ಕಾರ್ಯವನ್ನು, ಕುರ್ಯುಃ = ಮಾಡುವರಷ್ಟೆ.

**ಅನುವಾದ– ನಿತ್ಯವಾದ ಮಹಾಕಾಲದಲ್ಲಿ ಔಪಾಧಿಕವಾದ ಯಾಮಗಳಿಗೆ ಪೌರ್ವಾಪರ್ಯವನ್ನು ಒಪ್ಪುತ್ತೀಯೆ, ಆದ್ದರಿಂದ ನಿತ್ಯವಾದವರ್ಣದಲ್ಲಿ ಕ್ರಮವನ್ನು ಹೇಗೆ ನಿರಾಕರಿಸುತ್ತೀಯೆ? ಏಕೆಂದರೆ ಕಾಲದ ಪೌರ್ವಾಪರ್ಯವನ್ನನುಸರಿಸಿ-ಕೊಂಡೇ ಎಲ್ಲರೂ ಎಲ್ಲಾ ಕೆಲಸವನ್ನು ಮಾಡುತ್ತಾರಷ್ಟೇ?**

**ಭಾವವಿಲಾಸಿನೀ– ಉದಾಹರಣಾಂತರಂ ಚಾಹ – ತ್ವಯಾಪೀತಿ ॥ ಮಹತೀತ್ಯುಪಲಕ್ಷಣಮ್ । ನಿತ್ಯೇ ಚೇತ್ಯಪಿ ಗ್ರಾಹ್ಯಮ್ । ಕಾರ್ಯಂ ಯಾಮಾತ್ಪೂರ್ವಂ ನ ಭುಂಜೀತ ಯಾಮಯುಗ್ಮಂ ನ ಲಂಘಯೇದಿತ್ಯಾದಿಕಾರ್ಯಮಿತ್ಯರ್ಥಃ । ಅರ್ಥಕ್ರಿಯಾಕಾರಿತ್ವೇನೌಪಾಧಿಕಸ್ಯನಭ್ರಾಂತಿ-ಕಲ್ಪಿತತ್ವಮಿತಿದರ್ಶಯಿತುಮುದಾ ಹರಣಾಂತರಮಿತಿ ಜ್ಞೇಯಮ್ । ಅಸ್ಮಾಭಿಃ ಕಾಲಸ್ಯ ನಿತ್ಯಾನಿತ್ಯತ್ವಾಂಗೀಕಾರಾತ್ತ್ವಯೇತ್ಯುಕ್ತಮ್ ॥ ೬೩ ॥**

**ವಿವರಣೆ–** ವರ್ಣವು ಅನಿತ್ಯವೆಂದು ಹೇಳುವ ವಾದಿಯೂ ಸಹ ವರ್ಣಗಳಲ್ಲಿ ಪೌರ್ವಾಪರ್ಯವನ್ನು ಒಪ್ಪಬೇಕು. ಮೊದಲು ಉತ್ಪನ್ನವಾದ ವರ್ಣವು ಪೂರ್ವವರ್ಣ, ಅನಂತರ ಉತ್ಪನ್ನವಾದ ವರ್ಣವು ಉತ್ತರವರ್ಣವೆಂದು ಅವನು ಹೇಳಬೇಕು. ವರ್ಣನಿತ್ಯತ್ವವನ್ನು ಒಪ್ಪುವ ನಾವೂ ಸಹ ಅದಕ್ಕೆ ಸ್ವಲ್ಪ ವ್ಯತ್ಯಾಸವನ್ನು ಮಾಡಿ ಮೊದಲು ಅಭಿವ್ಯಕ್ತವಾದ ವರ್ಣ ಪೂರ್ವವರ್ಣ, ಅನಂತರ ಅಭಿವ್ಯಕ್ತವಾದ ವರ್ಣವು ಉತ್ತರವರ್ಣ ಎಂದು ಹೇಳುತ್ತೇವೆ. ಆದ್ದರಿಂದ ಪೌರ್ವಾಪರ್ಯವು ಉಭಯಸಮ್ಮತ ಎಂದು ಈ ಶ್ಲೋಕದಲ್ಲಿ ಪ್ರತಿಪಾದನೆ ಮಾಡುತ್ತಾರೆ. ಮಹಾಕಾಲವು ನಿತ್ಯ ಎಂದು ನೈಯಾಯಿಕರು ಅಂಗೀಕರಿಸುತ್ತಾರೆ. ಅದರಲ್ಲಿರುವ ಯಾಮಗಳು ಅನಿತ್ಯವಾದವು. ಅವು ಔಪಾಧಿಕವಾದವು. ಅವುಗಳಿಗೆ ಪೌರ್ವಾಪರ್ಯವಿದೆ. ಇಲ್ಲದಿದ್ದರೆ ಇದು ಪೂರ್ವಯಾಮದ ಕೆಲಸ, ಇದು ಉತ್ತರಯಾಮದ ಕೆಲಸವೆಂದು ಹೇಗೆ ಜನರು ಅನುಷ್ಠಾನ ಮಾಡುತ್ತಾರೆ? 'ಯಾಮಾತ್‌ಪೂರ್ವಂ ನ ಭುಂಜಿತ ಯಾಮಯುಗ್ಮಂ

ನ ಲಂಘಯೇತ್' ಮುಂತಾದ ವಾಕ್ಯಗಳು ಆಯಾ ಯಾಮಗಳಲ್ಲಿ ಮಾಡಬೇಕಾದ ಕೆಲಸಗಳನ್ನು ತಿಳಿಸುತ್ತದೆ. ಔಪಾಧಿಕವಾದರೂ ಈ ಯಾಮಗಳು ಭ್ರಾಂತಿಕಲ್ಪಿತವಲ್ಲ. ಏಕೆಂದರೆ ಅವುಗಳಲ್ಲಿ ಅರ್ಥಕ್ರಿಯಾಕಾರಿತ್ವವಿದೆ. ಅದರಂತೆ ವರ್ಣಗಳು ನಿತ್ಯವಾದರೂ ಕ್ರಮವು ಔಪಾಧಿಕವೆಂದು ಅಂಗೀಕರಿಸಬೇಕು ಎಂದು ನಮ್ಮ ವಾದ. ನೈಯಾಯಿಕರು ಕಾಲವನ್ನು ನಿತ್ಯವೆಂದು ಹೇಳುತ್ತಾರೆ. ನಾವು ಕಾಲವನ್ನು ನಿತ್ಯಾನಿತ್ಯವೆಂದು ಹೇಳುತ್ತೇವೆ ಇಷ್ಟೇ ವ್ಯತ್ಯಾಸ.

**ತವಾಪಿ ತಾಲ್ವೋಷ್ಠಪುಟಮಧ್ಯಸ್ಥಾಕಾಶ ಏವ ಹಿ ।**
**ವರ್ಣೋತ್ಪತ್ತಿಸ್ತತಃ ಕೋ ವಾ ಪೂರ್ವಃ ಕಶ್ಚಾಪರೋ ವದ ॥ ೬೪ ॥**

**ಅರ್ಥ–** ತವಾಪಿ = ವರ್ಣಗಳ ಅನಿತ್ಯತ್ವವನ್ನು ಒಪ್ಪುವ ನಿನಗೂ ಕೂಡ, ವರ್ಣೋತ್ಪತ್ತಿಃ = ವರ್ಣಗಳ ಉತ್ಪತ್ತಿಯು, ತಾಲ್ವೋಷ್ಠಪುಟಮಧ್ಯಸ್ಥಾಕಾಶೇ ಏವ ಹಿ = ತಾಲು ತುಟಿಪುಟಗಳ ಮಧ್ಯದ ಆಕಾಶದಲ್ಲಿಯೇ ಆಗುತ್ತದಷ್ಟೆ? ತತಃ = ಆ ಕಾರಣದಿಂದ, ಕೋ ವಾ ವರ್ಣಃ = ಯಾವ ವರ್ಣವು, ಪೂರ್ವಃ = ಮೊದಲಿನದು, ಕಶ್ಚ=ಯಾವುದು, ಅಪರಃ = ಅನಂತರದ್ದು ವದ = ಹೇಳು.

**ಅನುವಾದ–** ನೀನೇ ಆದರೂ ತಾಲ್ವೋಷ್ಠಪುಟದ ಮಧ್ಯದ ಆಕಾಶದಲ್ಲಿಯೇ ಎಲ್ಲಾ ವರ್ಣಗಳ ಉತ್ಪತ್ತಿಯನ್ನು ಹೇಳಬೇಕು. ಹಾಗಾದರೆ ಅದರಲ್ಲಿ ಪೂರ್ವವರ್ಣ ಯಾವುದು ಉತ್ತರವರ್ಣ ಯಾವುದು ಎಂದು ನೀನು ಹೇಳು.

**ಭಾವವಿಲಾಸಿನೀ–** ಅನಿತ್ಯತ್ವವಾದಿನಾಪಿ ಗತ್ಯಂತರಾಭಾವಾತ್ ಪೂರ್ವಕಾಲೋತ್ಪನ್ನ-ತ್ವಾತ್ಪೂ(ತ್)ರ್ವತ್ವಂ ಅಪರಕಾಲೋತ್ಪನ್ನ(ತ್ವಮು)ತ್ವಾದಪರತ್ವಂ ಯಥಾ ವರ್ಣೇಷು ಕಥ್ಯತೇ ತಥಾ ವರ್ಣನಿತ್ಯತ್ವವಾದೇಽಪಿ ಪೂರ್ವಕಾಲವ್ಯಕ್ತತ್ವಾ(ತ್ವಂ)ತ್ಪೂರ್ವತ್ವಮ್, ಅಪರಕಾಲವ್ಯಕ್ತ(ಚಾ) ತ್ವಾಚ್ಚಾಪರತ್ವಂ ಭವಿಷ್ಯತೀತಿ ಪ್ರತಿಬಂದ್ಯಾ ಉತ್ತರಂ ವಕ್ತಿ – **ತವಾಪೀತಿ ॥** ವರ್ಣೋತ್ಪತ್ತಿಸ್ಸರ್ವವರ್ಣೋತ್ಪತ್ತಿಃ । ಯತಸ್ತಾಲ್ವೋಷ್ಠಪುಟಮಧ್ಯಸ್ಥಾಕಾಶ ಏವ ಸರ್ವ-ವರ್ಣೋತ್ಪತ್ತಿಃ ತತಃ ಸ್ಥಾನೈಕ್ಯಾತ್ ॥ ೬೪ ॥

**ವಿವರಣೆ–** ಪೂರ್ವತ್ವ ಮತ್ತು ಉತ್ತರತ್ವವನ್ನು ಕಾಲದ ವಿವಕ್ಷೆಯಿಂದ ಅಥವಾ ದೇಶದ ವಿವಕ್ಷೆಯಿಂದ ಹೇಳಬೇಕು. ಎಲ್ಲಾ ವರ್ಣಗಳೂ ಸಹ ತಾಲ್ವೋಷ್ಠಪುಟದ ಮಧ್ಯದ ಒಂದೇ ಆಕಾಶದ ಪ್ರದೇಶದಲ್ಲಿ ಉತ್ಪನ್ನವಾಗುವುದರಿಂದ ಅಲ್ಲಿ ದೇಶಭೇದವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಕಾಲಭೇದವನ್ನೇ ಅವಲಂಬಿಸಿ ಪೂರ್ವಕಾಲದಲ್ಲಿ ಉತ್ಪನ್ನವಾದದ್ದು ಪೂರ್ವವರ್ಣ, ಉತ್ತರಕಾಲದಲ್ಲಿ ಉತ್ಪನ್ನವಾದದ್ದು ಉತ್ತರವರ್ಣ ಎಂದು ವರ್ಣಗಳಿಗೆ ಅನಿತ್ಯತ್ವವನ್ನು ಹೇಳುವ ತಾರ್ಕಿಕನೂ ಹೇಳಬೇಕು. ಅದರಂತೆ

ವರ್ಣಗಳಿಗೆ ನಿತ್ಯತ್ವವನ್ನು ಹೇಳುವ ನಾವೂ ಕೂಡ ಮೊದಲು ಅಭಿವ್ಯಕ್ತವಾದದ್ದು ಪೂರ್ವವರ್ಣ ಮತ್ತು ಅನಂತರ ಅಭಿವ್ಯಕ್ತವಾದದ್ದು ಉತ್ತರವರ್ಣ ಎಂದು ಹೇಳುತ್ತೇವೆ.

ನ ಹಿ ತತ್ರಾಧರೋವರ್ಣಃ ಏಕ ಊರ್ಧ್ವಶ್ಚ ದೇಶತಃ ।
ಪೂರ್ವಕಾಲೋತ್ಪನ್ನತ್ವೈವ ಪೂರ್ವತಾ ಪರತಾ ತಥಾ ।
ಪರಕಾಲೋತ್ಪನ್ನತ್ವೈವ ವರ್ಣೇ ವಾಚ್ಯಾ ನ ಚಾಪರಾ ॥ ೬೫ ॥

**ಅರ್ಥ–** ತತ್ರ = ತಾಲು ಮತ್ತು ಓಷ್ಠಗಳ ನಡುವಣ ಆಕಾಶದಲ್ಲಿ, ದೇಶತಃ = ದೇಶದ ವಿವಕ್ಷೆಯಿಂದ, ಏಕಃ ವರ್ಣಃ = ಒಂದು ವರ್ಣವು, ಅಧರಃ = ಕೆಳಗಿನದು, ಚ = ಮತ್ತು, ಏಕಃ = ಇನ್ನೊಂದು ವರ್ಣವು, ಊರ್ಧ್ವಃ = ಮೇಲಿನದು ಎಂದು, ನಹಿ = ಇಲ್ಲವಷ್ಟೆ? ಆದ್ದರಿಂದ, ವರ್ಣೇ = ವರ್ಣದಲ್ಲಿ, ಪೂರ್ವಕಾಲೋತ್ಪನ್ನತ್ವೈವ = ಪೂರ್ವ-ಕಾಲೋತ್ಪನ್ನತ್ವವೇ, ಪೂರ್ವತಾ = ಪೂರ್ವತ್ವವು, ಅಪರಕಾಲೋತ್ಪನ್ನತ್ವೈವ = ಅನಂತರಕಾಲೋತ್ಪನ್ನತ್ವವೇ, ಪರತಾ = ಪರತ್ವವು ಎಂದು, ವಾಚ್ಯಾ = ಹೇಳಬೇಕು. ಅಪರಾ ನಚ = ಬೇರೆ ರೀತಿಯಲ್ಲಿ ಹೇಳಲು ಬರುವುದಿಲ್ಲ.

**ಅನುವಾದ–** ಅಲ್ಲಿ ಅಧೋದೇಶೋತ್ಪನ್ನವಾದುದು ಪೂರ್ವವರ್ಣ, ಉರ್ಧ್ವ-ದೇಶೋತ್ಪನ್ನವಾದುದು ಉತ್ತರವರ್ಣ ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ನೀನಾದರೂ ಪೂರ್ವಕಾಲೋತ್ಪನ್ನವಾದ ವರ್ಣವು ಪೂರ್ವವರ್ಣ, ಉತ್ತರಕಾಲೋತ್ಪನ್ನವಾದ ವರ್ಣವು ಉತ್ತರವರ್ಣ ಎಂದೇ ಹೇಳಬೇಕೇ ಹೊರತಾಗಿ ಬೇರೆ ಮಾರ್ಗವಿಲ್ಲ.

**ಭಾವವಿಲಾಸಿನೀ–** ನಹಿ ತತ್ರಾಪ್ಯೂರ್ಧ್ವದೇಶೋತ್ಪನ್ನಃ ಪೂರ್ವತನಃ ಅಧರದೇಶೋತ್ಪನ್ನಃ ಪಶ್ಚಾತ್ತನ ಇತಿ ವಕ್ತುಂ ಶಕ್ಯತ ಇತ್ಯಾಹ – **ನಹೀತಿ** ॥ ತತ್ರ ತಾಲ್ವೋಷ್ಠಪುಟಮಧ್ಯಸ್ಥಾಕಾಶೇ। ತಥಾಚ ಮದ್ರೀತಿರೇವ ತವಾಪಿ ಶರಣಮಿತ್ಯಾಹ – **ಪೂರ್ವಕಾಲೇತಿ** ॥ ತಥಾಪರಕಾಲೋತ್ಪನ್ನತ್ವೈವ ಪರತೇತಿ ಸಂಬಂಧಃ ॥ ೬೫ ॥

**ವಿವರಣೆ–** ಆದ್ದರಿಂದ ನನ್ನ ರೀತಿಯನ್ನೇ ನೀನು ಅನುಸರಿಸಬೇಕು. ನೀನು ಉತ್ಪತ್ತಿಯನ್ನು ಹೇಳುತ್ತೀಯಾ. ನಾವು ಅಭಿವ್ಯಕ್ತಿಯನ್ನು ಹೇಳುತ್ತೇವೆ ಎಂದಿಷ್ಟೇ ವ್ಯತ್ಯಾಸ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

ಏವಂ ಚ ಪೂರ್ವಂ ವ್ಯಕ್ತತ್ವಂ ಪೂರ್ವತ್ವಂ ಮೇ ಭವಿಷ್ಯತಿ ।
ಪರಕಾಲವ್ಯಕ್ತತಾಯಾಂ ಪರೋ ವರ್ಣೋ ಭವಿಷ್ಯತಿ ।
ಅತಃ ಸಮಂ ಸಮಾಧಾನಂ ನಿತ್ಯಾನಿತ್ಯತ್ವವಾದಿನೋಃ ॥ ೬೬ ॥

**ಅರ್ಥ–** ಏವಂ ಚ = ಹೀಗೆಯೇ, ಪೂರ್ವಂ ವ್ಯಕ್ತತ್ವಂ ಪೂರ್ವತ್ವಂ = ಪೂರ್ವದಲ್ಲಿ ವ್ಯಕ್ತವಾದ ವರ್ಣವು ಪೂರ್ವತ್ವವನ್ನು ಹೊಂದುವುದು ಎಂದು, ಮೇ = ನನಗೂ, ಭವಿಷ್ಯತಿ = ಸರಿಹೊಂದುತ್ತದೆ. ಪರಕಾಲವ್ಯಕ್ತತಾಯಾಂ = ಪರಕಾಲದಲ್ಲಿ ಅಭಿವ್ಯಕ್ತವಾದಲ್ಲಿ, ಪರೋ ವರ್ಣಃ ಭವಿಷ್ಯತಿ = ಪರವರ್ಣವೆಂದು ಆಗುತ್ತದೆ. ಅತಃ = ಆದ್ದರಿಂದ, ನಿತ್ಯಾನಿತ್ಯತ್ವವಾದಿನೋಃ = ವರ್ಣಗಳು ನಿತ್ಯ ಮತ್ತು ಅನಿತ್ಯವೆಂದು ಹೇಳುವ ವಾದಿಗಳಿಗಿಬ್ಬರಿಗೂ, ಸಮಾಧಾನಂ ಸಮಂ = ಸಮಾಧಾನವು ಸಮವೇ ಆಗಿದೆ.

**ಅನುವಾದ– ಹೀಗಾಗಿ ನನ್ನ ರೀತಿಯಲ್ಲಿ ಪೂರ್ವಕಾಲದಲ್ಲಿ ಅಭಿವ್ಯಕ್ತತ್ವವೇ (ಅಭಿವ್ಯಕ್ತವಾಗುವುದೇ) ವರ್ಣದಲ್ಲಿರುವ ಪೂರ್ವತ್ವ ಎಂದಾಗುತ್ತದೆ. ವರ್ಣವು ಉತ್ತರಕಾಲದಲ್ಲಿ ಅಭಿವ್ಯಕ್ತವಾದರೆ ಅದಕ್ಕೆ ಉತ್ತರತ್ವವುಂಟಾಗುತ್ತದೆ. ಆದ್ದರಿಂದ ವರ್ಣಗಳ ನಿತ್ಯತ್ವವಾದಿಗಳಿಗೂ ಮತ್ತು ಅನಿತ್ಯತ್ವವಾದಿಗಳಿಗೂ ಸಮಾಧಾನವು ಸಮಾನವಾಗಿದೆ.**

**ಭಾವವಿಲಾಸಿನೀ–** ಪ್ರತಿಬನ್ದ್ಯಾ ಲಬ್ಧಮರ್ಥಮಾಹ – **ಏವಂಚೇತಿ** ॥ ತಥಾಚ ವ್ಯಕ್ತತ್ವ-ಮುತ್ಪನ್ನತ್ವಮಿತ್ಯೇವ ಭೇದಃ ಅನ್ಯದಾವಯೋಸ್ಸಮಾನಮಿತಿ ಭಾವಃ ॥ ೬೬ ॥

**ವಿವರಣೆ–** ಆದ್ದರಿಂದ ಮೊದಲು ಅಭಿವ್ಯಕ್ತವಾದುದು ಪೂರ್ವವರ್ಣ, ಅನಂತರ ಅಭಿವ್ಯಕ್ತವಾದುದು ಉತ್ತರವರ್ಣ ಎಂದು ಸಿದ್ಧವಾಗುತ್ತದೆ. ಆದ್ದರಿಂದ ವರ್ಣದಲ್ಲಿ ಪೂರ್ವತ್ವ ಮತ್ತು ಉತ್ತರತ್ವ ಹೇಗೆ ಎಂಬ ಪ್ರಶ್ನೆಗೆ ವರ್ಣನಿತ್ಯತ್ವವಾದಿಗಳು, ವರ್ಣಾನಿತ್ಯತ್ವವಾದಿಗಳೂ ಸಹ ಸಮಾನವಾದ ಉತ್ತರವನ್ನು ಹೇಳಿದಂತಾಯಿತು. ಹಿಂದಿನ ಶ್ಲೋಕದಲ್ಲಿ ಕೊಟ್ಟ ಪ್ರತಿಬಂದಿಯಿಂದ ಲಭ್ಯವಾದ ವಿಷಯವನ್ನು ಇಲ್ಲಿ ನಿರೂಪಿಸುತ್ತಾರೆ. ಉತ್ಪತ್ತಿ ಅಭಿವ್ಯಕ್ತಿಗಳನ್ನು ಬಿಟ್ಟು ಉಳಿದೆಲ್ಲವೂ ಉಭಯವಾದಿಗಳಿಗೂ ಸಮಾನವೆಂದು ಅಭಿಪ್ರಾಯ.

**ಯಥೇಶೋ ನಿತ್ಯಯಾ ಬುದ್ಧ್ಯಾ ಸಕೃತ್ಸೃಷ್ಟಶ್ರುತೇಃ ಕ್ರಮಂ ।**
**ಆಕಲ್ಪಾಂತಂ ತವೇಕ್ಷೇತ ತಥೇಕ್ಷೇತ ಸದಾ ಮಮ ॥ ೬೭ ॥**

**ಅರ್ಥ–** ತವ ಮತೇ = ನೈಯ್ಯಾಯಿಕರಾದ ನಿಮ್ಮ ಮತದಲ್ಲಿ, ಯಥಾ = ಯಾವರೀತಿಯಾಗಿ, ಈಶಃ = ಪರಮಾತ್ಮನು, ನಿತ್ಯಯಾ ಬುದ್ಧ್ಯಾ= ನಿತ್ಯವಾದ ಬುದ್ಧಿಯಿಂದ, ಸಕೃತ್ಸೃಷ್ಟಶ್ರುತೇಃ ಕ್ರಮಂ = ಒಮ್ಮೆ ಸೃಷ್ಟವಾದ ಶ್ರುತಿಯ ಕ್ರಮವನ್ನು ಆಕಲ್ಪಾಂತಂ ಈಕ್ಷೇತ = ಪ್ರಲಯಬರುವವರೆಗೂ ನೋಡುತ್ತಾನೆಯೋ,(ಮಧ್ಯದಲ್ಲಿ ಪುನಃ ಪುನಃ ಸೃಷ್ಟಿಯನ್ನು ಮಾಡುವುದಿಲ್ಲವೋ), ತಥಾ = ಹಾಗೆ, ಮಮ ಮತೇ = ನನ್ನ ಮತದಲ್ಲಿಯೂ, ಸದಾ ಈಕ್ಷೇತ = ಅನಾದಿಕಾಲದಿಂದಲೂ ಅಭಿವ್ಯಕ್ತವಾದ ತನ್ನ ಬುದ್ಧಿಯನ್ನು ಆಶ್ರಯಿಸಿರುವ ಕ್ರಮವನ್ನು ನೋಡುತ್ತಾನೆ.

**ಅನುವಾದ–** ಹೇಗೆ ನೈಯಾಯಿಕರಾದ ನಿಮ್ಮ ಮತದಲ್ಲಿ ಕಲ್ಪದ ಆದಿಯಲ್ಲಿ ಸೃಷ್ಟಿಯಾದ ವೇದಕ್ರಮವನ್ನು ಮಧ್ಯದಲ್ಲಿ ಪುನಃ ಪುನಃ ಉತ್ಪತ್ತಿ ಇಲ್ಲದೆ ಈಶ್ವರನು ನಿತ್ಯವಾದ ತನ್ನ ಬುದ್ಧಿಯಿಂದ ನೋಡುತ್ತಾನೆಯೋ ಹಾಗೆಯೇ ಅನಾದಿಕಾಲದಿಂದ ತನ್ನ ಬುದ್ಧಿಶಕ್ತಿಯಿಂದ ತನ್ನ ಬುದ್ಧಿಯಲ್ಲಿ ಅಭಿವ್ಯಕ್ತವಾದ ವೇದದ ಕ್ರಮವನ್ನು ಈಶ್ವರನು ನಮ್ಮ ಮತದಲ್ಲಿಯೂ ನೋಡುತ್ತಾನೆ.

**ಭಾವವಿಲಾಸಿನೀ–** ನನ್ವಾದಿಸೃಷ್ಟಾವಪೀಶ್ವರಬುದ್ಧೌ ಸಹೈವ ವೈದಿಕಸಕಲವರ್ಣಕ್ತೌ ಕ್ರಮಸ್ಯೈವಾಯೋಗಾದ್ಭಿನ್ನಭಿನ್ನ ಕಾಲೇಷು ಚ ವ್ಯಕ್ತೌ ಕ್ರಮಸ್ಯ ಕೃತಕತ್ವಮಪರಿಹಾರ್ಯಂ ಸ್ಯಾದಿತ್ಯಾಶಂಕಾಂ ಪ್ರತಿಬನ್ದ್ಯಾ ಪರಿಹರತಿ – **ಯಥೇಶ ಇತಿ** ॥ ಸಕೃತ್ಸೃಷ್ಟಶ್ರುತೇಸ್ಸೃಷ್ಟಿಕಾಲೇ ಸಕೃತ್ಸೃಷ್ಟಶ್ರುತೇರಿತ್ಯರ್ಥಃ । ಆಕಲ್ಪಾಂತಮ್ । ತ್ವನ್ಮತೇ ಕಲ್ಪಾಂತೇ ವೇದನಾಶಾತ್ ಕಲ್ಪಾ-ವಸಾನಪರ್ಯಂತಂ ತಮೇವ ಮಧ್ಯೇಮಧ್ಯೇಽನುತ್ಪನ್ನಮೇವ ಯಥೇಕ್ಷೇತ ತಥಾ ಮನ್ಮತೇಽಪಿ ಸದಾ ಸರ್ವಕಾಲೇ ಅನಾದಿಕಾಲಮಾರಭ್ಯ ಸ್ವಬುದ್ಧ್ಯಭಿವ್ಯಕ್ತಂ ಕ್ರಮಮೀಕ್ಷೇತೇತಿ ಭಾವಃ । ನಚ ತ್ವನ್ಮತೇ ಆದಿಕಾಲಸೃಷ್ಟಂ ಕ್ರಮಂ ವಿಹಾಯ ಮಧ್ಯೇಮಧ್ಯೇ ಕ್ರಮಸೃಷ್ಟಿರಿತಿ ವಾಚ್ಯಮ್ । ತಥಾ ಕಲ್ಪನೇ ಮಾನಾಭಾವಾದ್ ಗೌರವಾಚ್ಚ ॥ ೬೭ ॥

**ವಿವರಣೆ–** ಹೇಗೆ ನಿನ್ನ ಮತದಲ್ಲಿ ಈಶ್ವರನು ಕಲ್ಪಾದಿಯಲ್ಲಿ ಒಮ್ಮೆ ಸೃಷ್ಟಿಸಿದ ವೇದದಕ್ರಮವನ್ನು ಕಲ್ಪವಸಾನದವರೆಗೂ ನೋಡುತ್ತಿರುತ್ತಾನೆಯೋ, ಹಾಗೇ ನನ್ನ ಮತದಲ್ಲಿ ಈಶ್ವರನು ಆ ಕ್ರಮವನ್ನು ಸರ್ವದಾ ನೋಡುತ್ತಿರುತ್ತಾನೆ.

ಆದಿಸೃಷ್ಟಿಯಲ್ಲಿ ಈಶ್ವರಬುದ್ಧಿಯಲ್ಲಿ ಎಲ್ಲ ವರ್ಣಗಳೂ ಒಟ್ಟಿಗೆ ಅಭಿವ್ಯಕ್ತವಾಗಿರುವುದರಿಂದ ವರ್ಣಗಳಲ್ಲಿ ಕ್ರಮವೇ ಕೂಡುವುದಿಲ್ಲ. ಭಿನ್ನ-ಭಿನ್ನಕಾಲದಲ್ಲಿ ಅಭಿವ್ಯಕ್ತವಾದರೆ, ಕ್ರಮವು ಉತ್ಪನ್ನವಾಯಿತು ಎಂದೇ ಅರ್ಥ. ಆದ್ದರಿಂದ ಹೇಗೆ ಕ್ರಮವನ್ನು ಕೂಡಿಸುತ್ತೀರಿ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ನಿನ್ನ ಮತದಲ್ಲಿ ಕಲ್ಪದ ಆದಿಯಲ್ಲಿ ಈಶ್ವರನು ವೇದವನ್ನು ಸೃಷ್ಟಿಸುತ್ತಾನೆ. ಕಲ್ಪದ ಕೊನೆಯಲ್ಲಿ ವೇದವು ನಾಶವನ್ನು ಹೊಂದುತ್ತದೆ. ಕಲ್ಪದ ಆದಿಯಲ್ಲಿ ಸೃಷ್ಟಿಸಿದ ವರ್ಣಗಳ ಕ್ರಮವನ್ನೇ ಕಲ್ಪದ ಕೊನೆಯವರೆಗೂ ಈಶ್ವರನು ನೋಡುತ್ತಿರುತ್ತಾನೆ. ಆ ಕ್ರಮವನ್ನು ಮಧ್ಯೆ-ಮಧ್ಯೆ ಸೃಷ್ಟಿಸುವುದಿಲ್ಲ ಹೇಗೋ, ಅದರಂತೆ ನನ್ನ ಮತದಲ್ಲಿ ಅನಾದಿಕಾಲದಿಂದಲೂ ತನ್ನ ಬುದ್ಧಿಯಲ್ಲಿ ಅಭಿವ್ಯಕ್ತಿ ಕ್ರಮದಿಂದ ವರ್ಣದಲ್ಲಿ ಉಪಹಿತವಾದ ಕ್ರಮವನ್ನೇ ಈಶ್ವರನು ನೋಡುತ್ತಿರುತ್ತಾನೆ. ಆದಿಕಾಲದಲ್ಲಿ ಸೃಷ್ಟಿಸಿದ ಕ್ರಮವನ್ನು ಬಿಟ್ಟು ಬೇರೆ ಕ್ರಮವನ್ನು ಸೃಷ್ಟಿಸುತ್ತಾನೆ ಎಂದು ಕಲ್ಪನೆ ಮಾಡಲು ಹೇಗೆ ಪ್ರಮಾಣವಿಲ್ಲವೋ, ಮತ್ತು ಗೌರವ ಬರುತ್ತದೆಯೋ, ಹಾಗೆಯೇ ಅನಾದಿಕಾಲದಿಂದ ಇರುವ ಕ್ರಮವನ್ನು ಬಿಟ್ಟು ಬೇರೆ ಕ್ರಮವನ್ನು ಸೃಷ್ಟಿ ಮಾಡುತ್ತಾನೆ ಎಂದು ಕಲ್ಪನೆ ಮಾಡಲು ಪ್ರಮಾಣವಿಲ್ಲ ಮತ್ತು ಗೌರವವೂ ಬರುತ್ತದೆ.

**ಪ್ರಮಾಣದೃಷ್ಟಘಟನಾ ಕಾರ್ಯಾ ಸೈವ ಯಥಾಮತಿ ।**
**ನ ಶಕ್ಯತೇ ಚೇತ್ಸರ್ವೇಶಾಚಿಂತ್ಯಶಕ್ತ್ಯೈವ ಸೇತ್ಸ್ಯತಿ ॥ ೬೮ ॥**

**ಅರ್ಥ–** ಯಾ = ಯಾವುದು, ಪ್ರಮಾಣದೃಷ್ಟಘಟನಾ = ಪ್ರಮಾಣದಿಂದ ಸಿದ್ಧವಾದ ಘಟನೆಯಾಗಿದೆಯೋ, ಸೈವ ಯಥಾಮತಿ ಕಾರ್ಯಾ = ಅದನ್ನೇ ಯಥಾಮತಿ ಉಪಪಾದನೆಮಾಡಬೇಕು. ನ ಶಕ್ಯತೇ ಚೇತ್ = ಒಂದು ವೇಳೆ ಹಾಗೆ ಮಾಡಲು ಸಾಧ್ಯವಾಗದಿದ್ದರೆ, ಸಾ = ಆ ಕಾರ್ಯವು, ಸರ್ವೇಶಾಚಿಂತ್ಯಶಕ್ತ್ಯೈವ ಸೇತ್ಸ್ಯತಿ =ಎಲ್ಲದಕ್ಕೂ ಒಡೆಯನಾದ ಪರಮಾತ್ಮನ ಅಚಿಂತ್ಯ ಶಕ್ತಿಯಿಂದಲೇ ಸಿದ್ಧವಾಗುತ್ತದೆ.

**ಅನುವಾದ– ಯಾವ ಅರ್ಥವು ಪ್ರಮಾಣದಿಂದ ಸಿದ್ಧವಾಗಿದೆಯೋ ಅದೇ ಅರ್ಥವನ್ನೇ ಯಥಾಮತಿಯಾಗಿ ಯುಕ್ತಿಯಿಂದ ಉಪಪಾದನೆ ಮಾಡಬೇಕು. ಇದು ಸಾಧ್ಯವಾಗದಿದ್ದರೆ ಈಶ್ವರನ ಅಚಿಂತ್ಯ ಶಕ್ತಿಯಿಂದಲೇ ಎಲ್ಲವನ್ನೂ ಕೂಡಿಸಬೇಕು.**

**ಭಾವವಿಲಾಸಿನೀ–** ನನ್ವೇವಂ ಕುತಃ ಕಲ್ಪ್ಯೈತ ಇತ್ಯತ ಆಹ – **ಪ್ರಮಾಣೇತಿ** ॥ ೬೮ ॥

**ವಿವರಣೆ–** ಯಾವುದು ಪ್ರಾಮಾಣಿಕವೋ, ಅದರ ಘಟನೆಯನ್ನು ನಮ್ಮ ಬುದ್ಧಿಗೆ ತೋರಿದಷ್ಟು ರೀತಿಯಿಂದ ನಾವು ಸಮರ್ಥನೆ ಮಾಡಬೇಕು. ಯಾವುದನ್ನು ನಮ್ಮ ಬುದ್ಧಿಶಕ್ತಿಯಿಂದ ಸಮರ್ಥನೆ ಮಾಡಲು ಸಾಧ್ಯವಿಲ್ಲವೋ, ಮತ್ತು ಪ್ರಾಮಾಣಿಕ ವಾಗಿದೆಯೋ ಅದನ್ನು ಈಶ್ವರನ ಅಚಿಂತ್ಯಾದ್ಭುತಶಕ್ತಿಯಿಂದಲೇ ನಿರ್ವಾಹ ಮಾಡಬೇಕು.

ಹೀಗೇಕೆ ಕಲ್ಪನೆ ಮಾಡಬೇಕು ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. ವೇದಗಳು ಅನಾದಿಯೆಂದೂ, ವರ್ಣದಲ್ಲಿ ಕ್ರಮವಿದೆಯೆಂದೂ ಪ್ರಾಮಾಣಿಕವಾದ್ದರಿಂದ ಅದನ್ನು ಉಪಪಾದನೆ ಮಾಡಲು ಇಷ್ಟು ಕಲ್ಪನೆ ಮಾಡಬೇಕು. ಯಾವುದನ್ನು ನಮ್ಮ ಬುದ್ಧಿಶಕ್ತಿಯಿಂದ ಘಟನೆ ಮಾಡಲು ಬರುವುದಿಲ್ಲವೋ, ಆದರೆ ಅದು ಪ್ರಾಮಾಣಿಕವಾಗಿದೆಯೋ, ಅದನ್ನು ನಮ್ಮ ತರ್ಕದ ಬಲದಿಂದ ಸಮರ್ಥನೆ ಮಾಡುವುದನ್ನು ಬಿಟ್ಟು, ಸರ್ವೇಶ್ವರನ ಅಚಿಂತ್ಯಾದ್ಭುತಶಕ್ತಿಯಿಂದಲೇ ನಿರ್ವಾಹ ಮಾಡಬೇಕು. ಆದ್ದರಿಂದ ಇಲ್ಲಿ ಕಲ್ಪನೆಯನ್ನು ಮಾಡಲೇಬೇಕು.

**ನೇದಂ ಪೂರ್ವಾ ಯದಾಬುದ್ಧಿರಾದ್ಯಾನಾದಿರಧೀಶಿತುಃ ।**
**ತತ ಏವ ದ್ವಿತೀಯಾಪಿ ನೇದಂ ಪೂರ್ವಾಬಲಾದ್ಭವೇತ್ ॥ ೬೯ ॥**

**ಅರ್ಥ–** ಯದಾ = ಯಾವಾಗ, ಅಧೀಷಿತುಃ = ಪರಮಾತ್ಮನ, ಆದ್ಯಾ ಬುದ್ಧಿಃ ನೇದಂ ಪೂರ್ವಾ ಕಿಂತು ಅನಾದಿಃ = ಆದಿವರ್ಣವಿಷಯಕವಾದ ಈಶಬುದ್ಧಿಯನ್ನು ಇದೇ ಮೊದಲನೆಯದೆಂದು ಹೇಳಲು ಬರುವುದಿಲ್ಲವೋ, ತತ ಏವ ಬಲಾತ್ = ಇದೇ ನ್ಯಾಯದ

ಬಲದಿಂದ, ದ್ವಿತೀಯಾಪಿ ನೇದಂ ಪೂರ್ವಾ ಭವೇತ್ = ದ್ವಿತೀಯ ವರ್ಣವಿಷಯಕವಾದ ಬುದ್ಧಿಯೂ ಕೂಡ ಇದೇ ಮೊದಲನೆಯದಾಗಿ ಹುಟ್ಟಿಲ್ಲವೆಂದು ಸಿದ್ಧವಾಗುತ್ತದೆ.

**ಅನುವಾದ–** ಯಾವಾಗ ಅನಾದಿಯಾದ ಈಶ್ವರನ ಮೊದಲನೆಯ ವರ್ಣಬುದ್ಧಿಗೆ ಇದಂ ಪೂರ್ವತ್ವಂ ಇಲ್ಲವೋ ಅದೇ ಕಾರಣದಿಂದ ದ್ವಿತೀಯ ವರ್ಣಬುದ್ಧಿಗೂ ಸಹ ಇದಂ ಪೂರ್ವತ್ವವು ಇಲ್ಲ.

**ಭಾವವಿಲಾಸಿನೀ–** ಯದುಕ್ತಂ ಪೂರ್ವಬುದ್ಧ್ಯಾ ಗ್ರಹಣತಃ ಪೂರ್ವತ್ವಮಿತ್ಯಾದಿ, ತತ್ರ ಪಶ್ಚಾದ್ಬುದ್ಧೇರುತ್ಪನ್ನತ್ವಾತ್ತದಭಿವ್ಯಕ್ತಪಾಶ್ಚಾತ್ಯವರ್ಣಸ್ಯಾಪಿ ಉತ್ಪನ್ನತ್ವಂ ಕಥಂ ನಾಯಾಸ್ಯ ಇತಿ ವದಂತಂ ಪ್ರತ್ಯುಕ್ತೈವ ಪ್ರತಿಬಂದೀ । ತಥಾಪಿ ಸುಹೃದ್ಭಾವೇನ ವಿಚಾರಯಂತಂ ಪ್ರತಿ ವಸ್ತುತ-ತ್ತ್ವಮಪ್ಯಾಹ – **ನೇದಂಪೂರ್ವೇತಿ ॥** ಆದ್ಯಾ ಆದಿವರ್ಣವಿಷಯಿಕಾ । ತತ ಏವ ಈಶಬುದ್ಧಿತ್ವಾದೇವ ನೇದಂ ಪೂರ್ವೇತಿ ಸಂಬಂಧಃ । ದ್ವಿತೀಯಾಪಿ ದ್ವಿತೀಯವರ್ಣವಿಷಯಿಕಾಪಿ । ತತ ಏವ ಪೂರ್ವವರ್ಣಸ್ಯಾನಾದಿತ್ವಾದೇವೇತ್ಯಾವೃತ್ತ್ಯಾ ಯೋಜ್ಯಮ್ । ನೇದಂ ಪೂರ್ವಾ ಅನಾದಿರಿತಿ ಯಾವತ್ ॥ ೬೯ ॥

**ವಿವರಣೆ–** ಪೂರ್ವಬುದ್ಧಿಯಿಂದ ಗೃಹೀತವಾದ ವರ್ಣಕ್ಕೆ ಪೂರ್ವತ್ವ, ಅಪರಬುದ್ಧಿಯಿಂದ ಗೃಹೀತವಾದ ವರ್ಣಕ್ಕೆ ಅಪರತ್ವ ಎಂದು ಹೇಳಿದರೆ ಅಪರ ಬುದ್ಧಿಯು ಉತ್ಪನ್ನವಾದುದರಿಂದ ಅದರಿಂದ ಗೃಹೀತವಾಗುವುದಕ್ಕೆ ಏಕೆ ಅಪರತ್ವವು ಉತ್ಪನ್ನವಾಗುವುದಿಲ್ಲ ಎಂಬುದಕ್ಕೆ ಹಿಂದೆಯೇ ಪ್ರತಿಬಂದಿಯನ್ನು ಹೇಳಿದ್ದಾರೆ. ಸೌಹಾರ್ದದಿಂದ ಪ್ರಶ್ನೆ ಮಾಡುವುವವನ ಕುರಿತು ಇಲ್ಲಿ ಉತ್ತರವನ್ನು ಹೇಳುತ್ತಾರೆ. ಈಶಬುದ್ಧಿಯೆಲ್ಲವೂ ಅನಾದಿನಿತ್ಯವಾದುದು. ಆದಿವರ್ಣಬುದ್ಧಿಯು ಹೇಗೆ ಅನಾದಿನಿತ್ಯವೋ, ಹಾಗೆ ದ್ವಿತೀಯವರ್ಣಬುದ್ಧಿಯು ಅನಾದಿನಿತ್ಯವೇ ಆಗಿದೆ. ಯಾವ ವರ್ಣಬುದ್ಧಿಯಲ್ಲಿಯೂ 'ಇದಂ ಪೂರ್ವತೆ' ಇಲ್ಲ, ಎಲ್ಲವೂ ಅನಾದಿಯಾಗಿದೆ ಆದ್ದರಿಂದ ಅಭಿವ್ಯಕ್ತಿಯನ್ನೇ ಅಂಗೀಕರಿಸಬೇಕಷ್ಟೇ ಹೊರತು, ಉತ್ಪತ್ತಿಯನ್ನು ಅಂಗೀಕರಿಸಬಾರದು.

**ಅನಾದೇಃ ಪೃಷ್ಠಲಗ್ನಸ್ಯಾಪ್ಯನಾದಿತ್ವಂ ಹಿ ಯುಕ್ತಿಮತ್ ।**
**ಯಾವದ್ಯಾವದ್ಗಜೋ ಗಚ್ಛೇತ್ತಾವತ್ಪುಚ್ಛಂ ಚ ಗಚ್ಛತಿ ॥ ೭೦ ॥**

**ಅರ್ಥ–** ಅನಾದೇಃ = ಅನಾದಿಯಾದ ವಸ್ತುವಿನ (ವಸ್ತುವನ್ನು), ಪೃಷ್ಠಲಗ್ನಸ್ಯಾಪಿ = ಹಿಂಬಾಲಿಸುವ ವಸ್ತುವಿಗೂ ಕೂಡ, ಅನಾದಿತ್ವಂ = ಅನಾದಿತ್ವವು, ಯುಕ್ತಿಮತ್ = ಯುಕ್ತಿಯುಕ್ತವಾಗುತ್ತದೆ. ಗಜಃ = ಆನೆಯು, ಯಾವದ್‌ಯಾವದ್ = ಎಷ್ಟೆಷ್ಟು, ಗಚ್ಛೇತ್ = ಮುಂದೆ ಹೋಗುತ್ತದೆಯೋ, ಪುಚ್ಛಂ ಚ = ಬಾಲವೂ ಕೂಡ, ತಾವತ್ = ಅಷ್ಟಷ್ಟು, ಗಚ್ಛತಿ = ಹೋಗುತ್ತದೆ.

**ಅನುವಾದ–** ಅನಾದಿಯಾದುದನ್ನು ಹಿಂಬಾಲಿಸಿ ಹೋಗುವ ವಸ್ತುಗಳಿಗೂ ಅನಾದಿತ್ವವು ಯುಕ್ತವಾಗಿಯೇ ಇರುತ್ತದೆ. ಆನೆಯು ಎಷ್ಟೆಷ್ಟು ದೂರವನ್ನು ಹೋಗುತ್ತದೋ, ಆನೆಯ ಬಾಲವೂ ಸಹ ಅಷ್ಟೇ ದೂರ ಹಿಂಬಾಲಿಸುವುದಷ್ಟೇ.

**ಭಾವವಿಲಾಸಿನೀ–** ಪೂರ್ವವರ್ಣವಿಷಯಕಬುದ್ಧೇರನಾದಿತ್ವೇऽಪಿ ದ್ವಿತೀಯವರ್ಣವಿಷಯಕ ಬುದ್ಧೇಃ ಕುತೋऽನಾದಿನಿತ್ಯತೇತ್ಯತಸ್ತದುಪಪಾದಯತಿ – **ಅನಾದೇರಿತಿ** ॥ ತವ ದೃಷ್ಟಾಂತಃ ॥ **ಯಾವದಿತಿ** ॥ ಪುಚ್ಛಸ್ಯ ಗಜಶರೀರಸಂಬಂಧಿತ್ವಾದಿತ್ಯರ್ಥಃ ॥ ೭೦ ॥

**ವಿವರಣೆ–** ಆದ್ಯಬುದ್ಧಿಯು ಅನಾದಿಯೆಂದು ಹೇಳಿದ್ದಾಯಿತು. ದ್ವಿತೀಯಬುದ್ಧಿಯು ಅನಾದಿಯನ್ನು ಹಿಂಬಾಲಿಸುತ್ತದೆ. ಅನಾದಿಯಾದ ಪ್ರಥಮಬುದ್ಧಿಯನ್ನು ಹಿಂಬಾಲಿಸುವ ದ್ವಿತೀಯ ವರ್ಣಬುದ್ಧಿಯೂ ಸಹ ಅನಾದಿಕಾಲದಿಂದಲೂ ಪ್ರಥಮವರ್ಣಬುದ್ಧಿಯನ್ನು ಹಿಂಬಾಲಿಸುವುದರಿಂದ ಅನಾದಿಯೇ ಆಗಬೇಕು. ಆದ್ದರಿಂದ ಎಲ್ಲ ಬುದ್ಧಿಯೂ ಅನಾದಿಯಾದ್ದರಿಂದ ಎಲ್ಲಿಯೂ ಉತ್ಪತ್ತಿಯ ಪ್ರಸಕ್ತಿಯಿಲ್ಲ.

ಪೂರ್ವೇದಂ ಪೂರ್ವತಾಭಾವೇ ತದವ್ಯವಹಿತೋತ್ತರೇ ।
ಕ್ಷಣ ಏವಂ ಪರಂ ಯತ್ಸ್ಯಾತ್ತಸ್ಯೇದಂ ಪೂರ್ವತಾ ಕಥಂ ।
ಮತ್ಸ್ಯಸ್ಯಾನಾದಿತಾಯಾಂ ನ ಕಿಂ ಕೂರ್ಮಸ್ಯಾಪ್ಯನಾದಿತಾ ॥ ೭೧ ॥

**ಅರ್ಥ–** ಪೂರ್ವೇದಂಪೂರ್ವತಾಭಾವೇ = ಪೂರ್ವವರ್ಣಕ್ಕೆ ಉತ್ಪತ್ತಿ ಇಲ್ಲದೆ ಇದಂ ಪೂರ್ವತ್ವವು ಇಲ್ಲದ ಪಕ್ಷದಲ್ಲಿ, ತದವ್ಯವ್ಯಹಿತಉತ್ತರೇ ಕ್ಷಣೇ ಏವ ಪರಂ ಯತ್ ಸ್ಯಾತ್ = ಅದರ ಉತ್ತರಕ್ಷಣದಲ್ಲಿಯೇನೆ ಉಚ್ಚಾರ ಮಾಡಲ್ಪಡುವ ಪರಾಕ್ಷರವು ಯಾವುದಾಗುತ್ತದೆಯೋ ಅದಕ್ಕೆ, ಕಥಂ ಇದಂ ಪೂರ್ವತಾ = ಹೇಗೆ ಉತ್ಪತ್ತಿಯನ್ನು(ಇದಂ ಪೂರ್ವತ್ವವನ್ನು)ಹೇಳುವುದು? ಮತ್ಸ್ಯಸ್ಯ = ಮತ್ಸ್ಯಾವತಾರಕ್ಕೆ, ಅನಾದಿತಾಯಾಂ = ಅನಾದಿತ್ವ ಇದೆ ಎಂಬ ಪಕ್ಷದಲ್ಲಿ, ಕೂರ್ಮಸ್ಯಾಪಿಅನಾದಿತಾ ಕಿಂ ನ? = ಕೂರ್ಮಾವತಾರಕ್ಕೆ ಅನಾದಿತ್ವವಿಲ್ಲವೇನು?

**ಅನುವಾದ–** ಮೊದಲನೇ ವಸ್ತುವಿಗೆ 'ಇದಂ ಪೂರ್ವತಾ' ಇಲ್ಲದಿದ್ದರೆ ಅದರ ಮುಂದಿನ ಕ್ಷಣದಲ್ಲಿ ಬರುವ ವಸ್ತುವಿಗೆ 'ಇದಂ ಪೂರ್ವತ್ವ'ವು ಹೇಗೆ ಉಂಟಾಗುತ್ತದೆ? ಮತ್ಸ್ಯನು ಅನಾದಿಯಾದರೆ ಅನಂತರದ ಅವತಾರನಾಗಿ ಬರುವ ಕೂರ್ಮನೂ ಸಹ ಅನಾದಿಯೇ ಅಲ್ಲವೇ?

**ಭಾವವಿಲಾಸಿನೀ–** ಅನಾದೀಶ್ವರಬುದ್ಧೌ ಪ್ರಾಗ್ವ್ಯಕ್ತೈಕವರ್ಣಸ್ಯಾನಾದಿತ್ವಸಂಭವೇऽಪಿ ಪಶ್ಚಾದ್ವ್ಯಕ್ತವರ್ಣಾನಾಂ ಕಥಮನಾದಿತ್ವಮ್? ಅನಾದಿತ್ವಪಶ್ಚಾತ್ತನತ್ವಯೋರ್ವಿರೋಧಾದಿತ್ಯತ ಆಹ – **ಪೂರ್ವೇತಿ** ॥ ಪೂರ್ವವರ್ಣಸ್ಯೇದಂಪೂರ್ವತಾऽಭಾವೇ ತಸ್ಮಾತ್ಪೂರ್ವ-

ವರ್ಣಾದವ್ಯವಹಿತೋತ್ತರಕ್ಷಣ ಏವ ಪರಂ ಉತ್ತರಂ ಯದ್ವರ್ಣಾದಿಕಂ ಸ್ಯಾತ್ತಸ್ಯೇದಂಪೂರ್ವತಾ ಕಥವದ್? ನ ಕಥಂಚಿತ್ । ಇದಮುಕ್ತಂ ಭವತಿ । ಪದಮುಚ್ಚಾರಯನ್ ಹಿ ತತ್ತದಸ್ಥ-ಪೂರ್ವವರ್ಣಾದವ್ಯವಧಾನೇನೋತ್ತರಂ ವರ್ಣಮುಚ್ಚಾರಯೇದೇವ ಅನ್ಯಥಾ ಸನ್ನಿಧ್ಯ-ಭಾವಪ್ರಸಂಗಾತ್ । ಏವಂಚಾನಾದ್ಯೇಕವರ್ಣಪೃಷ್ಠಲಮ್ಭಿನಾಮನನ್ತಾನಾಮಪಿ ವರ್ಣಾ-ನಾಮನಾದಿತ್ವಂ ಬಲಾದಾಪತತೀತಿ । ತತ್ರ ದೃಷ್ಟಾಂತರಮಾಹ – **ಮತ್ಸ್ಯೇತಿ** ॥ ಉಭಯೋರಪಿ ಭಗವದವತಾರತ್ವಾದ್ಯಥಾನಾದಿತಾ ತದ್ವತ್ತದ್ಬುದ್ಧೀನಾಂ ತದಭಿವ್ಯಕ್ತೋತ್ತರೋತ್ತರ ವರ್ಣಾನಾ-ಮಪ್ಯನಾದಿತ್ವಮಿತಿ ಭಾವಃ ॥ ೭೧ ॥

**ವಿವರಣೆ–** ಈಶ್ವರಬುದ್ಧಿಯಲ್ಲಿ ಮೊದಲು ವ್ಯಕ್ತವಾದ ವರ್ಣಕ್ಕೆ ಅನಾದಿತ್ವವು ಕೂಡಿದರೂ ಅನಂತರ ಅಭಿವ್ಯಕ್ತವಾದ ವರ್ಣಕ್ಕೆ ಅನಾದಿತ್ವವು ಕೂಡುವುದಿಲ್ಲ. ಏಕೆಂದರೆ ಅನಾದಿತ್ವಕ್ಕೂ, ಪಶ್ಚಾತ್ತನತ್ವಕ್ಕೂ ವಿರೋಧವಿದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಪದವನ್ನು ಉಚ್ಚರಿಸುವವನು ಪೂರ್ವವರ್ಣವನ್ನು ಉಚ್ಚರಿಸಿ ಅನಂತರ ಯಾವ ವ್ಯವಧಾನವೂ ಇಲ್ಲದೇ ಉತ್ತರವರ್ಣವನ್ನು ಉಚ್ಚರಿಸುತ್ತಾನೆ. ಇಲ್ಲದಿದ್ದರೆ ವರ್ಣಗಳಿಗೆ ಸನ್ನಿಧಿಯೇ ಹೊರಟುಹೋಗುತ್ತದೆ. ಆದ್ದರಿಂದ ಅನಾದಿಯಾದ ಒಂದು ವರ್ಣದ ಬಳಿಕ ಉಚ್ಚರಿಸಲ್ಪಟ್ಟ ಅನಂತ ವರ್ಣಗಳೂ ಸಹ ಅನಾದಿಯೇ ಆಗುತ್ತವೆ. ಮತ್ಸ್ಯ, ಕೂರ್ಮಾದಿ ಎಲ್ಲ ಅವತಾರಗಳೂ ಅನಾದಿಯೇ ಆದರೂ ಹೇಗೆ ಮೊದಲು ಮತ್ಸ್ಯಾವತಾರ, ಅನಂತರ ಕೂರ್ಮಾವತಾರ ಎಂಬ ಕ್ರಮವಿದೆಯೋ, ಅದರಂತೆ ಅನಾದಿಯಾದ ವರ್ಣಗಳಲ್ಲಿಯೂ ಸಹ ಕ್ರಮವು ಉಪಪನ್ನವಾಗುತ್ತದೆ.

**ಅಧೋವಧಿವಿಹೀನೇನ ವಿಷ್ಣೋಃ ಪಾದೇನ ಸಂಗತಾ ।**
**ಜಂಘಾಪ್ಯಧೋವಧೇರ್ಭಂಗಂ ಕಿಂ ನ ಕುರ್ಯಾತ್ ಬೃಹತ್ತನೋಃ ।**
**ಆದ್ಯದ್ವಿತೀಯಭಾವೋಪಿ ತದ್ವತ್ಸ್ಯಾದಪ್ಯನಾದಿಷು ॥ ೭೨ ॥**

**ಅರ್ಥ–** ಅಧೋವಧಿವಿಹೀನೇನ = ಕೆಳಭಾಗ ಎಂಬ ಅವಧಿಯಿಲ್ಲದಿರುವ, ವಿಷ್ಣೋಃ = ಪರಮಾತ್ಮನ, ಪಾದೇನ ಸಂಗತಾ = ಪಾದದಿಂದ ಸಂಬಂಧಹೊಂದಿದ, ಬೃಹತ್ತನೋಃ = ವಿಶ್ವರೂಪಿಯಾದ ಪರಮಾತ್ಮನ, ಜಂಘಾಪಿ = ಮಂಡಿಯ ಕೆಳಭಾಗವೂ ಸಹ, ಅಧೋ ಅವಧೇರ್ಭಂಗಂ ನ ಕುರ್ಯಾತ್ ಕಿಂ! = ಕೆಳಭಾಗದ ಎಲ್ಲೆಯ ಮರ್ಯಾದೆಯ ಭಂಗವನ್ನು ಮಾಡುವುದಿಲ್ಲವೇ? ತದ್ವತ್ = ಅದೇ ರೀತಿಯಾಗಿ, ಆದ್ಯದ್ವಿತೀಯಭಾವೋಪಿ ಸ್ಯಾತ್ = ಮೊದಲನೆಯದು, ಎರಡನೆಯದು ಎಂಬ ಭಾವವೂ ಕೂಡ ಉಪಪನ್ನವಾಗುತ್ತದೆ.

**ಅನುವಾದ–** ಕೆಳಭಾಗದ ಅವಧಿಯಿಲ್ಲದಿರುವ ವಿಷ್ಣುವಿನ ಪಾದಕ್ಕೆ ಸಂಬದ್ಧವಾದ ಬೃಹತ್ಕಾಯನಾದ ವಿಷ್ಣುವಿನ ಜಂಘೆಯೂ ಕೂಡ ಅಧರಾವಧಿಭಂಗವನ್ನು ಉಂಟುಮಾಡುವುದಷ್ಟೇ. ಅದರಂತೆಯೇ ಅನಾದಿಗಳಲ್ಲಿಯೂ ಸಹ ಆದ್ಯದ್ವಿತೀಯಭಾವವು ಉಂಟಾಗುತ್ತದೆ.

**ಭಾವವಿಲಾಸಿನೀ**— ಪೂರ್ವವರ್ಣಸ್ಯಾನಾದಿತ್ವೇ ತತ್ಸಂಬದ್ಧದ್ವಿತೀಯವರ್ಣಸ್ಯಾಪ್ಯನಾದಿತ್ವಂ ಸಮ್ಯಗ್ಬುದ್ಧ್ಯಾರೋಹಾಯ ಸ್ಪಷ್ಟದೃಷ್ಟಾಂತಾಂತರಮುಖೇನ ಪುನರಪ್ಯುಪಪಾದಯತಿ – **ಅಧೋವಧೀತಿ** ॥ ಅಧೋವಧಿಃ ಅಧರಾವಧಿಃ। ಏಕಭಗವದವಯವಸ್ಯಾವಧಿಶೂನ್ಯತ್ವೇ ತತ್ಸಂಬದ್ಧ ದ್ವಿತೀಯಾವಯವಸ್ಯಾಪ್ಯವಧಿಶೂನ್ಯತ್ವೇ ಹೇತುಂ ಸೂಚಯಿತುಂ ಬೃಹತ್ತನೋರಿತ್ಯುಕ್ತಮ್ । ವಿಶ್ವರೂಪದೇಹೇ 'ನಾಂತಂ ನ ಮಧ್ಯಂ ನ ಪುನಸ್ತವಾದಿಮ್' ಇತಿ 'ಅನಂತ-ಬಾಹೂದರವಕ್ತ್ರನೇತ್ರಮ್' ಇತಿ ಚ ಪ್ರತ್ಯೇಕಮವಯವಾನಾಮನಂತತ್ವೋಕ್ತೇ- ರುಭಯೋ-ರಪ್ಯವಧಿಶೂನ್ಯತ್ವಂ ಯುಕ್ತಿಯುಕ್ತಂ ಪ್ರಾಮಾಣಿಕಂ ಚೇತಿ ಭಾವಃ । ಯದ್ಯಪಿ ಸಿಸೃಕ್ಷಾ-ಸಂಜಿಹೀರ್ಷಾದೀನಾಮಿವ ಏಕವ್ಯಕ್ತಿಕಾಲೇ ಅನ್ಯವ್ಯಕ್ತೇಶ್ಶಕ್ತ್ಯಾತ್ಮನಾ ವಿದ್ಯಮಾನತ್ವೇನಾನಾದಿತ್ವಂ ನಿರ್ವೋಢುಂ ಶಕ್ಯಮ್ । ತಥಾಪ್ಯುಕ್ತಯುಕ್ತ್ಯೋಭಯೋರಪಿ ವ್ಯಕ್ತೌ ಚಾನಾದಿತ್ವಲಾಭೇ ಕಿಂ ತೇನೇತೀದಮೇವೋಕ್ತಮ್ । ಅನಾದಿತ್ವೇ ವರ್ಣಾನಾಂ ಕಥಂ ಪೌರ್ವಾಪರ್ಯಮಿತ್ಯತ ಉಕ್ತನ್ಯಾಯಾದೇವೇತ್ಯಾಹ – **ಆದ್ಯೇತಿ** ॥ ತದ್ವದ್ಭಗವದವಯವವತ್ತದವತಾರವದ್ವಾ ॥ ೭೨ ॥

**ವಿವರಣೆ**— ಪೂರ್ವವರ್ಣವು ಅನಾದಿಯಾದರೆ, ತತ್ಸಂಬದ್ಧವಾದ ದ್ವಿತೀಯವರ್ಣವು ಅನಾದಿಯೆಂಬ ವಿಷಯವನ್ನು ಸ್ಪಷ್ಟವಾಗಿ ತಿಳಿಸಲು ಇನ್ನೊಂದು ದೃಷ್ಟಾಂತವನ್ನು ಕೊಟ್ಟು ಉಪಪಾದನೆ ಮಾಡುತ್ತಾರೆ. ಪಾದರೂಪವಾದ ಭಗವದವಯವಕ್ಕೆ ಅವಧಿಯಿಲ್ಲದಿದ್ದರೆ, ಆ ಅವಯವಕ್ಕೆ ಸಂಬದ್ಧವಾದ ಜಂಘೆ ಅವಯವಕ್ಕೂ ಅವಧಿಯಿಲ್ಲವಷ್ಟೇ? ಏಕೆಂದರೆ ಅವನು ಮಹಾಕಾಯವುಳ್ಳವನು. ವಿಶ್ವರೂಪದರ್ಶನವಾದಾಗ ಅರ್ಜುನನು 'ನಾಂತಂ ನ ಮಧ್ಯಂ ನ ಪುನಸ್ತವಾದಿಮ್', 'ಅನಂತ ಬಾಹೂದರವಕ್ತ್ರನೇತ್ರಮ್' ಇತ್ಯಾದಿಯಾಗಿ ಸ್ತೋತ್ರಮಾಡಿ, ಅವಯವಗಳಿಗೆ ಪ್ರತ್ಯೇಕವಾಗಿ ಅನಂತತ್ವವನ್ನು ಹೇಳುವುದರಿಂದ, ಪಾದ ಮತ್ತು ಜಂಘಾರೂಪವಾದ ಆದ್ಯದ್ವಿತೀಯ ಅವಯವಗಳಿಗೆ ಅವಧಿಶೂನ್ಯತ್ವವು ಯುಕ್ತಿಯುಕ್ತವೂ ಮತ್ತು ಪ್ರಾಮಾಣಿಕವೂ ಆಗಿದೆ. ಇಲ್ಲಿ ಯದ್ಯಪಿ ಭಗವಂತನ ಸೃಷ್ಟಿಸಂಹಾರ ಇಚ್ಛೆಗಳಂತೆ ಒಂದು ವ್ಯಕ್ತಿ ಸ್ಥಿತಿಯಲ್ಲಿದ್ದಾಗ, ಇನ್ನೊಂದಕ್ಕೆ ಶಕ್ತ್ಯಾತ್ಮಕ ಸ್ಥಿತಿಯನ್ನು ಹೇಳಿ, ಎರಡಕ್ಕೂ ಅನಾದಿತ್ವವನ್ನು ಹೇಳಲು ಬರುತ್ತದೆ. ಆದರೆ ನಾವು ಹೇಳಿದ ಯುಕ್ತಿಯಿಂದ ಎರಡಕ್ಕೂ ವ್ಯಕ್ತಿಯನ್ನು ಒಪ್ಪಿದರೂ ಅನಾದಿತ್ವವನ್ನು ಹೇಳಲು ಬರುವಾಗ ಆ ದೃಷ್ಟಾಂತವನ್ನೇಕೆ ಹೇಳಬೇಕು ಎಂದು ತಿಳಿದು, ಗ್ರಂಥಕಾರರು ಶಕ್ತಿ ವ್ಯಕ್ತಿವ್ಯವಸ್ಥೆಯನ್ನು ಹೇಳಿಲ್ಲ. ವರ್ಣಗಳು ಅನಾದಿಯಾದರೂ ಭಗವಂತನ ಅವಯವಗಳಂತೆ, ಪೌರ್ವಾಪರ್ಯವು ಉಪಪನ್ನವಾಗುತ್ತದೆ ಎಂದು ತಾತ್ಪರ್ಯ.

**ಅನಾದಿರ್ಬೀಜಸಂತಾನಸ್ತಥೈವಂಕುರಸಂತತಿಃ ।**
**ಅತಃ ಕ್ರಮಿಕಯೋಶ್ಚಾನಾದಿತ್ವಂ ತತ್ವಂ ರುಣದ್ಧಿ ಕಃ ॥ ೭೩ ॥**

**ಅರ್ಥ**— ಬೀಜಸಂತಾನೋಽಪಿ ಅನಾದಿಃ = ಭೂಮಿಯಲ್ಲಿ ಬಿತ್ತುವ ಬೀಜಗಳ ಸಂತಾನವು ಅನಾದಿಯಾಗಿದೆ. ತಥೈವ = ಹಾಗೆಯೇ, ಅಂಕುರಸಂತತಿರಪಿ ಅನಾದಿಃ = ಬೀಜದಿಂದ

ಹುಟ್ಟುವ ಅಂಕುರಸಂತಾನವೂ ಅನಾದಿಯೇ ಆಗಿದೆ. ಅತಃ = ಆದ್ದರಿಂದ, ಕ್ರಮಿಕಯೋಃ = ಬೀಜಾನಂತರ ಅಂಕುರೋತ್ಪತ್ತಿ, ಎನ್ನುವ ಕ್ರಮವನ್ನು ಹೊಂದಿರುವ ಇವೆರಡರ, ಅನಾದಿತ್ವಂ ತತ್ತ್ವಂ =ಅನಾದಿತ್ವಸ್ವರೂಪವಾದ ಪ್ರಮೇಯವನ್ನು, ಕಃ ರುಣದ್ಧಿ =ಯಾರು ತಾನೆ ತಡೆಯಲು ಸಾಧ್ಯ?

**ಅನುವಾದ–** ಬೀಜಸಂತತಿಯೂ ಅನಾದಿಯಾದುದು. ಹಾಗೆಯೇ ಅಂಕುರ ಸಂತತಿಯೂ ಅನಾದಿಯಾದುದು. ಆದ್ದರಿಂದ ಕ್ರಮಿಕವಾದವುಗಳಿಗೂ ಅನಾದಿತ್ವವನ್ನು ಯಾರು ನಿರಾಕರಿಸಲು ಸಾಧ್ಯ?

**ಭಾವವಿಲಾಸಿನೀ–** ಅನಾದಿಷು ಪೌರ್ವಾಪರ್ಯಂ ಲೋಕರೀತ್ಯಾಪ್ಯುಪಪಾದಯತಿ – **ಅನಾದಿರಿತಿ** ॥ ಬೀಜಸಂತಾನೋಽಪ್ಯನಾದಿಃ। ಅಂಕುರಸಂತತಿರಪಿ ತಥೈವ ಅನಾದಿರೇವ। ತಥಾಪಿ ತಯೋರ್ಯಥಾ ಪೌರ್ವಾಪರ್ಯಂ ಅಂಕುರಸಂತತೇರ್ಬೀಜಸಂತತ್ಯುತ್ತರಕಾಲೀನತ್ವಾತ್ತದ್ವತ್ ಪ್ರಕೃತೇಽಪೀತಿ ಭಾವಃ। ಅನಾದಿತ್ವಂ ತತ್ತ್ವಂ ಅನಾದಿತ್ವಾಖ್ಯತತ್ತ್ವಮ್ ॥ ೭೩ ॥

**ವಿವರಣೆ–** ಲೋಕರೀತಿಯಿಂದಲೂ ಅನಾದಿಪದಾರ್ಥಗಳಲ್ಲಿ ಪೌರ್ವಾಪರ್ಯವನ್ನು ಉಪಪಾದನೆ ಮಾಡುತ್ತಾರೆ. ಬೀಜಸಂತತಿಯೂ, ಅಂಕುರಸಂತತಿಯೂ ಅನಾದಿಯಾದವು. ಆದರೆ ಅಂಕುರವನ್ನು ಕುರಿತು ಬೀಜವು ಕಾರಣವಾದುದರಿಂದ ಆ ಸಂತತಿಗಳಿಗೂ ಪೌರ್ವಾಪರ್ಯಗಳಿವೆ. ಆದ್ದರಿಂದ ಅದರಂತೆ ಇಲ್ಲಿಯೂ ಪೌರ್ವಾಪರ್ಯವು ಕೂಡುತ್ತದೆಂದು ಅಭಿಪ್ರಾಯ.

**ಅನಾದಿವೇದವಾದಸ್ತನ್ಮನೋಮೋದಾಯಧೀಮತಾಂ ।**
**ಅಚಿಂತ್ಯಶಕ್ತಿಂ ಯೋ ವಕ್ತಿ ಪ್ರಭೋಃ ಸ್ವಾರ್ಥಪರಾಯಣಃ ॥ ೭೪ ॥**

**ಅರ್ಥ–** ಸ್ವಾರ್ಥಪರಾಯಣಃ = ಅನಾದಿಗಳಾದ ತನ್ನ ವರ್ಣಗಳಲ್ಲಿ ಪೌರ್ವಾಪರ್ಯವನ್ನು ರಕ್ಷಿಸುಕೊಳ್ಳುವುದರಲ್ಲಿ ತತ್ಪರವಾದ, ಯಃ = ಯಾವ, ಅನಾದಿವೇದವಾದಃ = ವೇದವು ಅನಾದಿ ಎಂಬ ವಾದವು, ಪ್ರಭೋಃ = ಪರಮಾತ್ಮನ, ಅಚಿಂತ್ಯಶಕ್ತಿಂ = ಅಚಿಂತ್ಯಶಕ್ತಿಯನ್ನು, ವಕ್ತಿ = ಹೇಳುತ್ತದೆಯೋ, ಸಃ= ಅದು ಧೀಮತಾಂ = ಬುದ್ಧಿವಂತರಿಗೆ, ಮನೋಮೋದಾಯ= ಮನಸ್ಸಂತೋಷಕ್ಕೆ ಕಾರಣವಾಗುತ್ತದೆ.

**ಅನುವಾದ–** ವೇದವು ಅನಾದಿಯೆಂಬ ವಾದವು ವಿವೇಕಿಗಳಿಗೆ ಮನಸ್ಸಂತೋಷವನ್ನು ನೀಡುವುದಾಗುತ್ತದೆ. ಏಕೆಂದರೆ ಸ್ವಾರ್ಥಪರಾಯಣವಾದ ವೇದವು ಪ್ರಭುವಾದ ಪರಮಾತ್ಮನಿಗೆ ಅಚಿಂತ್ಯಶಕ್ತಿಯನ್ನು ಹೇಳುತ್ತದೆ.

**ಭಾವವಿಲಾಸಿನೀ–** ಈಶ್ವರಾಚಿನ್ತ್ಯಾಘಟಿತಘಟಕಶಕ್ತಿವಶಾದಪ್ಯನಾದಿಷು ವರ್ಣೇಷು ಪೌರ್ವಾ-ಪರ್ಯಂ ಘಟತ ಇತ್ಯಾಹ – **ಅಚಿಂತ್ಯೇತಿ** ॥ ಯೋ ವೇದಃ ಪ್ರಭೋರಚಿನ್ತ್ಯಶಕ್ತಿಂ ವಕ್ತಿ । ಸ

ವೇದಸ್ಸ್ವಾರ್ಥಪರಾಯಣಃ । ಅನಾದಿಷ್ವಪಿ ಸ್ವವರ್ಣೇಷು ಪೌರ್ವಾಪರ್ಯಾಖ್ಯ ಸ್ವಾರ್ಥಪರಾಯಣಃ । ಅಘಟಿತೈತದ್ಘಟನಾಯ್ಯೈವೇಶ್ವರಸ್ಯಾಚಿನ್ತ್ಯ ಶಕ್ತಿಂ ವಕ್ತೀತಿ ಭಾವಃ ॥ ೭೪ ॥

**ವಿವರಣೆ–** ಈಶ್ವರನ ಅಚಿಂತ್ಯಶಕ್ತಿಯಿಂದಲೂ ವೇದಗತ ವರ್ಣಗಳಿಗೆ ಪೌರ್ವಾಪರ್ಯವು ಕೂಡುತ್ತದೆ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಪರಮಾತ್ಮನಿಗೆ ಅಚಿಂತ್ಯಶಕ್ತಿಯನ್ನು ಹೇಳುವ ವೇದವು ಸ್ವಾರ್ಥಪರಾಯಣವಾದುದು. ಏಕೆಂದರೆ ಅಘಟಿತಘಟನಾಶಕ್ತಿಯಿರುವ ಈಶ್ವರನು ಅನಾದಿನಿತ್ಯವಾದ ವರ್ಣಗಳಲ್ಲಿಯೂ ಸಹ ಪೌರ್ವಾಪರ್ಯವನ್ನು ಘಟನೆ ಮಾಡುತ್ತಾನೆ. ಈ ಪೌರ್ವಪರ್ಯಘಟನೆಗಳಿಂದ ವೇದವು ರಕ್ಷಿತವಾಗುತ್ತದೆ. ಆದ್ದರಿಂದ ವೇದವು ಸ್ವಾರ್ಥಪರಾಯಣ ಎಂದು ಹೇಳಿದ್ದಾರೆ.

**ತದ್ವೇದಪದರಾಶಿಸ್ಥವರ್ಣಮಾಲಾಸ್ವನಾದಿತಃ ।**
**ಪೌರ್ವಾಪರ್ಯಂ ಕೇನ ವಾರ್ಯಮನಾದೀಶಧಿಯಾರ್ಪಿತಮ್ ॥ ೭೫ ॥**

**ಅರ್ಥ–** ತತ್= ಆದ್ದರಿಂದ, ವೇದಪದರಾಶಿಸ್ಥವರ್ಣಮಾಲಾಸು = ಆದ್ದರಿಂದ ವೇದದ ಪದರಾಶಿಯಲ್ಲಿರುವ ವರ್ಣಮಾಲೆಗಳಲ್ಲಿ, ಅನಾದಿತಃ = ಅನಾದಿಕಾಲದಿಂದಲೂ, ಈಶಧಿಯಾರ್ಪಿತಂ = ಈಶನ ಬುದ್ಧಿಯಿಂದ ಅರ್ಪಿತವಾದ, ಅನಾದಿಪೌರ್ವಾಪರ್ಯಂ = ಅನಾದಿಯಾದ ಪೂರ್ವಾಪರಭಾವವು, ಕೇನ ವಾರ್ಯಂ = ಯಾರಿಂದ ನಿರಾಕರಿಸಲ್ಪಡಲು ಸಾಧ್ಯವಿದೆ?

**ಅನುವಾದ–** ಆದ್ದರಿಂದ ವೇದಪದರಾಶಿಗಳಲ್ಲಿರುವ ವರ್ಣಮಾಲೆಯಲ್ಲಿ ಅನಾದಿಯಾದ ಈಶ್ವರಬುದ್ಧಿಯಿಂದ ಅರ್ಪಿತವಾದ ಪೌರ್ವಾಪರ್ಯವು ಅನಾದಿಕಾಲದಿಂದಲೂ ಇರುವುದನ್ನು ಯಾರು ಪ್ರತಿಷೇಧಿಸಲು ಸಾಧ್ಯ?

**ಭಾವವಿಲಾಸಿನೀ–** ತತ್ತಸ್ಮಾದ್ ಈಶ್ವರಾಘಟಿತಘಟಕಶಕ್ತಿವಶಾತ್ ॥ ೭೫ ॥

**ವಿವರಣೆ–** ಹಿಂದೆ ಹೇಳಿದ ಅರ್ಥವನ್ನೇ ಈ ಶ್ಲೋಕದಲ್ಲಿ ಈಶ್ವರನ ಅಘಟಿತಘಟನಾಶಕ್ತಿಯಿಂದ ಪುನಃ ಉಪಪಾದನೆ ಮಾಡಿದ್ದಾರೆ.

**ವರ್ಣಾನಾಮಪ್ಯನಾದಿತ್ವಂ ಬುದ್ಧೇಶ್ಚಾನಾದಿತಾ ಯದಾ ।**
**ಕಥಂ ತದಾ ಬುದ್ಧಿಸಿದ್ಧಪೌರ್ವಾಪರ್ಯಸ್ಯ ಸಾದಿತಾ ।**
**ನ ಹೀದಂಪೂರ್ವತಾಂ ಬುದ್ಧೇರನಾದೇರ್ಬುದ್ಧಿಮಾನ್ ವದೇತ್ ॥ ೭೬ ॥**

**ಅರ್ಥ–** ವರ್ಣಾನಾಮಪಿ ಅನಾದಿತ್ವಂ = ವರ್ಣಗಳಲ್ಲಿಯೂ ಅನಾದಿತ್ವವು, ಬುದ್ಧೇಶ್ಚಾಪಿ ಅನಾದಿತಾ = ಬುದ್ಧಿಯಲ್ಲಿಯೂ ಅನಾದಿತ್ವವೂ, ಯದಾ = ಯಾವಾಗ

ಸಿದ್ಧವಾಗುವುದೋ, ತದಾ = ಆಗ, ಕಥಂ ಬುದ್ಧಿಸಿದ್ಧಪೌರ್ವಾಪರ್ಯಸ್ಯ ಸಾದಿತಾ? = ಹೇಗೆ ಅನಾದಿ ಈಶ್ವರಬುದ್ಧಿಸಿದ್ಧವಾದ ಪೂರ್ವಾಪರಭಾವವು ಸಾದಿಯಾಗಲು ಸಾಧ್ಯ? ಬುದ್ಧಿಮಾನ್ = ಬುದ್ಧಿವಂತನಾದವನು, ಅನಾದೇಃ ಬುದ್ಧೇಃ = ಅನಾದಿಯಾದ ಈಶ್ವರಬುದ್ಧಿಗೆ, ಇದಂಪೂರ್ವತಾಂ ನ ವದೇತ್ ಹಿ = ಇದು ಈಗ ಹುಟ್ಟಿದೆ ಎಂದು ಹೇಳುವುದಿಲ್ಲವಷ್ಟೇ?

**ಅನುವಾದ–** ವರ್ಣಗಳೂ ಅನಾದಿಗಳು. ಈಶ್ವರಬುದ್ಧಿಯೂ ಅನಾದಿಯಾದುದು. ಈಶ್ವರಬುದ್ಧಿಉಪಾಧಿಕವಾದ ಪೌರ್ವಾಪರ್ಯರೂಪವಾದ ಕ್ರಮವು ಹೇಗೆ ಸಾದಿಯಾಗುತ್ತದೆ ? ಅನಾದಿಯಾದ ಈಶ್ವರಬುದ್ಧಿಗೆ ವಿವೇಕವುಳ್ಳ ಯಾವನೂ ಸಹ ಇದಂಪೂರ್ವತ್ವವನ್ನು ಹೇಳಲು ಸಾಧ್ಯವಿಲ್ಲವಷ್ಟೇ?

**ಭಾವವಿಲಾಸಿನೀ–**ಬುದ್ಧೇರ್ವರ್ಣವ್ಯಂಜಕೇಶ್ವರಬುದ್ಧೇಃ ಬುದ್ಧಿಸಿದ್ಧಪೌರ್ವಾಪರ್ಯಸ್ಯ ನಿತ್ಯೇಶ ಬುದ್ಧಿಸಿದ್ಧವೈದಿಕವರ್ಣಮಾಲಾಪೌರ್ವಾಪರ್ಯಸ್ಯೇತ್ಯರ್ಥಃ । ತದರ್ಥಮೇವ ಬುದ್ಧೇರ್ನಿತ್ಯತಾಮುಪಪಾದಯತಿ – **ನಹೀತಿ** ॥ ೭೬ ॥

**ವಿವರಣೆ–** ಈಶ್ವರಬುದ್ಧಿಯು ನಿತ್ಯವಾದುದರಿಂದ ತದುಪಾಧಿಕವಾದ ಕ್ರಮವೂ ಸಹ ನಿತ್ಯವಾದುದೇ ಎಂದು ಹೇಳಲು ಈಶ್ವರಬುದ್ಧಿಯ ನಿತ್ಯತ್ವವನ್ನು ಉಪಪಾದನೆ ಮಾಡುತ್ತಾರೆ. ಈಶ್ವರಬುದ್ಧಿಗೆ 'ಇದಂ ಪೂರ್ವತ್ವಂ' ಎಂಬುದು ಇಲ್ಲವಷ್ಟೇ ? ಆದ್ದರಿಂದ ಅನಾದಿಯೆಂದೇ ಸಿದ್ಧವಾಗುತ್ತದೆ.

**ಜ್ಞಾನಸಾಧ್ಯಾ ಹರೇರಿಚ್ಛಾ ಯದಾನಾದಿರ್ನಿಗದ್ಯತೇ ।**
**ಜ್ಞಾನಜ್ಞೇಯಸ್ವರೂಪಸ್ಯ ಸಾದಿತಾಸ್ಯ ಕಥಂ ವದ ॥ ೭೭ ॥**

**ಅರ್ಥ–** ಯದಾ = ಯಾವಾಗ, ಜ್ಞಾನಸಾಧ್ಯಾ = ಜ್ಞಾನಪ್ರಯೋಜ್ಯವಾದ, ಹರೇಃ ಇಚ್ಛಾ = ಹರಿಯ ಇಚ್ಛೆಯೂ, ಅನಾದಿಃ = ಅನಾದಿ ಎಂದು, ನಿಗದ್ಯತೇ = ಹೇಳಲ್ಪಡುತ್ತದೆಯೋ (ತದಾ = ಆಗ), ಜ್ಞಾನ ಜ್ಞೇಯ ಸ್ವರೂಪಸ್ಯ = ಆ ಜ್ಞಾನಕ್ಕೆ ವಿಷಯವಾದಂತಹ, ಅಸ್ಯ = ಈ ಕ್ರಮಕ್ಕೆ, ಸಾದಿತಾ = ಜನ್ಯತ್ವವು, ಕಥಂ = ಹೇಗೆ (ಇತಿ = ಎಂದು), ವಹ = ಹೇಳು.

**ಅನುವಾದ– ಜ್ಞಾನಸಾಧ್ಯವಾದ ಹರಿಯ ಇಚ್ಛೆಯು ಅನಾದಿಯೆಂದು ಹೇಳಲ್ಪಡುವಾಗ ಜ್ಞಾನಜ್ಞೇಯವೆಂದು ನಿರೂಪಿಸಲ್ಪಡುವ ಕ್ರಮವು ಹೇಗೆ ಸಾದಿಯಾಗುವುದೆಂದು ಹೇಳು.**

**ಭಾವವಿಲಾಸಿನೀ–** ಅನಾದೇರಪ್ಯನಾದ್ಯಂತರವ್ಯಂಗ್ಯತ್ವಂ ನಿತ್ಯತ್ವಂ ಚ ರೀತ್ಯಂತರೇಣೋ-ಪಪಾದಯತಿ – **ಜ್ಞಾನೇತಿ** ॥ ಜ್ಞಾನಸಾಧ್ಯಾ ಜ್ಞಾನವ್ಯಂಗ್ಯಾ । ಅನಾದ್ಯೋರಪಿ ಭಗವಜ್ಜ್ಞಾನೇ-ಚ್ಛಯೋರ್ವ್ಯಂಜಕವ್ಯಂಗ್ಯತ್ವವದ್ ಅನಾದೇರಪಿ ವರ್ಣಕ್ರಮಸ್ಯ ವ್ಯಂಗ್ಯತ್ವಮ್

ಈಶ್ವರಬುದ್ಧೇರ್ವ್ಯಂಜಕತ್ವಂ ಚ ಯುಜ್ಯತ ಇತ್ಯಾಕೂತವಮ್ । ಜ್ಞಾನಜ್ಞೇಯತ್ವರೂಪಸ್ಯ ಈಶ್ವರಬುದ್ಧೇರ್ಜ್ಞಾನತ್ವೇನ ಪೂರ್ವತ್ವೇನೇಶ್ವರಬುದ್ಧಿವಿಷಯತ್ವನಿಮಿತ್ತಕಂ ಪೂರ್ವತ್ವಂ ಪರತ್ವೇನೇಶ್ವರಬುದ್ಧಿವಿಷಯತ್ವ ನಿಮಿತ್ತಕಂ ಪರತ್ವಮಿತಿ ವರ್ಣಪೌರ್ವಾಪರ್ಯಸ್ಯ ಜ್ಞೇಯತ್ವ-ನಿಮಿತ್ತಕತ್ವೇನ ಜ್ಞಾನಜ್ಞೇಯತ್ವರೂಪಸ್ಯೇತ್ಯರ್ಥಃ । ಅಸ್ಯ ವರ್ಣಗತಪೌರ್ವಾಪರ್ಯಸ್ಯ । ಜ್ಞಾನೋತ್ತರಕಾಲೀನಾಯಾ ಭಗವದಿಚ್ಛಾಯಾ ಅನಾದಿತ್ವೇ ಜ್ಞಾನಸಮಸಮಯವರ್ತಿವೈದಿಕ-ವರ್ಣಪೌರ್ವಾಪರ್ಯಸ್ಯಾನಾದಿತ್ವಂ ಕಿಂ ವಾಚ್ಯಮಿತಿ ಭಾವಃ ॥ ೭೭ ॥

**ವಿವರಣೆ–** ಅನಾದಿಯಾದ ವಸ್ತುವಿಗೂ, ಅನಾದಿಯಾದ ವಸ್ತ್ವಂತರ ವ್ಯಂಗ್ಯತ್ವವನ್ನು ಮತ್ತು ನಿತ್ಯತ್ವವನ್ನು ಇನ್ನೊಂದು ರೀತಿಯಿಂದ ಉಪಪಾದನೆ ಮಾಡುತ್ತಾರೆ. ಜ್ಞಾನೇಚ್ಛಾ ಪ್ರಯತ್ನಗಳು ಕಾರ್ಯಕಾರಣ ಭಾವವನ್ನು ಹೊಂದಿವೆ. ಜ್ಞಾನಜನ್ಯವಾದ ಇಚ್ಛಾ, ಇಚ್ಛಾಜನ್ಯವಾದ ಪ್ರಯತ್ನ ಆದರೆ ಈಶ್ವರನಲ್ಲಿ ಮೂರೂ ನಿತ್ಯವಾದುದರಿಂದ ಜ್ಞಾನವ್ಯಂಗ್ಯವಾದುದು ಇಚ್ಛಾ, ಇಚ್ಛಾವ್ಯಂಗ್ಯವಾದುದು ಪ್ರಯತ್ನ ಎಂದು ಹೇಳುತ್ತೇವೆ. ಅನಾದಿಯಾದ ಪರಮಾತ್ಮನ ಜ್ಞಾನೇಚ್ಛೆಗಳಿಗೆ, ವ್ಯಂಜಕತ್ವ ಮತ್ತು ವ್ಯಂಗ್ಯತ್ವವಿರುವಂತೆ ಅನಾದಿಯಾದ ಈಶ್ವರಬುದ್ಧಿಗೆ ಅನಾದಿಯಾದ ವರ್ಣಕ್ರಮ ವ್ಯಂಜಕತ್ವವನ್ನೂ, ವರ್ಣಕ್ರಮಕ್ಕೆ ವ್ಯಂಗ್ಯತ್ವವನ್ನು ಹೇಳಲು ಏನೂ ಬಾಧಕವಿಲ್ಲವೆಂದು ಅಭಿಪ್ರಾಯ. ಈಶ್ವರಬುದ್ಧಿಯು ಜ್ಞಾನರೂಪವಾದುದು. ಯಾವ ವರ್ಣವು ಪೂರ್ವತ್ವೇನ ಈಶ್ವರಬುದ್ಧಿವಿಷಯವಾಗುತ್ತದೆಯೋ, ಅದರಲ್ಲಿ ಪೂರ್ವತ್ವವಿದೆ. ಯಾವ ವರ್ಣವು ಪರತ್ವೇನ ಈಶ್ವರಬುದ್ಧಿ ವಿಷಯವಾಗುತ್ತದೆಯೋ, ಅದರಲ್ಲಿ ಪರತ್ವವಿದೆ. ಆದ್ದರಿಂದ ಜ್ಞೇಯವಾದ ವರ್ಣಗಳಲ್ಲಿರುವ ಪೂರ್ವತ್ವ, ಪರತ್ವಗಳು, ವ್ಯಂಜಕವಾದ ಜ್ಞಾನದಲ್ಲಿರುವ ಕ್ರಮದಿಂದ ಉಪಹಿತವಾಗಿವೆ. ಜ್ಞಾನೋತ್ತರ ಕಾಲವಾದ ಭಗವದಿಚ್ಛೆಗೂ ಸಹ ಅನಾದಿತ್ವವು ಇರುವಾಗ ಜ್ಞಾನದ ಸಮಾನಕಾಲೀನವಾದ ವರ್ಣಗಳ ಪೌರ್ವಾಪರ್ಯಕ್ಕೆ ಅನಾದಿತ್ವವು ಇರುವುದರಲ್ಲಿ ಯಾವ ಆಪತ್ತಿಯೂ ಇಲ್ಲ ಎಂದು ಅಭಿಪ್ರಾಯ.

**ಅಗತ್ಯಾ ಪಂಚರಾತ್ರಾದೌ ಪ್ರಮಾಣಾಭಾವತೋ ಹರಿಃ ।**
**ನ ವ್ಯಕ್ತೀಕುರುತೇ ಬುದ್ಧಿಂ ಶಕ್ತಾಮಪಿ ಸಕಾರ್ಯವಿತ್ ॥ ೭೮ ॥**

**ಅರ್ಥ–** ಪ್ರಮಾಣಾಭಾವತಃ = ಅನಾದಿನಿತ್ಯವೆಂದು ಪ್ರಮಾಣವಿಲ್ಲದಿರುವುದರಿಂದ, (ಹಾಗೂ ನಿತ್ಯಾನಿತ್ಯ ಎಂದು ಪ್ರಮಾಣವಿರುವುದರಿಂದ), ಪಂಚರಾತ್ರಾದೌ = ಪಂಚರಾತ್ರಮುಂತಾದ ಪ್ರಮಾಣಗ್ರಂಥಗಳಲ್ಲಿ ಕಾರ್ಯವಿತ್ = ವೇದನಿತ್ಯತ್ವದಿಂದ ಧರ್ಮಾಧರ್ಮವ್ಯವಸ್ಥೆ ಎಂಬ ಕಾರ್ಯವನ್ನು ತಿಳಿದಿರುವ, ಸಃ ಹರಿಃ= ಆ ಶ್ರೀಹರಿಯು, ಶಕ್ತಾಮಪಿ = ಪೂರ್ವಕಲ್ಪದಲ್ಲಿನ ಹಾಗೆ, ಪಂಚರಾತ್ರಾದಿಗಳನ್ನು ಹೇಳಲು ಶಕ್ತವಾದರೂ ಸಹ, ಬುದ್ಧಿಂ= ಪಂಚರಾತ್ರಾದಿ ವಿಷಯಕವಾದ ತನ್ನ ಬುದ್ಧಿಯನ್ನು, ಅಗತ್ಯಾ= ಅನಿವಾರ್ಯವಾಗಿ ನ ವ್ಯಕ್ತೀಕುರುತೇ= ಅಭಿವ್ಯಕ್ತ ಮಾಡುವುದಿಲ್ಲ (ಆದರೆ ಪುನಃ ರಚನೆ ಮಾಡುತ್ತಾನೆ).

**ಅನುವಾದ–** ಪಂಚರಾತ್ರಾದಿ ಸ್ಮೃತಿಗಳ ವಿಷಯದಲ್ಲಿ ಅವು ನಿತ್ಯವೆಂಬ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಹರಿಯು ಅನಿವಾರ್ಯವಾಗಿ ತನ್ನ ಬುದ್ಧಿಯಲ್ಲಿರುವ ಕ್ರಮವನ್ನು ವ್ಯಕ್ತಪಡಿಸುವುದಿಲ್ಲ. ತನ್ನ ಬುದ್ಧಿಕ್ರಮವನ್ನು ಅಲ್ಲಿಯೂ ವ್ಯಕ್ತಪಡಿಸಲು ಸಮರ್ಥನಾದರೂ ಸಹ ವೇದಗಳಿಗೆ ಮಾತ್ರ ನಿತ್ಯತ್ವವು ಬರಬೇಕು. ಸ್ಮೃತಿಗಳಿಗೆ ನಿತ್ಯತ್ವವು ಬರಬಾರದು ಎಂಬ ಪ್ರಯೋಜನವನ್ನು ಉದ್ದೇಶಿಸುವ ಹರಿಯು, ಆ ಪುರಾಣದ ಅಥವಾ ಸ್ಮೃತಿಯ ಕ್ರಮವನ್ನು ಪುನಃ ಅಭಿವ್ಯಕ್ತಿ ಮಾಡುವುದಿಲ್ಲ.

**ಭಾವವಿಲಾಸಿನೀ–** ಏವಂಚೇತ್ ಪಂಚರಾತ್ರಾದಿಕ್ರಮಸ್ಯಾನಾದೀಶ್ವರಬುದ್ಧ್ಯುಪಾಧಿಕೇನಾನುತ್ಪನ್ನತ್ವಂ ಸ್ಯಾದಿತ್ಯತ ಆಹ – **ಅಗತ್ಯೇತಿ** ॥ ಪ್ರಮಾಣಾಭಾವತಃ ನಿತ್ಯತ್ವೇ ಪ್ರಮಾಣಾಭಾವತಃ ಅನಿತ್ಯತ್ವೇ ಪ್ರಮಾಣಸದ್ಭಾವಾಚ್ಚೇತ್ಯಪಿ ದ್ರಷ್ಟವ್ಯಮ್ । ನ ವ್ಯಕ್ತೀಕುರುತೇ ಪಂಚರಾತ್ರಾದಿಕ್ರಮೋ ಯಥಾ ನಿತ್ಯೋ ಭವತಿ ತಥಾ ಸ್ವಬುದ್ಧಿಂ ತತ್ರ ಶಕ್ತಾಮಪಿ ನ ವ್ಯಕ್ತೀಕುರುತೇ । ಯದಾಚ ಸೃಷ್ಟಿಕಾಲೇ ವ್ಯಕ್ತೀಕರೋತಿ ತದಾ ತಸ್ಯೋತ್ಪತ್ತಿರೇವ । ಕಾರ್ಯವಿದಿತ್ಯನೇನ ವೇದನಿತ್ಯತ್ವೇನೈವ ಧರ್ಮಾಧರ್ಮವ್ಯವಸ್ಥಾದಿಸರ್ವಕಾರ್ಯ ಸಿದ್ಧೇರೇತನ್ನಿತ್ಯತ್ವಕರಣಂ ವ್ಯರ್ಥಮಿತಿ ಸೂಚಯತಿ ॥ ೭೮ ॥

**ವಿವರಣೆ–** ಹಾಗಾದರೆ ಪಂಚರಾತ್ರಾದಿ ಕ್ರಮವೂ ಸಹ ಅನಾದಿಯಾದ ಈಶ್ವರಬುದ್ಧಿಉಪಾಧಿಕವಾದ ಕ್ರಮವನ್ನು ಹೊಂದಿರುವುದರಿಂದ ಅಲ್ಲಿಯೂ ಉತ್ಪತ್ತಿಯನ್ನು ಅಂಗೀಕರಿಸಬಾರದು ಎಂಬ ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ವೇದವು ನಿತ್ಯ ಎಂಬ ವಿಷಯದಲ್ಲಿ ಪ್ರಮಾಣವಿದೆ. ಪಂಚರಾತ್ರಾದಿಗಳು ನಿತ್ಯ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಆದ್ದರಿಂದ ಹರಿಯು ಆ ಕ್ರಮವನ್ನು ವ್ಯಕ್ತಮಾಡುವುದಿಲ್ಲ ಎಂದು ಒಂದು ಉಪಪಾದನೆ. ಯದ್ಯಪಿ ಈಶ್ವರನಿಗೆ ತನ್ನ ಬುದ್ಧಿಸ್ಥ ಕ್ರಮವನ್ನು ಪುನಃ ವ್ಯಕ್ತ ಮಾಡಲು ಸಾಮರ್ಥ್ಯವಿದೆ. ಆದರೂ ಸೃಷ್ಟಿಕಾಲದಲ್ಲಿ ಅದನ್ನು ವ್ಯಕ್ತ ಮಾಡದೆ ಬೇರೆ ಕ್ರಮದಿಂದಲೇ ವರ್ಣಗಳನ್ನು ಜೋಡಿಸಿ, ಅದೇ ಅರ್ಥವನ್ನು ಪ್ರತಿಪಾದನೆ ಮಾಡುತ್ತಾನೆ. ಅಲ್ಲದೆ ಧರ್ಮಾಧರ್ಮಾದಿ ವ್ಯವಸ್ಥೆಗಳು ವೇದದಿಂದಲೇ ಆಗಬೇಕು. ವೇದವು ನಿತ್ಯವಾಗದಿದ್ದರೆ ಧರ್ಮಾಧರ್ಮಾದಿವ್ಯವಸ್ಥೆಗಳು ಆಗುವುದಿಲ್ಲವೆಂಬ ಪ್ರಯೋಜನವನ್ನು ಅನುಸಂಧಾನ ಮಾಡಿ, ಹರಿಯು ವೇದಗಳಲ್ಲಿ ಮಾತ್ರ ತನ್ನ ಬುದ್ಧಿಕ್ರಮವನ್ನು ಅಭಿವ್ಯಕ್ತಗೊಳಿಸುತ್ತಾನೆ. ಸ್ಮೃತಿ ಇತಿಹಾಸಗಳಲ್ಲಿ ಅಭಿವ್ಯಕ್ತಿಗೊಳಿಸುವುದಿಲ್ಲ ಎಂದು ತಾತ್ಪರ್ಯ.

**ಅತಸ್ತತ್ಕೃತಶಾಸ್ತ್ರಸ್ಯ ಸಾದಿತ್ವೇಽಸ್ತ್ಯತಿಸಂಕಟಂ ।**
**ಅನಾದಿತ್ವೇ ತ್ವನಾಯಾಸ ಇತಿ ಮನ್ಯಾಮಹೇ ವಯಂ ॥ ೭೯ ॥**

**ಅರ್ಥ–** ಅತಃ = ಆದ್ದರಿಂದ, ತತ್ಕೃತಶಾಸ್ತ್ರಸ್ಯ = ಶ್ರೀಹರಿಯಿಂದ ರಚಿತವಾದ ಶಾಸ್ತ್ರಗ್ರಂಥಕ್ಕೆ, ಸಾದಿತ್ವ = ಉತ್ಪತ್ತಿ ಇದೆಯೆಂಬ ವಿಷಯದಲ್ಲಿ, ಅತಿ ಸಂಕಟಂ = ಬಹಳ ಸಂಕಷ್ಟವು,

ಅಸ್ತಿ = ಇದೆ, ಅನಾದಿತ್ವೇ ತು = ಅನಾದಿಯಾದ ಪಕ್ಷದಲ್ಲಿಯಾದರೂ, ಅನಾಯಾಸಃ = ಆಯಾಸವೇ ಇಲ್ಲ, ಇತಿ = ಹೀಗೆಂದು, ವಯಂ = ನಾವು, ಮನ್ಯಾಮಹೇ = ತಿಳಿಯುತ್ತೇವೆ.

**ಅನುವಾದ–** **ಆದ್ದರಿಂದ ದೇವರು ನಿರ್ಮಿಸಿದ ಶಾಸ್ತ್ರವನ್ನು ಸಾದಿಯೆಂದು ಉಪಪಾದನೆ ಮಾಡುವುದಕ್ಕೆ ನಾವು ಕಷ್ಟಪಡ ಬೇಕಾಗುತ್ತದೆ. ಅನಾದಿತ್ವವನ್ನು ಉಪಪಾದನೆ ಮಾಡಲು ಯಾವ ಕಷ್ಟವೂ ಇಲ್ಲ ಎಂದು ನಮ್ಮ ಅಭಿಪ್ರಾಯ.**

**ಭಾವವಿಲಾಸಿನೀ–** **ಅತ ಈಶ್ವರಬುದ್ಧೇರನಾದಿನಿತ್ಯತ್ವಾತ್ । ಸಾದಿತ್ವೇ ಈಶ್ವರಬುದ್ಧ್ಯುಪಾಧಿಕಪಂಚರಾತ್ರಾದಿಕ್ರಮ ಸ್ಯೋತ್ಪನ್ನತ್ವೇ ಅತಿಸಂಕಟಂ ಸರ್ವಜ್ಞೇಶ್ವರಬುದ್ಧೇಸ್ತದ್ವಿಷಯತ್ವೇ ವ್ಯಕ್ತ್ಯಭಾವಕಥನರೂಪಮ್ ॥ ೭೯ ॥**

**ವಿವರಣೆ–** ಈಶ್ವರಬುದ್ಧಿಯು ಅನಾದಿನಿತ್ಯವಾದುದರಿಂದ ಈಶ್ವರಬುದ್ಧಿ ಉಪಾದಿಕವಾದ ಪಂಚರಾತ್ರಾದಿ ಕ್ರಮವನ್ನು ಉತ್ಪನ್ನ ಎಂದು ಹೇಳಬೇಕಾದರೆ ನಾವು ಅನೇಕ ಕಲ್ಪನೆಗಳನ್ನು ಮಾಡಬೇಕಾಗುತ್ತದೆ. ಅದು ಕಷ್ಟವಾದುದು. ಆದರೂ ಪ್ರಾಮಾಣಿಕವಾದುದರಿಂದ ಕಲ್ಪನೆಯನ್ನು ಮಾಡಬೇಕು. ಬುದ್ಧಿಯೂ, ಬುದ್ಧ್ಯುಪಾಧಿಕಕ್ರಮವೂ ಅನಾದಿಯಾಗಿರುವಾಗ ವೇದವು ಅನಾದಿಯೆಂದು ಹೇಳಲು ಯಾವ ಕಷ್ಟವನ್ನೂ ಪಡಬೇಕಾಗಿಲ್ಲ. ವೇದದ ಅನಾದಿತ್ವವು ಸುಲಭವಾಗಿ ಸಿದ್ಧಿಸುತ್ತದೆ ಎಂದು ಅಭಿಪ್ರಾಯ.

**ಈಶೇನೋಚ್ಚರಿತಂ ತಚ್ಚ ಬ್ರಹ್ಮಾದೀನಾಂ ಪರಂಪರಾ ।**
**ಅನುಭೂತಂ ಸ್ಮರೇನ್ನಿತ್ಯಂ ನ ಕರೋತಿ ಸ್ವಯಂ ಪುನಃ ॥ ೮೦ ॥**

**ಉಚ್ಚಾರಯಂತ್ಯುಪಾಧ್ಯಾಯಾಃ ಸ್ಮೃತ್ವಾ ಸ್ಮೃತ್ವಾ ತದೇವ ಹಿ ।**
**ತದೇವಂ ಪ್ರಚರೇದ್ವೇದಃ ಕರ್ತಾರೋಽಸ್ಯ ನ ಕುತ್ರಚಿತ್ ॥ ೮೧ ॥**

**ಅರ್ಥ–** ಬ್ರಹ್ಮಾದೀನಾಂ ಪರಂಪರಾ = ಬ್ರಹ್ಮಾದಿಗಳ ಪರಂಪರೆಯು, ಈಶೇನ = ಪರಮಾತ್ಮನಿಂದ, ಉಚ್ಚರಿತಂ = ಉಚ್ಚರಿಸಲ್ಪಟ್ಟ, ಅನುಭೂತಂ = ಉಚ್ಚರಣೆಯನ್ನು ಕೇಳಿದಾಗ ಅನುಭವಿಸಲ್ಪಟ್ಟ, ನಿತ್ಯಂ = ಯಾವಾಗಲೂ, ಸ್ಮರೇತ್ = ಸ್ಮರಿಸುತ್ತದೆ. ಸ್ವಯಂ = ತಾನಾಗಿಯೇ, ಪುನಃ = ಮತ್ತೆ, ನಕರೋತಿ = ರಚಿಸುವುದಿಲ್ಲ. ಉಪಾಧ್ಯಾಯಾಃ = ಉಪಾಧ್ಯಾಯರೂ ಕೂಡ, ತದೇವ = ಅದನ್ನೇ, ಸ್ಮೃತ್ವಾ ಸ್ಮೃತ್ವಾ = ಮತ್ತೆ ಮತ್ತೆ ಸ್ಮರಿಸಿ, ಉಚ್ಚಾರಯಂತಿ ಹಿ = ಉಚ್ಚರಿಸುತ್ತಾರಷ್ಟೆ. ತತ್ = ಆದ್ದರಿಂದ, ವೇದಃ = ವೇದವು, ಏವಂ = ಹೀಗೆ, ಪ್ರಚರತಿ = ಶಿಷ್ಯಪರಂಪರೆಯಲ್ಲಿ ಬರುತ್ತದೆ. ಅಸ್ಯ = ಈ ವೇದದ , ಕರ್ತಾರಃ = ಸ್ವಯಂರಚನೆ ಮಾಡುವವರು ನ ಕುತ್ರಚಿತ್ = ಎಲ್ಲಿಯೂ ಇಲ್ಲ.

**ಅನುವಾದ–** **ಈಶ್ವರನಿಂದ ಉಚ್ಚರಿತವಾದ ಆ ವೇದವನ್ನು ಬ್ರಹ್ಮಾದಿ ಪರಂಪರೆಯು ಅನುಭವಿಸಿ ನಿತ್ಯವೂ ಸ್ಮರಣೆ ಮಾಡುತ್ತದೆ ಹೊರತು, ಸ್ವಯಂ ಪುನಃ ತಾನು ಆ ಕ್ರಮವನ್ನು ರಚಿಸುವುದಿಲ್ಲ.**

ಉಪಾಧ್ಯಾಯರೆಲ್ಲರೂ ಆ ಕ್ರಮವನ್ನು ಸ್ಮರಿಸಿಕೊಂಡು, ಸ್ಮರಿಸಿಕೊಂಡು ಅದನ್ನೇ ಉಚ್ಚಾರಣೆ ಮಾಡುತ್ತಾರೆ. ವೇದವು ಹೀಗೆಯೇ ಪ್ರಚಾರವನ್ನು ಹೊಂದುತ್ತದೆ. ವೇದವನ್ನು ಸೃಷ್ಟಿಮಾಡುವವರು ಯಾರೂ ಇಲ್ಲ.

**ಭಾವವಿಲಾಸಿನೀ–** ಮೀಮಾಂಸಕಮತವದೇಕಜಾತೀಯಕ್ರಮುವತ್ತ್ವೇನ ನ ನಿತ್ಯತ್ವಂ ಕಿಂತು ಕ್ರಮಸ್ವರೂಪಸ್ಯೈವ ನಿತ್ಯತ್ವೇನ ವೇದನಿತ್ಯತ್ವಮಿತಿ ಭಾವೇನಾಹ – **ಈಶೇನೇತಿ ||** ತತ್ ಅನಾದಿ-ಕ್ರಮವಿಶಿಷ್ಟವೇದವಾಕ್ಯಮ್ । ಬ್ರಹ್ಮಾದೀನಾಮೀಶ್ವರಾದಧ್ಯೇತೄಣಾಮ್ । ಅಧ್ಯಯನಸಮಯೇ ಸ್ವಸ್ವಮನಸಿ ಅನುಭೂತಂ ಸ್ಮರೇತ್ || ೮೦ ||

ಏತದೇವಾನುಭಾವಯತಿ – **ಉಚ್ಚಾರಯಂತೀತಿ ||** ತದೇವ ಉಪಾಧ್ಯಾಯೋಕ್ತಕ್ರಮ ವಿಶಿಷ್ಟವಾಕ್ಯಮೇವ । ವರ್ಣಕ್ರಮಾತ್ಮಕವೇದಸ್ಯ ಕಥಂಚಿತ್ ಕೃತಕತ್ವೇ ನಿತ್ಯತ್ವಸ್ಯ ಭಾಕ್ತತ್ವಾಪತ್ತ್ಯಾ ಅನಾದಿನಿತ್ಯಾ ಸಾ ತಚ್ಛೇತ್ಯುಕ್ತಬ್ರಹ್ಮಸಾಮ್ಯಾಯೋಗಾದ್ ಆದಿವಕ್ತಾ ನಾರಾಯಣೋಽಪಿ ಭಗವಾನಪಿ ದ್ರಷ್ಟೈವ ನತು ಸ್ರಷ್ಟಾ। ಪುರಾಣಾದೀನಾಂ ತು ನಿತ್ಯತ್ವೇ ಪ್ರಮಾಣಾಭಾವಾತ್ ಸ್ರಷ್ಟೈವೇತಿ ವಿವೇಕಃ || ೮೧ ||

**ವಿವರಣೆ–** ನಮ್ಮ ಮತದಲ್ಲಿ ನಿತ್ಯತ್ವವೆಂದರೆ ಮೀಮಾಂಸಕ ಮತದಂತೆ ಏಕಜಾತೀಯ ಕ್ರಮವತ್ತ್ವರೂಪವಾದುದುಲ್ಲ. ಆದರೆ ಕ್ರಮಸ್ವರೂಪವೇ ನಿತ್ಯವಾದುದು. ಅದರಿಂದ ವೇದನಿತ್ಯತ್ವವನ್ನು ಸಾಧಿಸುತ್ತೇವೆ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಅನಾದಿಕ್ರಮವಿಶಿಷ್ಟವಾದ ವೇದವಾಕ್ಯವನ್ನು ಈಶ್ವರನಿಂದ ಅಧ್ಯಯನವನ್ನು ಮಾಡುವ ಬ್ರಹ್ಮಾದಿದೇವತೆಗಳು ಅಧ್ಯಯನ ಕಾಲದಲ್ಲಿ ಅನುಭವಿಸಿ, ಪುನಃ ತಾವು ಅಧ್ಯಾಪನೆ ಮಾಡುವಾಗ ಅದನ್ನು ಸ್ಮರಣೆ ಮಾಡಿಕೊಂಡೇ ವೇದವನ್ನು ಉಚ್ಚಾರಣೆ ಮಾಡುತ್ತಾರೆ. ಪ್ರತಿಯೊಬ್ಬ ಅಧ್ಯಾಪಕನೂ ಆ ಕ್ರಮವನ್ನು ಪುನಃ ಪುನಃ ಸೃಷ್ಟಿಸುವುದಿಲ್ಲ ಎಂದು ಅಭಿಪ್ರಾಯ.

ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಮೇಯವನ್ನೇ ಸ್ಪಷ್ಟಪಡಿಸುತ್ತಾರೆ. ಪ್ರತಿಯೊಬ್ಬ ಉಪಾಧ್ಯಾಯರೂ ತಮಗೆ ಹೇಳಿದಾಗ, ಉಪಾಧ್ಯಾಯರು ಹೇಳಿದ ಕ್ರಮ ವಿಶಿಷ್ಟವಾದ ವರ್ಣಾತ್ಮಕವಾದ ವಾಕ್ಯಗಳನ್ನೇ ಪುನಃ ಪುನಃ ಉಚ್ಚರಿಸುತ್ತಾರೆ. ವರ್ಣಕ್ರಮಾತ್ಮಕವಾದ ವೇದವು ಯಾವುದಾದರೂ ರೀತಿಯಲ್ಲಿ ಕೃತಕ ಎಂದು ಹೇಳಿದರೆ ಉಪನಿಷತ್ತುಗಳಲ್ಲಿ ವೇದಕ್ಕೆ ಹೇಳಲ್ಪಡುವ ನಿತ್ಯತ್ವವು ಉಪಚರಿತ ಎಂದಾಗುವುದರಿಂದ 'ಅನಾದಿನಿತ್ಯಾ ಸಾತಚ್ಛ' ಎಂಬ ಶ್ರುತಿಯಲ್ಲಿ ಹೇಳಿದ ಬ್ರಹ್ಮಸಾಮ್ಯವು ವೇದಕ್ಕೆ ಕೂಡುವುದಿಲ್ಲ. ಆದ್ದರಿಂದ ಆದಿವಕ್ತೃವಾದ ನಾರಾಯಣನು ವೇದಕ್ಕೆ ದ್ರಷ್ಟಾರನೇ ಹೊರತು, ಕರ್ತಾರನಲ್ಲ. ಪುರಾಣಾದಿ ವಿಷಯಗಳಲ್ಲಿ ಮಾತ್ರ ಪುರಾಣನಿತ್ಯತ್ವದಲ್ಲಿ ಪ್ರಮಾಣವಿಲ್ಲದಿರುವುದರಿಂದ ನಾರಾಯಣನು ಕರ್ತಾರನೇ ಆಗುತ್ತಾನೆ ಎಂದು ಅಭಿಪ್ರಾಯ.

**ನಿಮಿತ್ತಬುದ್ಧೇರಜ್ಞಾನೇಪ್ಯಸ್ಯ ಜ್ಞಾನಂ ಚ ಶೋಭತೇ ।**
**ತಿರೋಹಿತಜಪಾಪುಷ್ಪಸನ್ನಿಧಾನೋತ್ಥರಕ್ತಿಮಾ ।**
**ಸ್ಫಟಿಕಾದೌ ನ ಕಿಂ ಸರ್ವೈಃ ಸ್ಫುಟಮೇವಾನುಭೂಯತೇ ॥ ೮೨ ॥**

**ಅರ್ಥ–** ನಿಮಿತ್ತಬುದ್ಧೇಃ ಅಜ್ಞಾನೇ ಅಪಿ = ವರ್ಣಕ್ರಮಕ್ಕೆ ನಿಮಿತ್ತವಾದ ಈಶ್ವರಬುದ್ಧಿಯ ಅಜ್ಞಾನವು ಇದ್ದರೂ ಸಹ, ಅಸ್ಯ=ಈ ವರ್ಣಕ್ರಮದ, ಜ್ಞಾನಂ ಚ = ಜ್ಞಾನವಾದರೂ, ಶೋಭತೇ= ಅತ್ಯಂತಯುಕ್ತವೇ ಆಗಿದೆ. ಯತಃ=ಯಾಕೆಂದರೆ, ತಿರೋಹಿತಜಪಾಪುಷ್ಪ ಸನ್ನಿಧಾನೋತ್ಥರಕ್ತಿಮಾ = ಮರೆಯಲ್ಲಿರುವ ಜಪಾಪುಷ್ಪದ ಸನ್ನಿಧಾನದಿಂದ ಉಂಟಾದ ರಕ್ತವರ್ಣವು, ಸ್ಫಟಿಕಾದೌ = ಸ್ಫಟಿಕ ಮೊದಲಾದ ಮಣಿಗಳಲ್ಲಿ, ಸರ್ವೈಃ = ಎಲ್ಲರಿಂದಲೂ, ನ ಅನುಭೂಯತೇ ಕಿಂ? = ಅನುಭವಿಸಲ್ಪಡುವುದಿಲ್ಲವೇನು? ಅನುಭವಿಸಲ್ಪಟ್ಟೇ ತೀರುವುದು, ಹಾಗೆಯೇ ಪ್ರಕೃತದಲ್ಲಿಯೂ ಕೂಡ.

**ಅನುವಾದ– ವರ್ಣಕ್ರಮಕ್ಕೆ ನಿಮಿತ್ತವಾದ ಈಶ್ವರಬುದ್ಧಿಯ ಜ್ಞಾನವಿಲ್ಲದಿದ್ದರೂ ವರ್ಣಗಳ ಕ್ರಮದ ಜ್ಞಾನವು ಉಪಪನ್ನವಾಗುತ್ತದೆ. ಜಪಾಕುಸುಮವು (ಕೆಂಪುದಾಸವಾಳದ ಹೂವು) ತಿರೋಹಿತವಾಗಿದ್ದರೂ ಅದರ ಸನ್ನಿಧಾನದಿಂದ ಉಂಟಾದ ಸ್ಫಟಿಕದ ರಕ್ತವರ್ಣವು ಎಲ್ಲರಿಂದಲೂ ಸ್ಪಷ್ಟವಾಗಿ ನೋಡಲ್ಪಡುತ್ತದೆಯೋ, ಅದರಂತೆ.**

**ಭಾವವಿಲಾಸಿನೀ–** ನನು ವೈದಿಕಕ್ರಮಸ್ಯೇಶಬುದ್ಧ್ಯುಪಾಧಿಕತ್ವೇ ಉಪಾಧಿಭೂತತದಜ್ಞಾನೇ ಏತದಜ್ಞಾನಮಪಿ ಸ್ಯಾದಿತ್ಯತ ಆಹ – ನಿಮಿತ್ತೇತಿ ॥ ಅಸ್ಯೇಶ್ವರಬುದ್ಧ್ಯುಪಾಧಿಕಕ್ರಮಸ್ಯೇತ್ಯರ್ಥಃ । ಉಪಾಧೇರಜ್ಞಾನೇ ಔಪಾಧಿಕಜ್ಞಾನಂ ಕುತ್ರ ದೃಷ್ಟಮ್? ಇತ್ಯತ ಆಹ – ತಿರೋಹಿತೇತಿ ॥ ತಿರೋಹಿತಮಿತ್ಯನೇನ ಜಪಾಕುಸುಮಾಜ್ಞಾನಂ ಸೂಚಯತಿ ॥ ೮೨ ॥

**ವಿವರಣೆ–** ವೇದದ ಕ್ರಮವು ಈಶ್ವರಬುದ್ಧಿಉಪಾಧಿಕವಾದರೆ ಈಶ್ವರಬುದ್ಧಿಯ ಜ್ಞಾನವು ನಮಗೆ ಆಗುವುದಿಲ್ಲವಾದ ಕಾರಣ, ತದುಪಾಧಿಕವಾದ ಕ್ರಮದ ಜ್ಞಾನವೂ ನಮಗೆ ಉಂಟಾಗಬಾರದು ಎಂಬ ಆಕ್ಷೇಪಕ್ಕೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. ಜಪಾಕುಸುಮದ ಜ್ಞಾನವಿಲ್ಲದಿದ್ದರೂ ಸ್ಫಟಿಕದ ರಕ್ತವರ್ಣದ ಜ್ಞಾನವುಂಟಾಗುತ್ತದೆ. ಜಪಾಕುಸುಮವು ಉಪಾಧಿ, ಸ್ಫಟಿಕದ ರಕ್ತವರ್ಣವು ಉಪಾಹಿತ. ಹಾಗೇ ಇಲ್ಲಿಯೂ ಸಹ ಉಪಾಧಿಯಾದ ಈಶ್ವರಜ್ಞಾನದ ಜ್ಞಾನವು ನಮಗಿಲ್ಲದಿದ್ದರೂ ತದುಪಾಧಿಕವಾದ ವರ್ಣಗಳ ಕ್ರಮದ ಜ್ಞಾನವು ನಮಗೆ ಉಂಟಾಗಬಹುದು ಎಂದು ಅಭಿಪ್ರಾಯ. 'ತಿರೋಹಿತ ಜಪಾಕುಸುಮ' ಎಂಬ ಶಬ್ದದಿಂದ ಜಪಾಕುಸುಮವು ಮರೆಯಾಗಿರುವುದರಿಂದ ಅದರ ಜ್ಞಾನವು ಇರುವುದಿಲ್ಲ ಎಂದು ಗ್ರಂಥಕಾರರು ಸೂಚಿಸುತ್ತಾರೆ.

ನ ಚೇತ್ಕಾವ್ಯಸ್ಯ ಕರ್ತಾರಃ ಸರ್ವೇಽಪಿ ಸ್ಯುರ್ಗೃಹೇ ಗೃಹೇ ॥ ೮೩ ॥

**ಅರ್ಥ–** ನ ಚೇತ್ = ಹಾಗಿಲ್ಲದಿದ್ದರೆ, ಗೃಹೇ ಗೃಹೇ = ಪ್ರತಿಯೊಂದು ಮನೆಯಲ್ಲಿಯೂ, ಸರ್ವೇಽಪಿ = ಕಾವ್ಯವನ್ನು ಉಚ್ಚರಿಸುವ ಎಲ್ಲರೂ ಕೂಡ, ಕರ್ತಾರಃ ಸ್ಯುಃ = ಆ ಕಾವ್ಯದ ಕರ್ತೃಗಳಾಗಬೇಕಾಗುತ್ತದೆ.

**ಅನುವಾದ–** ಇಲ್ಲದ್ದಿದರೆ ಮನೆಮನೆಗಳಲ್ಲಿಯೂ ಎಲ್ಲರೂ ಕಾವ್ಯದ ಕರ್ತೃಗಳೇ ಆಗಬೇಕಾದೀತು.

**ಭಾವವಿಲಾಸಿನೀ–** ಮೀಮಾಂಸಕರೀತ್ಯಾ ತೈಸ್ತೈರಧ್ಯಾಪಕೈಃ ಕ್ರಮಸ್ಯ ಕೃತತ್ವೇ ಬಾಧಕಮಾಹ – **ನಚೇದಿತಿ ॥** ಮಾಘಕಾರವತ್ ತತ್ಕಾವ್ಯಂ ಅನ್ಯೇಽಪಿ ಕಾವ್ಯಪಾಠಕಾ ಕುರ್ವಂತೀತಿ ಚೇತ್ತೇಽಪಿ ಮಾಘಕಾರಾಸ್ಸ್ಯುರಿತಿ ಭಾವಃ । ಏಕೇನ ಕೃತಂ ದೃಷ್ಟ್ವಾ ಕರ್ತಾ ನ ಕರ್ತೇತಿ ಚೇನ್ನ ಕುಲಾಲಪುತ್ರಸ್ಯ ಕುಂಭಕಾರತ್ವಾಭಾವಪ್ರಸಂಗಾತ್ । ಏವಮಧ್ಯಾಪಕಾನಾಂ ಸರ್ವೇಷಾಮಪಿ ವೇದಕ್ರಮ-ಕಾರಕತ್ವೇ ತೇಷಾಮಪಿ ವೇದಕಾರಕತ್ವಪ್ರಥಾ ಸ್ಯಾತ್ । ನಚ ಸಾಸ್ತಿ । ತಸ್ಮಾದಾದ್ಯಧ್ಯಾಪಕೋ ನಾರಾಯಣೋ ವಾ ಅವಾಂತರಾಧ್ಯಾಪಕಾ ಉಪಾಧ್ಯಾಯಾ ವಾ ನ ವೇದಕಾರಕಾ ಇತಿ ಭಾವಃ ॥ ೮೩ ॥

**ವಿವರಣೆ–** ಮೀಮಾಂಸಕರು ಎಲ್ಲಾ ಅಧ್ಯಾಪಕರಿಂದಲೂ ಕ್ರಮವು ಸೃಷ್ಟಿಸಲ್ಪಡುತ್ತದೆ ಎಂದು ಹೇಳುತ್ತಾರೆ. ಅದಕ್ಕೆ ಇಲ್ಲಿ ಬಾಧಕವನ್ನು ಹೇಳುತ್ತಾರೆ. ಕ್ರಮವಿಶಿಷ್ಟ ವರ್ಣವೇ ಕಾವ್ಯವೂ ಸಹ. ಮೂಲಕಾರನಾದ ಮಾಘನು ಆ ಕ್ರಮವನ್ನು ಸೃಷ್ಟಿಮಾಡಿದಂತೆ ಕಾವ್ಯವನ್ನು ಪಠಿಸುವ ಪ್ರತಿಯೊಬ್ಬನೂ ಕಾವ್ಯವನ್ನು ಸೃಷ್ಟಿಸುತ್ತಾನೆ ಎಂದು ಅಂಗೀಕಾರ ಮಾಡಿದರೆ ಮಾಘನಂತೆ ಎಲ್ಲರೂ ಕಾವ್ಯಕರ್ತೃಗಳೇ ಆಗಬೇಕಾದ ಪ್ರಸಂಗವು ಬರುತ್ತದೆ. ಒಬ್ಬನು ಮಾಡಿದ ಸೃಷ್ಟಿಯನ್ನು ನೋಡಿ, ಇನ್ನೊಬ್ಬನು ಹಾಗೇ ಮಾಡಿದರೆ ಅವನು ಅದರ ಕರ್ತೃವಾಗುವುದಿಲ್ಲ ಎಂದು ಶಂಕಿಸಬಾರದು. ತಂದೆಯು ಮಾಡಿದ ಮಡಿಕೆಯನ್ನು ನೋಡಿ, ಕುಂಬಾರನ ಮಗನು ಒಂದು ಮಡಿಕೆಯನ್ನು ಮಾಡಿದರೆ ಕುಂಬಾರನ ಮಗನಿಗೆ ಘಟಕರ್ತೃತ್ವವು ಬರದೇ ಹೋಗಬೇಕಾಗುತ್ತದೆ. ಆದ್ದರಿಂದ ಎಲ್ಲಾ ಅಧ್ಯಾಪಕರೂ ವೇದಕ್ರಮವನ್ನು ಸೃಷ್ಟಿಮಾಡುವವರೇ ಆದರೆ, ಎಲ್ಲರೂ ವೇದಕರ್ತೃಗಳು ಎಂಬ ಪ್ರಸಿದ್ಧಿಯು ಇರಬೇಕಾಗಿದ್ದಿತು. ಅಂತಹ ಪ್ರಸಿದ್ಧಿಯಿಲ್ಲ. ಆದ್ದರಿಂದ ಆದ್ಯಾಧ್ಯಪಕನಾದ ನಾರಾಯಣನಾಗಲೀ, ಅನಂತರದ ಅಧ್ಯಾಪಕರಾದ ಬ್ರಹ್ಮಾದಿಗಳಾಗಲೀ, ಯಾರೂ ವೇದವನ್ನು ಮಾಡುವುದಿಲ್ಲ, ವೇದಕರ್ತಾರರಲ್ಲ, ವೇದವಕ್ತಾರರು ಮಾತ್ರ ಎಂದು ಸಿದ್ಧವಾಗುತ್ತದೆ.

ದ್ವಿಕರ್ತೃಕತ್ವಾತ್ಕಾವ್ಯಸ್ಯಾಪ್ಯಸ್ತೀಶ್ವರಮತೌ ಸ್ಥಿತಿಃ ।
ಯಾವತ್ ಪ್ರಚಾರಂ ಪಶ್ಚಾತ್ಸ ಬುದ್ಧಿಂ ತತ್ರ ವ್ಯನಕ್ತಿ ನ ।
ತದುತ್ಪನ್ನಮನಿತ್ಯಂ ಚ ಪೌರುಷೇಯಂ ವಚೋಽಖಿಲಮ್ ॥ ೮೪ ॥

**ಅರ್ಥ–** ಕಾವ್ಯಸ್ಯ=ಮಾಘಾದಿಕಾವ್ಯಕ್ಕೆ, ದ್ವಿಕರ್ತೃಕತ್ವಾತ್ = ಈಶ್ವರ ಮತ್ತು ಮಾಘ ಇಬ್ಬರೂ ಕರ್ತೃಗಳಾದ್ದರಿಂದ, ಯಾವತ್ ಪ್ರಚಾರಂ = ಆ ಕಾವ್ಯದ ಪ್ರಚಾರವಿರುವವರೆಗೆ, ಈಶ್ವರಮತೌ = ಈಶ್ವರ ಬುದ್ಧಿಯಲ್ಲಿ, ಸ್ಥಿತಿಃ ಅಸ್ತಿ = ಸ್ಥಿತಿ ಇರುತ್ತದೆ, ಪಶ್ಚಾತ್ = ಆ ಕಾವ್ಯದ ಪ್ರಚಾರವು ನಿಂತ ಮೇಲೆ, ಸಃ = ಈಶ್ವರನು, ತತ್ರ = ಆ ಕಾವ್ಯದ ವಿಷಯದಲ್ಲಿನ, ಬುದ್ಧಿಂ = ತನ್ನ ಬುದ್ಧಿಯನ್ನು, ನ ವ್ಯನಕ್ತಿ = ಅಭಿವ್ಯಕ್ತಿಗೊಳಿಸುವುದಿಲ್ಲ. ತದ್ = ಆದ್ದರಿಂದ, ಉತ್ಪನ್ನಂ = ಉತ್ಪನ್ನವಾದ, ಅಖಿಲಂ = ಎಲ್ಲಾ, ಪೌರುಷೇಯಂ ವಚಃ = ಪೌರುಷೇಯ ವಾಕ್ಯವು, ಅನಿತ್ಯಂ = ಅನಿತ್ಯವಾದುದು.

**ಅನುವಾದ–** ಕಾವ್ಯವೂ ಸಹ ದ್ವಿಕರ್ತೃವಾದುದರಿಂದ ಈಶ್ವರಬುದ್ಧಿಯಲ್ಲಿ ಆ ಕ್ರಮದ ಸ್ಥಿತಿಯೂ ಸಹ ಆ ಕಾವ್ಯವು ಪ್ರಚಾರದಲ್ಲಿರುವವರೆಗೆ ಇರುತ್ತದೆ. ಕಾವ್ಯದ ಪ್ರಚಾರ ಮುಗಿದ ಮೇಲೆ ಈಶ್ವರನು ತನ್ನ ಬುದ್ಧಿಯಲ್ಲಿರುವ ಆ ಕ್ರಮವನ್ನು ಅಭಿವ್ಯಕ್ತಿಗೊಳಿಸುವುದಿಲ್ಲ. ಆದ್ದರಿಂದ ಪೌರುಷೇಯ ವಾಕ್ಯವೆಲ್ಲವೂ ಉತ್ಪನ್ನವಾದುದು ಮತ್ತು ಅನಿತ್ಯವಾದುದು.

**ಭಾವವಿಲಾಸಿನೀ–** ನನು ಮಾಘಕಾವ್ಯಸ್ಯ ಮಾಘಕೃದ್ಬುದ್ಧಿನಿಮಿತ್ತಕತ್ವೇ ಏತದ್ಬುದ್ಧೇರೀಶ್ವರಬುದ್ಧಿವನ್ನಿತ್ಯತ್ವಾಭಾವಾತ್ ತ್ರಿಕ್ಷಣಾವಸ್ಥಾಯಿತ್ವೇನ ತದುಪಾಧಿಕಕಾವ್ಯಸ್ಯಾಶುತರವಿನಾಶಿತ್ವಂ ಸ್ಯಾದಿತ್ಯತ ಆಹ – **ದ್ವಿಕರ್ತೃಕತ್ವಾದಿತಿ** ॥ ಘಟಾದಿವದ್ದ್ವಿಕರ್ತೃಕತ್ವಾದಿತ್ಯರ್ಥಃ । **ಯಾವತ್** ಪ್ರಚಾರಮೀಶ್ವರಮತೌ ಸ್ಥಿತಿರಿತಿ ಸಂಬಂಧಃ । ತತ್ರ ತತ್ಪ್ರಚಾರವಿಷಯೇ । ವಚೋಽಖಿಲಂ ಕಾವ್ಯಾದಿಕಮ್ ॥ ೮೪ ॥

**ವಿವರಣೆ–** ಮಾಘಕಾವ್ಯದಲ್ಲಿ ಮಾಘಕವಿಯ ಬುದ್ಧಿಯ ಉಪಾಧಿನಿಮಿತ್ತವಾದ ಕ್ರಮವಿದ್ದರೂ ಮಾಘಕವಿಯ ಬುದ್ಧಿಯು ಈಶ್ವರಬುದ್ಧಿಯಂತೆ ನಿತ್ಯವಲ್ಲದ ಕಾರಣ ಕೇವಲ ತ್ರಿಕ್ಷಣಾವಸ್ಥಾಯಿಯಾದ ಕಾರಣ ಮಾಘಕಾವ್ಯಕ್ಕೆ ಆಶುತರ ವಿನಾಶ ಉಂಟಾಗಬೇಕಾಗುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಮಾಘಕಾವ್ಯದ ಕ್ರಮವು ಹೇಗೆ ಮಾಘಕವಿಯ ಬದ್ಧ್ಯುಪಾಧಿಕ ಕ್ರಮದಿಂದ ಕೂಡಿದೆಯೋ, ಹಾಗೆಯೇ ಈಶ್ವರಬುದ್ಧ್ಯುಪಾಧಿಕ ಕ್ರಮದಿಂದಲೂ ಕೂಡಿದೆ. ಏಕೆಂದರೆ ಎಲ್ಲ ಕಾರ್ಯಗಳಿಗೂ ಈಶ್ವರನು ಕರ್ತೃವಾಗಿದ್ದಾನೆ. ಕಾವ್ಯದ ಪ್ರಚಾರವಿರುವವರೆಗೆ ಈಶ್ವರನು ತನ್ನ ಬುದ್ಧಿಯಲ್ಲಿರುವ ಆ ಕ್ರಮವನ್ನು ಅಭಿವ್ಯಕ್ತಿಗೊಳಿಸುತ್ತಾನೆ. ಅನಂತರ ತನ್ನ ಬುದ್ಧಿಯಲ್ಲಿ ಆ ಕ್ರಮವಿದ್ದರೂ ಅದನ್ನು ಅಭಿವ್ಯಕ್ತಿಗೊಳಿಸುವುದಿಲ್ಲ. ಆದ್ದರಿಂದ ಪೌರುಷೇಯ ವಾಕ್ಯವೆಲ್ಲವೂ ಉತ್ಪತ್ತಿನಾಶವುಳ್ಳದ್ದು ಎಂದು ಸಿದ್ಧವಾಗುತ್ತದೆ.

**ಪುರಾಣಾದ್ಯಾ ತ್ವನಿತ್ಯಾ ವಾಗ್ಯದುತ್ಪತ್ತೇರನಂತರಮ್ ।**
**ವ್ಯಕ್ತ್ಯೈವ ತತ್ರ ತದ್ಬುದ್ಧಿರ್ಯತೋ ಮಾನಾನುಸಾರತಃ ॥ ೮೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಮಾನಾನುಸಾರತಃ= ಪ್ರಮಾಣಾನುಸಾರವಾಗಿ ಯದುತ್ಪತ್ತೇಃ= ಯಾವ ಪುರಾಣಾದಿಗಳ ಉತ್ಪತ್ತಿಯ, ಅನಂತರಂ= ಬಳಿಕ, ತತ್ರ= ಆ ಪುರಾಣಾದಿಗಳ ಪ್ರಚಾರಕ್ಕೆ ಸಂಬಂಧಿಸಿದಂತೆ, ತದ್ಬುದ್ಧಿಃ= ಆ ಪರಮಾತ್ಮನ ಬುದ್ಧಿಯು, ವ್ಯಕ್ತಾ ಏವ= ವ್ಯಕ್ತವಾಗಿಯೇ ಇರುವುದೋ, ತತಃ= ಆ ಕಾರಣದಿಂದ, ಪುರಾಣಾದ್ಯಾತು= ಪುರಾಣ ಮೊದಲಾದದ್ದಾದರೂ, ಅನಿತ್ಯಾವಾಕ್= ಅನಿತ್ಯಗ್ರಂಥ (ಪೌರುಷೇಯ ಗ್ರಂಥ)ವಾಗಿದೆ.

**ಅನುವಾದ–** ಪುರಾಣಗಳಿಗೆ ನಾಶವಿಲ್ಲದಿದ್ದರೂ ಉತ್ಪತ್ತಿಯಿರುವ ಕಾರಣದಿಂದ ಅನಿತ್ಯವೆಂದು ಕರೆಸಿಕೊಳ್ಳುತ್ತವೆ. ಉತ್ಪತ್ತಿಯ ಅನಂತರ ಈಶ್ವರಬುದ್ಧಿಯು ಅಲ್ಲಿ ವ್ಯಕ್ತವಾಗಿಯೇ ಇರುತ್ತದೆ.

**ಭಾವವಿಲಾಸಿನೀ–** ಅನಿತ್ಯಾ । ನಾಶಶೂನ್ಯತ್ವೇಽಪ್ಯುತ್ಪತ್ತಿಮಾತ್ರವತ್ತ್ವೇನಾನಿತ್ಯಾ । ಏತದ್ವಿಶೇಷ-ದ್ಯೋತನಾಯ ತುಶಬ್ದಃ । ಯದ್ ಯಸ್ಮಾತ್ತತ್ರೋತ್ಪನ್ನಕ್ರಮವಿಶಿಷ್ಟಪುರಾಣಭಾರತಪಂಚರಾತ್ರಾದಿ ಭಗವತ್ಕೃತಗ್ರಂಥ ಪ್ರಚಾರವಿಷಯೇ । ತದ್ಬುದ್ಧಿರೀಶ್ವರಬುದ್ಧಿಃ। ಮಾನಾನುಸಾರತಃ 'ಪುರಾಣಾನಿ ತದರ್ಥಾನಿ ಸರ್ಗೇಸರ್ಗೇಽನ್ಯಥೈವತು । ಕ್ರಿಯಂತೇಽತಸ್ತ್ವನಿತ್ಯಾನಿ' ಇತ್ಯಾದಿಮಾನಾನು-ಸಾರಾತ್ ॥ ೮೫ ॥

**ವಿವರಣೆ–** ಪುರಾಣಗಳಿಗೆ ನಾಶವಿಲ್ಲದಿದ್ದರೂ ಉತ್ಪತ್ತಿಯಿರುವ ಕಾರಣ ಅನಿತ್ಯ ಎಂಬ ವಿಶೇಷಣವನ್ನು ಸೂಚಿಸುವುದಕ್ಕಾಗಿ ವಾದಿರಾಜರು ತುಶಬ್ದವನ್ನು ಪ್ರಯೋಗ ಮಾಡಿದ್ದಾರೆ. ಈಶ್ವರಬುದ್ಧಿಯು ಭಾರದ ಪಂಚರಾತ್ರ ಮೊದಲಾದವುಗಳು ಪ್ರಚಾರವಾಗುವವರೆಗೆ ವ್ಯಕ್ತವಾಗಿಯೇ ಇರುತ್ತದೆ. ಏಕೆಂದರೆ ಈ ಕಲ್ಪನೆಯು 'ಪುರಾಣಾನಿ ತದರ್ಥಾನಿ ಸರ್ಗೇಸರ್ಗೇಽನ್ಯಥೈವತು ಕ್ರಿಯಂತೇಽಕಸ್ತ್ವ ನಿತ್ಯಾನಿ' ಎಂಬ ಪ್ರಮಾಣಕ್ಕೆ ಅನುಸಾರವಾಗಿವೆ.

**ಸ್ವತಂತ್ರೇಚ್ಛೋಽಪಿ ಭಗವಾನ್ ಮಾನೇಽಸೌ ಮಾನವಾನ್ ಕಿಲ ।**
**ಉಕ್ತವ್ಯವಸ್ಥಾ ತತ್ಸುಸ್ಥಾ ಕರ್ತಾ ವಕ್ತಾ ತತಃ ಪೃಥಕ್ ॥ ೮೬ ॥**

**ಅರ್ಥ–** ಭಗವಾನ್ = ಪರಮಾತ್ಮನು, ಸ್ವತಂತ್ರೇಚ್ಛೋಽಪಿ = ಸ್ವತಂತ್ರವಾದ ಇಚ್ಛೆಯುಳ್ಳವನಾದರೂ, ಅಸೌ = ಅವನು, ಮಾನೇ = ಪ್ರಮಾಣದಲ್ಲಿ, ಮಾನವಾನ್ ಕಿಲ = ಗೌರವವುಳ್ಳವನಷ್ಟೇ, ತತ್ = ಆದ್ದರಿಂದ ಉಕ್ತವ್ಯವಸ್ಥಾ = ನಾವು ಹೇಳಿದ ನಿತ್ಯಾನಿತ್ಯವ್ಯವಸ್ಥೆಯು, ಸುಸ್ಥಾ = ಸುಭದ್ರವಾಗಿದೆ. ತತಃ = ಆ ಕಾರಣದಿಂದ, ಕರ್ತಾ = ರಚಿಸುವವನೂ, ವಕ್ತಾ = ಉಚ್ಚರಿಸುವವನೂ, ಪೃಥಕ್ = ಭಿನ್ನರಾಗಿರುತ್ತಾರೆ.

**ಅನುವಾದ–** ಈಶ್ವರನು ಸ್ವತಂತ್ರೇಚ್ಛನಾದರೂ ಪ್ರಮಾಣದಲ್ಲಿ ಗೌರವವುಳ್ಳವನಾದ್ದರಿಂದ ಈ ರೀತಿಯಲ್ಲಿ ಮಾಡುತ್ತಾನೆ. ಆದ್ದರಿಂದ ನಾವು ಹೇಳಿದ ವ್ಯವಸ್ಥೆಯು ಸುಭದ್ರವಾಗಿದೆ. ಕರ್ತೃವು ಮತ್ತು ವಕ್ತೃವು ಬೇರೆ ಬೇರೆಯಾದವು.

**ಭಾವವಿಲಾಸಿನೀ**– ನನು ಸ್ವತಂತ್ರಸ್ಯ ಕಿಮರ್ಥಂ ಮಾನಾನುಸರಣಮಿತ್ಯತ ಆಹ –**ಸ್ವತಂತ್ರೇಚ್ಛೋಽಪೀತಿ** ॥ ಮಾನೇ ಪ್ರಮಾಣೇ । ಕರ್ತಾ ಪ್ರಾಗವಿದ್ಯಮಾನಸ್ಯ ಗ್ರಂಥಸ್ಯೋತ್ಪಾದಕಃ । ವಕ್ತಾ ವಿದ್ಯಮಾನಸ್ಯ ಗ್ರಂಥಸ್ಯೈವೋಚ್ಚಾರಯಿತಾ । ಅತ ಏವ ಪುರಾಣಾದೇಃ ಕರ್ತಾ । ವೇದಸ್ಯ ವಕ್ತೇತಿ ವಿಭಜ್ಯ ಪ್ರಸಿದ್ಧಿಃ ॥ ೮೬ ॥

**ವಿವರಣೆ**– ಸ್ವತಂತ್ರನಾದ ಈಶ್ವರನು ಏಕೆ ಪ್ರಮಾಣವನ್ನು ಅನುಸರಿಸುತ್ತಾನೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಈಶ್ವರನು ಪ್ರಮಾಣದಲ್ಲಿ ಮರ್ಯಾದೆಯುಳ್ಳವನು. ವೇದವನ್ನು ಅವನು ಮಾನ್ಯಮಾಡುತ್ತಾನೆ. ಆದ್ದರಿಂದ ಪುರಾಣಗಳು ಅನಿತ್ಯ ಮತ್ತು ವೇದವು ನಿತ್ಯ ಎಂದು ಹೇಳುವ ಪ್ರಮಾಣವಿರುವುದರಿಂದ ಈ ವ್ಯವಸ್ಥೆಯನ್ನು ಅಂಗೀಕರಿಸಬೇಕು. ಈಶ್ವರನು ವೇದಗಳ ವಕ್ತಾ, ಪುರಾಣಗಳ ಕರ್ತಾ ಎಂದು ಹೇಳುವ ವಾಕ್ಯಗಳು ಆಗ ಮಾತ್ರ ಉಪಪನ್ನವಾಗುತ್ತವೆ. ಆದುದರಿಂದ ಮೊದಲು ಇಲ್ಲದಿರುವ ಗ್ರಂಥವನ್ನು ಉತ್ಪಾದನೆ ಮಾಡುವವನು ಕರ್ತಾ. ವಿದ್ಯಮಾನವಾದ ಗ್ರಂಥವನ್ನೇ ಪುನಃ ಉಚ್ಚಾರಮಾಡುವವನು ವಕ್ತಾ ಎಂದು ಹೇಳಿದಾಗ ಕರ್ತೃ ಮತ್ತು ವಕ್ತೃಗಳ ಬೇಧವು ಸಿದ್ಧವಾಗುತ್ತದೆ.

**ತದೇವೇದಂ ವಾಕ್ಯಮಿತಿ ಪ್ರತ್ಯಭಿಜ್ಞಾಂ ಪ್ರಮಾಣಯನ್ ।**
**ಆಚಾರ್ಯೋಽಪೀಮಮೇವಾರ್ಥಮಭಿಪ್ರೈತಿ ನ ಸಂಶಯಃ ॥ ೮೭ ॥**

**ಅರ್ಥ**– ತದೇವ ಇದಂ ವಾಕ್ಯಂ ಇತಿ = ಆ ವಾಕ್ಯವೇ ಈ ವಾಕ್ಯ ಎಂಬ, ಪ್ರತ್ಯಭಿಜ್ಞಾಂ = ಪ್ರತ್ಯಭಿಜ್ಞಾನವನ್ನು, ಪ್ರಮಾಣಯನ್ = ಪ್ರಮಾಣವನ್ನಾಗಿಸುತ್ತಾ, ಆಚಾರ್ಯೋಽಪಿ = ಮಧ್ವಾಚಾರ್ಯರೂ ಕೂಡ, ಇಮಮೇವಾರ್ಥಂ = ಇದೇ ಅರ್ಥವನ್ನೇ, ಅಭಿಪ್ರೈತಿ = ಅಭಿಪ್ರಾಯಪಡುತ್ತಾರೆ. ನ ಸಂಶಯಃ = ಈ ವಿಷಯದಲ್ಲಿ ಸಂಶಯವಿಲ್ಲ.

**ಅನುವಾದ**– ವೇದದ ನಿತ್ಯತ್ವದ ವಿಷಯದಲ್ಲಿ ಆಚಾರ್ಯರು 'ತದೇವೇದಂ ವಾಕ್ಯಮ್' ಎಂಬ ಪ್ರತ್ಯಭಿಜ್ಞಾನವನ್ನು ಹೇಳಿ ಇದೇ ಅರ್ಥವನ್ನು ಸೂಚಿಸಿದ್ದಾರೆ. ಈ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ**– ನನ್ವೇವಂ ವೇದಕ್ರಮನಿತ್ಯತ್ವಂ ಮೂಲೇ ಶಾಸ್ತ್ರೇ ಕುತ್ರಾಪಿ ನೋಕ್ತಮಿತ್ಯತ ಆಹ –**ತದೇವೇದಮಿತಿ** ॥ ತದೇವೇದಂ ವಾಕ್ಯಮಿತಿ ಪ್ರತ್ಯಭಿಜ್ಞಾಂ ಪ್ರಮಾಣಯದಾಚಾರ್ಯವಾಕ್ಯಾತ್ಸಿದ್ಧಮಿತಿ ಭಾವಃ । ಉಪಲಕ್ಷಣಂ ಚೈತತ್ । 'ನಿತ್ಯಾ ವೇದಾಃ ಪುರಾಣಾದ್ಯಾಃ ಕಾಲಃ ಪ್ರಕೃತಿರೇವ ಚ । ನಿತ್ಯಾನಿತ್ಯಂ ತ್ರಿಧಾ ಪ್ರೋಕ್ತಮನಿತ್ಯಂ ದ್ವಿವಿಧಂ ಮತಮ್ ॥ ' ಇತಿ ತತ್ತ್ವಸಙ್ಖ್ಯಾನೇ ವೇದಸ್ಯ ನಿತ್ಯತ್ವಕಥನಾತ್ । ತಟ್ಟೀಕಾಯಾಂ ಚ 'ಅತ್ರ ನಿತ್ಯತ್ವಂ ನಾಮ ಕೂಟಸ್ಥತಯಾದ್ಯಂತಶೂನ್ಯತ್ವಮ್ । ತಚ್ಚ ವೇದಾನಾಂ 'ನಿತ್ಯಾ ವೇದಾಃ ಸಮಸ್ತಾಶ್ಚ' ಇತ್ಯಾದಿಪ್ರಮಾಣಸಿದ್ಧಮ್' ಇತಿ ನಿತ್ಯತ್ವಸ್ಯ ವಿವೃತತ್ವಾದ್ ವೇದಕ್ರಮಸ್ಯಾಕೃತಕತ್ವಸಿದ್ಧೇಃ । ಅತ್ರ

ವೇದಪದಸ್ಯ ವೇದ ಏವಾರ್ಥಃ । ನತು ಕೇವಲೋ ವರ್ಣಃ । ಅನ್ಯಥಾ ಉದಾಹೃತಪ್ರಮಾಣಸ್ಯ ವೈಯಧಿಕರಣ್ಯಪ್ರಸಂಗಾತ್ । ತತ್ವಸಙ್ಖ್ಯಾನಾಯ ಪ್ರವೃತ್ತೇನ ವೇದಾಖ್ಯತತ್ವಸ್ಯಾಪರಿಗಣನಪ್ರಸಂಗಾಚ್ಚ ನ ಕುಚೋದ್ಯಾವಕಾಶಃ । ನಚ ವರ್ಣಪದಾದೀನಾಮನಿತ್ಯತ್ವಂ ವಕ್ತುಂ ಯುಕ್ತಮ್ । ಸರ್ವಜ್ಞತ್ವಾದೀಶ್ವರಸ್ಯ ತದ್ಬುದ್ಧೌ ಸರ್ವದಾ ಪ್ರತೀಯಮಾನತ್ವಾದಿತಿ ವಿಷ್ಣುತತ್ವನಿರ್ಣಯೇ ತಟ್ಟೀಕಾಯಾಂ ಚ । ನನ್ವೀಶ್ವರಬುದ್ಧೌ ಸರ್ವದಾ ಪ್ರತೀಯಮಾನತ್ವಂ ನಾಮ ಈಶ್ವರೇಣ ಸರ್ವದಾ ವರ್ತಮಾನತಯಾಽನುಭೂಯಮಾನತ್ವಂ ವಿವಕ್ಷಿತಮ್। ತಸ್ಯೈವೋಕ್ತಾರ್ಥಸಾಧಕಾದಿತಿ ವರ್ತಮಾನತ್ವೇ ವಿಶೇಷಣದಾನೇನಾನುಭೂಯಮಾನತ್ವಕಥನೇನ ಚ ವೇದಸ್ಯಾನಾದ್ಯಂತಕಾಲೇ ಈಶ್ವರಬುದ್ಧೌ ವರ್ತಮಾನತಯಾನುಮಾನಕಥನಾನ್ನ ಮಧ್ಯೇಮಧ್ಯೇ ಸೃಷ್ಟಿರಿತಿ ಸಿದ್ಧ್ಯತಿ। ಪೂರ್ವಕಲ್ಪ ಏವ ಯೇ ಸ್ಥಿತಾಃ ಏತ ಏವ ಸರ್ಗೇಸರ್ಗೇಽಮುನೋದ್ದೀಯಂತ ಇತ್ಯುಕ್ತಪ್ರತ್ಯಭಿಜ್ಞಾವಿರೋಧಃ ಸ್ಯಾದಿತ್ಯರ್ಥ ಇತಿ ಟೀಕಾಗತ ವಾಕ್ಯಾಂತರೇಣ ಚ ಪೂರ್ವಕಲ್ಪಸ್ಥಿತಾನಾಮೇವ ವೇದಾನಾಂ ಸರ್ಗೇಸರ್ಗೇ ಉದ್ಗಿರಣಾಭಿಧಾನಾನ್ನ ಸರ್ಗಾದಾವುತ್ಪಾದಃ ಪ್ರಾಗಭಾವಾಭಾವಾತ್ । ಉಪಲಕ್ಷಣಂ ಚೈತತ್ । (ಅನ್ಯ) ಜನ್ಮವಾಕ್ಯಗತಿಕಥನವಿರೋಧಾಚ್ಚೇತ್ಯಪಿ ದ್ರಷ್ಟವ್ಯಮಿತಿ ವಾಕ್ಯಾಂತರೇಣ ಜನ್ಮಾಭಾವಸ್ಯ ಸ್ಪಷ್ಟಮುಕ್ತತ್ವಾಚ್ಚ । ಅತಃ ಪುರಾಣಕೃತಾ ವಿಷ್ಣುಬುದ್ಧಿಗಾ ಇತೀಶ್ವರೇಣ ಸರ್ವದಾ ವರ್ತಮಾನತಯಾಽನುಭೂಯಮಾನತ್ವಮುಕ್ತಮಿತಿ ವಾಕ್ಯೇನಾತೋ ವೇದಾಸ್ಸರ್ವದೇಶ್ವರೇಣ ವರ್ತಮಾನತಯಾಽನುಭೂಯಂತ ಇತಿ ಸಿದ್ಧ್ಯತೀತಿ ವಾಕ್ಯಾಂತರಾಚ್ಚೋಕ್ತಾರ್ಥಸಿದ್ಧಿಃ । ಗಾಯತ್ರ್ಯಾ ವೇದವಿಶೇಷತ್ವೇನ ನಿತ್ಯತ್ವಾತ್। ನಿತ್ಯಸ್ಯ ಚ ತದಧೀನತ್ವಾಯೋಗಾತ್ । ನಚ ನಿತ್ಯತ್ವಸ್ಯ ತದಧೀನತ್ವಾಯೋಗಃ । 'ಸ್ವಭಾವಜೀವಕರ್ಮಾಣಿ ದ್ರವ್ಯಂ ಕಾಲಃ ಶ್ರುತಿಃ ಕ್ರಿಯಾ । ಯತ್ಪ್ರಸಾದಾದಿಮೇ ಸನ್ತಿ ನ ಸನ್ತಿ ಯದುಪೇಕ್ಷಯಾ ॥ ' ಇತಿ ನಿತ್ಯಾನಾಮಪಿ ಭಗವದಧೀನತ್ವಸ್ಯ ಶ್ರೌತತ್ವಾದಿತಿ ಗಾಯತ್ರ್ಯಧಿಕರಣವಾಕ್ಯೇನ ವೇದಾನುತ್ಪಾದಸ್ಸಿದ್ಧ್ಯತಿ। ತತ್ರ ಯಥಾ ಶ್ರುತೀನಾಮನಾದಿತ್ವಾತ್ಕರಣದೋಷಾಭಾವಸ್ತಥಾ ಸಮಯಾನಾಮಪಿ । ಸ್ವರೂಪಾನಾದಿತ್ವಂ ಪ್ರವಾಹಾನಾದಿತ್ವಮಿತಿ ತು ವೈಷಮ್ಯಮಾತ್ರಮಿತ್ಯಾದಿ ಸುಧಾವಾಕ್ಯೈಶ್ಚ ಸ್ಪಷ್ಟಶ್ರುತೀನಾಂ ಸ್ವರೂಪಾನಾದಿತ್ವಮುಕ್ತಮಿತಿ ದ್ರಷ್ಟವ್ಯಮ್ । ಉಕ್ತನಿರವಕಾಶ ಬಹುತರವಾಕ್ಯವಿರೋಧಾತ್ ಕ್ರಮಸ್ಯ ಕೃತಕತ್ವೇಽಪೀತ್ಯಾದಿ ಕ್ವಾಚಿತ್ಕಟೀಕಾಕಾರವಚನಂ ಮೀಮಾಂಸಕರೀತಿಮನುಸೃತ್ಯ ವಾ ಅಭ್ಯುಪಗಮವಾದೇನ ವಾ ಪ್ರವೃತ್ತಮಿತಿ ಜ್ಞಾತವ್ಯಮ್ ॥ ೮೭ ॥

**ವಿವರಣೆ–** ವೇದಕ್ರಮ ನಿತ್ಯತ್ವವನ್ನು ಮೂಲಶಾಸ್ತ್ರದಲ್ಲಿ ಎಂದೂ ಹೇಳಿಲ್ಲ ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರವನ್ನು ನೀಡುತ್ತಾರೆ. ವಿಷ್ಣುತತ್ವನಿರ್ಣಯದಲ್ಲಿ 'ತದೇವೇದಂ ವಾಕ್ಯಮ್' ಎಂಬ ವಾಕ್ಯವನ್ನು ಆಚಾರ್ಯರು ಉದಾಹರಿಸಿದ್ದಾರೆ. ಇದು ವೇದ ವಾಕ್ಯಕ್ಕೆ ನಿತ್ಯತ್ವವನ್ನು ಹೇಳುವ ಅಭಿಪ್ರಾಯವುಳ್ಳದ್ದಾಗಿದೆ. ಇಷ್ಟೇ ಅಲ್ಲದೇ ತತ್ವಸಂಖ್ಯಾನದಲ್ಲಿ 'ನಿತ್ಯಾವೇದಾಃ ಪುರಾಣಾದ್ಯಾಃ ಕಾಲಃ ಪ್ರಕೃತಿರೇವ ಚ । ನಿತ್ಯಾನಿತ್ಯಂ ತ್ರಿಧಾ ಪ್ರೋಕ್ತಂ ಅನಿತ್ಯಂ ದ್ವಿವಿಧಂ ಮತಂ' ಎಂದು ಹೇಳಿ ವೇದಗಳಿಗೆ ನಿತ್ಯತ್ವವನ್ನು ಹೇಳಿದ್ದಾರೆ. ಅಲ್ಲಿ

ಟೀಕಾಚಾರ್ಯರೂ ಸಹ 'ನಿತ್ಯತ್ವ' ಎಂದರೆ ಅವ್ಯಾಕೃತಾಕಾಶದಂತೆ ಆದ್ಯಂತ ಶೂನ್ಯತ್ವ ನಿತ್ಯಾವೇದಾಸಮಸ್ತಾಶ್ಚ ಎಂಬ ಪ್ರಮಾಣದಿಂದ ವೇದಗಳಿಗೆ ಅಂತಹ ನಿತ್ಯತ್ವವು ಸಿದ್ಧವಾಗುತ್ತದೆ' ಎಂದು ವಿವರಣೆ ಮಾಡಿರುವುದರಿಂದ ಕ್ರಮವು ಕೃತಕವಲ್ಲವೆಂದು ಸಿದ್ಧವಾಗುತ್ತದೆ. ಇಲ್ಲಿ ವೇದ ಎಂಬ ಪದಕ್ಕೆ ವೇದ ಎಂದೇ ಅರ್ಥ. ವರ್ಣವೆಂದು ಅರ್ಥವಲ್ಲ. ವರ್ಣವೆಂದು ಅರ್ಥ ಮಾಡಿದರೆ ವೇದದ ನಿತ್ಯತ್ವವನ್ನು ಹೇಳುವ ಪ್ರಮಾಣಗಳು ಅಸಂಗತವಾಗುತ್ತವೆ. ಅಷ್ಟೇ ಅಲ್ಲದೆ ತತ್ತ್ವಸಂಖ್ಯಾನವನ್ನು ಮಾಡಲು ಹೊರಟ ಆಚಾರ್ಯರು ವೇದವೆಂಬ ಮುಖ್ಯವಾದ ತತ್ವವನ್ನೇ ಪರಿಗಣನೆ ಮಾಡಿಲ್ಲವೆಂಬ ಕುಚೋದ್ಯಕ್ಕೂ ಅವಕಾಶವಾಗುತ್ತದೆ. ಅಷ್ಟೇ ಅಲ್ಲದೇ ವಿಷ್ಣುತತ್ತ್ವನಿರ್ಣಯದಲ್ಲಿ 'ವರ್ಣಪದಾದಿಗಳಿಗೆ ಅನಿತ್ಯತ್ವವನ್ನು ಹೇಳುವುದು ಯುಕ್ತವಲ್ಲ. ಏಕೆಂದರೆ ಸರ್ವಜ್ಞನಾದ ಈಶ್ವರನಬುದ್ಧಿಯಲ್ಲಿ ಅವು ಸರ್ವದಾ ಪ್ರತೀಯಮಾನವಾಗಿವೆ ಎಂಬ ಆಚಾರ್ಯರ ವಾಕ್ಯಕ್ಕೆ ಟೀಕಾಚಾರ್ಯರು 'ಈಶ್ವರಬುದ್ಧಿಯಲ್ಲಿ ಸರ್ವದಾ ಪ್ರತೀಯಮಾನತ್ವ' ಎಂದರೆ ಈಶ್ವರನಿಂದ ಸರ್ವದಾ ವರ್ತಮಾನತಯಾऽ-ಮಭೂಯಮಾನತ್ವ ಎಂದರ್ಥ. ಹಾಗೇ ಹೇಳಿದರೆ ಮಾತ್ರ ಮೇಲೆ ಹೇಳಿದ ಅರ್ಥವು ಸಿದ್ಧವಾಗುತ್ತದೆ. ವರ್ತಮಾನತ್ವ ವಿಶೇಷಣದಿಂದಲೂ ಅನುಭೂಯಮಾಣತ್ವ ರೂಪವಿಶೇಷಣದಿಂದಲೂ ವೇದಗಳಿಗೆ ಅನಾದ್ಯನಂತ ಕಾಲದಲ್ಲಿ ಈಶ್ವರಬುದ್ಧಿಯಲ್ಲಿ 'ವರ್ತಮಾನತಯಾ ಅನುಭೂಯಮಾನತ್ವ'ವು ಸಿದ್ಧವಾಗುವುದರಿಂದ ಮಧ್ಯಕಾಲದಲ್ಲಿ ವೇದಕ್ಕೆ ಸೃಷ್ಟಿಯಿಲ್ಲವೆಂದು ಸಿದ್ಧವಾಗುತ್ತದೆ'. 'ಪೂರ್ವಕಲ್ಪದಲ್ಲಿ ಯಾವ ವೇದಗಳು ಇದ್ದವೋ, ಅವೇ ವೇದಗಳು ಪ್ರತಿಸೃಷ್ಟಿಯಲ್ಲಿಯೂ ಈಶ್ವರನಿಂದ ಉಚ್ಚರಿಸಲ್ಪಡುತ್ತವೆ' ಎಂಬ ಪ್ರಮಾಣದಿಂದಲೂ ಮತ್ತು ಮೊದಲು ಹೇಳಿದ ಉತ್ಪತ್ತಿವಾಕ್ಯಗಳಿಗೆ ಅಭಿವ್ಯಕ್ತಿರೂಪವಾದ ಅರ್ಥವನ್ನು ಹೇಳುವ ಪ್ರಮಾಣಗಳ ವಿರೋಧ ಬರುವುದರಿಂದಲೂ ವೇದಗಳಿಗೆ ಸರ್ಗಾದಿಯಲ್ಲಿ ಪ್ರಾಗಭಾವವಿಲ್ಲವೆಂದು ಸಿದ್ಧವಾಗುತ್ತದೆ. ಇದನ್ನು ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕು. ವೇದದ ಉತ್ಪತ್ತಿವಾಕ್ಯಗಳಿಗೆ ಗತಿಯನ್ನು ಹೇಳುವುದರಿಂದಲೂ ವೇದಗಳಿಗೆ ಉತ್ಪತ್ತಿಯಿಲ್ಲವೆಂದು ಸಿದ್ಧವಾಗುತ್ತದೆ' ಎಂದು ಉತ್ಪಕ್ಷ್ಯಭಾವವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಅಲ್ಲದೇ ''ಪುರಾಣಕರ್ತೃಗಳಾದ ವ್ಯಾಸರು ವಿಷ್ಣುಬುದ್ಧಿಗಾಃ' ಎಂಬುದರಿಂದ ಈಶ್ವರನ ಬುದ್ಧಿಯಲ್ಲಿ ಸರ್ವದಾ ವರ್ತಮಾನತಯಾ ಅನುಭೂಯಮಾನತ್ವವನ್ನು ಹೇಳಿದ್ದಾರೆ'' ಎಂಬ ವಾಕ್ಯದಿಂದಲೂ, ''ಆದ್ದರಿಂದ ವೇದಗಳು ಸರ್ವದಾ ಈಶ್ವರನಿಂದ ವರ್ತಮಾನತ್ವೇನ ಅನುಭೂಯಮಾನವಾಗುತ್ತವೆ ಎಂದು ಸಿದ್ಧಿಸುತ್ತವೆ'' ಎಂಬ ವಾಕ್ಯದಿಂದಲೂ ನಾವು ಹೇಳಿದ ಅರ್ಥವು ಸಿದ್ಧವಾಗುತ್ತದೆ. ಗಾಯತ್ರ್ಯಧಿಕರಣದಲ್ಲಿ ಹೀಗೆ ಪೂರ್ವಪಕ್ಷವನ್ನು ಮಾಡಿದ್ದಾರೆ - 'ಗಾಯತ್ರಿಯು ವೇದವಿಶೇಷವಾದ್ದರಿಂದ ನಿತ್ಯವಾದದ್ದು. ನಿತ್ಯವಾದುದು ಈಶ್ವರನ ಅಧೀನವಾಗಲು ಸಾಧ್ಯವಿಲ್ಲ' - ಹೀಗೆ ಪೂರ್ವಪಕ್ಷವನ್ನು ಮಾಡಿ,

ನಿತ್ಯವಾದುದು ಈಶ್ವರನ ಅಧೀನವಲ್ಲ ಎಂಬುದು ಸರಿಯಲ್ಲ. "ಸ್ವಭಾವಜೀವಕರ್ಮಾಣಿ ದ್ರವ್ಯಂ ಕಾಲಃ ಶ್ರುತಿಃಕ್ರಿಯಾ । ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ" ಎಂಬ ಶ್ರುತಿಯು ನಿತ್ಯವಾದ ವಸ್ತುಗಳಿಗೂ ಭಗವದಧೀನತ್ವವನ್ನು ಹೇಳುವುದರಿಂದ ನಿತ್ಯವಾದ ವೇದವು ಭಗವದಧೀನ ಎಂದು ಸಿದ್ಧವಾಗುತ್ತದೆ ಎಂದು ಸಿದ್ಧಾಂತವನ್ನು ಮಾಡಿರುವುದರಿಂದ ಈ ವಾಕ್ಯಗಳಿಂದಲೂ ವೇದದ ಅನುತ್ಪತ್ತಿಯು ಸಿದ್ಧವಾಗುತ್ತದೆ. ಹಾಗೆಯೇ "ಶ್ರುತಿಗಳು ಅನಾದಿಯಾದುದರಿಂದ ಹೇಗೆ ಕಾರಣದೋಷವಿಲ್ಲವೋ, ಹಾಗೇ ಸಮಯವೂ ಅನಾದಿಯಾದುದರಿಂದ ಕಾರಣದೋಷವಿಲ್ಲ. ಶ್ರುತಿಗಳಿಗೆ ಸ್ವರೂಪಾನಾದಿತ್ವವಿದೆ. ಸಮಯಗಳಿಗೆ ಪ್ರವಾಹಾನಾದಿತ್ವವಿದೆ ಎಂಬ ವೈಷಮ್ಯವು ಅಪ್ರಯೋಜಕವಾದುದು" ಎಂದು ಸಮಯಪಾದದ ವಾಕ್ಯದಲ್ಲಿ ಸ್ಪಷ್ಟವಾಗಿ ಶ್ರುತಿಗಳಿಗೆ ಸ್ವರೂಪಾನಾದಿತ್ವವನ್ನು ಹೇಳಿದೆ. ಆದ್ದರಿಂದ ನಿರವಕಾಶವಾದ ಬಹುವಚನಗಳಿಂದ ಕ್ರಮಕ್ಕೆ ನಿತ್ಯತ್ವವು ಗೊತ್ತಾಗುವುದರಿಂದ, 'ಕ್ರಮಸ್ಯ ಕೃತಕತ್ವೇಽಪಿ' ಎಂಬ ಟೀಕಾವಾಕ್ಯವು ಮೀಮಾಂಸಕ ರೀತಿಯನ್ನು ಅನುಸರಿಸಿ ಪ್ರವೃತ್ತವಾಗಿದೆ. ಅಥವಾ ಅಭ್ಯುಪಗಮವಾದದಿಂದ ಪ್ರವೃತ್ತವಾಗಿದೆ ಎಂದು ತಿಳಿಯಬೇಕು.

**ತಸ್ಮಾದನಾದಿಸಿದ್ಧಾಂತಶುದ್ಧಬುದ್ಧಿಮತಾಂ ಸತಾಮ್ ।**
**ಪ್ರಮಾಣೇ ಸತ್ಯನಾದಿತ್ವಂ ವಿನೋದೇನೈವ ಸಿದ್ಧ್ಯತಿ ॥ ೮೮ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ಅನಾದಿಸಿದ್ಧಾಂತಶುದ್ಧಿಬುದ್ಧಿಮತಾಂ ಸತಾಂ = ಅನಾದಿಯಾದ ವೇದವ್ಯಾಸ ಸಿದ್ಧಾಂತದಿಂದ, ಶುದ್ಧವಾದ ಬುದ್ಧಿಯುಳ್ಳ ಸಜ್ಜನರಿಗೆ, ಪ್ರಮಾಣೇ ಸತಿ = ಪ್ರಮಾಣವು ಇರುತ್ತಿರಲು, ಅನಾದಿತ್ವಂ = ವೇದವಾಕ್ಯಗಳಿಗೆ ಅನಾದಿತ್ವವು, ವಿನೋದೇನೈವ ಸಿದ್ಧ್ಯತಿ = ವಿನೋದದಿಂದ ಅಂದರೆ ಅನಾಯಾಸದಿಂದ ಸಿದ್ಧವಾಗುತ್ತದೆ.

**ಅನುವಾದ–** ಆದ್ದರಿಂದ ಅನಾದಿಯಾದ ವೇದವ್ಯಾಸಸಿದ್ಧಾಂತದಿಂದ ಶುದ್ಧಬುದ್ಧಿಯುಳ್ಳ ಸಜ್ಜನರಿಗೆ ವೇದದ ಅನಾದಿತ್ವದಲ್ಲಿ ಪ್ರಮಾಣವಿರುವುದರಿಂದ ವೇದಾನಾದಿತ್ವವು ವಿನೋದದಿಂದಲೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅನಾದಿಸಿದ್ಧಾನ್ತೋ ವ್ಯಾಸಸಿದ್ಧಾಂತಃ ॥ ೮೮ ॥

**ಪ್ರಮಾಣೇ ಸತಿ ಶಕ್ತ್ಯೇತ್ಥಂ ಘಟಯೇನ್ನಿತ್ಯತಾಂ ಹರಿಃ ।**
**ಯತ್ರ ಕುತ್ರಾಪಿ ತಾಂ ಶಕ್ತಿಂ ಚಿತ್ರಶಕ್ತಿರ್ಯುನಕ್ತಿ ನ ।**
**ಗಿರ್ಯುದ್ಧರಣಶಕ್ತಿಂ ಸ ಕಿಂ ಪ್ರಯುಂಕ್ತೇ ತೃಣೋದ್ಧೃತೌ ॥ ೮೯ ॥**

**ಅರ್ಥ–** ಪ್ರಮಾಣೇ ಸತಿ ಇತ್ಥಂ ಶಕ್ತ್ಯಾಹರಿಃ ನಿತ್ಯತಾಂ ಘಟಯೇತ್ = ಪ್ರಮಾಣವಿದ್ದಾಗ ಈ ರೀತಿಯಾಗಿ ತನ್ನ ಅಚಿಂತ್ಯಶಕ್ತಿಯಿಂದ ಶ್ರೀಹರಿಯು ವೇದವಾಕ್ಯಗಳಿಗೆ ನಿತ್ಯತ್ವವನ್ನು

ಸಂಘಟಿಸುತ್ತಾನೆ. ಚಿತ್ರಶಕ್ತಿಃ ತಾಂ ಕುತ್ರಾಪಿ ನ ಯುನಕ್ತಿ = ವಿಚಿತ್ರಶಕ್ತಿ ಹೊಂದಿದ ಶ್ರೀಹರಿಯು ಅಂತಹ ವಿಚಿತ್ರಶಕ್ತಿಯನ್ನು ಎಲ್ಲಿಬೇಕಾದರೂ ವಿನಿಯೋಗ ಮಾಡುವುದಿಲ್ಲ. ಸಃ =ಆ ಭಗವಂತನು, ಗಿರ್ಯುದ್ಧರಣಶಕ್ತಿಂ = ಪರ್ವತವನ್ನು ಎತ್ತುವ ಶಕ್ತಿಯನ್ನು, ತೃಣೋದ್ಧೃತೌ ಕಿಂ ಪ್ರಯುಂಕ್ತೇ? = ಹುಲ್ಲನ್ನು ಎತ್ತುವಾಗ ಪ್ರಯೋಗಿಸುತ್ತಾನೇಯೇ?

**ಅನುವಾದ–** ಒಂದು ವಿಷಯದಲ್ಲಿ ಪ್ರಮಾಣವಿದ್ದಾಗ ಈಶ್ವರನು ತನ್ನ ಶಕ್ತಿಯಿಂದ ಅದನ್ನು ಹೀಗೆ ಘಟನೆ ಮಾಡುತ್ತಾನೆ. ಅ ಘಟಿತಘಟನಾಶಕ್ತಿಯಿದೆಯೆಂಬ ಕಾರಣದಿಂದ ಎಲ್ಲಾ ಕಡೆಗಳಲ್ಲಿಯೂ ಹಾಗೇ ಶಕ್ತಿಯನ್ನು ಪ್ರಯೋಗಿಸುವುದಿಲ್ಲ. ಪರ್ವತವನ್ನು ಎತ್ತುವ ಶಕ್ತಿಯನ್ನು ಈಶ್ವರನು ತೃಣವನ್ನು ಎತ್ತಲು ಉಪಯೋಗಿಸುತ್ತಾನೆಯೇ?

**ಭಾವವಿಲಾಸಿನೀ–** ನನ್ವೇವಂ ಘಟಾದಿನಿತ್ಯತಾಮಪಿ ಸ್ವಶಕ್ತ್ಯಾ ಘಟಯೇತ್ ಕಿನ್ನೇತ್ಯಾಹ – **ಯತ್ರ ಕುತ್ರೇತಿ** ॥ ೮೯ ॥

**ವಿವರಣೆ–** ಅಚಿಂತ್ಯಾದ್ಭುತಶಕ್ತಿಯಿದೆಯೆಂಬ ಕಾರಣದಿಂದ ಪ್ರಮಾಣ ವಿರುದ್ಧವಾದುದನ್ನೆಲ್ಲಾ ಒಪ್ಪುವ ಅಗತ್ಯವಿಲ್ಲ. ಪ್ರಮಾಣ ಪ್ರಮಿತವಾದುದು ನಮ್ಮ ಬುದ್ಧಿಶಕ್ತಿಗೆ ನಿಲುಕದಿದ್ದಾಗ ಮಾತ್ರ ಅದನ್ನು ಈಶ್ವರನ ಶಕ್ತಿಯಿಂದ ಉಪಪಾದನೆ ಮಾಡಬೇಕೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

**ಕಿಂಚಾಂತ್ಯವರ್ಣಸ್ಯೋತ್ಪಾದೇ ಪ್ರಾಙ್ನಷ್ಟೈರ್ವರ್ಣರಾಶಿಭಿಃ ।**
**ಬುದ್ಧ್ಯಾರೂಢೈಃ ಪದತ್ವಂ ಸ್ಯಾತ್ಪ್ರಾಕ್ಸೃಷ್ಟಿಸ್ತದ್ವೃಥೈವ ತೇ ॥ ೯೦ ॥**

**ವರ್ಣಾನಿತ್ಯತ್ವವಾದೋಽಪಿ ವರ್ಣನಿತ್ಯತ್ವವಾದಿನಾಮ್ ।**
**ಪ್ರಕ್ರಿಯಾಂ ಸ್ವಕ್ರಿಯಾಸಿದ್ಧ್ಯೈ ಸತ್ಕರೋತೀತಿ ಮೇ ಮತಿಃ ॥ ೯೧ ॥**

**ಅರ್ಥ–** ಕಿಂಚ ಅಂತ್ಯವರ್ಣಸ್ಯೋತ್ಪಾದೇ = ಅಂತ್ಯವರ್ಣವು ಉತ್ಪನ್ನವಾದಾಗ, ಪ್ರಾಙ್ನಷ್ಟೈಃ = ಹಿಂದೆ ನಷ್ಟವಾದ, ವರ್ಣರಾಶಿಭಿಃ = ವರ್ಣರಾಶಿಗಳಿಂದ, ಬುದ್ಧ್ಯಾರೂಢೈಃ ಪದತ್ವಂ = ಬುದ್ಧ್ಯಾರೂಢವಾದುದರಿಂದಲೇ ಪದತ್ವವು, ಸ್ಯಾತ್=ಉಪಪನ್ನವಾಗುತ್ತದೆ. ಅನ್ಯಥಾ = ಒಂದು ವೇಳೆ ಹಾಗಾಗದಿದ್ದರೆ, ತೇ = ವರ್ಣವು ಅನಿತ್ಯ ಎಂದು ಹೇಳುವ ನಿನಗೂ ಕೂಡ, ಪ್ರಾಕ್‌ಸೃಷ್ಟಿಃ = ಹಿಂದಿನ ವರ್ಣಗಳ ಸೃಷ್ಟಿಯೂ, ವೃಥಾ ಏವ = ವ್ಯರ್ಥವೇ ಆಗುತ್ತಿತ್ತು. ಅತಃ = ಆದ್ದರಿಂದ, ವರ್ಣಾನಿತ್ಯತ್ವವಾದೋಽಪಿ = ವರ್ಣಗಳು ಅನಿತ್ಯ ಎನ್ನುವ ವಾದವೂ ಕೂಡ, ವರ್ಣನಿತ್ಯತ್ವವಾದಿನಾಂ = ವರ್ಣಗಳು ನಿತ್ಯ ಎಂದು ಹೇಳುವ ವಾದಿಗಳ, ಪ್ರಕ್ರಿಯಾಂ = ಪ್ರಕ್ರಿಯೆಯನ್ನು, ಸ್ವಕ್ರಿಯಾಸಿದ್ಧ್ಯೈ = ತನ್ನ ಪದವೆಂಬ ಕ್ರಿಯಾಸಿದ್ಧಿಗೋಸ್ಕರ, (ಬುದ್ಧ್ಯಾರೂಢವಾಗಿ ಪದವಾಗುವುದು ಎನ್ನುವ ಸ್ವಕ್ರಿಯಾಸಿದ್ಧಿಗೋಸ್ಕರ) ಸತ್ಕರೋತಿ = ಸತ್ಕಾರ ಮಾಡುತ್ತದೆ. ಇತಿ = ಹೀಗೆಂದು, ಮೇ ಮತಿಃ = ನಮ್ಮ ಅಭಿಪ್ರಾಯವು.

**ಅನುವಾದ–** ಅದೂ ಅಲ್ಲದೇ ಅಂತ್ಯವರ್ಣವು ಉತ್ಪತ್ತಿಯಾದಾಗ, ಅಂತ್ಯವರ್ಣದ ಅನುಭವವು ಬಂದು ಮೊದಲು ನಷ್ಟವಾದ ವರ್ಣರಾಶಿಗಳ ಅನುಭವಜನ್ಯ ಸಂಸ್ಕಾರವು ಬುದ್ಧಿಯಲ್ಲಿದ್ದು, ಅದರಿಂದ ಪ್ರದತ್ವಜ್ಞಾನವುಂಟಾಗಿ ವಾಕ್ಯಾರ್ಥ-ಜ್ಞಾನವಾಗುತ್ತದೆ ಎಂದು ನೀನೂ ಹೇಳುತ್ತೀಯೇ. ಅದಕ್ಕೆ ವರ್ಣಗಳ ಸೃಷ್ಟಿಯ ಅಂಗೀಕಾರವು ವ್ಯರ್ಥವಾದದ್ದೇ.

ವರ್ಣಾನಿತ್ಯತ್ವವಾದಿಗಳ ಪ್ರಕ್ರಿಯೆಯೂ ಸಹ ತನ್ನ ಉದ್ದೇಶವನ್ನು ಈಡೇರಿಸಿಕೊಳ್ಳಲು, ವರ್ಣಾನಿತ್ಯತ್ವವಾದಿಗಳ ಪ್ರಕ್ರಿಯೆಯನ್ನೇ ಅನುಸರಿಸುತ್ತದೆ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಕಿಂಚ ವರ್ಣಾನಿತ್ಯತ್ವವಾದಿನಾऽಪಿ ಬುದ್ಧಿಸ್ಥವರ್ಣೈರೇವ ಕ್ರಮೋ ವಾಚ್ಯಃ । ತಥಾಚ ಕ್ರಮಸಿದ್ಧ್ಯರ್ಥಂ ವರ್ಣಾನಾಂ ಬುದ್ಧಿಸ್ಥತ್ವಮೇವ ಶರಣಮ್ । ನ ತದಾ ತದಾ ಸೃಷ್ಟತ್ವಮಿತ್ಯಾಹ – **ಕಿಂಚೇತಿ** ॥ ತಥಾ ಬುದ್ಧ್ಯಾರೂಢೈಃ ಪದೈರ್ವಾಕ್ಯತ್ವಂ ಚ ಸ್ಯಾದಿತಿ ದ್ರಷ್ಟವ್ಯಮ್ । ತಥಾಚ ತ್ವದ್ವತ್ ಪೂರ್ವಾಪರಬುದ್ಧಿವಿಷಯತ್ವೇನೈವ ನಿತ್ಯತ್ವಪಕ್ಷೇऽಪಿ ಕ್ರಮೋಕ್ತಿಸ್ಸುಶಕೇತಿ ಭಾವಃ ॥ ೯೦ ॥

**ವಿವರಣೆ–** ವರ್ಣಾನಿತ್ಯತ್ವವಾದಿಯಾದ ನೀನೂ ಸಹ ಬುದ್ಧ್ಯಾರೂಢವಾದ ವರ್ಣಗಳಿಂದಲೇ ಕ್ರಮವನ್ನು ಹೇಳಬೇಕು. ಆದ್ದರಿಂದ ಕ್ರಮವು ಸಿದ್ಧವಾಗಲು ವರ್ಣಗಳಿಗೆ ಬುದ್ಧಿಸ್ಥತ್ವವನ್ನೇ ಅಂಗೀಕಾರ ಮಾಡಬೇಕು. ವರ್ಣಗಳ ಸೃಷ್ಟಿಯನ್ನು ಅಂಗೀಕರಿಸುವ ಅವಶ್ಯಕತೆಯಿಲ್ಲ ಎಂದು ಹೇಳುತ್ತಾರೆ. ಹಾಗೇ ಬುದ್ಧ್ಯಾರೂಢವಾದ ವರ್ಣಗಳಿಂದ ಪದಜ್ಞಾನವೂ, ಬುದ್ಧ್ಯಾರೂಢವಾದ ಪದಗಳಿಂದ ವಾಕ್ಯಜ್ಞಾನವೂ ಉಂಟಾಗುತ್ತದೆ ಎಂದು ತಿಳಿಯಬೇಕು. ಆದ್ದರಿಂದ ನಿತ್ಯತ್ವವನ್ನು ಒಪ್ಪುವ ನಾವು ನಿನ್ನ ಪ್ರಕ್ರಿಯೆಯಂತೆಯೇ ವರ್ಣಗಳಿಗೆ ಪೂರ್ವಾಪರ ಬುದ್ಧಿವಿಷಯತ್ವವನ್ನು ಹೇಳಿ, ಕ್ರಮವನ್ನು ಸುಲಭವಾಗಿ ಉಪಪಾದನೆ ಮಾಡಬಹುದು.

ಬುದ್ಧಿಸ್ಥವಾದವರ್ಣಗಳಿಂದಲೇ ಕ್ರಮವನ್ನು ಹೇಳುವ ನಮ್ಮ ಪ್ರಕ್ರಿಯೆಯನ್ನೇ ಸಹ ನೀನು ಅನುಸರಿಸುತ್ತಿಯೆ ಎಂದು ತಾತ್ಪರ್ಯ.

**ತ್ರಿಕ್ಷಣಸ್ಥಾಯಿವರ್ಣಾತ್ಮವೇದೇಷ್ವಾಕಲ್ಪವರ್ತಿತಾ ।**
**ತ್ವಯಾಪೀಶ್ವರಬುದ್ಧ್ಯೈವಮಂಗೀಕಾರ್ಯಾ ಮಯ್ಯೈವ ನ ॥ ೯೨ ॥**

**ಅರ್ಥ–** ತ್ರಿಕ್ಷಣಾವಸ್ಥಾಯಿ ವರ್ಣಾತ್ಮವೇದೇಷು = (ಮೂರುಕ್ಷಣಗಳಲ್ಲಿ ವರ್ಣಗಳ ಅಸ್ತಿತ್ವವನ್ನು ಒಪ್ಪುವ ನೈಯಾಯಿಕರ ಪ್ರಕಾರ), ತ್ರಿಕ್ಷಣಾವಸ್ಥಾಯಿವರ್ಣಾತ್ಮಕ ವೇದಗಳಲ್ಲಿ ಆಕಲ್ಪವರ್ತಿತಾಂ = ಕಲ್ಪಾಂತದವರೆಗೂ ಕೂಡ ಇರುವಿಕೆಯು, ತ್ವಯಾಪಿ =

ನೈಯಾಯಿಕನಾದ ನಿನ್ನಿಂದಲೂ ಕೂಡ, ಈಶ್ವರಬುದ್ಧ್ಯಾ ಏವ = ಈಶ್ವರ ಬುದ್ಧಿಯಿಂದಲೇ, ಏವಂ ಅಂಗೀಕಾರ್ಯಾ = ವರ್ಣವುನಿತ್ಯ ಎಂದು ಹೇಳುವ ನಮ್ಮಿಂದ ಹೇಗೆ ಅಂಗೀಕರಿಸಲ್ಪಡುತ್ತದೆಯೋ ಹಾಗೆಯೇ ಅಂಗೀಕರಿಸಲ್ಪಡಬೇಕು. ನ ಮಯಾ ಏವ = ನನ್ನಿಂದ ಮಾತ್ರವೇ ಅಲ್ಲ.

**ಅನುವಾದ–** ನೀನಾದರೂ ವರ್ಣಗಳಿಗೆ ತ್ರಿಕ್ಷಣಾವಸ್ಥಾನವನ್ನು ಒಪ್ಪುತ್ತೀಯೆ ಅಂತಹ ವರ್ಣಸಮೂಹಾತ್ಮಕವಾದ ವೇದವು ಕಲ್ಪದ ಕೊನೆಯವರೆಗೂ ಇರುತ್ತದೆಯೆಂದು ಹೇಳಬೇಕಾದರೆ ಈಶ್ವರಬುದ್ಧಿಯಿಂದಲೇ ಅದನ್ನು ಘಟನೆ ಮಾಡಬೇಕು. ನಾನೊಬ್ಬನೇ ಅದನ್ನು ಈಶ್ವರಬುದ್ಧಿಯಿಂದ ಘಟನೆ ಮಾಡುವುದಲ್ಲ.

**ಭಾವವಿಲಾಸಿನೀ–** ತ್ರಿಕ್ಷಣಸ್ಥಾಯೀತ್ಯನೇನ ತಾವತ್ಕಾಲಸ್ಥಾಯಿತ್ವಂ ವರ್ಣಾನಾಂ ನಾಸ್ತೀತಿ ಸೂಚಯತಿ ॥ ಏವಂ ಮದ್ವತ್ ॥ ೯೨ ॥

**ವಿವರಣೆ–** ನೈಯಾಯಿಕರು ವರ್ಣಗಳನ್ನು ತ್ರಿಕ್ಷಣಾವಸ್ಥಾಯಿ ಎಂದು ಹೇಳುವುದರಿಂದ ಕಲ್ಪಾದಿಯಲ್ಲಿ ಉತ್ಪನ್ನವಾದ ವರ್ಣವು, ಕಲ್ಪಾವಸಾನದವರೆಗೂ ಇರುವುದಿಲ್ಲ. ಆದ್ದರಿಂದ ಈಶ್ವರಬುದ್ಧಿಯಲ್ಲಿ ಅವು ವಿಷಯವಾಗಿವೆಯೆಂದೇ ಆ ಕ್ರಮಕ್ಕೆ ಕಲ್ಪಾಂತಸ್ಥಿತಿಯನ್ನು ಹೇಳಬೇಕು. ನಾವೂ ಸಹ ಅದನ್ನೇ ಹೇಳುತ್ತೇವೆ. ಕಲ್ಪಾಂತದಲ್ಲಿ ವೇದಕ್ಕೆ ನಾಶವನ್ನು ಒಪ್ಪದಿರುವುದರಿಂದ, ಕಲ್ಪಾವಸಾನಾನಂತರದಲ್ಲಿಯೂ ನಾವು ವೇದಕ್ಕೆ ಸ್ಥಿತಿಯನ್ನು ಹೇಳುತ್ತೇವೆ.

ತವೇಶ್ವರೋಽಪಿ ಸರ್ಗಾದೌ ಸೃಜೇದ್ವೇದಂ ನ ಸರ್ವದಾ ।
ಪಶ್ಚಾತ್ಸ್ವಬುದ್ಧಿವಿಷಯೈರ್ವರ್ಣೈಃ ಸೋಽಪಿ ಪದಾವಳಿಮ್ ।
ವೈದಿಕೀಮನುಸಂಧತ್ತೇ ತ್ವತ್ಪಕ್ಷೇ ಸರ್ವದಾ ಮಮ ॥ ೯೩ ॥

**ಅರ್ಥ–** ತವ = ನೈಯಾಯಿಕನಾದ ನಿನ್ನ ಮತದಲ್ಲಿ, ಈಶ್ವರೋಽಪಿ = ಭಗವಂತನೂ ಕೂಡ, ಸರ್ಗಾದೌ = ಸೃಷ್ಟಿಯ ಆದಿಯಲ್ಲಿ, ವೇದಂ = ವೇದವನ್ನು, ಸೃಜೇತ್ = ಸೃಷ್ಟಿಸುತ್ತಾನೆ. ಸರ್ವದಾ = ಸರ್ವಕಾಲದಲ್ಲಿಯೂ, ಎಂದರೆ ಮಧ್ಯ ಮಧ್ಯದಲ್ಲಿ, ನ ಸೃಜೇತ್ = ಸೃಷ್ಟಿಮಾಡುವುದಿಲ್ಲ. ಪಶ್ಚಾತ್ = ಸೃಷ್ಟಿಮಾಡಿದ ನಂತರ, ಸ್ವಬುದ್ಧಿವಿಷಯೈಃ = ತನ್ನ ಬುದ್ಧಿವಿಷಯಗಳಾದ, ವರ್ಣೈಃ = ವರ್ಣಗಳಿಂದ, ಸೋಽಪಿ = ಆ ಭಗವಂತನೂ ಕೂಡ, ತ್ವತ್ಪಕ್ಷೇ = ನಿನ್ನ ಪಕ್ಷದಲ್ಲಿ, ವೈದಿಕೀಂ ಪದಾವಲೀಂ ಅನುಸಂಧತ್ತೇ = ವೇದದ ಪದಸಮುದಾಯವನ್ನು ಅನುಸಂಧಾನಮಾಡುತ್ತಾನೆ. ಮಮ = ನಮ್ಮ ಪಕ್ಷದಲ್ಲಿ ಸೃಷ್ಟಿಮಾಡದೆಯೇ ಅಭಿವ್ಯಕ್ತಿಗೊಳಿಸಿ, ವೈದಿಕೀಂ ಪದಾವಲೀಂ = ವೇದಸಂಬಂಧಿಯಾದ ಪದಸಮುದಾಯಗಳನ್ನು, ಸರ್ವದಾ = ನಿತ್ಯದಲ್ಲಿಯೂ, ಅನುಸಂಧತ್ತೇ = ಅನುಸಂಧಾನಮಾಡುತ್ತಾನೆ.

**ಅನುವಾದ–** ನಿನ್ನ ಈಶ್ವರನೂ ಸಹ ಸೃಷ್ಟಿಯ ಆದಿಯಲ್ಲಿ ವೇದವನ್ನು ಸೃಷ್ಟಿಸುತ್ತಾನೆ. ಯಾವಾಗಲೂ ಸೃಷ್ಟಿಸುವುದಿಲ್ಲ. ಅನಂತರ ತನ್ನ ಬುದ್ಧಿವಿಷಯವಾದ ವರ್ಣಗಳಿಂದಲೇ ವೈದಿಕಪದಗಳನ್ನು ಮತ್ತು ಅಂತಹ ಪದಗಳ ಸಮೂಹವನ್ನು ಅನುಸಂಧಾನ ಮಾಡುತ್ತಾನೆ. ನಿನ್ನ ಪಕ್ಷದಲ್ಲಿ ಅವನು ಕಲ್ಪಾಂತದವರೆಗೆ ಅನುಸಂಧಾನ ಮಾಡುತ್ತಾನೆ. ನನ್ನ ಪಕ್ಷದಲ್ಲಿ ಅವನು ಸರ್ವದಾ ಅನುಸಂಧಾನ ಮಾಡುತ್ತಾನೆ.

**ಭಾವವಿಲಾಸಿನೀ–** ತದೇವ ವಿಶದಯತಿ – **ತವೇತಿ** ॥ ಪಶ್ಚಾತ್ಸೃಷ್ಟ್ಯನಂತರಮ್ । ಸರ್ವದಾ ಮಮೇತ್ಯಸ್ಯಾಯಂ ಭಾವಃ । ಯಥಾ ತವ ಸಕೃತ್ಸೃಷ್ಟಂ ವೇದಕ್ರಮಂ ಕಲ್ಪಾವಸಾನಪರ್ಯಂತಂ ಮಧ್ಯೇಮಧ್ಯೇ ಪುನರಸೃಜನ್ನೇವಾನುಸಂದಧಾತೀಶ್ವರಸ್ತಥಾಭಿವ್ಯಕ್ತಮೇವ ಕ್ರಮಂ ಸರ್ವದಾಽನುಸಂಧತ್ತೇ, ನತು ಕದಾಪಿ ಸೃಜತೀತಿ ॥ ೯೩ ॥

**ವಿವರಣೆ–** ನಿನ್ನ ಮತದಲ್ಲಿ ಹೇಗೆ ಸರ್ಗಾದಿಯಲ್ಲಿ ಒಮ್ಮೆ ಸೃಷ್ಟವಾದ ವೇದಕ್ರಮವನ್ನು ಈಶ್ವರನು ಮಧ್ಯೆ-ಮಧ್ಯೆ ಪುನಃ ಸೃಷ್ಟಿಮಾಡದಿದ್ದರೂ ಕಲ್ಪದಕೊನೆಯವರೆಗೂ ಅನುಸಂಧಾನ ಮಾಡುತ್ತಾನೆಯೋ, ಹಾಗೆ ಸರ್ಗಾದಿಯಲ್ಲಿ ಅಭಿವ್ಯಕ್ತವಾದ ಆ ಕ್ರಮವನ್ನು ಯಾವಾಗಲೂ ಅನುಸಂಧಾನ ಮಾಡುತ್ತಾನೆ ಎಂದೂ ಆ ಕ್ರಮವನ್ನು ಸೃಷ್ಟಿಸುವುದಿಲ್ಲ ಎಂದು ನನ್ನ ಮತ.

**ಏವಂ ಪೌರ್ವಾಪರ್ಯವಂತ ಏತೇವರ್ಣಾ ಇತೀಶ್ವರಃ ।**
**ಅನಾದಿನಿತ್ಯಯಾ ಬುದ್ಧ್ಯಾ ಸದೋಲ್ಲಿಖತಿ ವೈದಿಕೀಮ್ ॥ ೯೪ ॥**

**ಅರ್ಥ–** ಏತೇ ವರ್ಣಾಃ = ಈ ಎಲ್ಲ ವರ್ಣಗಳೂ, ಏವಂ = ಈ ರೀತಿಯಾಗಿ, ಪೌರ್ವಾಪರ್ಯವಂತಃ = ಪೂರ್ವಾಪರಕ್ರಮವುಳ್ಳವುಗಳು, ಇತಿ = ಎಂದು, ಈಶ್ವರಃ = ಪರಮಾತ್ಮನು, ಅನಾದಿನಿತ್ಯಯಾ ಬುದ್ಧ್ಯಾ = ಅನಾದಿನಿತ್ಯವಾದ ಬುದ್ಧಿಯಿಂದ, ವೈದಿಕೀಂ = ವೇದಸಂಬಂಧಿಯಾದ ವರ್ಣಮಾಲೆಯನ್ನು, ಸದಾ = ಯಾವಾಗಲೂ, ಉಲ್ಲಿಖತಿ = ಉಲ್ಲೇಖಿಸುತ್ತಾನೆ.

**ಅನುವಾದ–** ಈಶ್ವರನು ತನ್ನ ಅನಾದಿನಿತ್ಯವಾದ ಬುದ್ಧಿಯಿಂದ ಈ ವೈದಿಕ ಪದಗಳು ಇಂತಹ ಕ್ರಮವನ್ನು ಉಳ್ಳವು ಎಂದು ಯಾವಾಗಲೂ ಉಲ್ಲೇಖ ಮಾಡುತ್ತಾನೆ.

**ಭಾವವಿಲಾಸಿನೀ–** ಅನಾದಿಷ್ವಪಿ ವರ್ಣೇಷು ವಿಶಿಷ್ಟಕ್ರಮವಿಷಯೀಕರಣಪ್ರಕಾರಂ ಶೃಂಗಗ್ರಾಹಕತಯಾ ದರ್ಶಯತಿ – **ಏವಮಿತಿ** ॥ ಏತೇ ವರ್ಣಾಃ ವ್ಯಾಪ್ತಾ ಅಕಾರಾದಿವರ್ಣಾಃ । ಏವಂ ಪೌರ್ವಾಪರ್ಯವಂತಃ । 'ಅಗ್ನಿಮೀಳೇ' ಇತ್ಯಾದಿಪೌರ್ವಾಪರ್ಯವಂತಃ ॥ ೯೪ ॥

**ವಿವರಣೆ–** ಈಶ್ವರನಬುದ್ಧಿಯು ಅನಾದಿನಿತ್ಯವಾದುದು. ಅಗ್ನಿಮೀಳೆಯೆಂಬ ವೈದಿಕಪದಸಮೂಹದಲ್ಲಿ ಅಕಾರೋತ್ತರ ಗಕಾರೋತ್ತರ, ನಕಾರೋತ್ತರತ್ವ ಮುಂತಾದ ಕ್ರಮವಿದೆಯೆಂದು ಅವನು ಯಾವಾಗಲೂ ವಿಷಯೀಕರಿಸುತ್ತಾನೆ.

**ಅನಂತಪದಮರ್ಯಾದಾಂ ಘಟಯೇದ್ಯೋತಿದುರ್ಘಟಾಮ್ ।**
**ಅನಾದಿನಿತ್ಯತೈವಂ ವಾ ನ ಕುಚೋದ್ಯೇನ ಬಾಧತೇ ॥ ೯೫ ॥**

**ಅರ್ಥ–** ಯಃ = ಪರಮಾತ್ಮನು, ಏವಂ = ಈ ರೀತಿಯಾಗಿ, ಅತಿದುರ್ಘಟಾಂ = ಅತ್ಯಂತದುರ್ಘಟವಾದ, ಅನಂತಪದಮರ್ಯಾದಾಂ = ಅನಂತಪದಗಳ ಮರ್ಯಾದೆಯನ್ನು, ಘಟಯೇತ್ = ಸಂಘಟಿಸುತ್ತಾನೆ, ಏವಂ= ಇದೇ ರೀತಿಯಾಗಿ, ಅನಾದಿನಿತ್ಯತಾ ವಾ= ವೇದಗಳ ಅನಾದಿ ನಿತ್ಯತ್ವವಾದರೂ, (ಮರ್ಯಾದೆಯು), ಕುಚೋದ್ಯೇನ = ಕುಚೋದ್ಯದಿಂದ, ನ ಬಾಧ್ಯತೇ = ಬಾಧಿಸಲ್ಪಡುವುದಿಲ್ಲ.

**ಅನುವಾದ– ಯಾವ ಈಶ್ವರನು ವೇದಗಳಲ್ಲಿರುವ ಅನಂತಪದಗಳ ಅತಿದುರ್ಘಟವಾದ ಮರ್ಯಾದೆಯನ್ನು ಘಟನೆ ಮಾಡುತ್ತಾನೆಯೋ, ಅವನು ಅನಾದಿನಿತ್ಯತ್ವವನ್ನೇ ಏಕೆ ಈ ರೀತಿ ಘಟನೆಮಾಡುವುದಿಲ್ಲ. ಆದ್ದರಿಂದ ಇಲ್ಲಿ ಯಾವ ಕುಚೋದ್ಯಕ್ಕೂ ಅವಕಾಶವಿಲ್ಲ.**

**ಭಾವವಿಲಾಸಿನೀ–** ತದೇವ ವಿಶದಯತಿ – **ಅನಂತಪದಮರ್ಯಾದಾಮಿತಿ ॥** ಉಲ್ಲಿಖತೀತಿ ಪೂರ್ವೇಣ ಸಂಬಂಧಃ । ವಿಭಕ್ತ್ಯಂತವರ್ಣಾನಾಮೇವ ಪದತ್ವಾದ್ ವರ್ಣೇಷ್ವೇವೋಕ್ತ-ಪದಾವಲೀತ್ಯೋಲ್ಲೇಖನಂ ಯುಕ್ತಿಮದಿತಿ ಭಾವಃ । ಸಕೃದೇವ ಸ್ವಬುದ್ಧ್ಯಾಽನಂತ-ಪದಮರ್ಯಾದೋಲ್ಲೇಖನಂ ಕಥಂ ಘಟತೇ? ಇತ್ಯತ ಆಹ – **ಘಟಯೇದಿತಿ ॥ ಅತಿದುರ್ಘಟಮ್ । ಯಶೋದಾಂಕಗತಶಿಶುತ್ವಂ ತದೈವೋದರನಿವಿಷ್ಟಬ್ರಹ್ಮಾಂಡತ್ವಂ ಚ । ಏವಂ** ವೇತ್ಯನೇನ ಸಾಕ್ಷಾದನಂತಕ್ರಮವಿಶಿಷ್ಟವೇದಮೇವ ತದ್ವೇದಪದರಾಶಿಸ್ಥವರ್ಣಮಾಲಾ-ಸ್ವಿತ್ಯುಕ್ತಪ್ರಕಾರೇಣ ಸ್ವಬುದ್ಧ್ಯೋಲ್ಲಿಖತೀತಿ ವಾ ಇದಾನೀಮುಕ್ತಸಮೂಹಾಲಂಬನ ಪ್ರಕಾರೇಣ ವಾ ಉಲ್ಲಿಖತೀತಿ ಪಕ್ಷದ್ವಯಮಪಿ ಸಂಗೃಹ್ಣಾತಿ । ಕುಚೋದ್ಯೇನ ಅನಾದಿವ್ಯಾಪ್ತವರ್ಣೇಷು ಕಥಂ ಕ್ರಮ ಇತಿ ಕುಚೋದ್ಯೇನೇತ್ಯರ್ಥಃ ॥ ೯೫ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಅನಾದಿವರ್ಣಗಳಲ್ಲಿ ಈಶ್ವರನು ವಿಶಿಷ್ಟಕ್ರಮವನ್ನು ವಿಷಯೀಕರಿಸುವ ಪ್ರಕಾರವನ್ನು ದೃಷ್ಟಾಂತಪೂರ್ವಕವಾಗಿ ಹೇಳಿದರು. ಈ ಶ್ಲೋಕದಲ್ಲಿ ಅದನ್ನೇ ಸ್ಪಷ್ಟಪಡಿಸುತ್ತಾರೆ. ಸರ್ವಜ್ಞನಾದ ಈಶ್ವರನ ಬುದ್ಧಿಯು ಅನಂತ ಪದಗಳ ಮಾರ್ಯಾದೆಯನ್ನು ಎಂದರೆ ಅನಂತ ಪದಗಳ ಘಟಕವಾದ ವರ್ಣಗಳ ಕ್ರಮವನ್ನು ಏಕಕಾಲದಲ್ಲಿ ತನ್ನ ಬುದ್ಧಿಯಿಂದ ಉಲ್ಲೇಖಮಾಡುತ್ತದೆ, ಇದೇ ಅತ್ಯಂತ ದುರ್ಘಟವಾದುದು. ಯಶೋದೆಯ ತೊಡೆಯ ಮೇಲಿದ್ದ ಶಿಶುವು ತನ್ನ ಶರೀರದಲ್ಲಿ

ಬ್ರಹ್ಮಾಂಡವನ್ನೇ ತೋರಿಸಿದಂತೆ ಇದನ್ನೇ ಘಟನೆ ಮಾಡುವ ಈಶ್ವರನು ವೇದಗಳಲ್ಲಿರುವ ವರ್ಣಮಾಲೆಗಳ ಕ್ರಮವನ್ನು ಸಾಕ್ಷಾತ್ತಾಗಿ ತನ್ನ ಬುದ್ಧಿಯಿಂದ ಉಲ್ಲೇಖ ಮಾಡುತ್ತಾನೆಂದಾಗಲೀ, ಅಥವಾ ಪೂರ್ವವರ್ಣಾನುಭವಜನಿತ ಸಂಸ್ಕಾರಸಹಕೃತವಾದ ಶ್ರೋತ್ರದಿಂದ ಅಂತ್ಯವರ್ಣವು ಅಭಿವ್ಯಕ್ತವಾದಾಗ ಆ ಸಮೂಹಾಲಂಬನ ಜ್ಞಾನದಿಂದ ಪದತ್ವವನ್ನೂ ವಾಕ್ಯತ್ವವನ್ನೂ ಉಲ್ಲೇಖ ಮಾಡುತ್ತಾನೆ ಎಂದಾಗಲೀ ಅಂಗೀಕರಿಸಬಹುದು. ಅನಾದಿಗಳಾದ ಮತ್ತು ವ್ಯಾಪ್ತವಾದ ವರ್ಣಗಳಲ್ಲಿ ಕ್ರಮವು ಹೇಗೆ ಉಂಟಾಗುತ್ತದೆ ಎಂಬ ಕುಚೋದ್ಯಕ್ಕೆ ಅವಕಾಶವಿಲ್ಲ.

**ಉಚ್ಚಾರಯಂತ್ಯುಪಾಧ್ಯಾಯಾಸ್ತೇಪಿ ಸ್ವಾಧ್ಯಾಪಕಾನುಗಾಃ ॥ ೯೬ ॥**

**ಪುರಾಣಕೃಚ್ಚ ವೇದಾನಾಂ ವ್ಯಾಸಕೃನ್ನ ತು ಕಾರಕಃ ।**
**ಯೋ ವೇದವ್ಯಾಸನಾಮ್ನೈವ ವಿಖ್ಯಾತೋ ಮುನಿಮಂಡಲೇ ॥ ೯೭ ॥**

**ಅರ್ಥ–** ಉಪಾಧ್ಯಾಯಾಃ = ಉಪಾಧ್ಯಾಯರು, ಉಚ್ಚಾರಯಂತಿ = ವೇದಗಳನ್ನು ಉಚ್ಚಾರಮಾಡುತ್ತಾರೆ. ತೇಪಿ = ಅವರಾದರೂ ಕೂಡ, ಸ್ವ ಅಧ್ಯಾಪಕಾನುಗಾಃ = ತಮ್ಮ ಅಧ್ಯಾಪಕರು ಹೇಳಿರುವ ಪಾಠವನ್ನು ಅನುಸರಿಸಿಯೇ ಹೇಳುತ್ತಾರೆ. ಪುರಾಣಕೃತ್ = ಪುರಾಣವನ್ನು ರಚನೆ ಮಾಡಿದ ಭಗವಂತನು, ವೇದಾನಾಂ = ವೇದಗಳ, ವ್ಯಾಸಕೃತ್ = ವಿಭಾಗಮಾಡಿ ವಿಭಾಗಿಸಿದನು ಮಾತ್ರ, ನ ತು ಕಾರಕಃ = ರಚನೆ ಮಾಡಿದವನಲ್ಲ, ಅತಃ = ಆದ್ದರಿಂದ, ಮುನಿಮಂಡಲೇ = ಮುನಿಗಳ ಸಮುದಾಯದಲ್ಲಿ, ವೇದವ್ಯಾಸನಾಮ್ನೈವ ವಿಖ್ಯಾತಃ = ವೇದವ್ಯಾಸ ಎಂಬ ಹೆಸರಿನಿಂದಲೇ ವಿಖ್ಯಾತಿ ಪಡೆದಿದ್ದಾನೆ.

**ಅನುವಾದ–** ಯಾವ ಉಪಾಧ್ಯಾಯರು ವೇದವನ್ನು ಉಚ್ಚಾರ ಮಾಡುತ್ತಾರೆಯೋ, ಅವರು ತಮ್ಮ ಅಧ್ಯಾಪಕರನ್ನು ಅನುಸರಿಸಿಯೇ ಉಚ್ಚಾರವನ್ನು ಮಾಡುತ್ತಾರೆ. ಪುರಾಣಕರ್ತೃಗಳಾದ ವೇದವ್ಯಾಸರು ವೇದಗಳನ್ನು ವಿಸ್ತಾರ ಮಾಡಿದವರು ಎಂಬ ಕಾರಣದಿಂದಲೇ ಭೂಮಂಡಲದಲ್ಲಿ ವೇದವ್ಯಾಸರು ಎಂಬ ಹೆಸರಿನಿಂದ ಪ್ರಖ್ಯಾತರಾಗಿದ್ದಾರೆ. ಅವರು ವೇದವನ್ನು ವಿಸ್ತಾರ ಮಾಡಿದವರೇ ಹೊರತು, ವೇದವನ್ನು ರಚಿಸಿದವರಲ್ಲ.

**ಭಾವವಿಲಾಸಿನೀ–** ಪೂರ್ವಂ ಧರ್ಮಾದ್ಯಸಿದ್ಧಿಪ್ರಸಂಗೇನ ವೇದಸ್ಯ ಪೌರುಷೇಯತ್ವಂ ನೇತ್ತುಕ್ತಮ್ । ಅಧುನಾ ಕರ್ತುಃ ಪುರುಷಸ್ಯ ಪ್ರಸಿದ್ಧ್ಯಭಾವೇನಾಪಿ ತಸ್ಯಾಪೌರುಷೇಯತ್ವಮಿತಿ ವಕ್ತುಂ ತದುಪಯುಕ್ತಪ್ರಮೇಯಚರ್ಚಾಂ ಕರೋತಿ ಉಚ್ಚಾರಯಂತೀತಿ ॥ ೯೬ ॥

ಪುರಾಣಕೃದ್ವೇದವ್ಯಾಸಃ ವ್ಯಾಸಕೃದ್ವಿಸ್ತಾರಕೃತ್ । ವಿಸ್ತಾರಕರಣಂ ನಾಮ ಬಹುಷು ಶಿಷ್ಯೇಷು ಶಾಖಾಭೇದೇನೋಪದೇಶಕರಣಮ್ ॥ ೯೭ ॥

**ವಿವರಣೆ–** ಇದಕ್ಕಿಂತ ಮೊದಲು ಧರ್ಮಾದಿಯು ಸಿದ್ಧವಾಗದಿರುವ ಪ್ರಸಂಗವಿರುವ ಕಾರಣ, ವೇದಕ್ಕೆ ಪೌರುಷೇಯತ್ವವಿಲ್ಲವೆಂದು ಹೇಳಿದರು. ಈಗ ವೇದದ ಕರ್ತೃಅಪ್ರಸಿದ್ಧವಾದ ಕಾರಣದಿಂದಲೂ ವೇದವು ಪೌರುಷೇಯ ಎಂಬ ವಿಷಯವನ್ನು ತಿಳಿಸಲು ಚರ್ಚೆಯನ್ನು ಆರಂಭಿಸುತ್ತಾರೆ. ವೇದವನ್ನು ಉಚ್ಚಾರಣೆ ಮಾಡುವವರು ತಮ್ಮ ಅಧ್ಯಾಪಕರು ಮಾಡಿದಂತೆಯೇ ಮಾಡುತ್ತಾರೆ. ಆ ಅಧ್ಯಾಪಕರು ತಮ್ಮ ಹಿಂದಿನ ಅಧ್ಯಾಪಕರು ಮಾಡಿದಂತೆಯೇ ಮಾಡುತ್ತಾರೆ. ಹೀಗೆ ಹಿಂದಕ್ಕೆ ಹೋದರೆ ಬ್ರಹ್ಮದೇವರು ನಾರಾಯಣನು ತಮಗೆ ಹೇಳಿದಂತೆಯೇ ಅಧ್ಯಾಪನ ಮಾಡುತ್ತಾರೆ. ನಾರಾಯಣನಾದರೂ ಹಿಂದಿನ ಕಲ್ಪದಲ್ಲಿ ಇದ್ದಂತೆಯೇ ಹೇಳುತ್ತಾನೆ. ಈ ಪರಂಪರೆಯು ಹೀಗೆಯೇ ಹೋಗುವುದರಿಂದ ವೇದವು ಎಂದೂ ಪೌರುಷೇಯವಾಗುವುದಿಲ್ಲ.

'ಸಮಾಸವ್ಯಾಸ ಯೋಗತಃ' ಮುಂತಾದ ಪ್ರಯೋಗಗಳಿಂದ 'ವ್ಯಾಸ' ಎಂದರೆ 'ವಿಸ್ತಾರ' ಎಂದು ತಿಳಿಯುತ್ತದೆ. ವೇದವ್ಯಾಸರು ಅನೇಕ ಶಿಷ್ಯರಿಗೆ ಉಪದೇಶ ಮಾಡಿ, ಶಾಖಾಭೇದಗಳನ್ನು ಪ್ರವೃತ್ತಿಸಿದ ಕಾರಣ ಅವರು ವೇದವ್ಯಾಸರೆನಿಸುತ್ತಾರೆ.

**ಗೂಢಕರ್ತೃಕವಾಕ್ಯಂ ಚ ಧ್ರುವಂ ಕರ್ತೃಪ್ರಸಿದ್ಧಿಮತ್ ।**
**ಅಭೂತ್ವಾಭಾವಿಕಾರ್ಯತ್ವಾದಪೂರ್ವಗೃಹಕೂಪವತ್ ॥ ೯೮ ॥**

**ಅರ್ಥ–** ಗೂಢಕರ್ತೃಕವಾಕ್ಯಂ ಚ = ಗೂಢಕರ್ತೃವಿನಿಂದ ರಚಿತವಾದ ವಾಕ್ಯವಾದರೂ, ಅಭೂತ್ವಾಭಾವಿಕಾರ್ಯತ್ವಾತ್ = ಮೊದಲು ಇಲ್ಲದೇ ಅನಂತರ ಉತ್ಪನ್ನವಾದ ಕಾರ್ಯವಾದ್ದರಿಂದ, ಅಪೂರ್ವಗೃಹಕೂಪವತ್ = ಹೊಸದಾಗಿ ತೋಡಿದ ಮನೆಯ ಭಾವಿಯಂತೆ, ಧ್ರುವಂ = ನಿಶ್ಚಿತವಾಗಿಯೂ, ಕರ್ತೃಪ್ರಸಿದ್ಧಿಮತ್ = ಕರ್ತೃಪ್ರಸಿದ್ಧಿಯನ್ನು ಹೊಂದಿದೆ, ಆದರೆ ಕರ್ತೃಯಾರೆಂದು ಗೊತ್ತಿಲ್ಲ, ಅಂದರೆ ಕರ್ತೃ ಆದ ಪುರುಷನ ಹೆಸರು ಮಾತ್ರ ವಿದಿತವಾಗಿಲ್ಲ.

**ಅನುವಾದ–** ಗೂಢಕರ್ತೃಕವಾಕ್ಯವೂ ಸಹ ಕರ್ತೃಪ್ರಸಿದ್ಧಿಯುಳ್ಳದೇ ಆಗುತ್ತದೆ. ಏಕೆಂದರೆ ಮೊದಲಿಲ್ಲದೇ ಹೊಸದಾದ ಬಂದ ಬಾವಿಯಂತೆ, ಆ ವಾಕ್ಯವು ಮೊದಲು ಇಲ್ಲದೇ ಅನಂತರ ಬಂದದ್ದಾಗಿದೆ.

**ಭಾವವಿಲಾಸಿನೀ–** ಕರ್ತೃಪ್ರಸಿದ್ಧ್ಯಭಾವೇನಾಕರ್ತೃಕತ್ವೇ ಗೂಢಕರ್ತೃಕವಾಕ್ಯೇ ವ್ಯಭಿಚಾರ ಇತ್ಯತ ಆಹ – **ಗೂಢಕರ್ತೃಕವಾಕ್ಯಂ ಚೇತಿ** ॥ ಅಭೂತ್ವಾ ಭಾವೀತ್ಯನೇನ ಕಾರ್ಯತ್ವಮೇವ ವಿವೃತಮಿತಿ ಜ್ಞಾತವ್ಯಮ್ । ನಚಾಸಿದ್ಧೋ ಹೇತುಃ । ವೇದವದನಾದಿಕಾಲಸಿದ್ಧತ್ವಸ್ಯಾನನುಭವಾತ್ । ಕರ್ತುರ್ವಿಶಿಷ್ಯ ಪ್ರಸಿದ್ಧ್ಯಭಾವೇಽಪಿ ವಾಕ್ಯಸ್ಯ ಕಾದಾಚಿತ್ಕತ್ವೇ ವಿವಾದಾಭಾವಾತ್ ॥ ೯೮ ॥

**ವಿವರಣೆ–** ಕರ್ತೃಪ್ರಸಿದ್ಧಿಯಿಲ್ಲದಿರುವ ಕಾರಣ ವೇದವು ಅಕರ್ತೃಕವಾಗುವುದಾದರೆ ಗೂಢಕರ್ತೃಕವಾಕ್ಯದಲ್ಲಿಯೂ ಕರ್ತೃಪ್ರಸಿದ್ಧಿಯಿಲ್ಲದ ಕಾರಣ ಅಕರ್ತೃಕತ್ವವು ಉಂಟಾಗಿ

'ವೇದಃ ಅಕರ್ತೃಕಃ ಕರ್ತುರಪ್ರಸಿದ್ಧೇಃ' ಎಂಬ ನಿಮ್ಮ ಅನುಮಾನಕ್ಕೆ ವ್ಯಭಿಚಾರ ಬರುತ್ತದೆ ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರವನ್ನು ನೀಡುತ್ತಾರೆ. ಕಾರ್ಯತ್ವವೆಂದರೆ ಮೊದಲು ಇಲ್ಲದೇ ಅನಂತರ ಉಂಟಾಗುವುದು ಎಂದರ್ಥ. ಗೂಢಕರ್ತೃಕವಾಕ್ಯವು ಅಂತಹ ಕಾರ್ಯವಾದುದು. ಅದರಲ್ಲಿ ಕಾರ್ಯತ್ವವಿಲ್ಲವೆಂದು ಹೇಳುವಂತಿಲ್ಲ. ಏಕೆಂದರೆ ಸಂಪ್ರತಿಪನ್ನವಾದ ವೇದವು ಹೇಗೆ ಅನಾದಿಕಾಲದಿಂದ ಸಿದ್ಧವಾಗಿದೆಯೋ, ಹಾಗೇ ಗೂಢಕರ್ತೃಕವಾಕ್ಯವು ಅನಾದಿಕಾಲದಿಂದ ಸಿದ್ಧವಾಗಿಲ್ಲ ಎಂದು ಎಲ್ಲರ ಅನುಭವವಿದೆ. ಕರ್ತೃವುಯಾರೆಂದು ಗೊತ್ತಿಲ್ಲದಿದ್ದರೂ ವಾಕ್ಯವು ಯಾವಾಗಲೋ ಒಮ್ಮೆ ಹುಟ್ಟಿದ್ದು ಎಂಬ ಅಂಶದಲ್ಲಿ ಯಾರೂ ವಿವಾದ ಮಾಡುವುದಿಲ್ಲ.

**ಅನಾದಿತ್ವಂ ಹಿ ಗಮಯೇತ್ ಯತ್ರಾಧ್ಯೇತೃಪರಂಪರಾ ।**
**ಅಭೂತ್ವಾಭಾವಿನೀ ಸಾ ನ ತತಃ ಕರ್ತ್ರನುಮಾಪಿ ನ ।**
**ಅತೋಽಕರ್ತ್ರೈವ ಕೋಽನಂತವಾಕ್ಕರ್ತಾರಂ ನಿಗೂಹಯೇತ್ ॥ ೯೯ ॥**

**ಅರ್ಥ–** ಯತ್ರ = ಯಾವ ವೇದದ ವಿಷಯದಲ್ಲಿ, ಅಧ್ಯೇತೃಪರಂಪರಾ = ಅಧ್ಯಯನಮಾಡುವವರ ಪರಂಪರೆಯು, ಅನಾದಿತ್ವಂ ಹಿ ಗಮಯೇತ್ = ವೇದವು ಅನಾದಿಯಾದದ್ದು ಎಂದು ತಿಳಿಸುತ್ತದೆಯೋ. ಅಭೂತ್ವಾಭಾವಿನೀ ಸಾ ನ = ಅದು ಮೊದಲು ಇಲ್ಲದೇ ಅನಂತರ ಉತ್ಪನ್ನವಾದುದಲ್ಲ, ತತಃ = ಆದ್ದರಿಂದ, ಕರ್ತ್ರನುಮಾಪಿ ನ = ಕರ್ತೃವಿನ ಅನುಮಾನವನ್ನು ಸಹ ಮಾಡುವುದಿಲ್ಲ. ಅತಃ = ಆದ್ದರಿಂದ, ಅಕರ್ತಾ ಏವ = ವೇದವು ಅಪೌರುಷೇಯವೆಂದೇ ಸಿದ್ಧ. ಅನಂತವಾಕ್ಕರ್ತಾರಂ = ಅನಂತವೇದವಾಕ್ಯರಚನೆಕಾರರನ್ನು ಕಃ ನಿಗೂಢಯೇತ್ = ಯಾರು ತಾನೆ ಮುಚ್ಚಿಡಲು ಸಾಧ್ಯ?

**ಅನುವಾದ–** ಆದರೆ ಎಲ್ಲಿ ಅಧ್ಯೇತೃಪರಂಪರೆಯು ಅನಾದಿತ್ವವನ್ನೇ ಪ್ರತಿಪಾದನೆ ಮಾಡುತ್ತದೆಯೋ, ಅಲ್ಲಿ ಅಭೂತ್ವಾಭಾವಿತ್ವರೂಪವಾದ ಕಾರ್ಯತ್ವವೂ ಇಲ್ಲ. ಆದ್ದರಿಂದ ಕರ್ತೃವಿನ ಅನುಮಾನವೂ ಇಲ್ಲ. ಆದ್ದರಿಂದ ವೇದವು ಅಕರ್ತೃಕವೆಂದೇ ಸಿದ್ಧವಾಗುತ್ತದೆ. ಅನಂತ ವಾಕ್ಯಕರ್ತೃವನ್ನು ಯಾರು ಮುಚ್ಚಿಡಲು ಸಾಧ್ಯ?

**ಭಾವವಿಲಾಸಿನೀ–** ವೇದೇ ತು ನ ತಥಾ ಕರ್ತ್ರನುಮಾನಮಿತ್ಯಾಹ – **ಅನಾದಿತ್ವಮಿತಿ** ॥ ಯತ್ರ ಶ್ರುತೌ । ಸಾ ಅಭೂತ್ವಾ ಭಾವಿನೀ ನ । ನಿತ್ಯೇತಿ ಯಾವತ್ । ತತಃ ನಿತ್ಯತ್ವಾತ್ । ಅತಃ ಕರ್ತ್ರನು- ಮಾನಸ್ಯಾಪ್ಯಭಾವಾತ್ । ಗೂಹಿತಃ ಕರ್ತಾ ಭವಿಷ್ಯತೀತ್ಯತ ಆಹ – ಕ ಇತಿ ॥ ೯೯ ॥

**ವಿವರಣೆ–** ಕರ್ತೃವು ಇದ್ದರೂ ಯಾರಾದರೂ ಅವನನ್ನು ಗೂಹನೆ ಮಾಡಬಹುದು ಎಂಬ ಶಂಕೆ ಬಂದರೆ ಅಲ್ಪಸ್ವಲ್ಪ ವಾಕ್ಯಗಳನ್ನು ಹೇಳಿದವನ್ನು ಗೂಹನೆ ಮಾಡಲು ಸಾಧ್ಯವಿದ್ದರೂ ಅನಂತವಾಕ್‌ಕರ್ತೃವನ್ನು ಗೂಹನೆ ಮಾಡಲು ಸಾಧ್ಯವಿಲ್ಲದ್ದರಿಂದ ಅಂತಹ ಕರ್ತೃವೇ ಇಲ್ಲ ಎಂದು ಗ್ರಂಥಕಾರರು ತಿಳಿಸುತ್ತಾರೆ.

ಕರ್ತೃಪ್ರಸಿದ್ಧ್ಯಭಾವೇನ ತದ್ವೇದೋಽಯಮಕರ್ತೃಕಃ ॥ ೧೦೦ ॥

**ಅರ್ಥ**— ತತ್= ಆದ್ದರಿಂದ, ಕರ್ತೃಪ್ರಸಿದ್ಧ್ಯಭಾವೇನ= ಕರ್ತೃಪ್ರಸಿದ್ಧಿ ಇಲ್ಲದಿರುವುದರಿಂದ, ಅಯಂ ವೇದಃ = ಈ ಪ್ರಸಕ್ತವಾದ, ಪೂರ್ವೋಕ್ತವರ್ಣಕ್ರಮವಿಶಿಷ್ಟವಾದ ವೇದವು, ಅಕರ್ತೃಕಃ = ಅಪೌರುಷೇಯವು.

**ಅನುವಾದ**— ಕರ್ತೃಪ್ರಸಿದ್ಧಿಯಿಲ್ಲದಿರುವ ಕಾರಣದಿಂದ ಈ ವೇದವು ಅಕರ್ತೃಕವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ**— ಉಪಸಂಹರತಿ — **ಕರ್ತೃಪ್ರಸಿದ್ಧ್ಯಭಾವೇನೇತಿ** ॥ ಉಪಾಧ್ಯಾಯಪರಮ್ಪರಾಯಾಃ ವೇದವ್ಯಾಸಸ್ಯೇಶ್ವರಸ್ಯ ಚ ಕರ್ತೃತ್ವಪ್ರಸಿದ್ಧ್ಯಭಾವಸ್ಯ ಚೋಕ್ತತ್ವಾತ್ ಕರ್ತೃಪ್ರಸಿದ್ಧ್ಯಭಾವೇನೇತ್ಯರ್ಥಃ ॥ ೧೦೦ ॥

**ವಿವರಣೆ**— ಉಪಾಧ್ಯಾಯ ಪರಂಪರೆಯಲ್ಲಿ ಕರ್ತೃಪ್ರಸಿದ್ಧಿಯಿಲ್ಲದಿರುವುದರಿಂದಲೂ ವೇದವ್ಯಾಸರೇ ಭಗವಂತನಾಗಿದ್ದರೂ ಕರ್ತೃಗಳೆಂಬ ಪ್ರಸಿದ್ಧಿಯಿಲ್ಲದಿರುವುದರಿಂದಲೂ ವೇದವು ಅಕರ್ತೃಕವೆಂದು ಇಲ್ಲಿ ಉಪಸಂಹಾರ ಮಾಡುತ್ತಾರೆ.

ಕನ್ಯಾಕುಮಾರೀ ಕನ್ಯಾತ್ವಂ ಯಥಾ ಭರ್ತುರಭಾವತಃ ।
ಲೇಭೇ ಶ್ರುತಿಕುಮಾರೀಯಂ ತಥಾ ಕರ್ತುರಭಾವತಃ ।
ಅಕರ್ತೃತ್ವಂ ಧ್ರುವಂ ಲೇಭೇ ಯಾ ನಿತ್ಯೇತಿ ಶ್ರುತೌ ಶ್ರುತಾ ॥ ೧೦೧ ॥

**ಅರ್ಥ**— ಯಥಾ = ಹೇಗೆ, ಭರ್ತುಃ ಅಭಾವಾತ್ = ಗಂಡನೇ ಇಲ್ಲದಿರುವುದರಿಂದ, ಕನ್ಯಾಕುಮಾರೀ = ಕನ್ಯಾಕುಮಾರಿಯು, ಕನ್ಯಾತ್ವಂ = ಕನ್ಯಾತ್ವವನ್ನು, ಲೇಭೇ = ಹೊಂದಿದ್ದಾಳೆಯೋ, ತಥಾ = ಹಾಗೆ, ಯಾ= ಯಾವನು, ನಿತ್ಯಾ ಇತಿ= ನಿತ್ಯಳೆಂಬುದಾಗಿ, ಶ್ರುತೌ= ವೇದದಲ್ಲಿ, ಶ್ರುತಾ= ವರ್ಣಿಸಲ್ಪಟ್ಟಿದ್ದಾಳೋ, ಸಾ= ಆ, ಶ್ರುತಿಕುಮಾರೀ= ವೇದವೆಂಬ ಕುಮಾರಿಯು, ಕರ್ತುಃ ಅಭಾವಾತ್ = ಕರ್ತೃವಿಲ್ಲದಿರುವುದರಿಂದ, ಅಕರ್ತೃತ್ವಂ = ಅಕರ್ತೃತ್ವವನ್ನು, ಧ್ರುವಂ ಲೇಭೇ = ನಿಶ್ಚಯವಾಗಿಯೂ ಹೊಂದಿದ್ದಾಳೆ.

**ಅನುವಾದ**— ಭರ್ತೃವಿಲ್ಲದ ಕಾರಣ ಹೇಗೆ ಕನ್ಯಾಕುಮಾರಿಯು ಕನ್ಯಾತ್ವವನ್ನು ಹೊಂದಿದಳೋ, ಹಾಗೇಯೇ ಕರ್ತೃವು ಇಲ್ಲದಿರುವ ಕಾರಣ ಶ್ರುತಿಕುಮಾರಿಯೂ ಸಹ ನಿಶ್ಚಯವಾಗಿ ಅಕರ್ತೃತ್ವವನ್ನು ಹೊಂದಿದಳು. ಅಷ್ಟೇ ಅಲ್ಲ ಈ ಅಕರ್ತೃಕತ್ವವು ಯಾನಿತ್ಯಾ ಮುಂತಾದ ಶ್ರುತಿಗಳಲ್ಲಿಯೂ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ**— ತತ್ರ ದೃಷ್ಟಾಂತಮಾಹ — **ಕನ್ಯೇತಿ** ॥ ಯಥಾ ಕನ್ಯಾಕುಮಾರೀ ಭರ್ತುರಭಾವತಃ ಕನ್ಯಾತ್ವಂ ಲೇಭೇ ತಥೇಯಂ ಶ್ರುತಿಕುಮಾರೀತಿ ಸಂಬಂಧಃ । ಯಾ ಶ್ರುತಿಃ 'ಶ್ರುತಿರ್ವಾವ ನಿತ್ಯಾ

ಅನಿತ್ಯಾ ವಾವ ಸ್ಮೃತಯಃ' । 'ವಾಚಾ ವಿರೂಪನಿತ್ಯಯಾ' । 'ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್' 'ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ । ಅನಾದಿನಿತ್ಯಾ ಸಾ ತಚ್ಚ ವಿನಾ ತಾಂ ನ ಸ ಗಮ್ಯತೇ' ಇತ್ಯಾದಿಶ್ರುತೌ ನಿತ್ಯಾ ಶ್ರುತೇತಿ ಸಂಬಂಧಃ । 'ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಗ್' ಇತ್ಯತ್ರಾಪ್ಯವ್ಯವಹಿತೋತ್ತರ 'ಕಶ್ಛಂದಸಾಮ್' ಇತಿ ವಾಕ್ಯೇನ ವೇದಸ್ಯೈವ ಪ್ರಸ್ತಾವಿತ-ತ್ವಾತ್ಪೂರ್ವೋಕ್ತಾ ವಾಗಪಿ ಸೈವೇತಿ ಜ್ಞಾತವ್ಯಮ್ । ವಕ್ಷ್ಯಮಾಣಕರ್ತೃಪ್ರಸಿದ್ಧ್ಯ-ಭಾವಾಖ್ಯಹೇತೋಃ ಪ್ರಾಮಾಣಿಕತ್ವದ್ಯೋತನಾಯೇದಮುಕ್ತಮ್ ॥ ೧೦೧ ॥

**ವಿವರಣೆ–** ವೇದವು ಅಕರ್ತೃಕ ಎಂಬ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ. ಕನ್ಯಾಕುಮಾರಿಯ ಕನ್ಯಾತ್ವದಂತೆ ಶ್ರುತಿಕುಮಾರಿಯ ಅಕರ್ತೃಕತ್ವವೂ ಸಹ ಉಂಟಾಗಿದೆ. ಈ ವಿಷಯದಲ್ಲಿ ಅನೇಕ ಶ್ರುತಿಗಳಿವೆ. ''ಶ್ರುತಿರ್ವಾವ ನಿತ್ಯಾ ಅನಿತ್ಯಾ ವಾವ ಸ್ಮೃತಯಃ'', ''ವಾಚಾ ವಿರೂಪನಿತ್ಯಯಾ'', ''ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್'', ''ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾಶ್ರುತಿಃ । ಅನಾದಿನಿತ್ಯಾ ಸಾ ತಚ್ಚ ವಿನಾ ತಾಂ ನ ಸ ಗಮ್ಯತೇ'' ಇವೇ ಮೊದಲಾದ ಶ್ರುತಿಗಳು ವೇದದ ನಿತ್ಯತ್ವವನ್ನು ಹೇಳುತ್ತವೆ. 'ಯದ್ಯಪಿ ಯಾವದ್‌ಬ್ರಹ್ಮವಿಷ್ಠಿತಂ ತಾವತೀ ವಾಕ್' ಎಂಬ ಶ್ರುತಿಯಲ್ಲಿ ವಾಕ್ ಎಂಬ ಶಬ್ದವಿದೆ. ವೇದ ಎಂಬ ಶಬ್ದವಿಲ್ಲ. ಆದರೂ 'ಕಶ್ಛಂದಸಾಮ್ ಯೋಗಮಾವೇದ ಧಿ ೀರಃ' ಎಂಬ ಉತ್ತರವಾಕ್ಯದಲ್ಲಿ ವೇದದ ಉಲ್ಲೇಖವಿರುವುದರಿಂದ ಹಿಂದೆ ಪ್ರಸ್ತುತವಾದ ವಾಕ್ ಎಂಬುದು ವೇದವೆಂದೇ ಸಿದ್ಧವಾಗುತ್ತದೆ. ನಮ್ಮ ಅನುಮಾನದಲ್ಲಿ ಕರ್ತೃಪ್ರಸಿದ್ಧ್ಯಭಾವರೂಪವಾದ ಹೇತುವಿಗೆ ಅಸಿದ್ಧಿರೂಪವಾದ ದೋಷವಿಲ್ಲವೆಂದು ತಿಳಿಸಲು ಇವೆಲ್ಲಾ ಶ್ರುತಿಗಳನ್ನು ಉದಾಹರಣೆ ಮಾಡುತ್ತಾರೆ.

**ಪಿಪೀಲಿಕಾಲಿಪಿಶ್ಚಾಪಿ ತೈರಜ್ಞೈರ್ಭ್ರಮತಃ ಕೃತಾ ।**
**ಬಾಧೇ ವ್ಯಭಿಚರೇದರ್ಥಂ ನ ತ್ವನಾದಿರಿಯಂ ಶ್ರುತಿಃ ॥ ೧೦೨ ॥**

**ಅರ್ಥ–** ಪಿಪೀಲಿಕಾಲಿಪಿಶ್ಚಾಪಿ = ಇರುವೆಯು ಹಾದುಹೋದರೆ ರೇಖೆಗಳಿಂದ ಬಂದ ಲಿಪಿಯ ಕೂಡ, ತೈಃ ಅಜ್ಞೈಃ = ಆ ಅಜ್ಞಾನಿಗಳಾದ ಇರುವೆಗಳಿಂದ, ಭ್ರಮತಃ =ತಿರುಗುವುದರಿಂದ, ಕೃತಾ = ಮಾಡಲ್ಪಟ್ಟಿದೆ, ಬಾಧೇ= ಅರ್ಥಕ್ಕೆ ಬಾಧ ಬಂದಾಗ ಸಾ= ಆ ಪಿಪೀಲಿಕಾ ಲಿಪಿಯು, ಅರ್ಥ= ತನ್ನ ಅರ್ಥವನ್ನು ವ್ಯಭಿಚರೇತ್= ವ್ಯಭಿಚರಿಸುತ್ತದೆ, ತು= ಆದರೆ, ಇಯಂ= ಈ ಅನಾದಿಃ= ಅನಾದಿಯಾದ, ಶ್ರುತಿಯು ನ= ಬಾಧವಿಲ್ಲದಿರುವುದರಿಂದ, ತನ್ನ ಅರ್ಥವನ್ನು ವ್ಯಭಿಚರಿಸುವುದಿಲ್ಲ.

**ಅನುವಾದ–** ಪಿಪೀಲಿಕಾ ಲಿಪಿಯೂ ಸಹ ತಿರುಗಾಡುವ ಜ್ಞಾನಶೂನ್ಯಗಳಾದ ಪಿಪೀಲಿಕಾಗಳಿಂದ ರಚಿತವೆಂದು ಪ್ರಸಿದ್ಧವಾಗಿವೆ. ಅದಕ್ಕೆ ಬಾಧಬಂದರೆ ಅರ್ಥವ್ಯಭಿಚಾರಿಯಾಗಿ ಅಪ್ರಮಾಣವಾಗುತ್ತದೆ. ಆದರೆ ಅನಾದಿಯಾದ ಈ ಶ್ರುತಿಯು ಮಾತ್ರ ಎಂದೂ ಅಪ್ರಮಾಣವಾಗವುದಿಲ್ಲ.

**ಭಾವವಿಲಾಸಿನೀ–** ನನು ವೇದಸ್ಯ ಬುದ್ಧಿಪೂರ್ವಕರಚನಾಭಾವೇನ ಪಿಪೀಲಿಕಾಲಿಪಿವದ-ಪ್ರಾಮಾಣ್ಯಂ ಸ್ಯಾದಿತ್ಯತ ಆಹ – **ಪಿಪೀಲಿಕೇತಿ** ॥ ಅಜ್ಞೈಸ್ತೈಃ ಪಿಪೀಲಿಕಾಸಮೂಹೈಃ ಕೃತಾ ಪಿಪೀಲಿಕಾಲಿಪಿರಪಿ ಬಾಧೇ ಸತ್ಯರ್ಥಂ ವ್ಯಭಿಚರೇತ್ । ತದಭಾವೇ ಪ್ರಮಾಣಮೇವೇತಿ ಭಾವಃ ॥ ೧೦೨ ॥

**ವಿವರಣೆ–** ವೇದವು ಬುದ್ಧಿಪೂರ್ವಕವಾಗಿ ರಚಿತವಾಗಿಲ್ಲದಿದ್ದರೂ ಪಿಪೀಲಿಕಾ ಲಿಪಿಯಂತೆ ಏಕೆ ಅಪ್ರಮಾಣವಾಗಬಾರದು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ನೀಡುತ್ತಾರೆ. ಜ್ಞಾನ ಶೂನ್ಯವಾದ ಇರುವೆಗಳಿಂದ ರಚಿತವಾದ ಲಿಪಿಯೂ ಸಹ ಬಾಧವಿದ್ದರೆ ಮಾತ್ರ ಅಪ್ರಮಾಣವಾಗುತ್ತದೆ. ಇಲ್ಲದಿದ್ದರೆ ಪ್ರಮಾಣವೇ ಆಗುತ್ತದೆ. ಅನಾದಿಯಾದ ಶ್ರುತಿಯು ರಚಿತವಾಗಿಲ್ಲವಾದ ಕಾರಣ ಇಲ್ಲಿ ದೋಷಕ್ಕೆ ಅವಕಾಶವಿಲ್ಲ ಆದ್ದರಿಂದ ಬಾಧವಿಲ್ಲದಿರುವುದರಿಂದ ಎಂದೂ ಅಪ್ರಾಮಾಣ್ಯ ಬರುವುದಿಲ್ಲ.

**ಕಿಂಚ ಸ್ವವ್ಯಾಪ್ತವರ್ಣಾನಾಂ ಲಿಪಿಃ ಸಾ ಹ್ಯನುಮಾಪಿಕಾ ।**
**ವಾಕ್ಯಂ ತೈಃ ಕುರುತೇ ತಜ್ಞಸ್ತತಃ ಪುಂವಾಕ್ಯಮೇವ ತತ್ ॥ ೧೦೩ ॥**

**ಲಿಪಿಕಾರಕದೋಷೇಣ ದುರ್ಲಿಪ್ಯಾ ದುಷ್ಟವರ್ಣಧೀಃ ।**
**ತೇನಾಯೋಗ್ಯಾರ್ಥಕಂ ವಾಕ್ಯಂ ತತಶ್ಚಾಮಾನತಾ ಕ್ವಚಿತ್ ॥ ೧೦೪ ॥**

**ಅರ್ಥ–** ಕಿಂಚ = ಮತ್ತು, ಸಾಲಿಪಿಃ = ಆ ಪಿಪೀಲಿಕಾಲಿಪಿಯು, ಸ್ವವ್ಯಾಪ್ತವರ್ಣಾನಾಂ = ತನ್ನಲ್ಲಿ ಸಂಕೇತಿಕವಾದ ವರ್ಣಗಳಿಗೆ, ಅನುಮಾಪಿಕಾ ಹಿ = ಅನುಮಾಪಕವಷ್ಟೆ? ತತಃ = ಅನಂತರ, ತಜ್ಞಃ = ಆ ಲಿಪಿಗಳ ಜ್ಞಾನವುಳ್ಳವನು, ತೈಃ = ಆ ಲಿಪಿಗಳಿಂದ, ವಾಕ್ಯಂ = ವಾಕ್ಯವನ್ನು, ಕುರುತೇ = ಮಾಡುತ್ತಾನೆ. ತತ್ = ಆ ವಾಕ್ಯವಾದರೂ, ಪುಂವಾಕ್ಯಮೇವ = ಪುರುಷವಾಕ್ಯವೇ ಸರಿ.

ಕ್ವಚಿತ್ = ಕೆಲವು ಕಡೆ, ಲಿಪಿಕಾರಕದೋಷೇಣ = ಲಿಪಿಕಾರನ ದೋಷದಿಂದ, ದುರ್ಲಿಪ್ಯಾ = ದುಷ್ಟವಾದ ಲಿಪಿಉಂಟಾಗುವುದರಿಂದ, ದುಷ್ಟವರ್ಣಧೀಃ = ದುಷ್ಟವಾದ ವರ್ಣಗಳ ಬುದ್ಧಿಯು ಉಂಟಾಗುತ್ತದೆ. ತೇನ = ಆದರಿಂದ, ಅಯೋಗ್ಯಾರ್ಥಕಂ ವಾಕ್ಯಂ = ಅಯೋಗ್ಯಾರ್ಥಕವನ್ನು ಕೊಡುವ ವಾಕ್ಯವು ಉಂಟಾಗುತ್ತದೆ. ತತಃ = ಅದು ಅಯೋಗ್ಯಾ-ರ್ಥಕವಾದುದರಿಂದಲೇ, ತಸ್ಯ = ಆ ವಾಕ್ಯಕ್ಕೆ, ಅಮಾನತಾ = ಅಪ್ರಾಮಾಣ್ಯವು ಇದೆ.

**ಅನುವಾದ–** ಅದೂ ಅಲ್ಲದೇ ಲಿಪಿಯನ್ನು ತಿಳಿದವನು ಪಿಪೀಲಿಕಾ ಲಿಪಿಯಿಂದ ಆ ರೇಖೆಗಳಿಗೆ ವ್ಯಾಪ್ತವಾದ ವರ್ಣಗಳನ್ನು ಅನುಮಾನವನ್ನು ಮಾಡಿ, ಅದರಿಂದ ಪದಗಳನ್ನು, ಆ ಪದಗಳಿಂದ ವಾಕ್ಯಗಳನ್ನು ಅನುಸಂಧಾನ ಮಾಡುತ್ತಾನೆ. ಆದ್ದರಿಂದ ಆ ವಾಕ್ಯವು ಪುರುಷವಾಕ್ಯವೇ ಆಗುತ್ತದೆ.

ಲಿಪಿಕಾರನಲ್ಲಿ ದೋಷವಿದ್ದು ದುಷ್ಟಲಿಪಿಯನ್ನು ಬರೆದಿದ್ದರೆ, ದುಷ್ಟವರ್ಣದ ಅನುಮಿತಿಯುಂಟಾಗುತ್ತದೆ. ಆದ್ದರಿಂದ ಅಯೋಗ್ಯಾರ್ಥವಾದ ವಾಕ್ಯದ ಅನುಸಂಧಾನವುಂಟಾಗುತ್ತದೆ. ಅದರಿಂದ ಒಮ್ಮೊಮ್ಮೆ ಲಿಪಿಯು ಅಪ್ರಮಾಣ ವಾಗುತ್ತದೆ.

**ಭಾವವಿಲಾಸಿನೀ–** ಪಿಪೀಲಿಕಾಲಿಪೇರಪ್ಯಂತತಃ ಪುಂವಾಕ್ಯತ್ವೇನೈವ ಬೋಧಕತಾ । ನತು ಕೇವಲಲಿಪಿತ್ವೇನ । ಪುಂವಾಕ್ಯಂ ಚ ಅರ್ಥಾಬಾಧೇ ಪ್ರಮಾಣಮ್ । ಅರ್ಥಬಾಧೇ ತ್ವಪ್ರಮಾಣಂ ಚ ಲೋಕೇ ದೃಷ್ಟಮಿವಮತ್ಯಪೌರುಷೇಯವಾಕ್ಯಾಪ್ರಾಮಾಣ್ಯೇನಾಯಂ ದೃಷ್ಟಾಂತ ಇತಿ ಭಾವೇನಾಹ – **ಕಿಂಚೇತಿ** ॥ ತತ್ತದ್ವರ್ಣೇಷು ಸಙ್ಕೇತಿತಸ್ತತ್ತದ್ರೇಖಾವಿಶೇಷ ಏವ ಲಿಪಿರ್ನಾಮ । ತಥಾಚ ತಾದೃಶರೇಖಾವಿಶೇಷಂ ದೃಷ್ಟ್ವಾ ತದ್ವ್ಯಾಪ್ಯೋ ವರ್ಣೋಽನುಮೀಯತೇ । ಏವಂ ರೇಖಾಂತರೇಣ ವರ್ಣಾಂತರಮ್ । ಲಿಪ್ಯನುಮಿತೈಶ್ಚ ವರ್ಣೈಃ ಪದಂ ವಾಕ್ಯಂ ಚ ತಜ್ಜ್ಞೋ ಲಿಪಿಜ್ಞಃ ಕುರುತೇ । ತತೋ ಲಿಪ್ಯನುಮಿತವರ್ಣಸಮೂಹೈಃ ರಚಿತಂ ತದ್ವಾಕ್ಯಂ ಪುಂವಾಕ್ಯಮ್ । ತಥಾಚ ತದ್ವಾಕ್ಯತ್ವೇನೈವ ಪ್ರಮಾಣಮ್, ನತು ಲಿಪಿತ್ವೇನೈವೇತಿ ಭಾವಃ ॥ ೧೦೩ ॥

ತಸ್ಯ ಚ ವಾಕ್ಯಸ್ಯ ಕ್ವಚಿದಪ್ರಾಮಾಣ್ಯೇ ಕಾರಣಮಾಹ – **ಲಿಪಿಕಾರಕೇತಿ** ॥ ಕ್ವಚಿಲ್ಲಿಪಿಕಾರಕಸ್ಯ ಪಿಪೀಲಿಕಾದೇರ್ದೋಷೇಣ ಅಜ್ಞಾನಭ್ರಮಾದಿನಾ ಜಾತಯಾ ದುರ್ಲಿಪ್ಯಾ ದುಷ್ಟವರ್ಣಧೀರ್ಭವತಿ । ತೇನ ದುರ್ಲಿಪ್ಯನುಮಿತವರ್ಣಸಮೂಹೇನಾಯೋಗ್ಯಾರ್ಥಕಂ ವಾಕ್ಯಂಭವತಿ । ತತಶ್ಚಾಯೋಗ್ಯಾರ್ಥಕವಾಕ್ಯತ್ವಾತ್ ಕ್ವಚಿದಮಾನತಾ ಭವತೀತ್ಯರ್ಥಃ । ವೇದೇ ತು ನ ತಥಾ ಲಿಪಿಕಾರಕದೋಷೋಽಸ್ತಿ । ಕಿಂತು ಅನಾದಿಕಾಲಮಾರಭ್ಯೋಪಾಧ್ಯಾಯಪರಂಪರಯಾ ನಿಯತಾಧ್ಯಯನಮೇವ । ತಸ್ಯ ಕುತೋಽಪ್ರಾಮಾಣ್ಯಮಿತಿ ಭಾವಃ ॥ ೧೦೪ ॥

**ವಿವರಣೆ–** ಪಿಪೀಲಿಕಾ ಲಿಪಿಯೂ ಸಹ ಪರ್ಯವಸಾನದಲ್ಲಿ ಪುರುಷವಾಕ್ಯವಾಗಿಯೇ ಬೋಧಕವಾಗುತ್ತದ. ಕೇವಲ ಲಿಪಿಯಾಗಿ ಅಲ್ಲ. ಪುಂವಾಕ್ಯವಾದರೂ ಅರ್ಥಬಾಧವಿಲ್ಲದಿದ್ದರೆ ಪ್ರಮಾಣ. ಅರ್ಥವ್ಯಭಿಚಾರಿಯಾದರೆ ಅಪ್ರಮಾಣವೆಂದು ಲೋಕದಲ್ಲಿ ದೃಷ್ಟವಾಗಿದೆ. ಆದ್ದರಿಂದ ಅಪೌರುಷೇಯವಾಕ್ಯವು ಅಪ್ರಮಾಣ ಎಂಬ ವಿಷಯದಲ್ಲಿ ಪಿಪೀಲಿಕಾ ಲಿಪಿಯು ದೃಷ್ಟಾಂತವಾಗುವುದಿಲ್ಲ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಬೇರೆ ಬೇರೆ ರೇಖೆಗಳು ಬೇರೆ ಬೇರೆ ವರ್ಣಗಳಿಗೆ ಸಂಕೇತವಾಗಿವೆ. ಆದ್ದರಿಂದ ಆ ರೇಖೆಗಳನ್ನು ನೋಡಿ, ವರ್ಣಗಳನ್ನು ಅನುಮಾನ ಮಾಡಿ ಆ ಅನುಮಿತವಾದ ವರ್ಣಗಳಿಂದ ಪದವನ್ನೂ, ವಾಕ್ಯವನ್ನೂ ಲಿಪಿಜ್ಞನಾದವನು ಮಾಡಿಕೊಳ್ಳುತ್ತಾನೆ. ಆದ್ದರಿಂದ ಆ ವಾಕ್ಯವು ಲಿಪಿಯಿಂದ ಅನುಮಿತವಾಕ್ಯದ ಪುರುಷ ವಾಕ್ಯವೇ ಆಗುತ್ತದೆ. ಆದ್ದರಿಂದ ಪಿಪೀಲಿಕಾ ಲಿಪಿಯು ಪುರುಷವಾಕ್ಯತ್ವೇನ ಪ್ರಮಾಣವಾಗುತ್ತವೆ. ಲಿಪಿಯಾಗಿ ಪ್ರಮಾಣವಾಗುವುದಿಲ್ಲ.

ಒಮ್ಮೊಮ್ಮೆ ಲಿಪಿಯು ಅಪ್ರಮಾಣವಾಗುವುದಕ್ಕೆ ಇಲ್ಲಿ ಕಾರಣವನ್ನು ಹೇಳುತ್ತಾರೆ. ಲಿಪಿಕಾರಕಗಳಾದ ಪಿಪೀಲಿಕಾಗಳ ದೋಷದಿಂದ ಎಂದರೆ ಅಜ್ಞಾನದಿಂದ. ಅಥವಾ

ಬೇರೆಕಡೆಯಲ್ಲಾದರೆ ಭ್ರಮದಿಂದ ಉಂಟಾದ ದುರ್ಲಿಪಿಯಿಂದ ದುಷ್ಟವರ್ಣದ ಜ್ಞಾನವು ಉಂಟಾಗುತ್ತದೆ. ಅಂತಹ ವರ್ಣಗಳ ಸಮೂಹದಿಂದ ಅಯೋಗ್ಯಾರ್ಥವಾದ ವಾಕ್ಯದ ಅನುಸಂಧಾನವುಂಟಾಗುತ್ತದೆ. ಆ ವಾಕ್ಯವು ಅಯೋಗ್ಯಾರ್ಥಕ ವಾದುದ್ದರಿಂದಲೇ ಅಪ್ರಮಾಣವಾಗುತ್ತದೆ. ವೇದದಲ್ಲಾದರೆ ಅಂತಹ ಲಿಪಿಕಾರಕ ದೋಷಕ್ಕೆ ಅವಕಾಶವಿಲ್ಲ. ಅನಾದಿಕಾಲದಿಂದಲೂ ಅಧ್ಯಾಪಕರ ಪರಂಪರೆಯಿಂದ ನಿಯತವಾದ ಅಧ್ಯಯನವುಳ್ಳದ್ದಾಗಿದೆ. ಆದ್ದರಿಂದ ಅಲ್ಲಿ ಅಪ್ರಾಮಾಣ್ಯಕ್ಕೆ ಅವಕಾಶವೇ ಇಲ್ಲ.

**ಅನಾದಿತಸ್ತು ಯದ್ವಾಕ್ಯಂ ಶೃಣೋತ್ಯೇವಾಖಿಲೋ ಜನಃ ।**
**ಸ್ವಯಂ ಪುನರ್ನ ಕುರುತೇ ಶ್ರಾವಕಾಶ್ಚ ಸುರರ್ಷಯಃ ॥ ೧೦೫ ॥**

**ಯಸ್ಯ ಸ್ವರಾಶ್ಚ ನಿಯತಾಃ ಕ್ರಮಾಶ್ಚ ನಿಯತಾಃ ಸದಾ ।**
**ಫಲಂ ಚ ದೃಶ್ಯತೇ ಯಸ್ಯ ತದ್ಧಿ ಮಾನಂ ಮಹತ್ತರಮ್ ॥ ೧೦೬ ॥**

**ಅರ್ಥ–** ಅನಾದಿತಸ್ತು = ಅನಾದಿಕಾಲದಿಂದಲೂ, ಯದ್ವಾಕ್ಯಂ = ಯಾವ ವೇದವಾಕ್ಯವನ್ನು, ಅಖಿಲಃ ಜನಃ =ಎಲ್ಲ ಜನರೂ ಕೂಡ, ಶೃಣೋತ್ಯೇವ =ಕೇಳುತ್ತಾರೆಯೋ, ಪುನಃ = ಮತ್ತೆ, ನ ಕುರುತೇ = ರಚನೆ ಮಾಡುವುದಿಲ್ಲವೋ, ಸುರರ್ಷಯಃ = ದೇವತೆಗಳು, ಋಷಿಗಳು ಕೂಡ, ಸ್ವಯಂ = ತಾವಾಗಿಯೇ, ಶ್ರಾವಕಾಶ್ಚ = ಪಾಠ ಕೇಳುವವರಾಗಿದ್ದಾರೆಯೋ.

ಯಸ್ಯ = ಯಾವ ವೇದವಾಕ್ಯಕ್ಕೆ, ಸ್ವರಾಶ್ಚ =ಉದಾತ್ತ ಅನುದಾತ್ತಾದಿ ಸ್ವರಗಳು, ನಿಯತಾಃ =ನಿಯತವಾಗಿವೆಯೋ, ಕ್ರಮಾಶ್ಚ = ಸಂಹಿತಾದಿಕ್ರಮಗಳೂ, ಸದಾ = ಎಲ್ಲಾ ಕಾಲದಲ್ಲಿಯೂ, ನಿಯತಾಃ = ನಿಯತವಾಗಿವೆಯೋ, ಯಸ್ಯ= ಯಾವ ವೇದವಾಕ್ಯಕ್ಕೆ, ಫಲಂ ಚ =ಜಪಾದಿಗಳಿಂದ ಫಲವೂ ಕೂಡ, ದೃಶ್ಯತೇ = ತೋರುತ್ತದೆಯೋ, ತದ್ = ಅಂತಹ ವೇದವಾಕ್ಯವು, ಮಹತ್ತರಂ ಮಾನಂ ಹಿ = ಅತ್ಯಂತ ಪ್ರಮಾಣವಾಗಿದೆಯಷ್ಟೇ.

**ಅನುವಾದ– ಯಾವ ವಾಕ್ಯವನ್ನು ಎಲ್ಲರೂ ಅನಾದಿಕಾಲದಿಂದಲೂ ಕೇಳುತ್ತಲೇ ಇದ್ದಾರೆಯೋ, ಯಾರು ಅದನ್ನು ಸ್ವತಃ ರಚಿಸುವುದಿಲ್ಲವೋ, ಮತ್ತು ಯಾವವಾಕ್ಯಕ್ಕೆ ದೇವತೆಗಳು ಮತ್ತು ಋಷಿಗಳು ಶ್ರೋತೃಗಳಾಗಿದ್ದಾರೆಯೋ, ಯಾವವಾಕ್ಯದ ಪದಗಳು ಮತ್ತು ಕ್ರಮಗಳು ನಿಯತವಾಗಿವೆಯೋ ಮತ್ತು ಯಾವವಾಕ್ಯಕ್ಕೆ ಫಲವು ದೃಷ್ಟವಾಗಿವೆಯೋ, ಆ ವಾಕ್ಯವು ಮಹತ್ತರವಾದ ಪ್ರಮಾಣವಷ್ಟೇ.**

**ಭಾವವಿಲಾಸಿನೀ–** ರೀತ್ಯಂತರೇಣ ವೇದಸ್ಯಾಪೌರುಷೇಯತ್ವಂ ಪ್ರಾಮಾಣ್ಯಂ ಚ ಸಾಧಯತಿ – **ಅನಾದಿತ ಇತ್ಯಾದಿನಾ ॥ ಶ್ರಾವಕಾ ಶ್ರೋತಾರಃ ।** ಸ್ಮೃತ್ಯಾದಿಕರ್ತೄಣಾಂ ವಸಿಷ್ಠಾದಿಋಷೀಣಾಂ ಬ್ರಹ್ಮಾದಿದೇವಾನಾಂ ಶ್ರೋತೃತ್ವೇ ಸೃಷ್ಟ್ಯಾದೌ ಯೋಗನಿದ್ರಾಂ ಕುರ್ವತೋ ವಿಷ್ಣೋರಪಿ

ಶ್ರೋತೃತ್ವೇ ಕಃ ಕರ್ತಾ ಸ್ಯಾದಿತಿ ಭಾವಃ ॥ ೧೦೫ ॥

ಫಲಂ ಚ ದೃಶ್ಯತೇ ಜಪಾದಿನೇತಿ ಶೇಷಃ ॥ ೧೦೬ ॥

**ವಿವರಣೆ–** ಪ್ರಕಾರಾಂತರದಿಂದ ವೇದಕ್ಕೆ ಅಪೌರುಷೇಯತ್ವವನ್ನೂ ಮತ್ತು ಪ್ರಾಮಾಣ್ಯವನ್ನೂ ಸಾಧಿಸುತ್ತಾರೆ. ಸ್ಮೃತಿಗಳನ್ನು ರಚಿಸುವ ವಸಿಷ್ಠಾದಿ ಋಷಿಗಳು, ಬ್ರಹ್ಮಾದಿ ದೇವತೆಗಳು ಶ್ರೋತೃಗಳೇ ಆಗಿರುವಾಗ ಸೃಷ್ಟಿಯ ಆದಿಯಲ್ಲಿ ಯೋಗನಿದ್ರೆಯನ್ನು ಮಾಡುವ ನಾರಾಯಣನು ದುರ್ಗಾದೇವಿಯ ಸ್ತೋತ್ರರೂಪವಾದ ವೇದಕ್ಕೆ ಶ್ರೋತೃವೇ ಆಗಿರುವುದರಿಂದ ಅದಕ್ಕೆ ಯಾರು ಕರ್ತೃವಾಗಲು ಸಾಧ್ಯ? ಆದುದರಿಂದ ಅಪೌರುಷೇಯತ್ವವು ಸಿದ್ಧವಾಗುತ್ತದೆ. ಜಪಾದಿಗಳಿಂದ ಫಲವು ಕಂಡುಬರುವುದರಿಂದ ಪ್ರಾಮಾಣ್ಯವೂ ಸಿದ್ಧವಾಗುತ್ತದೆ.

**ದೋಷಾಭಾವಾದಮಾನತ್ವಶಂಕಾಸ್ಯಾಂ ಕಿಂಕೃತಾ ವದ ॥ ೧೦೭ ॥**

**ಅರ್ಥ–** ಅಸ್ಯಾಂ = ಈ ಶ್ರುತಿಯಲ್ಲಿ, ದೋಷಾಭಾವಾತ್ = ಪುರುಷಕೃತವಾದ ದೋಷ ಇಲ್ಲದೆ ಇರುವುದರಿಂದ, ಅಮಾನತ್ವಶಂಕಾ ಕಿಂಕೃತಾ ವದ = ಪ್ರಮಾಣವಲ್ಲ ಎಂಬ ಶಂಕೆಯು ಯಾವಕಾರಣದಿಂದ ಉಂಟಾಗುತ್ತದೆ ಎಂದು ಹೇಳು.

**ಅನುವಾದ–** ದೋಷವಿಲ್ಲದೇ ಇರುವುದರಿಂದ ಅಪ್ರಾಮಾಣ್ಯಶಂಕೆಗೆ ಏನು ಕಾರಣ ಎಂದು ಹೇಳು.

**ಭಾವವಿಲಾಸಿನೀ–** ದೋಷಾಭಾವಾದ್ ವಾಕ್ಯಾಪ್ರಾಮಾಣ್ಯನಿಮಿತ್ತಾಬೋಧಕ ವಿಪರೀತ-ಬೋಧ ಕತ್ವಾದಿರೂಪದೋಷಾಭಾವಾತ್ । ತದಭಾವೋಪ್ಯನಾದಿತ್ವೇನ ಪುಂದೋಷಾ-ಭಾವಾದಿತಿ ಜ್ಞಾತವ್ಯಮ್ । ಅಸ್ಯಾಂ ಶ್ರುತೌ ॥ ೧೦೭ ॥

**ವಿವರಣೆ–** ವಾಕ್ಯಕ್ಕೆ ದೋಷ ಬರುವುದಾದರೆ ಅಬೋಧಕತ್ವ ಮತ್ತು ವಿಪರೀತ ಬೋಧಕತ್ವಾದಿರೂಪವಾದ ದೋಷವು ಬರಬೇಕು. ಅನಾದಿಯಾದ ಪುರುಷದೋಷ ರಹಿತವಾದ ವೇದದಲ್ಲಿ ಆ ದೋಷಗಳು ಬರಲು ಸಾಧ್ಯವಿಲ್ಲ. ಮತ್ತು ಪ್ರಾಮಾಣ್ಯಕ್ಕೆ ಸ್ವತಸ್ತ್ವವು ಇದೆ. ಆದ್ದರಿಂದ ಅಪ್ರಾಮಾಣ್ಯಶಂಕೆಯು ನಿರ್ನಿಮಿತ್ತವಾದುದು ಎಂದು ಇಲ್ಲಿ ಗ್ರಂಥಕಾರರು ತಿಳಿಸುತ್ತಾರೆ.

ಸ್ವೋಕ್ತಾಶ್ವಾಸಾಯ ಯಾಂ ವ್ಯಾಸಃ ಸೂತ್ರೇ ಸೂತ್ರೇ ಜಗೌ ಹರಿಃ ।
ತಾಂ ಶ್ರುತಿಂ ಕೋಽಪರಃ ಕುರ್ಯಾನ್ಮಾನಂ ವಾ ಕಿಂ ತತೋಧಿಕಮ್ ॥ ೧೦೮ ॥

**ಅರ್ಥ–** ಸ್ವೋಕ್ತಾಶ್ವಾಸಾಯ = ತಾನು ಹೇಳಿದ ವಿಷಯದಲ್ಲಿ ವಿಶ್ವಾಸವನ್ನು ಹುಟ್ಟಿಸುವುದಕ್ಕೋಸ್ಕರ, ಹರಿಃವ್ಯಾಸಃ = ಶ್ರೀಹರಿಯಾದ ವೇದವ್ಯಾಸದೇವರು, ಯಾಂ ಶ್ರುತಿಂ = ಯಾವ ವೇದವಾಕ್ಯವನ್ನು, ಸೂತ್ರೇ ಸೂತ್ರೇ ಜಗೌ = ಶ್ರುತತ್ವಾಚ್ಚ ಶ್ರುತೇಶ್ಚ ಮುಂತಾದ ಸೂತ್ರ ಸೂತ್ರಗಳಲ್ಲಿ ಹೇಳಿದ್ದಾರೆಯೋ, ತಾಂ ಶ್ರುತಿಂ = ಅಂತಹ ವೇದವನ್ನು, ಅಪರಃ ಕಃ = ಬೇರೆ ಯಾವನು, ಕುರ್ಯಾತ್ = ರಚಿಸಲು ಸಾಧ್ಯ ? ತತೋಧಿಕಂ = ಅದಕ್ಕಿಂತ ಶ್ರೇಷ್ಠವಾದ, ಮಾನಂ ವಾ = ಪ್ರಮಾಣವಾದರೂ, ಕಿಂ = ಯಾವುದು?

**ಅನುವಾದ–** ಯಾವ ವೇದವ್ಯಾಸರು ತಾವು ಹೇಳಿದ ಪ್ರಮೇಯದಲ್ಲಿ ವಿಶ್ವಾಸವನ್ನು ಮೂಡಿಸಲು ಪ್ರತಿಸೂತ್ರದಲ್ಲಿಯೂ ಯಾವವೇದವನ್ನು ಉದಾಹರಿಸುತ್ತಾರೆಯೋ, ಅಂತಹ ವೇದವನ್ನು ಯಾರು ರಚಿಸಲು ಸಾಧ್ಯ? ಅಥವಾ ಅದಕ್ಕಿಂತ ಅಧಿಕವಾದ ಪ್ರಮಾಣವು ಯಾವುದು ಇರಲು ಸಾಧ್ಯ?

**ಭಾವವಿಲಾಸಿನೀ–** ಸೂತ್ರೇಸೂತ್ರೇ ಶ್ರುತತ್ವಾಚ್ಚಶ್ರುತೇಶ್ಚೇತ್ಯಾದಿಸೂತ್ರೇ । ಅಪರಃ ವ್ಯಾಸಾತ್ ॥ ೧೦೮ ॥

**ವಿವರಣೆ–** ಶ್ರುತತ್ವಾಚ್ಚ, ಶ್ರುತೇಚ್ಚ ಮೊದಲಾದ ಬ್ರಹ್ಮಸೂತ್ರಗಳಲ್ಲಿ ವೇದವ್ಯಾಸರು ಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸಿದ್ದಾರೆ. ವೇದವ್ಯಾಸರು ತಾವೇ ಶ್ರುತಿಯನ್ನು ರಚಿಸಿದ್ದರೆ, ತಮ್ಮ ವಾಕ್ಯವಾದ ಬ್ರಹ್ಮಸೂತ್ರಗಳಿಗೆ, ತಮ್ಮ ವಾಕ್ಯವಾದ ವೇದವೇ ಪ್ರಮಾಣವಾಗಲು ಸಾಧ್ಯವಿಲ್ಲ. ಆದ್ದರಿಂದ ವೇದಗಳು ವೇದವ್ಯಾಸ ರಚಿತವಾದ ವಾಕ್ಯಗಳಲ್ಲ. ಹೀಗಿರುವಾಗ ಬೇರೆ ಯಾರು ವೇದವನ್ನು ರಚಿಸಲು ಸಾಧ್ಯ?

**ಅನಾದ್ಯುಪಾಧ್ಯಾಯಪಾರಂಪರ್ಯೇಣೈವ ನಿರೀಶಿತುಃ ।**
**ನಿಯತೈಕಪ್ರಕಾರತ್ವಂ ನಿತ್ಯತ್ವಂ ತಚ್ಚ ನೇತಿ ನ ॥ ೧೦೯ ॥**

**ಅರ್ಥ–** ಅನಾದ್ಯುಪಾಧ್ಯಾಯಪಾರಂಪಾರ್ಯೇಣೈವ = ಅನಾದಿಕಾಲದಿಂದ ಬಂದಿರುವ ಅಧ್ಯಾಪಕರ ಪರಂಪರೆಯಿಂದಲೇ, ನಿರೀಶಿತುಃ = ಈಶ್ವರನನ್ನು ಒಪ್ಪದೆಯಿರುವ ಮೀಮಾಂಸಕರ ಮತದಿಂದಲೂ ಕೂಡ, ತಸ್ಯ= ವೇದಕ್ಕೆ, ತತ್= ಆ ನಿಯತೈಕ ಪ್ರಕಾರತ್ವಂ= ನಿಯತೈಕಪ್ರಕಾರಕತ್ತ್ವವೆಂಬ, ನಿತ್ಯತ್ವಂ ಚ= ನಿತ್ಯತ್ವವೂ ಕೂಡ, ನ ಇತಿ ನ= ಇಲ್ಲವೆಂದೇನೂ ಅಲ್ಲ.

**ಅನುವಾದ–** ಅನಾದಿ ಉಪಾಧ್ಯಾಯ ಪರಂಪರೆಯಿಂದಲೇ ಮೀಮಾಂಸಕರು ನಿಯತೈಕ ಪ್ರಕಾರತ್ವ ರೂಪವಾದ ನಿತ್ಯತ್ವವನ್ನು ಹೇಳುತ್ತಾರೆ. ಆ ನಿತ್ಯತ್ವವು ಇಲ್ಲ ಎಂದೇನೂ ಇಲ್ಲ.

**ಭಾವವಿಲಾಸಿನೀ–** ಜಯತೀರ್ಥೀಯೇ ಕ್ವಚಿತ್ಕ್ವಚಿತ್ತಾರ್ಕಿಕಂ ಪ್ರತಿ ಮೀಮಾಂಸಕೋಕ್ತ-ನಿಯತೈಕಪ್ರಕಾರಕತ್ವರೂಪಸ್ಯ ವಾ ಏಕಜಾತೀಯಕ್ರಮವತ್ತ್ವರೂಪಸ್ಯ ವಾ ನಿತ್ಯತ್ವಸ್ಯ

**ಪ್ರೌಢಿವಾದೇನೋಕ್ತತ್ವಾತ್ತದಪ್ಯಾಹ – ಅನಾದೀತಿ ॥ ನಿರೀಶಿತುರ್ಮೀಮಾಂಸಕಸ್ಯ । ನಿಯತೈಕಪ್ರಕಾರತ್ವಮ್ ಏಕಜಾತೀಯ- ಕ್ರಮವತ್ತ್ವಸ್ಯಾಪ್ಯುಪಲಕ್ಷಣಮ್ ॥ ೧೦೯ ॥**

**ವಿವರಣೆ–** ಜಯತೀರ್ಥರು ಒಮ್ಮೊಮ್ಮೆ ತಮ್ಮ ಗ್ರಂಥಗಳಲ್ಲಿ ತಾರ್ಕಿಕರನ್ನು ಕುರಿತು ಮೀಮಾಂಸಕರು ಹೇಳಿದ ನಿಯತೈಕಪ್ರಕಾರತ್ವರೂಪವಾದ ಅಥವಾ ಏಕಜಾತೀಯ ಕ್ರಮವತ್ತ್ವರೂಪವಾದ ನಿತ್ಯತ್ವವನ್ನು ಪ್ರೌಢಿವಾದದಿಂದ ಹೇಳುತ್ತಾರೆ. ಆದ್ದರಿಂದ ಗ್ರಂಥಕಾರರು ಅಂತಹ ನಿತ್ಯತ್ವವನ್ನು ಅಂಗೀಕರಿಸುತ್ತಾರೆ. ನಿರೀಶಿತುಃ ಎಂದರೆ ಮೀಮಾಂಸಕ ಎಂದರ್ಥ. ಏಕೆಂದರೆ ಮೀಮಾಂಸಕರು ಈಶ್ವರನನ್ನು ಒಪ್ಪುವುದಿಲ್ಲ.

**ಸೋಽನಾಥಾನಾಂ ಯತಃ ಪಂಥಾಸ್ತಸ್ಮಾದಗತಿಕಾಗತಿಃ ।**
**ಸನಾಥಾಸ್ತು ವಯಂ ದ್ವೇಧಾಪ್ಯನಾದಿತ್ವಂ ಪ್ರಚಕ್ಷ್ಮಹೇ ॥ ೧೧೦ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಸಃ ಅನಾಥಾನಾಂ ಪಂಥಾಃ = ಅದು ಈಶನಿಲ್ಲದ ದಾರಿ, ತಸ್ಮಾತ್ = ಆದ್ದರಿಂದ, ಅಗತಿಕಾಗತಿಃ = ಬೇರೆ ದಾರಿಯಿಲ್ಲದ ಮಾರ್ಗ ಜೀವಬುದ್ಧಿಯನ್ನು ಆಶ್ರಯಿಸಿಯೇ ಏಕಜಾತಿಯತ್ವವನ್ನೇ ಹೇಳಬೇಕು. ವಯಂ ತು = ನಾವಾದರೂ, ಸನಾಥಾಃ = ಈಶನಿಂದ ಸಹಿತರಾದವರು. ತಸ್ಮಾತ್ = ಆದ್ದರಿಂದ, ದ್ವೇಧಾ ಅಪಿ ಅನಾದಿತ್ವಂ ಪ್ರಚಕ್ಷ್ಮಹೇ = ಎರಡು ರೀತಿಯ ಅನಾದಿತ್ವವನ್ನೂ ಹೇಳುತ್ತವೆ.

**ಅನುವಾದ–** ಅದು ಅನಾಥರ ಮಾರ್ಗವಾದ್ದರಿಂದ ಅವರಿಗೆ ಅದನ್ನು ಬಿಟ್ಟು ಬೇರೆ ಉಪಾಯವಿಲ್ಲ. ಸನಾಥರಾದ ನಾವು ಎರಡೂ ರೀತಿಯಲ್ಲೂ ಅನಾದಿತ್ವವನ್ನು ಹೇಳುತ್ತೇವೆ.

**ಭಾವವಿಲಾಸಿನೀ–** ಅನಾಥಾನಾಮೀಶ್ವರಾನಂಗೀಕಾರೇಣ ಜಗನ್ನಾಥರಹಿತಾನಾಮಿತ್ಯರ್ಥಃ । ಅಗತಿಕಾನಾಮಿತಿ ಧ್ವನಿಃ । ಸರ್ವದಾ ಕ್ರಮನಿರ್ವಾಹಕನಿತ್ಯೇಶ್ವರಬುದ್ಧಿರೂಪಗತಿರಹಿತತ್ವಾದ-ಗತಿಕಾ । ಸನಾಥಾಸ್ಸೇಶ್ವರವಾದಿನೋ ವಯಂ ತು ಸಭಾಗ್ಯಾ ಇತಿ ಧ್ವನಿಃ । ದ್ವೇಧಾಪಿ ಮೀಮಾಂಸಕೋಕ್ತರೀತ್ಯಾ ಸ್ವರೂಪೇಣ ಚ ॥ ೧೧೦ ॥

**ವಿವರಣೆ–** ಈಶ್ವರನನ್ನು ಒಪ್ಪದಿರುವ ಮೀಮಾಂಸಕರು ಕ್ರಮಾನನ್ಯಥಾತ್ವವನ್ನು ಬಿಟ್ಟು ಬೇರೆರೀತಿಯ ನಿತ್ಯತ್ವವನ್ನು ಹೇಳಲು ಸಾಧ್ಯವಿಲ್ಲ. ಈಶ್ವರನನ್ನು ಒಪ್ಪಿದ ನಾವು ಅವರು ಹೇಳುವಂತಹ ನಿಯತೈಕಪ್ರಕಾರತ್ವರೂಪವಾದ ನಿತ್ಯತ್ವವನ್ನೂ ಮತ್ತು ನಾವು ಹೇಳುವ ಸ್ವರೂಪನಿತ್ಯತ್ವವನ್ನೂ ಸಹ ಒಪ್ಪುತ್ತೇವೆ. ಈಶ್ವರನನ್ನು ಒಪ್ಪದಿರುವ ಅವರು ನಿರ್ಗತಿಕರು, ಈಶ್ವರನನ್ನು ಒಪ್ಪುವ ನಾವು ಭಾಗ್ಯವಂತರು ಎಂಬ ಧ್ವನಿಯೂ ಇಲ್ಲಿದೆ. ಆದ್ದರಿಂದ ನಿರ್ಗತಿಕರಾದವರಿಗೆ ಒಂದೇ ನಿತ್ಯತ್ವವಾದರೆ, ಭಾಗ್ಯವಂತರಿಗೆ ಎರಡು ನಿತ್ಯತ್ವಗಳಿವೆ ಎಂದು ಗ್ರಂಥಕರ್ತೃಗಳ ಅಭಿಪ್ರಾಯ.

**ಅರ್ಥ–** ಸ್ವೋಕ್ತಾಶ್ವಾಸಾಯ = ತಾನು ಹೇಳಿದ ವಿಷಯದಲ್ಲಿ ವಿಶ್ವಾಸವನ್ನು ಹುಟ್ಟಿಸುವುದಕ್ಕೋಸ್ಕರ, ಹರಿಃವ್ಯಾಸಃ = ಶ್ರೀಹರಿಯಾದ ವೇದವ್ಯಾಸದೇವರು, ಯಾಂ ಶ್ರುತಿಂ = ಯಾವ ವೇದವಾಕ್ಯವನ್ನು, ಸೂತ್ರೇ ಸೂತ್ರೇ ಜಗೌ = ಶ್ರುತತ್ವಾಚ್ಚ ಶ್ರುತೇಶ್ಚ ಮುಂತಾದ ಸೂತ್ರ ಸೂತ್ರಗಳಲ್ಲಿ ಹೇಳಿದ್ದಾರೆಯೋ, ತಾಂ ಶ್ರುತಿಂ = ಅಂತಹ ವೇದವನ್ನು, ಅಪರಃ ಕಃ = ಬೇರೆ ಯಾವನು, ಕುರ್ಯಾತ್ = ರಚಿಸಲು ಸಾಧ್ಯ ? ತತೋಧಿಕಂ = ಅದಕ್ಕಿಂತ ಶ್ರೇಷ್ಠವಾದ, ಮಾನಂ ವಾ = ಪ್ರಮಾಣವಾದರೂ, ಕಿಂ = ಯಾವುದು?

**ಅನುವಾದ–** ಯಾವ ವೇದವ್ಯಾಸರು ತಾವು ಹೇಳಿದ ಪ್ರಮೇಯದಲ್ಲಿ ವಿಶ್ವಾಸವನ್ನು ಮೂಡಿಸಲು ಪ್ರತಿಸೂತ್ರದಲ್ಲಿಯೂ ಯಾವವೇದವನ್ನು ಉದಾಹರಿಸುತ್ತಾರೆಯೋ, ಅಂತಹ ವೇದವನ್ನು ಯಾರು ರಚಿಸಲು ಸಾಧ್ಯ? ಅಥವಾ ಅದಕ್ಕಿಂತ ಅಧಿಕವಾದ ಪ್ರಮಾಣವು ಯಾವುದು ಇರಲು ಸಾಧ್ಯ?

**ಭಾವವಿಲಾಸಿನೀ–** ಸೂತ್ರೇಸೂತ್ರೇ ಶ್ರುತತ್ವಾಚ್ಚಶ್ರುತೇಶ್ಚೇತ್ಯಾದಿಸೂತ್ರೇ । ಅಪರಃ ವ್ಯಾಸಾತ್ ॥ ೧೦೮ ॥

**ವಿವರಣೆ–** ಶ್ರುತತ್ವಾಚ್ಚ, ಶ್ರುತೇಚ್ಚ ಮೊದಲಾದ ಬ್ರಹ್ಮಸೂತ್ರಗಳಲ್ಲಿ ವೇದವ್ಯಾಸರು ಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸಿದ್ದಾರೆ. ವೇದವ್ಯಾಸರು ತಾವೇ ಶ್ರುತಿಯನ್ನು ರಚಿಸಿದ್ದರೆ, ತಮ್ಮ ವಾಕ್ಯವಾದ ಬ್ರಹ್ಮಸೂತ್ರಗಳಿಗೆ, ತಮ್ಮ ವಾಕ್ಯವಾದ ವೇದವೇ ಪ್ರಮಾಣವಾಗಲು ಸಾಧ್ಯವಿಲ್ಲ. ಆದ್ದರಿಂದ ವೇದಗಳು ವೇದವ್ಯಾಸ ರಚಿತವಾದ ವಾಕ್ಯಗಳಲ್ಲ. ಹೀಗಿರುವಾಗ ಬೇರೆ ಯಾರು ವೇದವನ್ನು ರಚಿಸಲು ಸಾಧ್ಯ?

**ಅನಾದ್ಯುಪಾಧ್ಯಾಯಪಾರಂಪರ್ಯೇಣೈವ ನಿರೀಶಿತುಃ ।**
**ನಿಯತೈಕಪ್ರಕಾರತ್ವಂ ನಿತ್ಯತ್ವಂ ತಚ್ಚ ನೇತಿ ನ ॥ ೧೦೯ ॥**

**ಅರ್ಥ–** ಅನಾದ್ಯುಪಾಧ್ಯಾಯಪಾರಂಪಾರ್ಯೇಣೈವ = ಅನಾದಿಕಾಲದಿಂದ ಬಂದಿರುವ ಅಧ್ಯಾಪಕರ ಪರಂಪರೆಯಿಂದಲೇ, ನಿರೀಶಿತುಃ = ಈಶ್ವರನನ್ನು ಒಪ್ಪದೆಯಿರುವ ಮೀಮಾಂಸಕರ ಮತದಿಂದಲೂ ಕೂಡ, ತಸ್ಯ= ವೇದಕ್ಕೆ, ತತ್= ಆ ನಿಯತೈಕ ಪ್ರಕಾರತ್ವಂ= ನಿಯತೈಕಪ್ರಕಾರಕತ್ತ್ವವೆಂಬ, ನಿತ್ಯತ್ವಂ ಚ= ನಿತ್ಯತ್ವವೂ ಕೂಡ, ನ ಇತಿ ನ= ಇಲ್ಲವೆಂದೇನೂ ಅಲ್ಲ.

**ಅನುವಾದ–** ಅನಾದಿ ಉಪಾಧ್ಯಾಯ ಪರಂಪರೆಯಿಂದಲೇ ಮೀಮಾಂಸಕರು ನಿಯತೈಕ ಪ್ರಕಾರತ್ವ ರೂಪವಾದ ನಿತ್ಯತ್ವವನ್ನು ಹೇಳುತ್ತಾರೆ. ಆ ನಿತ್ಯತ್ವವು ಇಲ್ಲ ಎಂದೇನೂ ಇಲ್ಲ.

**ಭಾವವಿಲಾಸಿನೀ–** ಜಯತೀರ್ಥೀಯೇ ಕ್ವಚಿತ್ಕ್ವಚಿತ್ತಾರ್ಕಿಕಂ ಪ್ರತಿ ಮೀಮಾಂಸಕೋಕ್ತ-ನಿಯತೈಕಪ್ರಕಾರಕತ್ವರೂಪಸ್ಯ ವಾ ಏಕಜಾತೀಯಕ್ರಮವತ್ತ್ವರೂಪಸ್ಯ ವಾ ನಿತ್ಯತ್ವಸ್ಯ

ಪ್ರೌಢಿವಾದೇನೋಕ್ತತ್ವಾತ್ತದಪ್ಯಾಹ – **ಅನಾದೀತಿ** ॥ ನಿರೀಶಿತುರ್ಮೀಮಾಂಸಕಸ್ಯ । ನಿಯತೈಕಪ್ರಕಾರತ್ವಮ್ ಏಕಜಾತೀಯ- ಕ್ರಮವತ್ತ್ವಸ್ಯಾಪ್ಯುಪಲಕ್ಷಣಮ್ ॥ ೧೦೯ ॥

**ವಿವರಣೆ–** ಜಯತೀರ್ಥರು ಒಮ್ಮೊಮ್ಮೆ ತಮ್ಮ ಗ್ರಂಥಗಳಲ್ಲಿ ತಾರ್ಕಿಕಕರನ್ನು ಕುರಿತು ಮೀಮಾಂಸಕರು ಹೇಳಿದ ನಿಯತೈಕಪ್ರಕಾರತ್ವರೂಪವಾದ ಅಥವಾ ಏಕಜಾತೀಯ ಕ್ರಮವತ್ತ್ವರೂಪವಾದ ನಿತ್ಯತ್ವವನ್ನು ಪ್ರೌಢಿವಾದದಿಂದ ಹೇಳುತ್ತಾರೆ. ಆದ್ದರಿಂದ ಗ್ರಂಥಕಾರರು ಅಂತಹ ನಿತ್ಯತ್ವವನ್ನು ಅಂಗೀಕರಿಸುತ್ತಾರೆ. ನಿರೀಶಿತುಃ ಎಂದರೆ ಮೀಮಾಂಸಕ ಎಂದರ್ಥ. ಏಕೆಂದರೆ ಮೀಮಾಂಸಕರು ಈಶ್ವರನನ್ನು ಒಪ್ಪುವುದಿಲ್ಲ.

**ಸೋಽನಾಥಾನಾಂ ಯತಃ ಪಂಥಾಸ್ತಸ್ಮಾದಗತಿಕಾಗತಿಃ ।**
**ಸನಾಥಾಸ್ತು ವಯಂ ದ್ವೇಧಾಪ್ಯನಾದಿತ್ವಂ ಪ್ರಚಕ್ಷ್ಮಹೇ ॥ ೧೧೦ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಸಃ ಅನಾಥಾನಾಂ ಪಂಥಾಃ = ಅದು ಈಶನಿಲ್ಲದ ದಾರಿ, ತಸ್ಮಾತ್ = ಆದ್ದರಿಂದ, ಅಗತಿಕಾಗತಿಃ = ಬೇರೆ ದಾರಿಯಿಲ್ಲದ ಮಾರ್ಗ ಜೀವಬುದ್ಧಿಯನ್ನು ಆಶ್ರಯಿಸಿಯೇ ಏಕಜಾತಿಯತ್ವವನ್ನೇ ಹೇಳಬೇಕು. ವಯಂ ತು = ನಾವಾದರೂ, ಸನಾಥಾಃ = ಈಶನಿಂದ ಸಹಿತರಾದವರು. ತಸ್ಮಾತ್ = ಆದ್ದರಿಂದ, ದ್ವೇಧಾ ಅಪಿ ಅನಾದಿತ್ವಂ ಪ್ರಚಕ್ಷ್ಮಹೇ = ಎರಡು ರೀತಿಯ ಅನಾದಿತ್ವವನ್ನೂ ಹೇಳುತ್ತವೆ.

**ಅನುವಾದ– ಅದು ಅನಾಥರ ಮಾರ್ಗವಾದ್ದರಿಂದ ಅವರಿಗೆ ಅದನ್ನು ಬಿಟ್ಟು ಬೇರೆ ಉಪಾಯವಿಲ್ಲ. ಸನಾಥರಾದ ನಾವು ಎರಡೂ ರೀತಿಯಲ್ಲೂ ಅನಾದಿತ್ವವನ್ನು ಹೇಳುತ್ತೇವೆ.**

**ಭಾವವಿಲಾಸಿನೀ–** ಅನಾಥಾನಾಮೀಶ್ವರಾನಂಗೀಕಾರೇಣ ಜಗನ್ನಾಥರಹಿತಾನಾಮಿತ್ಯರ್ಥಃ । ಅಗತಿಕಾನಾಮಿತಿ ಧ್ವನಿಃ । ಸರ್ವದಾ ಕ್ರಮನಿರ್ವಾಹಕನಿತ್ಯೇಶ್ವರಬುದ್ಧಿರೂಪಗತಿರಹಿತತ್ವಾದ-ಗತಿಕಾ । ಸನಾಥಾಸ್ಸೇಶ್ವರವಾದಿನೋ ವಯಂ ತು ಸಭಾಗ್ಯಾ ಇತಿ ಧ್ವನಿಃ । ದ್ವೇಧಾಪಿ ಮೀಮಾಂಸಕೋಕ್ತರೀತ್ಯಾ ಸ್ವರೂಪೇಣ ಚ ॥ ೧೧೦ ॥

**ವಿವರಣೆ–** ಈಶ್ವರನನ್ನು ಒಪ್ಪದಿರುವ ಮೀಮಾಂಸಕರು ಕ್ರಮಾನನ್ಯಥಾತ್ವವನ್ನು ಬಿಟ್ಟು ಬೇರೆರೀತಿಯ ನಿತ್ಯತ್ವವನ್ನು ಹೇಳಲು ಸಾಧ್ಯವಿಲ್ಲ. ಈಶ್ವರನನ್ನು ಒಪ್ಪಿದ ನಾವು ಅವರು ಹೇಳುವಂತಹ ನಿಯತೈಕಪ್ರಕಾರತ್ವರೂಪವಾದ ನಿತ್ಯತ್ವವನ್ನೂ ಮತ್ತು ನಾವು ಹೇಳುವ ಸ್ವರೂಪನಿತ್ಯತ್ವವನ್ನೂ ಸಹ ಒಪ್ಪುತ್ತೇವೆ. ಈಶ್ವರನನ್ನು ಒಪ್ಪದಿರುವ ಅವರು ನಿರ್ಗತಿಕರು, ಈಶ್ವರನನ್ನು ಒಪ್ಪುವ ನಾವು ಭಾಗ್ಯವಂತರು ಎಂಬ ಧ್ವನಿಯೂ ಇಲ್ಲಿದೆ. ಆದ್ದರಿಂದ ನಿರ್ಗತಿಕರಾದವರಿಗೆ ಒಂದೇ ನಿತ್ಯತ್ವವಾದರೆ, ಭಾಗ್ಯವಂತರಿಗೆ ಎರಡು ನಿತ್ಯತ್ವಗಳಿವೆ ಎಂದು ಗ್ರಂಥಕರ್ತೃಗಳ ಅಭಿಪ್ರಾಯ.

**ಏವಂ ಚ ವಿಮತೋ ವೇದೋ ಮಾನಮಿತ್ಯನುಮೀಯತೇ ।**
**ಅವದ್ಯಾಮೂಲವಾಕ್ಯತ್ವಾದಾಪ್ತವಾಕ್ಯವದೇವ ಹಿ ।**
**ಅವದ್ಯಾಮೂಲತಾಚಾಸ್ಯ ನಿತ್ಯತ್ವಾದ್ಗಗನಾದಿವತ್ ॥ ೧೧೧ ॥**

**ಅರ್ಥ–** ಏವಂ ಚ ವಿಮತಃ ವೇದಃ ಮಾನಂ ಇತಿ ಅನುಮೀಯತೇ = ಪ್ರಮಾಣವೋ ಅಪ್ರಮಾಣವೋ ಎಂದು ವಿವಾದ ವಿಷಯವಾದ ವೇದವು ಪ್ರಮಾಣವಾಗಿದೆ ಎಂದು ಅನುಮಾನ ಮಾಡಲ್ಪಡುತ್ತದೆ. ಅವದ್ಯಾಮೂಲವಾಕ್ಯತ್ವಾತ್ = ದೋಷಮೂಲವಲ್ಲವಾದ ಕಾರಣ, ಆಪ್ತವಾಕ್ಯವದೇವ = ಆಪ್ತವಾಕ್ಯದಂತೆ, ಅಸ್ಯ= ಈ ವೇದಕ್ಕೆ, ಅವದ್ಯಾ-ಮೂಲತಾಚಾಪಿ = ದೋಷಮೂಲತ್ವಾಭಾವವೂ ಕೂಡ, ನಿತ್ಯತ್ವಾತ್= ಅನಾದಿನಿತ್ಯತ್ವ-ವಿರುವುದರಿಂದ, ಗಗನಾದಿವತ್ = ಆಕಾಶ ಮುಂತಾದವುಗಳಂತೆ ಸಿದ್ಧವಾಗುತ್ತದೆ.

**ಅನುವಾದ–** ಆದ್ದರಿಂದ ವಿಪ್ರತಿಪನ್ನವಾದ ವೇದವು ಪ್ರಮಾಣವಾಗುತ್ತದೆ. ದೋಷಾಮೂಲಕವಾದ ವಾಕ್ಯವಾದ್ದರಿಂದ ಆಪ್ತವಾಕ್ಯದಂತೆ ಎಂಬ ಅನುಮಾನದಿಂದ ವೇದಪ್ರಾಮಾಣ್ಯವು ಸಿದ್ಧವಾಗುತ್ತದೆ. ವೇದವು ದೋಷಾಮೂಲಕವಾಗಿದೆ ನಿತ್ಯವಾದ್ದರಿಂದ ಗಗನದಂತೆ ಎಂಬ ಅನುಮಾನದಿಂದ ಹೇತುವಿನ ಸಿದ್ಧಿಯೂ ಆಗುತ್ತದೆ.

**ಭಾವವಿಲಾಸಿನೀ–** ಉಕ್ತಾರ್ಥೇ ಅನುಮಾನಮಾಹ – **ಏವಂಚೇತಿ** ॥ ಹೇತೋರಸಿದ್ಧಿಂ ಪರಿಹರತಿ – **ಅವದ್ಯೇತಿ** ॥ ೧೧೧ ॥

**ವಿವರಣೆ–** ಇದುವರೆಗೂ ಹೇಳಿದ ಪ್ರಮೇಯದಿಂದ ವೇದದ ಪ್ರಾಮಾಣ್ಯಾನುಮಾನವನ್ನು ಮಾಡುವ ರೀತಿಯನ್ನು ಹೇಳುತ್ತಾರೆ. ದೋಷಾಮೂಲಕವಾಕ್ಯತ್ವರೂಪವಾದ ಹೇತುವಿಗೆ ಅಸಿದ್ಧಿಯನ್ನು ಪರಿಹಾರ ಮಾಡಲು ಎರಡನೆಯ ಅನುಮಾನವನ್ನು ಪ್ರಯೋಗ ಮಾಡುತ್ತಾರೆ. ಅನುಮಾನ ಪ್ರಯೋಗಗಳು ಈ ರೀತಿಯಾಗುತ್ತವೆ. 'ವಿಮತೋವೇದಃ, ಮಾನಂ ದೋಷಾಮೂಲವಾಕ್ಯತ್ವಾತ್, ಆಪ್ತವಾಕ್ಯವತ್' ಎಂದು ಮೊದಲನೆಯ ಅನುಮಾನ. 'ವೇದಃ ದೋಷಾಮೂಲಃ ನಿತ್ಯತ್ವಾತ್ ಗಗನವತ್' ಎಂಬುದು ಎರಡನೆಯ ಅನುಮಾನ.

**ಕರ್ತೃಪ್ರಮಿತಿಶೂನ್ಯತ್ವಾನ್ನಿತ್ಯತ್ವಂ ಚಾಸ್ಯ ಸಿಧ್ಯತಿ ।**
**ತದ್ವದೇವ ತತೋ ವೇದಃ ಸಿದ್ಧೋ ಧರ್ಮಾನುಶಾಸನಮ್ ॥ ೧೧೨ ॥**

**ಅರ್ಥ–** ಅಸ್ಯ ಚ = ಈ ವೇದಕ್ಕಾದರೂ, ಕರ್ತೃಪ್ರಮಿತಿಶೂನ್ಯತ್ವಾತ್ = ಕರ್ತೃಯಾರೆಂಬ ಪ್ರಸಿದ್ಧಿಯು ಇಲ್ಲದೇ ಇರುವುದರಿಂದ, ನಿತ್ಯತ್ವಂ ಚ = ನಿತ್ಯತ್ವವಾದರೂ, ಸಿಧ್ಯತಿ = ಸಿದ್ಧಿಸುತ್ತದೆ. ತದ್ವದೇವ = ಹಾಗೆಯೇ, ತತಃ = ವೇದವು ನಿತ್ಯ ಅಪೌರುಷೇಯವೆಂದು

ಸಿದ್ಧಿಸಿದ ನಂತರ, ಧರ್ಮಾನುಶಾಸನಂ = ಧರ್ಮಾಧರ್ಮಗಳ ಅನುಶಾಸನವು, ಸಿದ್ಧಃ = ಸಿದ್ಧವಾಗುತ್ತದೆ.

**ಅನುವಾದ–** ಕರ್ತೃಪ್ರಮಿತಿಯಿಲ್ಲದಿರುವುದರಿಂದಲೂ ಗಗನದಂತೆ ವೇದಕ್ಕೆ ನಿತ್ಯತ್ವವು ಸಿದ್ಧವಾಗುತ್ತದೆ. ಅದರಿಂದ ಧರ್ಮಾನುಶಾಸನವಾದ ಪ್ರಮಾಣವಾದ ವೇದವು ಸಿದ್ಧವಾಗುತ್ತದೆ. ವೇದವು ಸಿದ್ಧವಾಗುವುದಿಂದ ಪ್ರಮಾಣವಾದ ವೇದದಿಂದ ಧರ್ಮಾದಿ ಸ್ವರೂಪವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ದ್ವಿತೀಯಹೇತ್ವಸಿದ್ಧಿಂ ಪರಿಹರತಿ – **ಕರ್ತೃಪ್ರಮಿತೀತಿ** ॥ ತಾರ್ಕಿಕರೀತ್ಯಾ ಕರ್ತೃಭ್ರಾಂತಿಸದ್ಭಾವಾದ್ಧೇತೋರಸಿದ್ಧಿರಿತ್ಯತಃ ಪ್ರಮಿತೀತ್ಯುಕ್ತಮ್ । ತದ್ವದ್ ಗಗನವತ್ । ತತಃ ಪ್ರಮಾಣತ್ವಾತ್ ॥ ೧೧೨ ॥

**ವಿವರಣೆ–** 'ವೇದಃ ಪ್ರಮಾಣಮ್', 'ವೇದಃ ನಿತ್ಯಃ', 'ಕರ್ತೃಪ್ರಮಿತಿಶೂನ್ಯತ್ವಾತ್ ಗಗನವತ್' ಎಂಬ ಅನುಮಾನದಿಂದ ವೇದಕ್ಕೆ ಇಲ್ಲಿ ನಿತ್ಯತ್ವವನ್ನು ಸಾಧನೆ ಮಾಡುತ್ತಾರೆ. 'ಕರ್ತೃಪ್ರಮಿತಿಶೂನ್ಯತ್ವಾತ್' ಎಂದು ಹೇಳಿದರೆ ತಾರ್ಕಿಕಾದಿಗಳಿಗೆ ಕರ್ತೃವಿನ ಭ್ರಾಂತಿರೂಪವಾದ ಪ್ರತೀತಿಯಿರುವುದರಿಂದ ಹೇತುವಿಗೆ ಅಸಿದ್ಧಿದೋಷವು ಬರುತ್ತದೆ. ಆದ್ದರಿಂದ 'ಕರ್ತೃಪ್ರಮಿತಿಶೂನ್ಯತ್ವಾತ್' ಎಂದು ಹೇಳಿದ್ದಾರೆ.

**ಅನ್ಯಥಾ ಧರ್ಮಸಿದ್ಧಿರ್ನೇತ್ಯಸ್ತಿ ತರ್ಕೋsತಿಕರ್ಕಶಃ ॥ ೧೧೩ ॥**

**ಅರ್ಥ–** ಅನ್ಯಥಾ = ಹಿಂದೆ ಹೇಳಿದ ಪ್ರಕಾರ ವೇದದ ನಿತ್ಯತ್ವವನ್ನೂ ಪ್ರಾಮಾಣ್ಯವನ್ನೂ ಒಪ್ಪದಿದ್ದರೆ, ಧರ್ಮಸಿದ್ಧಿಃ ನ ಇತಿ ಅತಿಕರ್ಕಶಃ ತರ್ಕಃ ಅಸ್ತಿ = ಧರ್ಮಾಧರ್ಮಗಳು ಸಿದ್ಧಿಸುವುದಿಲ್ಲ ಎಂಬ ಅತ್ಯಂತ ಕಠೋರವಾದ ತರ್ಕ ಇದೆ.

**ಅನುವಾದ–** ವೇದವು ನಿತ್ಯವಾಗಿ ಪ್ರಮಾಣವಾಗಿ ಸಿದ್ಧವಾಗದಿದ್ದರೆ ಧರ್ಮಸ್ವರೂಪವೇ ಸಿದ್ಧವಾಗುವುದಿಲ್ಲ ಎಂಬ ಕರ್ಕಶವಾದ ತರ್ಕವು ನಮ್ಮ ಅನುಮಾನಕ್ಕೆ ಅನುಕೂಲವಾಗಿದೆ.

**ಭಾವವಿಲಾಸಿನೀ–** ಅನುಕೂಲತರ್ಕಮಾಹ – **ಅನ್ಯಥೇತಿ** ॥ ಯಥಾ ಚೈತತ್ತಥೋಕ್ತಂ ಪ್ರಾಕ್ ॥ ೧೧೩ ॥

**ವಿವರಣೆ–** ಅನುಮಾನಕ್ಕೆ ಅನುಕೂಲತರ್ಕದ ಸಹಾಯವಿದ್ದರೆ ಮಾತ್ರ ಸಾಧ್ಯಸಿದ್ಧಿಯಾಗುತ್ತದೆ. ನಿತ್ಯವಾದ ಮತ್ತು ನಿರ್ದೋಷವಾದ ವೇದವನ್ನು ಒಪ್ಪದಿದ್ದರೆ ಸರ್ವಾಭಿಮತವಾದ ಧರ್ಮವೇ ಸಿದ್ಧವಾಗುವುದಿಲ್ಲ ಎಂಬ ಅನುಕೂಲತರ್ಕವಿರುವುದರಿಂದ ನಮ್ಮ ಅನುಮಾನದಿಂದ ವೇದದನಿತ್ಯತ್ವವೂ ಮತ್ತು ಪ್ರಾಮಾಣ್ಯವೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಕಾರೀರ್ಯಾ ವೀಕ್ಷ್ಯತೇ ವೃಷ್ಟಿಃ ಪುತ್ರೇಷ್ಟ್ಯಾ ಪುತ್ರಜನ್ಮ ಚ ।**
**ಕೃಷಾವಿವಾಂಗವೈಕಲ್ಯಾತ್ ಕ್ವಚಿಚ್ಚ ವಿಕಲಂ ಫಲಮ್ ॥ ೧೧೪ ॥**

**ಅರ್ಥ–** ಕಾರೀರ್ಯಾ = ಕಾರೀರಿಯಾಗದ ಅನುಷ್ಠಾನದಿಂದ, ವೃಷ್ಟಿಃ = ಮಳೆಯು, ವೀಕ್ಷ್ಯತೇ = ಕಾಣಲ್ಪಡುತ್ತದೆ. ಚ = ಮತ್ತು, ಪುತ್ರೇಷ್ಟ್ಯಾ = ಪುತ್ರಕಾಮೇಷ್ಟಿಯಾಗದ ಅನುಷ್ಠಾನದಿಂದ, ಪುತ್ರಜನ್ಮ = ಪುತ್ರೋತ್ಪತ್ತಿಯು, ವೀಕ್ಷ್ಯತೇ = ಕಾಣಲ್ಪಡುತ್ತದೆ. ಕ್ವಚಿತ್ ಚ = ಕೆಲವೆಡೆಯಾದರೂ, ವಿಕಲಂ ಫಲಂ = ಫಲಾಭಾವವು, ಕೃಷೌ ಇವ = ಕೃಷಿಯಲ್ಲಿ ಹೇಗೋ ಹಾಗೆ, ಅಂಗವೈಕಲ್ಯಾತ್ = ಕಾರ್ಯಾನುಷ್ಠಾನದಲ್ಲಿರುವ ಲೋಪದೋಷಗಳಿಂದ ಎಂದು ತಿಳಿಯಬೇಕು.

**ಅನುವಾದ–** ಕಾರೀರಿ ಇಷ್ಟಿಯಿಂದ ಮಳೆಯಾಗುವುದೂ ಪುತ್ರಕಾಮೇಷ್ಟಿಯಿಂದ ಪುತ್ರಜನ್ಮವಾಗುವುದೂ ಕಂಡುಬರುತ್ತದೆ. ಕೆಲವೊಮ್ಮೆ ಕೃಷಿಯಲ್ಲಿದ್ದಂತೆ ಅಂಗವೈಕಲ್ಯವಿರುವುದರಿಂದ ಫಲವು ಉಂಟಾಗುವುದಿಲ್ಲ.

**ಭಾವವಿಲಾಸಿನೀ–** ನನು ವೇದೋಽಪ್ರಮಾಣಂ ಅನೃತತ್ವಾದ್ವ್ಯಾಹತತ್ವಾದಿತ್ಯಾದೇಃ ಯಥಾ ಸಮ್ಪ್ರತಿಪನ್ನಮಿತ್ಯನುಮಾನೇನ ಸತ್ಪ್ರತಿಪಕ್ಷಂ ಭವದನುಮಾನಮಿತಿ ಚೇತ್ ತತ್ರಾಹ – **ಕಾರೀ-ರ್ಯೇತಿ** ॥ ಕ್ವಚಿಚ್ಚ ವಿಕಲಂ ಫಲಂ ಫಲವೈಕಲ್ಯಮಿತಿ ಯಾವತ್ ॥ ೧೧೪ ॥

**ವಿವರಣೆ–** ವೇದದಲ್ಲಿ ಕಾರೀರಿಯಾಗದ ಅನುಷ್ಠಾನದಿಂದ ಮಳೆಯಾಗತ್ತದೆ, ಪುತ್ರಕಾಮೇಷ್ಟಿಯಾಗದ ಆಚರಣೆಯಿಂದ ಪುತ್ರಸಂತಾನವಾಗುತ್ತದೆ ಎಂದು ಹೇಳಿದೆ. ಆದರೆ ಕೆಲವೊಮ್ಮೆ ಕಾರೀರಿಯಾಗ ಮಾಡಿದರೂ ಮಳೆಯಾಗುವುದಿಲ್ಲ, ಪುತ್ರಕಾಮೇಷ್ಟಿಯನ್ನು ಆಚರಿಸಿದರೂ ಸಂತಾನವಾಗುವುದಿಲ್ಲ, ಆದ್ದರಿಂದ ವೇದದ ಮಾತು ಸುಳ್ಳಾಗಿದೆ, ವೇದವು ಅಪ್ರಾಮಾಣವು, ಸುಳ್ಳು ಹೇಳುತ್ತಿರುವುದರಿಂದ ಎಂಬ ಯುಕ್ತಿಯಿಂದ ವೇದದಲ್ಲಿ ಅಪ್ರಾಮಾಣ್ಯವು ಸಿದ್ಧವಾಗುತ್ತದೆ. ವೇದವು ಪ್ರಮಾಣ ಎಂದು ಸಾಧಿಸುವ ನಿಮ್ಮ ಅನುಮಾನಕ್ಕೆ ಸಮಬಲವಾದ ನಮ್ಮ ಅನುಮಾನದಿಂದ ವಿರೋಧಬರುತ್ತದೆ. ಅರ್ಥಾತ್ ನಿಮ್ಮ ಅನುಮಾನ ಸತ್ಪ್ರತಿಪಕ್ಷವಾಗಿದೆ ಎಂಬ ಆಕ್ಷೇಪಕ್ಕೆ ಶ್ರೀರಾಜರು ಇಲ್ಲಿ ಉತ್ತರ ಕೊಡುತ್ತಿದ್ದಾರೆ.

ಕೃಷಿಯಿಂದ ಬೆಳೆ ಬರುವುದು ಕಂಡಿದೆ. ಕೆಲವೊಮ್ಮೆ ಕೃಷಿಮಾಡಿದರೂ ಬೆಳೆಯಾಗದು ಎಂದ ಮಾತ್ರಕ್ಕೆ ಕೃಷಿಯನ್ನೇ ಮಾಡಬಾರದು ಎಂದು ತೀರ್ಮಾನಿಸಬಾರದು. ಕೃಷಿಮಾಡಿದರೂ ಬೆಳೆಯಾಗದ ಕಡೆ ಕೃಷಿ ಸಫಲವಾಗದಿರಲು ಕೃಷಿಮಾಡಿದ ವಿಧಾನದಲ್ಲಿ ಲೋಪದೋಷಗಳಿರುವುದೇ ಕಾರಣವಾಗಿರುತ್ತದೆ.

ಆದರಂತೆ ಕಾರೀರಿಯಾಗದಿಂದ ಮಳೆಯಾಗುವುದು ಕಂಡಿದೆ. ಪುತ್ರೇಷ್ಟಿಯಿಂದ ಪುತ್ರಸಂತಾನವಾಗುವುದೂ ಕಂಡಿದೆ. ಎಲ್ಲಿಯಾದರೂ ಕಾರೀರಿಯಾಗಮಾಡಿದರೂ

ಮಳೆಯಾಗದಿದ್ದರೆ, ಪುತ್ರೇಷ್ಟಿಯಾದರೂ ಪುತ್ರಸಂತಾನವಾಗಿರದಿದ್ದರೆ ಯಾಗದ ಅನುಷ್ಠಾನಗಳಲ್ಲಿ ಅಜ್ಞಾನದಿಂದ ಯಾವುದೋ ಲೋಪದೋಷಗಳಾಗಿರಬೇಕೆಂದು ಸಿದ್ಧವಾಗುತ್ತದೆಯೇ ಹೊರತು ಯಾಗವನ್ನು ಹೇಳುವ ವೇದವು ಅಪ್ರಮಾಣವೆಂದು ಸಿದ್ಧವಾಗುವುದಿಲ್ಲ.

**ಅನೃತತ್ವಾದಯೋ ದೋಷಾಸ್ಸಂದಿಗ್ಧಾಸಿದ್ಧಮೂರ್ತಯಃ ।**
**ನಾಮಾನತ್ವಂ ತತೋಽಮುಷ್ಯ ಸಾಧಯೇಯುಃ ಪರೋದಿತಾಃ ॥ ೧೧೫ ॥**

**ಅರ್ಥ–** ಯತಃ = ಯಾವಕಾರಣದಿಂದ, ಅನೃತತ್ವಾದಯಃ = ಅನೃತತ್ವ, ವ್ಯಾಹತತ್ವ, ಪುನರುಕ್ತತ್ವ, ಪ್ರಮಾಣಾಂತರಸಿದ್ಧಾರ್ಥತ್ವ ಮೊದಲಾದ, ದೋಷಾಃ = ದೋಷಗಳು, ಸಂದಿಗ್ಧಾಸಿದ್ಧಮೂರ್ತಯಃ = ಸಂದಿಗ್ಧಾಸಿದ್ಧಸ್ವರೂಪಗಳಾಗಿವೆಯೋ, ತತಃ = ಆಕಾರಣದಿಂದ, ಪರೋದಿತಾಃ = ಪ್ರತಿವಾದಿಯಾದ ಬೌದ್ಧನಿಂದ ಹೇಳಲ್ಪಟ್ಟ ಅನೃತತ್ತ್ವಾದಿದೋಷಗಳು, ಅಮುಷ್ಯ = ಅಪೌರುಷೇಯವಾದ ವೇದಕ್ಕೆ, ಅಮಾನತ್ವಂ = ಅಪ್ರಮಾಣತ್ವವನ್ನು ನ ಸಾಧಯೇಯುಃ = ಸಾಧಿಸಲಾರವು.

**ಅನುವಾದ–** ಬೌದ್ಧರು ನಿರೂಪಿಸಿದ ಅನೃತತ್ವ ಮೊದಲಾದ ದೋಷಗಳು ವೇದದಲ್ಲಿರುವುದೇ ಸಂದಿಗ್ಧಗಳಾಗಿವೆ. ಪಕ್ಷದಲ್ಲಿ - ವೇದದಲ್ಲಿ ಅನೃತತ್ವಾದಿ-ದೋಷಗಳು ಇರುವುದೇ ಸಂದಿಗ್ಧವಾದುದರಿಂದ ಸಂದಿಗ್ಧಾಸಿದ್ಧಸ್ವರೂಪಗಳಾಗಿವೆ. ಇಂತಹ ದೋಷಗಳು ವೇದಕ್ಕೆ ಅಪ್ರಾಮಾಣ್ಯವನ್ನು ಸಾಧಿಸಲಾರವು.

**ಭಾವವಿಲಾಸಿನೀ–** ತಥಾಚಾನೃತತ್ವಾದಯಃ ಸಂದಿಗ್ಧಾಸಿದ್ಧಾಃ ಅಮುಷ್ಯ ವೇದಸ್ಯ ಅಮಾನತ್ವಂ ನ ಸಾಧಯೇಯುರಿತಿ ಸಂಬಂಧಃ ॥ ೧೧೫ ॥

**ವಿವರಣೆ–** ವಿಷ್ಣುತತ್ವವಿನಿರ್ಣಯದ ಟೀಕೆಯಲ್ಲಿ ವೇದಕ್ಕೆ ಅಪ್ರಾಮಾಣ್ಯಾಭಾವವನ್ನು ಸಮರ್ಥನೆ ಮಾಡುವ ಸಂದರ್ಭದಲ್ಲಿ ಅನೃತತ್ವಾದಿದೋಷಗಳು, ವೇದವು ಅಪ್ರಮಾಣವಲ್ಲವೆಂದು ನಿಶ್ಚಯವಾಗುವ ಮುಂಚೆ ಸಂದಿಗ್ಧಾಸಿದ್ಧಸ್ವರೂಪವಾದವು. ಅಪ್ರಮಾಣವಲ್ಲವೆಂದು ನಿಶ್ಚಯವಾದ ಬಳಿಕ ಅನೃತತ್ವಾದಿಗಳು ನಿಶ್ಚಿತಾಸಿದ್ಧರೂಪವಾದವು ಎಂದು ಶ್ರೀಜಯತೀರ್ಥರು ಹೇಳಿದ್ದಾರೆ -

**ತಥಾ ಚಾನೃತತ್ವಾದಯಃ ಪ್ರಾಗ್ ಅಪ್ರಾಮಾಣ್ಯಾಭಾವನಿಶ್ಚಯಾತ್ ಸಂದಿಗ್ಧಾಸಿದ್ಧಾಃ ನಿಶ್ಚಿತೇ ತ್ವಪ್ರಾಮಾಣ್ಯಾಭಾವೇ ನಿಶ್ಚಿತಾಸಿದ್ಧಾಃ ॥**

ವೇದದಲ್ಲಿ ಹೇಳಿದ್ದು ಸುಳ್ಳು ಎನಿಸಿದರೆ ನಮ್ಮಲ್ಲಿರುವ ದೋಷದಿಂದ ವೇದೋಕ್ತ ಆಚರಣೆಗಳು ವಿಫಲವಾಗಿವೆ ಎಂದು ತೀರ್ಮಾನಿಸಬೇಕೇ ಹೊರತು ವೇದವು ಅಪ್ರಮಾಣವೆಂದು ಅರ್ಥವಾಗುವುದಿಲ್ಲ. ವೇದದಲ್ಲಿ ಪರಸ್ಪರವಿರುದ್ಧಮಾತುಗಳು, ಒಮ್ಮೆ

ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುತ್ತದೆ ಎಂಬಂತೆ ಕಂಡರೆ ವಿರೋಧ, ಪುನರುಕ್ತಿಗಳು ಬಾರದಂತೆ ಬೇರೆ ಬೇರೆ ರೀತಿಯಾಗಿ ಅರ್ಥೈಸಿ ವೇದಪ್ರಾಮಾಣ್ಯವನ್ನು ಸ್ಥಿರೀಕರಿಸಬೇಕೆಂದು ಭಾವ.

**ಕಲೌ ಯುಗೇ ಕಲಹಿನಾಂ ಷಣ್ಣಾಂ ಷಣ್ಮಾರ್ಗವರ್ತಿನಾಮ್ ।**
**ತದ್ ಬಲಂ ದ್ವಾಪರಾಚಾರ್ಯವ್ಯಾಸವಾಚಾಂ ಚ ಯದ್ಬಲಮ್ ॥ ೧೧೬ ॥**

**ಅರ್ಥ–** ದ್ವಾಪರಾಚಾರ್ಯವ್ಯಾಸವಾಚಾಂ = ದ್ವಾಪರಯುಗದ ಆಚಾರ್ಯರಾದ ವೇದವ್ಯಾಸರ ಮಹಾಭಾರತ, ಪುರಾಣರೂಪವಾದ ಮಾತುಗಳಿಗೆ, ಯತ್ = ಯಾವ ವೇದವಾಕ್ಯವು, ಬಲಂ = ಬಲದಂತೆ ಆಧಾರವೋ, ಕಲೌ ಯುಗೇ= ಕಲಿಯುಗದಲ್ಲಿ, ಕಲಹಿನಾಂ = ವಾದಕಲಹರತರಾದ, ಷಣ್ಮಾರ್ಗವರ್ತಿನಾಂ = ಆರು ದರ್ಶನಗಳನ್ನು ಅನುಸರಿಸುವ, ಷಣ್ಣಾಂ ಚ =ಆರು ದರ್ಶನಾಚಾರ್ಯರಿಗೂ, ತದ್ = ಆ ವೇದವಾಕ್ಯವೇ, ಬಲಂ = ಆಧಾರವು.

**ಅನುವಾದ–** ದ್ವಾಪರಯುಗದಲ್ಲಿ ಸತ್ಯವತೀಪರಾಶರತನಯನಾಗಿ ಅವತರಿಸಿದ ವೇದವ್ಯಾಸರು ರಚಿಸಿದ ಭಾರತಪುರಾಣಾದಿಗಳಿಗೆ ಯಾವ ವೇದವಾಕ್ಯವು ಆಧಾರವೋ ಕಲಿಯುಗದಲ್ಲಿ ವಾದಕಲಹಮಾಡುವ ಆರು ವಿಭಿನ್ನದಾರಿಯಲ್ಲಿ ನಡೆವ ಆರು ದರ್ಶನಾಚಾರ್ಯರಿಗೂ ಆ ವೇದವಾಕ್ಯವೇ ಆಧಾರ. ಆದ್ದರಿಂದ ವೇದವನ್ನು ಪ್ರಮಾಣವೆಂದೊಪ್ಪಲೇಬೇಕು.

**ಭಾವವಿಲಾಸಿನೀ–**ತತಸ್ಸರ್ವೈರಪ್ಯಪೇಕ್ಷಣೀಯತ್ವಾದ್ವೇದಸ್ಯ ಪ್ರಾಮಾಣ್ಯಮಂಗೀಕಾರ್ಯಮಿತ್ಯಾಹ **–ಕಲಾವಿತಿ** ॥ ತದ್ವೇದವಾಕ್ಯಮ್ । ಬಲಮಿವ ಬಲಮ್ । ಯದ್ ವೇದವಾಕ್ಯಮ್ । ದ್ವಾಪರಾಚಾರ್ಯೇಣ ವ್ಯಾಸೇನ ಸ್ವೋಕ್ತಾರ್ಥೇ ತತ್ರತತ್ರ ಸಮ್ಮತಿಕಥನಾತ್ । ದ್ವಾಪರಾಚಾರ್ಯೇತ್ಯನೇನ ಕಲಿಯುಗಾದಪಿ ಪ್ರಧಾನಯುಗೇ ಸಕಲಮುನೀನಾಂ ಸಮ್ಮತತ್ವೇನ ಯೋ ವೇದ ಆದ್ರಿಯತೇ ಸ ಕಥಂ ನಿಕೃಷ್ಟಯುಗವರ್ತಿಭಿರ್ಜನೈರ್ದೂಷ್ಯತೇ । ಸ್ವಕಲಹಶಾಂತಯೇ ಉಪಾಯಾಂತರಾಭಾವಾತ್ ಸ್ವಾಜ್ಞಾನವಿಜೃಮ್ಭಿತಮೇವ ತದ್ದೂಷಣಮಿತಿ ಧ್ವನಿತಮ್ ॥ ೧೧೬ ॥

**ವಿವರಣೆ–** ಎಲ್ಲರಿಗೂ ವೇದವು ಅಪೇಕ್ಷಣೀಯವಾದುದರಿಂದ ಅದರ ಪ್ರಾಮಾಣ್ಯವನ್ನು ಒಪ್ಪಲೇಬೇಕು ಎಂದು ಇಲ್ಲಿ ಹೇಳುತ್ತಿದ್ದಾರೆ.

ದ್ವಾಪರಾಚಾರ್ಯರಾದ ವೇದವ್ಯಾಸರು ತಾವುಹೇಳಿರುವ ಪ್ರಮೇಯಗಳಿಗೆ ವೇದದ ಸಮ್ಮತಿಯನ್ನು ಅಲ್ಲಲ್ಲಿ ಪುರಾಣಭಾರತಗಳಲ್ಲಿ ತೋರಿಸಿದ್ದಾರೆ. ದ್ವಾಪರಾಚಾರ್ಯ ಎಂಬುದಾಗಿ ವ್ಯಾಸರಿಗೆ ಕೊಟ್ಟಿರುವ ವಿಶೇಷಣದ ಧ್ವನಿ ಇದಾಗಿದೆ - ಕಲಿಯುಗಕ್ಕಿಂತಲೂ ಪ್ರಧಾನವಾದದ್ವಾಪರಯುಗದಲ್ಲಿ ಎಲ್ಲ ಮುನಿಗಳಿಗೂ ಸಮ್ಮತವಾಗಿ ಯಾವ ವೇದವು ಆದರಿಸೋಣವಾಗಿತ್ತೋ ಅದನ್ನು ನಿಕೃಷ್ಟವಾದ ಈ ಕಲಿಯುಗದ ಜನರಿಂದ ಹೇಗೆ

ದೂಷಿಸಲು ಸಾಧ್ಯ? ಆದ್ದರಿಂದ ತಮ್ಮ ತಮ್ಮ ಮತೀಯ ವೈಚಾರಿಕಕಲಹದ ಶಾಂತಿಗೆ ವೇದವನ್ನು ಬಿಟ್ಟು ಬೇರೆ ಉಪಾಯವಿಲ್ಲವಾದುದರಿಂದ ವೇದದೂಷಣವು ತಮ್ಮ ಅಜ್ಞಾನದ ವಿಜೃಂಭಣೆಯೇ ಸರಿ.

ಅಂತೂ ವ್ಯಾಸಾದಿಗಳ ಆಪ್ತತ್ವ, ಅವರ ಮಾತುಗಳ ಪ್ರಾಮಾಣ್ಯ, ವೇದದ ನೆಲೆಯಲ್ಲಿ ನಿರ್ಧಾರವಾಗುತ್ತದೆ ಎಂದು ಭಾವ.

**ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಮ್ ।**

**ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ ಜಗದ್ಗುರೂಣಾಂ ಗುರುಮಂಜಸೈವ ।**
**ವಿಶೇಷತೋ ಮೇ ।**

ಎಂಬಲ್ಲಿ - ವೇದವ್ಯಾಸರು ಬ್ರಹ್ಮಸೂತ್ರ, ಭಾರತಪುರಾಣಾದಿಗಳ ಉತ್ಪಾದಕರಾ-ದುದರಿಂದಲೂ, ವೇದದ ಉಪದೇಶಕರಾದುದರಿಂದಲೂ, ಜಗದ್ಗುರುಗಳಾದ ಬ್ರಹ್ಮಾದಿಗಳಿಗೂ ಶಾಸ್ತ್ರಸಂಪ್ರದಾಯಪ್ರವರ್ತಕರಾದುದರಿಂದಲೂ, ಮಧ್ವರಿಗೆ ಸಾಕ್ಷಾತ್ ಉಪದೇಶಕರಾದ್ದರಿಂದಲೂ ಬಹುಬಗೆಯ ಗುರುತ್ವವುಳ್ಳವರು ಎಂದು ಆಚಾರ್ಯರು ಅನುವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ. ಅದನ್ನು ಶ್ರೀವಾದಿರಾಜರ ಈ ಮಾತಿನಲ್ಲಿ ಸೂಚಿತವಾಗಿರುವುದಾಗಿ ಗ್ರಹಿಸಬೇಕು.

**ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ।**
**ತದುಕ್ತೌ ಕಸ್ಯ ನ ಶ್ರದ್ಧಾ ಯದುಚ್ಛಿಷ್ಟಂ ಜಗತ್ತ್ರಯಮ್ ॥ ೧೧೭ ॥**

**ಅರ್ಥ–** ಸತ್ಯವತೀಸುತಃ = ಸತ್ಯವತಿಯ ಪುತ್ರರಾದ ವೇದವ್ಯಾಸರು, ಅಷ್ಟಾದಶ ಪುರಾಣಾನಾಂ = ಹದಿನೆಂಟು ಪುರಾಣಗಳಿಗೆ, ಕರ್ತಾ = ರಚನಕಾರರು. ಜಗತ್ತ್ರಯಂ = ಮೂರುಲೋಕವೂ, ಯದುಚ್ಛಿಷ್ಟಂ = ಯಾರಮಾತನ್ನು ಉಪಜೀವ್ಯವಾಗಿ ಹೊಂದಿದೆಯೋ, ತದುಕ್ತೌ = ಅವರ ಮಾತಿನಲ್ಲಿ, ಕಸ್ಯ = ಯಾರಿಗೆ, ಶ್ರದ್ಧಾ ನ = ನಂಬಿಕೆಯಿರುವುದಿಲ್ಲ? ಎಲ್ಲರಿಗೂ ಅವರ ಮಾತಿನಲ್ಲಿ ವಿಶ್ವಾಸವಿದೆ.

**ಅನುವಾದ–** ಸತ್ಯವತೀಸುತರಾದ ವ್ಯಾಸರು ಅಷ್ಟಾದಶಪುರಾಣಗಳ ಕರ್ತೃಗಳು. ಮೂರುಲೋಕಗಳಲ್ಲಿರುವ ಎಲ್ಲಾ ಸಾಹಿತ್ಯ ಪ್ರಭೇದಗಳಿಗೂ ಅವರ ಕೃತಿಗಳೇ ಆಧಾರವಾಗಿದೆ ಅಂತಹ ವ್ಯಾಸರ ಮಾತಿನಲ್ಲಿ ಯಾರಿಗೆ ಶ್ರದ್ಧೆ ಇಲ್ಲ?

**ಭಾವವಿಲಾಸಿನೀ–** ಅತೀತಾನಾಗತಜ್ಞಾನಿನಾ ಸಕಲಮುನಿಮಾನ್ಯೇನ ಮಹಾಪಂಡಿತೇನ ವ್ಯಾಸೇನ ವೇದಸ್ಯ ನಿತ್ಯತ್ವೇನೋಕ್ತತ್ವಾತ್ ನಿತ್ಯತ್ವಮಂಗೀಕಾರ್ಯಮಿತ್ಯಾಹ – **ಅಷ್ಟಾದಶೇತಿ** ॥ ಯಸ್ಯ ವ್ಯಾಸಸ್ಯ ಉಚ್ಛಿಷ್ಟಮ್ ಉಚ್ಛಿಷ್ಟೋಪಜೀವಿ । ತದ್ವದನನಿಸ್ಸೃತಕವಿತ್ವಚ್ಛಾಯಾಪಹಾರೀತ್ಯರ್ಥಃ ॥ ೧೧೭ ॥

**ವಿವರಣೆ–** ವ್ಯಾಸೋಚ್ಛಿಷ್ಟಂ ಜಗತ್ಸರ್ವಂ । ಎಂಬುದು ಪ್ರಸಿದ್ಧವಾದ ನಾಣ್ನುಡಿ. ಯಾರು ಏನೇ ಹೇಳಿದ್ದರೂ ಅದು ವೇದವ್ಯಾಸರು ಹೇಳಿದ್ದನ್ನೇ ಹೇಳಿರುವುದು. ಸರ್ವಜ್ಞರಾದ ಸೂತ್ರ,ಭಾರತ, ಹದಿನೆಂಟು ಪುರಾಣಗಳ ಕರ್ತಾರರೂ, ಉಪದೇಶಕರೂ ಆದ ವೇದವ್ಯಾಸರು ಎಲ್ಲ ಕವಿಗಳಿಗೂ ದೇವತೆಗಳಿಗೂ, ಉಪಜೀವ್ಯರು. ಮಹನೀಯರು. ಅಂತಹ ಅತೀತ ಅನಾಗತಜ್ಞಾನಿಗಳೂ, ಸಕಲಮುನಿಮಾನ್ಯರೂ, ಮಹಾಪಂಡಿತರೂ ಆದ ವೇದವ್ಯಾಸರು ವೇದವನ್ನು ನಿತ್ಯವೆಂದೂ, ಪ್ರಮಾಣವೆಂದೂ ಹೇಳಿದ ಮೇಲೆ ಅವರ ಮಾತಿನಲ್ಲಿ ಅವಿಶ್ವಾಸ ಸರಿಯೇ? ಎಲ್ಲ ಜ್ಞಾನಿಗಳೂ ವೇದವ್ಯಾಸರ ಮಾತಿನಲ್ಲಿ ವಿಶ್ವಾಸವುಳ್ಳವರಾಗಿದ್ದಾರೆ.

ಹದಿನೆಂಟು ಪುರಾಣಗಳು ಯಾವುವು? ಎಂಬುದನ್ನು ನೆನಪಿನಲ್ಲಿಡಲು ಸುಲಭೋಪಾಯದ ಶ್ಲೋಕವೊಂದು ಪ್ರಚಲಿತವಿದೆ -

ಮದ್ವಯಂ ಭದ್ವಯಂ ಚೈವ ಬ್ರತ್ರಯಂ ವಚತುಷ್ಟಯಮ್ ।
ಅನಾಪಲಿಂಗಕೂಸ್ಕಾನಿ ಪುರಾಣಾನಿ ಪೃಥಕ್ ಪೃಥಕ್ ॥

ಮದ್ವಯಂ - 1. ಮತ್ಸ್ಯಪುರಾಣ, 2. ಮಾರ್ಕಂಡೇಯ ಪುರಾಣ - ಮಕಾರದಿಂದ ಆರಂಭವಾಗುವ ಎರಡು ಪುರಾಣಗಳು.

ಭದ್ವಯಂ - 1. ಭಾಗವತಪುರಾಣ, 2. ಭವಿಷ್ಯಪುರಾಣ

ಬ್ರತ್ರಯಂ - 1. ಬ್ರಹ್ಮಪುರಾಣ, 2.ಬ್ರಹ್ಮಾಂಡಪುರಾಣ, 3. ಬ್ರಹ್ಮವೈವರ್ತಪುರಾಣ

ವಚುಷ್ಟಯಂ - 1. ವಿಷ್ಣುಪುರಾಣ, 2. ವರಾಹಪುರಾಣ, 3. ವಾಯುಪುರಾಣ,

4. ವಾಮನಪುರಾಣ

ಅ - ಅಗ್ನಿಪುರಾಣ, ನಾ - ನಾರದಪುರಾಣ, ಪ - ಪದ್ಮಪುರಾಣ, ಲಿಂ - ಲಿಂಗಪುರಾಣ, ಗ - ಗರುಡಪುರಾಣ, ಕೂ - ಕೂರ್ಮಪುರಾಮ, ಸ್ಕ - ಸ್ಕಂದಪುರಾಣ.

ಅಷ್ಟಾದಶಪುರಾಣಾನಾಂ ನಾಮಧೇಯಾನಿ ಯಃ ಪಠೇತ್ ।
ತ್ರಿಸಂಧ್ಯಂ ಜಯತೇ ನಿತ್ಯಂ ಸೋಽಶ್ವಮೇಧಫಲಂ ಲಭೇತ್ ॥

**ವೇದೋ ನ ಮಾನಮಿತಿ ತು ದ್ವೌ ಚತ್ವಾರೋಽಸ್ಯ ಮಾನತಾಮ್ ।**
**ಮನ್ವತೇ ತದ್ಭಹೋರೇವ ತನ್ವತೇಽನುಗ್ರಹಂ ಬುಧಾಃ ॥ ೧೧೮ ॥**

**ಅರ್ಥ–** ವೇದಃ = ವೇದವು, ನ ಮಾನಂ ಇತಿ = ಪ್ರಮಾಣವಲ್ಲವೆಂದು, ತು = ವಿಶೇಷವಾಗಿ, ದ್ವೌ = ಚಾರ್ವಾಕ ಬೌದ್ಧರೆಂಬ ಇಬ್ಬರು, ಮನ್ವಾತೇ =

ಅಭಿಪ್ರಾಯಪಡುತ್ತಾರೆ. ಚತ್ವಾರಃ = ಮೀಮಾಂಸಕ, ಸಾಂಖ್ಯ, ತಾರ್ಕಿಕ, ವೇದಾಂತಿಗಳೆಂಬ ನಾಲ್ವರು ದರ್ಶನಾಚಾರ್ಯರು, ಅಸ್ಯ = ಈ ವೇದಕ್ಕೆ, ಮಾನತಾಂ = ಪ್ರಾಮಾಣ್ಯವನ್ನು ಮನ್ವತೇ = ಒಪ್ಪುತ್ತಾರೆ. ತತ್ = ಆ ಕಾರಣದಿಂದ, ಬುಧಾಃ = ಪ್ರೇಕ್ಷಾವಂತರು, ಬಹೋರೇವ = ಬಹುಮತಕ್ಕೆ, ಅನುಗ್ರಹಂ = ಸಮ್ಮತಿಯ ಅನುಗ್ರಹವನ್ನು, ತನ್ವತೇ = ಮಾಡುತ್ತಾರೆ.

**ಅನುವಾದ–** ಚಾರ್ವಾಕ, ಬೌದ್ಧ ಮೀಮಾಂಸಕ ಸಾಂಖ್ಯತಾರ್ಕಿಕ ವೇದಾಂತಿಗಳು ಹೀಗೆ ದರ್ಶನಾಚಾರ್ಯರು ಆರು ಮಂದಿ. ಇವರಲ್ಲಿ ಚಾರ್ವಾಕರು, ಬೌದ್ಧರು ವೇದವನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ಉಳಿದ ನಾಲ್ಕುಮಂದಿ ವೇದವನ್ನು ಪ್ರಮಾಣವೆಂದು ಅಂಗೀಕರಿಸಿದ್ದಾರೆ. ಆದ್ದರಿಂದ ವೇದವು ಪ್ರಮಾಣವೋ ಅಪ್ರಮಾಣವೋ ಎಂಬ ಸಂದೇಹ ಬಂದಾಗ ಆರುಜನ ದರ್ಶನಾಚಾರ್ಯರಲ್ಲಿ ನಾಲ್ವರು ವೇದವನ್ನು ಪ್ರಮಾಣವೆಂದು ಒಪ್ಪುವುದರಿಂದ ಈ ಬಹುಮತಕ್ಕೇ ತಿಳಿದವರು ತಮ್ಮ ಸಮ್ಮತಿಯನ್ನು ಸೂಚಿಸುವರು.

**ಭಾವವಿಲಾಸಿನೀ–** ವೇದಪ್ರಾಮಾಣ್ಯವಾದಿನಾಂ ಬಹುತ್ವಾತ್ । ದ್ವೈಧೇ ಬಹೂನಾಂ ವಚನಮಿತಿ ನ್ಯಾಯೇನ ಬಹುಭಿರಂಗೀಕೃತವೇದಪ್ರಾಮಾಣ್ಯಮೇವ ಮಾನ್ಯಮಿತ್ಯಾಹ – **ವೇದ ಇತಿ ॥** ದ್ವೌ ಚಾರ್ವಾಕಬೌದ್ಧೌ । ತದನ್ಯೇ ಚತ್ವಾರಃ । ಮೀಮಾಂಸಕಸಾಂಖ್ಯತಾರ್ಕಿಕವೇದಾಂತಿನಃ । ತತ್ತಸ್ಮಾತ್ಕಾರಣಾತ್ ಬುಧಾಃ ಬಹೋರೇವಾನುಗ್ರಹಂ ತನ್ವತೇ । ಬಹುಭಿಃ ಪರಿಗೃಹೀತಮೇವಾನುಗೃಹ್ಣಂತಿ । ಅನ್ಯಥಾ ಸಪ್ತಪಂಚತ್ರ್ಯಾತ್ಮಕಸಭ್ಯೇಷು ಸಭ್ಯಾನಾಮೇವ ಮಿಥಃ ಕಲಹೇ ಚತುರ್ಭಿಸ್ತ್ರಿಭಿರ್ದ್ವಾಭ್ಯಾಂ ಚೋಕ್ತಾನುಸಾರೇಣ ಜಯಪರಾಜಯವ್ಯವಸ್ಥಾ ನ ಸ್ಯಾದಿತಿ ಭಾವಃ ॥ ೧೧೮ ॥

**ವಿವರಣೆ–** 'ದ್ವೈಧೇ ಬಹೂನಾಂ ವಚನಂ' ಎಂಬುದು ಒಂದು ನ್ಯಾಯ. ವಿಚಾರವು ಎರಡು ಬಗೆಯದಾದಾಗ ಬಹಳ ಜನರ ಮಾತು ಗ್ರಾಹ್ಯವಾಗುತ್ತದೆ ಎಂದು ಇದರ ಅರ್ಥ. ಅದರಂತೆ ವೇದಪ್ರಾಮಾಣ್ಯವಿಚಾರದಲ್ಲಿ ಪ್ರಾಮಾಣ್ಯದ ವಿಷಯದಲ್ಲಿ ಬಹುಮತವಿರುವುದರಿಂದ ಅದನ್ನೇ ಒಪ್ಪಬೇಕು ಎಂದು ಭಾವ.

ಬಹುಮತವು ಗ್ರಾಹ್ಯವಲ್ಲದಿದ್ದರೆ ಏಳು ಮಂದಿ ಸಭ್ಯರಲ್ಲಿ, ಐದು ಮಂದಿ ಸಭ್ಯರಲ್ಲಿ ಮೂವರು ಸಭ್ಯರಲ್ಲಿ ಪರಸ್ಪರವೈಚಾರಿಕಕಲಹವುಂಟಾದರೆ ಕ್ರಮವಾಗಿ ನಾಲ್ಕು, ಮೂರು, ಇಬ್ಬರು ಏನು ಹೇಳುವರೋ ಅದರ ಆಧಾರದಲ್ಲಿ ಜಯಪರಾಜಯದ ವ್ಯವಸ್ಥೆಯನ್ನು ಶಾಸ್ತ್ರದಲ್ಲಿ ಹೇಳುತ್ತಿರಲಿಲ್ಲ ಎಂದು ಭಾವ.

ರಾಗದ್ವೇಷವಿಹೀನಾಶ್ಚ ಸರ್ವವಿದ್ಯಾವಿಶಾರದಾಃ ।
ಪ್ರಾಶ್ನಿಕಾ ಇತಿ ವಿಜ್ಞೇಯಾಃ ವಿಷಮಾ ಏಕ ಏವ ವಾ ॥ - ಕಥಾಲಕ್ಷಣ
ರಾಗದ್ವೇಷವಿನಿರ್ಮುಕ್ತಾಃ ಸಪ್ತ ಪಂಚ ತ್ರಯೋಽಪಿ ವಾ ।
ಯತ್ರೋಪವಿಷ್ಟಾಃ ಸಭ್ಯಾಃ ಸ್ಯುಃ ಸಾ ಯಜ್ಞಸದೃಶೀ ಸಭಾ ॥

ಯಾವ ಸಭೆಯಲ್ಲಿ ರಾಗದ್ವೇಷರಹಿತರಾದ ಏಳು, ಅಥವಾ ಐದು, ಅಥವಾ ಮೂವರಾದರೂ ಸಭ್ಯರಿರುವರೋ ಆ ಸಭೆಯು ಯಜ್ಞದಂತೆ ಕಂಗೊಳಿಸುತ್ತದೆ.

**ಛಂದಾಂಸ್ಯನಂತಾನಿ ಕಿಲಗ್ರಂಥಸ್ತೈಸ್ತೈಃ ಕೃತೋಽಲ್ಪಕಃ ।**
**ಕೋಽಂಧೋರಂಧೋಽನುಸಂಧತ್ತೇ ಸಿಂಧೋರಗ್ರೇ ಪರಾಕ್ರಮಮ್**
**॥ ೧೧೯ ॥**

**ಅರ್ಥ–** ಛಂದಾಂಸಿ = ವೇದಗಳು, ಅನಂತಾನಿ ಕಿಲ = ಅನಂತಗಳಷ್ಟೇ. ತೈಃ ತೈಃ = ಆಯಾಯಮತಾಚಾರ್ಯರಿಂದ, ಕೃತಃ = ರಚಿತವಾದ, ಗ್ರಂಥಃ = ಗ್ರಂಥವು, ಅಲ್ಪಕಃ = ಅತ್ಯಂತ ಅಲ್ಪವಾದುದು. ಸಿಂಧೋಃ = ಸಮುದ್ರದ, ಅಗ್ರೇ = ಎದುರಿಗೆ, ಅಂಧೋಃ = ಸಣ್ಣಹಳ್ಳದ, ಪರಾಕ್ರಮಂ = ಪರಾಕ್ರಮವನ್ನು ಕಃ ಅಂಧಃ = ಯಾವ ಕುರುಡನು (ಅಜ್ಞಾನಿಯು), ಅನುಸಂಧತ್ತೇ = ದೊಡ್ಡದಾಗಿ ಭಾವಿಸುತ್ತಾನೆ?

**ಅನುವಾದ–** ವೇದಗಳು ಅನಂತವೆಂದು ಪ್ರಸಿದ್ಧವಷ್ಟೆ. ಆಯಾ ಮತಾಚಾರ್ಯರಿಂದ ರಚಿತವಾದ ಗ್ರಂಥಗಳು ಗಾತ್ರದಲ್ಲಿ ಅತ್ಯಲ್ಪ. ಯಾವ ಕುರುಡನು (ಅಜ್ಞಾನಿಯು) ಸಮುದ್ರದ ಮುಂದೆ ಒಂದು ಹಳ್ಳದ ಪರಾಕ್ರಮವನ್ನು ಅಂಗೀಕರಿಸುತ್ತಾನೆ?

**ಭಾವವಿಲಾಸಿನೀ–** ಸರ್ವಶಾಸ್ತ್ರೇಭ್ಯೋ ವೇದಸ್ಯ ಬಹುತ್ವಾನ್ನಾಪ್ರಾಮಾಣ್ಯಮಿತ್ಯಾಹ – **ಧನ್ದಾಂಸೀತಿ ॥** ತೈಸ್ತೈಸ್ತತ್ತದಾಚಾರ್ಯೈಃ । ಕಿಂ ತತಃ? ಇತ್ಯತ ಆಹ – **ಕೋಽಂಧೋರಿತಿ ॥** ಅಪಾರಸ್ಯ ಸಿಂಧೋರಗ್ರೇ ಅಲ್ಪಸ್ಯಾನ್ಧೋಃ ಕೂಪಸ್ಯ ಪರಾಕ್ರಮಂ ಕೋಽನ್ಧೋಽನುಸಂಧತ್ತ ಇತಿ ಸಂಬಂಧಃ। ತಥಾಚಾಲ್ಪಂ ತತ್ತದಾಚಾರ್ಯವಚನಂ ಪುರಸ್ಕೃತ್ಯ ಅನಂತವೇದಧಿಕ್ಕಾರೋ ನ ಯುಕ್ತ ಇತಿ ಭಾವಃ ॥ ೧೧೯ ॥

**ವಿವರಣೆ–** ಎಲ್ಲ ಶಾಸ್ತ್ರಗಳಿಗಿಂತಲೂ ವೇದವು ಬಹುವಿಸ್ತಾರವಾದುದರಿಂದ ಅಪ್ರಮಾಣವಲ್ಲ ಎಂದು ಇಲ್ಲಿ ಹೇಳುತ್ತಾರೆ. ಆಯಾಯ ಮತಾಚಾರ್ಯರು ಮಾಡಿರುವ ಗ್ರಂಥಗಳು ಗಾತ್ರದಲ್ಲಿ ಪಾತ್ರದಲ್ಲಿ ಅಲ್ಪ ಸ್ವಲ್ಪವು. ವೇದವು ಅನಂತವೆಂದು ಪ್ರಸಿದ್ಧವಷ್ಟೇ. ಹೀಗಿರುವಾಗ ಮತಾಚಾರ್ಯರು ಮಾಡಿದ ಚಿಕ್ಕ ಚಿಕ್ಕ ಗ್ರಂಥಗಳ ಮಾತನ್ನು ಪುರಸ್ಕರಿಸಿ ಅನಂತವೇದವನ್ನು ಅಪ್ರಮಾಣವೆಂದು ಧಿಕ್ಕರಿಸುವುದು ಸರಿಯಲ್ಲವೆಂದು ಭಾವ.

**ಕಲೌ ಕಿಲ ಷಡಾಚಾರ್ಯಾಃ ವೇದಸ್ತು ತ್ರಿಯುಗೋತ್ಸವಃ ।**
**ರಾಜಸೂಯಾಶ್ವಮೇಧಾದ್ಯಾ ಯನ್ಮೂಲಾಶ್ಚಕ್ರವರ್ತಿನಾಮ್ ॥ ೧೨೦ ॥**

**ಅರ್ಥ–** ಷಡಾಚಾರ್ಯಾಃ = ಆರು ಮತಾಚಾರ್ಯರು, ಕಲೌ ಕಿಲ = ಕಲಿಯುಗದಲ್ಲಿ ಪ್ರಸಿದ್ಧರಾದವರಷ್ಟೇ. ತು = ಆದರೆ, ಚಕ್ರವರ್ತಿನಾಂ = ಆಯಾ ಯುಗದ ಚಕ್ರವರ್ತಿಗಳ, ರಾಜಸೂಯಾಶ್ವಮೇಧಾದ್ಯಾಃ = ರಾಜಸೂಯ, ಅಶ್ವಮೇಧಾದಿಯಾಗಗಳು, ಯನ್ಮೂಲಾಃ

=ಯಾವ ವೇದಮೂಲಕವಾಗಿದ್ದವೋ, ಸಃ= ಅಂತಹ, ವೇದಃ= ವೇದವು, ತ್ರಿಯುಗೋತ್ಸವಃ= ಕೃತ, ತ್ರೇತಾ, ದ್ವಾಪರ ಎಂಬ ಮೂರೂ ಯುಗಗಳಲ್ಲಿಯೂ ಮೆರೆದ ಗ್ರಂಥವಾಗಿದೆ.

**ಅನುವಾದ–** ಆರು ದರ್ಶನಾಚಾರ್ಯರ ಮಾತುಗಳು ಕಲಿಯುಗದಲ್ಲಿ ಮಾತ್ರ ಉಲ್ಲಾಸಗೊಳ್ಳುವಂತಹವು. ವೇದವು ಮೂರು ಯುಗಗಳಲ್ಲಿಯೂ ಉಲ್ಲಸಿತವಾದದ್ದು, ಕೃತ, ತ್ರೇತಾ ದ್ವಾಪರಗಳ ಚಕ್ರವರ್ತಿಗಳು ವೇದದ ನೆಲೆಯಲ್ಲಿಯೇ ರಾಜಸೂಯಾಶ್ವಮೇಧಾದಿಯಜ್ಞಗಳನ್ನು ಮಾಡುತ್ತಿದ್ದರು. ಹೀಗೆ ಬಹುಯುಗಾನುವರ್ತಿಯಾದುದರಿಂದ ವೇದವು ಪ್ರಮಾಣವು.

**ಭಾವವಿಲಾಸಿನೀ–** ಬಹುಯುಗಾನುವರ್ತಿತ್ವಾದಪಿ ವೇದಸ್ಯ ಪ್ರಾಮಾಣ್ಯಮಿತ್ಯಾಹ– **ಕಲಾವಿತಿ** ॥ ಷಡ್ದರ್ಶನಾಚಾರ್ಯವಚಾಂಸಿ ಕಲಾವೇವೋಲ್ಲಸಂತಿ । ವೇದಸ್ತು ತತ್ಪೂರ್ವದ್ವಾಪರತ್ರೇತಾಕೃತಯುಗೋಲ್ಲಾಸೀತಿ ಭಾವಃ । ತ್ರಿಯುಗೋತ್ಸವತ್ವಮುಪಪಾದಯತಿ–**ರಾಜಸೂಯೇತಿ** ॥ ಯನ್ಮೂಲಾ ವೇದಮೂಲಾಃ । ರಾಜಸೂಯಾಶ್ವಮೇಧಾದಿ ಕೃತಯುಗಾದಿಷ್ವೇವ ಕುರ್ವಂತೀತಿ ಪ್ರಸಿದ್ಧಮ್ ॥ ೧೨೦ ॥

**ವಿವರಣೆ–** ಅನೇಕ ಯುಗಗಳಿಂದ ಅನುವ್ಯಕ್ತವಾಗಿ ಬಂದಿರುವುದರಿಂದ ವೇದಗಳು ಪ್ರಮಾಣವೆಂದು ಇಲ್ಲಿ ಸಾಧಿಸುತ್ತಾರೆ.

**ದ್ವಿಪಾತ್ತ್ರಿಪಾಚ್ಚತುಷ್ಪಾಚ್ಚ ತತ್ರ ಧರ್ಮೋಽತ್ರ ಚೈಕಪಾತ್ ।**
**ಧರ್ಮಾನುಶಾಸನಂ ತದ್ವಾ ವಾದಿವಾಗ್ವಾ ವಿಚಾರ್ಯತಾಮ್ ॥ ೧೨೧ ॥**

**ಅರ್ಥ–** ತತ್ರ ಚ = ಆ ದ್ವಾಪರಾದಿಯುಗಗಳಲ್ಲಿಯಾದರೂ, ಧರ್ಮಃ = ಧರ್ಮವು ಕ್ರಮವಾಗಿ, ದ್ವಿಪಾತ್ ತ್ರಿಪಾತ್ ಚತುಷ್ಪಾತ್ = ಎರಡು ಮೂರು ನಾಲ್ಕು ಪಾದಗಳುಳ್ಳದ್ದು. ಅತ್ರ ಚ = ಈ ಕಲಿಯುಗದಲ್ಲಿಯಾದರೋ, ಧರ್ಮಃ = ಧರ್ಮವು, ಏಕಪಾತ್ = ಒಂದು ಪಾದವುಳ್ಳದ್ದು, ಧರ್ಮಾನುಶಾಸನಂ = ಧರ್ಮಶಿಕ್ಷಕವಾದುದು, ತದ್ ವಾ = ಬಹುಯುಗಧರ್ಮಪ್ರವೃತ್ತಿಕಾಲೀನವಾದ ಆ ವೇದವಾಕ್ಯವೋ? ವಾದಿವಾಕ್ ವಾ = ಅಲ್ಪಧರ್ಮಪ್ರವೃತ್ತಿಕಾಲೀನವಾದ ವಾದಿಗಳ ಮಾತೋ? ವಿಚಾರ್ಯತಾಂ = ವಿಚಾರಮಾಡೋಣವಾಗಲಿ.

**ಅನುವಾದ–** ಕೃತಯುಗದಲ್ಲಿ ಧರ್ಮವು ನಾಲ್ಕುಪಾದಗಳಿಂದ ಸ್ಥಿರವಾಗಿದ್ದಿತು. ತ್ರೇತಾ ದ್ವಾಪರಗಳಲ್ಲಿ ಕ್ರಮವಾಗಿ ಮೂರು, ಎರಡು ಪಾದಗಳಿಂದ ಧರ್ಮವಿದ್ದಿತು. ಬಹಳ ಧರ್ಮಾಚರಣೆಯ ಕಾಲದಲ್ಲಿದ್ದ ವೇದವಾಕ್ಯವು ಧರ್ಮಬೋಧಕವೋ? ಅಲ್ಪಧರ್ಮವುಳ್ಳ ಈ ಕಲಿಕಾಲದ ವಾದಿಗಳ ವಾಕ್ಯವು ಧರ್ಮಬೋಧಕವೋ? ವಿಚಾರಮಾಡಲ್ಪಡಲಿ.

**ಭಾವವಿಲಾಸಿನೀ–** ಬಹುತರಧರ್ಮಸಂಚಾರಸಹಚರಿತತ್ವಾಚ್ಚ ವೇದ ಏವ ಹಿ ಧರ್ಮಾನುಶಾಸನಮ್। ತತಶ್ಚ ತಸ್ಯೈವ ಪ್ರಾಮಾಣ್ಯಮಿತ್ಯಾಹ – **ದ್ವಿಪಾದಿತಿ** ॥ ತತ್ರ ದ್ವಾಪರಾದಿ-ಯುಗೇಷು ಅತ್ರ ಕಲಿಯುಗೇ। ತದ್ವೇತ್ಯನೇನ ಬಹುಧರ್ಮಪ್ರವೃತ್ತಿಕಾಲೀನತ್ವಂ ವೇದಸ್ಯ ಧ್ವನಯತಿ ॥ ೧೨೧ ॥

**ವಿವರಣೆ–** ತಪಃ ಶೌಚಂ ದಯಾ ಸತ್ಯಮಿತಿ ಪಾದಾಃ ಕೃತೇ ಕೃತಾಃ ।
ಅಧರ್ಮಾಂಗೈಸ್ತ್ರಯೋ ಭಗ್ನಾಃ ಸ್ಮಯಸಂಗಮದೈಸ್ತವ ॥

ಇದಾನೀಂ ಧರ್ಮಪಾದಸ್ತೇ ಸತ್ಯಂ ನಿರ್ವರ್ತಯೇ ಯತಃ ।
ತಂ ಜಿಘೃಕ್ಷತ್ಯಧರ್ಮೋಽಯಮನೃತೇನೈಧಿತಃ ಕಲಿಃ ॥

(ಭಾಗವತ ೧-೧೭-೨೩,೨೪)

ತಪಸ್ಸು ಶೌಚ, ದಯಾ, ಸತ್ಯಗಳೆಂಬ ನಾಲ್ಕು ಪಾದಗಳಿಂದ ಧರ್ಮವು ಕೃತಯುಗದಲ್ಲಿ ಸುಸ್ಥಿರವಾಗಿತ್ತು. ಸ್ಮಯ ಸಂಗ ಮದ ಅನೃತ ಇವು ಅಧರ್ಮದ ನಾಲ್ಕು ಪಾದಗಳು. ತ್ರೇತಾಯುಗದಲ್ಲಿ ಸ್ಮಯ - ಗರ್ವ ಎಂಬ ಅಧರ್ಮದ ಅಂಗದಿಂದ ತಪಸ್ ಎಂಬ ಧರ್ಮದ ಒಂದು ಪಾದ ಭಂಗಗೊಂಡಿತು. ದ್ವಾಪರದಲ್ಲಿ ಸಂಗ - ದುರ್ವಿಷಯಗಳ ಸಂಗ ಎಂಬ ಅಂಗದಿಂದ ಶೌಚದ ನಾಶ, ಮದ-ಐಶ್ವರ್ಯಾದಿಗಳ ಮದ ಎಂಬ ಅಧರ್ಮಾಂಗದಿಂದ ದಯೆಯ ನಾಶಗಳು ಆದವು. ಕಲಿಯುಗದಲ್ಲಿ ಸತ್ಯವೆಂಬ ಧರ್ಮದ ಒಂದೇ ಪಾದ ಉಳಿದಿರುವುದು. ಅನೃತ - ಸುಳ್ಳು ಎಂಬ ಅಧರ್ಮಾಂಗದಿಂದ ವೃದ್ಧಿಗೊಂಡ ಕಲಿಯು ಈ ನಾಲ್ಕನೇ ಪಾದವನ್ನು ಹಿಡಿಯಲು ಬಯಸುತ್ತಿದ್ದಾನೆ. ಕ್ರಮೇಣ ಅದೂ ಭಗ್ನಗೊಳ್ಳುತ್ತದೆ.

**ಧರ್ಮಪ್ರವೃತ್ತಿಕಾಲೀನಂ ವಾಕ್ಯಂ ನ ಕಿಲ ಧರ್ಮವಾಕ್ ।**
**ಕಲಾವಧರ್ಮಕಲಿಲೇ ಧರ್ಮಶಾಸ್ತ್ರಕೃತಃ ಕಿಲ ॥ ೧೨೨ ॥**

**ಅರ್ಥ–** ಧರ್ಮಪ್ರವೃತ್ತಿಕಾಲೀನಂ ವಾಕ್ಯಂ = ಧರ್ಮಪ್ರವೃತ್ತಿಯ ಕೃತಾದಿಕಾಲದ ವೇದವಾಕ್ಯವು, ಧರ್ಮವಾಕ್ ನ ಕಿಲ = ಧರ್ಮಬೋಧಕವಲ್ಲವಷ್ಟೇ! ಅಧರ್ಮಕಲಿಲೇ = ಅಧರ್ಮದಿಂದ ಕಲುಷಿತವಾದ, ಕಲೌ = ಈ ಕಲಿಯುಗದಲ್ಲಿ, ಧರ್ಮಶಾಸ್ತ್ರಕೃತಃ= ಧರ್ಮಶಾಸ್ತ್ರಕಾರರು, ಸಂಭವಂತಿ ಕಿಲ= ಹುಟ್ಟುತ್ತಾರಷ್ಟೇ?

**ಅನುವಾದ– ಧರ್ಮವು ಪ್ರಚುರವಾಗಿದ್ದ ಕೃತಾದಿಕಾಲದಿಂದ ಇರುವ ವೇದವಾಕ್ಯವು ಧರ್ಮಬೋಧಕವಲ್ಲ! ಅಧರ್ಮಪ್ರಚುರವಾದ ಕಲುಷಿತಕಲಿಕಾಲದ ಮತಾಚಾರ್ಯರು ಧರ್ಮಶಾಸ್ತ್ರಕಾರರಂತೆ ! ಅಹಹ !!**

**ಭಾವವಿಲಾಸಿನೀ–** ತದೇವೋಪಪಾದಯತಿ – **ಧರ್ಮೇತಿ** ॥ ತಥಾಚ ಜಿನಾದಿವಾಕ್ಯಂ ನ ಧರ್ಮಶಾಸ್ತ್ರಮಿತಿ ಭಾವಃ ॥ ೧೨೨ ॥

**ವಿವರಣೆ–** ಜಿನಾದಿ ವಾಕ್ಯವು ಧರ್ಮಶಾಸ್ತ್ರವಲ್ಲ ಎಂದು ಭಾವ.

**ಅದ್ಯಾಪಿ ಮಧ್ಯಸ್ಥಗಿರಾ ಪೂರ್ವಶಾಸನತೋಽಪಿ ವಾ ।**
**ನೃಣಾಂ ಕಲಹಶಾಂತಿಃಸ್ಯಾತ್ತಾದೃಗ್ವೇದಸ್ತು ಕಸ್ಯ ನ ॥ ೧೨೩ ॥**

**ಅರ್ಥ–** ಅದ್ಯಾಪಿ = ಇಂದಿಗೂ ಕೂಡ, ಮಧ್ಯಸ್ಥಗಿರಾ = ಎರಡು ಪಕ್ಷದವರಲ್ಲಿ ಪಕ್ಷಪಾತತೋರದ ಮಧ್ಯಸ್ಥನ ಮಾತಿನಿಂದ, ವಾ = ಅಥವಾ, ಪೂರ್ವಶಾಸನತಃ ಅಪಿ = ಹಿಂದಿನ ಶಾಸನಗಳಿಂದಲೂ ಸಹ, ನೃಣಾಂ = ಪ್ರಜೆಗಳ ಮಧ್ಯದಲ್ಲಿ, ಕಲಹಶಾಂತಿಃ = ವಿವಾದದ ಪರಿಹಾರವು, ಸ್ಯಾತ್ = ಆಗುತ್ತದೆ. ತಾದೃಗ್ = ಮಧ್ಯಸ್ಥರ ಮಾತಿನಂತೆಯೂ, ಹಾಗೂ ಪೂರ್ವಶಾಸನದಂತೆಯೂ ಇರುವ, ವೇದಃ ತು = ವೇದವಾದರೋ, ಕಸ್ಯ = ಯಾರಿಗೆ, ಪ್ರಮಾಣಂ ನ = ಪ್ರಮಾಣವಲ್ಲ!

**ಅನುವಾದ– ಇಂದಿಗೂ ಕೂಡ ಮಧ್ಯಸ್ಥನ ಮಾತಿನಿಂದಲೂ ಪೂರ್ವಶಾಸನದಿಂದಲೂ ಜನಗಳ ವಿವಾದವು ಬಗೆಹರಿಯುತ್ತದೆ. ಅಂತಹ ಮಧ್ಯಸ್ಥವಾಕ್ಯರೂಪವೂ ಪೂರ್ವಶಾಸನರೂಪವೂ ಆದ ವೇದವು ಯಾರಿಗೆ ಬೇಡ? (ಯಾರಿಂದ ಪ್ರಮಾಣವಾಗಿ ಅಂಗೀಕರಿಸಲ್ಪಡುವುದಿಲ್ಲ?)**

**ಭಾವವಿಲಾಸಿನೀ–** ವಿಪ್ರತಿಪನ್ನಾರ್ಥನಿರ್ಣಾಯಕತ್ವಾದಪಿ ವೇದಸ್ಯ ಪ್ರಾಮಾಣ್ಯಮಿತಿ ಸದೃಷ್ಟಾಂತಮಾಹ – **ಅದ್ಯಾಪೀತಿ** ॥ ತಾದೃಙ್ಮಧ್ಯಸ್ಥಗೀರೂಪಃ ಪೂರ್ವಶಾಸನರೂಪಶ್ಚೇತ್ಯರ್ಥಃ ॥ ೧೨೩ ॥

**ವಿವರಣೆ–** ಪ್ರಜೆಗಳಲ್ಲಿ ವಿವಾದವುಂಟಾದಾಗ ಯಾರ ಪಕ್ಷಪಾತಿಯೂ ಅಲ್ಲದ ಮಧ್ಯಸ್ಥನ ಮಾತಿನಿಂದ ಅಥವಾ ಪೂರ್ವಕಾಲದ ಶಾಸನದ ಆಧಾರದಿಂದ ವಿವಾದವು ಬಗೆಹರಿಯುವುದು ಕಂಡಿದೆ. ಹಾಗೆಯೇ ಯಾವ ಮತಾಚಾರ್ಯರೂ ಮಾಡದಿರುವ ಅಪೌರುಷೇಯವಾದ ವೇದ ಮಧ್ಯಸ್ಥನಂತೆ ಕೃತಾದಿಯುಗಗಳಿಂದಲೂ ಧರ್ಮದ ಆಧಾರವಾಗಿ ಅಂಗೀಕೃತವಾಗಿರುವುದರಿಂದ ಪೂರ್ವಶಾಸನರೂಪವೂ ಆಗಿದೆ. ಆದ್ದರಿಂದ ವಿವಾದಗ್ರಸ್ತವಾದ ಅತೀಂದ್ರಿಯ ವಿಷಯಗಳಲ್ಲಿ ವೇದವೇ ನಿಶ್ಚಾಯಕ ಪ್ರಮಾಣವಾಗಿದೆ.

ವಿಪ್ರತಿಪನ್ನ ಅರ್ಥನಿರ್ಣಾಯಕವಾದುದರಿಂದಲೂ ವೇದವು ಪ್ರಮಾಣವೆಂದು ಆಶಯ-

**ಛಂದಸ್ಯಯಸ್ಮಯಾದೀನೀತ್ಯಾದ್ಯೈಃ ಶಬ್ದಾನುಶಾಸ್ತಿಕೃತ್ ।**
**ಅಮಾನಯದ್ಧಿ ಯನ್ಮಾರ್ಗಂ ಮಾನಂ ಕಸ್ಯ ನ ಸಾ ಶ್ರುತಿಃ ॥ ೧೨೪ ॥**

**ಅರ್ಥ–** ಶಬ್ದಾನುಶಾಸ್ತಿಕೃತ್ = ಶಬ್ದಾನುಶಾಸನಕಾರರಾದ ಪಾಣಿನಿಗಳು ಅಯಸ್ಮ-ಯಾದೀನಿ ಛಂದಸಿ ಇತ್ಯಾದ್ಯೈಃ = ಅಯಸ್ಮಯಾದೀನಿ ಛಂದಸಿ, ಛಂದಸಿ

ಆಮಾಜ್‌ಯೋಗೇಽಪಿ, ಛಂದಸಿ ಉಭಯಥಾ, ಷಷ್ಠೀಯುಕ್ತಶ್ಛಂದಸಿ ವಾ ಇವೇ ಮುಂತಾದ ಸೂತ್ರಗಳಿಂದ, ಯನ್ಮಾರ್ಗಂ = ಯಾವ ವೇದಮಾರ್ಗವನ್ನು (ವೈದಿಕಶಬ್ದಪ್ರಯೋಗವನ್ನು) ಅಮಾನಯತ್ ಹಿ = ಗೌರವಿಸಿರುವರೋ. ಸಾ = ಅಂತಹ (ಅವರಿಂದಲೂ ಮಾನ್ಯವಾದ), ಶ್ರುತಿಃ = ವೇದವು, ಕಸ್ಯ = ಯಾರಿಗೆ, ನ ಮಾನಂ? = ಪ್ರಮಾಣವಾಗುವುದಿಲ್ಲ?

**ಅನುವಾದ–** ಎಲ್ಲ ಮತೀಯರಿಗೂ ವಿವಾದವಿಲ್ಲದೆ ಆದರಣೀಯರಾದ ಶಬ್ದಾನುಶಾಸಕರಾದ ಪಾಣಿನಿಗಳು ತಮ್ಮ ವ್ಯಾಕರಣದ ನಿಯಮಗಳಿಗೆ ಹೊಂದಿಕೆಯಾಗದ ವೈದಿಕ ಪ್ರಯೋಗಗಳನ್ನೂ ಅಯಸ್ಮಯಾದೀನಿ ಛಂದಸಿ ಮುಂತಾದ ಸೂತ್ರಗಳಿಂದ ಸಾಧುಗಳೆಂದು ಸಮರ್ಥಿಸುವ ಮೂಲಕ ವೇದವನ್ನು ಪ್ರಮಾಣವೆಂದು ಗೌರವಿಸಿದ್ದಾರೆ. ಅಂದ ಮೇಲೆ ಅಂತಹ ವೇದ ಯಾರಿಗೆ ತಾನೆ ಪ್ರಮಾಣವಲ್ಲ?

**ಭಾವವಿಲಾಸಿನೀ–** ಪಾಣಿನ್ಯಾದಿವ್ಯಾಕರಣಾಚಾರ್ಯೈರಪಿ ಪುರಸ್ಕೃತತ್ವಾಚ್ಚ ವೇದಸ್ಯ ಪ್ರಾಮಾಣ್ಯಮಿತ್ಯಾಹ – **ಛಂದಸೀತಿ** ॥ ಆದ್ಯೈರಿತ್ಯನೇನ 'ಅಯಸ್ಮಯಾದೀನಿ ಛನ್ದಸಿ' । 'ಬಹುಲಂ ಛನ್ದಸ್ಯಾಮಾಯೋಗೇಽಪಿ' । ಛನ್ದಸ್ಯುಭಯಥಾ । ಷಷ್ಠೀಯುಕ್ತಶ್ಛನ್ದಸಿ ವೇತ್ಯಾದಿಸೂತ್ರಾಣಿ ಸಂಗೃಹ್ಣಾತಿ । ಯನ್ಮಾರ್ಗಂ ವೇದಮಾರ್ಗಮ್ ॥ ೧೨೪ ॥

**ವಿವರಣೆ–** ಪಾಣಿನಿ ಮೊದಲಾದ ವ್ಯಾಕರಣಾಚಾರ್ಯರಿಂದ ಪುರಸ್ಕೃತವಾದುದರಿಂದಲೂ ವೇದವು ಪ್ರಮಾಣವೆಂದು ಭಾವ.

**ತಸ್ಮಾದ್ವೇದಾರ್ಥಕುಶಲೋ ವೇದಧರ್ಮಂ ಕಲಾವಪಿ ।**
**ನ ವೇದ ಯೋ ವೇದಮಾರ್ಗಂ ನ ಸ ವೇದ ಶುಭಾಶುಭೇ ॥ ೧೨೫ ॥**

**ಅರ್ಥ–** ತಸ್ಮಾದ್ = ವೇದವು ಧರ್ಮಾನುಶಾಸನರೂಪವಾದುದರಿಂದ, ವೇದಾರ್ಥಕುಶಲಃ = ವೇದಾರ್ಥವಿಚಾರದಲ್ಲಿ ಜಾಣನಾದವನು, ಕಲೌ ಅಪಿ = ಕಲಿಯುಗದಲ್ಲಿಯೂ, ಧರ್ಮಂ = ಧರ್ಮವನ್ನು, ವೇದ = ತಿಳಿಯುವನು. ಯಃ = ಯಾರು, ವೇದಮಾರ್ಗಂ = ವೇದಾರ್ಥದ ಪದ್ಧತಿಯನ್ನು, ನ ವೇದ = ತಿಳಿದಿಲ್ಲವೋ, ಸಃ = ಅವನು, ಶುಭಾಶುಭೇ = ಧರ್ಮಾಧರ್ಮಗಳನ್ನು, ಪುಣ್ಯಪಾಪಗಳನ್ನು, ನ ವೇದ = ತಿಳಿಯಲಾರನು.

**ಅನುವಾದ–** ವೇದವನ್ನು ಅರ್ಥೈಸಿಕೊಳ್ಳುವುದರಲ್ಲಿ ನಿಪುಣನಾದವನು ಈ ಕಲಿಯುಗದಲ್ಲಿಯೂ ಧರ್ಮವನ್ನು ಅರಿಯಬಲ್ಲ. ವೇದವನ್ನು ಅರ್ಥೈಸಲಾರದವನು ವೇದದಿಂದ ಧರ್ಮಾಧರ್ಮಗಳನ್ನೂ ತಿಳಿಯಲಾರನು.

**ಭಾವವಿಲಾಸಿನೀ–** ತಸ್ಮಾದ್ಧರ್ಮಾನುಶಾಸ್ತಿರೂಪತ್ವಾತ್ ॥ ೧೨೫ ॥

ವೈದಿಕೈಃ ಕಿಲ ಗಾಯತ್ರೀಮಂತ್ರಾದ್ಯೈರ್ಮಂತ್ರಿತೇಷವಃ ।
ಅಸ್ತ್ರೀಭವಂತಿ ಸ್ಮ ರಾಜ್ಞಾಂ ಕಸ್ತಚ್ಛಾಸ್ತ್ರಂ ನ ಮಾನಯೇತ್ ॥ ೧೨೬ ॥

**ಅರ್ಥ–** ವೈದಿಕೈಃ = ವೇದದಲ್ಲಿರುವ, ಗಾಯತ್ರೀಮಂತ್ರಾದ್ಯೈಃ = ಗಾಯತ್ರಿಯೇ ಮುಂತಾದ ಮಂತ್ರಗಳಿಂದ, ಮಂತ್ರಿತೇಷವಃ = ಅಭಿಮಂತ್ರಿಸಲ್ಪಟ್ಟ ಬಾಣಗಳು, ರಾಜ್ಞಾಂ = ರಾಜರುಗಳ, ಅಸ್ತ್ರೀಭವಂತಿ ಸ್ಮ ಕಿಲ = ಅಸ್ತ್ರಗಳಾಗುತ್ತಿದ್ದವಷ್ಟೇ. ತಚ್ಛಾಸ್ತ್ರಂ = ಅಂತಹ ವೇದಶಾಸ್ತ್ರವನ್ನು, ಕಃ = ಯಾವ ವಿವೇಕಿಯು, ನ ಮಾನಯೇತ್ = ಮಾನ್ಯಮಾಡುವುದಿಲ್ಲ? ಎಲ್ಲರೂ ಮಾನ್ಯಮಾಡುತ್ತಾರೆ.

**ಅನುವಾದ–** ರಾಮಾಯಣ ಮಹಾಭಾರತಕಾಲದ ರಾಜರು ವೇದೋಕ್ತಗಳಾದ ಗಾಯತ್ರೀಮುಂತಾದ ಮಂತ್ರಗಳಿಂದ ಅಭಿಮಂತ್ರಿತವಾದ ಬಾಣಗಳನ್ನು ಅಸ್ತ್ರಗಳನ್ನಾಗಿ ಬಳಸುತ್ತಿದ್ದರು. ಅಂತಹ ಪ್ರಭಾವಶಾಲಿಯಾದ ವೇದಮಂತ್ರಗಳನ್ನು ಯಾವ ವಿವೇಕಿ ತಾನೆ ಮಾನ್ಯಮಾಡುವುದಿಲ್ಲ? ವಿವೇಕಿಗಳೆಲ್ಲ ಮಾನ್ಯಮಾಡುತ್ತಾರೆ.

**ಭಾವವಿಲಾಸಿನೀ–** ವೈದಿಕಮಂತ್ರಪ್ರಯೋಗೈಃ ಫಲದರ್ಶನಾದಪಿ ವೇದಸ್ಯ ಪ್ರಾಮಾಣ್ಯಮಿತ್ಯಾಹ **– ವೈದಿಕೈರಿತಿ** ॥ ೧೨೬ ॥

**ವಿವರಣೆ–** ಫಲೋಪಲಬ್ಧಿರೂಪವಾದ ವಿಜಾತೀಯಸಂವಾದದಿಂದಲೂ ವೇದದಲ್ಲಿ ಅಪ್ರಾಮಾಣ್ಯಶಂಕೆ ಬರಲಾರದು ಎಂದು ಭಾವ.

ಯತ್ಸ್ವಾಧ್ಯಾಯೈಃ ಕಿಲಾದ್ಯಾಪಿ ವ್ಯಾಧ್ಯಾದ್ಯೈರ್ನಾಸ್ತ್ಯುಪದ್ರವಃ ।
ಧರ್ಮಸ್ಯ ವೇದನಾದೇವ ಸ ವೇದೋ ನಾತ್ರ ಸಂಶಯಃ ॥ ೧೨೭ ॥

**ಅರ್ಥ–** ಯತ್ಸ್ವಾಧ್ಯಾಯೈಃ = ಯಾವ ವೇದದ ಜಪಗಳಿಂದ, ಅದ್ಯಾಪಿ = ಇಂದೂಕೂಡ, ವ್ಯಾಧ್ಯಾದ್ಯೈಃ = ವ್ಯಾಧಿಮುಂತಾದ ಆಪತ್ತುಗಳಿಂದ, ಉಪದ್ರವಃ = ತೊಂದರೆಯು, ನಾಸ್ತಿ ಕಿಲ =ಇಲ್ಲವಷ್ಟೇ. ಸಃ = ಅಂತಹ ವೇದವು, ಧರ್ಮಸ್ಯ = ಧರ್ಮವನ್ನು, ವೇದನಾದ್ ಏವ = ತಿಳಿಸುವುದರಿಂದಲೇ, ವೇದಃ = ವೇದವೆನಿಸಿದೆ. ಅತ್ರ = ಈ ವಿಷಯದಲ್ಲಿ, ನ ಸಂಶಯಃ = ಸಂಶಯವಿಲ್ಲ.

**ಅನುವಾದ–** ಯಾವ ವೇದದ ಸ್ವಾಧ್ಯಾಯದಿಂದ ಇಂದಿಗೂ ವ್ಯಾಧಿ ಮೊದಲಾದ ಉಪದ್ರವಗಳು ನಾಶಹೊಂದುತ್ತವೆಯೋ, ಅಂತಹ ವೇದವು ಧರ್ಮವನ್ನು ಬೋಧಿಸುವುದರಿಂದಲೇ ವೇದವೆಂದು ಕರೆಯಲ್ಪಡುತ್ತದೆ. ಇದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ವೇದಸ್ವಾಧ್ಯಾಯೇನಾಭೀಷ್ಟಫಲಸಿದ್ಧಿದರ್ಶನಾಚ್ಚ ವೇದಃ ಪ್ರಮಾಣಮಿತ್ಯಾಹ – **ಯತ್ಸ್ವಾಧ್ಯಾಯೈರಿತಿ** ॥ ಯಸ್ಯ ವೇದಸ್ಯ ಸ್ವಾಧ್ಯಾಯೈರ್ಜಪೈರಿತ್ಯರ್ಥಃ । ಅದ್ಯಾಪಿ

ಇದಾನೀಮಪಿ । ವಿಶ್ವನಾಥದೇವಾಲಯೇ ತಥಾ ದರ್ಶನಾತ್ । ವೇದಶಬ್ದಾರ್ಥವತ್ತ್ವಾದಪಿ ವೇದಸ್ಯ ಪ್ರಾಮಾಣ್ಯಮಿತ್ಯಾಹ – **ಧರ್ಮಸ್ಯೇತಿ** ॥ ೧೨೭ ॥

**ವಿವರಣೆ–** ಇಂದಿಗೂ ವೇದಮಂತ್ರದ ಜಪದಿಂದ ಮಾನಸಿಕ ಶಾರೀರಿಕ ಅಸ್ವಸ್ಥತೆಗಳು ದೂರವಾಗುವುದು ಕಂಡಿದೆ. ಹೀಗೆ ವ್ಯಾಧಿಮುಂತಾದ ಅನಿಷ್ಟನಿವೃತ್ತಿರೂಪವಾದ ಅನುಭವಗೋಚರಫಲದ ಜನಕವಾದ ಅದೃಷ್ಟದ ಉತ್ಪಾದಕ ಆನುಪೂರ್ವೀಯಿಂದ ಕೂಡಿರುವುದರಿಂದ ವೇದವು ಪ್ರಮಾಣ. ವೇದಾಧ್ಯಯನದಿಂದ ಅಭೀಷ್ಟ ಫಲಸಿದ್ಧಿಯಾಗುವುದು ಕಂಡಿರುವುದರಿಂದಲೂ ವೇದವು ಪ್ರಮಾಣವೆಂದು ಭಾವ.

ಧರ್ಮವನ್ನು ಧರ್ಮದ ಗುರಿಯಾದ ಭಗವಂತನನ್ನು ತಿಳಿಸಿಕೊಡುವುದರಿಂದಲೇ ಇವುಗಳಿಗೆ ವೇದ ಎಂದು ಹೆಸರು. ಹೀಗೆ ವೇದಶಬ್ದಾರ್ಥಸತ್ವರೂಪಕಾರಣದಿಂದಲೂ ವೇದವು ಪ್ರಮಾಣವೆಂದು ಸಿದ್ಧವಾಗುವುದು ಎಂದು ಭಾವ

ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ ।
ತಸ್ಮಾದಾಹುರ್ವೇದಾ ಇತಿ ॥ (ಪಿಪ್ಪಲಾದ ಶ್ರುತಿಃ - ವಿಷ್ಣುತತ್ತ್ವವಿನಿರ್ಣಯ)

ಪ್ರಾಕೃತಇಂದ್ರಿಯಾದಿಗಳಾಗಲೀ, ಯುಕ್ತಿಯಾಗಲಿ ಭಗವಂತನನ್ನು ತಿಳಿಸಲಾರವು. ವೇದಗಳೇ ಭಗವಂತನನ್ನು ತಿಳಿಸುತ್ತವೆ. ಭಗವಂತನನ್ನು ತಿಳಿಸುವ ಕಾರಣದಿಂದಲೇ ವೇದಗಳು ಎಂದು ಹೆಸರು.

**ಸ್ವಬಂಧುಷು ಕೃತಃಸ್ನೇಹಸ್ಸ್ಯಾದ್ಧಿ ರಾಗಾದಿದೋಷತಃ ।**
**ಪಾಂಥೇಷು ತು ಕೃತಃ ಸ್ನೇಹೋ ಧರ್ಮಂ ಶ್ರುತ್ವೈವತನ್ಮುಖಾತ್ ॥ ೧೨೮ ॥**

**ಅರ್ಥ–** ಸ್ವಬಂಧುಷು = ತನ್ನ ಬಂಧುಗಳಲ್ಲಿ, ಕೃತಃ = ಮಾಡಲ್ಪಟ್ಟದ್ದು, ಸ್ನೇಹಃ = ಸ್ನೇಹವು, ರಾಗಾದಿದೋಷತಃ = ರಾಗಾದಿದೋಷಗಳಿಂದ, ಸ್ಯಾತ್ ಹಿ = ಆಗಿರುವುದಷ್ಟೇ, ತು = ಆದರೆ, ಪಾಂಥೇಷು = ದಾರಿಹೋಕರಲ್ಲಿ, ತನ್ಮುಖಾತ್ = ಅವರಮುಖದಿಂದ, ಧರ್ಮಂ = ಧರ್ಮವನ್ನು, ಶ್ರುತ್ವೈವ =ಕೇಳಿಯೇ, ಸ್ನೇಹಃ = ಸ್ನೇಹವು, ಕೃತಃ = ಮಾಡಲ್ಪಡುವುದು.

**ಅನುವಾದ–** ನಮ್ಮ ನಮ್ಮ ಬಂಧುಗಳಲ್ಲಿ ರಾಗಾದಿಗಳಿಗೆ ಒಳಗಾಗಿ ಸ್ನೇಹ ಮಾಡುತ್ತೇವೆ. ಆದರೆ ಒಬ್ಬ ದಾರಿಹೋಕನಲ್ಲಿ ರಾಗಾದಿಗಳಿಲ್ಲದೆ ಧರ್ಮವನ್ನು ಹೇಳುತ್ತಾನೆಂಬ ಕಾರಣಕ್ಕೆ ಸ್ನೇಹತೋರುತ್ತೇವೆ.

**ಭಾವವಿಲಾಸಿನೀ–** ದುರಾಗ್ರಹಾಗೃಹೀತತ್ವಾದಪಿ ವೇದಸ್ಯ ಪ್ರಾಮಾಣ್ಯಮಿತಿ ವಕ್ತುಂ ತದುಪಯುಕ್ತಂ ಕಿಂಚಿತ್ಪ್ರಮೇಯಮಾಹ – **ಸ್ವಬನ್ಧುಷ್ವಿತಿ** ॥ ತನ್ಮುಖಾತ್ಪಾನ್ಥಮುಖಾತ್ ಸ ಧರ್ಮಂ ವಕ್ತೀತಿ ತಂ ಪೂಜಯಂತೀತಿ ಭಾವಃ ॥ ೧೨೮ ॥

**ವಿವರಣೆ–** ದುರಾಗ್ರಹರಹಿತವಾದುದರಿಂದಲೂ ವೇದವು ಪ್ರಮಾಣ ಎಂದು ಸಾಧಿಸಲು ಇಲ್ಲಿ ಒಂದು ಉಪಯುಕ್ತ ಪ್ರಮೇಯವನ್ನು ಹೇಳುತ್ತಾರೆ.

**ತಥಾ ಸ್ವಸ್ವಕೃತೇ ಶಾಸ್ತ್ರೇ ಸರ್ವಸ್ಯ ಸ್ಯಾದ್ದುರಾಗ್ರಹಃ ।**
**ಸರ್ವೈರಕೃತಶಾಸ್ತ್ರೇಽಸ್ಮಿನ್ ಧರ್ಮಸಿದ್ಧ್ಯೈ ಪರಂ ರತಿಃ ॥ ೧೨೯ ॥**

**ಅರ್ಥ–** ತಥಾ = ಹಾಗೆಯೇ (ತಮ್ಮ ಬಂಧುಗಳಲ್ಲಿ ದುರಾಗ್ರಹದ ಸ್ನೇಹವಿರುವಂತೆ) ಸರ್ವಸ್ಯ = ಎಲ್ಲರಿಗೂ, ಸ್ವಸ್ವಕೃತೇ = ತಮ್ಮ ತಮ್ಮಿಂದ ಮಾಡಲ್ಪಟ್ಟ ಶಾಸ್ತ್ರೇ = ಶಾಸ್ತ್ರದಲ್ಲಿ, ದುರಾಗ್ರಹಃ = ದುರಾಗ್ರಹವು, ಸ್ಯಾತ್ = ಇದ್ದೀತು. ಸರ್ವೈಃ = ಯಾರಿಂದಲೂ, (ಎಲ್ಲ ದರ್ಶನಾಚಾರ್ಯರಿಂದಲೂ) ಅಕೃತಶಾಸ್ತ್ರೇ = ರಚಿತವಲ್ಲದ ಶಾಸ್ತ್ರವಾದ, ಅಸ್ಮಿನ್ = ಈ ವೇದದಲ್ಲಿ, ಧರ್ಮಸಿದ್ಧ್ಯೈ = ಧರ್ಮಸಿದ್ಧಿಗೋಸ್ಕರ, ಪರಂ ರತಿಃ = ಬಹಳವಾದ ಪ್ರೀತಿಯು (ಉಂಟಾಗುವುದಷ್ಟೇ?)

**ಅನುವಾದ–** ಆಯಾಯ ದರ್ಶನಾಚಾರ್ಯರು ಮಾಡಿದ ಗ್ರಂಥಗಳಲ್ಲಿ ಅವರವರಿಗೆ ದುರಾಗ್ರಹವಿರುತ್ತದೆ. ಯಾವ ದರ್ಶನಾಚಾರ್ಯರೂ ಮಾಡದಿರುವ ವೇದದಲ್ಲಿ ಅದು ಧರ್ಮನಿಶ್ಚಾಯಕವೆಂಬ ಕಾರಣದಿಂದಲೇ ವಿಶೇಷವಾದ ಆದರವು.

**ಭಾವವಿಲಾಸಿನೀ–** ಯದರ್ಥಮಿದಮುಕ್ತಮ್, ತದಾಹ – **ತಥೇತಿ** ॥ ಸರ್ವೈಃ ಸರ್ವದರ್ಶನಾಚಾರ್ಯೈಃ। ಧರ್ಮಸಿದ್ಧ್ಯೈ ಪರಂ ರತಿರಿತ್ಯನೇನ ದುರಾಗ್ರಹಾಗೃಹೀತತ್ವಂ ದ್ಯೋತಯತಿ ॥ ೧೨೯ ॥

**ವಿವರಣೆ–** ಬೇರೆ ಮತಾಚಾರ್ಯರ ಗ್ರಂಥಗಳು ದುರಾಗ್ರಹಗೃಹೀತಗಳಾಗಿದ್ದರೆ ಯಾರ ರಚನೆಯೂ ಅಲ್ಲದ ಕಾರಣದಿಂದ ದುರಾಗ್ರಹಗೃಹೀತವಲ್ಲದ ವೇದವು ಪ್ರಮಾಣವಾಗಿದೆ ಎಂದು ಭಾವ.

**ಸುವಿತ್ತಸ್ಯೈವ ಚೋರೋಽಸ್ತಿ ದುರ್ವಿತ್ತಸ್ಯ ನ ತಸ್ಕರಃ ।**
**ಅಮಾನಂ ಚೇತ್ ಸ್ವತೋ ಜೀರ್ಣಃ ಕುತೋ ವೇದಮಚೂಚುರತ್ ॥ ೧೩೦ ॥**

**ಅರ್ಥ–**ಸುವಿತ್ತಸ್ಯೈವ = ಒಳ್ಳೆಯ ಸಂಪತ್ತಾದ ರತ್ನಾದಿಗಳಿಗೇ, ಚೋರಃ = ಕಳ್ಳನು, ಅಸ್ತಿ = ಇರುತ್ತಾನೆ. ದುರ್ವಿತ್ತಸ್ಯ = ಗಡಿಗೆಯಚೂರುಗಳೆಂಬ ಹೀನಸಂಪತ್ತಿಗೆ, ತಸ್ಕರಃ = ಕಳ್ಳನು, ನ ಅಸ್ತಿ = ಇರುವುದಿಲ್ಲ, ವೇದವು, ಅಮಾನಂ ಚೇತ್= ಅಪ್ರಮಾಣವಾದರೆ (ಹೀನಸಂಪತ್ತಾಗುವುದರಿಂದ) ಸ್ವತಃ = ತಾನೇ, ಜೀರ್ಣಂ = ನಷ್ಟವಾದ, ವೇದಂ = ವೇದವನ್ನು, ಕುತಃ = ಏತಕ್ಕಾಗಿ, ಅಚೂಚುರತ್ = ಅಸುರನು ಕದ್ದನು?

**ಅನುವಾದ–** ರತ್ನಾದಿ ಒಳ್ಳೆ ಸಂಪತ್ತಿಗೆ ಕದಿಯುವ ಕಳ್ಳರಿರುತ್ತಾರೆ. ಗಡಿಗೆ ಇದರ ಚೂರುಗಳು ಮುಂತಾದ ಕೆಟ್ಟಸಂಪತ್ತಿಗೆ ಕಳ್ಳರಿರುತ್ತಾರೆಯೆ? ವೇದವು

ಅಪ್ರಮಾಣವಾಗಿ ದುರ್ವಿತ್ತವಾಗಿದ್ದೊಡೆ ತಮ, ಮಧು, ಕೈಟಭ ಮುಂತಾದ ದೈತ್ಯರು ಅದನ್ನು ಕದಿಯುತ್ತಿದ್ದರೆ?

**ಭಾವವಿಲಾಸಿನೀ–** ದೈತ್ಯೈರ್ವೇದಸ್ಯಾಪಹೃತತ್ವಾದಪಿ ವೇದಸ್ಯ ಪ್ರಾಮಾಣ್ಯಮಿತ್ಯಾಹ – **ಸುವಿತ್ತಸ್ಯೇತಿ** ॥ ಯಥಾ ಲೋಕೇ ಸುವಿತ್ತಸ್ಯ ರತ್ನಾದೇರೇವ ಚೋರೋಽಸ್ತಿ । ದುರ್ವಿತ್ತಸ್ಯ ಘಟಕಪಾಲಶಕಲಾದೇಃ । ತಥಾ ಚ ವೇದಸ್ಯಾಮಾನತ್ವೇ ದುರ್ವಿತ್ತತ್ವೇನ ಸ್ವತ ಏವ ಜೀರ್ಣತ್ವಾನ್ನ ತಸ್ಕರಃ ಸ್ಯಾತ್ । ಶ್ರೂಯಂತೇ ಚ ತಸ್ಕರಾಸ್ತಮಆದಿದೈತ್ಯಾಃ । ತಸ್ಮಾದ್ವೇದಃ ಮಹಾಪ್ರಮಾಣೀಭೂತವಾಗಾಖ್ಯಸುವಿತ್ತಮಿತಿ ಭಾವಃ ॥ ೧೩೦ ॥

**ವಿವರಣೆ–** ಆದ್ದರಿಂದ ಮಹಾಪ್ರಮಾಣವಾದ ಅಮೂಲ್ಯಸಂಪತ್ತು ವೇದ ಎಂದು ಸಿದ್ಧವಾಗುವುದು ಎಂದು ಭಾವ.

ಅಸುರರು ವೇದವನ್ನು ಕದ್ದಿರುವುದರಿಂದಲೇ ಅದು ಶ್ರೇಷ್ಠಪ್ರಮಾಣವೆಂಬ ಸಂಪತ್ತು ಎಂಬ ಶ್ರೀರಾಜರ ಪ್ರತಿಪಾದನೆ ಬಹಳ ಸೊಗಸಾಗಿದೆ.

ಧರ್ಮವಿದ್ವೇಷಿಗಳಾದ ದೈತ್ಯರ ದ್ವೇಷಕ್ಕೆ ವಿಷಯವಾದುದರಿಂದ ಈ ವೇದಸಂಪತ್ತು ದೇವಮಾನ್ಯವಾಗಿದೆ ಎಂದು ಸಿದ್ಧವಾಗುವುದು.

**ಹಯಗ್ರೀವಮುಖೋದ್ಗೀರ್ಣಾ ಸಾ ವಾಣೀ ಧರ್ಮಶಾಸನಮ್ ।**
**ಅತಸ್ತದುದಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ॥ ೧೩೧ ॥**

**ಅರ್ಥ–** ಹಿ = ಯಾವಕಾರಣದಿಂದ, ಹಯಗ್ರೀವಮುಖೋದ್ಗೀರ್ಣಾ = ಹಯಗ್ರೀವದೇವರ ಮುಖದಿಂದ ಹೊರಹೊಮ್ಮಿದ, ಸಾ = ಪ್ರಸಿದ್ಧವಾದ, ವಾಣೀ = ವೇದವಾಣಿಯು, ಧರ್ಮಶಾಸನಂ = ಧರ್ಮದ ಶಿಕ್ಷಣನೀಡುವಂತಹುದೋ, ಅತಃ = ಆದ್ದರಿಂದ, ಅಪೌರುಷೇಯವಾಗಿ ನಿರ್ದೋಷವಾಗಿರುವುದರಿಂದ, ತದುದಿತಃ = ಆ ವೇದದಿಂದ ಹೇಳಲ್ಪಟ್ಟದ್ದೇ, ಧರ್ಮಃ = ಧರ್ಮವು. ತದ್ವಿಪರ್ಯಯಃ = ಆ ವೇದದಿಂದ ನಿಷೇಧಿಸಲ್ಪಟ್ಟದ್ದು ಅಧರ್ಮಃ = ಅಧರ್ಮವು.

**ಅನುವಾದ–** ವೇದವು ಹಯಗ್ರೀವದೇವರ ಮುಖದಿಂದ ಉದ್ಗೀರ್ಣ - ಉಪದಿಷ್ಟವಾದುದು ಮಾತ್ರ, ರಚಿತವಾದುದಲ್ಲ. ಆದ್ದರಿಂದಲೇ ಅದು ಅಪೌರುಷೇಯ. ಅಪೌರುಷೇಯವಾಗಿ ನಿರ್ದೋಷವಾದುದರಿಂದಲೇ ವೇದವೇ ಧರ್ಮಾನುಶಾಸನ. ವೇದವಿಹಿತವಾದುದು ಧರ್ಮ. ವೇದನಿಷಿದ್ಧವಾದುದು ಅಧರ್ಮ.

**ಭಾವವಿಲಾಸಿನೀ–** ವೇದಾಪೌರುಷೇಯತ್ವಾವಾದಮುಪಸಂಹರತಿ – **ಹಯಗ್ರೀವೇತಿ** ॥ ತದುದಿತೋ ವೇದೋದಿತಃ । ತದ್ವಿಪರ್ಯಯಸ್ತನ್ನಿಷಿದ್ಧ ಇತಿ ಯಾವತ್ ॥ ೧೩೧ ॥

ಇತಿ ಶ್ರೀಮದ್ವಾದಿರಾಜತೀರ್ಥ ಶ್ರೀಚರಣವಿರಚಿತ ಯುಕ್ತಿಮಲ್ಲಿಕಾಟೀಕಾಯಾಂ
ನಾರಾಯಣಾಚಾರ್ಯಕೃತಾಯಾಂ ಭಾವವಿಲಾಸಿನ್ಯಾಂ ವೇದಾಪೌರುಷೇಯಪ್ರಕರಣಮ್ ॥

**ವಿವರಣೆ–** ವೇದಾಪೌರುಷೇಯತ್ವವಾದವನ್ನು ಇಲ್ಲಿಗೆ ಉಪಸಂಹಾರಮಾಡಿದ್ದಾರೆ.

ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ।
ವೇದೋ ನಾರಾಯಣಃ ಸಾಕ್ಷಾತ್ ಸ್ವಯಂಭೂರಿತಿ ಶುಶ್ರುಮಃ ॥

(ಭಾಗವತ - ೬-೧-೪೦)

ವೇದಾನಾಂ ಪ್ರಥಮೋ ವಕ್ತಾ ಹರಿರೇವ ಯತೋ ವಿಭುಃ ।
ಅತೋ ವಿಷ್ಣ್ವಾತ್ಮಕಾ ವೇದಾ ಇತ್ಯಾಹುರ್ವೇದವಾದಿನಃ ॥

ಇತಿ ಶಬ್ದನಿರ್ಣಯೇ. (ಭಾ.ತಾ.ನಿ)

ವೇದವಿಹಿತವಾದುದೇ ಧರ್ಮ. ವೇದನಿಷಿದ್ಧವಾದುದೇ ಅಧರ್ಮ. ಏಕೆಂದರೆ ವೇದವು ಸಾಕ್ಷಾತ್ ನಾರಾಯಣ. ವೇದಗಳ ಪ್ರಥಮ ಉಪದೇಶಕ ಶ್ರೀಹರಿಯೇ ಆದುದರಿಂದ ವೇದವು ವಿಷ್ಣ್ವಾತ್ಮಕ ಎಂದು ವೇದಬಲ್ಲವರು ಹೇಳುವರು.

ಹಯಗ್ರೀವ ಮಹಿಮೆ -

ಮುನಿಸ್ತು ಸರ್ವವಿದ್ಯಾನಾಂ ಭಗವಾನ್ ಪುರುಷೋತ್ತಮಃ ।
ವಿಶೇಷತಶ್ಚ ವೇದಾನಾಂ .... ॥ (ಋಗ್ಭಾಷ್ಯ ೧-೧೨)

ಸಕಲವಿದ್ಯೆಗಳಿಗೂ ಭಗವಾನ್ ಹಯಗ್ರೀವರೂಪಿಪರಮಾತ್ಮನು ವಿಶೇಷವಾಗಿ ವೇದಗಳಿಗೆ ಋಷಿ ಎನಿಸಿರುವನು.

ಸತ್ರೇ ಮಮಾಸ ಭಗವಾನ್ ಹಯಶೀರ್ಷ ಏಷಃ ।
ಸಾಕ್ಷಾತ್ ಸ ಯಜ್ಞಪುರುಷಃ ತಪನೀಯವರ್ಣಃ ॥

ಛಂದೋಮಯೋ ಮಖಮಯೋಽಖಿಲದೇವತಾತ್ಮಾ
ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ ॥(ಭಾಗವತ - ೨-೭-೧೧)

ಛಂದಾಂಸಿ ಚ ಮಖಾಶ್ಚೈವ ಜೀವಾ ಲೋಕಾಶ್ಚ ಸರ್ವಶಃ ।
ಸರ್ವೇ ವಿಷ್ಣೌ ಸ್ಥಿತಾ ಯಸ್ಮಾದತಃ ಸರ್ವಮಯೋ ಹ್ಯಸೌ ॥

ಇತಿ ಮಹಾಸಂಹಿತಾಯಾಂ (ಭಾಗ.ತಾ.ನಿ)

ಚಿನ್ನದಂತೆ ಹೊಳೆಯುವ ಯಜ್ಞಪುರುಷನಾದ ಈ ಶ್ರೀಹರಿಯು ನನ್ನ ಸತ್ರಯಾಗದಲ್ಲಿ ಹಯಗ್ರೀವನಾಗಿ ಅವತರಿಸಿದ. ವೇದಗಳು ಯಜ್ಞಗಳು, ದೇವತೆಗಳು, ಲೋಕಗಳು ಇವೆಲ್ಲಕ್ಕೂ ಈ ಹಯಗ್ರೀವನೇ ಆಶ್ರಯನಾಗಿ ಇದ್ದಾನೆ. ಅವನು ಮೂಗಿನಿಂದ ಶ್ವಾಸಬಿಡುವಾಗ ಅಪೌರುಷೇಯವಾದ ನಿರ್ದೋಷವಾದ ವೇದಗಳು ಪ್ರಾದುರ್ಭವಿಸಿದವು. - (ಭಾಗವತದಲ್ಲಿ ಬ್ರಹ್ಮದೇವರು).

ವೇದ, ಯಜ್ಞ, ದೇವತೆಗಳು, ಎಲ್ಲ ಲೋಕಗಳೂ ವಿಷ್ಣುವಿನಲ್ಲಿಯೇ ಆಶ್ರಯ ಪಡೆದಿವೆ. ಆದುದರಿಂದ ಛಂದೋಮಯ, ಮಖಮಯ, ದೇವತಾತ್ಮ ಸರ್ವಮಯ ಮುಂತಾದಿ ಹೇಳಲ್ಪಡುತ್ತಾನೆಂದು ಮಹಾಸಂಹಿತೆಯಲ್ಲಿ ಹೇಳಿದೆ. (ಭಾ.ತಾ.ನಿ)

... ಬ್ರಹ್ಮಾಂಡೇऽಪಿ ತಥಾಪರಂ । ಹಯಗ್ರೀವಾದಿಮಾಃ ವಿದ್ಯಾಃ ಶ್ವಸಿತತ್ವೇನ ನಿಃಸೃತಾಃ (ಬ್ರಹ್ಮಣಾ ಸ್ವೀಕೃತಾಸ್ತಾಸ್ತು ರುದ್ರಶೇಷವಿಪಾ ಅಪಿ । ದಕ್ಷಾದ್ಯಾ ಸನಕಾದ್ಯಾಶ್ಚ ಶಕ್ರಾದ್ಯಾಃ ಮನವಸ್ತಥಾ। ಜಗೃಹುಃ.... । (- ಋಗ್ಭಾಷ್ಯ - ಬ್ರಹ್ಮಾಂಡಪುರಾಣ)

ಹಯಗ್ರೀವನಿಂದ ಉಸಿರಾಗಿ ಹೊಮ್ಮಿದ ವಿದ್ಯೆಗಳನ್ನು ಚತುರ್ಮುಖನು ಮಾತ್ರವಲ್ಲ ರುದ್ರಶೇಷಗರುಡರೂ, ದಕ್ಷಾದಿಗಳು, ಸನಕಾದಿಗಳೂ, ದೇವೇಂದ್ರಾದಿಗಳೂ ಮನುಗಳೂ ಸ್ವೀಕರಿಸಿದರು.

ಸ ಯಥಾऽऽರ್ದ್ರೈಧಾಗ್ನೇರಭ್ಯಾಹಿತಾತ್ ಪೃಥಗ್ ಧೂಮಾ ವಿನಿಶ್ಚರಂತ್ಯೇವಂ ವಾ ಅರೇऽಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ ಯದ್ ಋಗ್ವೇದೋ, ಯಜುರ್ವೇದಃ ಸಾಮವೇದೋऽಥಾರ್ವಂಗಿರಸ ಇತಿಹಾಸಃ ಪುರಾಣಂ, ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನಿ -
ಬೃಹದಾರಣ್ಯಕೋಪನಿಷತ್ (೪-೪-೧೦)

ತಸ್ಮಾದ್ ವೇದಾಃ ಸಮುತ್ಪನ್ನಾ ವಿದ್ಯಾಖ್ಯಾ ಮೂಲಿಕಾ ಶ್ರುತಿಃ ।
ಸರ್ವೋಪನಿಷದಶ್ಚೈವ ಪಂಚರಾತ್ರಾಖ್ಯಸಂಹಿತಾಃ ॥

ಬ್ರಹ್ಮಸೂತ್ರಾಣಿ ವೇದಾನಾಂ ವ್ಯಾಖ್ಯಾಸ್ತಾಸಾಂ ಚ ವಿಸ್ತರಃ ।
ಸರ್ವಮೇತಜ್ಜಗಚ್ಚೈವ ನಿಃಸೃತಂ ತುರಗಾನನಾತ್ ॥ (ಬೃಹದ್ಭಾಷ್ಯ)

ಮಹಾಭೂತನೆನಿಸಿದ ಹಯಗ್ರೀವನಿಂದ ವಿದ್ಯಾಃ - ಮೂಲವೇದ, ಶ್ಲೋಕ - ಪಂಚರಾತ್ರಸಂಹಿತೆ, ಸೂತ್ರ - ಬ್ರಹ್ಮಸೂತ್ರಗಳು, ವ್ಯಾಖ್ಯಾನ - ವೇದವ್ಯಾಖ್ಯಾನಗಳು, ಅನುವ್ಯಾಖ್ಯಾನ - ವೇದವ್ಯಾಖ್ಯಾನಗಳ ವಿಸ್ತಾರಗಳು, ಹೀಗೆ ನಾಮಾತ್ಮಕಪ್ರಪಂಚದ ಜೊತೆಗೆ ಸಮಸ್ತರೂಪಾತ್ಮಕ ಪ್ರಪಂಚವೂ ಆವಿಷ್ಕಾರಗೊಂಡಿದೆ.

ಸರ್ಗೇ ಸರ್ಗೇ ತು ಯೋ ನೈವ ಶಬ್ದತೋऽಪ್ಯನ್ಯಥಾ ಭವೇತ್ ।
ಶ್ರುತ್ಯಾಖ್ಯಃ ಸ ತು ವಿಜ್ಞೇಯ ಇತಿಹಾಸಾದಿರರ್ಥತಃ ॥

ಭಗವದ್‌ದೃಷ್ಟಮೇವಾನ್ಯೈರ್ಬ್ರಹ್ಮಾದ್ಯೈರ್ದೃಶ್ಯತೇ ಯದಿ ।
ಋಷಿಭೇದಸ್ತು ತತ್ರ ಸ್ಯಾದ್ವೇದೋ ನಾವಿಷ್ಣುನಿರ್ಗತಃ ।
ವೇದ ಇತ್ಯೇವ ವಿಷ್ಣೂಕ್ತಸ್ತಪಸಾ ದೃಶ್ಯತೇ ಪರೈಃ । (ಬೃಹದ್ಭಾಷ್ಯ)

ಹಯಗ್ರೀವನು ಪ್ರತಿಸೃಷ್ಟಿಕಾಲದಲ್ಲಿಯೂ ಶ್ರುತಿಪುರಾಣಾದಿಗಳನ್ನು ಪ್ರಕಟಗೊಳಿಸುವನು. ಅರ್ಥ ಹಾಗೂ ಶಬ್ದಗಳ ವ್ಯತ್ಯಾಸಗಳಿಲ್ಲದೆ ಯಾವಾಗಲೂ ಏಕರೀತಿಯಿಂದ ಉಪದೇಶಿಸಲ್ಪಡುವುದೇ ಶ್ರುತಿಯು. ಅರ್ಥದಲ್ಲಿ ಬದಲಾವಣೆಗಳಿಲ್ಲದೆ ಶಬ್ದವ್ಯತ್ಯಾಸವನ್ನು ಮಾತ್ರ ಒಳಗೊಂಡಿರುವಂತವು - ಇತಿಹಾಸಪುರಾಣಾದಿಗಳು. ಹಯಗ್ರೀವನ ಆವಿಷ್ಕಾರವಾಗದ ವೇದಭಾಗವೇ ಇಲ್ಲ. ಹಯಗ್ರೀವನಿಂದ ತಪಸ್ಸು ಮುಂತಾದ ಪ್ರಯತ್ನವಿಲ್ಲದೆ ಸಹಜವಾಗಿ ದೃಷ್ಟವಾದ ವೇದಭಾಗಗಳನ್ನೇ ಬ್ರಹ್ಮಾದಿಗಳು ತಪಸ್ಸಿನಿಂದ ಕಂಡಾಗ ಆಯಾಯ ಭಾಗಕ್ಕೆ ಬ್ರಹ್ಮಾದಿಗಳು ಅವಾಂತರಋಷಿಗಳೆನಿಸಿಕೊಳ್ಳುತ್ತಾರೆ.

ಬೃಹದಾರಣ್ಯಕೋಪನಿಷತ್ತಿನ ಮಧುಬ್ರಾಹ್ಮಣದಲ್ಲಿ ಶ್ರೀಹಯಗ್ರೀವನು ಮಧುವಿದ್ಯಾಪ್ರತಿಪಾದ್ಯನೆಂದು ತಿಳಿಸಲಾಗಿದೆ.

ಸುಖದಾ ಸರ್ವಭೂತಾನಾಂ ಪೃಥ್ವೀಮಧುವದುಚ್ಯತೇ ।
ಪೃಥಿವ್ಯಾಶ್ಚೈವ ಭೂತಾನಿ ತಥಾ ಸರ್ವಾಶ್ಚ ದೇವತಾಃ ॥

ಪೃಥಿವ್ಯಾದಿಷು ದೇವೇಷು ಶರೀರಾದಿಷು ಚ ಸ್ಥಿತಃ ।
ಏಕ ಏವ ಪರೋ ವಿಷ್ಣುರ್ಹಯಶೀರ್ಷಸ್ವರೂಪಧೃತ್ ॥

ಅನಂತತೇಜಾ ನಿತ್ಯಶ್ಚ ಸ ಏವ ಬ್ರಹ್ಮಸರ್ವಗಃ ।
ತದೇವ ಗುಣಪೂರ್ಣತ್ವಾತ್ ಬ್ರಹ್ಮ ಸರ್ವಮನೂನತಃ ॥

ಆತ್ಮನಾಮಾ ಪರೋ ವಿಷ್ಣುಃ ಸರ್ವಗೋ ಯಃ ಪ್ರಕೀರ್ತಿತಃ ।
ಸ ಏವ ಹಯಶೀರ್ಷಾಖ್ಯಸ್ತ್ವಧಿದೈವಾದಿಷು ಸ್ಥಿತಃ ॥ -

ದಧ್ಯಙ್ ಆಥರ್ವಣೋಽಶ್ವಿಭ್ಯಾಮೇತಾ ವಿದ್ಯಾಮದಾತ್ ಪುರಾ ।
ಹಯಗ್ರೀವಬ್ರಹ್ಮವಿದ್ಯೇತ್ಯೇಷಾ ಬ್ರಹ್ಮಾದಿಭಿರ್ಧೃತಾ ॥ (ಬೃಹದ್ಭಾಷ್ಯ)

ಪೃಥಿವೀ ಅಭಿಮಾನಿ, ಜಲಾಭಿಮಾನಿ, ಅಗ್ನಿದೇವತೆ, ಪ್ರವಹವಾಯು, ಆದಿತ್ಯ, ದಿಗಭಿಮಾನಿ, ಚಂದ್ರ, ವಿದ್ಯುದಭಿಮಾನಿ, ಗುಡುಗಿನಲ್ಲಿರುವ ಮುಖ್ಯಪ್ರಾಣ, ಆಕಾಶಾಭಿಮಾನಿ, ಧರ್ಮಾಭಿಮಾನಿ, ಸತ್ಯಾಭಿಮಾನಿ, ಮನುಷ್ಯಾಭಿಮಾನಿ ಚತುರ್ಮುಖ ಈ ಹದಿನಾಲ್ಕು ಅಭಿಮಾನಿದೇವತೆಗಳು ಎಲ್ಲ ಜೀವರಿಗೆ ಬೇರೆ ಬೇರೆ ಬಗೆಯ ಆಶ್ರಯ ನೀಡುತ್ತಾ ಸುಖಪ್ರದರಾಗಿ ಮಧು ಎನಿಸಿರುವರು. ಎಲ್ಲ ಜೀವರು ಈ ಅಭಿಮಾನಿಗಳನ್ನು ಸೇವಿಸುತ್ತ ಜೇನಿನಂತೆ ಸುಖಪ್ರದರಾಗಿದ್ದು ಅಭಿಮಾನಿದೇವತೆಗಳ ಪಾಲಿಗೆ ಮಧು ಎನಿಸಿರುವರು. ಹೀಗೆ ಅವರು ಪರಸ್ಪರವಾಗಿ ಮಧು ಎನಿಸಲು ಆ ಅಭಿಮಾನಿದೇವತೆಗಳಲ್ಲಿ ಅವರ ಶರೀರಾದಿಗಳಲ್ಲಿ ಶರೀರಾದ್ಯಭಿಮಾನಿಗಳಲ್ಲಿಯೂ ನೆಲೆಸಿರುವ ಹಯಗ್ರೀವರೂಪಿಪರಮಾತ್ಮನೇ ಕಾರಣ. ಆ ಹಯಗ್ರೀವನು ಅನಂತತೇಜಸ್ವಿ,

ಗುಣಪರಿಪೂರ್ಣನಾಗಿ ಬ್ರಹ್ಮ ಎಂದೂ, ಪರಿಪೂರ್ಣನಾಗಿ ಸರ್ವ ಎಂದು, ಎಲ್ಲರಲ್ಲಿ ವ್ಯಾಪ್ತನಾಗಿದ್ದು ಆತ್ಮಾ ಎಂದೂ ಎನಿಸಿರುವನು.

ಮಧುವಿದ್ಯೆಯಲ್ಲಿ ಮುಖ್ಯವಾಗಿ ಹಯಗ್ರೀವನೇ ಪ್ರತಿಪಾದ್ಯನಾಗಿದ್ದು ಈ ವಿದ್ಯೆಯನ್ನು ಹಯಗ್ರೀವಬ್ರಹ್ಮವಿದ್ಯಾ ಎಂದೇ ಗುರುತಿಸಲಾಗಿದೆ.

ಪರಸ್ಯ ಬ್ರಹ್ಮಣೋ ವಿಷ್ಣೋಃ ಹಯಶೀರ್ಷಾದಧೀತವಾನ್ ।
ಬ್ರಹ್ಮವಿದ್ಯಾಮಿಮಾಂ ಬ್ರಹ್ಮಾ ತತಃ ಸನಕ ಏವ ಚ ॥ (ಗಾರುಡ) ಬೃಹದ್ಭಾಷ್ಯ

ಬೃಹದಾರಣ್ಯಕವಂಶಬ್ರಾಹ್ಮಣದಲ್ಲಿ ಮಧುವಿದ್ಯೆಯ ಗುರುಶಿಷ್ಯಪರಂಪರೆಯನ್ನು ತಿಳಿಸುತ್ತಾ ಸನಕಋಷಿಗೆ ಚತುರ್ಮುಖನು ಮಧುವಿದ್ಯೆಯನ್ನು ಉಪದೇಶಿಸಿದರೆ ಚತುರ್ಮುಖನಿಗೆ ಸರ್ವಜ್ಞನಾದ ಪರಬ್ರಹ್ಮನು ಹಯಗ್ರೀವರೂಪದಿಂದ ಉಪದೇಶಿಸಿದನು ಎಂದು ತಿಳಿಸಲಾಗಿದೆ. ಹೀಗೆ ಹಯಗ್ರೀವರೂಪದ ಶ್ರೀಹರಿಯು ಮಧುವಿದ್ಯೆ ಉಪದೇಶಕನೂ, ಪ್ರತಿಪಾದ್ಯನೂ ಆಗಿದ್ದಾನೆ.

ಹಯಗ್ರೀವಮುಖೋದ್ಗೀರ್ಣಗೀರ್ಭಿರ್ದೇವೀ ರಮಾಪತಿಂ ।
ಅಸ್ತುವನ್ ವಿಸ್ತೃತಗುಣಂ ಭೋಗಿಪ್ರಸ್ತರಶಾಯಿನಂ ॥
(ಛಾಂದೋಗ್ಯಭಾಷ್ಯಮಂಗಲ)

ಹಯಗ್ರೀವೋದ್ಗೀತವಾಕ್ಯೈಃ ರಮಾದೇವೀ ರಮಾಪತಿಮ್ ।
ಓಮಿತ್ಯೇತನ್ಮುಖೈರ್ದೇವಮಸ್ತುವತ್ ಸಾಮವೇದಗೈಃ ॥
(ಇತಿ ಮಹಾಸಂಹಿಯಾಯಾಂ - ಛಾಂದೋಗ್ಯಭಾಷ್ಯ)

ಹಯಗ್ರೀವದೇವರ ಮುಖದಿಂದ ಉಪದಿಷ್ಟವಾದ ಓಮಿತ್ಯೇತದ್ ಎಂದು ಪ್ರಾರಂಭವಾಗುವ ಸಾಮವೇದದಲ್ಲಿರುವ ಛಾಂದೋಗ್ಯೋಪನಿಷನ್ಮಂತ್ರಗಳಿಂದ ರಮಾದೇವಿಯು ತನ್ನ ಪತಿಯಾದ ಶ್ರೀಹರಿಯನ್ನು ಸ್ತುತಿಸಿದಳು.

ಹೀಗೆ ಛಾಂದೋಗ್ಯೋಪನಿಷತ್ತಿನ ಉಪದೇಶಕನೂ ಶ್ರೀಹಯಗ್ರೀವನೇ.

ವಾಗ್ ವೈ ಗಾಯತ್ರೀ । ವಾಗ್ವಾ ಇದಂ ಸರ್ವಂ ಭೂತಂ ।

ಗಾಯತಿ ಚ ತ್ರಾಯತಿ ಚ । (ಛಾಂದೋಗ್ಯ - ೩-೨-೧)

ಸ ಏವ ಭಗವಾನ್ ವಿಷ್ಣುರ್ವಾಗ್‌ನಾಮಾ ವಾಚಿ ಸಂಸ್ಥಿತಃ ।
ವಚನಾತ್ ಹಯಶೀರ್ಷಾಖ್ಯೋ ಗಾಯತ್ರ್ಯಾಂ ಚ ಸ ಆಸ್ಥಿತಃ ॥
(ಛಾಂದೋಗ್ಯ ಭಾಷ್ಯ)

ವಾಗಿಂದ್ರಿಯದಲ್ಲಿ ಮಾತುಗಳಲ್ಲಿ ಪ್ರೇರಕನಾಗಿದ್ದು ಮಾತನಾಡುವವರಿಗೆಲ್ಲ ಮಾತನಾಡುವ ಶಕ್ತಿಯನ್ನು ಕೊಡುವವನಾದುದರಿಂದ ವಾಕ್ ನಾಮಕನಾದ ಶ್ರೀಹಯಗ್ರೀವನು ಗಾಯತ್ರೀಪ್ರತಿಪಾದ್ಯನಾಗಿದ್ದಾನೆ. ಗಾಯತ್ರಿಮಂತ್ರದಲ್ಲಿ ಭಗವಂತನ ಆರು ರೂಪಗಳು ಪ್ರತಿಪಾದ್ಯಗಳಾಗಿದ್ದು ಸ್ತ್ರೀರೂಪದ ಹಯಗ್ರೀವರೂಪವೇ ಮೂರನೆಯ ರೂಪವಾಗಿದೆ.

ಈಕಾರಣದಿಂದಲೇ ಶ್ರೀವಾದಿರಾಜರು -

**ಹಯಗ್ರೀವ ಹಯಗ್ರೀವ ಹಯಗ್ರೀವೇತಿ ಯೋ ವದೇತ್ ।**
**ತಸ್ಯ ನಿಸ್ಸರತೇ ವಾಣೀ ಜಹ್ನುಕನ್ಯಾಪ್ರವಾಹವತ್ ॥**

ಹಯಗ್ರೀವ ಹಯಗ್ರೀವ ಹಯಗ್ರೀವ ಎಂದು ಹೇಳುವವನ ವಾಣಿಯು ಗಂಗಾಪ್ರವಾಹದಂತೆ ನಿರಂತರವಾಗಿ ಹೊಮ್ಮುತ್ತದೆ ಎಂದು ಹೇಳಿರುವರು.

ಹಯಗ್ರೀವಮಂತ್ರದ ಧ್ಯೇಯರೂಪ -

**ವಂದೇ ತುರಂಗವದನಂ ಶಶಿಬಿಂಬಸಂಸ್ಥಂ**
**ಚಂದ್ರಾವದಾತಮಮೃತಾತ್ಮಕರೈಃ ಸಮಂತಾತ್ ।**
**ಅಂಡಾಂತರಂ ಬಹಿರಪಿ ಪ್ರತಿಭಾಸಯಂತಂ**
**ಶಂಖಾಕ್ಷಪುಸ್ತಕಸುಬೋಧಯುತಾಬ್ಜಬಾಹುಮ್ ॥**
**ನಸ್ತೋ ಮುಖಾದಪಿ ನಿರಂತರಮುದ್ಗಿರಂತಂ**
**ವಿದ್ಯಾ ಅಶೇಷತ ಉತಾಬ್ಜಭವೇಶಮುಖ್ಯೈಃ ।**
**ಸಂಸೇವ್ಯಮಾನಮತಿಭಕ್ತಿಭರಾವನಮ್ರೈಃ**
**ಲಕ್ಷ್ಮ್ಯಾಽಮೃತೇನ ಸತತಂ ಪರಿಷಿಚ್ಯಮಾನಮ್ ॥**

**- (ತಂತ್ರಸಾರಸಂಗ್ರಹ - ೪ - ೫೦,೫೧)**

ಚಂದ್ರಮಂಡಲದಲ್ಲಿ ವಾಸ, ಚಂದ್ರನಂತೆ ಶುಕ್ಲವರ್ಣ, ಅವಿನಾಶಿಯಾದ ತನ್ನ ಕಿರಣಗಳಿಂದ ಬ್ರಹ್ಮಾಂಡದ ಒಳಗೂ ಹೊರಗೂ ಬೆಳಗುತ್ತಾನೆ. ಶಂಖ ಅಕ್ಷಮಾಲೆ ಪುಸ್ತಕ ಜ್ಞಾನಮುದ್ರೆಗಳು ತಾವರೆಯ ಸೊಗಡಿನ ಕರಗಳಲ್ಲಿ .

ಮೂಗಿನಿಂದ ಮುಖದಿಂದ ನಿರಂತರವಾಗಿ ಅಶೇಷವಿದ್ಯೆಗಳು ಹೊಮ್ಮುತ್ತಿವೆ. ಭಕ್ತಿಭಾರದಿಂದ ಬಗ್ಗಿದ ಬ್ರಹ್ಮಾದಿದೇವತೆಗಳಿಂದ ಸೇವೆಕೈಗೊಳ್ಳುತ್ತಿದ್ದಾನೆ. ಲಕ್ಷ್ಮೀದೇವಿ ಸತತವಾಗಿ ಅಮೃತಾಭಿಷೇಕಗೈಯುತ್ತಿದ್ದಾರೆ. ಇಂತಹ ಹಯಗ್ರೀವರೂಪವನ್ನು ತುತಿಸುತ್ತೇನೆ, ನಮಸ್ಕರಿಸುತ್ತೇನೆ.

**ಜಗತಾಂ ವರ್ಧಯನ್ ಸತ್ವಂ ಯದಾ ರಕ್ಷತಿ ಕೇಶವಃ ।**
**ಹಯಗ್ರೀವಾದಿರೂಪೇಣ ಶುಕ್ಲವರ್ಣಸ್ತದಾ ವಿಭುಃ ॥**

**(ಬ್ರಹ್ಮತರ್ಕ) - (ಭಾಗ. ತಾ. ನಿ ೧೦-೪-೨೦)**

ವಿದ್ಯೋಪದೇಶದ ಮೂಲಕ ಸತ್ವಗುಣವನ್ನು ಭಕ್ತರಲ್ಲಿ ಅಭಿವೃದ್ಧಿಪಡಿಸಿ ರಕ್ಷಣೆ ನೀಡುವಾಗ ಹಯಗ್ರೀವಾದಿರೂಪದಿಂದ ಶುಕ್ಲವರ್ಣದವನಾಗುತ್ತಾನೆ ಕೇಶವ.

ವೇದಾಪೌರುಷೇಯತ್ವಸಮರ್ಥನೆಯ ಉಪಸಂಹಾರ ಮಾಡುವ ಪ್ರಕೃತಯುಕ್ತಿಮಲ್ಲಿಕಾಪದ್ಯದಲ್ಲಿ ಶ್ರೀಹಯಗ್ರೀವದೇವರ ಮುಖದಿಂದ ಹೊರಹೊಮ್ಮಿದ ಪರಮಪ್ರಮಾಣವಾದ ಅಪೌರುಷೇಯ ನಿರ್ದೋಷವಾಣಿಯಾದ ವೇದವೇ ಧರ್ಮಾನುಶಾಸನ ಎಂದು ಸಾರುವ ಶ್ರೀವಾದಿರಾಜರ ಮಾತಿನ ಹಿನ್ನೆಲೆಯಲ್ಲಿ ಸರ್ವಮೂಲದಲ್ಲಿ ಶ್ರೀಮದಾನಂದತೀರ್ಥರು ನಿರೂಪಿಸಿರುವ ಶ್ರೀಹಯಗ್ರೀವದೇವರ ಮಹಿಮೆಯನ್ನು ಇಲ್ಲಿ ಅವಶ್ಯ ಅನುಸಂಧಾನ ಮಾಡಬೇಕು.

ಇದುವರೆಗೆ ವೇದದ ಪ್ರಾಮಾಣ್ಯವನ್ನು ಸಮರ್ಥನೆ ಮಾಡಿ ಅದನ್ನು ಸ್ಥಿರವಾಗಿಸಲು ವೇದದ ಪ್ರಾಮಾಣ್ಯವನ್ನು ಅಪಲಾಪಿಸುವ ಕುಸಮಯಗಳನ್ನು ರಾಜರು ತಸ್ಮಾದಾಚಾರ್ಯತರಿಣಿಸರಣಿಃ ಶೋಭತೇತರಾಂ (ಶ್ಲೋಕ 512) ಎಂಬಲ್ಲಿನವರಗೆ ನಿರಾಕರಿಸುತ್ತಾರೆ.

ಚಾರ್ವಾಕನು ಶಬ್ದಕ್ಕೇ ಪ್ರಾಮಾಣ್ಯವನ್ನು ಒಪ್ಪುವುದಿಲ್ಲ. ಆದ್ದರಿಂದಲೇ ವೇದದಿಂದ ಸಿದ್ಧವಾಗುವ ಧರ್ಮಾದಿಗಳನ್ನು ಒಪ್ಪುವುದಿಲ್ಲ.

ಬೌದ್ಧರು ಮತ್ತು ಜೈನರು ತಮ್ಮ ತಮ್ಮ ಆಚಾರ್ಯರ ವಚನದಿಂದಲೇ ಧರ್ಮಾದಿಸಿದ್ಧಿಯಾಗುವುದು ಎನ್ನುವರು.

ಹೈತುಕರೆನಿಸಿದ ತಾರ್ಕಿಕರು ವೇದವನ್ನು ಪ್ರಮಾಣವೆಂದೊಪ್ಪಿದರೂ ವೇದದ ಪ್ರಾಮಾಣ್ಯವು ಮತ್ತೊಂದು ಪ್ರಮಾಣದಿಂದ ಸಿದ್ಧವಾಗುವುದೆಂದು ಭಾವಿಸುತ್ತಾರೆ. ಆದ್ದರಿಂದಲೇ ವೇದದ ಅಪೌರುಷೇಯತ್ವವನ್ನು ವೇದೋಕ್ತವಾದ ಭಗವಂತನ ಅನಂತಗುಣವಂತಿಕೆಯನ್ನೂ ಸಹಿಸುವುದಿಲ್ಲ.

ಈಶ್ವರನನ್ನು ಒಪ್ಪದ ಮೀಮಾಂಸಕ ಪ್ರಭಾಕರನು ಕೇವಲಸಿದ್ಧಾರ್ಥದಲ್ಲಿ ವಾಕ್ಯಕ್ಕೆ ವ್ಯುತ್ಪತ್ತಿಯನ್ನು ಒಪ್ಪುವುದಿಲ್ಲ.

ಈ ಎಲ್ಲ ಕುವಾದಗಳನ್ನು ವಿಮರ್ಶಿಸಿ ನಿರಾಕರಿಸುವ ಶ್ರೀವಾದಿರಾಜರು ಆದಿಯಲ್ಲಿ ಚಾರ್ವಾಕರಮತವನ್ನು ನಿರಾಕರಿಸುತ್ತಾರೆ.

ಬಾಯಿಯಿಂದ ವೇದದ ಪ್ರಾಮಾಣ್ಯವನ್ನು ಒಪ್ಪಿ ಅದನ್ನು ಅತತ್ವಾವೇದಕವೆಂದು ಹೇಳಿ ಬ್ರಹ್ಮನಿಗೆ ನಿರ್ಗುಣತ್ವವನ್ನು ವರ್ಣಿಸುವ ಮಾಯಾವಾದವನ್ನು ಸವಿಸ್ತರವಾಗಿ ಮುಂದೆ ನಿರಾಕರಿಸುವರು. ಇದು ಮುಂದಿನ ಗ್ರಂಥಪ್ರವೃತ್ತಿಕ್ರಮ.

ಚಾರ್ವಾಕಮತ ನಿರಾಕರಣೆ -

**ಚಾರ್ವಾಕಸ್ಯ ನ ವಾಕ್ ಚಾರ್ವೀ ಕುರ್ವೀತಾತ್ಮವಧಂ ಯತಃ ।**
**ಅಕ್ಷೈಕಮಾನತಾವಾಕ್ ಕಿಂ ರಕ್ಷೇದಾತ್ಮಪ್ರಮಾಣತಾಂ ॥ ೧೩೨ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಚಾರ್ವಾಕಸ್ಯ = ಚಾರ್ವಾಕನ, ವಾಕ್ = ಮಾತು, ಆತ್ಮವಧಂ = ತನ್ನ ಅಪ್ರಾಮಾಣ್ಯರೂಪನಾಶವನ್ನು ಕುರ್ವೀತ = ಮಾಡಿಕೊಳ್ಳುತ್ತದೆಯೋ ಆಕಾರಣದಿಂದ. ಅಕ್ಷೈಕಮಾನತಾವಾಕ್ = ಪ್ರತ್ಯಕ್ಷವೊಂದೇ ಪ್ರಮಾಣವೆಂಬ ಮಾತು, ಆತ್ಮಪ್ರಮಾಣತಾಂ = ಶಾಸ್ತ್ರವಚನರೂಪವಾದ ತನ್ನ ಪ್ರಾಮಾಣ್ಯವನ್ನು, ಕಿಂ ರಕ್ಷೇತ್? = ರಕ್ಷಿಸಿಕೊಳ್ಳುವುದೇ?

**ಅನುವಾದ–** ಪ್ರತ್ಯಕ್ಷವೊಂದೇ ಪ್ರಮಾಣ. ಶಬ್ದವು ಪ್ರಮಾಣವಲ್ಲವೆಂದು ಹೇಳುವ ಚಾರ್ವಾಕನು ಶಬ್ದವು ಪ್ರಮಾಣವಲ್ಲ ಎಂಬ ತನ್ನ ವಾಕ್ಯಕ್ಕೂ ಅಪ್ರಾಮಾಣ್ಯವನ್ನು ಅಂಗೀಕರಿಸುತ್ತಾನೆ ! ಆದ್ದರಿಂದಲೇ ಮನೋಹರವಾಗಿ ಮಾತಾಡುವನೆಂಬ ಅರ್ಥದ ಚಾರ್ವಾಕ ಎಂಬ ಹೆಸರನ್ನು ಪಡೆದಿದ್ದರೂ, ಅವನ ವಾಕ್ - ಮಾತು; ಚಾರು ನ - ಮನೋಹರವಲ್ಲ.

**ಭಾವವಿಲಾಸಿನೀ–** ಚಾರ್ವಾಕಮತಂ ನಿರಾಕರೋತಿ–**ಚಾರ್ವಾಕಸ್ಯೇತ್ಯಾದಿನಾ** ॥ ಚಾರ್ವೀ ಮನೋಹರಾ । ಆತ್ಮವಧಂ ಸ್ವಾಪ್ರಾಮಾಣ್ಯಲಕ್ಷಣವಧಮ್ । ತದೇವೋಪಪಾದಯತಿ – **ಅಕ್ಷೈಕೇತಿ** ॥ ಅಕ್ಷೈಕಮಾನತಾ ವಾಕ್ಪ್ರತ್ಯಕ್ಷಮೇಕಮೇವ ಪ್ರಮಾಣಮಿತಿ ವಾಕ್ । ಆತ್ಮಪ್ರಮಾಣತಾಂ ಆತ್ಮನಃ ಸ್ವಸ್ಯ ವಾಚಃ ಶಾಸ್ತ್ರರೂಪಾಯಾಃ ಪ್ರಮಾಣತಾಂ ರಕ್ಷೇತ್ಕಿಮ್? ನ ರಕ್ಷೇದಿತಿ ಯತಃ ಅತಃ ನ ಚಾರ್ವೀತಿ ಸಂಬಂಧಃ ॥ ೧೩೨ ॥

**ವಿವರಣೆ–** ಕಣ್ಣಿಗೆ ಕಾಣದ ಧರ್ಮಾಧರ್ಮ, ಪುಣ್ಯಪಾಪ, ಸುರಲೋಕ, ಜನ್ಮಾಂತರ ಮುಂತಾದ ಸಂಗತಿಗಳನ್ನೆಲ್ಲ ಇಲ್ಲವೇ ಇಲ್ಲವೆಂದು ಅಲ್ಲಗಳೆದು ಕಾಣುವ ಪ್ರಪಂಚ, ಅಲ್ಲಿರುವ ಭೌತಿಕ ಸುಖಗಳಾದ ಸ್ತ್ರೀಭೋಗ, ಆಹಾರದ ಅಸ್ವಾದನೆಗಳೇ ನಿಜವಾದ ಪರಮಸುಖ. ಸಾಲಮಾಡಿಯಾದರೂ ತುಪ್ಪ ತಿಂದು, ಸುಖಪಡಿ. ಏಕೆಂದರೆ ದೇಹವೇ ಆತ್ಮ, ಇದೊಂದೇ ಜನ್ಮ ಎಂದು ಸಾರುವ ಚಾರ್ವಾಕನ ಮಾತು ಭೋಗಪ್ರಧಾನವಾದ ಜೀವನ ನಡೆಸುವ ಸಾಮಾನ್ಯಜನರಿಗೆ ಶ್ರೋತ್ರರಮಣೀಯವಾಗಿರುತ್ತದೆ. ಆದುದರಿಂದಲೇ ಚಾರು ವಾಕ್ ಉಳ್ಳವನೆಂದೆ ಚಾರ್ವಾಕ ಎನಿಸಿರುವನು. ಆಪಾತರಮಣೀಯವಾದ ಅವನ ವಾದವನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿದಾಗ ಪೊಳ್ಳುತನ ಅರ್ಥವಾಗುತ್ತದೆ. ಪ್ರತ್ಯಕ್ಷವೊಂದೇ ಪ್ರಮಾಣ, ಯುಕ್ತಿ ಶಬ್ದಗಳು ಪ್ರಮಾಣವೇ ಅಲ್ಲವೆನ್ನುವ ವಿಷಯವನ್ನು ಯಾರ ಅನುಭವವೂ ಒಪ್ಪಲಾರದು. ಚಾರ್ವಾಕನ ಮಾತು ಚಾರು ಅಲ್ಲವೆಂದು ಅದಕ್ಕೇ ವಾದಿರಾಜರು ಹೇಳಿರುವುದು. ಮಾತು

ಪ್ರಮಾಣವಲ್ಲವೆನಿಸುವ ವಾದಿ ಚಾರು - ವಾಕ್ ಎಂದೇ ಹೆಸರು ಪಡೆದಿರುವುದು ಎಂತಹ ವಿಪರ್ಯಾಸ ! ಎನ್ನುವ ವ್ಯಂಗ್ಯವೂ ರಾಜರ ಮಾತಲ್ಲಿ ಇಣುಕಿದೆ.

**ಚಾರ್ವಾಕಮತದ ಹಿನ್ನೆಲೆ -**

ಹಿಂದೆ ರಜಿ ಎಂಬ ಮಹಾರಾಜನಿದ್ದ. ತುಂಬ ಧಾರ್ಮಿಕ ಹಾಗೂ ಪರಾಕ್ರಮಿ. ಪುರೂರವ - ಊರ್ವಶಿಯರ ಮಗನಾದ ಆಯುವಿನ ಮಗ. ದೇವ - ದಾನವರೊಳಗೆ ಕದನವೇರ್ಪಟ್ಟು ತಮ್ಮಲ್ಲಿ ಯಾರು ಗೆಲ್ಲಬಹುದೆಂಬ ಕುತೂಹಲದಿಂದ ಬ್ರಹ್ಮದೇವರಲ್ಲಿ ಇಬ್ಬರೂ ಹೋಗಿ ಗೆಲುವು ಯಾರಿಗೆ ಎಂದು ಕೇಳಿದರು. ರಜಿಮಹಾರಾಜನ ಸಹಾಯ ಯಾರ ಪಕ್ಷಕ್ಕೆ ದೊರೆಯುವುದೋ ಅವರು ಗೆಲ್ಲುತ್ತಾರೆಂದು ಬ್ರಹ್ಮದೇವರು ಹೇಳಿದರು. ದೇವ - ದಾನವರಿಬ್ಬರೂ ರಜಿ ಮಹಾರಾಜನಲ್ಲಿ ಸಹಾಯ ಬಯಸಿ ಬಂದರು. ನನ್ನ ಸಹಾಯದಿಂದ ಗೆಲ್ಲುವವರು ತಮ್ಮ ನಾಯಕತ್ವವನ್ನು ನನಗೆ ಕೊಡುವುದಾದರೆ ಸಹಾಯ ಮಾಡುತ್ತೇನೆಂದು ರಜಿ ಹೇಳಿದನು. ದಾನವರು ನಮ್ಮ ಹೋರಾಟದ ಉದ್ದೇಶವೇ ಅಧಿ ಕಾರಗ್ರಹಣ. ಅದನ್ನೇ ಬಿಟ್ಟುಕೊಡಬೇಕೆಂದರೆ ನಿಮ್ಮ ಸಹಾಯವೇ ಬೇಡ ಎಂದರು. ದೇವತೆಗಳು ನಮ್ಮ ಹೋರಾಟ ಅಧಿಕಾರಕ್ಕಾಗಿ ಅಲ್ಲ, ತತ್ತ್ವಕ್ಕಾಗಿ. ಅಸುರರ ಕೈಗೆ ಈ ಲೋಕ ಹೋಗಬಾರದೆನ್ನುವುದು ಮುಖ್ಯ. ನಾಯಕತ್ವ ಮುಖ್ಯವಲ್ಲ ಎಂದು ರಜಿಯ ಸಲಹೆಗೆ ರಾಜಿಯಾದರು. ನಿರೀಕ್ಷೆಯಂತೆ ದೇವತೆಗಳು ಗೆದ್ದರು. ಇಂದ್ರ ತನ್ನ ಸಿಂಹಾಸನವನ್ನು ರಜಿಮಹಾರಾಜನಿಗೆ ಬಿಟ್ಟು ಕೊಟ್ಟನು. ನಾನು ನಿಮ್ಮ ಮಗನಂತೆ ಎಂದುಸುರಿದನು. ಉತ್ತರಾಧಿಕಾರ ನಮಗೇ ಅನ್ನುವ ಸೂಚನೆ ಆ ದನಿಯಲ್ಲಿತ್ತು.

ರಜಿಯ ಮರಣದ ಬಳಿಕ ಇಂದ್ರ ಸಿಂಹಾಸನವೇರಿದ. ರಜಿಗೆ 500 ಗಂಡು ಮಕ್ಕಳು ಇದ್ದರು. ದೇವತೆಗಳನ್ನು ಕೆಳಗಿಳಿಸಿ ರಜಿಯ ಮಕ್ಕಳು ದೇವಲೋಕವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಭ್ರಷ್ಟರಾದ ಅವರಿಂದ ದೇವತೆಗಳಿಗೆ ಸ್ಥಾನ ಮಾನಗಳು ಇಲ್ಲವಾದುವು. ಅವರು ಬೃಹಸ್ಪತಿ ಆಚಾರ್ಯರಲ್ಲಿ ದೂರಿಕೊಂಡರು.

ದೇವತೆಗಳ ಹಿತಕ್ಕಾಗಿ ಬೃಹಸ್ಪತಿಗಳು ಗ್ರಂಥವೊಂದನ್ನು ಬರೆದು ಆಡಳಿತನಡೆಸುತ್ತಿದ್ದ ರಜಿಯ ಮಕ್ಕಳಿಗೆ ಕೊಟ್ಟರು. ಅವರಿಗೆ ಅದು ತುಂಬ ಹಿಡಿಸಿತು. ಆಸುರಸ್ವಭಾವದ ಅವರು ಅದೇ ಗ್ರಂಥವನ್ನು ತಮ್ಮ ಜೀವನಕ್ಕೆ, ತಮ್ಮ ಆಡಳಿತಕ್ಕೆ ಸಂವಿಧಾನದಂತೆ ಸ್ವೀಕರಿಸಿದರು. ಆ ಗ್ರಂಥವೇ ಚಾರ್ವಾಕಮತದ ಮೂಲಗ್ರಂಥ. ಧರ್ಮಾತೀತವಾದ ಧರ್ಮವಿರೋಧಿಯಾದ ಆಡಳಿತದ ಸ್ಫೂರ್ತಿಪಡೆದ ರಜಿಯ ಮಕ್ಕಳು ದೇವಲೋಕದಿಂದ ಕೆಳಗೆ ಬಿದ್ದರು. ನಷ್ಟರಾದರು. ಚಾರ್ವಾಕಮತದ ಪ್ರಭಾವ ಅನರ್ಥಗಳು ಹಾಗೂ ರಚನೆಯ ಹಿನ್ನೆಲೆಗಳನ್ನು ತಿಳಿದಾಗ ಅದು ಸಾತ್ವಿಕರಿಗೆ ತಾತ್ವಿಕರಿಗೆ ಗ್ರಾಹ್ಯವಲ್ಲವೆಂದು ತಿಳಿಯುತ್ತದೆ.

ಆದರೂ ಭೋಗಪ್ರಧಾನದ ಜೀವನನಡೆಸುವವರಿಗೆ ಇಂದಿಗೂ ಆಪ್ಯಾಯಮಾನವಾಗಿ ಲೋಕದಲ್ಲಿ ಹರಡಿದೆ. ಆದರಿಂದಲೇ ಈ ಮತಕ್ಕೆ ಲೋಕ + ಆಯತ - ಲೋಕಾಯತಮತವೆಂದೇ ಹೆಸರಿದೆ.

ಹರಿವಂಶದ ಮೊದಲ ಹರಿವಂಶಪರ್ವದ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಈ ಕಥೆ ಬರುತ್ತದೆ. ಚಾರ್ವಾಕಮತದಿಂದ ರಜಿಯ ಮಕ್ಕಳ ಮೇಲಾದ ಪ್ರಭಾವವನ್ನು ತಿಳಿಸುವ ಈ ಪುರಾಣದ ಮಾತು ಗಮನಾರ್ಹವಾಗಿದೆ.

ತೇಷಾಂ ಚ ಬುದ್ಧಿಸಮ್ಮೋಹಮಕರೋದ್ ದ್ವಿಜಸತ್ತಮಃ ।
ನಾಸ್ತಿವಾದಾರ್ಥಶಾಸ್ತ್ರಂ ಹಿ ಧರ್ಮವಿದ್ವೇಷಣಂ ಪರಂ ॥

ಪರಮಂ ತರ್ಕಶಾಸ್ತ್ರಾಣಾಮಸತಾಂ ತನ್ಮನೋಽನುಗಂ ।
ನ ಹಿ ಧರ್ಮಪ್ರಧಾನಾನಾಂ ರೋಚತೇ ತತ್ಕಥಾಂತರೇ ॥

ತೇ ತದ್‌ಬೃಹಸ್ಪತಿಕೃತಂ ಶಾಸ್ತ್ರಂ ಶ್ರುತ್ವಾಽಲ್ಪಚೇತಸಃ ।
ಪೂರ್ವೋಕ್ತಧರ್ಮಶಾಸ್ತ್ರಾಣಾಮಭವನ್‌ದ್ವೇಷಿಕಾಃ ಸದಾ ॥

(ಹರಿವಂಶ - ೧/೨೮/೩೦-೩೨)

**ಶಿಷ್ಯಪ್ರಮಾಯೈ ವಾಗ್ವಾಚ್ಯಾ ಸಾ ಶೋಚ್ಯಾ ಮಾನತಾ ನ ಚೇತ್ ।**
**ನ ಪ್ರಯೋಜ್ಯಾ ನ ತೈಃ ಪೂಜ್ಯಾ ಮೂಕೋ ಲೋಕಾಯತೋ ಭವೇತ್**
**॥ ೧೩೩ ॥**

**ಅರ್ಥ–** ಶಿಷ್ಯಪ್ರಮಾಯೈ = ಶಿಷ್ಯರ ತಿಳುವಳಿಕೆಗಾಗಿ, ವಾಚ್ಯಾ = ಹೇಳಬೇಕಾದ, ಸಾ = ಆ, ವಾಕ್ = ಶಾಸ್ತ್ರರೂಪವಾದ ಮಾತು, ಮಾನತಾ ನ ಚೇತ್ = ಪ್ರಾಮಾಣ್ಯವಿಲ್ಲದಿದ್ದರೆ, ಶೋಚ್ಯಾ ಸತೀ = ಶೋಚನೀಯವಾಗಿ, ಪ್ರಯೋಜ್ಯಾ = ಉಪದೇಶಕ್ಕಾಗಿ ಪ್ರಯೋಗಾರ್ಹವು, ನ ಭವತಿ = ಆಗುವುದಿಲ್ಲ. ತೈಃ = ಆ ಶಿಷ್ಯರಿಂದ, ಪೂಜ್ಯಾ = ಪೂಜಾರ್ಹವೂ, ನ ಭವತಿ = ಆಗುವುದಿಲ್ಲ. ಲೋಕಾಯತಃ = ಲೋಕದಲ್ಲಿ ಹೆಚ್ಚಿದ ಚಾರ್ವಾಕಮತಪ್ರವರ್ತಕನು, ಮೂಕಃ ಭವೇತ್ = ಮೂಗನಾಗಬೇಕಾದೀತು.

**ಅನುವಾದ–** ಶಿಷ್ಯರಿಗೆ ಜ್ಞಾನವನ್ನುಂಟು ಮಾಡುವುದಕ್ಕಾಗಿ ಶಬ್ದಪ್ರಯೋಗವನ್ನು ಮಾಡಬೇಕು. ಶಬ್ದವು ಪ್ರಮಾಣವಾಗದಿದ್ದರೆ ಅದರ ಸ್ಥಿತಿ ಶೋಚನೀಯವಾಗುತ್ತದೆ. ಆದ್ದರಿಂದ ಅದು ಪ್ರಯೋಗಕ್ಕೆ ಅರ್ಹವೂ ಆಗುವುದಿಲ್ಲ. ಪ್ರಯೋಗಿಸಿದರೆ ಮಾನ್ಯವೂ ಆಗುವುದಿಲ್ಲ. ಆದ್ದರಿಂದ ಚಾರ್ವಾಕಾಚಾರ್ಯನು ಮೌನವನ್ನು ವಹಿಸಬೇಕಾಗುತ್ತದೆ.

**ಭಾವವಿಲಾಸಿನೀ–** ಸ್ವಸ್ಯಮಾನತ್ವಾಭಾವೇ ಕಾ ಕ್ಷತಿರಿತ್ಯತ ಆಹ – **ಶಿಷ್ಯೇತಿ** ॥ ಸಾ ಶಾಸ್ತ್ರರೂಪಾ ವಾಕ್ ಶಿಷ್ಯಪ್ರಮಾಯೈ ವಾಚ್ಯಾ ವ್ಯಾಖ್ಯೇಯಾ । ಮಾನತಾ ನಚೇಚ್ಛೋಚ್ಯಾ ಸಾ ನ ಪ್ರಯೋಜ್ಯಾ । ತೈಃ ಶಿಷ್ಯೈಃ ಪೂಜ್ಯಾ ಚ ನೇತಿ ಸಂಬಂಧಃ । ನಹ್ಯಪ್ರಮಾಣಭೂತಾ-ಚ್ಛಾಸ್ತ್ರಾಚ್ಛಿಷ್ಯಾಣಾಂ ತತ್ತ್ವಬೋಧೋ ಭವತಿ । ಅತಃ ಪ್ರತ್ಯಕ್ಷಸ್ಯೈವ ಮಾನತ್ವರೂಪತತ್ತ್ವಸಿದ್ಧೌ ಶಾಸ್ತ್ರಸ್ಯಾಪ್ರಾಮಾಣ್ಯಂ ಪ್ರತ್ಯಕ್ಷಾತಿರಿಕ್ತತ್ವಾತ್ । ಶಾಸ್ತ್ರಸ್ಯಾಪ್ರಾಮಾಣ್ಯೇ ನ ತತ್ವಸಿದ್ಧಿರಿತ್ಯುಭಯತಃ ಪಾಶಾರಜ್ಜುಃ । ಅತ ಈದೃಕ್ಶಾಸ್ತ್ರಂ ಶಿಷ್ಯಾಯ ನೋಪದೇಶ್ಯಮಿತಿ ಲೋಕಾಯತಸ್ಯ ಮೂಕತೈವ ಶರಣಮಿತಿ ಭಾವಃ ॥ ೧೩೩ ॥

**ವಿವರಣೆ–** ತನ್ನ ಚಾರ್ವಾಕಶಾಸ್ತ್ರಕ್ಕೆ ಪ್ರಾಮಾಣ್ಯವಿಲ್ಲದಿದ್ದರೇನಂತೆ ಎಂದು ಆಕ್ಷೇಪಿಸಿದರೆ ಹೇಳುತ್ತಿದ್ದಾರೆ ಉತ್ತರವನ್ನು -

ಶಿಷ್ಯರಿಗೆ ಚಾರ್ವಾಕಮತದ ಬೋಧಬರಲೆಂದು ತನ್ನ ಶಾಸ್ತ್ರವನ್ನು ಉಪದೇಶಿಸಬೇಕು. ಆ ಶಾಸ್ತ್ರಕ್ಕೆ ಅಪ್ರಾಮಾಣ್ಯವೊಪ್ಪಿದರೆ ಅದರ ಸ್ಥಿತಿಯು ಶೋಚನೀಯವಾಗುತ್ತದೆ. ಉಪದೇಶಕ್ಕೆ ಅರ್ಹವೂ ಆಗಲಾರದು. ಶಿಷ್ಯರಿಂದ ಗೌರವಾರ್ಹವೂ ಆಗದು. ಅಪ್ರಮಾಣವಾದ ಶಾಸ್ತ್ರದಿಂದ ಯಾರಿಗೂ ತತ್ತ್ವಬೋಧ ಉಂಟಾಗಲಾರದು ತಾನೆ ! ಆದ್ದರಿಂದ ಪ್ರತ್ಯಕ್ಷವೊಂದೇ ಪ್ರಮಾಣವೆಂಬ ತತ್ತ್ವವು ಸಿದ್ಧವಾದರೆ ಶಾಸ್ತ್ರ ಅಪ್ರಮಾಣವಾಗುತ್ತದೆ. ಪ್ರತ್ಯಕ್ಷಾತಿರಿಕ್ತವಾದ್ದರಿಂದ. ಶಾಸ್ತ್ರ ಅಪ್ರಮಾಣವೆಂದೊಪ್ಪಿದರೆ ಪ್ರತ್ಯಕ್ಷ ಒಂದೇ ಪ್ರಮಾಣವೆನ್ನುವ ತತ್ತ್ವವೇ ಸಿದ್ಧವಾಗುವುದಿಲ್ಲ! ಪ್ರತ್ಯಕ್ಷೈಕಪ್ರಾಮಾಣ್ಯಪಕ್ಷ ಶಾಸ್ತ್ರಾಪ್ರಾಮಾಣ್ಯಪಕ್ಷ ಈ ಎರಡೂ ಪಕ್ಷಗಳೂ ಚಾರ್ವಾಕಮತಪ್ರವರ್ತಕನ ಕುತ್ತಿಗೆ ಬಿಗಿವ ಉರುಳುಗಳಾಗುತ್ತವೆ. ಇದರಿಂದ ಪಾರಾಗಬೇಕಿದ್ದರೆ ಚಾರ್ವಾಕನು ಮೌನಕ್ಕೇ ಶರಣಾಗಬೇಕಾಗುತ್ತದೆ.

**ಕಿಂ ಚ ಪ್ರತ್ಯಕ್ಷಮೇವೈಕಂ ಮಾನಮಿತ್ಯಾದಿರೂಪಿಣೀ ।**
**ವಾಕ್ ಚ ಪ್ರಮಾಪಿಕಾ ಚೇತ್‌ಸ್ಯಾತ್ ವಾಕ್ಯಾರ್ಥಪ್ರಚ್ಯುತಿಸ್ತದಾ ॥ ೧೩೪ ॥**

**ಅರ್ಥ–** ಕಿಂ ಚ = ಮತ್ತು ಏನೆಂದರೆ, ಪ್ರತ್ಯಕ್ಷಂ ಏಕಮೇವ = ಪ್ರತ್ಯಕ್ಷವೊಂದೇ, ಮಾನಂ = ಪ್ರಮಾಣವು, ಇತ್ಯಾದಿರೂಪಿಣೀ = ಇತ್ಯಾದಿರೂಪವಾದ, ವಾಕ್ ಚ = ಮಾತಾದರೂ, ಪ್ರಮಾಪಿಕಾ = ಯಥಾರ್ಥಜ್ಞಾನಜನಕವು, ಸ್ಯಾತ್ ಚೇತ್ = ಆಗುವುದಾದರೆ, ತದಾ = ಆಗ, ವಾಕ್ಯಾರ್ಥಪ್ರಚ್ಯುತಿಃ ಸ್ಯಾತ್ = ಪ್ರತ್ಯಕ್ಷವೊಂದೇ ಪ್ರಮಾಣ ಎಂಬ ವಾಕ್ಯಾರ್ಥದ ಹಾನಿಯಾಗುತ್ತದೆ.

**ಅನುವಾದ–** ಪ್ರತ್ಯಕ್ಷವೊಂದೇ ಪ್ರಮಾಣವೆಂಬ ನಿನ್ನ ಮಾತು ಶಿಷ್ಯರಿಗೆ ಯಥಾರ್ಥಜ್ಞಾನಜನಕವಾದರೆ ಆ ಮಾತೂ ಪ್ರಮಾಣವೆಂದಾಯಿತು. ಆಗ ಪ್ರತ್ಯಕ್ಷಮಾತ್ರ ಪ್ರಮಾಣವೆಂಬ ನಿನ್ನ ವಾಕ್ಯದ ಅಭಿಪ್ರಾಯವೂ ತಪ್ಪಾಗುತ್ತದೆ.

**ಭಾವವಿಲಾಸಿನೀ–** ಇದಾನೀಂ ಚಾರ್ವಾಕಶಾಸ್ತ್ರಸ್ಯ ಪ್ರಾಮಾಣ್ಯೇ ಅಪ್ರಾಮಾಣ್ಯೇ ಚ ಸ್ವಾಭಿಲಷಿತತತ್ತ್ವಸ್ಯಾಸಿದ್ಧಿರೇವೇತಿ ಪಕ್ಷದ್ವಯೇಽಪಿ ಪ್ರತಿವಾದಿನಾಮೇವ ಜಯ ಇತ್ಯಾಹ – **ಕಿಂಚೇತಿ** ॥ ಪ್ರತ್ಯಕ್ಷಮೇಕಮೇವ ಮಾನಮಿತ್ಯಾದಿರೂಪಿಣೀ ವಾಕ್ ಪ್ರಮಾಪಿಕಾ ಸ್ಯಾಚ್ಚೇತ್ತದಾ ವಾಕ್ಯಾರ್ಥಪ್ರಚ್ಯುತಿಃ ವಾಕ್ಯಾರ್ಥಸ್ಯ ಪ್ರತ್ಯಕ್ಷಮೇವ ಪ್ರಮಾಣಮಿತ್ಯಸ್ಯ ಪ್ರಚ್ಯುತಿಃ ಸ್ಯಾದಿತಿ ಕ್ರಿಯಾವೃತ್ತ್ಯಾ ಯೋಜ್ಯಮ್ । ಅಸ್ಮಿನ್ಪಕ್ಷೇ ಶಾಸ್ತ್ರರೂಪವಾಕ್ಯಸ್ಯ ಪ್ರತ್ಯಕ್ಷಸ್ಯ ಚೇತ್ಯುಭಯೋರಪಿ ಪ್ರಾಮಾಣ್ಯಪ್ರಾಪ್ತೇರಿತಿ ಭಾವಃ ॥ ೧೩೪ ॥

**ಯದ್ಯಪ್ರಮಾಪಿಕಾ ಸಾ ಸ್ಯಾದ್ವಾಕ್ಯಾರ್ಥಪ್ರಚ್ಯುತಿಸ್ತದಾ ।**
**ಅರ್ಥಾಯಾಥಾರ್ಥ್ಯತಃ ಪ್ರಾಹುರಮಾನತ್ವಂ ಯತೋ ಬುಧಾಃ ॥ ೧೩೫ ॥**

**ಅರ್ಥ–** ಸಾ = ಪ್ರತ್ಯಕ್ಷವೊಂದೇ ಪ್ರಮಾಣವೆನ್ನುವ ಶಾಸ್ತ್ರರೂಪವಾದ ಮಾತು, ಯದಿ ಅಪ್ರಮಾಪಿಕಾ = ಯಥಾರ್ಥಜ್ಞಾನಜನಕವಲ್ಲದಿದ್ದರೆ, ತದಾ = ಆಗ, ವಾಕ್ಯಾರ್ಥಪ್ರಚ್ಯುತಿಃ = ಪ್ರತ್ಯಕ್ಷವೊಂದೇ ಪ್ರಮಾಣವೆಂಬ ವಾಕ್ಯಾರ್ಥದ ಹಾನಿಯು, ಸ್ಯಾತ್ = ಆಗುತ್ತದೆ. ಯತಃ = ಏಕೆಂದರೆ, ಬುಧಾಃ = ಜ್ಞಾನಿಗಳು, ಅರ್ಥಾಯಥಾರ್ಥ್ಯತಃ = ಅರ್ಥದ ಅಯಥಾರ್ಥತೆಯಿಂದ, ಅಮಾನತ್ವಂ = ವಾಕ್ಯದ ಅಪ್ರಾಮಾಣ್ಯವನ್ನು, ಪ್ರಾಹುಃ = ಹೇಳುವರು.

**ಅನುವಾದ–** ಪ್ರತ್ಯಕ್ಷವೊಂದೇ ಪ್ರಮಾಣವೆನ್ನುವ ಚಾರ್ವಾಕನ ವಾಕ್ಯವು ಪ್ರತ್ಯಕ್ಷಾತಿರಿಕ್ತವಾದ್ದರಿಂದ ಶಿಷ್ಯರಿಗೆ ಯಥಾರ್ಥಜ್ಞಾನವನ್ನುಂಟುಮಾಡುವುದಿಲ್ಲ ಎಂದು ಹೇಳಿದರೆ ಆಗ ಶಾಸ್ತ್ರಾರ್ಥವಾದ ಪ್ರತ್ಯಕ್ಷೈಕಪ್ರಾಮಾಣ್ಯಪಕ್ಷಕ್ಕೆ ಹಾನಿಯಾಗುತ್ತದೆ. ವಾಕ್ಯದ ಅರ್ಥ ಸುಳ್ಳಾದ ಮೇಲೆ ವಾಕ್ಯವು ಪ್ರಮಾಣವಾಗಬಲ್ಲುದೇ? ವಾಕ್ಯಾರ್ಥ ಅಯಥಾರ್ಥವಾಗುವುದರಿಂದಲೇ ವಾಕ್ಯವನ್ನು ಅಪ್ರಮಾಣವೆನ್ನುತ್ತಾರೆ ತಿಳಿದವರು.

**ಭಾವವಿಲಾಸಿನೀ–** ಪಕ್ಷಾಂತರಮಪ್ಯಾಶಂಕ್ಯ ಪ್ರಾಗುಕ್ತದೂಷಣೇನೈವ ದೂಷಯತಿ–**ಯದೀತಿ** ॥ ಸಾ ಪ್ರತ್ಯಕ್ಷಮೇಕಮೇವ ಮಾನಮಿತ್ಯಾದಿರೂಪಾ ವಾಕ್ । ತದಾಪಿ ವಾಕ್ಯಾರ್ಥಪ್ರಚ್ಯುತಿಃ ಪ್ರತ್ಯಕ್ಷಮೇಕಮೇವ ಮಾನಮಿತಿ ವಾಕ್ಯಾರ್ಥಪ್ರಚ್ಯುತಿಃ ಸ್ಯಾದಿತಿ ಸಂಬಂಧಃ । ಕಥಮಿತ್ಯತಸ್ತದುಪಪಾದಯತಿ – **ಅರ್ಥೇತಿ** ॥ ಅಮಾನತ್ವಂ ವಾಕ್ಯಸ್ಯೇತಿ ಶೇಷಃ । ಯತಃ ಅರ್ಥಾಯಾಥಾರ್ಥ್ಯತ ಏವ ವಾಕ್ಯಾಮಾನತ್ವಂ ಬುಧಾಃ ಪ್ರಾಹುಃ । ಯತಶ್ಚ ಪ್ರತ್ಯಕ್ಷಮೇಕಮೇವ ಮಾನಮಿತಿ ವಾಕ್ಯಾರ್ಥಃ । ಅತಸ್ತಸ್ಯಾವಿದ್ಯಮಾನತ್ವರೂಪಾಯಥಾರ್ಥತ್ವೇ ಕಥಂ ನ ವಾಕ್ಯಾರ್ಥಪ್ರಚ್ಯುತಿರಿತಿ ಭಾವಃ ॥ ೧೩೫ ॥

**ಅತಸ್ತ್ವಚ್ಛಾಸ್ತ್ರಮಾನತ್ವೇ ಜಿತಂ ತತ್ಪ್ರತಿವಾದಿಭಿಃ ।**
**ತ್ವಚ್ಛಾಸ್ತ್ರಾಮಾನತಾಯಾಂ ಚ ಜಿತಂ ತ್ವತ್ಪ್ರತಿವಾದಿಭಿಃ ॥ ೧೩೬ ॥**

**ತ್ವದ್ವಾಕ್ಯಾರ್ಥೋಽಸ್ತಿ ಚೇನ್ಮಾನಮಾಗಮೋಽಪಿ ಬಲಾದ್ಭವೇತ್ ।**
**ತ್ವದ್ವಾಕ್ಯಾರ್ಥೋ ನ ಚೇನ್ಮಾನಮಾಗಮೋಽಪಿ ಬಲಾದ್ಭವೇತ್ ॥ ೧೩೭ ॥**

**ಅರ್ಥ–** ಅತಃ = ಆದ್ದರಿಂದ, ತ್ವಚ್ಛಾಸ್ತ್ರಮಾನತ್ವೇ = ನಿನ್ನ ಶಾಸ್ತ್ರವು ಪ್ರಮಾಣವಾದರೆ, ತ್ವತ್ಪ್ರತಿವಾದಿಭಿಃ = ನಿನ್ನ ಪ್ರತಿವಾದಗಳಾದ (ಅಸ್ಮಾಭಿಃ = ನಮ್ಮಿಂದ) ಜಿತಂ = ಗೆಲ್ಲೋಣವಾಯಿತು. ತ್ವಚ್ಛಾಸ್ತ್ರಾಮಾನತಾಯಾಂ ಚ = ನಿನ್ನ ಶಾಸ್ತ್ರವು ಅಪ್ರಮಾಣವಾದರೂ, ತ್ವತ್ಪ್ರತಿವಾದಿಭಿಃ = ನಿನ್ನ ಪ್ರತಿವಾದಿಗಳಾದ ನಮ್ಮಿಂದ, ಜಿತಂ = ಗೆಲ್ಲಲ್ಪಟ್ಟಿತು.

ತ್ವದ್ವಾಕ್ಯಾರ್ಥಃ = ನಿನ್ನ ಶಾಸ್ತ್ರ ಮಾತಿನ ಅರ್ಥವು, ಅಸ್ತಿಚೇತ್ = ಇರುವುದಾದರೆ, ಆಗಮೋಽಪಿ = ವೇದವೂ ಕೂಡ, ಬಲಾತ್ = ಬಲವಂತವಾಗಿ (ಅದರ ಅರ್ಥವೂ ಸತ್ಯವಾಗಿರುವುದರಿಂದ), ಮಾನಂ = ಪ್ರಮಾಣವು, ಭವೇತ್ = ಆಗುತ್ತದೆ, ತ್ವದ್ವಾಕ್ಯಾರ್ಥಃ = ಪ್ರತ್ಯಕ್ಷವೊಂದೇ ಪ್ರಮಾಣವೆಂಬ ನಿನ್ನ ಶಾಸ್ತ್ರಾರ್ಥವು ನ (ಅಸ್ತಿ) ಚೇತ್ = ಇಲ್ಲವಾದರೆ, ಆಗಮೋಽಪಿ = ವೇದವೂ, ಬಲಾತ್ = ಬಲವಂತವಾಗಿ, ಮಾನಂ = ಪ್ರಮಾಣವು, ಭವೇತ್ = ಆಗುತ್ತದೆ.

**ಅನುವಾದ–** ನಿನ್ನ ಶಾಸ್ತ್ರವು ಪ್ರಮಾಣವಾದರೆ ಪ್ರತ್ಯಕ್ಷ ಹಾಗೂ ನಿನ್ನ ಶಾಸ್ತ್ರ ಎರಡೂ ಪ್ರಮಾಣವೆಂದಾಗಿ ನಾವೇ ಗೆದ್ದೆವು. ನಿನ್ನ ಶಾಸ್ತ್ರವು ಅಪ್ರಮಾಣವಾದರೆ ನಿನ್ನ ಶಾಸ್ತ್ರದ ಅರ್ಥವಾದ ಪ್ರತ್ಯಕ್ಷವೊಂದೇ ಪ್ರಮಾಣವೆಂಬ ನಿನಗೆ ಅಭಿಲಷಿತವಾದ ತತ್ತ್ವವು ಸಿದ್ಧವಾಗುವುದಿಲ್ಲವಾದ್ದರಿಂದ ಆಗಲೂ ನಾವೇ ಗೆದ್ದೆವು.

**ಭಾವವಿಲಾಸಿನೀ– ಅತಃ ಉಭಯತ್ರಾಪಿ ವಾಕ್ಯಾರ್ಥಪ್ರಚ್ಯುತೇಃ । ತ್ವಚ್ಛಾಸ್ತ್ರಮಾನತ್ವೇ ತ್ವಚ್ಛಾಸ್ತ್ರಸ್ಯ ಪ್ರತ್ಯಕ್ಷಸ್ಯ ಚ ಪ್ರಾಮಾಣ್ಯಾತ್ ತ್ವತ್ಪ್ರತಿವಾದಿಭಿರಸ್ಮಾಭಿರ್ಜಿತಮ್ । ತ್ವಚ್ಛಾಸ್ತ್ರಾಮಾನತಾಯಾಂ ಚ ತ್ವತ್ಪ್ರತಿವಾದಿಭಿರಸ್ಮಾಭಿರ್ಜಿತಮ್ । ಶಾಸ್ತ್ರಾಪ್ರಾಮಾಣ್ಯಸ್ಯ ಚ ಶಾಸ್ತ್ರಾರ್ಥಭೂತಪ್ರತ್ಯಕ್ಷೈಕ ಪ್ರಮಾಣತ್ವಾಖ್ಯತ್ವದಭಿಲಷಿತತತ್ತ್ವಾಭಾವಮಂತರ್ಭಾವ್ಯೈವ ಪ್ರಾಪ್ತೇರಿತಿ ಭಾವಃ । ಅಥವಾ ಅಸ್ಮದಭಿಲಷಿತಪ್ರಮೇಯವಿರೋಧ್ಯರ್ಥಪ್ರತಿಪಾದಕತ್ವಚ್ಛಾಸ್ತ್ರಾಪ್ರಾಮಾಣ್ಯೇ ಬಾಧಕಾ- ಭಾವೇನಾಸ್ಮದಭಿಲಷಿತಸಕಲಪ್ರಮೇಯಸಿದ್ಧೇರಿತಿ ಭಾವಃ ॥ ೧೩೬-೧೩೭ ॥**

**ವಿವರಣೆ–** ನಮಗೆ ಅಭಿಲಷಿತವಾದ ಪ್ರಮೇಯಗಳಿಗೆ ವಿರೋಧಿಯಾದ ಅರ್ಥವುಳ್ಳ ನಿನ್ನ ಮಾತಿನ ಅರ್ಥವು ನಿಜವಾಗಿದೆಯೆಂದು ಒಪ್ಪಿ ನಿನ್ನ ಶಾಸ್ತ್ರರೂಪ ವಚನವು ಪ್ರಮಾಣವೆಂದಾದರೆ ವೇದದ ಅರ್ಥವೂ ನಿಜವೇಕಾಗಬಾರದು? ಅಂದಮೇಲೆ ಅದೂ ಬಲವಂತವಾಗಿ ಪ್ರಮಾಣವೆಂದು ಸಿದ್ಧವಾಗುವುದು. ನಿನ್ನ ವಾಕ್ಯಾರ್ಥವು ಸುಳ್ಳಾದರೆ ಪ್ರತ್ಯಕ್ಷವೊಂದೇ ಪ್ರಮಾಣವೆಂಬ ನಿನ್ನ ಅಪ್ರಮಾಣವಾದ ಮಾತು ನಮ್ಮ ವೇದ ಪ್ರಾಮಾಣ್ಯಕ್ಕೆ ವಿರೋಧಿಯಾಗದು. ಆದ್ದರಿಂದ ವೇದವು ಬಲಾತ್ ಪ್ರಮಾಣವಾಗುತ್ತದೆ.

**ಚಿತ್ರಂ ಪಕ್ಷದ್ವಯೇಽಪ್ಯೇಕಂ ಪತಿತಂ ದೂಷಣಂ ತವ ।**
**ತಂ ತ್ವಾಂ ಪತಿತಪಂಕ್ತಿಸ್ಥಂ ಸನ್ತೋ ಹಂತ ಹಸನ್ತಿ ತೇ ।**
**ಅಖರ್ವಗರ್ವಚಾರ್ವಾಕದುರ್ವಾಕ್ಯಂ ನೋರ್ವಕುರ್ವತ ॥ ೧೩೮ ॥**

**ಅರ್ಥ–** ಪಕ್ಷದ್ವಯೇ ಅಪಿ = ನಿನ್ನ ಶಾಸ್ತ್ರರೂಪವಾದ ಮಾತು ಪ್ರಮಾಪಕ ಮತ್ತು ಅಪ್ರಮಾಪಕ ಎಂಬ ಎರಡೂ ಪಕ್ಷದಲ್ಲಿಯೂ ಕೂಡ, ಏಕಂ ದೂಷಣಂ = ವಾಕ್ಯಾರ್ಥಹಾನಿಯಿಂದ ಪ್ರತಿವಾದಿಗಳಿಗೇ ಗೆಲುವು ಎಂಬ ಒಂದೇ ದೋಷವು, ತವ = ನಿನಗೆ, ಪತಿತಂ = ಬಂದಿತು, ಚಿತ್ರಂ = ಅಚ್ಚರಿ!, ಹಂತ = ಅಯ್ಯೋ, ಪತಿತಪಂಕ್ತಿಸ್ಥಂ = ಪರಿಹರಿಸುವ ಸಾಮರ್ಥ್ಯವಿಲ್ಲದೆ, ಬಂದ ದೋಷಗಳೊಂದಿಗೆ ಬಾಯಿ ಮುಚ್ಚಿಸುಮ್ಮನಿರುವ, ತ್ವಾಂ = ನಿನ್ನನ್ನು, ಯೇ = ಯಾವ, ಸಂತಃ = ಸಜ್ಜನರು, ಹಸಂತಿ = ಅಪಹಾಸಮಾಡುವರೋ, ತೇ = ಆ ಸಂತರು, ಅಖರ್ವಗರ್ವಚಾರ್ವಕದುರ್ವಾಕ್ಯಂ = ಬಹಳಗರ್ವಿಷ್ಠನಾದ ಚಾರ್ವಾಕನ ದುಷ್ಟಮಾತನ್ನು, ಉರು = ಶ್ರೇಷ್ಠವನ್ನಾಗಿ (ಪ್ರಮಾಣವನ್ನಾಗಿ) ನ ಅಕುರ್ವತ = ಒಪ್ಪಲಿಲ್ಲ, ಪೂರ್ವೋತ್ತರವ್ಯಾಹತವಾದುದರಿಂದ ನಿನ್ನ ಮಾತನ್ನು ಅಪ್ರಯೋಜಕವೆನ್ನುತ್ತಾರೆ.

**ಅನುವಾದ–** ನಿನ್ನ ಶಾಸ್ತ್ರವು ಪ್ರಮಾಪಕವೆಂದಾದರೆ ಪ್ರತ್ರಕ್ಷವೊಂದೇ ಪ್ರಮಾಣವೆಂಬ ಸಿದ್ಧಾಂತವು ಹೋಯಿತು. ನಿನ್ನ ಶಾಸ್ತ್ರ ಪ್ರಮಾಪಕವಲ್ಲ ಎಂದರೆ ಪ್ರತ್ಯಕ್ಷವೊಂದೇ ಪ್ರಮಾಣವೆಂಬ ನಿನ್ನ ಶಾಸ್ತ್ರವು ಅಪ್ರಮಾಣವೆಂದೊಪ್ಪಿದಂತಾಗಿ ವೇದಪ್ರಾಮಾಣ್ಯವನ್ನೊಪ್ಪುವ ಪ್ರತಿವಾದಿಗಳೇ ಗೆದ್ದರಲ್ಲವೇ? (ನಿನ್ನ ಅಪ್ರಮಾಣಶಾಸ್ತ್ರ ವೇದಪ್ರಾಮಾಣ್ಯಕ್ಕೆ ಬಾಧಕವೇ ಆಗುವುದಿಲ್ಲ ಎಂದು ತಾತ್ಪರ್ಯ.) ಹೀಗೆ ಪ್ರಮಾಪಕತ್ವಅಪ್ರಮಾಕತ್ವಎರಡೂ ಪಕ್ಷದಲ್ಲಿಯೂ ಪ್ರತಿವಾದಿಗಳಿಗೇ ಜಯ ಎಂಬ ಒಂದೇ ದೋಷ ಬಂದಿತಲ್ಲ! ಏನಚ್ಚರಿ! ಪರಿಹಾರ ಮಾಡಲಾಗದೆ ನಾವು ಹೇಳಿದ ದೋಷಗಳಲ್ಲಿ ಸಿಲುಕಿ ಸುಮ್ಮನಿರುವ ನಿನ್ನನ್ನು ನೋಡಿ, ಅಯ್ಯೋ ! ಸಜ್ಜನರು ಅಪಹಾಸ ಮಾಡುತ್ತಾರೆ.

ಅತಿಶಯಗರ್ವದ ಚಾರ್ವಾಕನಾದ ನಿನ್ನ ದುರ್ವಾಕ್ಯವನ್ನು ಸಜ್ಜನರು ಶ್ರೇಷ್ಠವೆಂದಾಗಲೀ ಪ್ರಮಾಣವೆಂದಾಗಲೀ ಒಪ್ಪುವುದಿಲ್ಲ. ವ್ಯಾಹತವಾಗಿ ಮಾತನಾಡುವ ನಿನ್ನ ಮಾತನ್ನು ಅಪ್ರಯೋಜಕವೆಂದು ಹೀಗಳೆಯುತ್ತಾರೆ !

**ಭಾವವಿಲಾಸಿನೀ–** ಕಿಂಚೇತ್ಯಾದಿನೋಕ್ತಂ ಚ ಸೋಪಹಾಸಮುಪಸಂಹರತಿ–**ಚಿತ್ರಮಿತ್ಯಾದಿನಾ** ॥ ಪಕ್ಷದ್ವಯೇ ಪ್ರಮಾಪಕತ್ವಾಪ್ರಮಾಪಕತ್ವರೂಪಪಕ್ಷದ್ವಯೇ। ಏಕಂ ದೂಷಣಂ ವಾಕ್ಯಾರ್ಥಪ್ರಚ್ಯುತ್ಯಾ ಪ್ರತಿವಾದಿನಾಂ ಜಯ ಇತ್ಯೇಕಂ ದೂಷಣಂ ತವ ಪತಿತಂ ಆಗತಮ್ । ಪತಿತಪಂಕ್ತಿಸ್ಥಂ ಪರಿಹಾರಾಸಾಮರ್ಥ್ಯಾದ್ ಆಗತದೂಷಣೈಸ್ಸಹ ತೂಷ್ಣೀಂ ಸ್ಥಿತಮಿತ್ಯರ್ಥಃ । ಯೇ ಸನ್ತೋ ಹಸನ್ತಿ

ತೇ ಅಖರ್ವಗರ್ವಚಾರ್ವಾಕದುರ್ವಾಕ್ಯಂ ಉರು ಶ್ರೇಷ್ಠಂ ನಾಕುರ್ವತೇತಿ ಸಂಬಂಧಃ । ಪೂರ್ವೋತ್ತರವ್ಯಾಹತತ್ವಾದಪ್ರಯೋಜಕಮಕುರ್ವತೇತಿ ಭಾವಃ ॥ ೧೩೮ ॥

**ವಿವರಣೆ–** 'ಕಿಂಚ - (124-127) ಇತ್ಯಾದಿ ಶ್ಲೋಕಗಳಿಂದ ಹೇಳಿದ ವಿಷಯವನ್ನು ಈ ಶ್ಲೋಕದಲ್ಲಿ ಉಪಹಾಸ ಮಾಡುತ್ತಾ ಉಪಸಂಹಾರ ಮಾಡಿದ್ದಾರೆ.

'ತಂ ತ್ವಾ ಪತಿತಪಂಕ್ತಿಸ್ಥಂ ಸಂತೋಹಂತ ಹಸಂತಿತೇ' ಎಂಬ ಸಾಲಿನಲ್ಲಿ ಪತಿತರ ಜಾತಿಭ್ರಷ್ಟರ ಪಂಕ್ತಿಯಲ್ಲಿರುವ ನಿನ್ನನ್ನು ಸಂತರು ಅಪಹಾಸ ಗೈಯ್ಯುತ್ತಾರೆ ಎಂಬ ಧ್ವನಿಯಿದೆ. ಪ್ರತಿವಾದಿಗಳಿಂದ ಬಂದ ದೋಷಗಳನ್ನು ಪರಿಹರಿಸಲಾಗದೆ ಸುಮ್ಮನಿರುವ ನಿನ್ನನ್ನು ಎಂಬುದು ಪ್ರಕೃತಕ್ಕೆ ಸಂಬಂಧಿಸಿದ ಅರ್ಥ.

ಅನ್ಯಥಾ ಸರ್ವವಾಚನಿಕ ವ್ಯವಹಾರಾಸಿದ್ಧೇಶ್ಚ (ಗೀ.ಭಾ.2-13).

ಆಗಮ ಅನುಮಾನಗಳು ಪ್ರಮಾಣವಲ್ಲದಿದ್ದರೆ ಜಗತ್ತಿನಲ್ಲಿ ಪರಸ್ಪರ ವ್ಯವಹಾರವೇ ನಡೆಯುವಂತಿಲ್ಲ. ಮತ್ತೊಬ್ಬರಿಗೆ ನಮ್ಮ ಅಭಿಪ್ರಾಯವನ್ನು ತಿಳಿಸಲು ನಾವು ಮಾತನ್ನು ಮಾಧ್ಯಮವನ್ನಾಗಿ ಅವಲಂಬಿಸುತ್ತೇವೆ. ಇಂತಹ ಮಾತೇ ಅಪ್ರಮಾಣ ಎಂದರೆ ಜ್ಞಾನವನ್ನೇ ಉಂಟುಮಾಡುವುದಿಲ್ಲವೆಂದಾದರೆ ಆಗ ಮಾತಿನ ವ್ಯವಹಾರವೇ ವ್ಯರ್ಥ. ಆದ್ದರಿಂದ ವಾಕ್ಯಕ್ಕೆ ಪ್ರಾಮಾಣ್ಯವನ್ನು ಒಪ್ಪಬೇಕು.

**ಕಥಾ ವೃಥೈವ ಜಲ್ಪಾದೌ ತವ ಕೈತವಶೀಲ ತತ್ ।**
**ಯನ್ನಾಸ್ತಿ ಯುಕ್ತಿರುಕ್ತಿಸ್ತೇ ಗರ್ಜತ್ಸು ಪ್ರತಿವಾದಿಷು ॥ ೧೩೯ ॥**

**ಅರ್ಥ–** ಯತ್ = ಯಾವ ಕಾರಣದಿಂದ, ಪ್ರತಿವಾದಿಷು = ಪ್ರತಿವಾದಿಗಳು, ಗರ್ಜತ್ಸು = ನಿನ್ನ ಶಾಸ್ತ್ರವು ಅಪ್ರಮಾಣವೆಂದು ಗರ್ಜನೆ ಗೈಯ್ಯುತ್ತಲಿರಲು, ಯುಕ್ತಿಃ = ಯುಕ್ತಿ (ಅನುಮಾನ)ಯಾಗಲೀ, ಉಕ್ತಿಃ = ಆಗಮವಾಗಲೀ, ತೇ = ನಿನಗೆ, ನಾಸ್ತಿ = ಸಮರ್ಥಿಸಿಕೊಳ್ಳಲು ಪ್ರಮಾಣವಾಗಿಲ್ಲವೋ, ತತ್ = ಆದಕಾರಣ, ಕೈತವಶೀಲ = ಪ್ರತ್ಯಕ್ಷವೊಂದೇ ಪ್ರಮಾಣವೆಂದೊಪ್ಪಿ ಶಾಸ್ತ್ರವನ್ನು ಅಪ್ರಮಾಣೀಕರಿಸುವ ವಂಚನೆಸ್ವಭಾವದ ಚಾರ್ವಾಕನೇ! ತವ = ನಿನಗೆ, ಜಲ್ಪಾದೌ = ಜಲ್ಪವೇ ಮುಂತಾದ ಕಥೆಯಲ್ಲಿ, ಕಥಾ = ವಾಕ್ ಪ್ರಯೋಗವು, ವೃಥಾ ಏವ = ವ್ಯರ್ಥವೇ.

**ಅನುವಾದ–** ನಿನ್ನ ಶಾಸ್ತ್ರವನ್ನು ಅಪ್ರಮಾಣ ಎನ್ನುತ್ತ ಪ್ರತಿವಾದಿಗಳು ಗರ್ಜನೆ ಮಾಡುತ್ತಿರುವಾಗ ನಿನ್ನ ಶಾಸ್ತ್ರವನ್ನು ಸಮರ್ಥನೆ ಮಾಡಲು ನಿನಗೆ ಆಗಮವೂ ಪ್ರಮಾಣವಾಗಿಲ್ಲ, ಅನುಮಾನ ಪ್ರಮಾಣವೂ ಇಲ್ಲ. ಅಂದಮೇಲೆ ನಿನಗೆಲ್ಲಿ ಶಾಸ್ತ್ರಾರ್ಥ ಚರ್ಚೆಯಲ್ಲಿ ಭಾಗವಹಿಸುವ ಅಧಿಕಾರ?

**ಭಾವವಿಲಾಸಿನೀ–** ಪ್ರತ್ಯಕ್ಷೈಕಪ್ರಾಮಾಣ್ಯವಾದಿನಃ ಕಥಾಯಾಮನಧಿಕಾರಶ್ಚೇತ್ಯಾಹ – **ಕಥೇತಿ** ॥ ಜಲ್ಪಾದೌ ಜಲ್ಪಾದಿವಿಷಯೇ । ಕಥಾ ವಾರ್ತಾ । ಪ್ರತ್ಯಕ್ಷಸ್ಯೈವ ಪ್ರಾಮಾಣ್ಯಮಂಗೀಕೃತ್ಯ ತತ್ರ ಶಾಸ್ತ್ರಸ್ಯಾಪಿ ಪ್ರಮಾಣೀಕರಣಾತ್ ಕೈತವಶೀಲೇತಿ ಚಾರ್ವಾಕಂ ಪ್ರತಿ ಸಮ್ಬುದ್ಧಿಃ । ಯದ್ ಯಸ್ಮಾತ್ । ಉಕ್ತಿರಾಗಮಃ। ತದಿತಿ ಪೂರ್ವೇಣ ಸಂಬಂಧಃ ॥ ೧೩೯ ॥

**ವಿವರಣೆ–** ಪ್ರತ್ಯಕ್ಷವೊಂದೇ ಪ್ರಮಾಣವೆನ್ನುವ ಚಾರ್ವಾಕನಿಗೆ ಜಲ್ಪಮುಂತಾದ ಕಥೆಯಲ್ಲಿ ಅಧಿಕಾರವೇ ಇಲ್ಲವೆನ್ನುತ್ತಿದ್ದಾರೆ ಈ ಶ್ಲೋಕದಲ್ಲಿ. ಪ್ರತ್ಯಕ್ಷ ಮಾತ್ರ ಪ್ರಮಾಣವೆನ್ನುತ್ತ ನಿನ್ನ ಶಾಸ್ತ್ರವನ್ನು ಉಪದೇಶ ಮಾಡುವ ನೀನು ವಂಚನೆಸ್ವಭಾವದವನೆಂದು 'ಕೈತವಶೀಲ' ಎಂದು ಸಂಬೋಧಿಸಿದ್ದಾರೆ ಚಾರ್ವಾಕನನ್ನು.

**ಅಕ್ಷೈಕಮಾನತಾವಾದೀ ಕೋ ವಾ ದೀನೋ ನ ವಾದಕೃತ್ ॥ ೧೪೦ ॥**

**ಅರ್ಥ–** ಅಕ್ಷೈಕಮಾನತಾವಾದೀ = ಪ್ರತ್ಯಕ್ಷವೊಂದೇ ಪ್ರಮಾಣವೆಂದು ಹೇಳುತ್ತಾ, ವಾದಕೃತ್ = ವಾದವನ್ನು ಮಾಡುವ, ಕೋ ವಾ = ಯಾವ ವಾದಿಯಾದರೂ, ದೀನೋ ನ = ದೈನ್ಯವನ್ನು ಹೊಂದುವುದಿಲ್ಲ?

**ಅನುವಾದ–** ಪ್ರತ್ಯಕ್ಷವೊಂದೇ ಪ್ರಮಾಣವೆಂದು ಹೇಳುತ್ತಾ ವಾದಮಾಡುವ ಯಾವ ವಾದಿಯು ದೈನ್ಯವನ್ನು ಹೊಂದುವುದಿಲ್ಲ?

**ಭಾವವಿಲಾಸಿನೀ–** ಏವಂಚ ಅಕ್ಷೈಕಮಾನತಾವಾದೀ ವಾದಕೃತ್ ಕೋ ವಾದೀ ನೋ ನ । ಸರ್ವೋಽಪಿ ದೀನ ಏವೇತ್ಯರ್ಥಃ । ಪ್ರತಿವಾದಿನಂ ಪ್ರತಿ ವಕ್ತುಂ ಯೋಗ್ಯಾಯಾಃ ಯುಕ್ತೇರುಕ್ತೇಶ್ಚಾಭಾವಾದಿತಿ ಭಾವಃ ॥ ೧೪೦ ॥

**ವಿವರಣೆ–** ಪ್ರತಿವಾದಿಗಳಿಗೆ ಹೇಳಲು ಯಾವ ಉಕ್ತಿಯಾಗಲೀ, ಯುಕ್ತಿಯಾಗಲೀ ಇಲ್ಲದಿರುವುದರಿಂದ ಎಲ್ಲರೂ ದೀನರಾಗುತ್ತಾರೆ ಎಂದು ಅಭಿಪ್ರಾಯ.

ವಾದೋ ಜಲ್ಪೋ ವಿತಂಡೇತಿ ತ್ರಿವಿಧಾ ವಿದುಷಾಂ ಕಥಾ ।

ವಾದ, ಜಲ್ಪ, ವಿತಂಡಾ ಎಂಬುದಾಗಿ ವಿದ್ವಾಂಸರು ನಡೆಸುವ ಚರ್ಚೆ(ಕಥಾ)ಯು ಮೂರು ಬಗೆಯಾಗಿದೆ.

ತತ್ವನಿರ್ಣಯಮುದ್ದಿಶ್ಯ ಕೇವಲಂ ಗುರುಶಿಷ್ಯಯೋಃ ।
ಕಥಾಽನ್ಯೇಷಾಮಪಿ ಸತಾಂ ವಾದೋ ವಾ ಸುಮಿತೇಃ ಶುಭಾ ॥

ಕೇವಲ ತತ್ವನಿರ್ಣಯದ ಉದ್ದೇಶದಿಂದ ಗುರುಶಿಷ್ಯರ ನಡುವೆ ಅಥವಾ ಬೇರೆ ಸಜ್ಜನರ ನಡುವೆ ನಡೆಯುವ ಚರ್ಚೆಯು 'ವಾದ' ಎನಿಸಿದೆ. ಕೇವಲ ಸಜ್ಜನವರ್ಗದ ತತ್ವನಿರ್ಣಯಕ್ಕೋಸ್ಕರ ನಡೆಸುವ ಚರ್ಚೆಯೂ 'ವಾದ' ಎನಿಸುತ್ತದೆ.

**ಖ್ಯಾತ್ಯಾದ್ಯರ್ಥಃ ಸ್ಪರ್ಧಯಾ ವಾ ಸತಾಂ ಜಲ್ಪ ಇತೀರ್ಯತೇ ।**

ಕೀರ್ತಿಯೇ ಮೊದಲಾದ ಪ್ರಯೋಜನಕ್ಕಾಗಿ ಅಥವಾ ಪರ-ಪರಾಜಯಕ್ಕಾಗಿ ಸಂತರ ನಡುವೆ ನಡೆಸಲ್ಪಡುವ ಚರ್ಚೆಯು ಜಲ್ಪವೆನಿಸಿದೆ.

**ವಿತಂಡಾ ತು ಸತಾಮನ್ಯೈಃ ..... ।**

ಸಜ್ಜನರು ಮತ್ತು ಅಸಜ್ಜನರ ನಡುವೆ ನಡೆಯುವ ಚರ್ಚೆಯು ವಿತಂಡಾ ಕಥೆ ಎನಿಸುತ್ತದೆ.

**ಪೃಷ್ಟೇನ ಆಗಮ ಏದಾದೌ ವಕ್ತವ್ಯಃ ಸಾಧ್ಯಸಿದ್ಧಯೇ ।**

ವಾದಿಯು ನಿರೂಪಿಸಿದ ಪ್ರಮೇಯದ ಬಗ್ಗೆ ಪ್ರತಿವಾದಿಯು ಪ್ರಮಾಣವೇನು ಎಂದು ಪ್ರಶ್ನಿಸಿದಾಗ ಸಾಧ್ಯದ ಸಿದ್ಧಿಗೆ ಮೊದಲು ಆಗಮವನ್ನೇ ಪ್ರಮಾಣವನ್ನಾಗಿ ಹೇಳಬೇಕು.

**ಉಪಪತ್ತ್ಯವಕಾಶೋಽತ್ರ ಹ್ಯಾಗಮಾರ್ಥವಿನಿರ್ಣಯೇ ।**

ಆಗಮದ ಅರ್ಥವನ್ನು ನಿರ್ಣಯಿಸಲು ಉಪಕ್ರಮಾದಿ ತಾತ್ಪರ್ಯ ನಿರ್ಣಾಯಕ ಲಿಂಗಗಳನ್ನು ಹೇಳಬೇಕು (ಕಥಾಲಕ್ಷಣ)

**ತೇಽಕ್ಷ್ಣಸ್ತೀಕ್ಷ್ಣಕಟಾಕ್ಷಸ್ತಾನ್ ಪ್ರತಿವಕ್ಷ್ಯತಿ ಕಾಂ ಕಥಾಮ್ ।**
**ಅತಸ್ತ್ವತ್ಕ್ರಿಯಯಾ ಸರ್ವಾ ವಿರುದ್ಧಾ ಪ್ರಕ್ರಿಯಾ ತವ ॥ ೧೪೧ ॥**

**ಅರ್ಥ–** ತೇ = ನಿನ್ನ, ಪ್ರತ್ಯಕ್ಷರೂಪವಾದ, ಅಕ್ಷ್ಣಃ = ಕಣ್ಣಿನ ತೀಕ್ಷ್ಣಕಟಾಕ್ಷಃ = ಹರಿತವಾದ ನೋಟವು, ತಾನ್ ಪ್ರತಿ = ಆ ಪ್ರತಿವಾದಿಗಳನ್ನು ಕುರಿತು, ಕಾಂ ಕಥಾಂ = ಯಾವ ಕಥೆಯನ್ನು, ವಕ್ಷ್ಯತಿ = ಹೇಳುತ್ತದೆ? ಅತಃ = ಆದ್ದರಿಂದ ಅಂದರೆ ಯುಕ್ತ್ಯಾದಿಗಳಿಗೆ ಪ್ರಾಮಾಣ್ಯವನ್ನೊಪ್ಪದೇ ಮತ್ತೆ ವಿಪ್ರತಿಪನ್ನವಾದ ವಿಷಯದಲ್ಲಿ ಯುಕ್ತ್ಯಾದಿಗಳನ್ನು ಹೇಳುವುದರಿಂದ, ತವ = ನಿನ್ನ ಸರ್ವಾ ಪ್ರಕ್ರಿಯಾ = ಶಾಸ್ತ್ರಜಲ್ಪಾದಿಕ್ರಿಯೆಗಳು, ತ್ವತ್ಕ್ರಿಯಯಾ = ಯುಕ್ತ್ಯಾದಿಗಳ ಹೇಳುವಿಕೆ ರೂಪವಾದ ಸ್ವವಚನಕ್ರಿಯೆಯಿಂದ, ವಿರುದ್ಧಾ = ವಿರುದ್ಧವಾಗಿವೆ.

**ಅನುವಾದ–** ನಿನ್ನ ಕಣ್ಣಿನ (ಪ್ರತ್ಯಕ್ಷದ) ತೀಕ್ಷ್ಣನೋಟವು ಪ್ರತಿವಾದಿಗಳಿಗೆ ಯಾವ ಉತ್ತರವನ್ನು ಕೊಡುತ್ತದೆ? ಆದ್ದರಿಂದ ನಿನ್ನ ವಚನಕ್ರಿಯೆಗಿಂತ ನಿನ್ನ ಶಾಸ್ತ್ರಪ್ರಕ್ರಿಯೆ ಎಲ್ಲವೂ ವಿರುದ್ಧವೇ ಆಗಿದೆ.

**ಭಾವವಿಲಾಸಿನೀ–** ಪ್ರತ್ಯಕ್ಷರೂಪಸ್ಯ ತೇಽಕ್ಷ್ಣಸ್ತೀಕ್ಷ್ಣಕಟಾಕ್ಷಸ್ತಾನ್ ಪ್ರತಿವಾದಿನಃ ಪ್ರತಿ ಕಾಂ ಕಥಾಂ ವಕ್ಷ್ಯತೀತಿ ಸಂಬಂಧಃ । ಅತಃ ಯುಕ್ತ್ಯಾದಿಪ್ರಾಮಾಣ್ಯಮನಂಗೀಕೃತ್ಯ ಪುನರ್ವಿಪ್ರತಿಪನ್ನಾರ್ಥೇ ಯುಕ್ತ್ಯಾದೇರೇವ ಪ್ರಮಾಣತಯಾ ಕಥನಾದಿತ್ಯರ್ಥಃ । ಸರ್ವಾಪಿ ತವ ಪ್ರಕ್ರಿಯಾ

ಶಾಸ್ತ್ರಜಲ್ಪಾದಿಪ್ರಕ್ರಿಯಾ ತ್ವತ್ಕ್ರಿಯಯಾ ಯುಕ್ತ್ಯಾದಿಕಥನರೂಪವಚನಕ್ರಿಯಯಾ ವಿರುದ್ಧೇತಿ ಸಂಬಂಧಃ ॥ ೧೪೧ ॥

**ವಿವರಣೆ–** ಅಧಿಕಾರವಿಲ್ಲದಿದ್ದರೂ ಕಥೆಯನ್ನು (ಚರ್ಚೆಯನ್ನು) ಮಾಡಲು ಬಯಸಿದರೆ ಸ್ವಕ್ರಿಯಾ ವಿರೋಧ ಎಂಬ ದೋಷ ಬರುತ್ತದೆ. ಯುಕ್ತಿ ಆಗಮಗಳಿಗೆ ಪ್ರಾಮಾಣ್ಯವಿಲ್ಲವೆನ್ನುತ್ತ ಅದನ್ನು ಸಮರ್ಥಿಸಲು ಯುಕ್ತಿ ಆಗಮಗಳನ್ನು ಉದಾಹರಿಸುವ ರೀತಿ ಸರಿಯಲ್ಲ ನಿನ್ನ ಶಾಸ್ತ್ರಜಲ್ಪಾದಿಕ್ರಿಯೆಯು ಯುಕ್ತ್ಯಾದಿಗಳ ಹೇಳಿಕೆರೂಪ ಕ್ರಿಯೆಯಿಂದ ವಿರುದ್ಧವಾಗಿದೆ. ವಾದ ಮಾಡಲಾಗದೆ ಪ್ರತಿವಾದಿಗಳನ್ನು ಕೆಕ್ಕರಿಸಿ ನೋಡುವುದರಿಂದೇನು ಪ್ರಯೋಜನ? ಆದರಿಂದ ಉತ್ತರಕೊಟ್ಟಂತಾಗುವುದೇ?

ನಾನು ಮೂಕ ಎಂದು ಹೇಳಿದರೆ ಸ್ವಕ್ರಿಯಾ ವಿರೋಧ. ಮೂಕ ಪದದಿಂದ ವಚನಾಭಾವವನ್ನು ತಿಳಿಸುವುದು. ವಚನ ಕ್ರಿಯೆಯಿಂದ ವಚನಭಾವವನ್ನು ತಿಳಿಸುವುದು. ವಚನರೂಪವಾದ ಕ್ರಿಯೆಯಿಂದ ಮೂಕಪದೋಕ್ತವಾದ ವಚನಾಭಾವಕ್ಕೆ ವಿರೋಧ. ಅದರಂತೆ ಇಲ್ಲಿ ತನ್ನ ಪ್ರಕ್ರಿಯೆಗೂ ಮತ್ತು ವಚನಕ್ರಿಯೆಗೂ ವಿರೋಧವಿದೆ ಎಂದು ತಿಳಿಯಬೇಕು.

**ಅಥ ಪ್ರತ್ಯಕ್ಷದೃಷ್ಟೇಽರ್ಥೇ ಯದಾ ವಾಕ್ಯಂ ಪ್ರಯುಜ್ಯತೇ ।**
**ತೇನ ಬೋಧೋಽಪಿ ನ ಸ್ಯಾಚ್ಚೇದ್ಧೀನಾ ಸ್ಯಾದ್ವಕ್ತೃತೈವ ತೇ ॥ ೧೪೨ ॥**

**ಅರ್ಥ–** ಅಥ = ಮತ್ತೆ, ಪ್ರತ್ಯಕ್ಷದೃಷ್ಟೇ = ಪ್ರತ್ಯಕ್ಷಸಿದ್ಧವಾದ, ಅರ್ಥೇ = ವಿಷಯದಲ್ಲಿ ಯದಾ – ಯಾವಾಗ, ವಾಕ್ಯಂ = ವಾಕ್ಯವು, ಪ್ರಯುಜ್ಯತೇ = ಪ್ರಯೋಗಿಸಲ್ಪಡುತ್ತದೆಯೋ, ತದಾ = ಆಗ, ತೇನ = ಆ ವಾಕ್ಯದಿಂದ, ಬೋಧೋಽಪಿ = ಜ್ಞಾನವೇ, ನ ಸ್ಯಾತ್ ಚೇತ್ = ಬರುವುದಿಲ್ಲವಾದರೆ, ತೇ = ನಿನಗೆ, ವಕ್ತೃತಾ ಏವ = ವಕ್ತೃತ್ವವೇ, ಹೀನಾಸ್ಯಾತ್ = ವ್ಯರ್ಥವಾಗುತ್ತದೆ, ಜ್ಞಾನವನ್ನೇ ಉಂಟು ಮಾಡದ ಮಾತು ಆಡುವುದು ಸರಿಯಲ್ಲವಾದುದರಿಂದ.

**ಅನುವಾದ–** ಒಂದೊಮ್ಮೆ ಕಣ್ಣಾರೆ ಕಂಡ ವಿಷಯವನ್ನೇ ತಿಳಿಸಲು ನೀನು ವಾಕ್ಯಪ್ರಯೋಗ ಮಾಡಿದರೆ ಆ ವಾಕ್ಯದಿಂದ ಜ್ಞಾನ ಬರುತ್ತದೆಯೋ ಇಲ್ಲವೋ? ಬರುವುದಿಲ್ಲ ಎಂದಾದರೆ ನಿನ್ನ ಮಾತೇ ವ್ಯರ್ಥವಲ್ಲವೆ ? ಅಬೋಧಕವಾದ ಮಾತನಾಡಬಾರದಲ್ಲವೇ?

**ಭಾವವಿಲಾಸಿನೀ–** ರೀತ್ಯಂತರೇಣ ವಾಕ್ಯಸ್ಯಾನುಮಾನಸ್ಯ ಚ ಪ್ರಾಮಾಣ್ಯಂ ಸಾಧಯತಿ – **ಅಥೇತಿ** ॥ ತೇನ ಪ್ರತ್ಯಕ್ಷದೃಷ್ಟಾರ್ಥೇ ಪ್ರಯುಕ್ತವಾಕ್ಯೇನ । ವಕ್ತೃತೈವ ಹೀನಾ ಸ್ಯಾತ್ । ಅಬೋಧಕವಾಕ್ಯೋಕ್ತೇರಯೋಗಾದಿತಿ ಭಾವಃ ॥ ೧೪೨ ॥

**ವಿವರಣೆ**– ಮತ್ತೊಂದು ರೀತಿಯಿಂದ ವಾಕ್ಯ ಹಾಗು ಅನುಮಾನಗಳಿಗೆ ಪ್ರಾಮಾಣ್ಯವನ್ನು ಸಾಧಿಸುತ್ತಾರೆ.

**ಸ್ಯಾಚ್ಚೇತ್ಪ್ರಮಾತ್ವಂ ಚಾವಶ್ಯಂ ತಸ್ಯೇತ್ಯಾಸೀದ್ಧಿ ಮಾನತಾ ।**
**ತತ್ರ ಪ್ರಯುಕ್ತಯುಕ್ತೇಶ್ಚ ತದ್ವದೇವ ಪ್ರಮಾಣತಾ ॥ ೧೪೩ ॥**

**ಅರ್ಥ**– ತೇನ = ಪ್ರತ್ಯಕ್ಷಸಿದ್ಧವಾದ ವಿಷಯದಲ್ಲಿ ಪ್ರಯೋಗಿಸಿದ ವಾಕ್ಯದಿಂದ, ಬೋಧಃ = ಜ್ಞಾನವು, ಸ್ಯಾತ್‌ಚೇತ್ = ಬರುತ್ತದೆಯಾದರೆ, ತಸ್ಯ = ಆ ಜ್ಞಾನಕ್ಕೆ ಪ್ರಮಾತ್ವಂ ಚ = ಪ್ರಮಾತ್ವವನ್ನು ಕೂಡ (ಯಥಾರ್ಥಜ್ಞಾನತ್ವವನ್ನು) ಅವಶ್ಯಂ = ಅವಶ್ಯವಾಗಿ ಒಪ್ಪಲೇಬೇಕು. ಸಮಾನ ವಿಷಯಕಗಳಾದ ಪ್ರತ್ಯಕ್ಷಜ್ಞಾನ ಹಾಗು ವಾಕ್ಯಜನ್ಯಜ್ಞಾನಗಳಲ್ಲಿ ಒಂದು ಪ್ರಮಾಣ, ಇನ್ನೊಂದು ಪ್ರಮಾಣವಲ್ಲವೆನ್ನುವುದು ತರವಲ್ಲ. ತದಾ = ಆಗ ವಾಕ್ಯಸ್ಯ= ಪ್ರಮಾಕರಣವಾದ ವಾಕ್ಯಕ್ಕೆ, ಮಾನತಾ = ಪ್ರಾಮಾಣ್ಯವು, ಆಸೀತ್ ಹಿ = ಸಿದ್ಧವಾಯಿತಷ್ಟೆ!, ತತ್ರ = ಪ್ರತ್ಯಕ್ಷ ಸಿದ್ಧ ವಿಷಯದಲ್ಲಿ (ಅದರ ಸಮರ್ಥನೆಗಾಗಿ) ಪ್ರಯುಕ್ತಯುಕ್ತೇಃ ಚ= ಪ್ರಯೋಗಿಸಿದ ಯುಕ್ತಿಗಳಿಗೂ ಕೂಡ, ತದ್ವದ್ ಏವ = ಆ ವಾಕ್ಯದಂತೆಯೇ ಪ್ರಮಾಣತಾ = ಪ್ರಾಮಾಣ್ಯವು, ಆಸೀತ್ ಹಿ = ಸಿದ್ಧವಾಯಿತಷ್ಟೆ

**ಅನುವಾದ**– ನೀನು ಸ್ವತಃ ನೋಡಿದ ವಿಷಯಗಳನ್ನು ಸಮರ್ಥಿಸುವ ಸಲುವಾಗಿ ವಾಕ್ಯವನ್ನು ಪ್ರಯೋಗಿಸಿದಾಗ ಆ ವಾಕ್ಯದಿಂದ ಜ್ಞಾನ ಬರುತ್ತದೆ ಎಂದು ಒಪ್ಪಿದರೆ ಆ ಜ್ಞಾನ ಯಥಾರ್ಥವೆಂದು ಅವಶ್ಯ ಅಂಗೀಕರಿಸಲೇಬೇಕು. ಅದೇ ವಿಷಯದಲ್ಲಿ ಬಂದ ಪ್ರತ್ಯಕ್ಷ ಯಥಾರ್ಥ ಜ್ಞಾನವೆಂದಾದ ಮೇಲೆ ಅದನ್ನೇ ತಿಳಿಸುವ ವಾಕ್ಯದಿಂದ ಬರುವ ಜ್ಞಾನ ಅಪ್ರಮಾಣ (ಅಪ್ರಮಾ) ಎನ್ನುವುದು ಸರಿಯಲ್ಲತಾನೆ. ಶಾಬ್ದಬೋಧವು ಪ್ರಮಾಣವೆಂದಾದ ಮೇಲೆ ಅದಕ್ಕೆ ಕರಣವಾದ ವಾಕ್ಯವೂ ಪ್ರಮಾಕರಣವಾದುದರಿಂದ ಪ್ರಮಾಣವೆಂದೊಪ್ಪಿದಂತೆಯೇ. ಆ ವಾಕ್ಯವು ಪ್ರಮಾಣವಾಗುವಂತೆ ಪ್ರತ್ಯಕ್ಷಸಿದ್ಧವಾದ ವಿಷಯದ ಸಮರ್ಥನೆಗಾಗಿ ಬಳಸಿದ ಯುಕ್ತಿಗಳೂ ಪ್ರಮಾಣವೆಂದು ಸಿದ್ಧವಾಗುವುದಷ್ಟೆ!

**ಭಾವವಿಲಾಸಿನೀ**– ಸ್ಯಾಚ್ಚೇತ್ತೇನ ಬೋಧ ಇತ್ಯಾವೃತ್ತಿಃ । ತಸ್ಯ ಬೋಧಸ್ಯ ಪ್ರಮಾತ್ವಂ ಚಾವಶ್ಯಮಂಗೀಕರ್ತವ್ಯಮ್ । ಏಕಾರ್ಥವಿಷಯಯೋರೇಕಸ್ಯ ಮಾನತ್ವಮುಪರಸ್ಯಾಮಾನತ್ವಮಿತ್ಯಸ್ಯಾಯೋಗಾದಿತಿ ಭಾವಃ । ಮಾನತಾ ವಾಕ್ಯಸ್ಯೇತಿ ಶೇಷಃ । ಪ್ರಮಾಕರಣಾತಿರಿಕ್ತಪ್ರಾಮಾಣ್ಯಾಭಾವಾದಿತಿ ಭಾವಃ । ತತ್ರ ಪ್ರತ್ಯಕ್ಷದೃಷ್ಟೇऽರ್ಥೇ । ತದ್ವದೇವ ವಾಕ್ಯವದೇವ ॥ ೧೪೩ ॥

**ವಿವರಣೆ**– ಶಬ್ದವು ಬೋಧಕವೆಂದೊಪ್ಪಿ ಪ್ರತ್ಯಕ್ಷಸಂವಾದಿತ್ವ ಮಾತ್ರವನ್ನು ಅಂಗೀಕರಿಸುತ್ತೇನೆ. ಪ್ರಾಮಾಣ್ಯವನ್ನು ಒಪ್ಪುವುದಿಲ್ಲವೆಂದು ನಿನ್ನ ಅಭಿಪ್ರಾಯವಾದರೆ ನಿನ್ನ ಮಾತಿನ ಧಾಟಿಯಿಂದ ಪ್ರಾಮಾಣ್ಯವನ್ನೇ ಒಪ್ಪಿಕೊಂಡಂತೆ. ಅದನ್ನು

ವಿಷ್ಣುತತ್ತ್ವನಿರ್ಣಯಟೀಕೆಯಲ್ಲಿ ಶ್ರೀಜಯತೀರ್ಥರು ಹೇಳಿದ್ದಾರೆ. ಇದನ್ನು ಏವಂ ತರ್ಹಿ ಆಗಮಾದಿಕಂ ಜ್ಞಾನಮುತ್ಪಾದಯತಿ ತಚ್ಚ ಸಂವಾದೀತ್ಯಂಗೀಕೃತಮ್ । ಕಿಮತೋಽಧಿಕಂ ಪ್ರಾಮಾಣ್ಯಂ ನಾಮ ಯನ್ನಾಂಗೀಕ್ರಿಯತೇ ಎಂದು-

ಆಗಮ ಅನುಮಾನಗಳು ಜ್ಞಾನವುಂಟುಮಾಡುತ್ತದೆ. ಅದಕ್ಕೆ ಪ್ರತ್ಯಕ್ಷದ ಸಂವಾದವಿದೆ. ಆದ್ದರಿಂದ ಲೋಕವ್ಯವಹಾರ ಕೂಡುತ್ತದೆ ಎಂದು ಚಾರ್ವಾಕ ಹೇಳಿದರೆ ಆಗಮ ಅನುಮಾನಗಳು ಜ್ಞಾನಜನಕಗಳು. ಅದಕ್ಕೆ ಪ್ರತ್ಯಕ್ಷ ಸಂವಾದವಿದೆ ಎಂದೊಪ್ಪಿದ ಮೇಲೆ ಇದಕ್ಕಿಂತ ಬೇರೆಯಾದ ಪ್ರಾಮಾಣ್ಯವೇನಿದೆ? ಯಾವ ಪ್ರಾಮಾಣ್ಯವನ್ನು ನೀನೊಪ್ಪುತ್ತಿಲ್ಲ?

**ಪ್ರತ್ಯಕ್ಷಸ್ಯೈವ ಮಾನತ್ವೇ ಯುಕ್ತಿಶ್ಚೇತ್ಕಥ್ಯತೇ ತ್ವಯಾ ।**
**ಅನುಮಾನಂ ತದಾ ಮಾನಂ ಯದಿ ಯುಕ್ತಿರ್ನ ಕಥ್ಯತೇ ॥**
**ಅನುಮಾನಂ ತದಾ ಮಾನಂ ರಾಜಾಜ್ಞಾ ನಹಿ ತೇ ವಚಃ ॥ ೧೪೪ ॥**

**ಅರ್ಥ–** ಪ್ರತ್ಯಕ್ಷಸ್ಯೈವ = ಕೇವಲ ಪ್ರತ್ಯಕ್ಷವು, ಮಾನತ್ವೇ = ಪ್ರಮಾಣವೆಂಬ ವಿಷಯದಲ್ಲಿ, ತ್ವಯಾ = ನಿನ್ನಿಂದ, ಯುಕ್ತಿಃ = ಯುಕ್ತಿಯು (ಅನುಮಾನವು) ಕಥ್ಯತೇ ಚೇತ್ = ಹೇಳಲ್ಪಟ್ಟರೆ, ತದಾ = ಆಗ, ಅನುಮಾನಂ = ಅನುಮಾನವು, ಮಾನಂ ಭವತಿ = ಪ್ರಮಾಣವಾಗುತ್ತದೆ, ಯುಕ್ತಿಃ = ಯುಕ್ತಿಯು ನ ಕಥ್ಯತೇ ಯದಿ = ಹೇಳಲ್ಪಡುವುದಿಲ್ಲವಾದರೆ, ತದಾ = ಆಗ, ಅನುಮಾನಂ = ಅನುಮಾನವು, ಮಾನಂ = (ಬಾಧಕವಿಲ್ಲದಿರುವುದರಿಂದ) ಪ್ರಮಾಣವಾಗುತ್ತದೆ. ತೇ = ನಿನ್ನ, ವಚಃ = ಮಾತು, ನ ಹಿ ರಾಜಾಜ್ಞಾ = ರಾಜಾಜ್ಞೆಯಲ್ಲವಷ್ಟೇ?

**ಅನುವಾದ–** ಪ್ರತ್ಯಕ್ಷವೊಂದೇ ಪ್ರಮಾಣವೆಂಬ ನಿನ್ನ ಸಿದ್ಧಾಂತವನ್ನು ಸಮರ್ಥಿಸಲು ಯುಕ್ತಿಯನ್ನು ಅಂದರೆ ಅನುಮಾನವನ್ನು ಆಧಾರವಾಗಿ ಹೇಳಿದರೆ ಆಗ ಅನುಮಾನವು ಪ್ರಮಾಣವೆಂದಾಯಿತು. ಯಾವ ಯುಕ್ತಿಯನ್ನೂ ಹೇಳದೆ 'ಪ್ರತ್ಯಕ್ಷಮಾತ್ರಪ್ರಮಾಣ' ಎಂದು ಹೇಳಿದರೆ ಯುಕ್ತಿರಹಿತವಾದ ನಿನ್ನ ಮಾತು ಅಪ್ರಮಾಣವಾದುದರಿಂದ ಅನುಮಾನವು ಪ್ರಮಾಣವೆಂದು ಸಿದ್ಧವಾಗುತ್ತದೆ. ಯುಕ್ತಿಗಳಿಲ್ಲದ ಕೇವಲ ನಿನ್ನ ಮಾತಿನಿಂದ ಅನುಮಾನ ಪ್ರಮಾಣವಲ್ಲವೆಂದೇನೂ ಸಿದ್ಧವಾಗುವುದಿಲ್ಲ. ನೀನು ಹೇಳಿದ ಮಾತ್ರಕ್ಕೆ ಒಪ್ಪಲೇಬೇಕೆನ್ನಲು ನಿನ್ನ ಮಾತೇನು ರಾಜಾಜ್ಞೆಯೇ?

**ಭಾವವಿಲಾಸಿನೀ–** ಪ್ರಕಾರಾಂತರೇಣಾನುಮಾನಪ್ರಾಮಾಣ್ಯಂ ಸಾಧಯಿತುಮಾಹ – **ಪ್ರತ್ಯಕ್ಷಸ್ಯೇತಿ** ॥ ಯದಿ ಯುಕ್ತಿರ್ನಕಥ್ಯತೇ ತದಾ ಬಾಧಕಾಭಾವಾದನುಮಾನಂ ಮಾನಮಿತಿ ಭಾವಃ । ತದೇವ ವಿಶದಯತಿ – **ರಾಜಾಜ್ಞೇತಿ** ॥ ೧೪೪ ॥

**ವಿವರಣೆ–** ಇಲ್ಲಿ ಮತ್ತೊಂದು ರೀತಿಯಿಂದ ಅನುಮಾನದ ಪ್ರಾಮಾಣ್ಯವನ್ನು ಸಾಧಿಸುತ್ತಿದ್ದಾರೆ.

**ನಾಪಿ ಹಾರ್ದಗುಹಾಬೋಧಃ ಪ್ರತ್ಯಕ್ಷೇಣೈವ ಜಾಯತೇ ।**
**ತದ್ಭೋಕ್ತೃಣಾಂ ಚ ಪಾತೃಣಾಮನುಮಾನಂ ಪರಾಯಣಮ್ ॥ ೧೪೫ ॥**

**ತಸ್ಮಾತ್ಪ್ರತ್ಯಕ್ಷಾನುಮಾನಾಗಮಾನಾಂ ಮಾನತಾ ಧ್ರುವಾ ॥ ೧೪೬ ॥**

**ಅರ್ಥ–** ಅಪಿ = ಮತ್ತೆ, ಹಾರ್ದಗುಹಾಬೋಧಃ = ಹೃದಯಗುಹೆಯಲ್ಲಿರುವ, ಹಸಿವೆ ನೀರಡಿಕೆಗಳು ಜ್ಞಾನವು, ಪ್ರತ್ಯಕ್ಷೇಣೈವ = ಕೇವಲ ಪ್ರತ್ಯಕ್ಷದಿಂದಲೇ, ನ ಜಾಯತೇ = ಉಂಟಾಗುವುದಿಲ್ಲ ತತ್ = ಆದ್ದರಿಂದ, ಭೋಕ್ತೃಣಾಂ – (ಹಸಿವೆಯಾಗಿದೆ ಎಂದು ತಿಳಿದು) ಊಟಮಾಡುವವರಿಗೆ ಪಾತೃಣಾಂ (ನೀರಡಿಕೆಯೆಂದ ತಿಳಿದು) ನೀರು ಕುಡಿಯುವವರಿಗೆ ಅನುಮಾನಂ = ಅನುಮಾನವೇ, ಪರಾಯಣಂ = ಮುಖ್ಯಾಧಾರವು, ತಸ್ಮಾತ್ = ಆದ್ದರಿಂದ, ಪ್ರತ್ಯಕ್ಷಾನುಮಾನಾಗಮಾನಾಂ = ಪ್ರತ್ಯಕ್ಷ ಅನುಮಾನ, ಆಗಮಗಳ ಮಾನತಾ = ಪ್ರಾಮಾಣ್ಯವು, ಧ್ರುವಾ = ಸ್ಥಿರವಾಯಿತು.

**ಅನುವಾದ–** ಹೃದಯಗುಹೆ (ಯಲ್ಲಿರುವ ಹಸಿವು ತೃಷೆಗಳ)ಯ ಬೋಧವು ಪ್ರತ್ಯಕ್ಷದಿಂದ ಉಂಟಾಗುವುದಿಲ್ಲ. ಆದ್ದರಿಂದ (ಅದನ್ನು ತಿಳಿದುಕೊಳ್ಳಲು) ಊಟ ಮಾಡುವವರಿಗೂ ನೀರು ಕುಡಿಯುವವರಿಗೂ ಅನುಮಾನವೇ ಆಧಾರ. ಆದ್ದರಿಂದ ಪ್ರತ್ಯಕ್ಷ ಅನುಮಾನ ಮತ್ತು ಆಗಮಗಳ ಪ್ರಾಮಾಣ್ಯವು ಸ್ಥಿರವಾಗಿ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಭೋಜನಾದಿಕರಣಾನ್ಯಥಾನುಪಪತ್ತ್ಯಾಽಪ್ಯನುಮಾನಸ್ಯ ಮಾನತೇತ್ಯಾಹ – **ನಾಪೀತಿ** ॥ ಹಾರ್ದಗುಹಾಯಾಅಪ್ರತ್ಯಕ್ಷತ್ವಾದಿತಿಭಾವಃ ॥ ೧೪೫-೧೪೬ ॥

**ವಿವರಣೆ–** ಪ್ರತ್ಯಕ್ಷವೊಂದೇ ಪ್ರಮಾಣವೆಂದಾದಲ್ಲಿ ಭೋಜನ ಪಾನಗಳಲ್ಲಿ ಯಾರಿಗೂ ಪ್ರವೃತ್ತಿಯೇ ಕೂಡುವುದಿಲ್ಲ. ಹಸಿವೆಯಾಗಿದೆಯೆಂದು ತಿಳಿದು ಊಟಮಾಡುತ್ತಾರೆ. ಊಟ ಮಾಡಿದ್ದರಿಂದ ಹಸಿವೆ ಹೋಯಿತು ಎಂದು ಅನುಮಾನ ಮಾಡುತ್ತಾರೆ. ನೀರಡಿಕೆಯಾಗಿದೆಯೆಂದು ತಿಳಿದು ನೀರು ಕುಡಿಯುತ್ತಾರೆ. ನೀರು ಕುಡಿದಿದ್ದರಿಂದ ಬಾಯಾರಿಕೆ ಹೋಯಿತು ಎಂದು ಅನುಮಾನ ಮಾಡುತ್ತಾರೆ. ಹೃದಯಗುಹೆಯಲ್ಲಿ ಆಗುವ ಹಸಿವೆ, ಬಾಯಾರಿಕೆಗಳು ಕಣ್ಣಿಗೆ ಕಾಣುತ್ತವೆಯೇ? ನಿನ್ನ ಮತದಂತೆ ಯಾರಿಗೂ ಹಸಿವೆ ಬಾಯಾರಿಕೆಗಳ ಜ್ಞಾನವೇ ಪ್ರತ್ಯಕ್ಷದಿಂದ ಬಾರದಿರುವುದರಿಂದ ಯಾರೂ ಊಟ ಮಾಡುವುದರಲ್ಲಿ ನೀರು ಕುಡಿಯುವುದರಲ್ಲಿ ಪ್ರವೃತ್ತಿಯೇ ಮಾಡಬಾರದಾಗಿದ್ದಿತ್ತು.

ಭೋಜನಾಧಿಕರಣ ಅನ್ಯಥಾನುಪಪತ್ತಿಯಿಂದ ಅನುಮಾನದ ಪ್ರಾಮಾಣ್ಯವು ಸಿದ್ಧವಾಗುತ್ತದೆ ಎಂದು ಹೇಳುತ್ತಿದ್ದಾರೆ - ಆಗಮಧ ಪ್ರಾಮಾಣ್ಯವನ್ನು ಹಿಂದೆ

ಪ್ರತಿಪಾದಿಸಿದ್ದಾರೆ. ಅನುಮಾನ ಪ್ರಾಮಾಣ್ಯವನ್ನು ಈ ಶ್ಲೋಕದಲ್ಲಿ ಸಮರ್ಥಿಸಿದ್ದಾರೆ. ಆದ್ದರಿಂದ ಪ್ರತ್ಯಕ್ಷ ಅನುಮಾನ ಆಗಮಗಳ ಪ್ರಾಮಾಣ್ಯವು ಸಿದ್ಧವಾಯಿತೆಂದು ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ.

**ಯದ್ಯದೃಷ್ಟಂ ನ ತರ್ಹ್ಯೇಕಃ ಪೋಷ್ಯೋಽನ್ಯಃ ಪೋಷಕಃ ಕುತಃ ।**
**ಧನಭಾವಾಭಾವತಶ್ಚೇತ್ತಯೋರಪಿ ನಿಯಾಮಕಮ್ ।**
**ಕಿಂ ದೃಷ್ಟಮೇವ ಯತ್ಕಿಂಚಿದುತಾದೃಷ್ಟಂ ವಿಚಾರಯ ॥ ೧೪೭ ॥**

**ಅರ್ಥ–** ಯದಿ = ಒಂದು ಪಕ್ಷ, ಅದೃಷ್ಟಂ = ಅತೀಂದ್ರಿಯವಾದ ಅದೃಷ್ಟವು ನ = ಇಲ್ಲವಾದರೆ, ಏಕಃ = ಒಬ್ಬನು, ಪೋಷ್ಯಃ = ಪೋಷಿಸಲ್ಪಡುವವನು, ಅನ್ಯಃ = ಮತ್ತೋರ್ವನು, ಪೋಷಕಃ = ಪೋಷಣೆ ಮಾಡುವವನು, ಕುತಃ = ಏಕೆ ಆಗಿರುವರು? ಧನಭಾವಾಭಾವತಃ ಚೇತ್ = ಹಣ ಇರುವುದರಿಂದ ಹಾಗು ಇಲ್ಲದಿರುವುದರಿಂದ ಎಂದಾದರೆ, ತಯೋರಪಿ = ಹಣದ ಇರುವಿಕೆ ಇಲ್ಲದಿರುವಿಕೆಗಳಿಗೂ ಕೂಡ, ದೃಷ್ಟಂ = ಕಣ್ಣಿಗೆ ಕಾಣುವ, ಯತ್ಕಿಂಚಿತ್ = ಶರೀರ ಮುಂತಾದ ಯಾವುದಾದರೂ, ನಿಯಾಮಕಂ = ನಿಯಾಮಕವೋ, ಉತ = ಅಥವಾ, ಅದೃಷ್ಟಂ = ಅದೃಷ್ಟವು, ನಿಯಾಮಕಂ = ನಿಯಾಮಕವೋ, ವಿಚಾರಯ = ವಿಚಾರ ಮಾಡು.

**ಅನುವಾದ–** ಲೋಕದಲ್ಲಿ ಒಬ್ಬ ಪೋಷಿತನು. ಮತ್ತೊಬ್ಬ ಪೋಷಕನು ಎಂಬುದನ್ನು ಕಾಣುತ್ತಿದ್ದೇವೆ. ಇವನೇಕೆ ಪೋಷಿತನಾದ? ಅವನೇಕೆ ಪೋಷಕನಾದ? ಇದಕ್ಕೆ ಕಾರಣವೇನೆಂದು ವಿಚಾರ ಮಾಡಬೇಕು. ಹಣವಿರುವವನು ಪೋಷಕ. ಹಣವಿರದವನು ಪೋಷ್ಯನಾಗುವನು ಎಂದರೆ ಅವನೇಕೆ ಧನಿಕನಾದ? ಇವನೇಕೆ ಬಡವನಾದ? ಎಂಬ ಪ್ರಶ್ನೆ ಬರುತ್ತದೆ. ಶರೀರ ಇಂದ್ರಿಯ ಇಚ್ಛಾ ಪ್ರಯತ್ನ ಮುಂತಾದ ದೃಷ್ಟವಾದುದನ್ನು ನಿಯಾಮಕ ಎನ್ನುವಿಯೋ? ಅಥವಾ ಅದೃಷ್ಟ ಕಾರಣವೋ? ವಿಚಾರ ಮಾಡು.

**ಭಾವವಿಲಾಸಿನೀ–** ಅತೀಂದ್ರಿಯಾದೃಷ್ಟಂ ಸಾಧಯತಿ – **ಯದೀತಿ** ॥ ಧನಭಾವಾಭಾವತ ಇತಿ ಪೋಷಕಸ್ಯ ಧನಸದ್ಭಾವಾತ್ಪೋಷ್ಯಸ್ಯ ಧನಾಭಾವಾದಿತ್ಯರ್ಥಃ । ತಯೋಃ ಧನಭಾವಾ-ಭಾವಯೋಃ । ದೃಷ್ಟಮೇವ ಶರೀರಾದಿಕಮ್ । ಯತ್ಕಿಂಚಿತ್ ॥ ೧೪೭ ॥

ದೃಷ್ಟವಾದುದೇ ನಿಯಾಮಕವೆಂಬ ಪಕ್ಷವನ್ನು ದೂಷಿಸುತ್ತಿದ್ದಾರೆ –

**ದೃಷ್ಟದೇಹೇಂದ್ರಿಯಾದೀನಾಮಿಚ್ಛಾಪ್ರಯತ್ನಾದಿಕಸ್ಯ ಚ ।**
**ಉಭಯತ್ರಾಪಿ ಸಾಮ್ಯೇನ ಸ್ಯಾದದೃಷ್ಟಂ ನಿಯಾಮಕಮ್ ॥ ೧೪೮ ॥**

**ಅರ್ಥ–** ದೃಷ್ಟದೇಹಿಂದ್ರಿಯಾದೀನಾಂ = ಕಣ್ಣಿಗೆ ಕಾಣುವ ದೇಹ ಇಂದ್ರಿಯಾದಿಗಳು ಚ = ಮತ್ತು, ಇಚ್ಛಾಪ್ರಯತ್ನಾದಿಕಸ್ಯ = ಇಚ್ಛಾಪ್ರಯತ್ನಾದಿಗಳು, ಉಭಯತ್ರಾಪಿ = ಇಬ್ಬರಲ್ಲೂ

ಸಾಮ್ಯೇನ = ಸಮಾನವಾದುದರಿಂದ, ಅದೃಷ್ಟಂ = ಅದೃಷ್ಟವು, ನಿಯಾಮಕಂ = ನಿಯಾಮಕವು, ಸ್ಯಾತ್ = ಆಗಬೇಕು.

**ಅನುವಾದ–** ಒಬ್ಬ ಧನಿಕ ಮತ್ತೊಬ್ಬ ದರಿದ್ರನಾಗಲು ಕಾರಣವೇನು? ದೃಷ್ಟವೋ ಅದೃಷ್ಟವೋ? ದೃಷ್ಟವಾದ ಶರೀರ ಇಂದ್ರಿಯ ಇಚ್ಛಾಪ್ರಯತ್ನಗಳು ಕಾರಣವೆನ್ನುವುದಾದರೆ ಅದು ಇಬ್ಬರಲ್ಲೂ ಸಮಾನವೇ. ಆದುದರಿಂದ ಅದು ಧನ ಇರುವುದಕ್ಕೂ ಇಲ್ಲದಿರುವುದಕ್ಕೂ ಕಾರಣವಾಗಲಾರದು. ಹಾಗಾದರೆ ಕಣ್ಣಿಗೆ ಕಾಣದ ಕಾರಣವನ್ನೇ ನಿಯಾಮಕವೆಂದು ಹೇಳಬೇಕು.

**ಭಾವವಿಲಾಸಿನೀ–** ದೃಷ್ಟಮೇವ ನಿಯಾಮಕಮಿತ್ಯೇತದ್ದೂಷಯತಿ – **ದೃಷ್ಟೇತಿ** ॥ ತಸ್ಮಾದದೃಷ್ಟಮೇವ ಶರಣಮಿತ್ಯಾಹ – **ಸ್ಯಾದಿತಿ** ॥ ೧೪೮ ॥

**ಅತೋ ಯತ್ಸದಸತ್ತ್ವಾಭ್ಯಾಂ ಧನ್ಯೇಕೋಽನ್ಯಸ್ತು ನಿರ್ಧನಃ ।**
**ಅದೃಷ್ಟಂ ಚ ತದೇಷ್ಟವ್ಯಂ ದೃಷ್ಟವತ್ಕಾರ್ಯಗೌರವಾತ್ ॥ ೧೪೯ ॥**

**ಅರ್ಥ–** ಅತಃ = ಆದ್ದರಿಂದ, ಯತ್ಸದಸತ್ತ್ವಾಭ್ಯಾಂ = ಯಾವ ಪುಣ್ಯಪಾಪಗಳ ಇರುವಿಕೆ ಇಲ್ಲದಿರುವಿಕೆಗಳಿಂದ ಏಕಃ = ಒಬ್ಬನು, ಧನೀ = ಸಿರಿವಂತನು, ಅನ್ಯಸ್ತು = ಮತ್ತೊಬ್ಬನಾದರೋ, ನಿರ್ಧನಃ = ಧನಹೀನನು ಆಗಿರುವನೋ, ಅದೃಷ್ಟಂ = ಕಣ್ಣಿಗೆ ಕಾಣದ, ತತ್ = ಆ ಪುಣ್ಯಪಾಪಗಳು, ಕಾರ್ಯಗೌರವಾತ್ = ಕಾರ್ಯದ ಘನತೆಯಿಂದಾಗಿ, ದೃಷ್ಟವತ್ = ಪ್ರತ್ಯಕ್ಷಸಿದ್ಧಸ್ಥಲದಲ್ಲಿ ಹೇಗೋ ಹಾಗೆ, ಏಷ್ಟವ್ಯಂ = ಒಪ್ಪಲ್ಪಡಬೇಕು.

**ಅನುವಾದ–** ಯಾವುದು ಇರುವುದರಿಂದ ಹಾಗು ಇಲ್ಲದಿರುವುದರಿಂದ ಒಬ್ಬನು ಧನಿಕನು ಮತ್ತೊಬ್ಬನು ನಿರ್ಧನನು ಆಗಿರುವನೋ ಆ ಅದೃಷ್ಟವಾದ ಪುಣ್ಯಪಾಪಗಳನ್ನು ಒಪ್ಪಬೇಕು. ಪ್ರತ್ಯಕ್ಷಸಿದ್ಧವಾದ ಸ್ಥಲದಲ್ಲಿ ಕಾರ್ಯವನ್ನು ನೋಡಿ ಕಾರಣವನ್ನು ನಿರ್ಣಯಿಸುವಂತೆ - ಪಾಪರಹಿತನಾದ ಪುಣ್ಯಾತ್ಮನು ಧನಿಕನು. ಪುಣ್ಯರಹಿತ ಪಾಪಾತ್ಮನು ನಿರ್ಧನನೆಂದು ತಿಳಿಯಬೇಕು.

**ಭಾವವಿಲಾಸಿನೀ–** ಯತ್ಸದಸತ್ತ್ವಾಭ್ಯಾಂ ಪುಣ್ಯಪಾಪಸದಸತ್ತ್ವಾಭ್ಯಾಮ್ । ತತ್ಪುಣ್ಯ-ಪಾಪರೂಪಮ್ ॥ ೧೪೯ ॥

ಅದೃಷ್ಟವನ್ನು ಸಾಧಿಸಿ ಅದಕ್ಕೆ ಆಶ್ರಯನಾಗಿ ದೇಹಭಿನ್ನನಾದ ಚೇತನನನ್ನು ಸಾಧಿಸುತ್ತಿದ್ದಾರೆ-

**ತದ್ಧೇತುಶುಭಕರ್ಮಾದೇರತ್ರಾದೃಷ್ಟಸ್ಯ ಸರ್ವಥಾ ।**
**ಕರಣಾಯಾನ್ಯದೇಹೇಷು ನಿತ್ಯೋಽನ್ಯೋಽಪ್ಯಸ್ತಿ ದೇಹಭೃತ್ ॥ ೧೫೦ ॥**

**ಅರ್ಥ–** ಅತ್ರ = ಈ ಜನ್ಮದಲ್ಲಿ, ಸರ್ವಥಾ = ನಿಶ್ಚಯವಾಗಿ, ಅದೃಷ್ಟಸ್ಯ = ಕಾಣದಿರುವ ತದ್ಧೇತುಶುಭಕರ್ಮಾದೇಃ = ಸಿರಿತನ ಬಡತನಗಳಿಗೆ ಕಾರಣವಾದ ಶುಭ ಅಶುಭ ಕರ್ಮಾದಿಗಳ, ಕರಣಾಯ = ಮಾಡುವಿಕೆಗೋಸ್ಕರ, ಅನ್ಯದೇಹೇಷು = ಜನ್ಮಾಂತರದ ದೇಹಗಳಲ್ಲಿ ನಿತ್ಯಃ = ನಿತ್ಯನಾದ, ಅನ್ಯಃ= ದೇಹಭಿನ್ನನಾದ, ದೇಹಭೃತ್ ಅಪಿ = ದೇಹಿಯಾದ ಆತ್ಮನೂ, ಅಸ್ತಿ = ಇದ್ದಾನೆ.

**ಅನುವಾದ–** ಸಿರಿತನ - ಬಡತನಗಳಿಗೆ ಪುಣ್ಯಪಾಪಗಳೆಂಬ ಕಣ್ಣಿಗೆ ಕಾಣದ ವಸ್ತುಗಳು ಕಾರಣವೆಂದಾದ ಮೇಲೆ ಆ ಪುಣ್ಯಪಾಪಗಳನ್ನು ಈ ಜನ್ಮದಲ್ಲಿ ಇವರು ಸರ್ವಥಾ ಮಾಡಿಲ್ಲವಾದುದರಿಂದ ಹಿಂದಿನ ಜನ್ಮದಲ್ಲಿ ಮಾಡಿದ್ದಾರೆನ್ನಬೇಕು. ಹಾಗಾದರೆ ದೇಹ ಭಿನ್ನನಾದ ನಿತ್ಯನಾದ ಅನೇಕದೇಹಗಳನ್ನು ಪಡೆಯುವ ಚೇತನನೊಬ್ಬ ನಿರುವನೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅದೃಷ್ಟಂ ಸಾಧಯಿತ್ವಾತದಾಶ್ರಯಂ ನಿತ್ಯಂ ದೇಹಭಿನ್ನಚೇತನಮಪಿ ಸಾಧಯತಿ **– ತದಿತಿ ॥** ಅತ್ರ ಏತಜ್ಜನ್ಮನಿ । ಅನ್ಯದೇಹೇಷು ಏತತ್ತುಲ್ಯಾನ್ಯದೇಹೇಷು । ಅನ್ಯೋ ದೇಹಾತ್ ॥ ೧೫೦ ॥

ಸಿರಿತನ ಬಡತನಗಳಿಗೆ ದೃಷ್ಟ ಕಾರಣವಿರದಿದ್ದರೂ ಅದೃಷ್ಟವಾದ ಕಾರಣವನ್ನೇಕೆ ಊಹಿಸಬೇಕು ನಿರ್ನಿಮಿತ್ತವಾಗಿಯೇ ಕಾರ್ಯವೇಕಿರಬಾರದು ಎಂಬ ಮಂದರ ಆಶಂಕೆಯನ್ನು ಪರಿಹರಿಸುತ್ತಿದ್ದಾರೆ -

ಕಾರ್ಯಸ್ಯ ನಿರ್ನಿಮಿತ್ತತ್ವಮುನ್ಮತ್ತೋ ವಕ್ತುಮರ್ಹತಿ ।
ತೃಪ್ತ್ಯರ್ಥಂ ಕೋ ನ ಭುಞ್ಜೀತ ಸುಖಾರ್ಥಂ ನ ಯತೇತ ಕಃ ॥ ೧೫೧ ॥

**ಅರ್ಥ–** ಕಾರ್ಯಸ್ಯ = ಕಾರ್ಯಕ್ಕೆ, ನಿರ್ನಿಮಿತ್ತತ್ವಂ = ನಿಷ್ಕಾರಣತ್ವವನ್ನು, ಉನ್ಮತ್ತಃ = ಹುಚ್ಚನು, ವಕ್ತುಂ = ಹೇಳಲು, ಅರ್ಹತಿ = ಅರ್ಹನಾಗುವನು, ಬುದ್ಧಿವಂತನಲ್ಲ, ತೃಪ್ತ್ಯರ್ಥಂ = ತೃಪ್ತಿಗಾಗಿ, ಕಃ = ಯಾರು, ನ ಭುಂಜೀತ = ಊಟ ಮಾಡುವುದಿಲ್ಲ? ಸುಖಾರ್ಥಂ = ಸುಖಕ್ಕಾಗಿ, ಕಃ = ಯಾರು? ನ ಯತೇತ = ಚಂದನ, ಪುಷ್ಪ ಹೆಣ್ಣು ಮುಂತಾದವನ್ನು ಪಡೆಯಲು ಪ್ರಯತ್ನ ಮಾಡುವುದಿಲ್ಲ?

**ಅನುವಾದ–** ಕಾರಣವಿಲ್ಲದೆ ಕಾರ್ಯವಾಗುವುದೆಂದು ಹುಚ್ಚ ಹೇಳಬಹುದು. ಪ್ರಜ್ಞಾವಂತ ಹಾಗೆ ಹೇಳಲಾರ. ತೃಪ್ತಿಯಾಗಬೇಕೆಂದು ಊಟ ಮಾಡುವುದಿಲ್ಲವೇ? ಸುಖಬೇಕೆಂದು ಸುಖಸಾಧನಗಳನ್ನು ಸಂಪಾದಿಸಲು ಪ್ರಯತ್ನಿಸುವುದಿಲ್ಲವೇ?

**ಭಾವವಿಲಾಸಿನೀ–** ನನು ದೃಷ್ಟಕಾರಣಾಭಾವೇಽಪ್ಯದೃಷ್ಟಂ ಕಾರಣಂ ಕುತಃ ಕಲ್ಪ್ಯತೇ ನಿರ್ನಿಮಿತ್ತಮೇವ ಕಾರ್ಯಂ ಕಿಂ ನ ಸ್ಯಾದಿತಿ ಮಂದಾಶಂಕಾಂ ಪರಿಹರತಿ **– ಕಾರ್ಯಸ್ಯೇತಿ ॥** ಉನ್ಮತ್ತ ಏವ ವಕ್ತುಮರ್ಹತಿ। ನತ್ವನ್ಯಃ । ಕಾರ್ಯಸ್ಯ ಸಕಾರಣಕತ್ವಂ ಸಾಧಯತಿ**–ತೃಪ್ತ್ಯರ್ಥಮಿತಿ ॥** ನ ಯತೇತ । ತತ್ಸಾಧನಸ್ರಕ್ಚನ್ದನಾದಾವಿತಿ ಶೇಷಃ ॥ ೧೫೧ ॥

**ವಿವರಣೆ**— ದೃಷ್ಟವಾದ ಕಾರಣವಿಲ್ಲೆಂದು ಅದೃಷ್ಟವಾದ ಕಾರಣವನ್ನೇಕೆ ಒಪ್ಪಬೇಕು? ಕಾರಣವಿಲ್ಲದೆ ಕಾರ್ಯವಿರಬಾರದೆ? ಎಂದು ದಡ್ಡನಿಗೆ ಬರುವ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ -

ಕಾರಣವಿಲ್ಲದೆ ಕಾರ್ಯವಾಗುವುದಾದರೆ ಭೋಜನವಿಲ್ಲದೆ ತೃಪ್ತಿಯಾಗಬೇಕಿತ್ತು. ಸುಖಸಾಧನಗಳಿಲ್ಲದೆ ಸುಖವಾಗಬೇಕಿತ್ತು ಎಂದು ಭಾವ.

ಶರೀರಾತಿರಿಕ್ತನಾದ ಜೀವನನ್ನು ಒಪ್ಪದೆ ಇದ್ದಲ್ಲಿ ಶರೀರದಲ್ಲಿ ಜೀವವಿಯೋಗ ರೂಪಮರಣವೇ ಉಪಪನ್ನವಾಗುವುದಿಲ್ಲ. ಆದುದರಿಂದಲೂ ದೇಹಾತಿರಿಕ್ತನಾದ ಜೀವನನ್ನು ಒಪ್ಪಬೇಕೆಂದು ಹೇಳುತ್ತಿದ್ದಾರೆ -

**ಅಪಿಚಾವ್ಯಂಗಕುಣಪೇ ಮರಣಂ ನಾಮ ಕಿಂ ತವ ।**
**ಪೂರ್ವದೃಷ್ಟಾಂಗನೇತ್ರಾದೇಃ ಪಶ್ಚಾದಪಿ ಚ ದರ್ಶನಾತ್ ॥ ೧೫೨ ॥**

**ಅರ್ಥ**— ಅಪಿ ಚ = ಮತ್ತೂ ಕೂಡ, ಅವ್ಯಂಗಕುಣಪೇ = ವಿಕಲಾಂಗವಾಗದ ಶವದಲ್ಲಿ, ಪಶ್ಚಾದಪಿ ಚ = ಮರಣೋತ್ತರದಲ್ಲಿಯೂ, ಪೂರ್ವದೃಷ್ಟಾಂಗನೇತ್ರಾದೇಃ = ಮರಣ ಪೂರ್ವದಲ್ಲಿ ಕಂಡ ಅವಯವಗಳು, ಕಣ್ಣು ಮುಂತಾದ ಇಂದ್ರಿಯಗೋಲಕಗಳ ದರ್ಶನಾತ್ = ದರ್ಶನವಾಗುತ್ತಿರುವುದರಿಂದ, ತವ = (ಮತೇ) ನಿನ್ನ ಮತದಲ್ಲಿ, ಮರಣಂ ನಾಮ ಕಿಂ = ಮರಣವೆಂದರೇನು?

**ಅನುವಾದ**— ಶರೀರವೇ ಆತ್ಮನೆನ್ನುವ ನಿನ್ನ ಮತದಲ್ಲಿ ಮರಣವೆಂದರೇನು? ಯಾವುದೇ ಅಂಗಗಳು ವಿಕಲವಾಗದಿರುವ ಶವದಲ್ಲಿ ಬದುಕಿರುವಾಗ ಕಂಡಿದ್ದ ಎಲ್ಲಾ ಅವಯವಗಳೂ ಇವೆ. ಕಣ್ಣು ಮುಂತಾದ ಇಂದ್ರಿಯಗೋಲಕಗಳೆಲ್ಲವೂ ಇವೆ. ಅತೀಂದ್ರಿಯವಾದ ಇಂದ್ರಿಯಗಳನ್ನು ನೀನು ಒಪ್ಪಿಲ್ಲ. ಜೀವನ ಹಾಗೂ ಮರಣ ಎರಡೂ ಸಂದರ್ಭಗಳಲ್ಲಿ ದೇಹದ ಎಲ್ಲಾ ಅವಯವಾದಿಗಳೂ ಹಾಗೇಯೇ ಇರುವಾಗ ಶವದಲ್ಲಿ ಮರಣವಾಗಿದೆ ಎಂದರೇನು?

**ಭಾವವಿಲಾಸಿನೀ**— ಶರೀರೇ ಜೀವವಿಯೋಗಲಕ್ಷಣಮರಣಾನ್ಯಥಾನುಪಪತ್ತ್ಯಾಪಿ ಶರೀರಾತಿರಿಕ್ತೋ ಜೀವಃ ಕಲ್ಪನೀಯ ಇತ್ಯಾಹ – **ಅಪಿಚೇತಿ** ॥ ಅವ್ಯಂಗೇತ್ಯನೇನ ಅವಯವಚ್ಛೇದಿವಿಶೇಷಾಭಾವಂ ದ್ಯೋತಯತಿ । ದ್ಯೋತಿತಮರ್ಥಂ ವಿಶದಯತಿ–**ಪೂರ್ವೇತಿ** ॥೧೫೨॥

**ವಿವರಣೆ**— ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ಪ್ರಥಮಪಾದದ ಮೂರನೆಯ ಶಾಸ್ತ್ರಯೋನಿತ್ವಾಧಿಕರಣದ ಭಾಷ್ಯದಲ್ಲಿ 'ಮೃತೇ ಕರ್ಮನಿವೃತ್ತಿಶ್ಚ ಪ್ರಮಾಣಮಿತಿ ನಿಶ್ಚಯಃ' ಇತಿ ಮೋಕ್ಷ ಧರ್ಮವಚನಾತ್ ನ ನಾಸ್ತಿಕ್ಯವಾದೋ ಯುಜ್ಯತೇ' ಎಂಬಲ್ಲಿ ತಿಳಿಸಿರುವ ಪ್ರಮೇಯವನ್ನು ಇಲ್ಲಿ ಗುರುಗಳು ತಿಳಿಸುತ್ತಿದ್ದಾರೆ.

ಮರಣದಿಂದ ಶರೀರದಲ್ಲಿ ಹಿತಾಹಿತಪ್ರಾಪ್ತಿಪರಿಹಾರಾನುಕೂಲವ್ಯಾಪಾರ ರೂಪವಾದ ಕ್ರಿಯಾ ನಿವೃತ್ತಿಯಾಗುವುದು. ಬದುಕಿದ್ದಾಗ ಈ ಕ್ರಿಯಾನಿವೃತ್ತಿ ಯಾಗುವುದಿಲ್ಲ. ಅಲ್ಲದೆ ನಾವು ಬಯಸಿದಾಗ ಆಗುವುದೂ ಇಲ್ಲ. ಆದುದರಿಂದ ದೇಹಾತಿರಿಕ್ತನಾದ ಜೀವನ ವಿಯೋಗವೇ ಮರಣವೆಂದೊಪ್ಪಬೇಕು. ದೇಹಭಿನ್ನನಾದ ಜೀವನನ್ನು ಒಪ್ಪಿದ ಮೇಲೆ ನಾಸ್ತಿಕ್ಯವಾದ ಸರಿಯಲ್ಲ. ಜೀವನ ನಿಯಾಮಕನಾದ ದೇವರನ್ನು ಒಪ್ಪಬೇಕು. ದೇಹಾತಿರಿಕ್ತಜೀವನನ್ನು ಸಾಧಿಸುವ ಯುಕ್ತಿಯನ್ನು ಪ್ರಮಾಣವೆಂದೊಪ್ಪಬೇಕಲ್ಲವೇ?

ಉಸುರಿನ ಅಭಾವವೇ ಮರಣ ಎಂದು ಶಂಕಿಸಿದರೆ ಹೇಳುತ್ತಿದ್ದಾರೆ -

**ಸ್ಪರ್ಶಾನುಮೇಯನೀರೂಪಶ್ವಾಸೇನಾಶ್ವಾಸವಾನ್ ಭವಾನ್ ।**
**ಮಕ್ಷಿಕಾಮತ್ಕುಣಾದೌ ತೇ ಯಸ್ಯ ದೃಶ್ಯಾ ಸ್ಥಿತಿಶ್ಚ ನ ॥ ೧೫೩ ॥**

**ಅರ್ಥ–** ಸ್ಪರ್ಶಾನುಮೇಯನೀರೂಪಶ್ವಾಸೇ = ಸ್ಪರ್ಶದಿಂದ ಊಹಿಸಬೇಕಾದ, ರೂಪವಿಲ್ಲದ (ಆದ್ದರಿಂದ ಕಣ್ಣಿಗೂ ಕಾಣದ) ಶ್ವಾಸದ ವಿಷಯದಲ್ಲಿ ಭವಾನ್ = ನೀನು, ನ ಆಶ್ವಾಸವಾನ್ = ವಿಶ್ವಾಸವುಳ್ಳವನಲ್ಲ. ಮಕ್ಷಿಕಾಮತ್ಕುಣಾದೌ = ಸೊಳ್ಳೆ, ತಗಣೆ ಮುಂತಾದ ಕ್ಷುದ್ರ ಜಂತುಗಳಲ್ಲಿ, ತೇ = ನಿನಗೆ, ಯಸ್ಯ = ಯಾವ ಶ್ವಾಸಕ್ಕೆ, ದೃಶ್ಯಾ= ಕಣ್ಣಿಗೆ ಕಾಣುವಂತಹ, ಸ್ಥಿತಿಃ ಚ = ಸ್ಥಿತಿಯೂ ಕೂಡ, ನ = ಇಲ್ಲ.

**ಅನುವಾದ–** ಅನುಮಾನ ಪ್ರಮಾಣವನ್ನು ಒಪ್ಪದೇ ಇರುವ ನಿನ್ನ ಮತದಲ್ಲಿ ರೂಪರಹಿತವಾದ ಸ್ಪರ್ಶದಿಂದ ಅನುಮೇಯವಾದ ಶ್ವಾಸವಾಯುಸ್ವರೂಪವೇ ಇಲ್ಲ. ಆದುದರಿಂದ ಶ್ವಾಸಾಭಾವವೇ ಮರಣ ಎಂದು ಹೇಳಲು ಬರುವುದಿಲ್ಲ.

ಸ್ಥೂಲವಾದ ನಮ್ಮ ಶರೀರದಲ್ಲಿ ಶ್ವಾಸವಾಯುವಿನ ಪ್ರತ್ಯಕ್ಷ ಬರುವುದರಿಂದ ಅದು ಪ್ರತ್ಯಕ್ಷವೇ ರೂಪಾಭಾವದಿಂದ ಅನುಮೇಯವೇ ಆಗಿರಲಿ ಆದರೆ ಸೂಕ್ಷ್ಮಶರೀರವಿರುವಂತಹ ಸೊಳ್ಳೆ ತಗಣೆ ಮುಂತಾದ ಚೇತನಗಳಲ್ಲಿ ಅವುಗಳ ಶ್ವಾಸ ಅತ್ಯಲ್ಪವಾದುದರಿಂದ ಅವುಗಳ ಸ್ಪರ್ಶವೂ ಪ್ರತ್ಯಕ್ಷ ಸಿದ್ಧವಾಗುವುದಿಲ್ಲ. ಅಲ್ಲಿ ಶ್ವಾಸಾಭಾವರೂಪ ಮರಣವನ್ನು ನಿನಗೆ ಹೇಳಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಶ್ವಾಸಾಭಾವ ಏವ ಮರಣಮಿತ್ಯಾಶಂಕ್ಯಾಹ – **ಸ್ಪರ್ಶೇತಿ** ॥ ಸ್ಪರ್ಶಾನು-ಮೇಯೇತ್ಯನೇನಾನುಮಾನಪ್ರಾಮಾಣ್ಯಾನಂಗೀಕಾರಾತ್ತನ್ಮತೇ ದೌರ್ಘಟ್ಯಂ ದ್ಯೋತಯತಿ । ನೀರೂಪೇತ್ಯನೇನಾಪ್ರತ್ಯಕ್ಷತ್ವಂ ಚ ದ್ಯೋತಯತಿ । ಭವತು ವಾ ಸ್ಥೂಲಾಸ್ಮದಾದಿಶರೀರೇ ಶ್ವಾಸಾ-ನುಮಾನಂ ತತ್ಪ್ರತ್ಯಕ್ಷತ್ವಂ ವಾ ಶ್ವಾಸಗತಸ್ಪರ್ಶಸ್ಯ ತತ್ರ ಪ್ರತ್ಯಕ್ಷತ್ವಾತ್ । ಸೂಕ್ಷ್ಮಶರೀರವಚ್ಚೇತನೇಷು ಶ್ವಾಸಸ್ಯಾತ್ಯಲ್ಪತ್ವೇನ ತತ್ಸ್ಪರ್ಶಸ್ಯಾಪ್ರತ್ಯಕ್ಷತ್ವಾತ್ ತತ್ರ ಶ್ವಾಸಾಭಾವಲಕ್ಷಣಮೃತಿಸ್ತ್ವಯಾ ವಕ್ತುಂ ನ ಶಕ್ಯೇತಿ ಭಾವೇನಾಹ – **ಮಕ್ಷಿಕೇತಿ** ॥ ಯಸ್ಯ ಶ್ವಾಸಸ್ಯ ॥ ೧೫೩ ॥

**ತಸ್ಮಾದ್ದೇಹಾನ್ಯಜೀವಾತ್ಮಾ ತತ್ರ ನಾಸ್ತೀತಿ ಸಾ ಮೃತಿಃ ।**
**ಇತ್ಯೇವ ಸರ್ವಥಾ ವಾಚ್ಯಂ ನ ಚೇನ್ಮೃತ್ಯಾಮೃತಿಸ್ತವ ॥ ೧೫೪ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ತತ್ರ = ಆ ಮೃತ ಶರೀರದಲ್ಲಿ, ದೇಹಾನ್ಯಜೀವಾತ್ಮಾ = ದೇಹಕ್ಕಿಂತ ಬೇರೆಯಾದ ಜೀವಾತ್ಮನು, ನಾಸ್ತಿ ಇತಿ = ಇಲ್ಲವೆಂಬ ಕಾರಣದಿಂದ, ಸಾ = ಅದು, ಮೃತಿಃ = ಮರಣವು, ಇತಿ ಏವ = ಹೀಗೆ ಸರ್ವಥಾ= ನಿಶ್ಚಿತವಾಗಿ, ವಾಚ್ಯಂ = ಹೇಳಬೇಕು, ನ ಚೇತ್ = ಇಲ್ಲದಿದ್ದರೆ, ಆತ್ಮವಿಯೋಗವೇ ಮರಣ ಎಂದು ಹೇಳದಿದ್ದರೆ, ತವ = ನಿನ್ನ ಮತದಲ್ಲಿ, ಮೃತ್ಯಾಃ = ಮರಣಕ್ಕೇ, ಮೃತಿಃ = ಮರಣವಾದೀತು. ಅಂದರೆ ಮರಣವೇ ಇಲ್ಲವೆಂದಾದೀತು ಎಂದು ಅಭಿಪ್ರಾಯ. ಅಥವಾ ಮೃತ್ಯಾ =ಮರಣವನ್ನು ಹೇಗೆ ನಿರೂಪಿಸಬೇಕೆಂಬ ಮರಣದ ಚಿಂತೆಯಿಂದ ತವ ಏವ = ನಿನಗೇ, ಮೃತಿಃ = ಮರಣವು ಉಂಟಾದೀತು.

**ಅನುವಾದ– ಆದ್ದರಿಂದ ದೇಹಭಿನ್ನನಾದ ಜೀವಾತ್ಮನು ಅಲ್ಲಿ ಇಲ್ಲದೆ ಇರುವುದರಿಂದಲೇ ಅದನ್ನು ಮರಣವೆಂದು ನೀನೂ ಸಹ ಅವಶ್ಯಕವಾಗಿ ಹೇಳಲೇ ಬೇಕು. ಇಲ್ಲದಿದ್ದರೆ ಮರಣವನ್ನು ನಿರೂಪಿಸಲು ಸಾಧ್ಯವಾಗದೇ ಆ ಚಿಂತೆಯಿಂದ ನಿನಗೇ ಮರಣವು ಉಂಟಾದೀತು.**

**ಭಾವವಿಲಾಸಿನೀ–** ತಸ್ಮಾಜ್ಜೀವವಿಯೋಗ ಏವ ಮರಣಮಿತ್ಯಾಹ – **ತಸ್ಮಾದಿತಿ** ॥ ಮೃತ್ಯಾ ಮೃತಿಃ ಮೃತ್ಯಭಾವಪ್ರಸಂಗ ಇತಿ ಭಾವಃ । ಮೃತ್ಯಾ ಮೃತಿಃ ಕಥಂ ವಕ್ತವ್ಯೇತಿ ಚಿಂತಯಾ ತವೈವ ಮೃತಿಸ್ಸ್ಯಾದಿತಿ ಚ ॥ ೧೫೪ ॥

**ವಿವರಣೆ–** ದೇಹವೇ ಆತ್ಮವೆಂದರೆ ಮರಣದ ಸ್ವರೂಪವನ್ನು ನಿರೂಪಿಸಲಾಗುವುದಿಲ್ಲ. ಮೃತ ಶರೀರದಲ್ಲಿ ಅದು ಬದುಕಿದ್ದಾಗ ಇದ್ದ ಎಲ್ಲ ಅವಯವಗಳೂ ಮೃತಶರೀರದಲ್ಲಿಯೂ ಇರುವಾಗ ಮೃತದೇಹ ಎಂದು ವ್ಯವಹರಿಸುವುದು ಹೇಗೆ ! ಜೀವಸಂಬಂಧವಿಲ್ಲದಿರುವುದರಿಂದ ಮೃತದೇಹದಲ್ಲಿ ಹಿತ-ಅಹಿತ-ಪ್ರಾಪ್ತಿ ಪರಿಹಾರ ಇಚ್ಛಾಪೂರ್ವಕ ವ್ಯಾಪಾರವಿರುವುದಿಲ್ಲ. ಬದುಕಿನ ದೇಹದಲ್ಲಿ ಅಂಥ ವ್ಯಾಪಾರವಿರುತ್ತದೆ. ಆಗಲೂ ನಮ್ಮ ಇಚ್ಛೆಯಂತಾಗುವುದಿಲ್ಲ.

ಆದ್ದರಿಂದ ಜೀವನ ಸಂಬಂಧ ತಪ್ಪಿದ್ದರಿಂದಲೇ ದೇಹಮರಣವಾಗಿದೆ ಎನ್ನಬೇಕು.

ಜೀವ ಸಂಬಂಧ ನಿವೃತ್ತಿಯನ್ನು ಹೇಳದೆ ಜಡವಸ್ತುವಿನ ಯೋಗ ತಪ್ಪಿದ್ದರಿಂದಲೇ ಮರಣವೆಂದು ಹೇಳುತ್ತೇವೆ ಎಂದರೆ ಅದು ಸಾಧ್ಯವಿಲ್ಲ.

ಯಾವ ಜಡವಸ್ತುವಿನ ವಿಯೋಗವನ್ನು ಮರಣ ಎನ್ನುತ್ತೀರಿ? ಇಂದ್ರಿಯ ರೂಪ ಅಂಗಗಳ ವಿಯೋಗವನ್ನೋ ಅಥವಾ ಶ್ವಾಸವಾಯುವಿನ ವಿಯೋಗವನ್ನೋ? ಮೊದಲ

ಪಕ್ಷದಲ್ಲಿಯೂ ಇಂದ್ರಿಯಶಬ್ದದಿಂದ ಅತೀಂದ್ರಿಯಗಳಾದ ಇಂದ್ರಿಯಗಳನ್ನು ಭಾವಿಸಿರುವಿರೋ, ಇಂದ್ರಿಯಗೋಲಕಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅವುಗಳ ವಿಯೋಗವು ಮರಣ ಎನ್ನುವಿರೋ?

ಶ್ವಾಸವಾಯುವಿನ ವಿಯೋಗ ಎಂಬ ಎರಡನೇ ಪಕ್ಷದಲ್ಲಿಯೂ ಬಹಿಃಶ್ವಾಸವೋ, ಅಂತಃಶ್ವಾಸವೋ? ಎಂದು ವಿಕಲ್ಪಗಳು.

ಅತೀಂದ್ರಿಯಗಳಾದ ಇಂದ್ರಿಯಗಳನ್ನು ನೀವು ಒಪ್ಪಿಲ್ಲ. ಇಂದ್ರಿಯಗೋಲಕಗಳ ನಿವೃತ್ತಿಯೇ ಮರಣವೆಂದರೆ ಮೃತಶರೀರದಲ್ಲಿಯೂ ಇಂದ್ರಿಯಗೋಲಕಗಳೂ ಹಾಗೇ ಇರುತ್ತವೆ. ನಿವೃತ್ತಿಯಾಗಿಲ್ಲ. ಅಂದಮೇಲೆ ಮರಣದ ಸ್ವರೂಪವನ್ನು ವಿವರಿಸಲು ಸಾಧ್ಯವಿಲ್ಲ.

ಶ್ವಾಸಾಭಾವರೂಪಮರಣವನ್ನೂ ಹೇಳಲು ಸಾಧ್ಯವಿಲ್ಲ. ಶ್ವಾಸವಾಯು ರೂಪ ರಹಿತವಾದುದರಿಂದ ಕಣ್ಣಾರೆ ಕಾಣುವುದಿಲ್ಲ. ನಮಗಾಗುವ ಸ್ಪರ್ಶದಿಂದ ಶ್ವಾಸವಾಯುವನ್ನು ಊಹಿಸಿಕೊಳ್ಳಬೇಕು ಯುಕ್ತಿಯಿಂದ. ಯುಕ್ತಿಯನ್ನು ಪ್ರಮಾಣವೆಂದು ಒಪ್ಪಿಲ್ಲದ ನಿನ್ನ ಮತದಲ್ಲಿ ಯುಕ್ತಿಸಿದ್ಧವಾಯುಸ್ವರೂಪವೇ ಸಿದ್ಧವಾಗುವುದಿಲ್ಲ.

ಅಲ್ಲದೇ ಸೊಳ್ಳೆ-ತಿಗಣೆ ಮುಂತಾದ ಸೂಕ್ಷ್ಮಶರೀರದ ಚೇತನಗಳಲ್ಲಿ ಶ್ವಾಸವಾಯುವಿನ ಸ್ಪರ್ಶವೂ ಪ್ರತ್ಯಕ್ಷಸಿದ್ಧವಿಲ್ಲ. ಆದ್ದರಿಂದ ಶ್ವಾಸಾಭಾವವನ್ನು ಹೇಳಲೂ ಬರುವುದಿಲ್ಲ.

ಹೀಗೆ ಮರಣದ ಸ್ವರೂಪವನ್ನು ನಿರೂಪಿಸಲಾಗದುದನ್ನು ನಿನ್ನ ಮತದಲ್ಲಿ ಮರಣಕ್ಕೇ ಮರಣ ಬಂದಂತಾಯಿತು! ಮರಣವನ್ನು ನಿರೂಪಿಸುವುದು ಹೇಗೆಂಬ ಚಿಂತೆಯಿಂದ ನಿನಗೇ ಮರಣ ಬಂದೀತು! ಎಂದು ಶ್ರೀವಾದಿರಾಜರು ಉಪಹಾಸ ಮಾಡುತ್ತಿದ್ದಾರೆ-

**ಅತೋ ಯೋಗವಿಶೇಷೇಣ ಯಯಾ ತಾಮ್ಬೂಲರಕ್ತಿಮಾ ।**
**ತಥಾ ಯೋಗವಿಶೇಷೇಣ ಜಡಸ್ಯೈವ ಪ್ರಮಾತೃತಾ ॥**
**ಇತಿ ಯೋ ವಕ್ತಿ ತಸ್ಯಾಪಿ ಕುಣಪೋಽಭಣದುತ್ತರಮ್ ॥ ೧೫೫ ॥**

**ಅರ್ಥ–** ಅತಃ = ಆದುದರಿಂದ, ಯೋಗವಿಶೇಷೇಣ = ಎಲೆ ಅಡಿಕೆ ಸುಣ್ಣಗಳ ವಿಶೇಷವಾದ ಸಂಯೋಜನೆಯಿಂದ, ಯಥಾ = ಹೇಗೆ, ತಾಂಬೂಲರಕ್ತಿಮಾ = ತಾಂಬೂಲದಲ್ಲಿ ಕೆಂಪು ಬಣ್ಣ ಉಂಟಾಗುವುದೋ, ತಥಾ = ಹಾಗೆ, ಯೋಗವಿಶೇಷೇಣ = ಪೃಥಿವೀ ಅಪ್ ತೇಜಸ್ ಈ ಮೂರು ಭೂತದಾರ್ಥಗಳ ಸಂಯೋಜನೆಯ ವಿಶೇಷದಿಂದ, ಜಡಸ್ಯೈವ = ಜಡಶರೀರಕ್ಕೇ, ಪ್ರಮಾತೃತಾ = ಪ್ರಮಾತೃತ್ವವು ಉಂಟಾಗುತ್ತದೆ, ಇತಿ = ಎಂದು, ಯಃ = ಯಾವ ಚಾರ್ವಾಕನು, ವಕ್ತಿ = ಹೇಳುವನೋ, ತಸ್ಯಾಪಿ = ಅವನಿಗೂ ಸಹ, ಕುಣಪಃ = ಶವವು, ಉತ್ತರಂ = ಉತ್ತರವನ್ನು, ಅಭಣತ್ = ಹೇಳಿತು.

**ತಸ್ಮಾದ್ದೇಹಾನ್ಯಜೀವಾತ್ಮಾ ತತ್ರ ನಾಸ್ತೀತಿ ಸಾ ಮೃತಿಃ ।**
**ಇತ್ಯೇವ ಸರ್ವಥಾ ವಾಚ್ಯಂ ನ ಚೇನ್ಮೃತ್ಯಾಮೃತಿಸ್ತವ ॥ ೧೫೪ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ತತ್ರ = ಆ ಮೃತ ಶರೀರದಲ್ಲಿ, ದೇಹಾನ್ಯಜೀವಾತ್ಮಾ = ದೇಹಕ್ಕಿಂತ ಬೇರೆಯಾದ ಜೀವಾತ್ಮನು, ನಾಸ್ತಿ ಇತಿ = ಇಲ್ಲವೆಂಬ ಕಾರಣದಿಂದ, ಸಾ = ಅದು, ಮೃತಿಃ = ಮರಣವು, ಇತಿ ಏವ = ಹೀಗೆ ಸರ್ವಥಾ= ನಿಶ್ಚಿತವಾಗಿ, ವಾಚ್ಯಂ = ಹೇಳಬೇಕು, ನ ಚೇತ್ = ಇಲ್ಲದಿದ್ದರೆ, ಆತ್ಮವಿಯೋಗವೇ ಮರಣ ಎಂದು ಹೇಳದಿದ್ದರೆ, ತವ = ನಿನ್ನ ಮತದಲ್ಲಿ ಮೃತ್ಯಾಃ = ಮರಣಕ್ಕೇ, ಮೃತಿಃ = ಮರಣವಾದೀತು. ಅಂದರೆ ಮರಣವೇ ಇಲ್ಲವೆಂದಾದೀತು ಎಂದು ಅಭಿಪ್ರಾಯ. ಅಥವಾ ಮೃತ್ಯಾ =ಮರಣವನ್ನು ಹೇಗೆ ನಿರೂಪಿಸಬೇಕೆಂಬ ಮರಣದ ಚಿಂತೆಯಿಂದ ತವ ಏವ = ನಿನಗೇ, ಮೃತಿಃ = ಮರಣವು ಉಂಟಾದೀತು.

**ಅನುವಾದ– ಆದ್ದರಿಂದ ದೇಹಭಿನ್ನನಾದ ಜೀವಾತ್ಮನು ಅಲ್ಲಿ ಇಲ್ಲದೆ ಇರುವುದರಿಂದಲೇ ಅದನ್ನು ಮರಣವೆಂದು ನೀನೂ ಸಹ ಅವಶ್ಯಕವಾಗಿ ಹೇಳಲೇ ಬೇಕು. ಇಲ್ಲದಿದ್ದರೆ ಮರಣವನ್ನು ನಿರೂಪಿಸಲು ಸಾಧ್ಯವಾಗದೇ ಆ ಚಿಂತೆಯಿಂದ ನಿನಗೇ ಮರಣವು ಉಂಟಾದೀತು.**

**ಭಾವವಿಲಾಸಿನೀ–** ತಸ್ಮಾಜ್ಜೀವವಿಯೋಗ ಏವ ಮರಣಮಿತ್ಯಾಹ – **ತಸ್ಮಾದಿತಿ** ॥ ಮೃತ್ಯಾ ಮೃತಿಃ ಮೃತ್ಯಭಾವಪ್ರಸಂಗ ಇತಿ ಭಾವಃ । ಮೃತ್ಯಾ ಮೃತಿಃ ಕಥಂ ವಕ್ತವ್ಯೇತಿ ಚಿಂತಯಾ ತವೈವ ಮೃತಿಸ್ಸ್ಯಾದಿತಿ ಚ ॥ ೧೫೪ ॥

**ವಿವರಣೆ–** ದೇಹವೇ ಆತ್ಮವೆಂದರೆ ಮರಣದ ಸ್ವರೂಪವನ್ನು ನಿರೂಪಿಸಲಾಗುವುದಿಲ್ಲ. ಮೃತ ಶರೀರದಲ್ಲಿ ಅದು ಬದುಕಿದ್ದಾಗ ಇದ್ದ ಎಲ್ಲ ಅವಯವಗಳೂ ಮೃತಶರೀರದಲ್ಲಿಯೂ ಇರುವಾಗ ಮೃತದೇಹ ಎಂದು ವ್ಯವಹರಿಸುವುದು ಹೇಗೆ ! ಜೀವಸಂಬಂಧವಿಲ್ಲದಿರುವುದರಿಂದ ಮೃತದೇಹದಲ್ಲಿ ಹಿತ-ಅಹಿತ-ಪ್ರಾಪ್ತಿ ಪರಿಹಾರ ಇಚ್ಛಾಪೂರ್ವಕ ವ್ಯಾಪಾರವಿರುವುದಿಲ್ಲ. ಬದುಕಿನ ದೇಹದಲ್ಲಿ ಅಂಥ ವ್ಯಾಪಾರವಿರುತ್ತದೆ. ಆಗಲೂ ನಮ್ಮ ಇಚ್ಛೆಯಂತಾಗುವುದಿಲ್ಲ.

ಆದ್ದರಿಂದ ಜೀವನ ಸಂಬಂಧ ತಪ್ಪಿದ್ದರಿಂದಲೇ ದೇಹಮರಣವಾಗಿದೆ ಎನ್ನಬೇಕು.

ಜೀವ ಸಂಬಂಧ ನಿವೃತ್ತಿಯನ್ನು ಹೇಳದೆ ಜಡವಸ್ತುವಿನ ಯೋಗ ತಪ್ಪಿದ್ದರಿಂದಲೇ ಮರಣವೆಂದು ಹೇಳುತ್ತೇವೆ ಎಂದರೆ ಅದು ಸಾಧ್ಯವಿಲ್ಲ.

ಯಾವ ಜಡವಸ್ತುವಿನ ವಿಯೋಗವನ್ನು ಮರಣ ಎನ್ನುತ್ತೀರಿ? ಇಂದ್ರಿಯ ರೂಪ ಅಂಗಗಳ ವಿಯೋಗವನ್ನೋ ಅಥವಾ ಶ್ವಾಸವಾಯುವಿನ ವಿಯೋಗವನ್ನೋ? ಮೊದಲ

ಪಕ್ಷದಲ್ಲಿಯೂ ಇಂದ್ರಿಯಶಬ್ದದಿಂದ ಅತೀಂದ್ರಿಯಗಳಾದ ಇಂದ್ರಿಯಗಳನ್ನು ಭಾವಿಸಿರುವಿರೋ, ಇಂದ್ರಿಯಗೋಲಕಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅವುಗಳ ವಿಯೋಗವು ಮರಣ ಎನ್ನುವಿರೋ?

ಶ್ವಾಸವಾಯುವಿನ ವಿಯೋಗ ಎಂಬ ಎರಡನೇ ಪಕ್ಷದಲ್ಲಿಯೂ ಬಹಿಃಶ್ವಾಸವೋ, ಅಂತಃಶ್ವಾಸವೋ? ಎಂದು ವಿಕಲ್ಪಗಳು.

ಅತೀಂದ್ರಿಯಗಳಾದ ಇಂದ್ರಿಯಗಳನ್ನು ನೀವು ಒಪ್ಪಿಲ್ಲ. ಇಂದ್ರಿಯಗೋಲಕಗಳ ನಿವೃತ್ತಿಯೇ ಮರಣವೆಂದರೆ ಮೃತಶರೀರದಲ್ಲಿಯೂ ಇಂದ್ರಿಯಗೋಲಕಗಳೂ ಹಾಗೇ ಇರುತ್ತವೆ. ನಿವೃತ್ತಿಯಾಗಿಲ್ಲ. ಅಂದಮೇಲೆ ಮರಣದ ಸ್ವರೂಪವನ್ನು ವಿವರಿಸಲು ಸಾಧ್ಯವಿಲ್ಲ.

ಶ್ವಾಸಾಭಾವರೂಪಮರಣವನ್ನೂ ಹೇಳಲು ಸಾಧ್ಯವಿಲ್ಲ. ಶ್ವಾಸವಾಯು ರೂಪ ರಹಿತವಾದುದರಿಂದ ಕಣ್ಣಾರೆ ಕಾಣುವುದಿಲ್ಲ. ನಮಗಾಗುವ ಸ್ಪರ್ಶದಿಂದ ಶ್ವಾಸವಾಯುವನ್ನು ಊಹಿಸಿಕೊಳ್ಳಬೇಕು ಯುಕ್ತಿಯಿಂದ. ಯುಕ್ತಿಯನ್ನು ಪ್ರಮಾಣವೆಂದು ಒಪ್ಪಿಲ್ಲದ ನಿನ್ನ ಮತದಲ್ಲಿ ಯುಕ್ತಿಸಿದ್ಧವಾಯುಸ್ವರೂಪವೇ ಸಿದ್ಧವಾಗುವುದಿಲ್ಲ.

ಅಲ್ಲದೇ ಸೊಳ್ಳೆ-ತಿಗಣೆ ಮುಂತಾಧ ಸೂಕ್ಷ್ಮಶರೀರದ ಚೇತನಗಳಲ್ಲಿ ಶ್ವಾಸವಾಯುವಿನ ಸ್ಪರ್ಶವೂ ಪ್ರತ್ಯಕ್ಷಸಿದ್ಧವಿಲ್ಲ. ಆದ್ದರಿಂದ ಶ್ವಾಸಾಭಾವವನ್ನು ಹೇಳಲೂ ಬರುವುದಿಲ್ಲ. ಹೀಗೆ ಮರಣದ ಸ್ವರೂಪವನ್ನು ನಿರೂಪಿಸಲಾಗದುದನ್ನು ನಿನ್ನ ಮತದಲ್ಲಿ ಮರಣಕ್ಕೇ ಮರಣ ಬಂದಂತಾಯಿತು! ಮರಣವನ್ನು ನಿರೂಪಿಸುವುದು ಹೇಗೆಂಬ ಚಿಂತೆಯಿಂದ ನಿನಗೇ ಮರಣ ಬಂದೀತು! ಎಂದು ಶ್ರೀವಾದಿರಾಜರು ಉಪಹಾಸ ಮಾಡುತ್ತಿದ್ದಾರೆ-

**ಅತೋ ಯೋಗವಿಶೇಷೇಣ ಯಯಾ ತಾಮ್ಬೂಲರಕ್ತಿಮಾ ।**
**ತಥಾ ಯೋಗವಿಶೇಷೇಣ ಜಡಸ್ಯೈವ ಪ್ರಮಾತೃತಾ ॥**
**ಇತಿ ಯೋ ವಕ್ತಿ ತಸ್ಯಾಪಿ ಕುಣಪೋಽಭಣದುತ್ತರಮ್ ॥ ೧೫೫ ॥**

**ಅರ್ಥ–** ಅತಃ = ಆದುದರಿಂದ, ಯೋಗವಿಶೇಷೇಣ = ಎಲೆ ಅಡಿಕೆ ಸುಣ್ಣಗಳ ವಿಶೇಷವಾದ ಸಂಯೋಜನೆಯಿಂದ, ಯಥಾ = ಹೇಗೆ, ತಾಂಬೂಲರಕ್ತಿಮಾ = ತಾಂಬೂಲದಲ್ಲಿ ಕೆಂಪು ಬಣ್ಣ ಉಂಟಾಗುವುದೋ, ತಥಾ = ಹಾಗೆ, ಯೋಗವಿಶೇಷೇಣ = ಪೃಥಿವೀ ಅಪ್ ತೇಜಸ್ ಈ ಮೂರು ಭೂತದಾರ್ಥಗಳ ಸಂಯೋಜನೆಯ ವಿಶೇಷದಿಂದ, ಜಡಸ್ಯೈವ = ಜಡಶರೀರಕ್ಕೇ, ಪ್ರಮಾತೃತಾ = ಪ್ರಮಾತೃತ್ವವು ಉಂಟಾಗುತ್ತದೆ, ಇತಿ = ಎಂದು, ಯಃ = ಯಾವ ಚಾರ್ವಾಕನು, ವಕ್ತಿ = ಹೇಳುವನೋ, ತಸ್ಯಾಪಿ = ಅವನಿಗೂ ಸಹ, ಕುಣಪಃ = ಶವವು, ಉತ್ತರಂ = ಉತ್ತರವನ್ನು, ಅಭಣತ್ = ಹೇಳಿತು.

**ಅನುವಾದ–** ಪದಾರ್ಥಗಳಲ್ಲಿ ಪ್ರತ್ಯೇಕವಾಗಿ ತೋರದಿರುವ ಗುಣವಿಶೇಷಗಳು - ಅವುಗಳನ್ನು ಒಟ್ಟು ಸೇರಿಸಿದಾಗ ತೋರುತ್ತವೆ. ಎಲೆ ಅಡಿಕೆ ಸುಣ್ಣಗಳಲ್ಲಿರದ ಕೆಂಪು ಬಣ್ಣವು ಅವು ಮೂರನ್ನೂ ಸಂಯೋಜನೆಗೊಳಿಸಿದಾಗ ಕಂಡುಬರುತ್ತದೆ. ಹಾಗೆಯೇ ಪೃಥಿವೀ ಜಲ ತೇಜಸ್ ಈ ಮೂರು ಭೂತಗಳಲ್ಲಿರದ ಪ್ರಮಾತೃತ್ವವು ಈ ಮೂರು ಭೂತಗಳ ಸಂಯೋಜನೆಯಿಂದ ಜಡ ಶರೀರಕ್ಕೇ ಉಂಟಾಗುತ್ತದೆ - ಹೀಗೆ ಹೇಳುವ ಚಾರ್ವಾಕನಿಗೆ ಹೆಣವೇ ಉತ್ತರ ಹೇಳಿತು !

**ಭಾವವಿಲಾಸಿನೀ–** ಅಪಿಚೇತ್ಯಾದಿನೋಕ್ತಮರ್ಥಮುಪಸಂಹರನ್ ಭೂತತ್ರಯಯೋಗ ಏವ ಪ್ರಮಾತೇತಿ ತತ್ಪ್ರಕ್ರಿಯಾಂ ಚ ದೂಷಯತಿ – **ಅತ ಇತಿ** ॥ ಉಕ್ತರೀತ್ಯಾಕುಣಪೇऽಪಿ ಭೂತ-ತ್ರಯಯೋಗಸ್ಯ ಜೀವಚ್ಛರೀರವದ ನ್ಯೂನತ್ವಾತ್ । ಯೋಗವಿಶೇಷೇಣ ಕ್ರಮುಕಪರ್ಣ-ಚೂರ್ಣಯೋಗೇನೇತ್ಯರ್ಥಃ । ದೃಷ್ಟಾಂತಮುಕ್ತ್ವಾ ದಾರ್ಷ್ಟಾಂತಿಕಮಾಹ – **ತಥೇತಿ** ॥ ಯೋಗವಿಶೇಷೇಣ ಪೃಥಿವ್ಯಪ್ತೇಜೋರೂಪಭೂತಯೋಗೇನೇತ್ಯರ್ಥಃ । ಜಡಸ್ಯೈವ ಜಡಶರೀರಸ್ಯೈವ ಪ್ರಮಾತೃತಾ ಚೇತನತಾ ಇತಿ ಯಶ್ಚಾರ್ವಾಕೋ ವಕ್ತಿ, ತಸ್ಯಾಪಿ ಏವಂ ವದಂತಶ್ಚಾರ್ವಾಕಸ್ಯಾಪಿ । ಕುಣಪೋऽಭಣದುತ್ತರಮಿತ್ಯಸ್ಯಾಯಂ ಭಾವಃ । ಜೀವಚ್ಛರೀರೇ ಯೋ ಭೂತತ್ರಯಯೋಗೋऽಸ್ತಿ ಸ ಸರ್ವೋऽಪ್ಯವ್ಯಂಗಕುಣಪೇऽಪ್ಯಸ್ತಿ । ತಥಾಚ ಶರೀರಾತಿರಿಕ್ತಜೀವಾಭಾವೇ ಜೀವಚ್ಛರೀರವತ್ಕುಣಪೇऽಪಿ ಪ್ರಮಾತೃತ್ವಾದಿಕಂ ಸ್ಯಾತ್ । ನಚ ತದ್ದೃಶ್ಯತೇ । ತಸ್ಮಾಜ್ಜೀವಚ್ಛರೀರೇ ಕುಣಪಾದಸ್ತಿ ಕಶ್ಚಿದ್ವಿಶೇಷಃ । ಸ ಪರಿಶೇಷಾಚ್ಛರೀರಾತಿರಿಕ್ತ ಜೀವಸಂಯೋಗ ಏವೇತಿ ತತಸ್ತಾಜ್ಜೀವಚ್ಛರೀರೇ ಪ್ರಮಾತೃತ್ವಾದಿ ಕುಣಪೇ ತದಭಾವಾತ್ ಪ್ರಮಾತೃತ್ವಾದ್ಯಭಾವ ಇತಿ । ತದೇವ ವಿಶದಯತಿ ॥ ೧೫೫ ॥

**ವಿವರಣೆ–** ಸಾಯುವ ಮುಂದೆ ಇದ್ದ ಭೂತತ್ರಯಸಂಯೋಗ ಸತ್ತ ಬಳಿಕವೂ ಮೃತಶರೀರದಲ್ಲಿದೆ. ಆದರೂ ಅಲ್ಲೇಕೆ ಪ್ರಮಾತೃತ್ವವಿಲ್ಲ? ಆದುದರಿಂದ ಭೂತತ್ರಯಯೋಗದಿಂದ ಪ್ರಮಾತೃತ್ವ (ತಿಳುವಳಿಕೆ)ವು ಎಂದು ಹೇಳುವ ಚಾರ್ವಾಕನಿಗೆ ಹೆಣವೇ ಉತ್ತರಿಸುತ್ತದೆ ! ಎಂದು ರಾಜರು ಗೇಲಿ ಮಾಡುತ್ತಿದ್ದಾರೆ.

ಅದನ್ನೇ ಮುಂದಿನ ಶ್ಲೋಕದಲ್ಲಿ ವಿಶದಿಸುತ್ತಾರೆ -

**ಪೃಥಿವ್ಯಪ್ತೇಜಸಾಂ ಯೋಗೋ ಜೀವದೇಹೇऽಪಿ ನಾಪರಮ್ ।**
**ಸ ಸರ್ವಃ ಕುಣಪೇऽಪ್ಯಸ್ತಿ ವಾದೀ ನಃ ಕುಣಪೋऽಭವತ್ ॥ ೧೫೬ ॥**

**ಅರ್ಥ–** ಪೃಥಿವ್ಯಪ್‌ತೇಜಸಾಂ = ಪೃಥಿವೀಜಲತೇಜಸ್‌ಗಳ ಸಂಯೋಗವು, ಜೀವದೇಹೇ ಅಪಿ = ಬದುಕಿರುವ ದೇಹದಲ್ಲಿಯೂ, ನ ಅಪರಃ = ಬೇರೆಯೇನಲ್ಲ, ಸಃ ಸರ್ವಃ = ಆ ಎಲ್ಲ ಭೂತತ್ರಯಯೋಗವು, ಕುಣಪೇऽಪಿ = ಶವದಲ್ಲಿಯೂ, ಅಸ್ತಿ = ಇದೆ, ಆದ್ದರಿಂದ, ನಃ =

ನಮಗೆ, ಕುಣಪಃ = ಶವವು, ವಾದೀ ಅಭವತ್ = ನಮ್ಮ ಪಕ್ಷವನ್ನು ಸಮರ್ಥಿಸುವುದಾಯಿತು,

**ಅನುವಾದ–** ಜೀವಂತವಾದ ಶರೀರದಲ್ಲಿ ಹೇಗೋ ಹಾಗೆ ಮೃತಶರೀರದಲ್ಲಿಯೂ ಭೂತತ್ರಯ ಸಂಯೋಗವು ಇರುವುದರಿಂದ ಮೃತಶರೀರದಲ್ಲಿಯೂ ಪ್ರಮಾತೃತ್ವಚೇತನತ್ವವು ತಿಳುವಳಿಕೆಯು ಬರಲಿ. ನೀನು ಹೇಳುವ ರೀತಿಯಲ್ಲಿ ಸಜೀವಶರೀರ ಹಾಗೂ ಮೃತ ಶರೀರದಲ್ಲಿ ಯಾವ ವ್ಯತ್ಯಾಸವೂ ಇರದ ಕಾರಣ ಚೈತನ್ಯವು ಭೂತತ್ರಯಯೋಗಜನ್ಯವಲ್ಲ ಎಂದು ಶವವೇ ತಿಳಿಸುತ್ತಿದೆ. ಆದ್ದರಿಂದ ಶವವು ನಮ್ಮ ಪಕ್ಷಪ್ರತಿಪಾದಕವಾದಿ ಆಯಿತು!

**ಭಾವವಿಲಾಸಿನೀ– ಪೃಥಿವೀತಿ ॥** ಸಃ ಪೃಥಿವ್ಯಾದಿಯೋಗಃ। ವಾದೀ ಪ್ರತಿವಾದೀ। ನೋಽರ್ಥಇತಿ ಶೇಷಃ ॥ ೧೫೬ ॥

**ವಿವರಣೆ–** ಪೃಥಿವೀ ಜಲತೇಜಸ್‌ಗಳ ಸಂಯೋಗದಿಂದ ಪ್ರಮಾತೃತ್ವ-ಜ್ಞಾತೃತ್ವವು (ಚೈತನ್ಯವು) ಬರಬೇಕಾದರೆ ಆ ಮೂರರಲ್ಲಿ ಯಾವುದರಲ್ಲಾದರೂ ಚೈತನ್ಯಶಕ್ತಿ ಇರಬೇಕು. ಸಮುದಾಯದ ಘಟಕಗಳಲ್ಲಿ ಇರದಿರುವ ಧರ್ಮ ಸಮುದಾಯದಲ್ಲಿ ಬರಲಾದು.

ಎಲೆ ಅಡಿಕೆ ಸುಣ್ಣಗಳಲ್ಲಿರದ ಕೆಂಪು ಮೂರರ ಸಮುದಾಯದಲ್ಲಿ ಕಾಣುತ್ತಿದೆಯಲ್ಲ? ಎಲೆ ಅಡಿಕೆ ಸುಣ್ಣಗಳು ರೂಪವುಳ್ಳ ವಸ್ತುಗಳಾದ್ದರಿಂದ ಮೂರು ಸೇರಿದಾಗ ಕೆಂಪುರೂಪ ಬರಬಹುದು. ಪೃಥಿವೀ ಜಲತೇಜಸ್‌ಗಳಲ್ಲಿ ಯಾವುದರಲ್ಲಿಯೂ ಚೈತನ್ಯಯೋಗ್ಯತೆಯೇ ಇಲ್ಲ, ಹಾಗಿರುವಾಗ ಮೂರು ಸೇರಿದಾಗಲೂ ಚೈತನ್ಯ ಬರಬಾರದು.

ಜೀವಂತಶರೀರದಲ್ಲಿ ಗೋಲಕಾತಿರಿಕ್ತ ಇಂದ್ರಿಯವಿರುವುದೇ ವಿಶೇಷವೆಂದು ಹೇಳುತ್ತೇನೆಂದು ಅದು ಸಾಧ್ಯವಿಲ್ಲ-

**ಅತೀಂದ್ರಿಯೇಂದ್ರಿಯಂ ನಾಸ್ತಿ ಗೋಲಕಂ ತೂಭಯತ್ರ ಚ ॥**
**ಆತ್ಮಾದೃಷ್ಟೇ ನ ಕುತ್ರಾಪಿ ಕಿಂ ನ್ಯೂನಂ ಕುಣಪಸ್ಯ ತತ್ ॥ ೧೫೭ ॥**

**ಅರ್ಥ–** ಅತೀಂದ್ರಿಯೇಂದ್ರಿಯಂ = ಇಂದ್ರಿಯಗೋಚರವಲ್ಲದ ಇಂದ್ರಿಯವು, ನಾಸ್ತಿ = (ನಿನ್ನ ಮತದಲ್ಲಿ) ಇಲ್ಲ, ಗೋಲಕಂ ತು = ಗೋಲಕವಾದರೋ, ಉಭಯತ್ರ ಚ = ಸಜೀವ ಮೃತಶರೀರದಲ್ಲಿಯೂ ಸಮಾನವಾಗಿದೆ, ಆತ್ಮಾದೃಷ್ಟೇ = ಆತ್ಮ ಮತ್ತು ಅದೃಷ್ಟಗಳು, ಕುತ್ರಾಪಿ ನ = ಎರಡು ಕಡೆಗಳಲ್ಲಿಯೂ ಎಂದರೆ ಜೀವಂತ ಶರೀರದಲ್ಲಿಯೂ ಮತ್ತು ಮೃತಶರೀರದಲ್ಲಿಯೂ ಇಲ್ಲ, ತತ್ = ಆದ್ದರಿಂದ, ಕುಣಪಸ್ಯ = ಶವಕ್ಕೆ, ನ್ಯೂನಂ ಕಿಮ್ = ಏನು ಕೊರತೆ ಇದೆ?

**ಅನುವಾದ–** ಸಜೀವ ನಿರ್ಜೀವ ಶರೀರಗಳೆರಡರಲ್ಲೂ ಇಂದ್ರಿಯಗೋಲಕಗಳು ಸಮಾನ. ಅತೀಂದ್ರಿಯವಾದ ಇಂದ್ರಿಯವನ್ನು ನೀನು ಒಪ್ಪಿಲ್ಲ. ಆತ್ಮ ಎರಡರಲ್ಲಿಯೂ ಇಲ್ಲ. ಎಂದಮೇಲೆ ಮೃತಶರೀರದಲ್ಲಿ ಚೈತನ್ಯ ಒಪ್ಪಲು ಏನು ಕೊರತೆಯಿದೆ?

**ಭಾವವಿಲಾಸಿನೀ–** ನನು ಜೀವಚ್ಛರೀರೇ ಗೋಲಕಾತಿರಿಕ್ತೇಂದ್ರಿಯಸತ್ತ್ವಾದ್ವಿಶೇಷ ಇತ್ಯತ ಆಹ – **ಅತೀಂದ್ರಿಯೇತಿ** ॥ ಇಂದ್ರಿಯಂ ನಾಸ್ತೀತ್ಯತ್ರ ಯುಕ್ತಿರತೀಂದ್ರಿಯೇತಿ । ತೇನಾತೀಂದ್ರಿಯ-ಪದಾರ್ಥಾನಂಗೀಕಾರಾತ್ । ದೃಶ್ಯಮಾನಂ ಚಕ್ಷುರಾದಿ ಗೋಲಕಂ ತು ಉಭಯತ್ರ ಚ ಜೀವ-ಚ್ಛರೀರಕುಣಪಯೋಸ್ತುಲ್ಯಮಿತಿ ಭಾವಃ । ನ ಕುತ್ರಾಪಿ ಜೀವಚ್ಛರೀರಕುಣಪಯೋರಿತ್ಯರ್ಥಃ । ತತ್ತಸ್ಮಾತ್ಕುಣಪಸ್ಯ ಕಿಂ ನ್ಯೂನಮ್ ॥ ೧೫೭ ॥

ಸಜೀವ ಶರೀರಕ್ಕಿಂತಲೂ ಶವದಲ್ಲಿಯೇ ಜೀವವಿರಲು ಬೇಕಾದ ಸಂಬಂಧವು ಯುಕ್ತಿಯುಕ್ತವಾಗಿದೆಯೆಂದು ಹೇಳುತ್ತಿದ್ದಾರೆ -

> ಪೂರ್ಣೋ ಜೀವಾರ್ಹಯೋಗೋಽಸ್ಮಿನ್ನಾನಾಕೃಮ್ಯಾತ್ಮಕೇ ಕ್ರಮಾತ್ ।
> ತಸ್ಮಾದ್ದೇಹಸ್ವಾಮಿಜೀವಸ್ಯಾಭಾವೋಽತ್ರ ಧ್ರುವೋಽಭವತ್ ॥ ೧೫೮ ॥

**ಅರ್ಥ–** ಕ್ರಮಾತ್ = ಕ್ರಮವಾಗಿ, ನಾನಾಕೃಮ್ಯಾತ್ಮಕೇ = ಬಗೆ ಬಗೆಯ ಕೃಮಿಗಳ ನೆಲೆಯಾದ, ಅಸ್ಮಿನ್ = ಈ ಶವದಲ್ಲಿ, ಜೀವಾರ್ಹಯೋಗಃ = ಜೀವನ ಅಸ್ತಿತ್ವಕ್ಕೆ ಅವಶ್ಯಕವಾದ ಸಂಬಂಧವು, ಪೂರ್ಣಃ = ಸಂಪೂರ್ಣವಾಗಿದೆ, ತಸ್ಮಾತ್ = ಆದ್ದರಿಂದ, ದೇಹಸ್ವಾಮಿಜೀವಸ್ಯ = ದೇಹದೊಡೆಯನಾದ ಜೀವನ, ಅಭಾವಃ = ಅಭಾವವೇ ಅತ್ರ = ಈ ಶವದಲ್ಲಿ, ಧ್ರುವಃ = ನಿಶ್ಚಿತವು, ಅಭವತ್ = ಆಯಿತು.

**ಅನುವಾದ–** ಜೀವಂತ ಶರೀರಕ್ಕಿಂತಲೂ ಮೃತಶರೀರದಲ್ಲಿಯೇ ಜೀವಾರ್ಹ ಸಂಬಂಧವು ಪೂರ್ಣವಾಗಿದೆ. ಜೀವಾರ್ಹ ಸಂಬಂಧವೇ ಇರದಿದ್ದರೆ ಕ್ರಮವಾಗಿ ನಾನಾಕೃಮಿಗಳು ಈ ಶವದಲ್ಲಿ ಬರಲು ಹೇಗೆ ಸಾಧ್ಯ?! ಆದ್ದರಿಂದ ದೇಹ ಸ್ವಾಮಿಯಾದ ಜೀವ ಈ ದೇಹದಲ್ಲಿರದಿರುವುದರಿಂದ ಇದು ಶವವಾಗಿದೆ ಎಂಬುದು ನಿಶ್ಚಿತವಾಯಿತು.

**ಭಾವವಿಲಾಸಿನೀ–** ಜೀವಚ್ಛರೀರಾದಪಿ ಕುಣಪ ಏವ ಜೀವಾರ್ಹಯೋಗೋ ಯುಕ್ತಿಯುಕ್ತ ಇತ್ಯಾಹ – **ಪೂರ್ಣ ಇತಿ** ॥ ಕ್ರಮಾನ್ನಾನಾಕೃಮ್ಯಾತ್ಮಕೇಽಸ್ಮಿನ್ ಕುಣಪೇ ಜೀವಾರ್ಹಯೋಗಃ ಜೀವ-ಕಥಾಯೋಗ್ಯಯೋಗಃ ಪೂರ್ಣಃ ಸಂಪೂರ್ಣಃ । ಪೂರ್ವಾಧಿಷ್ಠಾತಾ ಜೀವ ಏವ ನಾಸ್ತಿ । ಜೀವಾರ್ಹಯೋಗಸ್ತು ಕುಣಪೇಽಪಿ ಪೂರ್ಣ ಏವ । ಅನ್ಯಥಾ ಪುನಸ್ತತ್ರ ಜೀವಾ ಕಥಂ ಸ್ಫುರಿತಿ ಭಾವಃ । ತಸ್ಮಾಜ್ಜೀವವಿಯೋಗಂ ವಿನಾ ಮರಣಸ್ಯಾನಿರೂಪ್ಯತ್ವಾತ್ ॥ ೧೫೮ ॥

ಶವ ಮತ್ತು ಶವವಲ್ಲದ ಶರೀರಗಳಿಗೆ ವಾಯುಸಂಚಾರ ಅಭಾವ-ಭಾವಗಳಿಂದ ವಿಶೇಷವಿದೆ ಎಂಬ ಶಂಕೆಯನ್ನು ಮತ್ತೊಂದು ರೀತಿಯಿಂದ ಪರಿಹರಿಸುತ್ತಿದ್ದಾರೆ -

**ಶವಸ್ಯ ನವರಂಧ್ರೇಷು ವಾಯೋಶ್ಚಾಸ್ತಿ ಗತಾಗತಮ್ ।**
**ಭಸ್ತ್ರಾಂತರಪಿ ಯೋ ವಾತಿ ತಸ್ಯ ಯಾತ್ರಾ ತು ಕುತ್ರ ನ ॥ ೧೫೯ ॥**

**ಅರ್ಥ–** ಶವಸ್ಯ = ಶವದ ನವರಂಧ್ರೇಷು ಚ = ನವದ್ವಾರಗಳಲ್ಲಿಯೂ, ವಾಯೋಃ = ವಾಯುವಿನ, ಗತಾಗತಮ್ = ಗಮನಾಗಮನವು, ಅಸ್ತಿ = ಇದೆ, ಯಃ = ಯಾವ ವಾಯುವು, ಭಸ್ತ್ರಾಂತಃ ಅಪಿ = ತಿದಿಯೊಳಗೂ ಕೂಡ, ವಾತಿ = ಸಂಚರಿಸುತ್ತದೆಯೋ, ತಸ್ಯ = ಆ ವಾಯುವಿನ, ಯಾತ್ರಾತು = ಗತಿಯಾದರೋ, ಕುತ್ರ ನ = ಎಲ್ಲಿಲ್ಲ?

**ಅನುವಾದ–** ಶವದಲ್ಲಿ ವಾಯುಸಂಚಾರವಿಲ್ಲ, ಜೀವಂತ ಶರೀರದಲ್ಲಿ ವಾಯುಸಂಚಾರವಿದೆ. ಇದೇ ಇವೆರಡರಲ್ಲಿರುವ ವಿಶೇಷ ಎಂದು ಹೇಳಿದರೆ ಅದು ಸರಿಯಲ್ಲ. ಶವದ ನವರಂಧ್ರಗಳಲ್ಲಿಯೂ ವಾಯು ಸಂಚಾರವಿದ್ದೇ ಇದೆ. ತಿದಿ ಎಂದೆನಿಸುವ ಕಮ್ಮಾರನು ಬಳಸುವ ಚರ್ಮದ ಚೀಲದಲ್ಲಿಯೂ ಸಂಚರಿಸುವ ವಾಯುವನ್ನು ಶವದಲ್ಲಿ ತಡೆಯುವವರಾರು? ಸಜೀವ ನಿರ್ಜೀವ ಶರೀರಗಳೆರಡರಲ್ಲಿಯೂ ವಾಯುಸಂಚಾರ ವಿರುವಾಗ ಎರಡಕ್ಕೂ ಏನಿದೆ ವ್ಯತ್ಯಾಸ?

**ಭಾವವಿಲಾಸಿನೀ–** ಶವಾಶವಯೋರ್ವಾಯುಸಂಚಾರಾಭಾವಭಾವಾಭ್ಯಾಂ ವಿಶೇಷ ಇತ್ಯೇತತ್ಪ್ರಕಾರಾಂತರೇಣಾಪಿ ಪರಿಹರತಿ – **ಶವಸ್ಯೇತಿ** ॥ ತದುಪಪಾದಯತಿ – **ಭಸ್ತ್ರಾಂತರಿತಿ** ॥ ತಸ್ಯ ವಾಯೋಃ ॥ ೧೫೯ ॥

**ವಿವರಣೆ–** ಜೀವನಿವೃತ್ತಿಯಿಂದ ಮೃತಶರೀರದಲ್ಲಿ ಚೇಷ್ಟಾನಿವೃತ್ತಿಯೆಂದೊಪ್ಪದೆ ಶ್ವಾಸ ವಾಯುವಿನ ನಿವೃತ್ತಿಯಿಂದ ಚೇಷ್ಟಾನಿವೃತ್ತಿ ಎಂದು ಹೇಳಿದರೆ ಶವದಲ್ಲಿಯೂ ವಾಯು ಸಂಚಾರವಿದೆಯಾದ್ದರಿಂದ ಚೇಷ್ಟಾನಿವೃತ್ತಿ ಏಕೆ ಎಂದು ಶ್ರೀರಾಜರು ಇಲ್ಲಿ ಕೇಳುತ್ತಿದ್ದಾರೆ.

**ಪಶ್ಯ ನಿರ್ಜೀವದೇಹೇನ ಜೀವಸಿದ್ಧಿರಭೂದಹೋ ॥ ೧೬೦ ॥**

**ಅರ್ಥ–** ಪಶ್ಯ = ನೋಡು, ನಿರ್ಜೀವದೇಹೇನ = ಜೀವರಹಿತ ಮೃತ ಶರೀರದಿಂದ, ಜೀವ ಸಿದ್ಧಿಃ = ದೇಹಾತಿರಿಕ್ತ ಜೀವಸಿದ್ಧಿಯು, ಅಭೂತ್ = ಆಯಿತು, ಅಹೋ = ಆಶ್ಚರ್ಯವು!

**ಅನುವಾದ–** ನೋಡು. ನಿರ್ಜೀವವಾದ ಶವದಿಂದಲೂ ಜೀವಸಿದ್ಧಿಯಾಯಿತು. ಆಶ್ಚರ್ಯ!

**ಭಾವವಿಲಾಸಿನೀ–** (ಹೃದ್ಯೇವ ನಿರುದ್ಧಶ್ವಾಸಮುನೀಶ್ವರವತ್ಕುಣಪೇಽಪ್ಯಂತಶ್ಶ್ವಾಸಸಂಭವೇನ ತದಭಾವಸ್ಯ ತ್ವಯಾ ನಿರ್ಣೇತುಮಶಕ್ಯತ್ವಾಚ್ಚ ಬಹಿಃಶ್ವಾಸಾಭಾವೇಽಪಿ ಜೀವನಸಂಭವಾಚ್ಚ ನಿರ್ಜೀವದೇಹೇ ನ ಜೀವಸಿದ್ಧಿರಭೂದಿತ್ಯುಪಹಾಸಃ) (ಪ್ರಕ್ಷಿಪ್ತೋಽಯಂ ಗ್ರಂಥಃ) ॥ ೧೬೦ ॥

**ವಿವರಣೆ–** ಮುನಿಗಳು ಶ್ವಾಸವಾಯುವನ್ನು ಒಳಗೇ ತಡೆಹಿಡಿದುಕೊಂಡಿರುವಂತೆ ಶವದಲ್ಲಿಯೂ ಒಳಗೇ ಶ್ವಾಸವಾಯುವಿರಬಹುದಲ್ಲವೇ? ನೀನು ಏನನ್ನೂ ನಿರ್ಣಯಿಸಲಾರೆ. ಹೊರಗೆ ಶ್ವಾಸವಿರದಿದ್ದರೂ ಬದುಕಿರುವ ಸಾಧ್ಯತೆ (ಮುನಿಗಳಂತೆ) ಇರುವುದರಿಂದ ನಿರ್ಜೀವ ದೇಹದಿಂದಲೇ ಜೀವಸಿದ್ಧಿಯಾಯಿತಲ್ಲವೇ ಎಂದು ಗುರುಗಳು ಇಲ್ಲಿ ಉಪಹಾಸ ಮಾಡುತ್ತಿದ್ದಾರೆ.

ಎಲೆ ಅಡಿಕೆ ಸುಣ್ಣಗಳ ಸಮ್ಮಿಶ್ರಣದಿಂದ ಕೆಂಪು ಉಂಟಾಗುವಂತೆ ಪೃಥಿವ್ಯಾದಿ ಜಡ ಭೂತಗಳ ಸಂಗಮದಿಂದ ಚೈತನ್ಯ-ಜ್ಞಾನಶಕ್ತಿ-ಉಂಟಾಗುವುದೆಂಬ ಚಾರ್ವಾಕನ ವಾದವನ್ನು ಆ ದೃಷ್ಟಾಂತವು ವಿಷಮವಾಗಿದೆ ಎಂದು ಉಪಪಾದನೆ ಮಾಡುತ್ತಿದ್ದಾರೆ-

**ರಕ್ತಿಮಾ ರತ್ನಧಾತ್ವಾದಿಪಾರ್ಥಿವೇಷು ಸ್ವಭಾವತಃ ।**
**ವರ್ತತೇ ಸ ತು ಯೋಗೇನ ತಜ್ಜಾತೀಯೇಽಪಿ ದೃಶ್ಯತಾಮ್ ॥ ೧೬೧ ॥**

**ಅರ್ಥ–** ರತ್ನಧಾತ್ವಾದಿಪಾರ್ಥಿವೇಷು = ರತ್ನ ಧಾತು ಮುಂತಾದ ಪಾರ್ಥಿವ ಪದಾರ್ಥಗಳಲ್ಲಿ ಸ್ವಭಾವತಃ = ಸ್ವಾಭಾವಿಕವಾಗಿ, ರಕ್ತಿಮಾ = ಕೆಂಪು ಬಣ್ಣವು, ವರ್ತತೇ = ಇದೆ, ಸಃತು = ಆ ಕೆಂಪು ಬಣ್ಣವಾದರೋ, ಯೋಗೇನ =ಸಂಗಮದಿಂದ, ತಜ್ಜಾತೀಯೇಽಪಿ = ಅದರ ಸಜಾತೀಯವಾದುದರಲ್ಲಿಯೂ, ದೃಶ್ಯತಾಮ್ = ಕಾಣಲ್ಪಡಲಿ.

**ಅನುವಾದ–** ರತ್ನ, ಗೈರಿಕಾದಿಧಾತು ಮೊದಲಾದ ಪಾರ್ಥಿವ ಪದಾರ್ಥಗಳಲ್ಲಿ ಸ್ವಾಭಾವಿಕವಾದ ರಕ್ತವರ್ಣವಿದೆ. ಪಾರ್ಥಿವವಾದ ತಾಂಬೂಲಾದಿಗಳಲ್ಲಿ ಪರಸ್ಪರ ಮೇಲನದಿಂದ ರಕ್ತವರ್ಣವು ಕಾಣಲ್ಪಡಲಿ.

**ಭಾವವಿಲಾಸಿನೀ–** ಇದಾನೀಂ ಕ್ರಮುಕಾದಿಯೋಗವಿಶೇಷೇಣ ರಕ್ತಿಮಾ ಯಥೇತಿ ಪ್ರಾಗುಕ್ತದೃಷ್ಟಾಂತಸ್ಯ ವೈಷಮ್ಯಮುಪಪಾದಯತಿ – **ರಕ್ತಿಮೇತಿ** ॥ ರತ್ನಧಾತ್ವಾದಿಪಾರ್ಥಿವೇಷು ಪದಾರ್ಥೇಷು ರಕ್ತಿಮಾ ತಜ್ಜಾತೀಯೇ ತಾಮ್ಬೂಲಾದೌ । ತಥಾಚ ಜಡೇ ಕ್ವಚಿತ್ ಸ್ವಭಾವಭೂತಮನ್ಯತ್ರ ಯೋಗೇನಾಪಿ ಜಾಯತಾಂ ನಾಮ । ಜಡೇ ಕ್ವಾಪ್ಯದೃಶ್ಯಮಾನಂ ಅತ ಏವ ತದಸ್ವಭಾವಭೂತಂ ಚೈತನ್ಯಂ ಯೋಗಶತೇನಾಪಿ ನ ಜಾಯತ ಇತಿ ಭಾವಃ ॥ ೧೬೧ ॥

**ವಿವರಣೆ–** ರತ್ನ ಧಾತುಗಳು ಮುಂತಾದ ಪಾರ್ಥಿವ ಪದಾರ್ಥಗಳಲ್ಲಿ ಸ್ವಾಭಾವಿಕವಾಗಿ ಕೆಂಪು ಬಣ್ಣವಿದೆ. ಆದುದರಿಂದ ಅದರ ಸಜಾತೀಯವಾದ ತಾಂಬೂಲಾದಿಗಳಲ್ಲಿಯೇ ಅವುಗಳ ಪಾರ್ಥಿವ ವಸ್ತುಗಳ ಸಂಯೋಗದಿಂದ ಕೆಂಪು ಬಣ್ಣ ಕಾಣಬಹುದು. ಅಂದರೆ ಜಡ ಪದಾರ್ಥಗಳಲ್ಲಿ ಯಾವುದಾದರೊಂದರಲ್ಲಿ ಸ್ವಾಭಾವಿಕವಾಗಿ ಇರುವಂಥದು ಬೇರೆಡೆ ಅವುಗಳ ಸಂಬಂಧದಿಂದ ಬರಲಿ. ಆದರೆ ಯಾವ ಜಡ ಪದಾರ್ಥಗಳಲ್ಲಿಯೂ ಕಾಣದ ಆದ್ದರಿಂದಲೇ ಅದರ ಸ್ವಭಾವವಲ್ಲದ ಚೈತನ್ಯವು ನೂರು ಜಡಗಳ ಸಂಯೋಜನೆಯಿಂದಲೂ ಉಂಟಾಗದು ಎಂದು ಭಾವ.

**ಜ್ಞಾನಂ ತು ಪಂಚಭೂತಾತ್ಮಜಡವರ್ಗೇ ನ ಕುತ್ರಚಿತ್ ।**
**ಅತೋ ಜಡಸ್ವಭಾವೋ ನ ತದ್ಯೋಗೇಽಪಿ ಜಡೇ ಕಥಮ್ ॥ ೧೬೨ ॥**

**ಅರ್ಥ–** ತು = ಆದರೆ, ಜ್ಞಾನಂ = ಜ್ಞಾನವು, ಪಂಚಭೂತಾತ್ಮಜಡವರ್ಗೇ = ಪಂಚಭೂತಾತ್ಮಕವಾದ ಜಡಪದಾರ್ಥಗಳ ಗುಂಪಿನಲ್ಲಿ, ನ ಕುತ್ರಚಿತ್ = ಎಲ್ಲಿಯೂ ಇಲ್ಲ, ಅತಃ = ಆದ್ದರಿಂದ, ಜ್ಞಾನವು, ಜಡಸ್ವಭಾವೋ ನ = ಜಡಸ್ವಭಾವವಲ್ಲ, ತತ್ = ಆ ಜ್ಞಾನವು, ಯೋಗೇಽಪಿ = ಜಡಪದಾರ್ಥಗಳ ಪರಸ್ಪರ ಸಂಯೋಜನೆಯಿಂದಾದರೂ, ಜಡೇ = ಜಡ ಪದಾರ್ಥದಲ್ಲಿ, ಕಥಂ = ಹೇಗೆ ಬರಲು ಸಾಧ್ಯ?

**ಅನುವಾದ–** ಜ್ಞಾನವು ಜಡಗಳಾದ ಪಂಚಭೂತಗಳಲ್ಲಿಯೂ ಇರದ ಕಾರಣ ಅದು ಯಾವ ಜಡ ಪದಾರ್ಥದ ಸ್ವಭಾವವೂ ಅಲ್ಲ. ಅಂದಮೇಲೆ ಜ್ಞಾನರಹಿತ ಜಡ ಪದಾರ್ಥಗಳ ಸಂಯೋಜನೆಯಾದರೂ ಆ ಸಮುದಾಯರೂಪವಾದ ಜಡದಲ್ಲಿ ಜ್ಞಾನವು ಬರುವುದು ಹೇಗೆ ?

**ಭಾವವಿಲಾಸಿನೀ–** ತದೇವ ಸ್ಪಷ್ಟಯತಿ – **ಜ್ಞಾನಮಿತಿ ॥** ಪಂಚಭೂತಾತ್ಮಜಡವರ್ಗೇ ಪಂಚಭೂತರೂಪಜಡವರ್ಗೇ । ನ ಕುತ್ರಚಿನ್ನಕ್ವಾಪೀತ್ಯತೋ ಜಡಸ್ವಭಾವೋ ನ ಜ್ಞಾನಮ್ । ತಜ್ಜ್ಞಾನಂ ಯೋಗೇಽಪಿ ಜಡಾನಾಂ ಪರಸ್ಪರಂ ಯೋಗೇಽಪಿ ಜಡೇ ಕಥಂ ಸ್ಯಾದಿತ್ಯರ್ಥಃ ॥ ೧೬೨ ॥

ಜಪಾಕುಸುಮ - ದಾಸವಾಳ ಹೂವಿನ ಸಂಬಂಧದಿಂದ ಸ್ಫಟಿಕದಲ್ಲಿ ಕೆಂಪು ಬಣ್ಣ ಕಾಣುವುದಿಲ್ಲವೇ? ಅದರಂತೆ ಜಡವಾದ ಶರೀರದಲ್ಲಿಯೂ ಭೂತ ಪದಾರ್ಥಗಳ ಸಂಯೋಗದಿಂದ ಜ್ಞಾನವು ಕಾಣಬಹುದಲ್ಲವೇ ಎಂದರೆ ಉತ್ತರಿಸುತ್ತಿದ್ದಾರೆ -

**ಜಪಾಕುಸುಮಯೋಗೇಽಪಿ ರೂಪವತ್ಯೇವ ರಕ್ತಿಮಾ ।**
**ನೀರೂಪವಾಯೌ ಕಿಂ ರಕ್ತಶತಯೋಗೇಽಪಿ ರಕ್ತಿಮಾ ॥ ೧೬೩ ॥**

**ಅರ್ಥ–** ಜಪಾಕುಸುಮಯೋಗೇಽಪಿ = ದಾಸವಾಳ ಹೂವಿನ ಸಂಬಂಧವಾದರೂ ರೂಪವತಿ ಏವ = ರೂಪವುಳ್ಳ ಸ್ಫಟಿಕಾದಿಗಳಲ್ಲಿಯೇ, ರಕ್ತಿಮಾ = ಕೆಂಪು ಬಣ್ಣವು, ದೃಶ್ಯತೇ = ಕಾಣುತ್ತದೆ, ನೀರೂಪವಾಯೌ = ರೂಪರಹಿತವಾದ ವಾಯುವಿನಲ್ಲಿ, ರಕ್ತಶತಯೋಗೇಽಪಿ = ನೂರಾರು ಕೆಂಪು ದಾಸವಾಳ ಹೂವಿನ ಸಂಬಂಧವಾದರೂ, ರಕ್ತಿಮಾ = ಕೆಂಪು ಬಣ್ಣವು, ಕಿಂ ದೃಶ್ಯತೇ = ಕಾಣುವುದೇನು?

**ಅನುವಾದ–** ದಾಸವಾಳದ ಹೂವನ್ನು ಹತ್ತಿರ ಇಟ್ಟರೆ ರೂಪವುಳ್ಳ ಸ್ಫಟಿಕಾದಿಗಳಲ್ಲಿಯೇ ಕೆಂಪು ಬಣ್ಣ ತೋರುತ್ತದೆ. ರೂಪವಿಲ್ಲದ ಗಾಳಿಯ ಮುಂದೆ ನೂರಾರು ಕೆಂಪು ದಾಸವಾಳ ಹೂವುಗಳನ್ನು ಇಟ್ಟರೂ ಕೆಂಪುರೂಪ ಕಾಣುವುದೇನು?

**ಭಾವವಿಲಾಸಿನೀ–** ನನು ಜಪಾಕುಸುಮಸಂಬಂಧಾತ್ಸ್ಫಟಿಕೇ ರಕ್ತಿಮಾ ದೃಶ್ಯತೇ ತದ್ವಜ್ಜಡೇಽಪಿ ಪೂರ್ವೋಕ್ತಯೋಗಾದ್ದೃಶ್ಯತಾಮಿತ್ಯತ ಆಹ – **ಜಪೇತಿ** ॥ ರೂಪವತ್ಯೇವ ಸ್ಫಟಿಕಾದೌ ರಕ್ತಿಮಾ ದೃಶ್ಯತೇ। ನೀರೂಪವಾಯೌ ರಕ್ತದ್ರವ್ಯಶತಯೋಗೇಽಪಿ ರಕ್ತಿಮಾ ದೃಶ್ಯತೇ ಕಿಮ್? ನ ದೃಶ್ಯತ ಏವ। ತತಶ್ಚ ತತ್ತತ್ಸಂಬಂಧಯೋಗ್ಯ ಏವ ತತ್ತದ್ಭಾನಂ ನಾಯೋಗ್ಯ ಇತಿ ಹೇತೋಃ ಜ್ಞಾನಯೋಗ್ಯ ಏವ ಪದಾರ್ಥೇ ಜ್ಞಾನಂ ಸ್ಯಾತ್ । ನತ್ವಯೋಗ್ಯೇಜಡಶರೀರೇ ಜ್ಞಾನಮಿತಿ ಭಾವಃ ॥ ೧೬೩ ॥

**ವಿವರಣೆ–** ಆದ್ದರಿಂದ ವಸ್ತುವಿನಲ್ಲಿ ಯಾವ ಧರ್ಮದ ಸಂಬಂಧದ ಯೋಗ್ಯತೆ ಇದೆಯೋ, ಆ ಧರ್ಮವು ಮಾತ್ರ ಕಾಣುತ್ತದೆ. ಆ ಯೋಗ್ಯತೆಯು ಇಲ್ಲದಿರುವ ವಸ್ತುವಿನಲ್ಲಿ ಕಾಣುವುದಿಲ್ಲ. ಆದ್ದರಿಂದ ಜ್ಞಾನಸಂಬಂಧಯೋಗ್ಯವಾದ ಸಜೀವಶರೀರದಲ್ಲಿ ಮಾತ್ರ ಜ್ಞಾನವು ಕಾಣುತ್ತದೆ. ನಿರ್ಜೀವವಾದ ಜಡವು ಜ್ಞಾನಸಂಬಂಧಕ್ಕೆ ಅಯೋಗ್ಯವಾದುದರಿಂದ ಜಡಶರೀರದಲ್ಲಿ ಜ್ಞಾನವು ಹೇಗೆ ಕಾಣುತ್ತದೆ ಎಂದು ಪ್ರಶ್ನಿಸುತ್ತಿದ್ದಾರೆ.

**ನಾಂಧಾನಾಂ ಶತಮಪ್ಯಂಧ ಪಶ್ಯತೀತಿ ನ ಕಿಂ ಶ್ರುತಮ್ ॥ ೧೬೪ ॥**

**ಅರ್ಥ–** ಅಂಧ = ಅಜ್ಞಾನಿಯೇ, ಅಂಧಾನಾಂ ಶತಮಪಿ = ಕುರುಡರು ನೂರಾರಾದರೂ ನ ಪಶ್ಯತಿ = ಕಾಣುವುದಿಲ್ಲ, ಇತಿ = ಎಂದು, ಕಿಂ ನ ಶ್ರುತಮ್ = ಕೇಳಿಲ್ಲವೇನು?

**ಅನುವಾದ–** ಒಬ್ಬ ಕುರುಡ ಕಾಣದಿದ್ದರೇನಂತೆ ನೂರಾರು ಕುರುಡರು ಸೇರಿದರೆ ಕಾಣುತ್ತಾರೆ ಎನ್ನಲಾಗುವುದೇ? ಕುರುಡರು ನೂರು ಜನ ಸೇರಿದರೂ ಕಾಣುವುದಿಲ್ಲ ಎಂಬ ಗಾದೆ ಕೇಳಿಲ್ಲವೇ?

**ಭಾವವಿಲಾಸಿನೀ–** ತತ್ರಾಭಾಣಕಸಿದ್ಧದೃಷ್ಟಾಂತಮಾಹ – **ನಾಂಧಾನಾಮಿತಿ** ॥ ತಥಾಚ ಜಡಾನಾಂ ಶತಯೋಗೇನಾಪಿ ಕಂಚನ ಚೇತನಂ ವಿನಾ ಕಥಂ ಜ್ಞಾನಂ ಸ್ಯಾದಿತಿ ಭಾವಃ ॥ ೧೬೪ ॥

ಈಗ, ಚೇತನದ ಸಂಬಂಧವಾದರೆ ಜಡದಲ್ಲಿಯೂ ಚೇಷ್ಟಾದಿಗಳುಂಟಾಗುತ್ತವೆ ಎಂದು ಪ್ರತಿವಾದಿಯ ದೃಷ್ಟಾಂತದಿಂದಲೇ ಉಪಪಾದನೆ ಮಾಡುತ್ತಾರೆ -

**ಚಕ್ಷುಷ್ಮತಾ ತು ಸಂಯೋಗೇ ತಸ್ಯಾಪಿ ಸ್ಯಾದ್ಗತಾಗತಮ್ ।**
**ಏವಂ ಜ್ಞಾನವತಾ ಯೋಗೇ ದೇಹೇ ಯಾತ್ರಾ ನ ಚೇನ್ನ ಚ ॥ ೧೬೫ ॥**

**ಅರ್ಥ–** ಚಕ್ಷುಷ್ಮತಾ = ಕಣ್ಣಿರುವವನಿಂದ, ಸಂಯೋಗೇತು = ಸಂಬಂಧವಾದರೋ, ತಸ್ಯಾಽಪಿ = ಕುರುಡನಿಗೂ ಕೂಡ, ಗತಾಗತಂ ಸ್ಯಾದ್ = ಗಮನಾಗಮನಾದಿ ವ್ಯಾಪಾರಗಳು ಆಗುತ್ತವೆ. ಏವಂ = ಹೀಗೆ, ಜ್ಞಾನವತಾ = ಜ್ಞಾನಿಯಾದ ಚೇತನನಿಂದ, ಯೋಗೇ ಸತಿ = ಸಂಬಂಧವಾದರೆ, ದೇಹೇ = ಜಡವಾದ ದೇಹದಲ್ಲಿ, ಯಾತ್ರಾ = ಸಂಚಾರವು, ಸ್ಯಾತ್ = ಆಗುತ್ತದೆ. ನ ಚೇತ್ = ಚೇತನದ ಸಂಬಂಧವಿರದಿದ್ದರೆ, ನ ಚ ಯಾತ್ರಾ = ಸಂಚಾರವಾಗದು.

**ಅನುವಾದ–** ಕುರುಡರು ಸಾವಿರಾರು ಮಂದಿ ಸೇರಿದರೂ ಕಾಣಲಾಗದು. ಕಣ್ಣಿರುವ ಮನುಷ್ಯ ಅವರೊಡನೆ ಸೇರಿದರೆ ಮಾತ್ರ ಅವರೆಲ್ಲ ಅತ್ತಿತ್ತ ಸಂಚರಿಸಲು ಸಮರ್ಥರಾಗುವರು. ಹಾಗೆಯೇ ಸ್ವಾಭಾವಿಕವಾಗಿ ಜ್ಞಾನಿಯಾದ ಚೇತನದ ಸಂಬಂಧವು ಶರೀರದಲ್ಲಿ ಉಂಟಾದರೆ ಮಾತ್ರ ಅತ್ತಿತ್ತ ಓಡಾಟ ಮುಂತಾದ ವ್ಯಾಪಾರಗಳು ದೇಹದಲ್ಲಿ ಕಾಣಬಲ್ಲವು. ಚೇತನ ಸಂಬಂಧವಿರದಿದ್ದರೆ ದೇಹದಲ್ಲಿ ಗಮನಾಗಮನವ್ಯಾಪಾರಗಳು ಉಂಟಾಗಲು ಸಾಧ್ಯವೇ ಇಲ್ಲ.

**ಭಾವವಿಲಾಸಿನೀ–** ಇದಾನೀಂ ಚೇತನಸಂಯೋಗೇ ಸತಿ ಜಡಸ್ಯಾಪಿ ಚೇಷ್ಟಾದಿಕಂ ಸ್ಯಾದಿತ್ಯೇತತ್ತೇನೈವ ದೃಷ್ಟಾಂತೇನೋಪಪಾದಯತಿ – **ಚಕ್ಷುಷ್ಮತೇತಿ** ॥ ತಸ್ಯಾಪ್ಯಂಧಸ್ಯಾಪಿ । ದಾರ್ಷ್ಟಾನ್ತಿಕಂ ಯೋಜಯತಿ – **ಏವಮಿತಿ** ॥ ಜ್ಞಾನವತಾ ಸ್ವಾಭಾವಿಕಜ್ಞಾನವತಾ ದೇಹಾನ್ಯಜೀವೇನ ॥ ೧೬೫ ॥

**ಸ ಚ ಸ್ವಭಾವತೋ ಜ್ಞಾನೀ ಸ್ಯಾನ್ನ ಕೃತ್ರಿಮಬೋಧವಾನ್ ।**
**ಕಿಂ ಚಿತ್ರಲಿಖಿತಂ ನೇತ್ರಂ ಕಂಚಿದರ್ಥಂ ಪ್ರಪಶ್ಯತಿ ॥ ೧೬೬ ॥**

**ಅರ್ಥ–** ಸ ಚ = ಆ ಜೀವನಾದರೋ, ಸ್ವಭಾವತಃ ಜ್ಞಾನೀ = ಸ್ವಾಭಾವಿಕವಾಗಿಯೇ ಜ್ಞಾನವುಳ್ಳವನೇ, ಸ್ಯಾತ್ = ಆಗಿರಬೇಕು, ಕೃತ್ರಿಮಬೋಧವಾನ್ ನ = ಯಾವುದೋ ಪದಾರ್ಥಗಳ ಸಮ್ಮಿಶ್ರಣದಿಂದ ಕೃತಕವಾಗಿ ಜ್ಞಾನವುಳ್ಳವನಲ್ಲ, ಚಿತ್ರಲಿಖಿತಂ = ಚಿತ್ರದಲ್ಲಿ ಬರೆದ (ಕೃತಕವಾದ) ನೇತ್ರಂ = ಕಣ್ಣು, ಕಂಚಿದರ್ಥಂ = ಯಾವುದಾದರೂ ಪದಾರ್ಥವನ್ನು ಪ್ರಪಶ್ಯತಿ ಕಿಂ = ನೋಡುವುದೇನು?

**ಅನುವಾದ–** ಯಾರ ಸಂಬಂಧದಿಂದ ದೇಹವು ಕ್ರಿಯಾಶೀಲವಾಗುವುದೋ ಅಂತಹ ಆತ್ಮನು ಸ್ವಾಭಾವಿಕವಾಗಿ ಜ್ಞಾನಿಯಾಗಿರಬೇಕು. ಯಾವುದೇ ಭೂತಗಳ ಸಂಬಂಧದಿಂದ ಉಂಟಾದ ಕೃತ್ರಿಮಜ್ಞಾನವುಳ್ಳವನಲ್ಲ. ಚಿತ್ರದಲ್ಲಿರುವ ಕೃತ್ರಿಮವಾದ ಕಣ್ಣು ನೋಡುತ್ತದೆಯೇನು?

**ಭಾವವಿಲಾಸಿನೀ–** ತದೇವೋಪಪಾದಯತಿ–**ಸ ಚೇತಿ** ॥ ಸ ಚ ಜ್ಞಾನವಾನ್ ಕೃತ್ರಿಮಜ್ಞಾನವಾನ್ ಯೋಗವಿಶೇಷಕೃತಜ್ಞಾನವಾನ್ನೇತ್ಯರ್ಥಃ । ತತ್ರಾರ್ಥಾಂತರನ್ಯಾಸಃ ॥ ಕಿಮಿತಿ? ಚಿತ್ರಲಿಖಿತಮಿತ್ಯನೇನ ಕೃತ್ರಿಮತ್ವಂ ಸೂಚಯತಿ ॥ ೧೬೬ ॥

ಆದ್ದರಿಂದ ಜಡದೇಹಕ್ಕೆ ಜೀವತ್ವವನ್ನು ಹೇಳುವವನು ಪಂಡಿತನಲ್ಲವೆಂದು ಹೇಳುತ್ತಿದ್ದಾರೆ-

**ಅತೋ ಜಡಸ್ಯ ಜೀವತ್ವಂ ಜಡೋ ವಕ್ತಿ ನ ಪಂಡಿತಃ ।**
**ಜೀವಸ್ತಜ್ಜಡದೇಹಾನ್ಯೋ ಮಾನ್ಯೋ ಯಂ ದೇಹಿನಂ ವಿದುಃ ॥ ೧೬೭ ॥**

**ಅರ್ಥ–** ಅತಃ= ಆದ್ದರಿಂದ, ಜಡಸ್ಯ = ಜಡಶರೀರಕ್ಕೆ, ಜೀವತ್ವಂ = ಜೀವತ್ವವನ್ನು, ಜಡಃ = ಅವಿವೇಕಿಯು, ವಕ್ತಿ = ಹೇಳುವನು, ಪಂಡಿತಃ = ಪ್ರಜ್ಞಾವಂತನು, ನ = ಅಲ್ಲ, ತತ್ = ಆದ್ದರಿಂದ, ಯಂ = ಯಾವ ಜೀವನನ್ನು, ದೇಹಿನಂ = ದೇಹವುಳ್ಳವನೆಂದು, ವಿದುಃ = ಎಲ್ಲರೂ ತಿಳಿದಿರುವರೋ, ಅಂತಹ ಜಡದೇಹಾನ್ಯಃ = ಜಡ ದೇಹಕ್ಕಿಂತ ಭಿನ್ನನಾದ, ಜೀವಃ ತು = ಜೀವನಾದರೋ, ಮಾನ್ಯಃ = ಮಾನ್ಯನಾಗಿರುವನು,

**ಅನುವಾದ–** ಜಡವೇ ಜೀವವಾಗಿ ಪರಿಣಾಮಗೊಳ್ಳುತ್ತದೆ ಎಂದು ಅವಿವೇಕಿ ಹೇಳಿಯಾನೇ ಹೊರತು ಪ್ರಜ್ಞಾವಂತರಾರೂ ಹೇಳುವುದಿಲ್ಲ. ಜೀವನನ್ನು ದೇಹೀ ಎಂದು ಕರೆವರು. ದೇಹೀ ಎಂದರೆ ದೇಹವುಳ್ಳ ದೇಹಕ್ಕಿಂತ ಬೇರೆಯಾದ ಜೀವ ಎಂದೇ ಅರ್ಥವಾಗುತ್ತದೆ. ಆದ್ದರಿಂದ ಜಡ ದೇಹದಿಂದ ಭಿನ್ನನಾದ ಸ್ವಭಾವತಃ ಜ್ಞಾನಾದಿಗುಣಗಳಿಗೆ ಆಶ್ರಯನಾದ ಕಾರಣ ಮಾನ್ಯನಾದ ಜೀವನಿದ್ದಾನೆಂಬುದು ನಿಶ್ಚಿತವಾಯಿತು.

**ಭಾವವಿಲಾಸಿನೀ–** ತಸ್ಮಾಜ್ಜಡಶರೀರಸ್ಯ ಜೀವತ್ವಂ ವದನ್ನಪಂಡಿತ ಇತ್ಯಾಹ – **ಅತ ಇತಿ** ॥ ಜಡಸ್ಯ ಜೀವತ್ವಂ ಯೋ ವಕ್ತಿ ಸ ಜಡೋಽವಿವೇಕೀತಿ ಸಂಬಂಧಃ । ಉಕ್ತಮರ್ಥಮುಪಸಂಹರತಿ – **ಜೀವ ಇತಿ** ॥ ತತ್ತಸ್ಮಾಜ್ಜಡದೇಹಾನ್ಯೋ ಮಾನ್ಯ ಇತಿ ಸಂಬಂಧಃ । ತತ್ರ ಸಾರ್ವಜನೀನಂ ವ್ಯವಹಾರಂ ಪ್ರಮಾಣಯತಿ – **ಯಂ ದೇಹಿನಮಿತಿ** ॥ ಯಂ ಜೀವಂ ದೇಹಿನಂ ದೇಹಿಶಬ್ದವಾಚ್ಯಂ ವಿದುಃ ಸರ್ವೇಽಪಿ ವಿದುಃ । ದೇಹೀತಿ ಶಬ್ದಃ ದೇಹೋಽಸ್ಯಾಸ್ತೀತಿ ವ್ಯುತ್ಪತ್ತ್ಯಾ ಪಾಂಚಭೌತಿಕ-ದೇಹಸ್ವಾಮಿನಮೇವ ತಂ ಜೀವಮಾಹ । ದೇಹಿಪದವಾಚ್ಯತ್ವಾದೇವ ದೇಹಾದನ್ಯೋ ಜೀವಃ ಸಿದ್ಧ್ಯತೀತಿ ಭಾವಃ ॥ ೧೬೭ ॥

ಮತ್ತೊಂದು ಯುಕ್ತಿಯಿಂದ ಜೀವನಿಗೆ ದೇಹದಿಂದ ಭೇದವನ್ನೂ ನಿತ್ಯತ್ವವನ್ನೂ ಸಾಧಿಸುತ್ತಿದ್ದಾರೆ-

**ಜಾತಮಾತ್ರಶಿಶೋರಮ್ಬಾಸ್ತನಪಾನೇಷ್ಟಹೇತುತಾ ।**
**ಪ್ರಾಗ್ಭವೇಷ್ವನುಭೂತೈತಜ್ಜಾತೀಯಸ್ಯ ನಿದರ್ಶನಾತ್ ।**
**ಅನುಮೇಯಾ ಸಾ ಚ ದೇಹಜೀವೈಕ್ಯೇ ಶಕ್ಯತೇ ಕಥಮ್ ॥ ೧೬೮ ॥**

**ಅರ್ಥ–** ಜಾತಮಾತ್ರಶಿಶೋಃ = ಆಗತಾನೆ ಹುಟ್ಟಿದ ಮಗುವಿಗೆ, ಅಂಬಾಸ್ತನಪಾನೇಷ್ಟ ಹೇತುತಾ = ತಾಯಿಯ ಮೊಲೆ ಹಾಲ ಕುಡಿತದ ಇಷ್ಟಸಾಧನತ್ವವು, ಪ್ರಾಗ್ಭವೇಷು = ಹಿಂದಿನ ಜನ್ಮಗಳಲ್ಲಿ ಅನುಭೂತೈತಜ್ಜಾತೀಯಸ್ಯ – ಅನುಭೂತ = ಅನುಭವಿಸಲ್ಪಟ್ಟ, ಏತತ್ = ಈಗಿನ ಅಂಬಾಸ್ತನಪಾನಕ್ಕೆ, ಜಾತೀಯಸ್ಯ = ಸದೃಶವಾದ ಮತ್ತೊಬ್ಬ ತಾಯಿಯ ಮೊಲೆ ಹಾಲ ಕುಡಿತದ, ನಿದರ್ಶನಾತ್ = ದೃಷ್ಟಾಂತದಿಂದ, ಅನುಮೇಯಾ = ಅನುಮಾನಿ ಸಲ್ಪಡಬೇಕಾಗಿದೆ. ಸಾ ಚ = ಸ್ತನಪಾನಕ್ಕೆ ಇಷ್ಟಸಾಧನತ್ವವನ್ನು ಸಾಧಿಸುವ ಆ ಅನುಮಾನವು,

ದೇಹಜೀವೈಕ್ಯೇ = ದೇಹ ಜೀವಗಳಿಗೆ ಅಭೇದವಿದೆಯಾದರೆ, ಕಥಂ = ಹೇಗೆ, ಶಕ್ಯತೇ = ಸಾಧ್ಯವಾಗುತ್ತದೆ.

**ಅನುವಾದ–** ಮಕ್ಕಳು ಹುಟ್ಟಿದ ಕೂಡಲೆ ಅಮ್ಮನ ಮೊಲೆ ಹಾಲು ಕುಡಿಯಲು ಪ್ರವೃತ್ತಿ ಮಾಡುತ್ತದೆ. ಯಾವುದೇ ಪ್ರವೃತ್ತಿಗೂ ಇದು ಇಷ್ಟಸಾಧನ ಎಂಬ ಜ್ಞಾನವು ಮೂಲಭೂತವಾಗಿ ಕಾರಣವಾಗುತ್ತದೆ. ಅದರಂತೆ ಅಮ್ಮನ ಹಾಲು ಕುಡಿಯುವುದು ಇಷ್ಟಸಾಧನವೆಂಬ ಜ್ಞಾನ ಮಗುವಿಗೆ ಇದೆಯೆಂದೇ ಹೇಳಬೇಕು. ಅಂಬಾಸ್ತನಪಾನ ಇಷ್ಟ ಸಾಧನ ಎಂದು ಮಗುವಿಗೆ ಹೇಗೆ ತಿಳಿಯಲು ಸಾಧ್ಯ? ಹಿಂದಿನ ಜನ್ಮದಲ್ಲಿ ಅಮ್ಮನ ಹಾಲು ಕುಡಿದು ತೃಪ್ತಿಯನ್ನು ಅನುಭವಿಸಿದೆ. ಅದರ ಸಂಸ್ಕಾರವು ಇಂದು ಅಮ್ಮನ ಹಾಲು ಕುಡಿಯಲು ಕಾರಣವೆಂದು ಊಹಿಸಬೇಕಾಗುತ್ತದೆ. ಹಿಂದಿನ ಜನ್ಮದ ಅಂಬಾಸ್ತನಪಾನದಂತೆ ಇಂದಿನ ಅಂಬಾಸ್ತನಪಾನವೂ ಇಷ್ಟಸಾಧನವಾಗಿದೆಯೆಂದು ಅನುಮಾನ ಮಾಡಬೇಕು. ದೇಹಜೀವಗಳಿಗೆ ಐಕ್ಯವನ್ನು ಹೇಳಿದರೆ ಈ ಅನುಮಾನ ಹೇಗೆ ಸಾಧ್ಯ? ಈ ದೇಹದೊಂದಿಗೇ ಆತ್ಮನ ಉತ್ಪತ್ತಿ, ಜನ್ಮಾಂತರಗಳಿಲ್ಲ ಎಂದಾದರೆ ಮಗುವಿಗೆ ಅಂಬಾಸ್ತನಪಾನ ಇಷ್ಟಸಾಧನವೆಂಬ ಜ್ಞಾನ ಹೇಗೆ ಬಂದಿತು? ಯಾರು ಉಪದೇಶ ಮಾಡಿದರು?

**ಭಾವವಿಲಾಸಿನೀ–** ಯುಕ್ತ್ಯಂತರೇಣ ಜೀವಸ್ಯ ದೇಹಾದನ್ಯತ್ವಂ ನಿತ್ಯತ್ವಂ ಚ ಸಾಧಯತಿ–**ಜಾತೇತಿ** ॥ ಅಂಬಾಸ್ತನಪಾನೇಷ್ಟಹೇತುತಾ ಮಾತುಃ ಸ್ತನಪಾನಸ್ಯೇಷ್ಟಸಾಧನತೇತ್ಯರ್ಥಃ । ಪ್ರಾಗ್ಭವೇಷು ಅನುಭೂತಂ ಯದೇತಜ್ಜಾತೀಯಮ್ ಇದಾನೀಂತನಾಂಬಾಸ್ತನಪಾನಜಾತೀಯಮ್ ಅಂಬಾಸ್ತನಪಾನಾಂತರಂ ಪ್ರಾಗ್ಭವೀಯಂ ತಸ್ಯ ನಿದರ್ಶನಾದ್ ದೃಷ್ಟಾಂತಾದಿತ್ಯರ್ಥಃ । ತಥಾಚ ಪ್ರಯೋಗಃ । ಏತದಂಬಾಸ್ತನಪಾನಮ್ ಇಷ್ಟಸಾಧನಮ್ ಅಂಬಾಸ್ತನಪಾನತ್ವಾ-ತ್ಪ್ರಾಗ್ಭವೀಯಾಮ್ಬಾಸ್ತನಪಾನವದಿತಿ । ಅನ್ಯಥಾ ಸ್ತನಪಾನೇ ಪ್ರವೃತ್ತಿರೇವ ನ ಸ್ಯಾತ್ । ನಿಯಮೇನ ಸರ್ವೇಷಾಮ್ ಇಷ್ಟಸಾಧನತಾಜ್ಞಾನಸ್ಯ ಪ್ರವರ್ತಕತ್ವಾತ್ । ಭವತು ಸ್ತನಪಾನಸ್ಯೇಷ್ಟ-ಸಾಧನತಾಜ್ಞಾನಸ್ತನಪಾನೇ ಪ್ರವರ್ತಕಂ ತತಃ ಕಿಂ ಪ್ರಕೃತೇ? ಇತ್ಯತ ಆಹ – **ಸಾ ಚೇತಿ** ॥ ಸಾ ಸ್ತನಪಾನಸ್ಯೇಷ್ಟಸಾಧನತಾಽನುಮಾ ॥ ೧೬೮ ॥

**ವಿವರಣೆ–** ರಾಜರ ಮಾತಿಗೆ ಸಂವಾದಿಯಾದ ವಿವರಣೆ ಅನುವ್ಯಾಖ್ಯಾನದಲ್ಲಿದೆ.

ಜಾತಮಾತ್ರಾ ಮೃಗಾ ಗಾವೋ ಹಸ್ತಿನಃ ಪಕ್ಷಿಣೋ ಝಷಾಃ ।
ಭಯಾಭಯಸ್ವಭೋಗಾದೌ ಕಾರಣಾನಿ ವಿಜಾನತೇ ।

ಅಸ್ಮೃತೌ ಪೂರ್ವದೇಹಸ್ಯ ವಿಜ್ಞಾನಂ ತತ್ ಕಥಂ ಭವೇತ್ ।
ಅನ್ವಯವ್ಯತಿರೇಕಾದೇರನುಸಂಧಾನವಿಸ್ಮೃತಾ ॥ (ಅನುವ್ಯಾಖ್ಯಾನ-೩-೨-೨,೩)

**ಅರ್ಥ—** ಅತಃ= ಆದ್ದರಿಂದ, ಜಡಸ್ಯ = ಜಡಶರೀರಕ್ಕೆ, ಜೀವತ್ವಂ = ಜೀವತ್ವವನ್ನು, ಜಡಃ = ಅವಿವೇಕಿಯು, ವಕ್ತಿ = ಹೇಳುವನು, ಪಂಡಿತಃ = ಪ್ರಜ್ಞಾವಂತನು, ನ = ಅಲ್ಲ, ತತ್ = ಆದ್ದರಿಂದ, ಯಂ = ಯಾವ ಜೀವನನ್ನು, ದೇಹಿನಂ = ದೇಹವುಳ್ಳವನೆಂದು, ವಿದುಃ = ಎಲ್ಲರೂ ತಿಳಿದಿರುವರೋ, ಅಂತಹ ಜಡದೇಹಾನ್ಯಃ = ಜಡ ದೇಹಕ್ಕಿಂತ ಭಿನ್ನನಾದ, ಜೀವಃ ತು = ಜೀವನಾದರೋ, ಮಾನ್ಯಃ = ಮಾನ್ಯನಾಗಿರುವನು,

**ಅನುವಾದ—** ಜಡವೇ ಜೀವವಾಗಿ ಪರಿಣಾಮಗೊಳ್ಳುತ್ತದೆ ಎಂದು ಅವಿವೇಕಿ ಹೇಳಿಯಾನೇ ಹೊರತು ಪ್ರಜ್ಞಾವಂತರಾರೂ ಹೇಳುವುದಿಲ್ಲ. ಜೀವನನ್ನು ದೇಹೀ ಎಂದು ಕರೆವರು. ದೇಹೀ ಎಂದರೆ ದೇಹವುಳ್ಳ ದೇಹಕ್ಕಿಂತ ಬೇರೆಯಾದ ಜೀವ ಎಂದೇ ಅರ್ಥವಾಗುತ್ತದೆ. ಆದ್ದರಿಂದ ಜಡ ದೇಹದಿಂದ ಭಿನ್ನನಾದ ಸ್ವಭಾವತಃ ಜ್ಞಾನಾದಿಗುಣಗಳಿಗೆ ಆಶ್ರಯನಾದ ಕಾರಣ ಮಾನ್ಯನಾದ ಜೀವನಿದ್ದಾನೆಂಬುದು ನಿಶ್ಚಿತವಾಯಿತು.

**ಭಾವವಿಲಾಸಿನೀ—** ತಸ್ಮಾಜ್ಜಡಶರೀರಸ್ಯ ಜೀವತ್ವಂ ವದನ್ನಪಂಡಿತ ಇತ್ಯಾಹ – **ಅತ ಇತಿ** ॥ ಜಡಸ್ಯ ಜೀವತ್ವಂ ಯೋ ವಕ್ತಿ ಸ ಜಡೋಽವಿವೇಕೀತಿ ಸಂಬಂಧಃ । ಉಕ್ತಮರ್ಥಮುಪಸಂಹರತಿ – **ಜೀವ ಇತಿ** ॥ ತತ್ತಸ್ಮಾಜ್ಜಡದೇಹಾನ್ಯೋ ಮಾನ್ಯ ಇತಿ ಸಂಬಂಧಃ। ತತ್ರ ಸಾರ್ವಜನೀನಂ ವ್ಯವಹಾರಂ ಪ್ರಮಾಣಯತಿ – **ಯಂ ದೇಹಿನಮಿತಿ** ॥ ಯಂ ಜೀವಂ ದೇಹಿನಂ ದೇಹಿಶಬ್ದವಾಚ್ಯಂ ವಿದುಃ ಸರ್ವೇಽಪಿ ವಿದುಃ । ದೇಹೀತಿ ಶಬ್ದಃ ದೇಹೋಽಸ್ಯಾಸ್ತೀತಿ ವ್ಯುತ್ಪತ್ತ್ಯಾ ಪಾಂಚಭೌತಿಕ-ದೇಹಸ್ವಾಮಿನಮೇವ ತಂ ಜೀವಮಾಹ । ದೇಹಿಪದವಾಚ್ಯತ್ವಾದೇವ ದೇಹಾದನ್ಯೋ ಜೀವಃ ಸಿದ್ಧ್ಯತೀತಿ ಭಾವಃ ॥ ೧೬೭ ॥

ಮತ್ತೊಂದು ಯುಕ್ತಿಯಿಂದ ಜೀವನಿಗೆ ದೇಹದಿಂದ ಭೇದವನ್ನೂ ನಿತ್ಯತ್ವವನ್ನೂ ಸಾಧಿಸುತ್ತಿದ್ದಾರೆ-

**ಜಾತಮಾತ್ರಶಿಶೋರಮ್ಬಾಸ್ತನಪಾನೇಷ್ಟಹೇತುತಾ ।**
**ಪ್ರಾಗ್ಭವೇಷ್ವನುಭೂತೈತಜ್ಜಾತೀಯಸ್ಯ ನಿದರ್ಶನಾತ್ ।**
**ಅನುಮೇಯಾ ಸಾ ಚ ದೇಹಜೀವೈಕ್ಯೇ ಶಕ್ಯತೇ ಕಥಮ್ ॥ ೧೬೮ ॥**

**ಅರ್ಥ—** ಜಾತಮಾತ್ರಶಿಶೋಃ = ಆಗತಾನೆ ಹುಟ್ಟಿದ ಮಗುವಿಗೆ, ಅಂಬಾಸ್ತನಪಾನೇಷ್ಟ ಹೇತುತಾ = ತಾಯಿಯ ಮೊಲೆ ಹಾಲ ಕುಡಿತದ ಇಷ್ಟಸಾಧನತ್ವವು, ಪ್ರಾಗ್ಭವೇಷು = ಹಿಂದಿನ ಜನ್ಮಗಳಲ್ಲಿ ಅನುಭೂತೈತಜ್ಜಾತೀಯಸ್ಯ – ಅನುಭೂತ = ಅನುಭವಿಸಲ್ಪಟ್ಟ ಏತತ್ = ಈಗಿನ ಅಂಬಾಸ್ತನಪಾನಕ್ಕೆ, ಜಾತೀಯಸ್ಯ = ಸದೃಶವಾದ ಮತ್ತೊಬ್ಬ ತಾಯಿಯ ಮೊಲೆ ಹಾಲ ಕುಡಿತದ, ನಿದರ್ಶನಾತ್ = ದೃಷ್ಟಾಂತದಿಂದ, ಅನುಮೇಯಾ = ಅನುಮಾನಿಸಲ್ಪಡಬೇಕಾಗಿದೆ. ಸಾ ಚ = ಸ್ತನಪಾನಕ್ಕೆ ಇಷ್ಟಸಾಧನತ್ವವನ್ನು ಸಾಧಿಸುವ ಆ ಅನುಮಾನವು,

ದೇಹಜೀವೈಕ್ಯೇ = ದೇಹ ಜೀವಗಳಿಗೆ ಅಭೇದವಿದೆಯಾದರೆ, ಕಥಂ = ಹೇಗೆ, ಶಕ್ಯತೇ = ಸಾಧ್ಯವಾಗುತ್ತದೆ.

**ಅನುವಾದ–** ಮಕ್ಕಳು ಹುಟ್ಟಿದ ಕೂಡಲೆ ಅಮ್ಮನ ಮೊಲೆ ಹಾಲು ಕುಡಿಯಲು ಪ್ರವೃತ್ತಿ ಮಾಡುತ್ತದೆ. ಯಾವುದೇ ಪ್ರವೃತ್ತಿಗೂ ಇದು ಇಷ್ಟಸಾಧನ ಎಂಬ ಜ್ಞಾನವು ಮೂಲಭೂತವಾಗಿ ಕಾರಣವಾಗುತ್ತದೆ. ಅದರಂತೆ ಅಮ್ಮನ ಹಾಲು ಕುಡಿಯುವುದು ಇಷ್ಟ ಸಾಧನವೆಂಬ ಜ್ಞಾನ ಮಗುವಿಗೆ ಇದೆಯೆಂದೇ ಹೇಳಬೇಕು. ಅಂಬಾಸ್ತನಪಾನ ಇಷ್ಟ ಸಾಧನ ಎಂದು ಮಗುವಿಗೆ ಹೇಗೆ ತಿಳಿಯಲು ಸಾಧ್ಯ? ಹಿಂದಿನ ಜನ್ಮದಲ್ಲಿ ಅಮ್ಮನ ಹಾಲು ಕುಡಿದು ತೃಪ್ತಿಯನ್ನು ಅನುಭವಿಸಿದೆ. ಅದರ ಸಂಸ್ಕಾರವು ಇಂದು ಅಮ್ಮನ ಹಾಲು ಕುಡಿಯಲು ಕಾರಣವೆಂದು ಊಹಿಸಬೇಕಾಗುತ್ತದೆ. ಹಿಂದಿನ ಜನ್ಮದ ಅಂಬಾಸ್ತನಪಾನದಂತೆ ಇಂದಿನ ಅಂಬಾಸ್ತನಪಾನವೂ ಇಷ್ಟಸಾಧನವಾಗಿದೆಯೆಂದು ಅನುಮಾನ ಮಾಡಬೇಕು. ದೇಹಜೀವಗಳಿಗೆ ಐಕ್ಯವನ್ನು ಹೇಳಿದರೆ ಈ ಅನುಮಾನ ಹೇಗೆ ಸಾಧ್ಯ? ಈ ದೇಹದೊಂದಿಗೇ ಆತ್ಮನ ಉತ್ಪತ್ತಿ, ಜನ್ಮಾಂತರಗಳಿಲ್ಲ ಎಂದಾದರೆ ಮಗುವಿಗೆ ಅಂಬಾಸ್ತನಪಾನ ಇಷ್ಟಸಾಧನವೆಂಬ ಜ್ಞಾನ ಹೇಗೆ ಬಂದಿತು? ಯಾರು ಉಪದೇಶ ಮಾಡಿದರು?

**ಭಾವವಿಲಾಸಿನೀ–** ಯುಕ್ತ್ಯಂತರೇಣ ಜೀವಸ್ಯ ದೇಹಾದನ್ಯತ್ವಂ ನಿತ್ಯತ್ವಂ ಚ ಸಾಧಯತಿ–**ಜಾತೇತಿ** ॥ ಅಂಬಾಸ್ತನಪಾನೇಷ್ಟಹೇತುತಾ ಮಾತುಃ ಸ್ತನಪಾನಸ್ಯೇಷ್ಟಸಾಧನತೇತ್ಯರ್ಥಃ । ಪ್ರಾಗ್ಭವೇಷು ಅನುಭೂತಂ ಯದೇತಜ್ಜಾತೀಯಮ್ ಇದಾನೀಂತನಾಂಬಾಸ್ತನಪಾನಜಾತೀಯಮ್ ಅಂಬಾಸ್ತನಪಾನಾಂತರಂ ಪ್ರಾಗ್ಭವೀಯಂ ತಸ್ಯ ನಿದರ್ಶನಾದ್ ದೃಷ್ಟಾಂತಾದಿತ್ಯರ್ಥಃ । ತಥಾಚ ಪ್ರಯೋಗಃ । ಏತದಂಬಾಸ್ತನಪಾನಮ್ ಇಷ್ಟಸಾಧನಮ್ ಅಂಬಾಸ್ತನಪಾನತ್ವಾ-ತ್ಪ್ರಾಗ್ಭವೀಯಾಮ್ಬಾಸ್ತನಪಾನವದಿತಿ । ಅನ್ಯಥಾ ಸ್ತನಪಾನೇ ಪ್ರವೃತ್ತಿರೇವ ನ ಸ್ಯಾತ್ । ನಿಯಮೇನ ಸರ್ವೇಷಾಮ್ ಇಷ್ಟಸಾಧನತಾಜ್ಞಾನಸ್ಯ ಪ್ರವರ್ತಕತ್ವಾತ್ । ಭವತು ಸ್ತನಪಾನಸ್ಯೇಷ್ಟ-ಸಾಧನತಾಜ್ಞಾನಸ್ತನಪಾನೇ ಪ್ರವರ್ತಕಂ ತತಃ ಕಿಂ ಪ್ರಕೃತೇ? ಇತ್ಯತ ಆಹ – **ಸಾ ಚೇತಿ** ॥ ಸಾ ಸ್ತನಪಾನಸ್ಯೇಷ್ಟಸಾಧನತಾಽನುಮಾ ॥ ೧೬೮ ॥

**ವಿವರಣೆ–** ರಾಜರ ಮಾತಿಗೆ ಸಂವಾದಿಯಾದ ವಿವರಣೆ ಅನುವ್ಯಾಖ್ಯಾನದಲ್ಲಿದೆ.

ಜಾತಮಾತ್ರಾ ಮೃಗಾ ಗಾವೋ ಹಸ್ತಿನಃ ಪಕ್ಷಿಣೋ ಝಷಾಃ ।
ಭಯಾಭಯಸ್ವಭೋಗದೌ ಕಾರಣಾನಿ ವಿಜಾನತೇ ।

ಅಸ್ಮೃತೌ ಪೂರ್ವದೇಹಸ್ಯ ವಿಜ್ಞಾನಂ ತತ್ ಕಥಂ ಭವೇತ್ ।
ಅನ್ವಯವ್ಯತಿರೇಕಾದೇರನುಸಂಧಾನವಿಸ್ಮೃತಾ ॥ (ಅನುವ್ಯಾಖ್ಯಾನ-೩-೨-೨,೩)

**ನ್ಯಾಯಸುಧಾ** - ಅಸ್ತಿ ತಾವನ್ಮೃಗಾದೀನಾಂ ಸ್ತನಪಾನಾದೌ ಪ್ರವೃತ್ತಿಃ, ಶಂಕು ಕಂಡೂಯನಾದಿತೋ ನಿವೃತ್ತಿಶ್ಚ । ತತೋಽನುಮೀಯತೇ ವಿದ್ಯೇತೇ ತತ್ರ ತೇಷಾಂ ರಾಗದ್ವೇಷೌ ಇತಿ । ರಾಗದ್ವೇಷಯೋರೇವ ಪ್ರವೃತ್ತಿ ಕಾರಣತ್ವೇನ ಅಸ್ಮದಾದೌ ನಿರ್ಣೀತತ್ವಾತ್ । ನ ಚ ತತ್, ಜ್ಞಾನಂ ಪ್ರತ್ಯಕ್ಷಸಾಧ್ಯಮ್ । ಕಾರ್ಯಕಾರಣ ಭಾವಸ್ಯಾತೀಂದ್ರಿಯತ್ವಾತ್ । ಕಿಂ ತ್ವನುಮಾನೋಪದೇಶಸಾಧ್ಯಮೇವ । ನ ಚ ಮೃಗಾದೀನಾಮುಪದೇಶಃ ಸಂಭವತಿ । ಅನಧಿಕಾರಾತ್ । ತಸ್ಮಾತ್ ಪ್ರಾಗ್‌ಭವೀಯೋಪದೇಶ ಇತಿ ವಾಚ್ಯಮ್ । ನ ಚಾಸ್ಮೃತೋಽಸೌ ತತ್ಕಾರಣಮಿತಿ ತತ್‌ಸ್ಮೃತಿಸದ್ಭಾವೋಽಂಗೀಕಾರ್ಯಃ ।

ಯದ್ವಾಽನುಮಾನಮ್ । ನ ಚ ತತ್, ಯದ್ಯತ್‌ಸ್ತನಪಾನಂ ತದಿಷ್ಟಸಾಧನಂ; ಯದಿಷ್ಟಸಾಧನಂ ನ ಭವತಿ ತತ್‌ಸ್ತನಪಾನಂ ನ ಭವತಿ ಯಥಾಽಮುಕಮ್ । ಸ್ತನಪಾನಂ ಚೇದಮಿತ್ಯನ್ವಯಾದಿಸ್ಮರಣೇನ ವಿನಾ ಭವತಿ । ನ ಚಾನನುಭೂತೇ ಸ್ಮೃತಿರುಪ-ಪದ್ಯತೇ । ನ ಚಾಸ್ಮಿನ್ ಜನ್ಮನ್ಯನ್ವಯಾದ್ಯನುಭವೋಽಸ್ತಿ ಜಾತಮಾತ್ರಾಣಾ ಮುದಾಹೃತತ್ವಾತ್ । ಅತೋ ಜನ್ಮಾಂತರಾನುಭೂತಾನ್ವಯಾದಿ- ಸ್ಮರಣಮೇಷ್ಟವ್ಯಮ್ ।

ಸಿಂಹವ್ಯಾಘ್ರ ಮುಂತಾದ ಮೃಗಗಳು ಗೋವುಗಳು ಆನೆಗಳು ಪಕ್ಷಿಗಳು ಮತ್ಸ್ಯಗಳಿಗೆ ಸ್ತನಪಾನಾದಿಗಳಲ್ಲಿ ಪ್ರವೃತ್ತಿಗಳು, ಮುಳ್ಳುಗಳಿಂದ ಕಣ್ಣಲ್ಲಿ ತುರಿಸುಕೊಳ್ಳುವುದರಿಂದ ನಿವೃತ್ತಿಗಳು ಕಂಡಿವೆ. ಸ್ತನಪಾನಾದಿಗಳಿಂದ ಸುಖ, ಸಿಂಹಾದಿ ಮೃಗಗಳಿಂದ ಭಯ, ತಾಯಿ ಪ್ರಾಣಿಗಳಿಂದ ಅಭಯ, ಮುಳ್ಳುಗಳಿಂದ ಕಣ್ಣಲ್ಲಿ ತುರಿಸಿಕೊಳ್ಳುವುದರಿಂದ ದುಃಖವುಂಟಾಗುವುದೆಂದು ಮೃಗಾದಿಗಳಿಗೆ ಪರಿಜ್ಞಾನವಿದೆ. ಸುಖದುಃಖ ಭಯಾಭಯಾದಿಗಳಿಗಾಗಿ ಸ್ತನಪಾನಾದಿಗಳಿಗೂ ಕಾರ್ಯಕಾರಣಭಾವಜ್ಞಾನ ಮೃಗಗಳಿಗೆ ಹೇಗೆ ಬಂತು? ಪ್ರವೃತ್ತಿ ನಿವೃತ್ತಿಗಳಿಗೆ ರಾಗದ್ವೇಷಗಳು ಕಾರಣವೆಂದು ನಮ್ಮ ಅನುಭವದಲ್ಲಿ ನಿಶ್ಚಿತವಾಗಿದೆ. ರಾಗದಿಂದ ಇಷ್ಟಸಾಧನತ್ವಜ್ಞಾನವು, ದ್ವೇಷದಿಂದ ಅನಿಷ್ಟ ಸಾಧನತ್ವಜ್ಞಾನವು ಬರುತ್ತದೆ. ಈ ಇಷ್ಟಾನಿಷ್ಟಸಾಧನತ್ವಜ್ಞಾನವು ಮೃಗಾದಿಗಳಿಗೆ ಪ್ರತ್ಯಕ್ಷದಿಂದ ಬರಲು ಸಾಧ್ಯವಿಲ್ಲ, ಕಾಲಘಟಿತವಾದ ಕಾರ್ಯಕಾರಣಭಾವವು ಅತೀಂದ್ರಿಯವಾಗಿದೆ. ಅನುಮಾನದಿಂದ, ಉಪದೇಶದಿಂದ ಉಂಟಾಗುತ್ತದೆಯೆಂದು ಹೇಳಬೇಕು. ಪಶುಗಳಿಗೆ ಉಪದೇಶಗಳು ಕೂಡಲಾರವು. ಆದುದರಿಂದ ಜನ್ಮಾಂತರದಲ್ಲಿ ಅನುಭೂತವಾದುದರ ಸ್ಮೃತಿಯನ್ನೇ ಅಂಗೀಕರಿಸಬೇಕು. ಆದುದರಿಂದ ಮೃಗಾದಿಗಳಿಗೆ ಪೂರ್ವದೇಹದ ಸ್ಮರಣವು ಇದ್ದೇ ಇದೆ. ಹಾಗೆಯೇ ಮನುಷ್ಯಾದಿಗಳಿಗೂ ಪೂರ್ವದೇಹದ ಸ್ಮರಣೆಯಿದೆ. ಪೂರ್ವದೇಹದ ಸ್ಮರಣೆಯಿಂದ ಸ್ತನಪಾನಾದಿಗಳಿಗೂ ಸುಖಾದಿಗಳಿಗೂ ಕಾರ್ಯಕಾರಣಭಾವಜ್ಞಾನವಿದೆಯೆಂದೇ ಹೇಳಬೇಕು.

**ಯದಾ ದೇಹಾಂತರಜ್ಞಾನಂ ದೇಹೈಕ್ಯಾವಸಿತಿಃ ಕುತಃ? (ಅನುವ್ಯಾಖ್ಯಾನ-೩-೨-೨,೩)**

**ನ್ಯಾಯಸುಧಾ-** ಯದ್ಯೈವಮೇತದ್ದೇಹವರ್ತಿನೋ ಮಮ ನ ಕೇವಲಮಯಂ ದೇಹಃ, ಕಿಂತು ತತ್ಪ್ರಾಗನ್ಯೋಽಪಿ ಅಭೂದಿತಿ ದೇಹಾಂತರಸ್ಮರಣಂ ಪ್ರಮಿತಮ್ । ತದ್ಯೈತದ್ದೇಹೇನ ಸ್ವಸ್ಯೈಕ್ಯಾಧ್ಯವಸಾಯಃ ಕುತಃ ಸ್ಯಾತ್? ಕಿಂ ತು ಅನೇಕ ಮಣಿಷು ಅನುಸ್ಯೂತ ಸೂತ್ರವದನೇಕದೇಹಾನುಸ್ಯೂತಮಾತ್ಮಾನಂ ಪಶ್ಯತಃ ಸ್ವಸ್ಯ ತತೋಽತ್ಯಂತ-ಭೇದಾವಸಿತಿರೇವ ಯುಕ್ತಾ ।

ಈಗ ಈ ದೇಹದಲ್ಲಿರತಕ್ಕ ನನಗೆ ಕೇವಲ ಇದೇ ದೇಹವಲ್ಲ; ಇದಕ್ಕಿಂತ ಮೊದಲು ಬೇರೆ ಶರೀರವಿತ್ತು ಎಂದು ದೇಹಾಂತರ ಸ್ಮರಣವು ಯಾವಾಗ ಪ್ರಮಿತವಾಗಿದೆಯೋ ಆಗ ಈ ದೇಹದಿಂದ ತನಗೆ ಐಕ್ಯನಿಶ್ಚಯವು ಹೇಗೆ ಬರಲು ಸಾಧ್ಯ? ಅನೇಕ ಮಣಿಗಳಲ್ಲಿ ಅನುಸ್ಯೂತವಾದ ಹಾರದಂತೆ ಅನೇಕ ದೇಹಗಳಲ್ಲಿ ಅನುಸ್ಯೂತನಾಗಿರುವವನು ನಾನು ಎಂದು ತನ್ನನ್ನು ತಿಳಿದುಕೊಂಡವನಿಗೆ ಆ ದೇಹಗಳಿಗಿಂತ ತಾನು ಬೇರೆ ಎಂಬ ನಿಶ್ಚಯವೇ ಬರುತ್ತದೆ. ಯುಕ್ತಿಮಲ್ಲಿಕೆಯಲ್ಲಿ ಸೂಚಿಸಿದ ಅನುಮಾನ ಪ್ರಯೋಗ ಹೀಗಿದೆ -

ಏತದಂಬಾಸ್ತನಪಾನಂ ಇಷ್ಟಸಾಧನಂ ಅಂಬಾಸ್ತನಪಾನತ್ವಾತ್ ಪ್ರಾಗ್‌ಭವೀಯಾಂಬಾ-ಸ್ತನಪಾನವದಿತಿ ।

ಈ ಅಂಬಾಸ್ತನಪಾನವು ಇಷ್ಟಸಾಧನವು ಇದು ಅಂಬಾಸ್ತನಪಾನವಾದುದರಿಂದ ಹಿಂದಿನ ಜನ್ಮದ ಅಂಬಾಸ್ತನಪಾನದಂತೆ.

**ಅನ್ಯಸ್ಯೈವಾನುಭೂತಿಃ ಸ್ಯಾತ್ತತೋಽನ್ಯಸ್ಯಾನುಮಾ ಭವೇತ್ ।**
**ನಿತ್ಯದೇಹಾನ್ಯಜೀವಸ್ಯ ಪಕ್ಷೇ ತು ಕ್ಷೇಮಮೇತಿ ಸಾ ॥ ೧೬೯ ॥**

**ಅರ್ಥ–** ದೇಹವೇ ಆತ್ಮನಾದರೆ ದೇಹಗಳು ಆಯಾಯಾ ಜನ್ಮಗಳಲ್ಲಿ ನಾಶವಾಗುವುದರಿಂದ ಅನುಭೂತಿಃ = ಇಷ್ಟಸಾಧನತಾನುಭವವು, ಅನ್ಯಸ್ಯೈವ = ಬೇರೊಬ್ಬನಿಗೇ, ತತಃ (ದೃಷ್ಟಾಂತವಾದ ಹಿಂದಿನ ಜನ್ಮದ ಇಷ್ಟಸಾಧನತಾನುಭವವು ಯಾರಿಗೋ) ಅವನಿಗಿಂತ, ಅನ್ಯಸ್ಯ = ಬೇರೆಯವರಿಗೆ ಈ ಜನ್ಮದಲ್ಲಿ , ಅನುಮಾ = ಸ್ತನಪಾನಾದಲ್ಲಿ ಇಷ್ಟಸಾಧನತ್ವ ಅನುಮಾನವು (ಇತಿ = ಎಂದು) ಭವೇತ್ = ಆದೀತು, ನಿತ್ಯದೇಹಾನ್ಯಜೀವಸ್ಯ = ನಿತ್ಯನಾದ ದೇಹಾನ್ಯನಾದ ಜೀವನನ್ನು ಒಪ್ಪುವ, ಪಕ್ಷೇ = ಪಕ್ಷದಲ್ಲಿ, ಸಾ = ಇಷ್ಟಸಾಧನತ್ವಾನುಮಾನವು, ಕ್ಷೇಮಮ್ ಏತಿ =ಕ್ಷೇಮವನ್ನು ಹೊಂದುತ್ತದೆ.

**ಅನುವಾದ–** ದೇಹವೇ ಜೀವವೆನ್ನುವ ಪಕ್ಷದಲ್ಲಿ ಹಿಂದೆ ತಿಳಿಸಿದಂತೆ ದೃಷ್ಟಾಂತವಾದ ಜನ್ಮಾಂತರದ ಅಂಬಾಸ್ತನಪಾನವೇ ಇಲ್ಲವಾದುದರಿಂದ ಇಂದಿನ ಸ್ತನಪಾನದಲ್ಲಿ ಇಷ್ಟ ಸಾಧನತ್ವವನ್ನು ಊಹಿಸಲು ಸಾಧ್ಯವಿಲ್ಲ. ಅಂಬಾಸ್ತನಪಾನದಲ್ಲಿ

ಇಷ್ಟಸಾಧನತ್ವಾನುಭವವನ್ನು ಪಡೆದ ಜೀವ ಹಿಂದಿನ ಜನ್ಮದಲ್ಲಿಯೇ ದೇಹದೊಂದಿಗೆ ನಾಶವಾಗಿದ್ದಾನೆ. ಈಗ ಈ ದೇಹದೊಂದಿಗೆ ಹುಟ್ಟಿದ ಮತ್ತೊಬ್ಬ ಜೀವನಿಗೆ ಅದರ ಅನುಮಾನಗಳು, ಎಂದು ಹೇಳಿದಂತಾಗುತ್ತದೆ. ಒಬ್ಬನಿಗೆ ಅನುಮಾನ ಮತ್ತೊಬ್ಬನಿಗೆ ದೃಷ್ಟಾಂತಾನುಭವ ಎನ್ನುವುದು ಸರಿಯಲ್ಲ.

ದೇಹಾತಿರಿಕ್ತ ಜೀವವನ್ನು ಒಪ್ಪುವ ಪಕ್ಷದಲ್ಲಿ ಈ ದೋಷವಿಲ್ಲ. ಯಾವ ಜೀವನಿಗೆ ಹಿಂದಿನ ಜನ್ಮದಲ್ಲಿ ಸ್ತನಪಾನದಲ್ಲಿ ಇಷ್ಟಸಾಧನತ್ವಾನುಭವವು ಆಗಿದೆಯೋ ಅವನೇ ಈ ಜನ್ಮದಲ್ಲಿಯೂ ಹುಟ್ಟಿರುವುದರಿಂದ ಹಿಂದಿನ ಜನ್ಮದ ತನ್ನ ಅಂಬಾಸ್ತನಪಾನದ ದೃಷ್ಟಾಂತದಿಂದ ಈ ಜನ್ಮದ ಅಂಬಾಸ್ತನಪಾನದಲ್ಲಿ ಇಷ್ಟಸಾಧನತ್ವಾನುಮಿತಿ ಬರುವುದು ಸುಲಭವಾಗಿ ಸಾಧ್ಯವಾಗುತ್ತದೆ.

**ಭಾವವಿಲಾಸಿನೀ**– ದೇಹಜೀವೈಕ್ಯೇ ಕಥಂ ಶಕ್ಯತೇ? ಇತ್ಯೇತದುಪಪಾದಯತಿ – ಅನ್ಯಸ್ಯೈವೇತಿ ॥ ದೇಹಾನಾಂ ಚ ತತ್ತಜ್ಜನ್ಮಸು ನಾಶಾತ್ ಸ್ತನಪಾನಸ್ಯೇಷ್ಟಸಾಧನತಾನುಭೂತಿರನ್ಯಸ್ಯ ಪ್ರಾಗ್ಭವೀಯಸ್ಯ ಸ್ಯಾತ್। ಏತಜ್ಜನ್ಮನಿ ಸ್ತನಪಾನಸ್ಯೇಷ್ಟಸಾಧನತಾನುಮಾ ಚ ತತೋಽನ್ಯಸ್ಯ ಯಸ್ಯ ದೃಷ್ಟಾಂತೀಭೂತಪ್ರಾಗ್ಭವೀಯೇಷ್ಟಸಾಧನತಾನುಭವಃ ತತೋಽನ್ಯಸ್ಯ ಪುರುಷಸ್ಯೇತಿ ಸ್ಯಾತ್ । ನಚ ತದ್ಯುಕ್ತಮ್ । ಏಕಸ್ಯಾನುಮಾ ಅಪರಸ್ಯ ದೃಷ್ಟಾನ್ತಾನುಭವ ಇತ್ಯಸ್ಯ ಕ್ವಾಪ್ಯದರ್ಶನಾದಿತಿಭಾವಃ । ದೇಹಾತಿರಿಕ್ತಜೀವಪಕ್ಷೇ ತು ನಾಯಂ ದೋಷ ಇತ್ಯಾಹ – ನಿತ್ಯೇತಿ ॥ ನಿತ್ಯಶ್ಚಾಸೌ ದೇಹಾನ್ಯಜೀವಶ್ಚೇತಿ ವಿಗ್ರಹಃ। ಸಾ ಅನುಮಾ ಕ್ಷೇಮಮೇತಿ। ಅಯಂ ಭಾವಃ। ಜೀವಸ್ಯ ದೇಹಮಾತ್ರತ್ವಪಕ್ಷೇ ಉಕ್ತರೀತ್ಯಾ ದೃಷ್ಟಾನ್ತಾಭಾವೇನ ಸ್ತನಪಾನೇಷ್ಟಸಾಧನತ್ವಾನುಮಾನಾಸಂಭವಃ। ದೇಹಾನ್ಯನಿತ್ಯಜೀವಪಕ್ಷೇ ತು ಯಸ್ಯೈವ ಪ್ರಾಗ್ಜನ್ಮನಿ ಸ್ತನಪಾನೇಷ್ಟಸಾಧನತಾನುಭವಃ ತಸ್ಯೈವ ಜನ್ಮಾಂತರೇಽಪಿ ಜಾತತ್ವಾತ್ ಜನ್ಮನಿ ಸ್ವೇನೈವಾನುಭೂತಸ್ತನಪಾನದೃಷ್ಟಾಂತೇನ ಇದಾನೀಂತನಸ್ತನಪಾನೇಷ್ಟಸಾಧನತಾನುಮಾ ಸುಶಕಾ । ದೃಷ್ಟಾಂತಸೌಲಭ್ಯಾದಿತಿ । ಏವಂಚ ಪೂರ್ವಜನ್ಮನಿ ಸತ ಏವ ಏತಜ್ಜನ್ಮನಿ ಸತ್ತ್ವಾನ್ನಷ್ಟಾತ್ಪ್ರಾಗ್ದೇಹಾದುತ್ಪನ್ನಾದಸ್ಮಾದ್ದೇಹಾಚ್ಚಾನ್ಯದೇಹತಾಪಿ ಸಿದ್ಧಾ। ಅತೀತಾನಾಗತಾನಂತಜನ್ಮಸ್ವಪ್ಯೇವಮೇಕಸ್ಯ ಜೀವಸ್ಯಾಪೇಕ್ಷಿತತ್ವಾನ್ನಿತ್ಯತಾ ಚ ಸಿದ್ಧಾ। ಜೀವನಹೇತುಭೂತಸ್ಯಾಸ್ಯಾನುಮಾನಸ್ಯ ಪ್ರಾಮಾಣ್ಯಂ ಚ ಸಿದ್ಧಮಿತಿ ॥ ೧೬ ॥

**ವಿವರಣೆ**– ಹೀಗೆ ಹಿಂದಿನ ಜನ್ಮದಲ್ಲಿ ಇದ್ದವನೇ ಈ ಜನ್ಮದಲ್ಲಿಯೂ ಇರುವುದರಿಂದ ನಷ್ಟವಾದ ಹಿಂದಿನ ಶರೀರದಿಂದ, ಉತ್ಪನ್ನವಾದ ಈ ಜನ್ಮದ ಶರೀರದಿಂದಲೂ ತಾನು ಬೇರೆ ಎಂಬುದೂ ಸಿದ್ಧವಾಗುತ್ತದೆ. ಹೀಗೆ ಅತೀತ ಅನಾಗತ ಅನಂತ ಜನ್ಮಗಳಲ್ಲಿಯೂ ಒಬ್ಬ ಜೀವನ ಅಸ್ತಿತ್ವದ ಅಪೇಕ್ಷೆಯಿರುವುದರಿಂದ ಜೀವನಿತ್ಯವೆಂಬುದೂ ಸಿದ್ಧವಾಗುತ್ತದೆ. ಅನೇಕ ದೇಹಗಳಲ್ಲಿ ಒಬ್ಬನೇ ಜೀವ ಅನುಸ್ಯೂತನಾಗಿದ್ದಾನೆಂಬುದಕ್ಕೆ ಕಾರಣವಾದ ಅನುಮಾನಪ್ರಮಾಣಕ್ಕೆ ಪ್ರಾಮಾಣ್ಯವೂ ಸಿದ್ಧವಾಗುತ್ತದೆ.

ಇದುವರೆಗೆ ನಿರೂಪಿಸಿದ ಪ್ರಮೇಯವನ್ನು ಉಪಸಂಹಾರ ಮಾಡುತ್ತಿದ್ದಾರೆ -

**ಅತೋಽಂಬಾ ಸ್ತನಪಾನಂ ತನ್ನ ಶಿಶೋರೇವ ಪುಷ್ಟಯೇ ।**
**ಜೀವದೇಹಾನ್ಯತಾಯುಕ್ತಿಮಾನ್ಯತಾಪುಷ್ಟಯೇಽಪ್ಯಭೂತ್ ॥ ೧೭೦ ॥**

**ಅರ್ಥ–** ಅತಃ = ಆದುದರಿಂದ, ತತ್ = ಪ್ರಸಿದ್ಧವಾದ, ಅಂಬಾಸ್ತನಪಾನಂ = ಅಂಬಾ ಸ್ತನಪಾನವು, ಶಿಶೋರೇವ = ಕೇವಲ ಮಗುವಿನ, ಪುಷ್ಟಯೇ = ಪುಷ್ಟಿಗೆ, ನ = ಕಾರಣವಲ್ಲ, ಕಿಂತು= ಆದರೆ, ಜೀವದೇಹಾನ್ಯತಾಯುಕ್ತಿಮಾನ್ಯತಾಪುಷ್ಟಯೇಽಪಿ = ಜೀವನಲ್ಲಿರುವ ದೇಹನ್ಯತಾ ಯುಕ್ತಿಯ ಮಾನ್ಯತೆಯ ಪುಷ್ಟಿಗೂ ಕೂಡ, ಅಭೂತ್ = ಕಾರಣವಾಯಿತು. ಜೀವ ನಿತ್ಯತ್ವವನ್ನು ಸಾಧಿಸುವ ಯುಕ್ತಿಯ ಮಾನ್ಯತೆಗೂ ಕಾರಣವಾಯಿತು.

**ಅನುವಾದ– ಅಂಬಾಸ್ತನಪಾನವು ಕೇವಲ ಮಗುವಿನ ಪುಷ್ಟಿಗೆ ಕಾರಣವಾದುದಲ್ಲ. ಜೀವನು ದೇಹಕ್ಕಿಂತ ಬೇರೆ ಹಾಗು ನಿತ್ಯ ಎಂದು ಸಾಧಿಸುವ ಯುಕ್ತಿಯ ಮಾನ್ಯತೆಯ ಪುಷ್ಟಿಗೂ ಕಾರಣವಾಯಿತು.**

ಇಲ್ಲಿ ಪ್ರಕೃತ ಪ್ರಮೇಯದಲ್ಲಿ ತಾಯಿಯ ಸ್ಥಾನದಲ್ಲಿ- ಇಷ್ಟಸಾಧನತ್ವಾನುಮಾನವು, ಸ್ತನಪಾನದ ಸ್ಥಾನದಲ್ಲಿ - ಪೂರ್ವಜನ್ಮ, ಶಿಶು ಎಂದರೆ ಜೀವನ ದೇಹಾನ್ಯತಾವಾದ. ಪುಷ್ಟಿ ಎಂದರೆ ದೇಹಾನ್ಯಜೀವನ ಸಿದ್ಧಿ ಮತ್ತು ಜೀವನ ನಿತ್ಯತ್ವ ಸಿದ್ಧಿ ಎಂದು ಭಾವ. ಹೀಗೆ ವಿನೋದವಾಗಿ ತಮ್ಮ ಪ್ರತಿಪಾದನೆಯ ಸ್ವಾರಸ್ಯವನ್ನು ಶ್ರೀರಾಜರು ಆಸ್ವಾದಿಸುತ್ತಿದ್ದಾರೆ ಇಲ್ಲಿ.

**ಭಾವವಿಲಾಸಿನೀ–** ಉಕ್ತಮರ್ಥಮುಪಸಂಹರತಿ – **ಅತ ಇತಿ ॥** ತದಂಬಾಸ್ತನಪಾನಂ ಶಿಶೋರೇವ ಪುಷ್ಟ್ಯೈ ಯೇ ನ । ಕಿನ್ತು ಜೀವಸ್ಯ ಯಾ ದೇಹಾನ್ಯತಾ । ಉಪಲಕ್ಷಣಂ ಚೈತತ್ । ಜೀವನಿತ್ಯತಾ ಚೇತ್ಯಪಿ ಗ್ರಾಹ್ಯಮ್ । ಯಾ ಯುಕ್ತಿಮಾನ್ಯತಾ ಯುಕ್ತೇರನುಮಾನಸ್ಯ ಮಾನ್ಯತಾ ಪ್ರಮಾಣತ್ವೇನ ಮಾನ್ಯತಾ ತಯೋಃ ಪುಷ್ಟ್ಯೈ ಪೋಷಣಾಯಾಽಪ್ಯಭೂದಿತಿ ಸಂಬಂಧಃ ॥ ೧೭೦ ॥

ಮುಂದೆ ತಿಳಿಸುವ ಕಾರಣದಿಂದಲೂ ಅನುಮಾನವನ್ನು ಅವಶ್ಯವಾಗಿ ಅಂಗೀಕರಿಸಬೇಕೆಂದು ಹೇಳುತ್ತಿದ್ದಾರೆ-

**ಭುಕ್ತೇಃ ಪ್ರಾಗ್ ಭೋಕ್ಷ್ಯಮಾಣಾನ್ನವ್ಯಕ್ತಾವಿಷ್ಟಸ್ಯ ಹೇತುತಾ ।**
**ಅನುಮೇಯಾಽನುಭೂತಾನ್ನಜಾತೀಯತ್ವೇನ ಕೇವಲಮ್ ॥ ೧೭೧ ॥**

**ಅರ್ಥ–** ಭುಕ್ತೇಃ = ಭೋಜನಕ್ಕಿಂತಲೂ, ಪ್ರಾಕ್ = ಮುಂಚೆ, ಭೋಕ್ಷ್ಯಮಾಣಾನ್ನವ್ಯಕ್ತೌ = ಇನ್ನು ಮುಂದೆ ತಿನ್ನಲಿರುವ ಪಾತ್ರೆಯಲ್ಲಿರುವ ಅನ್ನದಲ್ಲಿ, ಅನುಭೂತಾನ್ನ ಜಾತೀಯತ್ವೇನ = ನಿನ್ನೆ ಇಷ್ಟಸಾಧನವೆಂದು ಅನುಭೂತವಾದ ಅನ್ನದ ದೃಷ್ಟಾಂತದಿಂದ, ಇಷ್ಟಸ್ಯ ಹೇತುತಾ = ಇಷ್ಟಸಾಧನತ್ವವು, ಕೇವಲಂ ಅನುಮೇಯಾ = ಕೇವಲ ಊಹಿಸಲ್ಪಡಬೇಕು.

**ಅನುವಾದ–** ನಾವು ಊಟ ಮಾಡಬೇಕಾದರೆ ಈ ಊಟ ಮಾಡುವ ಅನ್ನವು ನನ್ನ ಹಸಿವೆಯನ್ನು ಪರಿಹರಿಸುತ್ತದೆಂಬ ತಿಳುವಳಿಕೆ ಇರಬೇಕು. ಅದು ಹೇಗೆ ಬರಲು ಸಾಧ್ಯ? - ನಾನು ನಿನ್ನೆ ಊಟ ಮಾಡಿದ ಅನ್ನದಿಂದ ಹಸಿವೆ ಪರಿಹಾರವಾಯಿತು. ಆದ್ದರಿಂದ ಈ ದಿನ ಊಟ ಮಾಡಿದಾಗಲೂ ಅನ್ನದಿಂದ ಹಸಿವೆ ಪರಿಹಾರವಾಗುತ್ತದೆ ಎಂಬ ಯುಕ್ತಿಯಿಂದಲೇ ಊಟ ಮಾಡುವ ಅನ್ನವು ಹಸಿವೆಯ ಪರಿಹಾರ ಮಾಡುತ್ತದೆಯೆಂದು ತಿಳಿಯಬೇಕು. ಅನ್ನದಿಂದ ಹಸಿವೆ ಪರಿಹಾರ ಜ್ಞಾನವು ಪ್ರತ್ಯಕ್ಷದಿಂದ ಸಿದ್ಧವಾಗುವುದಿಲ್ಲ ತಾನೆ?

**ಭಾವವಿಲಾಸಿನೀ–**ಇತೋಽಪ್ಯನುಮಾನಸ್ಯ ಪ್ರಾಮಾಣ್ಯಮಂಗೀಕಾರ್ಯಮಿತ್ಯಾಹ–**ಭುಕ್ತೇರಿತಿ** ॥ ಭುಕ್ತೇಃ ಭೋಜನಾತ್ । ಭೋಕ್ಷ್ಯಮಾಣಾನ್ನವ್ಯಕ್ತೌ ಪಾತ್ರಸ್ಥಾನ್ನವ್ಯಕ್ತೌ । ಪೂರ್ವಮಿಷ್ಟಸಾಧನತ್ವೇನಾನುಭೂತಂ ಯದನ್ನಂ ತಜ್ಜಾತೀಯತ್ವೇನೇತ್ಯರ್ಥಃ । ತಥಾಚ ಪ್ರಯೋಗಃ । ಪಾತ್ರಸ್ಥಾನ್ನಮಿಷ್ಟಸಾಧನಮನ್ನತ್ವಾತ್ಪೂರ್ವದಿನಭುಕ್ತಾನ್ನವದಿತಿ ॥ ೧೭೧ ॥

ಅತೋಽನುಮಾನಮಾನತ್ವಮನಂಗೀಕುರ್ವತಸ್ತವ ।
ನಿತ್ಯೋಪವಾಸಾನ್ಮೃತ್ಯುಃ ಸ್ಯಾದಿತ್ಯುತ್ಪಶ್ಯತಿ ಯೌಕ್ತಿಕಃ ॥ ೧೭೨ ॥

**ಅರ್ಥ–** ಯತಃ = ಯಾವ ಕಾರಣದಿಂದ ನಿನ್ನ ಮತದಲ್ಲಿ ಅನುಮಾನವು ಅಪ್ರಮಾಣವೋ, ಅತಃ = ಆದ್ದರಿಂದ, ಅನುಮಾನಮಾನತ್ವಂ = ಅನುಮಾನದ ಪ್ರಾಮಾಣ್ಯವನ್ನು, ಅನಂಗೀಕುರ್ವತಃ = ಒಪ್ಪದಿರುವ, ತವ = ನಿನಗೆ, ನಿತ್ಯೋಪವಾಸಾತ್ = (ಅನ್ನದಿಂದ ಹಸಿವೆ ಪರಿಹಾರವೆಂಬುದು ಸಿದ್ಧವಾಗದೆ ಭೋಜನದಲ್ಲಿ ಪ್ರವೃತ್ತಿಯಾಗದೆ, ನಿತ್ಯ ಉಪವಾಸದಿಂದ, ಮೃತ್ಯುಃ = ಮರಣವು, ಸ್ಯಾತ್ = ಆದೀತು, ಇತಿ = ಎಂದು, ಯೌಕ್ತಿಕಃ = ಯುಕ್ತಿಪ್ರಾಮಾಣ್ಯವನ್ನು ಒಪ್ಪುವವನು, ಉತ್ಪಶ್ಯತಿ = ಹಾಸ್ಯಮಾಡುತ್ತಾನೆ!

**ಅನುವಾದ–** ಅನುಮಾನವನ್ನು ಪ್ರಮಾಣವಲ್ಲ ಎಂದು ಹೇಳುವುದರಿಂದ ಅನ್ನದಿಂದ ಹಸಿವೆ ಪರಿಹಾರವಾಗುತ್ತದೆಂದು ತಿಳಿಯಲಾಗದೆ ನೀನು ನಿತ್ಯೋಪವಾಸದಿಂದ ಸಾಯಬೇಕಾದೀತೆಂದು ಯುಕ್ತಿಯನ್ನು ಪ್ರಮಾಣವೆಂದು ಒಪ್ಪುವವರು ನಿನ್ನನ್ನು ಅಪಹಾಸ್ಯ ಮಾಡುವರು!

**ಭಾವವಿಲಾಸಿನೀ–ಅತ ಇತಿ** ॥ ಯತಸ್ತ್ವನ್ಮತೇಽನುಮಾನಮಮಾನಮತ ಇತ್ಯರ್ಥಃ। ಅನುಮಾನಸ್ಯ ಪ್ರಾಮಾಣ್ಯಾನಂಗೀಕಾರೇ ಭೋಕ್ಷ್ಯಮಾಣಾನ್ನಾದೀನಾಮಿಷ್ಟಸಾಧನತಾಜ್ಞಾನೋಪಾಯಾಭಾವಾತ್ತಜ್ಜ್ಞಾನಾಭಾವೇ ಚ ಭೋಜನಾದೌ ಪ್ರವೃತ್ತ್ಯಸಂಭವಾನ್ನಿತ್ಯೋಪವಾಸಾನ್ಮೃತ್ಯುಃ ಸ್ಯಾದಿತಿ ಯೌಕ್ತಿಕೋ ಜನ ಉತ್ಪಶ್ಯತೀತಿ ಸಂಬಂಧಃ। ಪ್ರಾಗನ್ನಪೂರಣಯೋಗ್ಯಹೃದಯಗುಹಾಜ್ಞಾನಾಯಾನುಮಾನ ಪ್ರಾಮಾಣ್ಯಮಾವಶ್ಯಕಮಿತ್ಯುಕ್ತಮ್ । ಇದಾನೀಮನ್ನಸ್ಯೇವೇಷ್ಟ ಸಾಧನತಾಜ್ಞಾನಾಯೇತಿ ವಿವೇಕಃ ॥ ೧೭೨ ॥

**ವಿವರಣೆ–** ಅನುಮಾನದ ಪ್ರಾಮಾಣ್ಯವನ್ನೊಪ್ಪದಿದ್ದರೆ ಮಗುವಿಗೆ ಅಂಬಾಸ್ತನಪಾನ ಕೊಡುವುದಿಲ್ಲವೆಂದಷ್ಟೇ ಅಲ್ಲ, ಪ್ರಾಣಿಸಾಮಾನ್ಯಕ್ಕೆ ಪಾನಭೋಜನಾದಿಗಳಲ್ಲಿ ಪ್ರವೃತ್ತಿಯೇ ಕೊಡುವುದಿಲ್ಲ - ಎಂದು ಭಾವ.

**ಜಡದೇಹಾತ್ಮತಾ ಜೀವೇ ಜಡಾಕಾರೇಣ ಚಾಕೃತಿಃ ।**
**ಯಚ್ಛೇದಭೇದವೇಧಾಗ್ನಿದಾಹಾದ್ಯೈಃ ಸ್ವವಧಪ್ರದಾ ॥**
**ತದ್ಬುಧಾಸ್ತಾಂ ನ ಮನ್ಯಂತೇ ಮನಃಖೇದಾಯ ಯತ್ಸದಾ ॥ ೧೭೩ ॥**

**ಅರ್ಥ–** ಜೀವೇ = ಜೀವನಲ್ಲಿ, ಜಡದೇಹಾತ್ಮತಾ = ಜಡದೇಹರೂಪತ್ವವು, ಚ = ಮತ್ತು, ಜಡಾಕಾರೇಣ = ಜಡವಾದ ಆಕಾರದಿಂದ, ಆಕೃತಿಃ = ಆಕಾರವು, ಯತ್ = ಯಾವ ಕಾರಣದಿಂದ, ಭೇದವೇಧಾಗ್ನಿದಾಹಾದ್ಯೈಃ = ದೇಹಕ್ಕೆ ಆಗುವ ಛೇದ, ಭೇದ, ವೇಧ, ಅಗ್ನಿದಾಹ ಮುಂತಾದವುಗಳಿಂದ, ಸ್ವವಧಪ್ರದಾ = ತನಗೇ (ಆತ್ಮಕ್ಕೇ) ನಾಶವುಂಟು ಮಾಡುವಂತಹದೋ, ತತ್ = ಆದ್ದರಿಂದ, ಯತ್ = ಯಾವ ಜೀವನಲ್ಲಿ ಜಡದೇಹ ರೂಪತ್ವವು, ಸದಾ = ಯಾವಾಗಲೂ, ಮನಃಖೇದಾಯ = ಮನಸ್ಸಿನ ದುಃಖಕ್ಕೆ ಕಾರಣವಾಗುವುದೋ, ತಾಂ = ಅಂತಹ, ಜಡದೇಹಾತ್ಮತ್ವವನ್ನು ಬುಧಾಃ = ಪ್ರಜ್ಞಾವಂತರು, ನ ಮನ್ಯಂತೇ = ಒಪ್ಪುವುದಿಲ್ಲ.

**ಅನುವಾದ–** ಜಡದೇಹವೇ ಜೀವಸ್ವರೂಪವೆಂದು, ದೇಹದ ಜಡಾಕಾರವೇ ಆತ್ಮನ ಆಕಾರವೆಂದೂ ಒಪ್ಪಿದರೆ ದೇಹಕ್ಕೆ ಆಗುವ ಛೇದ, ಭೇದ, ವೇದ ಬೆಂಕಿಯ ಸುಡುವಿಕೆಗಳಿಂದ ಆತ್ಮನೇ ನಾಶವಾಗಬೇಕಾಗುತ್ತದೆ. ಆದುದರಿಂದ ದುಃಖಕಾರಣವಾದ, ಆತ್ಮನಾಶಕ್ಕೂ ಕಾರಣವಾದ ನಿನ್ನ ಜಡದೇಹಾತ್ಮವಾದವನ್ನು ಪ್ರಜ್ಞಾವಂತರಾರೂ ಒಪ್ಪುವುದಿಲ್ಲ.

**ಭಾವವಿಲಾಸಿನೀ–** ಅತೋ ಯೋಗವಿಶೇಷೇಣೇತ್ಯಾದಿನೋಕ್ತಪ್ರಮೇಯಮುಪಸಂಹರತಿ – **ಜಡೇತಿ ॥** ಜೀವೇ ಜಡದೇಹಾತ್ಮತಾ ಜಡದೇಹರೂಪತಾ ತಥಾ ಜಡಾಕಾರೇಣ ಚಾಕೃತಿರಾಕಾರಃ । ಆಕಾರವತ್ತೇತಿ ಯಾವತ್ । ಯದ್ ಯಸ್ಮಾತ್ಕಾರಣಾತ್ ಛೇದಾದ್ಯೈಃ ಸ್ವಶರೀರಸ್ಯೈವ ಜೀವತ್ವೇನ ಶರೀರಸ್ಯ ಯಚ್ಛೇದಾದಿಕಂ ತಜ್ಜೀವಸ್ಯೇತ್ಯಾಪತತಿ । ಅತಸ್ಸ್ವವಧಪ್ರದೇತ್ಯರ್ಥಃ । ತತ್ತಸ್ಮಾತ್ಕಾರಣಾತ್ । ತಾಂ ಜಡದೇಹಾತ್ಮತಾಮ್ । ಯಜ್ಜಡದೇಹಾತ್ಮತ್ವಾದಿಕಂ ಸದಾ ಮನಃಖೇದಾಯ ಭವತಿ । ಅತೋ ನ ಮನ್ಯಂತ ಇತಿ ಪೂರ್ವೇಣ ಸಂಬಂಧಃ ॥ ೧೭೩ ॥

**ಸುಖಜ್ಯೋತಿಃಸ್ವರೂಪಾತ್ಮಚಿತಾಂ ಸಾಕಾರತಾಂ ಸ್ತುಮಃ ।**
**ಯಾ ಮೌಕ್ತನಾನಾಭೋಗಾನಾಂ ಭೋಕ್ತೃತ್ವಾಯ ಶ್ರುತೌ ಶ್ರುತಾ ।**
**ಸದಾ ದ್ರಷ್ಟೃತ್ವವಕ್ತೃತ್ವಸೌಂದರ್ಯಾದಿಗುಣಾಯ ಚ ॥ ೧೭೪ ॥**

**ಅನುವಾದ–** ನಾವು ಊಟ ಮಾಡಬೇಕಾದರೆ ಈ ಊಟ ಮಾಡುವ ಅನ್ನವು ನನ್ನ ಹಸಿವೆಯನ್ನು ಪರಿಹರಿಸುತ್ತದೆಂಬ ತಿಳುವಳಿಕೆ ಇರಬೇಕು. ಅದು ಹೇಗೆ ಬರಲು ಸಾಧ್ಯ? - ನಾನು ನಿನ್ನೆ ಊಟ ಮಾಡಿದ ಅನ್ನದಿಂದ ಹಸಿವೆ ಪರಿಹಾರವಾಯಿತು. ಆದ್ದರಿಂದ ಈ ದಿನ ಊಟ ಮಾಡಿದಾಗಲೂ ಅನ್ನದಿಂದ ಹಸಿವೆ ಪರಿಹಾರವಾಗುತ್ತದೆ ಎಂಬ ಯುಕ್ತಿಯಿಂದಲೇ ಊಟ ಮಾಡುವ ಅನ್ನವು ಹಸಿವೆಯ ಪರಿಹಾರ ಮಾಡುತ್ತದೆಯೆಂದು ತಿಳಿಯಬೇಕು. ಅನ್ನದಿಂದ ಹಸಿವೆ ಪರಿಹಾರ ಜ್ಞಾನವು ಪ್ರತ್ಯಕ್ಷದಿಂದ ಸಿದ್ಧವಾಗುವುದಿಲ್ಲ ತಾನೆ?

**ಭಾವವಿಲಾಸಿನೀ–**ಇತೋಽಪ್ಯನುಮಾನಸ್ಯ ಪ್ರಾಮಾಣ್ಯಮಂಗೀಕಾರ್ಯಮಿತ್ಯಾಹ–**ಭುಕ್ತೇರಿತಿ** ॥ ಭುಕ್ತೇಃ ಭೋಜನಾತ್ । ಭೋಕ್ಷ್ಯಮಾಣಾನ್ನವ್ಯಕ್ತೌ ಪಾತ್ರಸ್ಥಾನ್ನವ್ಯಕ್ತೌ । ಪೂರ್ವಮಿಷ್ಟಸಾಧನತ್ವೇನಾನುಭೂತಂ ಯದನ್ನಂ ತಜ್ಜಾತೀಯತ್ವೇನೇತ್ಯರ್ಥಃ । ತಥಾಚ ಪ್ರಯೋಗಃ । ಪಾತ್ರಸ್ಥಾನ್ನಮಿಷ್ಟಸಾಧನಮನ್ನತ್ವಾತ್ಪೂರ್ವದಿನಭುಕ್ತಾನ್ನವದಿತಿ ॥ ೧೭೧ ॥

> ಅತೋಽನುಮಾನಮಾನತ್ವಮನಂಗೀಕುರ್ವತಸ್ತವ ।
> ನಿತ್ಯೋಪವಾಸಾನ್ಮೃತ್ಯುಃ ಸ್ಯಾದಿತ್ಯುತ್ಪಶ್ಯತಿ ಯೌಕ್ತಿಕಃ ॥ ೧೭೨ ॥

**ಅರ್ಥ–** ಯತಃ = ಯಾವ ಕಾರಣದಿಂದ ನಿನ್ನ ಮತದಲ್ಲಿ ಅನುಮಾನವು ಅಪ್ರಮಾಣವೋ, ಅತಃ = ಆದ್ದರಿಂದ, ಅನುಮಾನಮಾನತ್ವಂ = ಅನುಮಾನದ ಪ್ರಾಮಾಣ್ಯವನ್ನು, ಅನಂಗೀಕುರ್ವತಃ = ಒಪ್ಪದಿರುವ, ತವ = ನಿನಗೆ, ನಿತ್ಯೋಪವಾಸಾತ್ = (ಅನ್ನದಿಂದ ಹಸಿವೆ ಪರಿಹಾರವೆಂಬುದು ಸಿದ್ಧವಾಗದೆ ಭೋಜನದಲ್ಲಿ ಪ್ರವೃತ್ತಿಯಾಗದೆ, ನಿತ್ಯ ಉಪವಾಸದಿಂದ, ಮೃತ್ಯುಃ = ಮರಣವು, ಸ್ಯಾತ್ = ಆದೀತು, ಇತಿ = ಎಂದು, ಯೌಕ್ತಿಕಃ = ಯುಕ್ತಿಪಾಮಾಣ್ಯವನ್ನು ಒಪ್ಪುವವನು, ಉತ್ಪಶ್ಯತಿ = ಹಾಸ್ಯಮಾಡುತ್ತಾನೆ!

**ಅನುವಾದ–** ಅನುಮಾನವನ್ನು ಪ್ರಮಾಣವಲ್ಲ ಎಂದು ಹೇಳುವುದರಿಂದ ಅನ್ನದಿಂದ ಹಸಿವೆ ಪರಿಹಾರವಾಗುತ್ತದೆಂದು ತಿಳಿಯಲಾಗದೆ ನೀನು ನಿತ್ಯೋಪವಾಸದಿಂದ ಸಾಯಬೇಕಾದೀತೆಂದು ಯುಕ್ತಿಯನ್ನು ಪ್ರಮಾಣವೆಂದು ಒಪ್ಪುವವರು ನಿನ್ನನ್ನು ಅಪಹಾಸ್ಯ ಮಾಡುವರು!

**ಭಾವವಿಲಾಸಿನೀ–ಅತ ಇತಿ** ॥ ಯತಸ್ತ್ವನ್ಮತೇಽನುಮಾನಮಮಾನಮತ ಇತ್ಯರ್ಥಃ। ಅನುಮಾನಸ್ಯ ಪ್ರಾಮಾಣ್ಯಾನಂಗೀಕಾರೇ ಭೋಕ್ಷ್ಯಮಾಣಾನ್ನಾದೀನಾಮಿಷ್ಟಸಾಧನತಾಜ್ಞಾನೋಪಾಯಾಭಾವಾತ್ತಜ್ಜ್ಞಾನಾಭಾವೇ ಚ ಭೋಜನಾದೌ ಪ್ರವೃತ್ತ್ಯಸಂಭವಾನ್ನಿತ್ಯೋಪವಾಸಾನ್ಮೃತ್ಯುಃ ಸ್ಯಾದಿತಿ ಯೌಕ್ತಿಕೋ ಜನ ಉತ್ಪಶ್ಯತೀತಿ ಸಂಬಂಧಃ। ಪ್ರಾಗನ್ನಪೂರಣಯೋಗ್ಯಹೃದಯಗುಹಾಜ್ಞಾನಾಯಾನುಮಾನ ಪ್ರಾಮಾಣ್ಯಮಾವಶ್ಯಕಮಿತ್ಯುಕ್ತಮ್ । ಇದಾನೀಮನ್ನಸ್ಯೇವೇಷ್ಟಸಾಧನತಾಜ್ಞಾನಾಯೇತಿ ವಿವೇಕಃ ॥ ೧೭೨ ॥

**ವಿವರಣೆ**– ಅನುಮಾನದ ಪ್ರಾಮಾಣ್ಯವನ್ನೊಪ್ಪದಿದ್ದರೆ ಮಗುವಿಗೆ ಅಂಬಾಸ್ತನಪಾನ ಕೂಡುವುದಿಲ್ಲವೆಂದಷ್ಟೇ ಅಲ್ಲ, ಪ್ರಾಣಿಸಾಮಾನ್ಯಕ್ಕೆ ಪಾನಭೋಜನಾದಿಗಳಲ್ಲಿ ಪ್ರವೃತ್ತಿಯೇ ಕೂಡುವುದಿಲ್ಲ - ಎಂದು ಭಾವ.

**ಜಡದೇಹಾತ್ಮತಾ ಜೀವೇ ಜಡಾಕಾರೇಣ ಚಾಕೃತಿಃ ।**
**ಯಚ್ಛೇದಭೇದವೇಧಾಗ್ನಿದಾಹಾದ್ಯೈಃ ಸ್ವವಧಪ್ರದಾ ॥**
**ತದ್ಬುಧಾಸ್ತಾಂ ನ ಮನ್ಯಂತೇ ಮನಃಖೇದಾಯ ಯತ್ಸದಾ ॥ ೧೭೩ ॥**

**ಅರ್ಥ**– ಜೀವೇ = ಜೀವನಲ್ಲಿ, ಜಡದೇಹಾತ್ಮತಾ = ಜಡದೇಹರೂಪತ್ವವು, ಚ = ಮತ್ತು, ಜಡಾಕಾರೇಣ = ಜಡವಾದ ಆಕಾರದಿಂದ, ಆಕೃತಿಃ = ಆಕಾರವು, ಯತ್ = ಯಾವ ಕಾರಣದಿಂದ, ಭೇದವೇಧಾಗ್ನಿದಾಹಾದ್ಯೈಃ = ದೇಹಕ್ಕೆ ಆಗುವ ಛೇದ, ಭೇದ, ವೇಧ, ಅಗ್ನಿದಾಹ ಮುಂತಾದವುಗಳಿಂದ, ಸ್ವವಧಪ್ರದಾ = ತನಗೇ (ಆತ್ಮಕ್ಕೇ) ನಾಶವುಂಟು ಮಾಡುವಂತಹದೋ, ತತ್ = ಆದ್ದರಿಂದ, ಯತ್ = ಯಾವ ಜೀವನಲ್ಲಿ ಜಡದೇಹ ರೂಪತ್ವವು, ಸದಾ = ಯಾವಾಗಲೂ, ಮನಃಖೇದಾಯ = ಮನಸ್ಸಿನ ದುಃಖಕ್ಕೆ ಕಾರಣವಾಗುವುದೋ, ತಾಂ = ಅಂತಹ, ಜಡದೇಹಾತ್ಮತ್ವವನ್ನು, ಬುಧಾಃ = ಪ್ರಜ್ಞಾವಂತರು, ನ ಮನ್ಯಂತೇ = ಒಪ್ಪುವುದಿಲ್ಲ.

**ಅನುವಾದ**– ಜಡದೇಹವೇ ಜೀವಸ್ವರೂಪವೆಂದು, ದೇಹದ ಜಡಾಕಾರವೇ ಆತ್ಮನ ಆಕಾರವೆಂದೂ ಒಪ್ಪಿದರೆ ದೇಹಕ್ಕೆ ಆಗುವ ಛೇದ, ಭೇದ, ವೇದ ಬೆಂಕಿಯ ಸುಡುವಿಕೆಗಳಿಂದ ಆತ್ಮನೇ ನಾಶವಾಗಬೇಕಾಗುತ್ತದೆ. ಆದುದರಿಂದ ದುಃಖಕಾರಣವಾದ, ಆತ್ಮನಾಶಕ್ಕೂ ಕಾರಣವಾದ ನಿನ್ನ ಜಡದೇಹಾತ್ಮವಾದವನ್ನು ಪ್ರಜ್ಞಾವಂತರಾರೂ ಒಪ್ಪುವುದಿಲ್ಲ.

**ಭಾವವಿಲಾಸಿನೀ**– ಅತೋ ಯೋಗವಿಶೇಷೇಣೇತ್ಯಾದಿನೋಕ್ತಪ್ರಮೇಯಮುಪಸಂಹರತಿ – **ಜಡೇತಿ** ॥ ಜೀವೇ ಜಡದೇಹಾತ್ಮತಾ ಜಡದೇಹರೂಪತಾ ತಥಾ ಜಡಾಕಾರೇಣ ಚಾಕೃತಿರಾಕಾರಃ । ಆಕಾರವತ್ತೇತಿ ಯಾವತ್ । ಯದ್ ಯಸ್ಮಾತ್ಕಾರಣಾತ್ ಛೇದಾದ್ಯೈಃ ಸ್ವಶರೀರಸ್ಯೈವ ಜೀವತ್ವೇನ ಶರೀರಸ್ಯ ಯಚ್ಛೇದಾದಿಕಂ ತಜ್ಜೀವಸ್ಯೇತ್ಯಾಪತತಿ । ಅತಸ್ಸ್ವವಧಪ್ರದೇತ್ಯರ್ಥಃ । ತತ್ತಸ್ಮಾತ್ಕಾರಣಾತ್ । ತಾಂ ಜಡದೇಹಾತ್ಮತಾಮ್ । ಯಜ್ಜಡದೇಹಾತ್ಮತ್ವಾದಿಕಂ ಸದಾ ಮನಃಖೇದಾಯ ಭವತಿ । ಅತೋ ನ ಮನ್ಯಂತ ಇತಿ ಪೂರ್ವೇಣ ಸಂಬಂಧಃ ॥ ೧೭೩ ॥

**ಸುಖಜ್ಯೋತಿಃಸ್ವರೂಪಾತ್ಮಚಿತಾಂ ಸಾಕಾರತಾಂ ಸ್ತುಮಃ ।**
**ಯಾ ಮೌಕ್ತನಾನಾಭೋಗಾನಾಂ ಭೋಕ್ತೃತ್ವಾಯ ಶ್ರುತೌ ಶ್ರುತಾ ।**
**ಸದಾ ದ್ರಷ್ಟೃತ್ವಕೃತ್ಸೌಂದರ್ಯಾದಿಗುಣಾಯ ಚ ॥ ೧೭೪ ॥**

**ಅರ್ಥ–** ಯಾ = ಯಾವ, ಸಾಕಾರತ್ವವು, ಸದಾ= ಯಾವಾಗಲೂ, ಮೌಕ್ತನಾನಾ-ಭೋಗನಾಂ = ಮುಕ್ತಿಯಲ್ಲಿರುವ ಬಗೆಬಗೆಯ ಭೋಗಗಳ, ಭೋಕ್ತೃತ್ವಾಯ = ಭೋಕ್ತೃತ್ವಸಿದ್ಧಿಗಾಗಿ, ದ್ರಷ್ಟೃತ್ವ ವಕ್ತೃತ್ವ ಸೌಂದರ್ಯಾದಿ ಗುಣಾಯ ಚ = ದ್ರಷ್ಟೃತ್ವ, ವಕ್ತೃತ್ವ, ಸೌಂದರ್ಯಾದಿ ಗುಣಗಳ ಸಿದ್ಧಿಗಾಗಿ, ಶ್ರುತೌ = ಶ್ರುತಿಯಲ್ಲಿ, ಶ್ರುತಾ = ಪ್ರತಿಪಾದಿತವಾಗಿದೆಯೋ, ಸುಖಜ್ಯೋತಿಸ್ಸ್ವರೂಪಾತ್ಮಚಿತಾಂ = ಸುಖರೂಪರೂ, ತೇಜೋರೂಪರೂ ಆದ ಚೇತನರ, ತಾಂ = ಆ, ಸಾಕಾರತಾಂ = ಜ್ಞಾನಾನಂದ ತೇಜೋ ರೂಪಕರಚರಣಾದಿ ಆಕಾರದಿಂದ ಕೂಡಿರುವಿಕೆಯನ್ನು, ಸ್ತುಮಃ = ಪ್ರಶಂಸಿಸುತ್ತೇವೆ.

**ಅನುವಾದ–** ಆತ್ಮರು ಸುಖಸ್ವರೂಪರು, ತೇಜೋರೂಪರು, ಜ್ಞಾನರೂಪರು, ಸುಖ ಜ್ಞಾನತೇಜೋರೂಪಗಳಾದ ಕರಚರಣಾದಿ ಆಕಾರವುಳ್ಳವರು. ಆದ್ದರಿಂದಲೇ ಅವರು ಮುಕ್ತಿಯಲ್ಲಿ ಮಾತನಾಡುತ್ತಾರೆ ನೋಡುತ್ತಾರೆ ವಿಹರಿಸುತ್ತಾರೆ ತಿನ್ನುತ್ತಾರೆ. ಸ್ತ್ರೀ ಭೋಗಗಳನ್ನು ಅನುಭವಿಸುತ್ತಾರೆ. ಸುಂದರವಾಗಿರುತ್ತಾರೆ ಎಂದು ಶ್ರುತಿಗಳು ಹೇಳುತ್ತವೆ. ಶ್ರುತಿಪ್ರತಿಪಾದ್ಯವಾದ ಇಂತಹ ಜೀವರ ಸುಂದರ ಆಕಾರವನ್ನು ಹೊಗಳುತ್ತೇವೆ. ಒಪ್ಪುತ್ತೇವೆ ಕೂಡ.

**ಭಾವವಿಲಾಸಿನೀ–** ನನು ಜಡಾಕಾರಾಭಾವೇ ಕಿಂ ನಿರಾಕಾರಾ ಏವ ಜೀವಾ ನೇತ್ಯಾಹ –**ಸುಖೇತಿ।।** ಸುಖಜ್ಯೋತಿಸ್ಸ್ವರೂಪಾಃ ಯಾ ಆತ್ಮಚಿತಃ ಜೀವಸ್ವರೂಪಭೂತಚಿತಃ ತಾಸಾಂ ಸಾಕಾರತಾಂ ಕರಚರಣಾದ್ಯಾಕಾರವತ್ತಾಂ ಸುಖಜ್ಯೋತಿಸ್ಸ್ವರೂಪಜೀವಚೈತನ್ಯಾತ್ಮಕ- ಹಸ್ತಪಾದಾದಿ-ಮತ್ತಾಮಿತ್ಯರ್ಥಃ । ಯಾ ಸುಖಜ್ಯೋತಿಸ್ಸ್ವರೂಪಚೈತನ್ಯಾತ್ಮಕಕರಚರಣಾದ್ಯಾಕಾರತಾ । ಶ್ರುತೌ 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದಿಶ್ರುತೌ ಸದಾ ಸರ್ವಕಾಲೇಷು ಮೌಕ್ತನಾನಾಭೋಗಾನಾಂ ಮುಕ್ತೌ ವಿದ್ಯಮಾನಾಂಗನಾಲಿಂಗನಾದಿನಾನಾಭೋಗಾನಾಂ ಭೋಕ್ತೃತ್ವಾಯ ಸದಾ ದ್ರಷ್ಟೃತ್ವವಕ್ತೃತ್ವ-ಸೌಂದರ್ಯಾದಿಗುಣಾಯ ಚ ಶ್ರುತಾ ಪ್ರತಿಪಾದಿತಾ । ಜ್ಞಾನಾದೇರ್ಹಸ್ತಪಾದಾದ್ಯಾ-ಕಾರತ್ವಮನಾನುಭವಿಕಮಿತ್ಯತೋ ಜ್ಯೋತಿರಿತ್ಯುಕ್ತಮ್ । 'ಪರಂ ಜ್ಯೋತಿಃ' ಇತಿ ಶ್ರುತೇಃ ವಿಷ್ಣೋಸ್ತತ್ಪ್ರತಿಬಿಂಬಭೂತಜೀವಾನಾಂ ಚ ಜ್ಯೋತೀರೂಪತ್ವಸ್ಯಾಪಿ ಸಿದ್ಧೇರ್ಜ್ಯೋತಿಷಸ್ಸಾಕಾರತಾ ತು ತೈಜಸಶರೀರೇ ಸರ್ವಾನುಭವಸಿದ್ಧಾ । ತದೇವ ಜ್ಯೋತಿರ್ಜ್ಞಾನರೂಪಮಾನಂದರೂಪಂ ಚೇತಿ ಜ್ಞಾನಾನಂದದಯೋಽಪಿ ಸಾಕಾರತ್ವೇ ಕಾನುಪಪತ್ತಿರಿತಿ ಭಾವಃ । ಸಾರ್ವಕಾಲೀನ-ಭೋಗಾಯ ಸಾರ್ವಕಾಲೀನ ಸೌಂದರ್ಯಾದಿಗುಣಾಯ ಚ ಸಾರ್ವಕಾಲೀನ ದೇಹಸ್ಯಾಪ್ಯಾವಶ್ಯಕತ್ವಾದ್ಬಾಹ್ಯದೇಹಸ್ಯ ತಾದೃಶಸ್ಯಾಭಾವಾತ್ ಸ್ವರೂಪಭೂತದೇಹಂ ಶ್ರುತಿರ್ವಕ್ತಿ ನ ಪುನರಾಗ್ರಹಾದೇವೇತ್ಯಭಿಸಂಧಿಃ । ತಾಂ ಪ್ರಾಮಾಣಿಕತ್ವಾದ್ಯೌಕ್ತಿಕತ್ವಾಚ್ಚ ಸ್ತುಮ ಇತಿ ಪೂರ್ವೇಣ ಸಂಬಂಧಃ । ಚಾರ್ವಾಕಾಂಗೀಕೃತಜಡದೇಹಾತ್ಮವಾದೋಽಪ್ರಾಮಾಣಿಕೋಽನಿಷ್ಟಪ್ರದಶ್ಚ । ಅತಃ ಶ್ರುತೇಃ ಶ್ರೌತಜನಾನಾಂ ಚ ನಾಸೌ ಸಮ್ಮತಃ । ಜ್ಞಾನಾನಂದಾತ್ಮಕಚಿದ್ರೂಪದೇಹಾತ್ಮವಾದಸ್ತು

ಪ್ರಾಮಾಣಿಕೋ ಮೌಕ್ತಸುಖಾನುಭವೋಪಯೋಗಿತ್ವೇನೇಷ್ಟಹೇತುಶ್ಚೇತಿ ಶ್ರುತೇಃ ಶ್ರೌತಜನಾನಾಂ ಚ ಸಮ್ಮತ ಇತಿ ಭಾವಃ। ಅತಶ್ಚಾರ್ವಾಕದೇಹಾತ್ಮತಾವಾದಾದ್ ವೈದಿಕದೇಹಾತ್ಮತಾವಾದಸ್ಯ ಚ ಮಹಾನ್ ಭೇದ ಇತಿ ಭಾವಃ ॥ ೧೭೪ ॥

**ವಿವರಣೆ–** ಜೀವರಿಗೆ ಜಡ ಆಕಾರವಿಲ್ಲವೆಂದರೆ ಅವರು ನಿರಾಕಾರರೇ ಎಂದು ಕೇಳಿದರೆ ಇಲ್ಲವೆನ್ನುತ್ತಾರೆ-

ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।
ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ॥

ಪರಂ ಜ್ಯೋತಿಸ್ಸ್ವರೂಪನಾದ ಪರಮಾತ್ಮನನ್ನು ಪಡೆದು ತನ್ನ ಸ್ವರೂಪದ ಆವಿರ್ಭಾವವನ್ನು ಪಡೆಯುತ್ತಾನೆ. ಮೋಕ್ಷದಲ್ಲಿ ಸ್ವೇಚ್ಛಾನುಸಾರ ತಿನ್ನುತ್ತಾ ಆಡುತ್ತಾ ಸಂತೋಷ ಪಡುತ್ತಾ ಇರುತ್ತಾನೆ.

'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ ಮೇಲೆ ಅಪರೋಕ್ಷಜ್ಞಾನಿಯು ಮೋಕ್ಷಕ್ಕೆ ಪ್ರತಿಬಂಧಕವಾದ ಪುಣ್ಯಪಾಪ ಇವೆರಡನ್ನೂ ಕಳೆದುಕೊಂಡು ನಿರ್ದೋಷನಾಗಿ ತನ್ನ ಯೋಗ್ಯತಾನುಸಾರವಾದ ಪೂರ್ಣಾನಂದವೆಂಬ ಸಾಮ್ಯವನು ಪಡೆಯುವನು.

ಹೀಗೆ ಶ್ರುತಿಯಲ್ಲಿ ಜೀವರಿಗೆ ಮುಕ್ತಿಯಲ್ಲಿ ನಾನಾಬಗೆಯ ಭೋಗಗಳ ಸಿದ್ಧಿಗಾಗಿ ಜ್ಞಾನಾನಂದಾತ್ಮಕ ಶರೀರವನ್ನು ಹೇಳಲಾಗಿದೆ. ಆದ್ದರಿಂದ ಜೀವಾತ್ಮನು ನಿರಾಕಾರನಲ್ಲ ಸಾಕಾರನು.

ಜ್ಞಾನಾನಂದಾದಿಗಳಿಗೆ ಹಸ್ತಪಾದಾದಿರೂಪತ್ವವು ಲೋಕದಲ್ಲಿ ಅನುಭವ ಸಿದ್ಧವಾಗಿಲ್ಲ ಎಂದರೆ ಅದಕ್ಕೆ ಜ್ಯೋತಿಸ್ಸ್ವರೂಪನು ಬ್ರಹ್ಮನು ಎಂದು ಶ್ರುತಿಯಲ್ಲಿ ಹೇಳಲಾಗಿದೆ. ಜ್ಯೋತಿಸ್ವರೂಪನಾದ ಭಗವಂತನ ಪ್ರತಿಬಿಂಬರಾದ ಜೀವರು, ಜ್ಞಾನಾನಂದ ಸ್ವರೂಪರಾಗಲೇ ಬೇಕಲ್ಲವೇ? ತೈಜಸಶರೀರದಲ್ಲಿ ತೇಜಸ್ಸಿಗೂ ಸಾಕಾರತ್ವವಿದೆ ಎಂದು ಅನುಭವಸಿದ್ಧದಾಗಿರುವುದರಿಂದ ಜ್ಯೋತಿಸ್ವರೂಪನಾದ ವಿಷ್ಣುವಿನ ಪ್ರತಿಬಿಂಬನಾದ ಜೀವನೂ ಜ್ಞಾನಾನಂದಮಯ ಸ್ವರೂಪದೇಹ ಹೊಂದಿರುವನು. ಮುಕ್ತಿಯಲ್ಲಿ ಸಾರ್ವಕಾಲಿಕ ಭೋಗಕ್ಕೋಸ್ಕರ, ಸಾರ್ವಕಾಲಿಕ ಸೌಂದರ್ಯಾದಿ ಗುಣಗಳ ಸಿದ್ಧಿಗೋಸ್ಕರ ಸಾರ್ವಕಾಲಿಕ ದೇಹವೂ ಆವಶ್ಯಕವಾಗಿದೆ. ಬಾಹ್ಯವಾದ ಸ್ಥೂಲದೇಹವು ಅಂತಹುದಲ್ಲ - ಜ್ಞಾನಾನಂದಾದಿ ಸ್ವರೂಪವಲ್ಲ. ಆದ್ದರಿಂದ ಜ್ಞಾನಾನಂದಾತ್ಮಕವಾದ ಸ್ವರೂಪದೇಹವು ಮುಕ್ತರಿಗೆ ಇದೆಯೆಂದು ಒಪ್ಪಲೇಬೇಕು. ಕೇವಲ ದುರಾಗ್ರಹದಿಂದ ಹೀಗೆ ಹೇಳುತ್ತಿಲ್ಲ. ಹೀಗೆ ಮುಕ್ತ ಜೀವರ ಸಾಕಾರತ್ವವು ಪ್ರಾಮಾಣಿಕವಾದುದರಿಂದಲೂ ಯುಕ್ತಿಯುಕ್ತವಾದುದರಿಂದಲೂ ಅದನ್ನು ಪ್ರಶಂಸೆ ಮಾಡುತ್ತೇವೆ.

ಚಾರ್ವಾಕರು ಒಪ್ಪುವ ಜಡದೇಹಾತ್ಮವಾದವು ಅಪ್ರಾಮಾಣಿಕವೂ ಅನಿಷ್ಟಪದವೂ ಆಗಿದೆ. ಆದುದರಿಂದ ಚಾರ್ವಾಕರ ಜಡದೇಹಾತ್ಮವಾದವು ವೇದಕ್ಕೆ ಹಾಗೂ ವೈದಿಕರಿಗೆ ಸಮ್ಮತವಲ್ಲ.

ಜ್ಞಾನಾನಂದಾತ್ಮಕವಾದ ಚಿದ್ರೂಪದೇಹಾತ್ಮವಾದವು ಪ್ರಾಮಾಣಿಕವಾಗಿದೆ ಮಾತ್ರವಲ್ಲ ಮುಕ್ತಿಯ ಸುಖಾನುಭವಕ್ಕೆ ಉಪಯೋಗಿಯೂ ಆಗಿರುವುದರಿಂದ ಇಷ್ಟ ಸಾಧನವೂ ಆಗಿದೆ. ಆದುದರಿಂದ ಶ್ರುತಿಗೆ ಶ್ರೌತರಿಗೆ ಸಮ್ಮತವಾಗಿದೆ. ಹೀಗೆ ಚಾರ್ವಾಕರ ದೇಹಾತ್ಮವಾದಕ್ಕೂ ಹಾಗೂ ವೈದಿಕರ ದೇಹಾತ್ಮವಾದಕ್ಕೂ ಮಹತ್ತರವಾದ ಅಂತರವಿದೆ ಎಂದು ಭಾವ.

**ಪ್ರಮಾಣಸತ್ತ್ವಚಿಂತಾಂ ತು ಶ್ರುತಿರೇವ ನಿಕೃಂತತಿ ।**
**ಯುಕ್ತಿಸ್ತು ನಿತ್ಯಚೈತನ್ಯಾಕಾರಂ ಸತ್ಕುರುತೇತರಾಮ್ ॥ ೧೭೫ ॥**

**ಅರ್ಥ–** ಪ್ರಮಾಣಸತ್ತ್ವಚಿಂತಾಂತು = ಈ ವಿಷಯದಲ್ಲಿ ಪ್ರಮಾಣವೇನು? ಎಂಬ ಚಿಂತೆಯನ್ನಾದರೂ, ಶ್ರುತಿರೇವ = ವೇದವೇ, ನಿಕೃಂತತಿ = ಪರಿಹರಿಸುತ್ತದೆ, ಯುಕ್ತಿಃ ತು = ಯುಕ್ತಿಯಾದರೋ, ನಿತ್ಯಚೈತನ್ಯಾಕಾರಂ = ನಿತ್ಯಚೈತನ್ಯ ರೂಪನೆಂಬುದನ್ನೇ, ಸತ್ಕುರುತೇತರಾಂ = ಚೆನ್ನಾಗಿ ಸತ್ಕರಿಸುತ್ತದೆ.

**ಅನುವಾದ–** ಪ್ರಮಾಣವಾದ ವೇದವೇ ಜೀವನ ಸಾಕಾರತ್ವವನ್ನು ಸಮರ್ಥಿಸುವುದರಿಂದ ಮತ್ತೆ ಇದಕ್ಕೇನು ಪ್ರಮಾಣವೆಂಬ ಚಿಂತೆಯಿಲ್ಲ. ಯುಕ್ತಿಯೂ ಸಮರ್ಥವಾಗಿ ನಿತ್ಯಚೈತನ್ಯಾಕಾರವನ್ನು ಪ್ರತಿಪಾದಿಸಿರುವುದರಿಂದ ಈ ವಾದವು ಯುಕ್ತಿಯುಕ್ತವೂ ಆಗಿದೆ.

**ಭಾವವಿಲಾಸಿನೀ–** ಇದಾನೀಂ ಚಾರ್ವಾಕಮತಪ್ರಸ್ತಾವಪ್ರಸಂಜಾತಸ್ವಸಾಕಾರಮತ-ಮನಂಗೀಕುರ್ವಾಣಂ ನಿರಾಕಾರವಾದಿನಂ ಪ್ರತ್ಯಾಹ – **ಪ್ರಮಾಣೇತಿ** ॥ ಉಕ್ತವಕ್ಷ್ಯಮಾಣಶ್ರುತಿ-ಸಿದ್ಧತ್ವಾದಿತಿ ಭಾವಃ । ಯುಕ್ತಿಸಿದ್ಧತ್ವಾಚ್ಚಾಂಗೀಕಾರ್ಯಾ ಸಾಕಾರತೇತ್ಯಾಹ–**ಯುಕ್ತಿಸ್ತ್ವಿತಿ** ॥೧೭೫॥

**ವಿವರಣೆ–** ಚಾರ್ವಾಕಮತದ ಪ್ರಸ್ತಾವನೆಯಿಂದ ಪ್ರಸಕ್ತವಾದ ತನ್ನ ಸಾಕಾರ ಮತವನ್ನು ಒಪ್ಪದಿರುವ ನಿರಾಕಾರವಾದಿಯನ್ನು ಕುರಿತು ಸಾಕಾರತ್ತ್ವವು ವೇದದಿಂದಲೇ ಸಿದ್ಧವಾಗುತ್ತದೆ ಎಂದು ಮೂಲಕಾರರು ಈ ಶ್ಲೋಕದಿಂದ ಹೇಳುತ್ತಿದ್ದಾರೆ.

**ಅಣೂನಾಮಣುರಾಕಾರೋ ಯಥಾ ನಿತ್ಯೋಽಸ್ಯನಾದಿತಃ ।**
**ಜ್ಯೋತಿರ್ಮಯಾಸ್ತಥಾ ಜೀವಾಸ್ಸಾಕಾರಾಸ್ಸಂತು ಸಂತತಮ್ ॥ ೧೭೬ ॥**

**ಅರ್ಥ–** ಯಥಾ= ಯಾವ ರೀತಿಯಾಗಿ, ಅಣೂನಾಂ= ಪರಮಾಣುಗಳಿಗೆ, ಅಣುಃ= ಸೂಕ್ಷ್ಮವಾದ, ನಿತ್ಯಃ= ನಿತ್ಯವಾದ, ಆಕಾರ= ಪಾರಿಮಾಂಡಲ್ಯಾಕಾರವು, ಅನಾದಿತಃ=

ಅನಾದಿಯಾಗಿ, ಅಸ್ತಿ= ಇದೆಯೋ, ತಥಾ= ಅದೇ ರೀತಿಯಾಗಿ, ಜ್ಯೋತಿರ್ಮಯಾಃ= ತೇಜೋರೂಪರಾದ, ಜೀವಾಃ= ಜೀವರು, ಸಂತತಂ= ಯಾವಾಗಲೂ, ಸಾಕಾರಃ ಸಂತು= ಆಕರಸಹಿತರಾಗಿರಲಿ!!

**ಅನುವಾದ–** **ಪರಮಾಣುಗಳಿಗೆ ಅಣುವಾದ ನಿತ್ಯವಾದ ಆಕಾರವು ಹೇಗಿದೆಯೋ ಹಾಗೆಯೇ ಅನಾದಿಕಾಲದಿಂದ ತೇಜೋಮಯರಾದ ಜೀವರಿಗೂ ಅನಾದಿನಿತ್ಯವಾದ ಚೈತನ್ಯರೂಪವಾದ ಆಕಾರವು ಇರಲಿ. ತೊಂದರೆಯೇನು?**

**ಭಾವವಿಲಾಸಿನೀ–** ತದುಪಪಾದಯತಿ – **ಅಣೂನಾಮಿತಿ** ॥ ಯಥಾ ಅಣೂನಾಂ ಪರಮಾಣೂನಾಮ್ ಅಣುಃ ಸೂಕ್ಷ್ಮಃ ನಿತ್ಯಶ್ಚಾಕಾರಃ ಪಾರಿಮಾಂಡಲ್ಯಾಖ್ಯಃ ಪರಿತೋ ಮಂಡಲಾಕಾರಃ ಅನಾದಿತೋऽಸ್ತಿ ತಥಾ ಜೀವಾ ನಿತ್ಯೇನೈವಾಕಾರೇಣ ಸಾಕಾರಾಸ್ಸಂತ್ವಿತಿ ಭಾವಃ ॥೧೭೬॥

ಅಣುರೂಪವಾದ ಆಕಾರವನ್ನು ವಿವರಿಸುತ್ತಿದ್ದಾರೆ -

**ಪರಿತೋ ಮಂಡಲಾಕಾರಾತ್ ಪಾರಿಮಾಂಡಲ್ಯಸಂಜ್ಞಿತಾಮ್ ।**
**ಕಥಯನ್ತಿ ಮಹಾತ್ಮಾನಃ ಪರಮಾಣುಷು ಚಾಕೃತಿಮ್ ॥ ೧೭೭ ॥**

**ಅರ್ಥ–** ಮಹಾತ್ಮಾನಃ = ಮಹಾತ್ಮರು, ಪರಿತೋ ಮಂಡಲಾಕಾರಾತ್ = ಸುತ್ತಲೂ ವರ್ತುಲಾಕಾರವಾಗಿರುವುದರಿಂದ, ಪಾರಿಮಾಂಡಲ್ಯಸಂಜ್ಞಿತಾಂ = ಪಾರಿಮಾಂಡಲ್ಯವೆಂದು ಹೆಸರುಳ್ಳ, ಆಕೃತಿಂ = ಆಕಾರವನ್ನು, ಕಥಯಂತಿ = ಹೇಳುತ್ತಾರೆ.

**ಅನುವಾದ–** **ಸುತ್ತಲೂ ವರ್ತುಲಾಕಾರವಾಗಿರುವುದರಿಂದ ಮಹಾತ್ಮರು ಪರಮಾಣುವಿಗೆ ಪಾರಿಮಾಂಡಲ್ಯವೆಂಬ ಹೆಸರಿನ ಆಕಾರವನ್ನು ಹೇಳುತ್ತಾರೆ.**

**ಭಾವವಿಲಾಸಿನೀ–** ತದೇವ ವಿಶದಯತಿ – **ಪರಿತ ಇತಿ** ॥ ಮಂಡಲಾಕಾರಾದ್ ವರ್ತುಲಾಕಾರಾತ್ ॥ ೧೭೭ ॥

**ಯಥಾ ಜಾಲಮರೀಚಿಸ್ಥಾ ವರ್ತುಲಾಸ್ತ್ರಸರೇಣವಃ ।**
**ತತೋऽಪ್ಯತ್ಯಂತಸೌಕ್ಷ್ಮ್ಯೇಣ ವರ್ತುಲಾಸ್ತೇऽಪಿ ರೇಣವಃ ॥ ೧೭೮ ॥**

**ಅರ್ಥ–** ಯಥಾ= ಯಾವ ರೀತಿಯಲ್ಲಿ, ಜಾಲಮರೀಚಿಸ್ಥಾಃ= ಹೆಂಚಿನ ರಂಧ್ರದ ಎಡೆಯಿಂದ ಒಳಬರತಕ್ಕ, ಸೂರ್ಯಕಿರಣದಲ್ಲಿ ಕಾಣುವ, ತ್ರಸರೇಣವಃ= ತ್ರ್ಯಣುಕುಗಳು, ವರ್ತುಲಾಃ= ವರ್ತುಲಾಕಾರಗಳಾಗಿವೆಯೋ, ತಥಾ= ಅದೇ ರೀತಿಯಲ್ಲಿ, ತತಃ ಅಪಿ= ಆ ತ್ರ್ಯಣುಕಗಳಿಗಿಂತಲೂ, ಅತ್ಯಂತ ಸೌಕ್ಷ್ಮ್ಯೇಣ= ಅತ್ಯಂತ ಸೂಕ್ಷ್ಮರೂಪದಿಂದ, ತೇ ರೇಣವಃ ಅಪಿ= ಆ ಪರಮಾಣುಗಳೂ ಕೂಡ, ವರ್ತುಲಾಃ= ವರ್ತುಲಾಕಾರಗಳಾಗಿವೆ.

**ಅನುವಾದ–** ಹೆಂಚಿನ ಸಂದಿಯಿಂದ ತೂರಿ ಬರುವ ಬಿಸಿಲುಕೋಲಿನಲ್ಲಿ ಕಾಣುವ ಧೂಳಿನ ಕಣವು ತ್ರಸರೇಣು ಎನಿಸುವಂತಹದು. ಅದಕ್ಕೆ ವರ್ತುಲಾಕಾರವೊಂದಿರುವುದು ಕಾಣುತ್ತದೆ. ಅದಕ್ಕಿಂತಲೂ ಸೂಕ್ಷ್ಮವಾದ ಪರಮಾಣುಗಳೂ ಕೂಡ ವರ್ತುಲಾಕಾರವುಳ್ಳವು.

**ಭಾವವಿಲಾಸಿನೀ–** ತತೋಽಪಿ ತ್ರಸರೇಣುಭ್ಯೋಽಪಿ । ತೇಽಪಿ ರೇಣವಃ ಪರಮಾಣುರೂಪಾ ರೇಣವ ಇತ್ಯರ್ಥಃ ॥ ೧೭೮ ॥

ಹಸ್ತಪಾದಾದಿಗಳೇ ಆಕಾರವು ವರ್ತುಲತ್ವಾದಿಗಳು ಆಕಾರಗಳಲ್ಲವೆಂದರೆ ಉತ್ತರಿಸುತ್ತಿದ್ದಾರೆ -

**ಹಸ್ತಾದಿಃ ಕ್ವಚಿದಾಕಾರಃ ಕ್ವಚಿದಾಕೃತಿರೀದೃಶೀ ।**
**ಪೃಥುಬುಧ್ನೋದರಾಕಾರೋ ಘಟಸ್ಯೇತಿ ನ ಕಿಂ ಶ್ರುತಮ್ ॥ ೧೭೯ ॥**

**ಅರ್ಥ–** ಕ್ವಚಿತ್ = ಕೆಲವೆಡೆ, ಜೀವರಲ್ಲಿ, ಹಸ್ತಾದಿಃ = ಕೈ ಮೊದಲಾದುವು ಆಕಾರವು. ಕ್ವಚಿತ್ = ಕೆಲವೆಡೆ, ಪರಮಾಣ್ವಾದಿಗಳಲ್ಲಿ ಈದೃಶೀ = ಹಿಂದೆ ತಿಳಿಸಿದ ವರ್ತುಲತ್ವಾದಿಗಳು, ಆಕೃತಿಃ = ಆಕಾರವು, ಘಟಸ್ಯ = ಘಟಕ್ಕೆ, ಪೃಥುಬುದ್ನೋದರಾಕಾರಃ = ವಿಶಾಲವಾದ ತಳ ಹಾಗು ಉದರದ ಆಕಾರವು, ಇತಿ = ಎಂದು, ನ ಶ್ರುತಂ ಕಿಮ್ = ಕೇಳಲ್ಪಟ್ಟಿಲ್ಲವೇನು?

**ಅನುವಾದ–** ಒಮ್ಮೊಮ್ಮೆ ಹಸ್ತಪಾದಾದಿಗಳು ಆಕಾರವೆನಿಸುತ್ತವೆ. ಒಮ್ಮೊಮ್ಮೆ ಇಂತಹ ವರ್ತುಲತ್ವಾದಿಗಳು ಆಕಾರವಾಗುತ್ತವೆ. ಘಟಕ್ಕೆ ಪೃಥುಬುಧ್ನೋದರಾಕಾರ ಇದೆಯೆಂದು ಕೇಳಿಲ್ಲವೇ?

**ಭಾವವಿಲಾಸಿನೀ–** ನನು ಹಸ್ತಪಾದಾದಿರೇವಾಕಾರಃ । ನ ವರ್ತುಲತ್ವಾದಿರಿತ್ಯತ ಆಹ – **ಹಸ್ತಾದಿರಿತಿ** ॥ ಕ್ವಚಿಜ್ಜೀವೇಷು ಕ್ವಚಿತ್ಪರಮಾಣ್ವಾದೌ ಈದೃಶೀ ಪೂರ್ವೋಕ್ತಾ । ಹಸ್ತಪಾದಾದಿವ್ಯತಿರಿಕ್ತಾಕಾರಂ ಸರ್ವಾನುಭವಸಿದ್ಧಂ ಕರೋತಿ – **ಪೃಥ್ವಿತಿ** ॥ ಸಂಸ್ಥಾನವಿಶೇಷೋ ಹ್ಯಾಕಾರಸ್ಸ ಚ ಚೇತನೇ ಹಸ್ತಪಾದಾದಿರೂಪಃ ಅಚೇತನೇ ವರ್ತುಲತ್ವದೀರ್ಘತ್ವಹ್ರಸ್ವತ್ವತ್ರಿಕೋಣತ್ವಚತುಷ್ಕೋಣತ್ವಾದಿರೂಪಃ। ಸ ಚ ನಿತ್ಯೇಷು ನಿತ್ಯಃ ಅನಿತ್ಯೇಷ್ವನಿತ್ಯಃ । ಸರ್ವತ್ರಾಪ್ಯಾಕಾರಪದ ಪ್ರಯೋಗದರ್ಶನಾದಾಕಾರತಾಪ್ಯಂಗೀಕಾರ್ಯೈವೇತಿ ಭಾವಃ ॥ ೧೭೯ ॥

**ವಿವರಣೆ–** ಆಕಾರವೆಂದರೆ ಪದಾರ್ಥಗಳ ಸಂಸ್ಥಾನವಿಶೇಷವು. ಚೇತನರಲ್ಲಿ ಹಸ್ತ ಪಾದಾದಿಗಳು ಆಕಾರ. ಅಚೇತನರಲ್ಲಿ ವರ್ತುಲತ್ವ, ದೀರ್ಘತ್ವ, ಹ್ರಸ್ವತ್ವ, ತ್ರಿಕೋಣತ್ವ - ಚತುಷ್ಕೋಣತ್ವಾದಿ ರೂಪ ಆಕಾರವು. ಆಕಾರವು ನಿತ್ಯಪದಾರ್ಥಗಳಲ್ಲಿ ನಿತ್ಯವಾದುದು. ಅನಿತ್ಯ ಪದಾರ್ಥಗಳಲ್ಲಿ ಅನಿತ್ಯವಾದುದು. ಹಿಂದೆ ತಿಳಿಸಿದ ಎಲ್ಲೆಡೆ ಇದು ಇದರ ಆಕಾರವೆಂದು ಆಕಾರಶಬ್ದದ ವ್ಯವಹಾರ ಮಾಡುತ್ತೇವೆ. ಆದ್ದರಿಂದ ಅವುಗಳನ್ನು ಅದರ ಆಕಾರವೆಂದು ಒಪ್ಪಲೇಬೇಕು.

**ಅತೋ ನಿತ್ಯಚಿದಾಕಾರೋ ಯುಕ್ತಿಸಿದ್ಧೋ ನ ವಾರ್ಯತೇ ॥ ೧೮೦ ॥**

**ಅರ್ಥ–** ಅತಃ = ಆದ್ದರಿಂದ ಚೇತನರಿಗೆ, ಯುಕ್ತಿಸಿದ್ಧಃ = ಯುಕ್ತಿಯಿಂದ ಸಿದ್ಧವಾದ, ನಿತ್ಯಚಿದಾಕಾರಃ = ನಿತ್ಯಚಿದ್ರೂಪವಾದ ಆಕಾರವು, ನ ವಾರ್ಯತೇ = ನಿರಾಕರಿಸಲ್ಪಡಲು ಸಾಧ್ಯವಿಲ್ಲ.

**ಅನುವಾದ–** ಆದ್ದರಿಂದ ಆತ್ಮನು ನಿತ್ಯಜ್ಞಾನಸ್ವರೂಪನು. ನಿತ್ಯಜ್ಞಾನಸ್ವರೂಪವೇ ಆತ್ಮನ ಆಕಾರವಾಗಿರುತ್ತದೆ ಎಂಬೀ ವಿಷಯವು ಸಯುಕ್ತಿಕವಾದುದು. ಆದ್ದರಿಂದ ಯಾರೂ ಅದನ್ನು ನಿರಾಕರಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಅಣೂನಾಮಿತ್ಯಾದಿನೋಕ್ತಂ ಪ್ರಮೇಯಮುಪಸಂಹರತಿ – **ಅತ ಇತಿ** ॥ ನಿತ್ಯಚಿದಾಕಾರಶ್ಚೇತನಾನಾಮಿತಿ ಶೇಷಃ ॥ ೧೮೦ ॥

**ಸರ್ವಾವಕಾಶದಾತ್ರೀ ಚ ವ್ಯಾಪ್ತಾ ಚ ವಿರಲಾಽಕೃತಿಃ ।**
**ನಭಸ್ಯಸ್ತಿ ನ ಚೇದೀಶವ್ಯಾಪ್ತೇಃ ಕಿಂ ಸ್ಯಾನ್ನಿದರ್ಶನಂ ॥ ೧೮೧ ॥**

**ಅರ್ಥ–** ಸರ್ವಾವಕಾಶದಾತ್ರೀ ಚ = ಎಲ್ಲಾ ವಸ್ತುಗಳ ಸ್ಥಿತಿಗೆ ಅವಕಾಶಪ್ರದವಾದ, ವ್ಯಾಪ್ತಾ ಚ = ಮತ್ತು ವ್ಯಾಪ್ತವಾದ, ವಿರಲಾಕೃತಿಃ = ನಿಬಿಡವಲ್ಲದ ಆಕಾರವು, ನಭಸಿ = ಆಕಾಶದಲ್ಲಿ ಅಸ್ತಿ ನ ಚೇತ್ = ಇಲ್ಲದಿದ್ದರೆ, ಈಶವ್ಯಾಪ್ತೇಃ = ಈಶ್ವರನ ವ್ಯಾಪ್ತಿಗೆ, ನಿದರ್ಶನಂ ಕಿಂ ಸ್ಯಾತ್ = ಯಾವುದನ್ನು ದೃಷ್ಟಾಂತವಾಗಿ ಹೇಳಬೇಕು? (ಹೇಳಲು ಬರುವುದಿಲ್ಲ)

**ಅನುವಾದ–** ಆಕಾಶಕ್ಕೂ ಕೂಡ ಒಂದು ಆಕಾರವಿದ್ದೇ ಇದೆ. ಆ ಆಕಾರವು ಎಲ್ಲ ವಸ್ತುಗಳೂ ಆಕಾಶದಲ್ಲಿರಲು ಅನುಕೂಲ ಮಾಡಿಕೊಡುವಂತಹದು ಮತ್ತು ದಟ್ಟವಲ್ಲದ್ದೂ ಆಗಿವೆ. ಅಂತಹ ಆಕಾರವನ್ನು ಆಕಾಶಕ್ಕೆ ಒಪ್ಪದಿದ್ದರೆ ಪರಮಾತ್ಮನ ವ್ಯಾಪ್ತಿಗೆ ಯಾವ ವಸ್ತುವನ್ನು ದೃಷ್ಟಾಂತವನ್ನಾಗಿ ಸ್ವೀಕರಿಸಲು ಸಾಧ್ಯವಾಗುತ್ತದೆ?

**ಭಾವವಿಲಾಸಿನೀ–** ನಭೋವನ್ನಿರಾಕಾರಾ ಜೀವಾಃ ಕಿಂ ನ ಸ್ಯುರಿತ್ಯತಃ ತದಪಿ ಸಾಕಾರಮೇವೇತ್ಯಾಹ – **ಸರ್ವೇತಿ** ॥ ಸರ್ವೇಷಾಮವಕಾಶದಾತ್ರೀ । ವಿರಲಾ ನಿಬಿಡತಾವಿಧುರಾ । ನಭಸ ಈದೃಶಾಕಾರತಾನಂಗೀಕಾರೇ ಬಾಧಕಮಾಹ – **ನಚೇದಿತಿ** ॥ ಈಶವ್ಯಾಪ್ತೇರೀಶಸ್ಯ ಪರಮೇಶ್ವರಸ್ಯ ವ್ಯಾಪ್ತೇಃ । ತಥಾಚ ವ್ಯಾಪ್ತವಿರಲಾಕಾರ ಆಕಾಶಸ್ಯಾಪ್ಯಸ್ತೀತಿ ಭಾವಃ ॥ ೧೮೧ ॥

**ವಿವರಣೆ–** ಇಲ್ಲಿ ಜೀವರು, ಆಕಾರರಹಿತರು ವ್ಯಾಪ್ತರಾದ್ದರಿಂದ, ಆಕಾಶದಂತೆ ಎಂಬ ಪ್ರತಿವಾದಿಗಳ ಯುಕ್ತಿಗೆ ದೃಷ್ಟಾಂತವಾದ ಆಕಾಶದಲ್ಲಿ ಸಾಧ್ಯವೈಕಲ್ಯವನ್ನು ಹೇಳಿ, ಈಶ್ವರನು ಆಕಾರವುಳ್ಳವನು ವ್ಯಾಪ್ತನಾದ್ದರಿಂದ ಆಕಾಶದಂತೆ ಎಂಬ ಯುಕ್ತಿಯಿಂದ ಈಶ್ವರನಿಗೆ ಸಾಕಾರತ್ವವನ್ನು ಸಮರ್ಥಿಸಿದ್ದಾರೆ. ಇದನ್ನು ಒಪ್ಪದಿದ್ದರೆ ಈಶನ ವ್ಯಾಪ್ತಿಗೆ ನಿದರ್ಶನವೇ ಇಲ್ಲದೇ ಹೋಗಬೇಕಾಗುತ್ತದೆ ಎಂಬ ತರ್ಕವನ್ನು ತೋರಿದ್ದಾರೆ.

**ದೂರಸ್ಥೈರ್ನೀಲಿಮಾ ಚಾಸ್ಯ ದೃಶ್ಯತೇ ಸರ್ವಲೌಕಿಕೈಃ ।**
**ವಾಯೋಶ್ಚ ಶೀತಸ್ಪರ್ಶಸ್ಯಾಽಽಧಾರಾಕಾರೋಽನುಮೀಯತೇ ॥ ೧೮೨ ॥**

**ಅರ್ಥ–** ಅಸ್ಯ = ಈ ಆಕಾಶದ, ನೀಲಿಮಾ = ನೀಲವರ್ಣವು, ದೂರಸ್ಥೈಃ = ದೂರದಲ್ಲಿ ನಿಂತು ನೋಡುವ, ಸರ್ವಲೌಕಿಕೈಃ = ಸರ್ವರಿಂದಲೂ, ದೃಶ್ಯತೇ = ಕಾಣಲ್ಪಡುತ್ತದೆ, (ಪ್ರತ್ಯಕ್ಷವಾಗಿ ತೋರುತ್ತದೆ.) ವಾಯೋಃ ಚ = ವಾಯುವಿಗಾದರೋ, ಶೀತಸ್ಪರ್ಶಸ್ಯ = ಶೀತಸ್ಪರ್ಶಕ್ಕೆ, ಆಧಾರಾಕಾರಃ = ಆಧಾರವಾದ (ಆಶ್ರಯವಾದ ಒಂದು ಆಕಾರವು) ಅನುಮೀಯತೇ = ಊಹಿಸಲ್ಪಡುತ್ತದೆ.

**ಅನುವಾದ– ಈ ಆಕಾಶದ ನೀಲ ಬಣ್ಣವು ದೂರದಲ್ಲಿ ನಿಂತು ನೋಡುವ ಜನಸಾಮಾನ್ಯರಿಗೂ ಕಾಣುತ್ತದೆ. ಅಂತೆಯೇ ಎಲ್ಲರಿಗೂ ಅನುಭವ ಸಿದ್ಧವಾಗಿರುವ, ವಾಯುವಿನ ಶೀತ ಸ್ಪರ್ಶಕ್ಕೂ ಆಧಾರವಾಗಿ ಒಂದು ಆಕಾರವು ವಾಯುವಿಗೂ ಇದೆ ಅನುಮಾನ ಪ್ರಮಾಣದಿಂದ ಊಹಿಸಬಹುದಾಗಿದೆ.**

**ಭಾವವಿಲಾಸಿನೀ–** ಆಕಾರಾಂತರಮಪ್ಯನುಭಾವಯತಿ – **ದೂರಸ್ಥೈರಿತಿ** ॥ ನೀಲಿಮಾ ನೀಲೋ ವರ್ಣಃ । ಅಸ್ಯಾಕಾಶಸ್ಯ । ಆಕಾಶೋ ನೀಲಿಮೋದೇತೀತಿ ಶ್ರುತೇಃ ನ ಭ್ರಮಮಾತ್ರಮೇತತ್ । ವಾಯೋರಪಿ ಸಾಕಾರತ್ವಂ ಸಾಧಯತಿ – **ವಾಯೋರಿತಿ** ॥ ಅನ್ಯಥಾ ವಾಯುಸ್ಪರ್ಶಸ್ಯ ನಿರಾಧಾರತ್ವಂ ಸ್ಯಾದಿತಿ ಭಾವಃ ॥ ೧೮೨ ॥

**ವಿವರಣೆ–** ಅಷ್ಟೇ ಅಲ್ಲದೆ ಆಕಾಶವು, ಆಕಾರವುಳ್ಳದ್ದು ಸರ್ವಲೌಕಿಕರಿಂದ ಆದರ ನೀಲಿಮೆಯು ಕಾಣಲ್ಪಟ್ಟದ್ದರಿಂದ, ಅಥವಾ ಆಕಾಶೋ ನೀಲಿಮೋದೇತಿ ಎಂಬ ಶ್ರುತಿಸಿದ್ಧವಾದ್ದರಿಂದ ಎಂದು ಆಕಾಶಕ್ಕೆ ಆಕೃತಿಯನ್ನು ಸಾಧಿಸಿದ್ದಾರೆ.

ವಾಯುವು ಆಕಾರವುಳ್ಳದ್ದು ಶೀತಸ್ಪರ್ಶಕ್ಕೆ ಆಧಾರವಾದ್ದರಿಂದ, ಜಲದಂತೆ ಎಂಬ ಯುಕ್ತಿಯಿಂದ ವಾಯುವಿಗೂ ಆಕೃತಿಯನ್ನು ಸಾಧಿಸಿದ್ದಾರೆ. ಇಲ್ಲದಿದ್ದರೆ ವಾಯುಸ್ಪರ್ಶಕ್ಕೆ ಒಂದು ಆಧಾರವೇ ಇಲ್ಲವೆಂದಾಗುತ್ತದೆ. ಆದರಂತೆ ಜೀವರಿಗೂ ಒಂದು ಆಕಾರವನ್ನು ಒಪ್ಪಬೇಕೆಂದು ಅಭಿಪ್ರಾಯ.

**ಇತರೇಷಾಂ ತು ಭೂತಾನಾಂ ಆಕಾರಃ ಸರ್ವಸಾಕ್ಷಿಗಃ ।**
**ಪುಂಪಶೋಸ್ತವ ಯಚ್ಛೃಂಗಂ ನಿರಾಕಾರಂ ತದೇವ ತತ್ ॥ ೧೮೩ ॥**

**ಅರ್ಥ–** ಇತರೇಷಾಂ ತು ಭೂತಾನಾಂ = ಅನ್ಯ ಭೂತಗಳಿಗೆ (ತೇಜಸ್ಸು, ಜಲ, ಪೃಥ್ವಿಗಳಿಗೆ ಮತ್ತು ತನ್ನಿರ್ಮಿತ ಅನಂತ ಪದಾರ್ಥಗಳಿಗೆ, ಆಕಾರಃ = ಆಕಾರವು (ಇರುವುದೆಂಬುದು) ಸರ್ವಸಾಕ್ಷಿಗಃ = ಸರ್ವಾನುಭವಸಿದ್ಧವು. (ಹೀಗೆ ಅನುಭವಸಿದ್ಧವಾದ ಆಕಾರವನ್ನು ಅಪಲಾಪಮಾಡುವುದು ಪಶುಗಳಿಗೆ ಮಾತ್ರ ಶೋಭಿಸಬಹುದು, ಮಾನವನೆಂಬ ವಾದಿಗಲ್ಲ

– ನಿನಗಲ್ಲ.) ತತ್= ಆದ್ದರಿಂದ, ಪುಂಪಶೋಃ= ಮನುಷ್ಯರೂಪದ ಪ್ರಾಣಿಯಾದ, ತವ= ನಿನ್ನ, ಯತ್= ಯಾವ, ಶೃಂಗಂ= ಕೊಂಬು ಇದೆಯೋ, ತತ್ ಏವ= ಅದೇ, ನಿರಾಕಾರಂ= ನಿರಾಕಾರವಾಗಿದೆ.

**ಅನುವಾದ–** ಜಲ, ತೇಜಸ್ಸು, ಪೃಥಿವೀ ಮಹಾಭೂತಗಳಿಂದ ಜನಿಸಿದ ವಸ್ತುಗಳಿಗೆ ಆಕಾರವಿದೆ ಎಂಬುದಂತೂ ಎಲ್ಲರಿಗೂ ಸಾಕ್ಷ್ಯಾನುಭವ ಸಿದ್ಧವಾದದ್ದೇ ಆಗಿದೆ. ವಾಯು ಮತ್ತು ಆಕಾಶಗಳಿಗೂ ಆಕಾರವಿದೆಯೆಂಬುದನ್ನು ನಾವು ಸಾಧಿಸಿದ್ದೇವೆ. ಹಾಗಾಗಿ ನಿರಾಕಾರವಾದ ವಸ್ತುವೇ ಜಗತ್ತಿನಲ್ಲಿ ಇಲ್ಲ. ಇಷ್ಟಾದರೂ ನಿರಾಕಾರವಾದದ್ದು ಯಾವುದಾದರೂ ಇರುವುದಾದರೆ ಅದು ಮನುಷ್ಯರೂಪದಲ್ಲಿರುವ ಪಶುವಾದ (ಮೂರ್ಖನಾದ) ನಿನ್ನ ತಲೆಯ ಮೇಲಿರಬಹುದಾದ ಕೊಂಬು ಮೊದಲಾದ ಅಸತ್ ವಸ್ತುವೇ ಹೊರತು ಸತ್ ಆದದ್ದು ಯಾವುದೂ ನಿರಾಕಾರವಲ್ಲ.

**ಭಾವವಿಲಾಸಿನೀ–**ಇತರೇಷಾಮಾಕಾಶವಾಯುವ್ಯತಿರಿಕ್ತಾನಾಂ ತೇಜೋಽಬನ್ನಾತ್ಮಕ-ಭೂತಾನಾಮ್ । ಏವಮನುಭವಸಿದ್ಧಾಕಾರಾಪಲಾಪೇ ತವ ಪಶುತ್ವಂ ಸ್ಯಾದಿತಿ ಧ್ವನಯನ್ ಸರ್ವಸ್ಯೈವಂ ಸಾಕಾರತ್ವೇ ಕಿಂ ತರ್ಹಿ ನಿರಾಕಾರಮಿತ್ಯತಃ ತದಪಿ ತಸ್ಮಿನ್ನೇವ ದರ್ಶಯತಿ – **ಪುಂಪಶೋರಿತಿ** ॥ ತತ್ತಸ್ಮಾತ್ಪಶೋಶ್ಶೃಂಗಾವಶ್ಯಮ್ಭಾವಾನ್ನರಪಶೋಸ್ತವ ಯಚ್ಛೃಂಗಂ ತಸ್ಯ ಚಾಕಾರಾದರ್ಶನಾತ್ತದೇವ ನಿರಾಕಾರಮಿತ್ಯರ್ಥಃ । ಪರಮಾಣುಮಾರಭ್ಯ ಪಂಚಮಹಾ-ಭೂತಪರ್ಯಂತಸ್ಯ ಸರ್ವಸ್ಯ ಚ ಜಡಪ್ರಪಂಚಸ್ಯ ಸರ್ವೇಷಾಂ ಚೇತನಾನಾಂ ಚೋಕ್ತವಿಧಯಾ ಸಾಕಾರತ್ವಾತ್ ಸಹಸ್ರಶೀರ್ಷಾದ್ಯಾಕಾರವತಿ ಭಗವತಿ ನಿರಾಕಾರತ್ವಸ್ಯ ಚ ಸುತರಾಮಯೋಗಾತ್ ಸಾರ್ವಜನೀನಮಿದಂ ಪ್ರಮೇಯಮನಂಗೀಕುರ್ವತೋ ನೃಪಶೋಸ್ತವ ಶೃಂಗಂ ವಾ ಶಶಶೃಂಗಂ ವಾ ನಿರಾಕಾರಂ ಸ್ಯಾತ್ । ಭಾವಾಭಾವಾತ್ಮಕಜಗತಿ ತು ನ ಕಿಂಚಿನ್ನಿರಾಕಾರಮಿತಿ ಭಾವಃ ॥೧೮೩॥

**ವಿವರಣೆ–** ಪರವಾದಿಯು ಪಶುತುಲ್ಯನೆನಿಸುತ್ತಾನೆ. ಪ್ರತ್ಯಕ್ಷಸಿದ್ಧವಾದುದನ್ನು ಅಪಲಾಪ ಮಾಡುವುದರಿಂದ ಎಂಬ ಯುಕ್ತಿಯನ್ನು ತೋರಿಸಿದ್ದಾರೆ. ಪ್ರತ್ಯಕ್ಷಸಿದ್ಧವಾದುದನ್ನು ಅಪಲಾಪ ಮಾಡುವುದು ಪಶುವಿನ ಲಕ್ಷಣ. ಅದನ್ನು ಹೊಂದಿದ್ದರಿಂದ ಪರವಾದಿಯು ಪಶುತುಲ್ಯನೆಂದೆನಿಸುತ್ತಾನೆ. ಅವನ ಕೋಡನ್ನು ನಿರಾಕಾರವೆಂದು ಹಾಸ್ಯಮಾಡಿದ್ದಾರೆ.

**ಯೇ ಜೀವಾನ್ವೈದಿಕಂಮನ್ಯಾ ಜ್ಯೋತೀರೂಪಾನ್ವದಂತಿ ತೇ ।**
**ಕಿಂ ನೋರೀಚಕ್ರುರೇತೇಷಾಂ ಸೂಕ್ಷ್ಮದೀಪಸಮಾಕೃತಿಮ್ ॥ ೧೮೪ ॥**

**ಅರ್ಥ–** ವೈದಿಕಂಮನ್ಯಾಃ= ತಮ್ಮನ್ನು ವೈದಿಕರೆಂದು ಹೇಳಿಕೊಳ್ಳುವ, ಯೇ= ಯಾವ ಮಾಯಾವಾದಿಗಳು, ಜೀವಾನ್= ಜೀವರನ್ನು, ಜ್ಯೋತೀರೂಪಾನ್= ಜ್ಯೋತಿಃ ಸ್ವರೂಪರೆಂದು, ವದಂತಿ= ಹೇಳುತ್ತಾರೋ, ತೇ= ಅವರು, ಏತೇಷಾಂ= ಜೀವರಿಗೆ,

ಸೂಕ್ಷ್ಮದೀಪ ಸಮಾಕೃತಿಂ= ಅಣುಪ್ರಮಾಣದ ದೀಪಕ್ಕೆ ಸಮಾನವಾದ ಆಕಾರವನ್ನು, ನ ಉರೀಚಕ್ರುಃ, ಕಿಂ= ಒಪ್ಪಲಿಲ್ಲವೇನು?

**ಅನುವಾದ–** ಅವರು ಜೀವರು ಜ್ಯೋತಿ ಸ್ವರೂಪರೆಂದು ನಾವು ಮಾತ್ರ ಹೇಳುವುದಿಲ್ಲ; ಹೊರತಾಗಿ ತಮ್ಮನ್ನು ವೈದಿಕರೆಂದು ಭಾವಿಸಿಕೊಳ್ಳುವ, ಜೀವನು ನಿರಾಕಾರನೆಂದು ಹೇಳುವ ಮಾಯಾವಾದಿಗಳೂ ಜೀವನನ್ನು ಜ್ಯೋತಿಃಸ್ವರೂಪನೆಂದು ಒಪ್ಪುತ್ತಾರೆ. ಹಾಗಿದ್ದರೆ ಅವರು ಜೀವರಿಗೆ ದೀಪದಂತಹ ಸಣ್ಣ ಆಕೃತಿಯನ್ನು ಒಪ್ಪಿದ್ದಾರೆ ಎಂದೇ ಆಯಿತಲ್ಲವೇ?

**ಭಾವವಿಲಾಸಿನೀ–** ನ ಕೇವಲಂ ಜೀವಾನಾಂ ಜ್ಯೋತಿರ್ಮಯತ್ವಂ ಮಯ್ಯೈವೋಚ್ಯತೇ ಕಿನ್ತು ನಿರಾಕಾರತ್ವಂ ವದನ್ ಪರೋಽಪ್ಯಂಗೀಕುರುತೇ । ಅತಸ್ತೇಷಾಂ ಸಾಕಾರತ್ವಮಪಿ ಯೌಕ್ತಮೇವೇತ್ಯಾಹ – **ಯ ಇತಿ** ॥ ಯೇ ವೈದಿಕಂಮನ್ಯಾಃ ಜೀವಾನ್ ಜ್ಯೋತೀರೂಪಾನ್ ವದತಿ । ತೇ ಮಾಯಿನಃ । ಏತೇಷಾಂ ಜೀವಾನಾಮ್ ॥ ೧೮೪ ॥

> **ವಯಂ ತು ಜ್ಯೋತಿಷಸ್ತಸ್ಯ ಜ್ಯೋತೀರೂಪಮುಖಂ ಕರೌ ।**
> **ಚರಣಾವುದರಾದೀಂಶ್ಚ ವದಾಮೋಽತ್ರ ಕಿಮದ್ಭುತಮ್ ॥ ೧೮೫ ॥**

**ಅರ್ಥ–** ವಯಂ ತು = ನಾವಾದರೂ, ಜ್ಯೋತಿಷಃ = ಜ್ಯೋತೀರೂಪನಾದ, ತಸ್ಯ = ಆ ಜೀವನಿಗೆ, ಜ್ಯೋತೀರೂಪಮುಖಂ = ಜ್ಯೋತಿರ್ಮಯವಾದ ಮುಖವನ್ನು, ಕರೌ = ಹಸ್ತಗಳನ್ನು, ಚರಣೌ = ಪಾದಗಳನ್ನೂ, ಉದರಾದೀನ್ ಚ = ಕುಕ್ಷಿ(ಹೊಟ್ಟೆ) ಮೊದಲಾದ ಅವಯವಗಳನ್ನೂ, ವದಾಮಃ = (ಉಳ್ಳವನೆಂದು) ಹೇಳುತ್ತೇವೆ, ಕಿಂ ಅದ್ಭುತಂ = ಏನಾಶ್ಚರ್ಯವು? (ಇದರಲ್ಲಿ ಅಂಗೀಕಾರ್ಹವಲ್ಲದ್ದು ಏನಿದೆ?)

**ಅನುವಾದ–** ಅದ್ವೈತಿಗಳಾದ ನೀವು ಜೀವನಿಗೆ ದೀಪದಂತಹ ಸೂಕ್ಷ್ಮ ಆಕಾರವನ್ನು ಒಪ್ಪುತ್ತೀರಿ. ನಾವು ಜ್ಯೋತಿಃಸ್ವರೂಪನಾದ ಜೀವನಿಗೆ ಜ್ಯೋತಿಃಸ್ವರೂಪಗಳೇ ಆದ ಮುಖ, ಕೈಗಳು, ಕಾಲುಗಳು, ಹೊಟ್ಟೆ ಮೊದಲಾದ ಅಂಗಾಗಳನ್ನು ಒಪ್ಪುತ್ತೇವೆ. ನಾವು ಒಪ್ಪಿರತಕ್ಕ ಸಂಗತಿಗಳಲ್ಲಿ ಅಂಗೀಕಾರಾರ್ಹವಲ್ಲದ್ದು ಏನಿದೆ?

**ಭಾವವಿಲಾಸಿನೀ–** ವಯಂ ತು ಜ್ಯೋತಿಷಃ ಜ್ಯೋತೀರೂಪಸ್ಯ । ತಸ್ಯ ಜೀವಸ್ಯ । ಜ್ಯೋತೀರೂಪಮಿತ್ಯೇತತ್ಕರಾದಾವಪಿ ಗ್ರಾಹ್ಯಮ್ । ಅತ್ರ ಏತಾದೃಶಾಕಾರೇ ॥ ೧೮೫ ॥

> **ತ್ವಂ ತು ಬ್ರೂಷೇ ಜಡಾಕಾರಂ ವಯಂ ತ್ವಜಡತಾಶ್ರಯೇ ।**
> **ಜಡಾದ್ವಿಲಕ್ಷಣಾಕಾರಂ ಬ್ರೂಮೋ ಯುಕ್ತಿಃ ಕಿಮತ್ರ ನ ॥ ೧೮೬ ॥**

**ಅರ್ಥ–** ತ್ವಂ ತು = ನೀನಾದರೋ, ಜಡಾಕಾರಂ = ಜಡವಾದ (ವರ್ತುಲವಾದ ತೇಜೋಮಯ) ದೀಪಸಮಾಕಾರವನ್ನು ಬ್ರೂಷೇ = (ಜೀವನಿಗೆ) ಹೇಳುತ್ತೀಯೇ. (ಹೀಗೆ

ಜಡಾಕಾರವನ್ನು ಹೇಳುವುದು ನಿನ್ನ ಮತವಿರುದ್ಧವೂ ಮತ್ತು ಯುಕ್ತಿವಿರುದ್ಧವೂ ಆದುದು.) ವಯಂ ತು = ನಾವಾದರೂ (ತತ್ತ್ವವಾದಿಗಳಾದರೋ) ಅಜಡತಾಶ್ರಯೇ = ಜಡತ್ವಾನಾಶ್ರಯನಾದ ಜೀವನಲ್ಲಿ, ಜಡಾತ್ = ಜಡದಿಂದ, ವಿಲಕ್ಷಣಾಕಾರಂ = ವಿಲಕ್ಷಣವಾದ ಆಕಾರವನ್ನು, ಬ್ರೂಮಃ = ಹೇಳುತ್ತೇವೆ. ಅತ್ರ = ಈ ವಿಷಯದಲ್ಲಿ, ಯುಕ್ತಿಃ = ಯುಕ್ತಿಯು, ನ ಕಿಂ? = ಇಲ್ಲವೇನು?

**ಅನುವಾದ–** ನೀವು ಚೇತನನಾದ ಜೀವನಿಗೆ ಜಡವಾದ ದೀಪವನ್ನು ಹೋಲುವ ಆಕಾರವನ್ನು ಒಪ್ಪಿದ್ದೀರಿ. ನಾವು ಚೇತನನಾದ ಆ ಜೀವನಿಗೆ ಜಡಗಳಲ್ಲಿಲ್ಲದ ಕರಚರಣಾದ್ಯಾಕಾರವನ್ನು ಒಪ್ಪಿದ್ದೇವೆ. ಜೀವನು ಚೇತನನಾಗಿರುವ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ ನಾವು ಹೇಳುವುದೇ ಯುಕ್ತಿಯುಕ್ತವಾಗಿದೆಯಲ್ಲವೇ?

**ಭಾವವಿಲಾಸಿನೀ–** ಕಿಮದ್ಭುತಮಿತ್ಯೇತದುಪಪಾದಯತಿ – **ತ್ವಂ ತ್ವಿತಿ** ॥ ಮಾಯಾವಾದೀ ತ್ವಂ ಜಡಾಕಾರಂ ಜಡವರ್ತುಲತೇಜೋಮಯದೀಪಸಮಾಕಾರಮ್ । ಜಡಾಕಾರಮಿತ್ಯತ್ರಾ-ಜಡತಾಶ್ರಯ ಇತಿ ವಕ್ಷ್ಯಮಾಣಮಾವರ್ತನೀಯಮ್ । ಜೀವ ಇತಿ ಶೇಷಃ । ತತ್ತ್ವವಾದಿನೋ ವಯಂ ತು ಅಜಡತಾಶ್ರಯೇ ಜೀವೇ ಜಡಾದ್ವಿಲಕ್ಷಣಾಕಾರಂ ಬ್ರೂಮ ಇತಿ ಸಂಬಂಧಃ । ಅತ್ರ ಅಜಡಸ್ಯ ಜಡವಿಲಕ್ಷಣಾಕಾರತ್ವೇ ಯುಕ್ತಿ ರ್ನಕಿಂ ಯುಕ್ತಿರಸ್ತ್ಯೇವೇತ್ಯರ್ಥಃ । ಜಡಾಜಡಯೋ-ರ್ವೈಲಕ್ಷಣ್ಯಸ್ಯ ಸರ್ವಜನಸಮ್ಮತಿಪನ್ನತ್ವಾದಿತಿ ಭಾವಃ ॥ ೧೮೬ ॥

> ಪಾಂಚಭೌತಿಕದೇಹೇಽಸ್ಮಿಂಸ್ತೇಜಸೋಽಪ್ಯಸ್ತಿ ರೂಪಿತಾ ।
> ಸಾ ಶುದ್ಧತೇಜೋಮಾತ್ರಸ್ಯಾಽಪ್ಯಸ್ತಿ ಚೇತ್ಕಾ ಕ್ಷತಿಸ್ತವ ॥ ೧೮೭ ॥

**ಅರ್ಥ–** ಅಸ್ಮಿನ್ = ಈ, ಪಾಂಚಭೌತಿಕ ದೇಹೇ = ಪೃಥಿವ್ಯಾದಿ ಪಂಚಭೂತಗಳಿಂದಾದ ದೇಹದಲ್ಲಿ, ತೇಜಸಃ ಅಪಿ= ತೇಜಸ್ಸಿಗೂ ಕೂಡ, ರೂಪಿತಾ= ಆಕಾರವು, ಅಸ್ತಿ = ಇರುತ್ತದೆ, ಸಾ = ಆ ರೂಪದ ಇರುವಿಕೆಯು, ಶುದ್ಧತೇಜೋಮಾತ್ರಸ್ಯ ಅಪಿ = ಕೇವಲ ತೇಜೋಮಯ ವಸ್ತುವಿಗೂ, ಅಸ್ತಿಚೇತ್ = ಇರುವುದಾದರೆ, ತವ = ನಿನಗೆ, ಕಾ ಕ್ಷತಿಃ = ಏನು ಹಾನಿಯು?

**ಅನುವಾದ–** ಪೃಥಿವ್ಯಾದಿ ಪಂಚಭೂತಗಳಿಂದಾದ ಈ ನಾವೇ ಮೊದಲಾದವರ ದೇಹದಲ್ಲಿ ತೇಜಸ್ಸಿಗೂ ಆಕಾರವು ಇರುತ್ತದೆ (ದೇಹದ ಆಕಾರವೇ ತದ್ಗತ ತೇಜಸ್ಸಿನ ಆಕಾರವಲ್ಲವೇ?) ಆ ರೂಪವು (ಕರಚರಣಾದಿ ಆಕಾರವುಳ್ಳದ್ದೆಂಬುದು) ಕೇವಲ ತೇಜಸ್ಸಿನಿಂದ ಹುಟ್ಟಿದ ವಸ್ತುವಿಗೂ ಇರುವುದಾದರೆ ನಿನಗೆ ಏನು ಹಾನಿಯು?

**ಭಾವವಿಲಾಸಿನೀ–** ಜಡಸ್ಯಾಪಿ ತೇಜಸಶ್ಚೇತನಸಂಬಂಧಿದೇಹಾಂತರ್ನಿವಿಷ್ಟಸ್ಯ ಸಾಕಾರತಾ ದೃಷ್ಟಾ ಕಿಮು ಚಿದ್ರೂಪತೇಜಸ ಇತಿ ಭಾವೇನಾಹ – **ಪಾಂಚಭೌತಿಕೇತಿ** ॥ ಅಸ್ಮಿನ್ನಸ್ಮದಾದಿಸಂಬಂಧಿನಿ ತೇಜಸೋ ರೂಪಿತಾ ಕರಚರಣಾದ್ಯಾಕಾರತಾ ಅಧಿಕಂ ಪ್ರವಿಷ್ಟಂ ನತು ತದ್ವಾನಿರಿತಿ ನ್ಯಾಯೇನ ।

ಸಾ ರೂಪಿತಾ ಕೇವಲತೇಜೋಮಯಸ್ಯಾಪ್ಯಸ್ತಿ ಚೇತ್ಕಾ ಕ್ಷತಿಸ್ತವೇತಿ ಸಂಬಂಧಃ । ಯಾ ಕೇವಲತೇಜೋಮಯವಿಗ್ರಹವತಾಂ ಚೇತನಾನಾಂ ಭವತ್ವಿತಿ ಭಾವಃ ॥ ೧೮೭ ॥

**ಅಪ್ಯತೈಜಸವಾಯವ್ಯಮಾತ್ರದೇಹಾಶ್ಚ ಕಿಂ ನ ತೇ ।**
**ಅತಃ ಪಿಂಡಸಮಾಕಾರಂ ಪಿಂಡಭೋಕ್ತುರ್ನಕಲ್ಪಯ ॥ ೧೮೮ ॥**

**ಅರ್ಥ–** ಕಿಂಚ = ಮತ್ತೇನೆಂದರೆ, ಅಪ್ಯತೈಜಸ ವಾಯವ್ಯ ಮಾತ್ರದೇಹಾಃ ಚ = ಕೇವಲ ಜಲಮಯ, ತೇಜೋಮಯ, ವಾಯುಮಯ ದೇಹಗಳುಳ್ಳ ಜೀವರು, ತೇ= ನಿನ್ನ ಮತದಲ್ಲಿ, ನ ಕಿಂ = ಇಲ್ಲವೇನು? ಅತಃ = ಈ ಕಾರಣದಿಂದ ಪಿಂಡಭೋಕ್ತುಃ = ಅನ್ನವನ್ನುತಿನ್ನುವ ಜೀವನಿಗೆ, ಪಿಂಡಸಮಾಕಾರಂ = ವರ್ತುಲಾಕಾರದ ರೂಪವನ್ನು ನ ಕಲ್ಪಯ = ಚಿಂತಿಸಬೇಡ.

**ಅನುವಾದ– ಭೂಲೋಕವಾಸಿಗಳಾದ ನಮ್ಮ ಪಾಂಚಭೌತಿಕ ಶರೀರದ ಆಕಾರವು ತೇಜಸ್ಸಿಗೂ ಸಂಬಂಧಿಸಿದ್ದು ಮಾತ್ರವಲ್ಲ; ಭೂಲೋಕವಾಸಿಗಳ ಶರೀರವು ಪಾರ್ಥಿವಾಂಶ ಭೂಯಿಷ್ಠವಾಗಿರುವಂತೆ ವರುಣಲೋಕ, ಅಗ್ನಿಲೋಕಗಳಲ್ಲಿ ಜಲಾಂಶ ತೇಜೋ ಅಂಶಭೂಯಿಷ್ಠಗಳಾದ ಶರೀರಗಳೂ ಇವೆ. ಅದನ್ನು ನೀನು ನಿನ್ನ ಮತದಲ್ಲಿ ಒಪ್ಪುವುದಿಲ್ಲವೇ? ಹಾಗಾಗಿ ಜೀವನೂ ತೇಜೋಮಯವಾದ ಕೈಕಾಲುಗಳುಳ್ಳ ಶರೀರವುಳ್ಳವನೆಂದು ಒಪ್ಪಬೇಕು. ಏಕೆಂದರೆ ತನ್ನನ್ನುದ್ದೇಶಿಸಿ ಪಿಂಡಪ್ರದಾನ ಮಾಡುವವರ ಮನೆಗಳಿಗೆ ಹೋಗಿ, ಪಿಂಡವನ್ನು ಸ್ವೀಕರಿಸಿ ಬಾಯಿಗೆ ಹಾಕಿಕೊಂಡು ತಿನ್ನಲು ಜೀವರಿಗೆ (ತೇಜೋಮಯವಾದ) ಕಾಲು, ಕೈ, ಮುಖ ಇತ್ಯಾದಿಗಳುಳ್ಳ ಶರೀರದ ಅವಶ್ಯಕತೆ ಇದೆ. ಹಾಗಾಗಿ ಆತನನ್ನು ಕೈಕಾಲುಗಳಿಲ್ಲದ ಗುಂಡಗಿನ ಆಕಾರವುಳ್ಳವನೆಂದು ಒಪ್ಪಬಾರದು.**

**ಭಾವವಿಲಾಸಿನೀ–** ಕಿಂಚ ವರುಣಲೋಕೇ ಆಪ್ಯದೇಹಾಃ ಅಗ್ನಿಲೋಕೇ ತೈಜಸದೇಹಾಃ ವಾಯುಲೋಕೇ ವಾಯವ್ಯದೇಹಾಃ ತೇ ಜೀವಾಃ ಪ್ರಸಿದ್ಧಾ ನ ಕಿಂ ಪ್ರಸಿದ್ಧಾ ಏವೇತ್ಯರ್ಥಃ । ಅತ ಇತ್ಯುಪಸಂಹಾರಃ । ಪಿಂಡಭೋಕ್ತುಃ ಅನ್ನಪಿಂಡಭೋಕ್ತುರ್ಜೀವಸ್ಯ ಕರಚರಣಾದಿ-ಶೂನ್ಯ ಪಿಂಡಸಮಾಕಾರಂ ನ ಕಲ್ಪಯ । ಕಿನ್ತು ಪಿಂಡದಾತುರ್ಗೃಹಂ ಪ್ರತಿ ಗಂತುಂ ತೈರ್ದತ್ತ-ಪಿಂಡಂ ಗೃಹೀತ್ವಾ ಮುಖೇ ಪ್ರಕ್ಷೇಪ್ತುಂ ಅತ್ತುಂ ಚ ಚರಣಕರಮುಖಾದ್ಯಾಕಾರಂ ಕಲ್ಪಯೇತಿ ಭಾವಃ ॥ ೧೮೮ ॥

**ಸುಖರೂಪಾಶ್ಚ ತೇ ಸರ್ವೇ ಜ್ಞಾನರೂಪಾಶ್ಚ ಸರ್ವದಾ ।**
**ಅನಾದಿನಿತ್ಯಾಸ್ತಸ್ತ್ಯಾಶ್ಚ ಚಿದ್ರೂಪಾವಯವಾ ಯತಃ ॥ ೧೮೯ ॥**

**ಅರ್ಥ–** ತೇ ಸರ್ವೇ= ಆ ಎಲ್ಲ ಜೀವರು, ಸರ್ವದಾ= ಯಾವಾಗಲೂ ಸುಖರೂಪಾಃ ಚ= ಸುಖ ಸ್ವರೂಪರೂ, ಜ್ಞಾನರೂಪಾಃ ಚ= ಜ್ಞಾನರೂಪರೂ ಆಗಿದ್ದಾರೆ. ಚ= ಮತ್ತು, ಯತಃ=

ಯಾವ ಕಾರಣದಿಂದ, ಚಿದ್ರೂಪಾವಯವಾಃ= ಜ್ಞಾನಸ್ವರೂಪಗಳಾದ ಹಸ್ತಪಾದಾದಿ ಅಂಗಾಗಗಳುಳ್ಳವರೋ, ಅತಃ= ಆ ಕಾರಣದಿಂದ, ಅನಾದಿನಿತ್ಯಾಃ= ಅನಾದಿನಿತ್ಯರೂ, ಸತ್ಯಾಃ ಚ= ಸತ್ಯಸ್ವರೂಪರೂ ಆಗಿದ್ದಾರೆ.

**ಅನುವಾದ–** ಎಲ್ಲ ಜೀವರೂ ಯಾವಾಗಲೂ ಸುಖಸ್ವರೂಪರೂ ಜ್ಞಾನಸ್ವರೂಪರೂ ಆಗಿದ್ದಾರೆ. ಅಲ್ಲದೇ ಆ ಜೀವರ ಸ್ವರೂಪ ಶರೀರದ ಅಂಗಾಂಗಗಳೂ ಜ್ಞಾನಸ್ವರೂಪಗಳೇ ಹೊರತು ಪಂಚಭೂತಗಳಿಂದ ಹುಟ್ಟಿದವುಗಳಲ್ಲ. ಆದ್ದರಿಂದ ಜೀವರೆಲ್ಲರೂ ಅನಾದಿ ನಿತ್ಯರೂ ಮತ್ತು ಸತ್ಯರೂ ಆಗಿದ್ದಾರೆ.

**ಭಾವವಿಲಾಸಿನೀ–** ಭಾಗವತೇ 'ನ ಯತ್ರ ಮಾಯಾ' ಇತಿ ವೈಕುಂಠೇ ಮಾಯಾಮಯಂ ದೇಹಂ ನಿಷಿಧ್ಯ ಪುನಃ 'ಪ್ರವಾಲವೈಡೂರ್ಯಮೃಣಾಲವರ್ಚಸಾಮ್' ಇತಿ ಸ್ವರೂಪಭೂತದೇಹಸ್ಯೈವ ತೇಜೋಮಯತ್ವಕಥನಾತ್ತದನುಸಾರೇಣ ಪ್ರಕಾಶಮಯದೇಹತ್ವಂ ಪ್ರಸಾಧ್ಯ ತಸ್ಯೈವ ಚ ಸುಖಜ್ಞಾನರೂಪತ್ವಂ ಚ ಸಾಧಯತಿ – **ಸುಖರೂಪಾ ಇತಿ** ॥ ತೇ ಸರ್ವೇ ಜೀವಾಃ ಯತಶ್ಚಿದ್ರೂಪಾವಯವಾಃ ಅತಃ ಅನಾದಿನಿತ್ಯಾಃ ಸತ್ಯಾಶ್ಚೇತಿ ಸಂಬಂಧಃ ॥ ೧೮೯ ॥

**ವಿವರಣೆ–** ಭಾಗವತದ ಎರಡನೇ ಸ್ಕಂದದ ಒಂಭತ್ತನೇ ಅಧ್ಯಾಯದ ಹತ್ತನೇ ಶ್ಲೋಕದಲ್ಲಿ 'ನಯತ್ರ ಮಾಯಾ' ಎಂಬುದಾಗಿ ವೈಕುಂಠದಲ್ಲಿ ಯಾರಿಗೂ ಮಾಯಾನಿರ್ಮಿತ ದೇಹ ಇರುವುದಿಲ್ಲವೆಂದು ಹೇಳಲಾಗಿದೆ. ಅಲ್ಲದೇ ಅದೇ ಭಾಗದಲ್ಲಿ ಮುಂದೆ 11 ಮತ್ತು 12ನೇ ಶ್ಲೋಕಗಳಲ್ಲಿ 'ಪ್ರವಾಲ ವೈಢೂರ್ಯಮೃಣಾಲವರ್ಚಸಾಂ' ಎಂಬುದಾಗಿ ಭಗವಂತನ ಅನುಚರರು ಹವಳ, ವೈಢೂರ್ಯ ಮತ್ತು ಕಮಲದ ದೇಟಿನಂತೆ ಕೆಂಪು, ಬಿಳಿ, ಹಸಿರು ಮುಂತಾದ ಬಣ್ಣಗಳುಳ್ಳ ತೇಜೋಮಯ, ಚಿದ್ರೂಪ ಶರೀರವುಳ್ಳವರಾಗಿರುತ್ತಾರೆಂದು ವರ್ಣಿಸಲಾಗಿದೆ. ಆದ್ದರಿಂದ ಸುಖಜ್ಞಾನಾದಿ ರೂಪರಾದ ಜೀವರನ್ನು ಅನಾದಿ ನಿತ್ಯರೂ ಸತ್ಯರೂ ಎಂದೇ ಒಪ್ಪಬೇಕು ಎಂದರ್ಥ.

**ನಚೇಜ್ಜ್ಯೋತಿರ್ಮಯಾಕಾರಸುಭಗಸ್ಯ ಹರೇರಿಮೇ ।**
**ಪ್ರತಿರೂಪಾಃ ಕಥಂ ಜೀವಾ ಭವೇಯುರಿತಿ ಚಿಂತ್ಯತಾಮ್ ॥ ೧೯೦ ॥**

**ಅರ್ಥ–** ನ ಚೇತ್= (ಈ ಜೀವರು) ಚಿದ್ರೂಪ ಅಂಗಾಂಗವುಳ್ಳವರೂ ಜ್ಞಾನಸುಖಸ್ವರೂಪರೂ ಆಗಿಲ್ಲದಿದ್ದರೆ, ಇಮೇ= ಈ ಜೀವಾಃ= ಜೀವರು ಜ್ಯೋತಿರ್ಮಯಾಕಾರಸುಭಗಸ್ಯ= ಜ್ಯೋತಿರ್ಮಯವೂ ಸುಂದರವೂ ಜ್ಞಾನಾನಂದಾದಿ ಕಲ್ಯಾಣಗುಣಸ್ವರೂಪವೂ ಆದ ಶರೀರವುಳ್ಳ, ಹರೇಃ= ಪರಮಾತ್ಮನ ಪ್ರತಿರೂಪಾಃ= ಪ್ರತಿಬಿಂಬರು, ಕಥಂ= ಹೇಗೆ, ಭವೇಯುಃ= ಆಗುತ್ತಾರೆ, ಇತಿ= ಎಂಬುದಾಗಿ, ವಿಚಿಂತ್ಯತಾಂ= ಆಲೋಚಿಸಲ್ಪಡಲಿ.

**ಅನುವಾದ—** ಪರಮಾತ್ಮನು ಜ್ಯೋತಿಃಸ್ವರೂಪನಾದ ಜ್ಞಾನಾನಂದಾದಿ ಸಕಲಕಲ್ಯಾಣ-ಗುಣಸ್ವರೂಪವಾದ ಸುಂದರ ಶರೀರವುಳ್ಳವನಾಗಿದ್ದಾನೆ. ಅವನ ಪ್ರತಿಬಿಂಬರೆನಿಸಿದ ಈ ಜೀವರೂ ಜ್ಯೋತಿಃಸ್ವರೂಪವೂ ಜ್ಞಾನಾನಂದಸ್ವರೂಪವೂ ಆದ ಶರೀರವುಳ್ಳವರೇ ಆಗಿರಬೇಕು. ಇಲ್ಲದಿದ್ದರೆ ಈ ಜೀವರು ಆ ಹರಿಯ ಪ್ರತಿಬಿಂಬರು ಆಗಲು ಹೇಗೆ ಸಾಧ್ಯ? ಆಲೋಚಿಸಿರಿ.

**ಭಾವವಿಲಾಸಿನೀ—**ತದನಂಗೀಕಾರೇ ಬಾಧಕಮಾಹ—**ನಚೇದಿತಿ** ॥ ಜ್ಯೋತಿರ್ಮಯಾಕಾರಸುಭಗಸ್ಯೇತ್ಯುಪಲಕ್ಷಣಮ್ । ಜ್ಞಾನಾನನ್ದಾದಿಸಕಲಗುಣಮಯಾಕಾರಸ್ಯೇತ್ಯಪಿ ದ್ರಷ್ಟವ್ಯಮ್ । ಪ್ರತಿರೂಪಾ ಪ್ರತಿಬಿಂಬಾಃ ಕಥಂ ಭವೇಯುರಿತಿ ಸಂಬಂಧಃ ॥ ೧೯೦ ॥

ಪುರುರೂಪಸ್ಯ ಜೀವೋಽಯಂ ರೂಪಂ ರೂಪಂ ಪ್ರತಿ ಪ್ರತಿ ।
ಪ್ರತಿರೂಪೋ ಬಭೂವೇತಿ ಶ್ರುತಿರ್ಗರ್ಜತಿ ಶಾಶ್ವತೀ ॥ ೧೯೧ ॥

**ಅರ್ಥ—** ಪುರುರೂಪಸ್ಯ = ಅನಂತರೂಪಗಳುಳ್ಳ ಶ್ರೀಹರಿಯ, ರೂಪಂ ರೂಪಂ ಪ್ರತಿಪ್ರತಿ = ಒಂದೊಂದು ರೂಪಕ್ಕೂ, ಅಯಂ = ಈ, ಜೀವಃ = ಜೀವನು, ಪ್ರತಿರೂಪಃ = ಪ್ರತಿಬಿಂಬನು, ಬಭೂವ ಇತಿ = ಆಗಿರುತ್ತಾನೆಂದು, ಶಾಶ್ವತೀ ಶ್ರುತಿಃ = ನಿತ್ಯವಾದ ವೇದವು, ಗರ್ಜತಿ = ಘೋಷಿಸುತ್ತದೆ (ಸಾರುತ್ತದೆ).

**ಅನುವಾದ—** ಅನಂತರೂಪಗಳುಳ್ಳ ಶ್ರೀಹರಿಯ ಒಂದೊಂದು ರೂಪಕ್ಕೂ ಈ ಜೀವನು ಪ್ರತಿಬಿಂಬನು ಆದನೆಂದು (ಆಗಿರುತ್ತಾನೆಂದು) ನಿತ್ಯವಾದ ವೇದವು ಘೋಷಿಸುತ್ತಿದೆ (ಸಾರುತ್ತಿದೆ).

**ಭಾವವಿಲಾಸಿನೀ—** ನನು ಜೀವಾನಾಂ ಹರಿಪ್ರತಿಬಿಂಬತ್ವೇ ಸತೀದಂ ಸರ್ವಂ ಸ್ಯಾತ್ತದೇವ ಕುತಃ? ಇತ್ಯತೋ 'ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯರೂಪಂ ಪ್ರತಿಚಕ್ಷಣಾಯ ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾಹ್ಯಸ್ಯ ಹರಯಃ ತಾ ದಶ ॥ ' ಇತಿ ಶ್ರುತಿಂ ಪ್ರಮಾಣಯಿತುಂ ತಾಮರ್ಥತೋಽನುವದತಿ — **ಪುರುರೂಪಸ್ಯೇತಿ** ॥ ಪುರುರೂಪಸ್ಯ ಹರೇಃ ರೂಪಂರೂಪಂ ಪ್ರತ್ಯಯಂ ಜೀವಃ ಪ್ರತಿರೂಪಃ ಪ್ರತಿಬಿಂಬೋ ಬಭೂವೇತಿ ಶ್ರುತಿರ್ಗರ್ಜತೀತಿ ಸಂಬಂಧಃ । ತಥಾಚ ಶ್ರುತಿಬಲಾಜ್ಜೀವಾನಾಂ ಹರಿಪ್ರತಿಬಿಂಬತಾ ಸಿದ್ಧ್ಯತೀತಿ ಭಾವಃ ॥೧೯೧॥

ತಚ್ಛ್ರುತಿಸ್ಮೃತಿಹರ್ಷಾಯ ಮನಃಕರ್ಷಾಯ ಪಶ್ಯತಾಮ್ ।
ಭುಕ್ತ್ಯೈಚ ಮೌಕ್ತಭೋಗಾನಾಂ ಸತ್ತೈವೇಯಂ ವ್ಯವಸ್ಥಿತಿಃ ॥ ೧೯೨ ॥

**ಅರ್ಥ—** ತತ್= ಆದ್ದರಿಂದ, ಶ್ರುತಿಸ್ಮೃತಿಹರ್ಷಾಯ = ಶ್ರುತಿಸ್ಮೃತಿಗಳಿಗೆ ವಿರೋಧವಿಲ್ಲದ ಅರ್ಥಗಳನ್ನು ಗ್ರಹಿಸುವುದಕ್ಕೂ, ಪಶ್ಯತಾಂ = ಮುಕ್ತಿಯಲ್ಲಿ ಅನ್ಯೋನ್ಯವಾಗಿ ನೋಡುವವರ, ಮನಃ ಕರ್ಷಾಯ = ಮನಸ್ಸನ್ನು ಆಕರ್ಷಿಸುವುದಕ್ಕಾಗಿಯೂ, ಚ = ಮತ್ತು,

ಮೌಕ್ತಭೋಗಾನಾಂ = ಮುಕ್ತಿಯಲ್ಲಿನ ಭೋಗಗಳ, ಭುಕ್ತ್ಯೈ= ಭೋಗಕ್ಕಾಗಿಯೂ, ಇಯಂ = ಈ ಪ್ರಕಾರದ, ವ್ಯವಸ್ಥಿತಿಃ = ವ್ಯವಸ್ಥೆಯು, ಸತ್ಯಾ ಏವ = ಯಥಾರ್ಥವೇ ಸರಿ.

**ಅನುವಾದ–** 'ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದಿ ಶ್ರುತಿವಾಕ್ಯಗಳು ಮುಕ್ತ ಜೀವರು ವೈಕುಂಠಾದಿ ಲೋಕಗಳಲ್ಲಿ ವಿಹರಿಸುತ್ತ ಆನಂದಿಸುತ್ತಾರೆ ಎಂದು ಹೇಳುತ್ತೇವೆ. ಆ ಮುಕ್ತಲೋಕದಲ್ಲಿ ಪರಸ್ಪರ ದರ್ಶನ, ಸ್ಪರ್ಶನಾದಿಗಳನ್ನು ನೋಡಿಕೊಳ್ಳಲು ಮತ್ತು ನಾನಾ ರೀತಿಯ ಸುಖಗಳನ್ನು ಅನುಭವಿಸಲು ಜೀವರಿಗೆ ಚಿದ್ರೂಪ ಶರೀರಗಳ ಅವಶ್ಯಕತೆ ಇದ್ದೇ ಇದೆ. ಇಂಥ ವ್ಯವಸ್ಥೆಯನ್ನು ಒಪ್ಪಿದರೆ ಮಾತ್ರ ಹಿಂದೆ ಹೇಳಲ್ಪಟ್ಟ ಭಾಗವತ ಪುರಾಣದ ಮತ್ತು ಋಗ್ವೇದದ ವಾಕ್ಯಗಳಿಗೆ ಅವಿರುದ್ಧವಾದ ಅರ್ಥವನ್ನು ಹೇಳಲು ಸಾಧ್ಯವಾಗುತ್ತದೆ.

**ಭಾವವಿಲಾಸಿನೀ–** ಅತಃ ಕಿಮಿತ್ಯತ ಆಹ – **ತದಿತಿ ||** ಶ್ರುತಿಃ 'ಪೂರ್ವೋಕ್ತಾಃ ಸ್ಮೃತಯಸ್ತತ್ರ ತತ್ರೋದಾಹೃತಾ ದ್ರಷ್ಟವ್ಯಾಃ । ತಾಸಾಂ ಶ್ರುತಿಸ್ಮೃತೀನಾಂ ಹರ್ಷಾಯಾವಿರೋಧಾಯೇ-ತ್ಯರ್ಥಃ । ಪಶ್ಯತಾಂ ಮುಕ್ತಾವನ್ಯೋನ್ಯಂ ಪಶ್ಯತಾಂ ಮನಃಕರ್ಷಾಯ ಲಾವಣ್ಯಾತಿಶಯೇನ ಮನಸಾಮಾಕರ್ಷಣಾಯ ಮುಕ್ತೌ ಪ್ರಾಕೃತವಿಗ್ರಹಾಭಾವಾತ್ ಮೌಕ್ತಭೋಗಾನಾಂ ಭುಕ್ತ್ಯೈ 'ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದ್ಯುಕ್ತಭೋಗಾನಾಮನುಭವಾಯ ಚೇಯಂ ವ್ಯವಸ್ಥಿತಿಃ ಜೀವಚೈತನ್ಯಸ್ಯೈವ ಸಾಕಾರತ್ವಾದಿರೂಪಾ ವ್ಯವಸ್ಥಿತಿಃ ಸತ್ಯಾ ಅಬಾಧ್ಯೇತಿ ಸಂಬಂಧಃ । ಬಾಧ್ಯದೇಹಸ್ಯ ಮುಕ್ತಾವಸಂಭವಾದಿತಿ ಭಾವಃ ॥ ೧೯೨ ॥

ವೃತ್ತತಾ ಚತುರಶ್ರತ್ವಾದ್ಯಾಕಾರಸ್ತದಚೇತನೇ ।
ಚೇತನೇಷ್ವೇವ ಹಸ್ತಾಂಘ್ರಿಶ್ರೋತ್ರನೇತ್ರಾದಿಕಾಕೃತಿಃ ॥ ೧೯೩ ॥

**ಅರ್ಥ–** ತತ್ = ಆದ್ದರಿಂದ, (ಜಡವಸ್ತುಗಳಲ್ಲಿಯೇ ವರ್ತುಲ, ಚೌಕಾದಿ ನಾನಾ ಆಕಾರಗಳು ಸರ್ವಾನುಭವ ಸಿದ್ಧವಾಗಿರುವುದರಿಂದ), ವೃತ್ತತಾಚತುರಶ್ರತ್ವಾದ್ಯಾಕಾರಃ = ವರ್ತುಲ, ಚತುಷ್ಕೋಣ ತ್ರಿಕೋಣಾದಿ ಆಕಾರವು, ಅಚೇತನೇ ಏವ = ಜಡದಲ್ಲಿ ಮಾತ್ರ ಇರುತ್ತದೆ, ಚೇತನೇಷು = ಚೇತನರಲ್ಲಿ, ಹಸ್ತಾಂಘ್ರಿಶ್ರೋತ್ರನೇತ್ರಾದಿಕಾಕೃತಿಃ ಏವ = ಕರ, ಚರಣ, ಕಿವಿ, ಕಣ್ಣು ಮೊದಲಾದ ಆಕೃತಿಯು ಮಾತ್ರ ಇರುವುದೆಂದೂ ಸಿದ್ಧವಾಗುತ್ತದೆ.

**ಅನುವಾದ–** ವರ್ತುಲ, ಚೌಕ ತ್ರಿಕೋಣಾದ್ಯಾಕಾರಗಳು ಜಡವಸ್ತುಗಳಲ್ಲಿ ಮಾತ್ರ ಇರುವುದೇ ಎಲ್ಲರಿಗೂ ಅನುಭವ ಸಿದ್ಧವಾಗಿರುವುದರಿಂದ ಆ ಆಕಾರಗಳನ್ನು ಜಡವಸ್ತುಗಳಲ್ಲಿಯೇ ಒಪ್ಪಬೇಕು. ಹಾಗೆಯೇ ಚೇತನ ವಸ್ತುಗಳಲ್ಲಿ ಕೈಕಾಲು ಇತ್ಯಾದಿಗಳಿಂದ ಕೂಡಿದ ಆಕಾರವನ್ನೇ ಒಪ್ಪಬೇಕು.

**ಭಾವವಿಲಾಸಿನೀ–** ಇತೋಽಪಿ ಹಸ್ತಪಾದಾದ್ಯಾಕಾರಶ್ಚೇತನಸ್ಯೈವ ಸ್ವಾಭಾವಿಕಃ। ತತ್ಸಂಬಂಧಾದೇವ ಲಿಂಗದೇಹಸ್ಥೂಲದೇಹಾದೇಃ ನಾನ್ಯಥೇತ್ಯಾಹ – **ವೃತ್ತತೇತಿ ||** ತತ್ತಸ್ಮಾಜ್ಜಡೇಷು

ವರ್ತುಲತ್ವಾದ್ಯಾಕಾರಸ್ಯೈವ ಸರ್ವೈರ್ದೃಶ್ಯಮಾನತ್ವಾತ್ । ವೃತ್ತತಾ ವರ್ತುಲತಾ । ಚತುರಶ್ರತ್ವಂ ಚತುಷ್ಕೋಣತ್ವಮ್ । ಆದಿಪದೇನ ತ್ರಿಕೋಣತ್ವಾದಿಕಂ ಗೃಹ್ಯತೇ । ತದಾದಿರಾಕಾರಃ । ಅಚೇತನೇ ಜಾತ್ಯೇಕವಚನಮ್ । ಪರಮಾಣುಘಟಾದ್ಯಚೇತನೇಷು । ಚೇತನೇಷ್ವೇವ ಹಸ್ತಾದ್ಯಾಕೃತಿರಿತಿ ಸಂಬಂಧಃ ॥ ೧೯೩ ॥

**ಇತ್ಯೇವ ಸರ್ವಥಾ ವಾಚ್ಯಂ ನಚೇಲ್ಲಿಂಗಕಲೇವರೇ ।**
**ಜಡಾಂತರಾದೃಷ್ಟರೂಪಂ ಕುತೋ ಜಾತಂ ವಿಚಾರ್ಯತಾಮ್ ॥ ೧೯೪ ॥**

**ಅರ್ಥ–** ಇತ್ಯೇವ = ಹೀಗೆಯೇ, ಸರ್ವಥಾ ವಾಚ್ಯಂ = ಎಲ್ಲ ಪ್ರಕಾರದ ವಿಮರ್ಶೆಯಿಂದ ಹೇಳಲೇಬೇಕು, ನಚೇತ್ = ಹಾಗೆ ಒಪ್ಪದಿದ್ದರೆ, ಲಿಂಗಕಲೇವರೇ = ಲಿಂಗದೇಹದಲ್ಲಿ, ಜಡಾಂತರಾದೃಷ್ಟರೂಪಂ = ಲಿಂಗ ದೇಹದ ಹೊರತಾದ (ಅನ್ಯ) ಜಡಗಳಲ್ಲಿ ಕಾಣದ ಆಕಾರವು, ಕುತಃ = ಏಕೆ, ಜಾತಂ = ಉಂಟಾಗಿದೆ, ವಿಚಾರ್ಯತಾಂ = ವಿಚಾರ ಮಾಡಲ್ಪಡಲಿ.

**ಅನುವಾದ–** ಗೋಡೆ, ಗಡಿಗೆ ಮುಂತಾದ ಜಡವಸ್ತುಗಳಲ್ಲಿಲ್ಲದ ಕೈಕಾಲು ಇತ್ಯಾದಿಗಳಿಂದ ಕೂಡಿದ ಆಕಾರವು ಲಿಂಗದೇಹದಲ್ಲಿದೆ. ಜೀವನಿಗೇ ಚಿದ್ರೂಪಾಂಗಗಳಿಂದ ಕೂಡಿದ ಶರೀರವಿಲ್ಲದಿದ್ದಲ್ಲಿ ಲಿಂಗದೇಹಕ್ಕಾದರೂ ಅಂಗೋಪಾಂಗ ಸಹಿತವಾದ ಆಕಾರವು ಹೇಗೆ ಬರಲು ಸಾಧ್ಯ?

**ಭಾವವಿಲಾಸಿನೀ**–ತದನಂಗೀಕಾರೇ ಬಾಧಕಮಾಹ–**ನಚೇದಿತಿ**॥ ಲಿಂಗಕಲೇವರೇ ಲಿಂಗಶರೀರೇ ಜಡಾಂತರಾದೃಷ್ಟರೂಪಂ ಲಿಂಗಶರೀರಾನ್ಯಜಡೇಷು ದೃಷ್ಟಾಕಾರಃ ಲಿಂಗಶರೀರೇ ಕುತೋ ಜಾತಮಿತಿ ವಿಚಾರ್ಯತಾಮಿತಿ ಸಂಬಂಧಃ ॥ ೧೯೪ ॥

**ಪ್ರಕೃತ್ಯಂಶಾ ಹಿ ತೇ ಸರ್ವೇ ಸಾ ಚ ಸೂಕ್ಷ್ಮಾಣುರೂಪಿಣೀ ।**
**ನ ತಸ್ಯಾಶ್ಚ ತದಾಕಾರೋ ವಿಕೃತೌ ಸ್ಥೂಲರೇಣುತಾ ।**
**ಭವೇತ್ಪರಂ ಪುಮಾಕಾರೇ ಪುಂರೂಪಾನುಸೃತಿರ್ಗತಿಃ ॥ ೧೯೫ ॥**

**ಅರ್ಥ–** ತೇ ಸರ್ವೇ = ಆ ಲಿಂಗದೇಹಗಳೆಲ್ಲವೂ, ಪ್ರಕೃತ್ಯಂಶಾಃ ಹಿ= ಪ್ರಕೃತಿಯ ಅಂಶಗಳು, ಸಾ ಚ = ಆ ಪ್ರಕೃತಿಯಾದರೋ, ಸೂಕ್ಷ್ಮಾಣುರೂಪಿಣೀ = ಸಣ್ಣ ಅಣು ರೂಪವುಳ್ಳದ್ದು, ತಸ್ಯಾಃ ಚ = ಆ ಪ್ರಕೃತಿಗಾದರೋ, ತದಾಕಾರಃ = ಕರಚರಣಾದಿ ಆಕಾರವು, ನ = ಇಲ್ಲ.

ವಿಕೃತೌ = ಪ್ರಕೃತಿಗೆ ವಿಕಾರವುಂಟಾದರೆ, ಸ್ಥೂಲರೇಣುತಾ ಪರಂ= ದೊಡ್ಡ ಕಣದ ರೂಪವಾದರೂ, ಭವೇತ್ = ಬಂದೀತು, ಪುಮಾಕಾರೇ = ಕರಚರಣಾದಿ ಪುರುಷ ಆಕಾರವನ್ನು ಹೊಂದಲು (ಆಕಾರದ ವಿಷಯದಲ್ಲಿ) ಪುಂರೂಪಾನುಸೃತಿಃ = ಪುರುಷರೂಪಾನುಸಾರಿತ್ವವೇ, ಗತಿಃ = ಮಾರ್ಗ.

**ಅನುವಾದ–** ಲಿಂಗ ದೇಹಗಳೆಲ್ಲವೂ ಪ್ರಕೃತಿಯ ಅಂಶಗಳೇ ಆಗಿವೆ. ಜಡವಾದ ಪ್ರಕೃತಿ ಸೂಕ್ಷ್ಮಾಣುರೂಪವಾದದ್ದು. ಅದು ಕರಚರಣಾದಿ ಆಕಾರವನ್ನು ಹೊಂದಿಲ್ಲ. ಪ್ರಕೃತಿಯು ವಿಕಾರವನ್ನು ಹೊಂದಿದರೆ ಸಣ್ಣಕಣಗಳು ದೊಡ್ಡಕಣಗಳಾದಾವು. ಲಿಂಗದೇಹದಲ್ಲಿ ಕರಚರಣಾದಿ ಆಕಾರವು ಬರಬೇಕಾದರೆ ಪುರುಷಾಕಾರವನ್ನು ಅವು ಅನುಸರಿಸುತ್ತವೆ ಎಂದು ಹೇಳುವುದೊಂದೇ ಮಾರ್ಗ.

**ಭಾವವಿಲಾಸಿನೀ–** ಪ್ರಕೃತಿಸಂಬಂಧಾಲ್ಲಿಂಗಶರೀರೇ ಕರಚರಣಾದ್ಯಾಕಾರೋ ಜಾತ ಇತ್ಯತ ಆಹ – **ಪ್ರಕೃತೀತಿ** ॥ ತೇ ಸರ್ವೇ ಲಿಂಗದೇಹಾಃ । ಸಾ ಚ ಪ್ರಕೃತಿಃ ಸೂಕ್ಷ್ಮಾಃ ಪರಮಸೂಕ್ಷ್ಮಾಃ ಯೇ ಅಣವೋ ರೇಣವಃ ತದ್ರೂಪಿಣೀ । ತಥಾಚ ತಸ್ಯಾಃ ಪ್ರಕೃತೇಸ್ತದಾಕಾರೋ ಲಿಂಗಶರೀರನಿಷ್ಠಾಕಾರೋ ನೇತಿ ಸಂಬಂಧಃ । ನನು ವಿಕೃತಿತ್ವಾತ್ಪ್ರಕೃತೇರೇವ ತಾದೃಶಾಕಾರೋ ಜಾತ ಇತ್ಯತ ಆಹ – **ವಿಕೃತಾವಿತಿ** ॥ ಸೂಕ್ಷ್ಮಾಣುರೂಪಿಣ್ಯಾಃ ಪ್ರಕೃತೇರ್ವಿಕೃತಾವಪಿ ಸ್ಥೂಲರೇಣುತಾಪರಂ ಭವೇತ್ । ನ ಪುಮಾಕಾರ ಇತಿ ಭಾವಃ । ಅಸ್ತಿಚ ಲಿಂಗಶರೀರೇ ಪುಮಾಕಾರಃ । ತಸ್ಮಾತ್ಪುರುಷರೂಪಾನುಸೃತಿರೇವ ಗತಿರಿತ್ಯಾಹ – **ಪುಮಾಕಾರ ಇತಿ** ॥ ೧೯೫ ॥

**ಸಾಕಾರಸರ್ವಜೀವಾಂಗವೇಷ್ಟನೇನೇಷ್ಟಹೇತುತಾಮ್ ।**
**ಗತಾಸ್ತೇ ತತ್ಸಮಾಕಾರಾಸ್ತದ್ದೇಹತ್ವಂ ಚ ಲೇಭಿರೇ ॥ ೧೯೬ ॥**

**ಅರ್ಥ–** ಸಾಕಾರಸರ್ವಜೀವಾಂಗವೇಷ್ಟನೇನ = ನರ, ಮೃಗ, ಪಕ್ಷಿ ಮೊದಲಾದ ಆಕಾರಗಳುಳ್ಳ ಸಮಸ್ತ ಜೀವರ ಸ್ವರೂಪಗಳಾದ (ಕರಚರಣಾದಿ) ಅಂಗಗಳನ್ನು ವ್ಯಾಪಿಸಿರುವುದರಿಂದ, ಇಷ್ಟಹೇತುತಾಂ = ಬಾಹ್ಯಭೋಗ ಹೇತುತ್ವವನ್ನು (ಜೀವರ ಭೋಗಸಾಧನತ್ವವನ್ನು), ಗತಾಃ = ಹೊಂದಿರುವ, ತತ್ಸಮಾಕಾರಾಃ= ಜೀವನ ಸ್ವರೂಪದೇಹಕ್ಕೆ ಸಮಾನವಾದ ಆಕಾರಗಳುಳ್ಳ, ತೇ= ಆ ಲಿಂಗದೇಹಗಳು, ತದ್ದೇಹತ್ವಂ ಚ= ಜೀವಸ್ವರೂಪ ಶರೀರಕ್ಕೆ ಅವರಕವಾಗಿರುವ ದೇಹರೂಪವನ್ನು ಕೂಡ, ಲೇಭಿರೇ= ಹೊಂದಿದವು.

**ಅನುವಾದ–** ಜೀವರ ಸ್ವರೂಪ ಶರೀರಗಳು ಮನುಷ್ಯ, ಪ್ರಾಣಿ, ಹಾವು ಹಕ್ಕಿ ಮೊದಲಾದ ಅನೇಕ ಆಕಾರಗಳನ್ನು ಪಡೆದಿವೆ. ಇಂತಹ ಸ್ವರೂಪ ದೇಹಗಳನ್ನು ಲಿಂಗದೇಹಗಳು ಪೂರ್ಣವಾಗಿ ಆವರಿಸಿಕೊಂಡು ಆಯಾ ಜೀವರ ಭೋಗಕ್ಕೆ ಸಾಧನಗಳಾಗಿವೆ. ಎಲ್ಲರೂ ಧರಿಸುವ ಅಂಗಿಗಳಂತೆ ಅಥವಾ ಯಾವ ಸ್ತ್ರೀಯರು ಧರಿಸುವ ಪೂರ್ಣಶರೀರವನ್ನು ಮುಚ್ಚಿಕೊಳ್ಳುವ ನಿಲುವಂಗಿಯಂತೆ ಈ ಲಿಂಗದೇಹಗಳೂ ಪೂರ್ಣಸ್ವರೂಪ ಶರೀರವನ್ನೇ ಆವರಿಸಿಕೊಂಡಿರುವುದರಿಂದ ಆ ಸ್ವರೂಪ ದೇಹಕ್ಕೆ ಮತ್ತೊಂದು ದೇಹದಂತೆ ಕಾರ್ಯ ಮಾಡುತ್ತವೆ.

**ಭಾವವಿಲಾಸಿನೀ–** ಲಿಂಗಶರೀರಸ್ಯ ಸ್ವರೂಪಂ ವಿಶದಯತಿ – **ಸಾಕಾರೇತಿ** ॥ ಸಾಕಾರಾಃ ನರಮೃಗಸರೀಸೃಪಪಕ್ಷ್ಯಾದ್ಯಾಕಾರಸಹಿತಾ ಯೇ ಸರ್ವೇ ಜೀವಾಃ ತೇಷಾಂ ಯಾನಿ

ಸ್ವರೂಪಭೂತಾನ್ಯಂಗಾನಿ ಕರಚರಣಾದೀನಿ ತದ್ವೇಷ್ವನೇನೇಷ್ವಹೇತುತ್ವಂ ಭೋಗಹೇತುತ್ವಂ ಗತಾಃ ತತ್ಸಮಾಕಾರಾಃ ಜೀವಸ್ವರೂಪಭೂತಶರೀರಸಮಾಕಾರಾಃ ತೇ ಲಿಂಗದೇಹಾಃ ಕಞ್ಚುಕವದ್ ಯವನಸ್ತ್ರೀಸರ್ವಾಂಗಕಂಚುಕವದ್ವಾ ತದ್ದೇಹತ್ವಂ ಚ ಲೇಭಿರೇ ॥ ೧೯೬ ॥

**ತಲ್ಲಿಂಗದೇಹತಾ ಚೈಷಾಂ ತತ್ತದ್ರೂಪಾನುಮಾಪನಾತ್ ॥ ೧೯೭ ॥**

**ಅರ್ಥ–** ಏಷಾಂ = ಲಿಂಗದೇಹಗಳಿಗೆ, ತತ್ತದ್ರೂಪಾನುಮಾಪನಾತ್ = ಆಯಾ ಚೇತನರ ಸ್ವರೂಪಗಳನ್ನು ತಿಳಿಸಿಕೊಡುವುದರಿಂದ, ತಲ್ಲಿಂಗದೇಹತಾ ಚ= ಜೀವಸ್ವರೂಪದೇಹದ ಲಿಂಗದೇಹತ್ವವೂ ಕೂಡ, ಲಿಂಗತ್ವವು (ಬೇರೆಯಲ್ಲವೆಂದು ತಿಳಿಯಬೇಕು).

**ಅನುವಾದ–** ಲಿಂಗದೇಹಗಳು ಜೀವಸ್ವರೂಪಕ್ಕೆ ಕೇವಲ ದೇಹಗಳಾಗಿರುವುದು ಮಾತ್ರವಲ್ಲ ಈ ಲಿಂಗದೇಹಗಳ ಆಕಾರವನ್ನು ತಿಳಿದು ಆಯಾ ಸ್ವರೂಪದೇಹಗಳ ಆಕಾರವನ್ನೂ ಅನುಮಾನ ಮಾಡಬಹುದಾಗಿದೆಯಾದ್ದರಿಂದ ಇವುಗಳು ಜೀವಸ್ವರೂಪದೇಹಕ್ಕೆ ಲಿಂಗದೇಹಗಳೂ ಆಗಿವೆ.

**ಭಾವವಿಲಾಸಿನೀ–** ಲಿಂಗಶರೀರೇಷು ಲಿಂಗಶಬ್ದಾರ್ಥಂ ನಿರ್ವಕ್ತಿ – **ತದಿತಿ** ॥ ಏಷಾಂ ಲಿಂಗ-ದೇಹಾನಾಂ ತತ್ತದ್ರೂಪಾನುಮಾಪನಾತ್ ಸ್ವಸ್ವಸದೃಶತತ್ತಚ್ಚೇತನರೂಪಾನುಮಾಪನಾತ್ತಲ್ಲಿಂಗ-ದೇಹತಾ ತೇಷಾಂ ಜೀವಾನಾಂ ಲಿಂಗದೇಹತಾ ॥ ೧೯೭ ॥

**ಅತಾದೃಶಾಸ್ತಾದೃಶಾಶ್ಚ ಬಾಹ್ಯದೇಹಾಃ ಸ್ಯುರಂಹಸಾ ।**
**ಅತೋ ನಲಿಂಗತೈತೇಷಾಂ ಸೋಽನಾದಿಸ್ಸಾದಯಸ್ತ್ವಿಮೇ ॥ ೧೯೮ ॥**

**ಅರ್ಥ–** ಅತಾದೃಶಾಃ = ಸ್ವರೂಪ ದೇಹಕ್ಕೆ ಸದೃಶಗಳಲ್ಲದ, ತಾದೃಶಾಃ = ಸ್ವರೂಪದೇಹಕ್ಕೆ ಸದೃಶಗಳೂ ಆದ, ಬಾಹ್ಯದೇಹಾಃ = ಲಿಂಗದೇಹದಿಂದ ಹೊರಗಿನ ಸ್ವರೂಪ ದೇಹಕ್ಕೆ ಅನಿರುದ್ಧ ಮತ್ತು ಸ್ಥೂಲದೇಹಗಳು, ಅಂಹಸಾ = ಪಾಪದೋಷದಿಂದ (ಬೇರೆ ಯೋನಿಗಳಲ್ಲಿ ಬರಬೇಕಾದ ಕರ್ಮದೋಷಗಳಿಂದ), ಸ್ಯುಃ = ಬರುತ್ತವೆ, ಅತಃ = ಚೇತನ ಸ್ವರೂಪದೇಹವನ್ನು ಸೂಚಿಸುತ್ತವೆಂಬ ನಿಯಮವಿಲ್ಲದ್ದರಿಂದ, ಏತೇಷಾಂ = ಈ ಬಾಹ್ಯದೇಹಗಳಿಗೆ, ನ ಲಿಂಗತಾ = ಲಿಂಗದೇಹತ್ವವಿಲ್ಲ ಲಿಂಗದೇಹಗಳಲ್ಲ, ಸಃ = ಲಿಂಗದೇಹವು (ಜೀವರ ಲಿಂಗ ದೇಹಗಳು), ಅನಾದಿಃ = ಅನಾದಿ ಕಾಲದಿಂದ ಇರತಕ್ಕದ್ದು, ಇಮೇ ತು= ಈ ಅನಿರುದ್ಧ ಮತ್ತು ಬಾಹ್ಯದೇಹಗಳಾದರೂ, ಸಾದಯಃ= ಉತ್ಪತ್ತಿಯುಳ್ಳವಾಗಿವೆ.

**ಅನುವಾದ–** ಈ ಎಲ್ಲ ಲಿಂಗದೇಹಗಳೂ ಜೀವಸ್ವರೂಪದೇಹಕ್ಕೆ ಸದೃಶಗಳಾಗಿಯೇ ಇರುತ್ತವೆ. ಆದರೆ ಕರ್ಮಾದಿ ದೋಷಗಳಿಂದ ಹುಟ್ಟುವ ಹೊರಗಿನ ದೇಹಗಳಾದ ಅನಿರುದ್ಧ ಮತ್ತು ಸ್ಥೂಲ ದೇಹಗಳು ಕೆಲವು ಸ್ವರೂಪ ಶರೀರಕ್ಕೆ ಸದೃಶಗಳಾಗಿಯೂ ಮತ್ತೆ ಕೆಲವು ಸ್ವರೂಪ ಶರೀರಕ್ಕೆ ಸದೃಶಗಳಲ್ಲದವಾಗಿಯೂ ಇರುತ್ತವೆ. ಅಲ್ಲದೆ

ಲಿಂಗದೇಹಗಳು ಅನಾದಿಗಳಾಗಿದ್ದರೆ ಅನಿರುದ್ಧ ಮತ್ತು ಬಾಹ್ಯದೇಹಗಳು ಹುಟ್ಟುಳ್ಳವುಗಳಾಗಿವೆ. ಹೀಗೆ ಲಿಂಗದೇಹ ಹಾಗೂ ಅನಿರುದ್ಧ ಸ್ಥೂಲಗಳೆಂಬ ಬಾಹ್ಯದೇಹಗಳಿಗೆ ಎರಡು ವ್ಯತ್ಯಾಸಗಳಿವೆ.

**ಭಾವವಿಲಾಸಿನೀ**– ಬಾಹ್ಯಶರೀರಾಣ್ಯಪಿ ಲಿಂಗದೇಹಾಃ ಕಿಂ ನ ಸ್ಯುರಿತ್ಯತ ಆಹ – **ಅತಾದೃಶಾ** ಇತಿ ॥ ಅತಾದೃಶಾ ಅತತ್ಸದೃಶಾಃ । ತಾದೃಶಾಸ್ತತ್ಸದೃಶಾಃ । ಬಾಹ್ಯಾಃ ಲಿಂಗದೇಹಾದ್ಬಾಹ್ಯಾಃ ಅಂಹಸಾ ಯೋಽನ್ಯತರಪ್ರಾಪಕದೋಷೇಣ ಸ್ಯುರಿತಿ ಸಂಬಂಧಃ । ಅತಶ್ಚೇತನಸ್ವರೂಪ-ದೇಹಾನನುಮಾಪಕತ್ವಾದೇತೇಷಾಂ ಬಾಹ್ಯದೇಹಾನಾಮ್ । ವೈಲಕ್ಷಣ್ಯಾಂತರಮಪ್ಯಾಹ – **ಸ** ಇತಿ ॥ ಸಃ ಲಿಂಗದೇಹಸಮೂಹಃ । ಇಮೇ ಪರಿದೃಶ್ಯಮಾನಾ ಬಾಹ್ಯದೇಹಾಃ ॥ ೧೯೮ ॥

ರೇತಸೋ ಬಿಂದುಮಾತ್ರೇಣ ಬಾಹ್ಯೋ ದೇಹಶ್ಚ ಜಾಯತೇ ।
ನ ತಸ್ಯಾಪಿ ಸ್ವತೋರೂಪಮಜೀವಂ ಚೇದ್ರಜೋ ಹಿ ತತ್ ॥ ೧೯೯ ॥

**ಅರ್ಥ**– ರೇತಸಃ = ರೇತಸ್ಸಿನ (ವೀರ್ಯದ), ಬಿಂದುಮಾತ್ರೇಣ = ಕೇವಲ ಒಂದು ಬಿಂದುವಿನಿಂದ, ಬಾಹ್ಯಃ (ಸ್ವರೂಪದ) ಹೊರಗಿನ, ದೇಹಃ ಚ= ಸ್ಥೂಲದೇಹವೂ ಕೂಡ, ಜಾಯತೇ = ಹುಟ್ಟುತ್ತದೆ, ತಸ್ಯ = ಆ ರೇತೋ ಬಿಂದುವಿಗೆ, ಅಪಿ = ಕೂಡ, ಸ್ವತಃ = ಸ್ವಭಾವ ಸಿದ್ಧವಾದ, ರೂಪಂ = ಆಕಾರವು (ಕರಚರಣಾದಿ), ನ = ಇಲ್ಲವೆ ಇಲ್ಲ (ಜೀವ ಪ್ರವೇಶದಿಂದಲೇ ಅದರಲ್ಲಿ ಕರಚರಣಾದಿಗಳು ರೂಪಗೊಳ್ಳುತ್ತವೆ), ಅಜೀವಂ ಚೇತ್ = ಜೀವ ಪ್ರವೇಶವಿಲ್ಲದಿದ್ದರೆ, ತತ್ = ಆ ರೇತೋಬಿಂದುವು, ರಜಃ = ಕೇವಲ ರೇತಃ ಕಣವು ಮಾತ್ರ

**ಅನುವಾದ**– ರೇತಸ್ಸಿನ ಕೇವಲ ಒಂದು ಬಿಂದುವಿನಿಂದ ಹೊರಗಿನ ಸ್ಥೂಲ ದೇಹವು ಹುಟ್ಟುತ್ತದೆ. ಆದರೆ ಆ ರೇತೋಬಿಂದುವಿಗೆ ಮೂಲತಃ ಕರಚರಣಾದಿಗಳುಳ್ಳ ರೂಪವಿಲ್ಲ. ಆ ರೇತಸ್ ಮತ್ತು ರಜಸ್‌ಗಳ ಮಿಶ್ರಣವು ಜೀವ ಪ್ರವೇಶವಾದರೆ ಮಾತ್ರ ಕರಚರಣಾದಿಗಳುಳ್ಳ ಶರೀರವಾಗಿ ಪರಿಣಮಿಸುತ್ತದೆ. ಇಲ್ಲದಿದ್ದರೆ ಕರಚರಣಾದಿ ರಹಿತವಾದ ಕಣವಾಗಿಯೇ ಉಳಿದು ನಾಶವಾಗುತ್ತದೆ.

**ಭಾವವಿಲಾಸಿನೀ**–ಬಾಹ್ಯದೇಹಾನಾಂ ಸಾದಿತ್ವಮುಪಪಾದಯನ್ ಚೇತನದೇಹಸಂಬಂಧಾದೇವ ದೇಹಾಕಾರ ಇತ್ಯಾಹ – **ರೇತಸ** ಇತಿ ॥ ತಸ್ಯಾಪಿ ರೇತಸೋಽಪಿ ಸ್ವತಃ ಸ್ವಭಾವತಃ ರೂಪಂ ಕರಚರಣಾದಿ। ಜೀವಪ್ರವೇಶಾದೇವ ತತ್ಕರಚರಣಾದಿರೂಪೇಣ ಪರಿಣಮತೇ । ಅಜೀವಂ ಚೇಜ್ಜೀವಪ್ರವೇಶರಹಿತಂ ಚೇತ್ತದ್ರೇತಃ ರಜಃ ಕರಚರಣಾದ್ಯಾಕಾರವಿಧುರಃ ಋತು-ರೂಪರೇತಃಕಣಃ । ಹೀತ್ಯನೇನ ಪ್ರಸಿದ್ಧಿಮಾಹ। ಏತೇನ ಜೀವಯೋಗಸ್ಯ ಜಡನಿಷ್ಠ-ಕರಚರಣಾದ್ಯಾಕಾರಹೇತುತ್ವೇ ಅನ್ವಯವ್ಯತಿರೇಕೌ ದರ್ಶಿತಾವಿತಿ ದ್ರಷ್ಟವ್ಯಮ್ ॥ ೧೯೯ ॥

**ಸಾಕ್ಷೇಂದ್ರಿಯಗಣೈರ್ಯೋಗೇ ಬಾಹ್ಯೇಂದ್ರಿಯಗಣೋऽಪ್ಯಸೌ ।**
**ಪೃಥಕ್ಪೃಥಗ್ಜ್ಞಾನದಃಸ್ಯಾನ್ನೋಚೇನ್ನಿರ್ಹೇತುಕೋ ಭವೇತ್ ॥ ೨೦೦ ॥**

**ಅರ್ಥ–** ಸಾಕ್ಷೇಂದ್ರಿಯಗಣೈಃ = ಸ್ವರೂಪಭೂತವಾದ ಚಕ್ಷುರಾದಿ ಇಂದ್ರಿಯ ಸಮೂಹದಿಂದ, ಯೋಗೇ = ಸಂಬಂಧವಿರುತ್ತಿರಲು, ಅಸೌ = ಈ ಪುರಾಣ ಪ್ರಸಿದ್ಧಿಯಂತೆ ತೈಜಸಾಹಂಕಾರದಿಂದ ಉತ್ಪನ್ನವಾದ, ಬಾಹ್ಯೇಂದ್ರಿಯಗಣಃ ಅಪಿ = ಸ್ಥೂಲದೇಹದಲ್ಲಿರುವ ಚಕ್ಷುರಾದಿ ಇಂದ್ರಿಯಗಳ, ಪೃಥಕ್ ಪೃಥಕ್ = ಬೇರೆ ಬೇರೆಯಾಗಿ, ಜ್ಞಾನದಃ = ಜ್ಞಾನವನ್ನು ಉಂಟು ಮಾಡುತ್ತದೆ, ನೋ ಚೇತ್ = ಸ್ವರೂಪೇಂದ್ರಿಯಗಳ ಯೋಗವಿಲ್ಲದಿದ್ದರೆ, ನಿರ್ಹೇತುಕಃ = ಜಡೇಂದ್ರಿಯಗಳ ಜ್ಞಾನಪ್ರದತ್ವ ಧರ್ಮವು ಕಾರಣವಿಲ್ಲದುದು ಭವೇತ್ = ಆಗುತ್ತದೆ.

**ಅನುವಾದ–** ಸ್ವರೂಪ ಶರೀರದ ಇಂದ್ರಿಯಗಳ ಸಂಬಂಧವು ಮೊದಲು ಲಿಂಗದೇಹದ ಇಂದ್ರಿಯಗಳಿಗೆ ನೇರವಾಗಿ ಆಗುತ್ತದೆ; ಆ ಬಳಿಕ ಅನಿರುದ್ಧ ದೇಹ ಮತ್ತು ಸ್ಥೂಲದೇಹದ ಇಂದ್ರಿಯಗಳಿಗೆ ಆಗುತ್ತದೆ. ಆ ಬಳಿಕವೇ ತೈಜಸಾಹಂಕಾರದಿಂದ ಹುಟ್ಟಿದ ಈ ಬಾಹೇಂದ್ರಿಯಗಳು ಜ್ಞಾನಗಳನ್ನು ಹುಟ್ಟಿಸುತ್ತವೆ. ಸ್ವರೂಪ ಶರೀರದ ಚಕ್ಷುರಿಂದ್ರಿಯದ ಸಂಬಂಧವು ಬಾಹ್ಯ ಶರೀರದ ಚಕ್ಷುರಿಂದ್ರಿಯಗಳಿಗೆ ಮತ್ತು ಅಂತಿಮವಾಗಿ ಸ್ಥೂಲಚಕ್ಷುರಿಂದ್ರಿಯದಿಂದ ಜಗತ್ತಿನ ಜ್ಞಾನವೆಂಬುದಾಗಿ ಇತರ ಇಂದ್ರಿಯಗಳಿಗೆ ಸಂಬಂಧಿಸಿದಂತೆ ಕೂಡ ಈ ಪ್ರಕ್ರಿಯೆಯೆಲ್ಲವೂ ಪ್ರತ್ಯೇಕವಾಗಿಯೇ ನಡೆಯುತ್ತದೆ. ಬಾಹ್ಯಶರೀರಗಳು ಮತ್ತು ಅವುಗಳ ಇಂದ್ರಿಯಗಳೂ ಜಡಗಳಾದ್ದರಿಂದ ಆ ಇಂದ್ರಿಯಗಳಿಗೆ ಸ್ವರೂಪಶರೀರದ ಇಂದ್ರಿಯಗಳ ಸಂಬಂಧವಿಲ್ಲದಿದ್ದರೆ ಅವುಗಳಿಂದ ಜ್ಞಾನವು ಬರುವುದೇ ಸಾಧ್ಯವಿಲ್ಲ.

**ಭಾವವಿಲಾಸಿನೀ–** ಜೀವಸ್ವರೂಪದೇಹಸ್ಯ ಕರಚರಣಾದಿಮತ್ತ್ವಾಂ ಸಾಧಯಿತ್ವಾ ಸ್ವರೂಪಭೂತ ಚಕ್ಷುರಾದೀಂದ್ರಿಯವತ್ತ್ವಾಂ ಸಾಧಯತಿ ॥ ಸಾಕ್ಷೇತಿ ॥ ಸಾಕ್ಷೇಂದ್ರಿಯಾಣಿ ಸ್ವರೂಪಭೂತಚಕ್ಷುರಾದೀನಿ ತೇಷಾಂ ಗಣೈರ್ಯೋಗೇ ಲಿಂಗಶರೀರೇ ಸಾಕ್ಷಾದ್ಯೋಗೇ ಬಾಹ್ಯಶರೀರೇ ಪ್ರಕಾಶದ್ವಾರಾ ಯೋಗೇ । ಅಸೌ ಪುರಾಣಪ್ರಸಿದ್ಧ ಇತ್ಯನೇನ ತೈಜಸಾಹಂ-ಕಾರೋತ್ಪನ್ನತ್ವಂ ಸೂಚಯತಿ । ಪೃಥಕ್ಪೃಥಗ್ಬಾಹ್ಯಚಕ್ಷುಷಿ ಸ್ವರೂಪಭೂತಚಕ್ಷುರ್ಯೋಗ ಇತ್ಯಾದಿ-ರ್ದ್ರಷ್ಟವ್ಯಃ । ಜ್ಞಾನದಃ ತತ್ತಜ್ಜ್ಞಾನದಃ । ನೋಚೇತ್ಸ್ವರೂಪಭೂತೇಂದ್ರಿಯಯೋಗೋ ನಾಸ್ತಿ ಚೇತ್ ಜಡೇಂದ್ರಿಯೇಷು ಜ್ಞಾನದತ್ವಾಖ್ಯೋ ಧರ್ಮೋ ನಿರ್ಹೇತುಕೋ ಭವೇತ್ ॥೨೦೦॥

**ಅತಸ್ಸ್ವಭಾವತಸ್ಸರ್ವೇ ಸಾಕಾರಾ ಜೀವರಾಶಯಃ ।**
**ತತ್ಕಂಚುಕೋಪಮಾ ತತ್ತಲ್ಲಿಂಗಮೂರ್ತಿಶ್ಚ ತಾದೃಶೀ ॥ ೨೦೧ ॥**

**ಅರ್ಥ–** ಅತಃ = ಆದ್ದರಿಂದ, ಸರ್ವೇ = ಸಮಸ್ತ, ಜೀವರಾಶಯಃ = ಜೀವರಾಶಿಗಳು, ಸ್ವಭಾವತಃ = ಸ್ವಭಾವದಿಂದಲೇ (ಜಡನಿರ್ಮಿತವಲ್ಲದ), ಸಾಕಾರಾಃ = ಆಕಾರವುಳ್ಳವರು, ತತ್ಕಂಚುಕೋಪಮಾ = ಆಯಾ ಸ್ವರೂಪದೇಹಗಳಿಗೆ ಅಂಗಿಯಂತೆ ಇರುವ, ತಾದೃಶೀ = ಜೀವಸ್ವರೂಪ ಸದೃಶವಾದ, ತತ್ತಲ್ಲಿಂಗಮೂರ್ತಿಃ ಚ= ಆಯಾ ಲಿಂಗದೇಹವೂ, ತಾದೃಶೀ = ಜೀವಸ್ವರೂಪದೇಹದ ಆಕಾರಕ್ಕೆ ಸಮಾನವಾದ ಆಕಾರವುಳ್ಳದ್ದು.

**ಅನುವಾದ–** ಆದ್ದರಿಂದ ಎಲ್ಲ ಜೀವಿಗಳಿಗೂ ಕೂಡ ಸ್ವಾಭಾವಿಕವೇ ಆದ ಸ್ವರೂಪ ಶರೀರಗಳಿವೆ. ಆ ಸ್ವರೂಪ ಶರೀರಗಳಿಗೆ ತೊಡಿಸಿದ ಅಂಗಿಗಳಂತಿರುವ ಲಿಂಗದೇಹಗಳೂ ಕೂಡ ಸ್ವರೂಪ ಶರೀರಗಳನ್ನು ಹೋಲುವ ಆಕಾರಗಳನ್ನೇ ಪಡೆದಿವೆ.

**ಭಾವವಿಲಾಸಿನೀ–** ಜೀವಾನಾಂ ಸಾಕಾರತ್ವಸಮರ್ಥನಮುಪಸಂಹರತಿ – **ಅತಇತಿ** ॥ **ತತ್ಕಂಚುಕೋಪಮಾ** ತೇಷಾಂ ಸ್ವರೂಪಭೂತದೇಹಾನಾಂ ಕಂಚುಕೋಪಮಾ **ತತ್ತಲ್ಲಿಂಗಮೂರ್ತಿಃ** ಸಾ ಸಾ ಲಿಂಗಮೂರ್ತಿಃ ತಾದೃಶೀ ಜೀವಸ್ವರೂಪಭೂತದೇಹಸದೃಶೀ ॥ ೨೦೦ ॥

**ಕ್ವಚಿತ್ತು ಕರ್ಮಣಾ ಬಾಹ್ಯಾ ಭಿನ್ನಾಕಾರಾ ಚ ಜಾಯತೇ ॥ ೨೦೨ ॥**

**ಅರ್ಥ–** ಕ್ವಚಿತ್ ತು = ಕೆಲವು ಸಂದರ್ಭಗಳಲ್ಲಿ ಮಾತ್ರ, ಕರ್ಮಣಾ = ಪೂರ್ವಕರ್ಮವಶದಿಂದ, ಬಾಹ್ಯಾ= ಹೊರಸ್ಥೂಲದೇಹವು, ಭಿನ್ನಾಕಾರಾ ಚ = ಸ್ವರೂಪದೇಹದಿಂದ ಭಿನ್ನವಾದ ಆಕಾರವುಳ್ಳದ್ದಾಗಿ ಕೂಡ, ಜಾಯತೇ = ಉಂಟಾಗುತ್ತದೆ.

**ಅನುವಾದ–** ಕೆಲವು ಸಂದರ್ಭಗಳಲ್ಲಿ ಪೂರ್ವಕರ್ಮವಶದಿಂದ ಹೊರಸ್ಥೂಲ ದೇಹವು ಸ್ವರೂಪದೇಹದಿಂದ ಭಿನ್ನವಾದ ಆಕಾರವುಳ್ಳದ್ದೂ ಉಂಟಾಗುತ್ತದೆ.

**ಭಾವವಿಲಾಸಿನೀ–** ಬಾಹ್ಯಾ ಮೂರ್ತಿರಿತಿಶೇಷಃ ॥ ೨೦೨ ॥

**ಜಡಾಂತರಾದೃಷ್ಟರೂಪಂ ತನೂನಾಮೇವಮಾಗತಮ್ ।**
**ಇತಿ ಮನ್ಯೇ ನ ಚೇದನ್ಯೇ ಜಡಾಶ್ಚ ಸ್ಯುಃ ಶರೀರವತ್ ॥ ೨೦೩ ॥**

**ಅರ್ಥ–** ಜಡಾಂತರಾದೃಷ್ಟರೂಪಂ = ಅನ್ಯ ಘಟಪಟಾದಿಜಡಗಳಲ್ಲಿ ಕಾಣದ ರೂಪವು, ತನೂನಾಂ = ಜೀವದೇಹಗಳಿಗೆ, ಏವಂ = ಹೀಗೆ, ಆಗತಂ = ಪ್ರಾಪ್ತವಾಗುತ್ತದೆ, ಇತಿ = ಹೀಗೆಂದು, ಅಹಂ= ನಾನು, ಮನ್ಯೇ = ತಿಳಿಯುತ್ತೇನೆ, ನೋಚೇತ್ = ಹಾಗಲ್ಲದಿದ್ದರೆ, ಜಡಾಃ ಚ = ಘಟಾದಿ ಜಡ (ನಿರ್ಜೀವ) ವಸ್ತುಗಳೂ, ಶರೀರವತ್ = ಶರೀರದಂತೆ ಕರಚರಣಾದಿಗಳುಳ್ಳವುಗಳು, ಸ್ಯುಃ = ಆಗಬೇಕು.

**ಅನುವಾದ–** ಈ ಶರೀರಗಳನ್ನು ಹೊರತುಪಡಿಸಿ ಬೇರಾವ ಜಡವಸ್ತುವಿಗೂ ಕರಚರಣಾದಿಗಳಿಂದ ಕೂಡಿದ ಆಕಾರವಿಲ್ಲ. ಸಾಕಾರವಾದ ಸ್ವರೂಪದೇಹದ

ಸಂಬಂಧದಿಂದಲೇ ಇಂತಹ ವಿಶಿಷ್ಟ ಆಕಾರವು ಶರೀರಗಳಿಗೆ ಬಂದಿದೆಯೆಂದು ನನ್ನ ಅಭಿಪ್ರಾಯವಾಗಿದೆ. ಇಲ್ಲದಿದ್ದರೆ ಈ ಶರೀರಗಳಿಗಿರುವಂತಹ ಆಕಾರವು ಘಟಾದಿ ಜಡಗಳಿಗೂ ಬರಬೇಕಾದೀತು.

**ಭಾವವಿಲಾಸಿನೀ–** ಜಡಾಂತರೇ ಶರೀರವ್ಯತಿರಿಕ್ತಜಡೇ ಘಟಪಟಾದೌ ಅದೃಷ್ಟರೂಪಮ್ । ನಚೇತ್ಸ್ವರೂಪಭೂತದೇಹಸಂಬಂಧೋ ನೋ ಚೇದ್ ಅನ್ಯೇ ಜಡಾಃ ಘಟಾದಯಃ ಶರೀರವತ್ಕರಚರಣಾದಿಮತಃ ಸ್ಯುರಿತಿ ಸಂಬಂಧಃ ॥ ೨೦೩ ॥

ಅತಃ ಸ್ವಭಾವರೂಪಸ್ಯಾಭಾವೇ ರೂಪಪರಂಪರಾ ।
ನಿರ್ನಿಮಿತ್ತಾ ಭವೇತ್ತಸ್ಮಾತ್ಸಾಕಾರಾ ಜೀವರಾಶಯಃ ॥ ೨೦೪ ॥

**ಅರ್ಥ–** ಅತಃ = ಜಡಪದಾರ್ಥಗಳು ಕರಚರಣಾದ್ಯಾಕಾರ ಇಲ್ಲದವುಗಳಾದ್ದರಿಂದ, ಸ್ವಭಾವರೂಪಸ್ಯ = ಸ್ವಭಾವದೇಹದಲ್ಲಿ ಆಕಾರದ, ಅಭಾವೇ = ಅಭಾವವಿದ್ದರೆ, ರೂಪಪರಂಪರಾ = ರೂಪಪರಂಪರೆಯೂ, ನಿರ್ನಿಮಿತ್ತಾ = ಕಾರಣವಿಲ್ಲದುದು, ಭವೇತ್ = ಆಗುತ್ತದೆ, ತಸ್ಮಾತ್ = ಆದ್ದರಿಂದ, ಜೀವರಾಶಯಃ = ಜೀವಸಮೂಹಗಳು, ಸಾಕಾರಾಃ = ಆಕಾರಗಳುಳ್ಳವೇ ಸರಿ.

**ಅನುವಾದ–** ಘಟಪಟಾದಿ ಜಡವಸ್ತುಗಳಿಗಿಗಂತೂ ಕರಚರಣಾದ್ಯಾಕಾರವಿಲ್ಲ. ಜೀವಸ್ವರೂಪದೇಹಕ್ಕೂ ಸ್ವಾಭಾವಿಕವಾದ ಆಕಾರವನ್ನು ನೀವು ಒಪ್ಪದಿದ್ದರೆ ಲಿಂಗದೇಹ, ಅನಿರುದ್ಧ ದೇಹಸ್ಥೂಲದೇಹಗಳಿಗೆ ಕರಚರಣಾದ್ಯಾಕಾರವು ಎಲ್ಲಿಂದ ಬಂದವು ಎಂಬ ಪ್ರಶ್ನೆಗೆ ಉತ್ತರವಿಲ್ಲದಂತಾಗುತ್ತದೆ. ಆದ್ದರಿಂದ ಎಲ್ಲ ಜೀವರೂ ಕರಚರಣಾದ್ಯಾಕಾರವುಳ್ಳ ಸ್ವರೂಪಶರೀರವುಳ್ಳವರೇ ಆಗಿದ್ದಾರೆ ಎಂದು ಒಪ್ಪಬೇಕು.

**ಭಾವವಿಲಾಸಿನೀ–**ಅತಃ ಯತಃ ಶರೀರವ್ಯತಿರಿಕ್ತಜಡಾ ನ ಕರಾದಿಮಂತಃ, ಅತ ಇತ್ಯರ್ಥಃ । ಸ್ವಭಾವರೂಪಸ್ಯ ಸ್ವಭಾವದೇಹಸ್ಯ । ರೂಪಪರಂಪರಾ ದೇಹಪರಂಪರಾ । ತಸ್ಮಾನ್ನಿರ್ನಿಮಿತ್ತತ್ವಾಯೋಗಾತ್ ॥ ೨೦೪ ॥

ಕಂಚುಕೇಽಸ್ತಿ ತನುಚ್ಛಾಯಾ ನ ತ್ವಕಂಚುಕವಾಸಸಿ ।
ತತಃ ಸ್ವಾಭಾವಿಕಾಭಾವೇ ನ ಸ್ಯುರೌಪಾಧಿಕಾ ಅಪಿ ॥ ೨೦೫ ॥

**ಅರ್ಥ–** ತನುಚ್ಛಾಯಾ = ದೇಹದ ಆಕಾರವು, ಕಂಚುಕೇ = ಕಂಚುಕದಲ್ಲಿ, ಅಸ್ತಿ = ಇವೆ, ಅಕಂಚುಕವಾಸಸಿ = ಕಂಚುಕವಲ್ಲದ, ಬಟ್ಟೆಯಲ್ಲಿ, ನತು = ಇರುವುದೇ ಇಲ್ಲವಷ್ಟೆ, ತತಃ = ಆದ್ದರಿಂದ, ಸ್ವಾಭಾವಿಕಾಭಾವೇ = ಸ್ವಭಾವಸಿದ್ಧ ವಸ್ತುವಿಲ್ಲದೇ ಇರುವಾಗ, ಔಪಾಧಿಕವಾದ ವಸ್ತುಗಳೂ, ನ ಸ್ಯುಃ = ಇರಲಾರವು.

**ಅನುವಾದ–** ದೇಹದ ಆಕಾರವು ಕಂಚುಕದಲ್ಲಿ ಇದೆ. ಕಂಚುಕವಲ್ಲದ (ಅಂಗಿಯಲ್ಲದ ದೇಹಾಚ್ಛಾದನೆಗಾಗಿ ಉಪಯೋಗಿಸದ) ಬಟ್ಟೆಯಲ್ಲಿ ಇರುವುದೇ ಇಲ್ಲವಷ್ಟೆ ಆದ್ದರಿಂದ ಸ್ವಭಾವಸಿದ್ಧ ವಸ್ತುವಿಲ್ಲದೆ ಇರುವಾಗ ಜನ್ಯವಾದ ವಸ್ತುವೂ ಇರುವುದಿಲ್ಲ.

**ಭಾವವಿಲಾಸಿನೀ–**ಇತೋಽಪಿ ಜೀವಸ್ಯ ಸ್ವರೂಪಭೂತಂ ಶರೀರಮಂಗೀಕಾರ್ಯಮಿತ್ಯಾಹ – **ಕಂಚುಕ ಇತಿ** ॥ ಯತಃ ಕಂಚುಕ ಏವ ತನುಚ್ಛಾಯಾ ಶರೀರವತ್ಕರಚರಣಾದಿಚ್ಛಾಯಾಸ್ತಿ । ಅಕಂಚುಕವಾಸಸಿ ಅಕಂಚುಕೀಭೂತಪಚ್ಛೋಟಿಕಾದಿವಾಸಸಿ ತನುಚ್ಛಾಯಾ ನತು ನೈವ । ತತಸ್ತಸ್ಮಾತ್ ಸ್ವಾಭಾವಿಕಕರಚರಣಾದಿಮದ್ದೇಹಾಭಾವೇ ತದುಪಾಧಿಕೃತಾಃ ಲಿಂಗದೇಹಾದಯೋಽಪಿ ಕರಚರಣಾದಿಮನ್ತೋ ನ ಸ್ಯುರಿತಿ ಸಂಬಂಧಃ । ತಸ್ಮಾತ್ಸ್ವಾಭಾವಿಕಕರ- ಚರಣಾದಿಮನ್ನಿತ್ಯದೇಹೋಽಂಗೀಕಾರ್ಯಃ । ಅನ್ಯಥಾ ಕಂಚುಕೇ ತನುಚ್ಛಾಯಾವತ್ತದಿತರವಾಸಸ್ಯಪಿ ತನುಚ್ಛಾಯಾ ಸ್ಯಾದಿತಿ ಭಾವಃ ॥ ೨೦೫ ॥

**ವಿವರಣೆ–** ಮನುಷ್ಯದೇಹವನ್ನು ಹೋಲುವ ಹೊಲಿದ ಆಕಾರವು ಅಂಗಿ, ಕುಪ್ಪಸ ಮೊದಲಾದ ಬಟ್ಟೆಗಳಲ್ಲಿ ಮಾತ್ರ ಇರುತ್ತದೆ. ಆದರೆ ಹೊಲಿದ ಬಟ್ಟೆಗಳಲ್ಲದ ಶಾಲು, ಕಂಬಳಿ ಮೊದಲಾದ ಬಟ್ಟೆಗಳಲ್ಲಿ ಶರೀರದ ಆಕಾರವು ಇರುವುದಿಲ್ಲ. ಆದ್ದರಿಂದ ಅಂಗಿ ಮೊದಲಾದವುಗಳ ಆಕಾರವು ಶರೀರದ ಆಕಾರವನ್ನು ಅವಲಂಬಿಸಿರುವ ಔಪಾಧಿಕ ಆಕಾರವೆಂದಾಯಿತು. ಹಾಗಾಗಿ ಸ್ವಾಭಾವಿಕವಾದ ಆಕಾರವಿದ್ದರೆ ಮಾತ್ರ ಔಪಾಧಿಕ ಆಕಾರವಿರಲು ಸಾಧ್ಯವೆಂಬ ನಿಯಮವು ಸಿದ್ಧವಾಗುತ್ತದೆ. ಈ ವ್ಯಾಪ್ತಿಯನುಸಾರವಾಗಿ, ಸ್ವರೂಪಶರೀರಕ್ಕೆ ಸ್ವಾಭಾವಿಕಾಕಾರವಿಲ್ಲದೇ ಹೋದರೆ ಲಿಂಗದೇಹಗಳಿಗೂ ಔಪಾಧಿಕವಾದ ಕರಚರಣಾದ್ಯಾಕಾರವಿರಲು ಸಾಧ್ಯವಿಲ್ಲವೆಂದಾಗುತ್ತದೆ. ಬಾಹ್ಯಶರೀರಗಳಿಗೆ ಬಂದ ಆಕಾರವು ಆಕಸ್ಮಿಕವೆಂದು ಆಗ್ರಹ ಮಾಡುವುದಾದರೆ ಅಂಗಿಯಂತೆ ಶಾಲುಕಂಬಳಿಗಳಿಗೂ ಕರಾದ್ಯಾಕಾರ ಬರಬೇಕಾದೀತು.

**ಸ್ಯಾದ್ಧಿ ಸ್ಫಟಿಕಲೌಹಿತ್ಯಂ ಸ್ವತೋ ಲೋಹಿತಸನ್ನಿಧೌ ।**
**ಸ್ವೇನ ರೂಪೇಣ ನಿಷ್ಪತ್ತಿಂ ಮುಕ್ತಿಮಾಹ ತತಃ ಶ್ರುತಿಃ ॥ ೨೦೬ ॥**

**ಅರ್ಥ–** ಸ್ವತಃ = ಸ್ವಯಂ (ಸ್ವಾಭಾವಿಕವಾದ), ಲೋಹಿತಸನ್ನಿಧೌ = ಕೆಂಪುವರ್ಣದ ವಸ್ತುವಿನ ಸಾಮೀಪ್ಯವಿರಲು, ಸ್ಫಟಿಕಲೌಹಿತ್ಯಂ = ಸ್ಫಟಿಕದಲ್ಲಿ ಕೆಂಪುವರ್ಣವು, ಸ್ಯಾತ್ ಹಿ = ಉಂಟಾಗುತ್ತದೆಯಷ್ಟೆ !, ಸ್ವೇನರೂಪೇಣ = ತನ್ನದೇ ಆದ ದೇಹದಿಂದ, ನಿಷ್ಪತ್ತಿಂ = ಆವಿರ್ಭಾವವನ್ನು, ಮುಕ್ತಿಂ = ಮುಕ್ತಿಯನ್ನಾಗಿ, ತತಃ = ಆಕಾರಣದಿಂದಲೇ, ಶ್ರುತಿಃ = ವೇದವು, ಆಹ = ಹೇಳುತ್ತದೆ.

**ಅನುವಾದ–** ಸ್ವಾಭಾವಿಕವಾದ ಕೆಂಬಣ್ಣವುಳ್ಳ ದಾಸವಾಳ ಹೂ ಮೊದಲಾದ ವಸ್ತುಗಳು ಸಮೀಪವಿದ್ದಾಗ ಮಾತ್ರ ಸ್ಫಟಿಕ ಮಣಿಯಲ್ಲಿ ಔಪಾಧಿಕವಾದ ಕೆಂಬಣ್ಣವು

ಕಂಡುಬರುತ್ತದೆ. ಆದ್ದರಿಂದ ಔಪಾಧಿಕವಾದದ್ದೆಲ್ಲವೂ ಸ್ವಾಭಾವಿಕವಾದದ್ದನ್ನು ಅವಲಂಬಿಸಿದೆಯೆಂಬುದು ಸಿದ್ಧವಾಗುತ್ತದೆ. ಇದಲ್ಲದೆ ಜೀವರು ಸಾಕಾರರೆಂಬ ವಿಷಯದಲ್ಲಿ ಶ್ರುತಿಯೂ ಪ್ರಮಾಣವಾಗಿದೆ. 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವೇದವಾಕ್ಯದ ಅರ್ಥ ಹೀಗಿದೆ : ಜ್ಯೋತಿಃಸ್ವರೂಪನಾದ ಪರಬ್ರಹ್ಮನನ್ನು ತಲುಪಿದ ಸಾಧಕನು ತನ್ನ ಮೂಲರೂಪವನ್ನು ಪಡೆದುಕೊಳ್ಳುತ್ತಾನೆ. ಹೀಗೆ ಯುಕ್ತಿಗಳಿಂದ ಮತ್ತು ಶ್ರುತಿಯಿಂದಲೂ ಜೀವರಿಗೆ ಸಾಕಾರತ್ತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಔಪಾಧಿಕಸ್ಯ ಸ್ವಾಭಾವಿಕನೈಯತ್ಯಮುಪಪಾದಯತಿ – **ಸ್ಫಾದಿತಿ** ॥ ಸ್ಫಟಿಕಲೌಹಿತ್ಯಂ ಜಪಾಕುಸುಮೋಪಾಧಿಕಮ್ । ತಚ್ಚ ಸ್ವತೋ ಲೋಹಿತಸ್ಯ ಜಪಾಕುಸುಮಸ್ಯ ಸನ್ನಿಧಾವೇವ ಸ್ಯಾನ್ನಾಸನ್ನಿಧಾವಿತ್ಯೌಪಾಧಿಕಂ ಸ್ವಾಭಾವಿಕನಿಯತಮೇವೇತಿ ಭಾವಃ । ಏವಂ ಯುಕ್ತ್ಯೋಪಪಾದಿತಸ್ವಾಭಾವಿಕದೇಹವತ್ತ್ವೇ ಶ್ರುತಿಂ ಚ ಪ್ರಮಾಣಯತಿ– **ಸ್ವೇನ ರೂಪೇಣೇತಿ** ॥ 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಇತಿ ಶ್ರುತಿಃ ತತಸ್ಸ್ವರೂಪದೇಹಸದ್ಭಾವಾತ್ ಸ್ವೇನ ರೂಪೇಣ ನಿಷ್ಪತ್ತಿಂ ಸ್ವರೂಪದೇಹೇನ ಪ್ರಾಪ್ತಿಂ ಮುಕ್ತಿಮಾಹೇತಿ ಸಂಬಂಧಃ ॥ ೨೦೬ ॥

ಯುಕ್ತಿಶ್ಚೌಪಾಧಿಕೈಃ ರೂಪೈಸ್ಸ್ವಾಭಾವಿಕಮಸಾಧಯತ್ ॥ ೨೦೭ ॥

**ಅರ್ಥ**– ಯುಕ್ತಿಃ ಚ= ಯುಕ್ತಿಯೂ ಕೂಡ, ಔಪಾಧಿಕೈಃ ರೂಪೈಃ = ಬಾಹ್ಯದೇಹಗಳ ಆಕಾರಗಳಿಂದ, ಸ್ವಾಭಾವಿಕಂ = ಸ್ವಭಾವಿಕ ದೇಹದ ಆಕಾರವನ್ನು, ಅಸಾಧಯತ್ = ಸಾಧಿಸಿತು.

**ಅನುವಾದ**– ಔಪಾಧಿಕಗಳಾದ ಬಾಹ್ಯರೂಪಗಳೆಂಬ ಹೇತುವಿನಿಂದ ಸ್ವಾಭಾವಿಕ ಸ್ವರೂಪದೇಹರೂಪವೆಂಬ ಸಾಧ್ಯವನ್ನು ಯುಕ್ತಿಯು ಸಾಧಿಸಿದೆ : ಜೀವನು (ಪಕ್ಷ) ಸ್ವಾಭಾವಿಕ ಔಪಾಧಿಕಗಳಾದ ಬಾಹ್ಯದೇಹರೂಪವುಳ್ಳವನಾದ್ದರಿಂದ (ಹೇತು).

**ಭಾವವಿಲಾಸಿನೀ**–ಪೂರ್ವೋಕ್ತಾಂ ಯುಕ್ತಿಂ ಸ್ಮಾರಯತಿ – **ಯುಕ್ತಿಶ್ಚೇತಿ** ॥ ಔಪಾಧಿಕೈರೂಪೈರ್ಬಾಹ್ಯದೇಹೈಃ ಸ್ವಾಭಾವಿಕಂ ಸ್ವಾಭಾವಿಕದೇಹಮ್ ಅಸಾಧಯದಿತಿ ಸಂಬಂಧಃ ॥ ೨೦೭ ॥

ಯಸ್ತು ವಸ್ತು ನಿರಾಕಾರಂ ವಕ್ತಿ ತತ್ತ್ವಂ ನ ವೇತ್ತಿ ಸಃ (ವೇತ್ಯಸೌ) ।
ಚಿತ್ತ್ವಾಚಿತ್ತ್ವಾಶ್ರಯಂ ತತ್ತ್ವಮಿತ್ಯತಿ(ಮಂಗಲಮ್)ನಿರ್ಮಲಮ್ ॥ ೨೦೮ ॥

**ಅರ್ಥ**– ಯಃ ತು= ಯಾವನು, ವಸ್ತು= ಜೀವಮೊದಲಾದ ವಸ್ತುಗಳ ಸಮೂಹವನ್ನು, ನಿರಾಕಾರಂ= ನಿರಾಕಾರವೆಂದು, ವಕ್ತಿ= ಹೇಳುವನೋ, ಸಃ= ಆತನು, ತತ್ತ್ವಂ= ತತ್ತ್ವವನ್ನು, ನ ವೇತ್ತಿ= ತಿಳಿದವನಲ್ಲ, ಚಿತ್ತ್ವಾಚಿತ್ತ್ವಾಶ್ರಯಂ= ಚಿತ್ತ್ವ ಅಥವಾ ಅಚಿತ್ತ್ವಗಳಿಗೆ

ಆಶ್ರಯವಾದದ್ದೇ, ತತ್ತ್ವಂ= ತತ್ತ್ವವು, ಇತಿ= ಎಂಬುದು, ಅತಿನಿರ್ಮಲಂ= ಅತ್ಯಂತ ಶುದ್ಧವಾದ ಪ್ರಮೇಯವು.

**ಅನುವಾದ–** ಜೀವಾದಿವಸ್ತುಗಳನ್ನು ನಿರಾಕಾರಗಳೆಂದು ಹೇಳುವವರಿಗೆ ತತ್ತ್ವಶಬ್ದದ ಅರ್ಥವೇ ತಿಳಿದಿಲ್ಲ. ಏಕೆಂದರೆ ಈ ಪ್ರಪಂಚದಲ್ಲಿ ಇರುವವು ಚೇತನ ಅಚೇತನಗಳೆಂಬ ಎರಡೇ ತತ್ತ್ವಗಳು. ಅವುಗಳಲ್ಲಿ ಚೇತನವೆಂದರೆ ಜ್ಞಾನಸ್ವರೂಪಾಕಾರವುಳ್ಳದ್ದೆಂದೂ ಅಚೇತನವೆಂದರೆ ಜ್ಞಾನಭಿನ್ನ (ಅಚೈತನ್ಯ-ರೂಪ) ಆಕಾರವುಳ್ಳದ್ದೆಂದೂ ಅರ್ಥವಾಗುತ್ತದೆ. ಚೇತನಾಚೇತನ ಭಿನ್ನವಸ್ತುವೇ ಜಗತ್ತಿನಲ್ಲಿ ಇಲ್ಲವಾದ್ದರಿಂದ ಯಾವ ವಸ್ತುವನ್ನೂ ನಿರಾಕಾರವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ನಾವು ಹೇಳುವ ಎಲ್ಲ ವಿಷಯಗಳೂ ದೋಷರಹಿತವಾಗಿವೆ.

**ಭಾವವಿಲಾಸಿನೀ–**ಜೀವಾನಾಂ ನಿರಾಕಾರತ್ವಖಂಡನಮುಪಸಂಹರತಿ – **ಯಸ್ತ್ವಿತಿ** ॥ ವಸ್ತು ಜೀವಾದಿವಸ್ತು । ಅಸೌ ವಾದೀ । ಕುತಸ್ತತ್ತ್ವಂ ನ ವೇದೇತ್ಯತ ಆಹ – **ಚಿತ್ತ್ವೇತಿ** ॥ ಚೇತನಾಚೇತನಂ ಖಲು ತತ್ತ್ವದ್ವಯಮ್ । ತತ್ರ ಚೇತನತತ್ತ್ವಂ ಚಿತ್ತ್ವರೂಪಾಕಾರಾಶ್ರಯಮ್ । ಅಚೇತನತ್ತ್ವ-ಮಚಿತ್ತ್ವರೂಪಾಕಾರಾಶ್ರಯಮಿತಿ ನಿರಾಕಾರಂ ಕ್ವಾಸ್ತೀತ್ಯರ್ಥಃ । ಇಯಮಪ್ಯೇಕಾ ಸರ್ವಸ್ಯ ಸಾಕಾರತ್ವೇ ಯುಕ್ತಿರಿತಿ ಭಾವಃ ॥ ೨೦೮.॥

**ವಿವರಣೆ–** ಎಲ್ಲವೂ ಸಾಕಾರವೆಂಬುದನ್ನು ಸಾಧಿಸುವ ಮತ್ತೊಂದು ಅನುಮಾನವನ್ನು ಇಲ್ಲಿ ಸೂಚಿಸಲಾಗಿದೆ. ವಿಮತಃ ಸಾಕಾರಃ ತತ್ತ್ವತ್ವಾತ್ (ಚೇತನಾಚೇತನಯೋ-ರನ್ಯತರತ್ವಾತ್) ವ್ಯತಿರೇಕೇಣ ಶಶವಿಷಾಣಾದಿವತ್. ಅನುವಾದದ ಅರ್ಥ : ವಿವಾದಕ್ಕೆ ವಿಷಯನಾದ ಜೀವನು (ಪಕ್ಷ) ಸಾಕಾರನಾಗಿದ್ದಾನೆ (ಸಾಧ್ಯ) ತತ್ತ್ವನಾಗಿರುವುದರಿಂದ ಅಥವಾ ಚೇತನಾಚೇತನರಲ್ಲೊಬ್ಬನಾಗಿರುವುದರಿಂದ (ಹೇತು) ಸಾಕಾರತ್ವರೂಪ ಸಾಧ್ಯರಹಿತಗಳಾದ ತತ್ತ್ವತ್ವರೂಪ ಹೇತುರಹಿತಗಳಾದ ಶಶವಿಷಾಣಾದಿಗಳು ವ್ಯತಿರೇಕ ದೃಷ್ಟಾಂತಗಳಾಗಿವೆ.

**ಗುರುಶ್ಚಾರ್ವಾಕವಿದ್ಯಾಯಾ ಗುರುರ್ಮೇ ನಾಕಿನಾಂ ಗುರುಃ ।**
**ಅತಸ್ತತ್ಕೃಪಯಾ ಶ್ರೌತಮತಸ್ಥಿತಿರಪೀರಿತಾ ॥ ೨೦೯ ॥**

**ಅರ್ಥ–** ಚಾರ್ವಾಕವಿದ್ಯಯಾಃ = ಚಾರ್ವಾಕ ವಿದ್ಯೆಯ, ಗುರುಃ = ಪ್ರವರ್ತಕರು, ಗುರುಃ = ಬೃಹಸ್ಪತ್ಯಾಚಾರ್ಯರು, ಮೇ = ನನ್ನ, ಗುರುಃ = ಜ್ಞಾನೋಪದೇಶಕರು, ನಾಕಿನಾಂಗುರುಃ = ದೇವತೆಗಳೂ ಗುರುಗಳು, ಅತಃ= ಆದ್ದರಿಂದ, ತತ್ಕೃಪಯಾ = ಆ ಮುಖ್ಯವಾಯುದೇವರ ಕೃಪೆಯಿಂದ,ಶ್ರೌತಮತ ಸ್ಥಿತಿಃ ಅಪಿ = ವೇದ ಮತದ ಸ್ಥಿತಿಯೂ ಕೂಡ, ಈರಿತಾ = ಹೇಳಲ್ಪಟ್ಟಿರುತ್ತದೆ.

**ಅನುವಾದ–** ನಿಮ್ಮ ಚಾರ್ವಾಕ ಸಿದ್ಧಾಂತಕ್ಕೆ ಬೃಹಸ್ಪತಿಗಳೇ ಗುರುಗಳು. ನಮ್ಮ ಸಿದ್ಧಾಂತಕ್ಕಾದರೂ ಬೃಹಸ್ಪತಿ, ಇಂದ್ರ, ಮೊದಲಾದ ಎಲ್ಲ ದೇವತೆಗಳಿಗೂ ಗುರುಗಳಾದ ಮುಖ್ಯಪ್ರಾಣರೇ ಗುರುಗಳಾಗಿದ್ದಾರೆ. ಆದ್ದರಿಂದ ನಮ್ಮ ಆಚಾರ್ಯರು ನಿಮ್ಮ ಗುರುಗಳಿಗಿಂತ ಉತ್ತಮರಾದ್ದರಿಂದ ನಿಮ್ಮ ಮತವು ತ್ಯಾಜ್ಯವಾಗಿದೆ ಮತ್ತು ಆ ಮುಖ್ಯಪ್ರಾಣದೇವರ ಕೃಪೆಯಿಂದ ವೇದಪುರಾಣಾದಿಗಳ ಯಥಾರ್ಥ ಸಿದ್ಧಾಂತವು ನಮ್ಮ ತತ್ತ್ವವಾದದ ರೂಪದಲ್ಲಿ ಈ ಲೋಕದಲ್ಲಿ ನೆಲೆಕಂಡುಕೊಂಡಿದೆ.

**ಭಾವವಿಲಾಸಿನೀ–**ನನು ಗುರೂಕ್ತತ್ವಾಚ್ಚಾರ್ವಾಕವಿದ್ಯಾ ನ ನಿಷೇಧ್ಯೇತ್ಯತ ಆಹ – **ಗುರುರಿತಿ** ॥ ಚಾರ್ವಾಕವಿದ್ಯಾಯಾಃ ಗುರುರ್ಬೃಹಸ್ಪತಿರ್ಗುರುರ್ಗುರುರಿತ್ಯಾವೃತ್ಯಾ ಯೋಜ್ಯಮ್ । ಮೇ ಮಮ ನಾಕಿನಾಂ ಬೃಹಸ್ಪತ್ಯಾದಿದೇವಾನಾಂ ಗುರುರುಪದೇಷ್ಟಾ ಮುಖ್ಯವಾಯುರ್ಗುರುರಿತಿ ಸಂಬಂಧಃ । ತತ್ಕೃಪಯಾ ಮುಖ್ಯವಾಯುಕೃಪಯಾ । ತಥಾಚಾಸ್ಮದಾಚಾರ್ಯಾಣಾಂ ತ್ವದಾಚಾರ್ಯಾದಪ್ಯುತ್ತಮತ್ವಾತ್ ತ್ವದಾಚಾರ್ಯೇಣೋಕ್ತಮಪಿ ನಿಷೇಧ್ಯಮಿತಿ ಭಾವಃ । ಅಥವಾ ಚಾರ್ವಾಕವಿದ್ಯಾಯಾ ಗುರುರುಪದೇಷ್ಟಾ ನಾಕಿನಾಂ ದೇವಾನಾಂ ಗುರುರ್ಬೃಹಸ್ಪತಿಃ ಮೇ ಮಮಾಪಿ ಗುರುಃ ಹೃದಿ ಸ್ಥಿತ್ವಾ ಜ್ಞಾನೋಪದೇಷ್ಟಾ ಅತಸ್ತತ್ಕೃಪಯಾ ಶ್ರೌತಮತಸ್ಥಿತಿರಪಿ ಈರಿತೇತಿ ಭಾವಃ ॥ ೨೦೯ ॥

> ಕ್ಷೀರಸ್ಯೋತ್ಸೇಚನಂ ಕೋ ವಾ ನಿರುಣದ್ಧ್ಯಾಜ್ಞಯಾ ಜನಃ ।
> ವಸ್ತ್ರೇಣಾಪಿ ಗ್ರಹಃ ಪ್ರೋಕ್ತೋ ರಾಜಮಂದಿರಸರ್ಪಿಷಃ ॥ ೨೧೦ ॥

**ಅರ್ಥ–** ಕ್ಷೀರಸ್ಯ = ಹಾಲಿನ, ಉತ್ಸೇಚನಂ = ಉಕ್ಕುವುದನ್ನು, ಕಃ ವಾ ಜನಃ = ಯಾವ ಮನುಷ್ಯನು, ಆಜ್ಞಯಾ= ಆಜ್ಞೆಯಿಂದ (ಶಪಥದಿಂದ), ನಿರುಣದ್ಧಿ = ತಡೆಯಲು ಸಮರ್ಥನಾದಾನು? ರಾಜಮಂದಿರ ಸರ್ಪಿಷಃ = ರಾಜಗೃಹದ ತುಪ್ಪದ, ಗ್ರಹಃ = ಸ್ವೀಕಾರವು, ವಸ್ತ್ರೇಣಾಪಿ = ಬಟ್ಟೆಯಿಂದಾದರೂ, ಪ್ರೋಕ್ತಃ = ಹೇಳಲ್ಪಡುತ್ತದೆ.

**ಅನುವಾದ–** ಚಾರ್ವಾಕ ಸಿದ್ಧಾಂತದ ವಿಮರ್ಶವು ನಡೆಯುತ್ತಿರುವಾಗ ಅದ್ವೈತ ಸಿದ್ಧಾಂತದ ಖಂಡನವನ್ನೂ ಇಲ್ಲೇಕೆ ಮಾಡಲಾಗಿದೆ ಎಂಬ ಶಂಕೆಗೆ ಮೂಲಕಾರರು ಹೀಗೆ ಉತ್ತರವನ್ನು ಹೇಳುತ್ತಿದ್ದಾರೆ : ಉಕ್ಕುತ್ತಿರುವ ಹಾಲನ್ನು ಉಕ್ಕಬೇಡವೆಂದು ಆಜ್ಞೆ ಮಾಡಿ ನಿಲ್ಲಿಸಲಾದೀತೆ? ಜೀವರಿಗೆ ಸಾಕಾರತ್ವವನ್ನು ಸಮರ್ಥಿಸುವಾಗ ಚಾರ್ವಾಕರಂತೆ ಮಾಯಾವಾದಿಗಳೂ ಪ್ರತಿವಾದಿಗಳಾಗಿದ್ದಾರೆ. ಹಾಗಾಗಿ ಅವರನ್ನು ಖಂಡಿಸುವಾಗ ಮೂಲಕಾರರ ಉತ್ಸಾಹವು ಹಾಲಿನಂತೆ ಉಕ್ಕುತ್ತದೆ. ಅದನ್ನು ಆಜ್ಞೆ ಮಾಡಿ ತಡೆಯುವ ಶಕ್ತಿ ಯಾರಿಗಿದೆ? ರಾಜರ ಅರಮನೆಯಲ್ಲಿ ತುಪ್ಪದ ದಾನವು ನಡೆಯುತ್ತಿದ್ದಾಗ ಕೈಯಲ್ಲಿ ಪಾತ್ರೆಯಿಲ್ಲವೆಂದು ಆ ತುಪ್ಪವನ್ನು ತಿರಸ್ಕರಿಸಬಾರದು; ಹೊರತು ಬಳಿಯಲ್ಲಿರುವ ಬಟ್ಟೆಯನ್ನಾದರೂ ಆ ತುಪ್ಪದಲ್ಲಿ ಎದ್ದಿ

ಮನೆಗೆ ಬಂದು ಆ ಬಟ್ಟೆಯನ್ನು ಹಿಂಡಿ ತುಪ್ಪವನ್ನು ಪಾತ್ರೆಯಲ್ಲಿ ಸಂಗ್ರಹಿಸಿಕೊಳ್ಳಬೇಕು. ಅದರಂತೆ ವಾದಿರಾಜರ ಮುಖದಿಂದ ಅದ್ವೈತದ ಖಂಡನವು ಹೊರಬರುತ್ತಿರುವಾಗ ಅದ್ವೈತ ಖಂಡನಕ್ಕೆ ಇದು ಸಂದರ್ಭವಲ್ಲವೆಂದು ಶಂಕಿಸದೆ ಯೋಗ್ಯತಾನುಸಾರವಾಗಿ ಆ ಖಂಡನವನ್ನು ಮನಸ್ಸಿನಿಂದ ಗ್ರಹಿಸಬೇಕು.

**ಭಾವವಿಲಾಸಿನೀ**–ನನು ಚಾರ್ವಾಕಮತನಿರಾಕರಣಾವಸರೇ ತದುಕ್ತದೇಹಾತ್ಮಕಜಡಜೀವಸ್ಯ ಯಾ ಜಡಾಕಾರತಾ ಸಾ ನಿರಾಕಾರ್ಯಾ । ನೈವಮಸ್ಮನ್ಮತಮ್, ಕಿಂತು ಜಡದೇಹಭಿನ್ನಚೇತನಜೀವಸ್ಯ ಚಿದಾತ್ಮಕಕರಚರಣಾದಿಮತ್ತ್ವೇವೇತಿ ವೈಲಕ್ಷಣ್ಯಮಾತ್ರಂ ಪ್ರದರ್ಶನೀಯಮ್ । ತದಸಹಮಾನಸ್ಯ ಮಾಯಾವಾದಿನೋ ಮತನಿರಾಕರಣಂ ಕಿಮರ್ಥಮತ್ರ ವಿಸ್ಮೃತಮಿತ್ಯತ ಆಹ – **ಕ್ಷೀರಸ್ಯೇತಿ** ॥ ಉತ್ಸೇಚನಂ ವಹ್ನಿವಶಾದೂರ್ಧ್ವಗಮನಮ್ । ಆಜ್ಞಯಾ ಶಪಥಾದಿರೂಪಯಾ । ತಥಾ ಚಾರ್ವಾಕನಿರಾಕರಣಪ್ರಸಂಗಾತ್ ಸ್ಮೃತತತ್ತ್ವನಿರೂಪಣನಿರೋಧಃ ಕರ್ತುಮಶಕ್ಯ ಇತಿ ಭಾವಃ । ಅಸ್ಮಿನ್ನರ್ಥೇಽರ್ಥಾಂತರಂ ನ್ಯಸ್ಯತಿ – **ವಸ್ತ್ರೇಣಾಪೀತಿ** ॥ ೨೧೦ ॥

ನಿರಂಕುಶಃ ಕಾಮಭೋಗಃ ಫಲಂ ಕಿಲ ಭವನ್ಮತೇ ।
ತಚ್ಚ ತಕ್ಷಕಮೌಲಿಸ್ಥರತ್ನಾಹರಣಯತ್ನವತ್ ॥ ೨೧೧ ॥

**ಅರ್ಥ**– ಭವನ್ಮತೇ = (ಹೇಚಾರ್ವಾಕ) ನಿನ್ನ ಮತದಲ್ಲಿ, ನಿರಂಕುಶಃ = ಕಾರ್ಯಾಕಾರ್ಯ ವಿವೇಕವಿಲ್ಲದ ಕಾಮಭೋಗಃ = ವಿಷಯ ಭೋಗವು, ಫಲಂ ಕಿಲ = ಫಲವಷ್ಟೆ ತತ್ ಚ = ಅದಾದರೋ, ತಕ್ಷಕಮೌಲಿಸ್ಥರತ್ನಾಹರಣಯತ್ನವತ್ = (ಸರ್ಪಶ್ರೇಷ್ಠನಾದತಕ್ಷಕನ) ಹೆಡೆಯಲ್ಲಿರುವ ರತ್ನವನ್ನು ಅಪಹರಿಸುವ ಯತ್ನದಂತೆ (ಅಸಾಧ್ಯವೇ ಸರಿ).

**ಅನುವಾದ**– ಕಾರ್ಯಾಕಾರ್ಯವಿವೇಕವಿಲ್ಲದೇ ಎಲ್ಲ ರೀತಿಯ ಸುಖಗಳನ್ನು ಸೂರೆಗೊಳ್ಳುವುದೇ ಚಾರ್ವಾಕ ಸಿದ್ಧಾಂತದ ಪ್ರಯೋಜನವಾಗಿದೆ. ತಕ್ಷಕ ಸರ್ಪದ ಹೆಡೆಯಲ್ಲಿರುವ ರತ್ನವನ್ನು ತೆಗೆಯಲು ಮಾಡುವ ಪ್ರಯತ್ನದಂತೆ ಅಂಥ ಸುಖಾನುಭವಕ್ಕಾಗಿ ಮಾಡುವ ಪ್ರಯತ್ನವೂ ವ್ಯರ್ಥವೇ ಆಗುತ್ತದೆ.

**ಭಾವವಿಲಾಸಿನೀ**–ಅಧುನಾ ಚಾರ್ವಾಕಶಾಸ್ತ್ರಸ್ಯ ಪ್ರಯೋಜನಂ ನಿರಾಕರೋತಿ–**ನಿರಂಕುಶ ಇತಿ** ॥ ನಿರಂಕುಶಃ ನಿರೋಧರಹಿತಃ ಕಾರ್ಯಾಕಾರ್ಯವಿಭಾಗರಹಿತ ಇತ್ಯರ್ಥಃ । ಕಾಮಭೋಗಃ ಸ್ತ್ರೀಚಂದನಾದಿವಿಷಯಭೋಗಃ । ತಚ್ಚ ಫಲಂ ತಕ್ಷಕಮೌಲಿಸ್ಥರತ್ನಾಹರಣಯತ್ನವದ್ ಅಸಾಧ್ಯಮೇವೇತಿ ಭಾವಃ ॥ ೨೧೧ ॥

ಧರ್ಮಾಂಕುಶಸ್ಯ ಭೇದೇಽಪಿ ಧನಾಭಾವಾಂಕುಶಸ್ಯ ನ ।
ತಸ್ಯ ನಿರ್ಮೂಲನಾಯಾಸ್ತಿ ಧರ್ಮಃ ಕೋಽಪಿ ನ ತೇ ಮತೇ ॥ ೨೧೨ ॥

**ಅರ್ಥ**– ಧರ್ಮಾಂಕುಶಸ್ಯ = ಧರ್ಮವೆಂಬ ಅಂಕುಶದ, ಭೇದೇಪಿ = ಭೇದವಾಗಿದ್ದರೂ, ಧನಾಭಾವಾಂಕುಶಸ್ಯ = ಧನವಿಲ್ಲವೆಂಬ ಅಂಕುಶದ, ನ = ಭೇದವಾಗಿಲ್ಲ, ತಸ್ಯ =

ಧನಾಭಾವದ, ನಿರ್ಮೂಲನಾಯ = ಪರಿಹಾರಕ್ಕೆ, ತೇ ಮತೇ = ನಿನ್ನ ಮತದಲ್ಲಿ, ಕಃ ಅಪಿ ಧರ್ಮಃ = ಯಾವ ಧರ್ಮವೂ, ನಾಸ್ತಿ = ಇಲ್ಲವೇ ಇಲ್ಲ.

**ಅನುವಾದ–** ಮನುಷ್ಯನೆಂಬ ಆನೆಯನ್ನು ನಿಯಂತ್ರಣದಲ್ಲಿಡಲು ಎರಡು ಅಂಕುಶಗಳಿವೆ. ಮೊದಲನೆಯದು ವೇದಾದಿ ಶಾಸ್ತ್ರವಿಹಿತವಾದ ಧರ್ಮ, ಎರಡನೆಯದು ಧನಾದಿ ಸಂಪನ್ಮೂಲಗಳ ಕೊರತೆ. ಅಡೆತಡೆಯಿಲ್ಲದ ಸುಖಭೋಗವೇ ಜೀವನದ ಉದ್ದೇಶವೆಂದು ಭಾವಿಸುವ ನಾಸ್ತಿಕರಾದ ನೀವು ವೇದಾದಿಶಾಸ್ತ್ರಗಳನ್ನೊಪ್ಪದೇ ಮೊದಲ ಅಂಕುಶವನ್ನು ಭಗ್ನಗೊಳಿಸುವ ಪ್ರಯತ್ನವನ್ನಾದರೂ ಮಾಡುತ್ತಿದ್ದೀರಿ. ಆದರೆ ಧನಾದಿಸಂಪನ್ಮೂಲಗಳ ಕೊರತೆಯೆಂಬ ಅಂಕುಶವನ್ನು ಭಗ್ನಗೊಳಿಸುವ ಯಾವ ಧರ್ಮಾಚರಣೆಯೂ ನಿಮ್ಮ ಮತದಲ್ಲಿ ಕಂಡುಬರುವುದಿಲ್ಲ.

**ಭಾವವಿಲಾಸಿನೀ–**ಇದಂ ಚ ಫಲಂ ದರಿದ್ರಾಣಾಂ ಶಿಷ್ಯಾಣಾಂ ವಾ ಧನಿನಾಂ ವೇತಿ ವಿಕಲ್ಪಂ ಮನಸಿ ನಿಧಾಯಾದ್ಯೇ ತದುಪಪಾದಯತಿ – **ಧರ್ಮೇತಿ** ॥ ಧರ್ಮಾಂಕುಶಸ್ಯ ಧರ್ಮಾಖ್ಯಾಂಕುಶಸ್ಯ । ಯಥಾ ಗಜಮಂಕುಶೋ ನಿರುಣದ್ಧಿ ಏವಮಗಮ್ಯಾಗಮನಾದೌ ಪ್ರವರ್ತಮಾನಂ ಪ್ರತಿ ಅಯಮಧರ್ಮ ಇತಿ ನಿರೋಧಕಧರ್ಮವಾದಸ್ಯೇತಿ ಯಾವತ್ । ಧನಾಭಾವಾಂಕುಶಸ್ಯ ಚ್ಛೇದಕಂ ನೇತಿ ಸಂಬಂಧಃ । ಸತಿ ಧನೇ ನಿರಂಕುಶಕಾಮೋಪಭೋಗಃ ಸ್ಯಾತ್ । ತದರ್ಥಂ ಧನಾಭಾವ ಏವ ಕಥಂ ಪರಿಹರಣೀಯಃ? ಇತಿ ಭಾವಃ । ನನು ಧರ್ಮಾಭಾವಬೋಧನೇನಾಸ್ಮಾಕಮಯಮುಪಕಾರೀತಿ ಬುದ್ಧ್ಯಾ ಧನಂ ಲೋಕಾ ದದ್ಯುರಿತ್ಯತ ಆಹ – **ತಸ್ಯೇತಿ** ॥ ತಸ್ಯ ಗುರುನಿಷ್ಠಧನಾಭಾವಾಂಕುಶಸ್ಯ। ಭವೇದೇತದ್ ಯದ್ಯುಪಕರ್ತುರನುಪಕಾರೇಽಧರ್ಮ ಉಪಕಾರೇ ಧರ್ಮ ಇತಿ ಲೋಕಾನಾಂ ಬುದ್ಧಿಃ ಸ್ಯಾತ್ । ಸಾ ಚ ತ್ವಯೈವ ತ್ಯಾಜಿತಾ । ಅತೋ ಗುರೋರ್ಧನಾಭಾವಾಂಕುಶಚ್ಛೇದೇ ನಾಯಮುಪಾಯಃ । ಕಿಂಚ ಸತಿ ಧನೇ ಶಿಷ್ಯಾ ಧನಂ ದದ್ಯುಃ । ತೇಷಾಮೇವ ಧನಾಭಾವಾಂಕುಶಸ್ಯ ಛೇದಾಯ ಕ ಉಪಾಯಃ । ನ ತಾವತ್ಪ್ರಾಚೀನಂ ಪುಣ್ಯಂ ನಾಪ್ಯಾಧುನಿಕಮುತ್ಕಟಪುಣ್ಯಮ್। ಉಭಯೋರಪಿ ಧರ್ಮಾಭಾವವಾದಿನಾ ತ್ವಯೈವ ತ್ಯಾಜಿತತ್ವಾದಿತ್ಯಾಹ – **ತಸ್ಯೇತಿ** ॥ ಶಿಷ್ಯನಿಷ್ಠಧನಾಭಾವಸ್ಯೇತ್ಯರ್ಥಃ ॥ ೨೧೨ ॥

**ವಿವರಣೆ–** ಅಡೆತಡೆಯಿಲ್ಲದ ಕಾಮೋಪಭೋಗವೆಂಬ ಫಲಕ್ಕಾಗಿ ಮನುಷ್ಯನು ಮಾಡುವ ಪ್ರಯತ್ನವೇ ವ್ಯರ್ಥ ಎಂದು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ಈ ಶ್ಲೋಕದಲ್ಲಿ ಅದನ್ನೇ ವಿವರಿಸುತ್ತಿದ್ದಾರೆ ಮೂಲಕಾರರು : ಆ ನಿರಂಕುಶಕಾಮೋಪಭೋಗವೆಂಬ ಫಲವು ದೊರೆಯಬೇಕಾಗಿರುವುದು ಚಾರ್ವಾಕ ಸಿದ್ಧಾಂತವನ್ನು ಬೋಧಿಸುವ ಗುರುವಿಗೂ ಅಥವಾ ಬಡವರಿಗೋ ಅಥವಾ ಚಾರ್ವಾಕ ಸಿದ್ಧಾಂತವನ್ನು ಅಧ್ಯಯನ ಮಾಡುವ ಶಿಷ್ಯರಿಗೋ ಅಥವಾ ಶ್ರೀಮಂತರಿಗೋ ಎಂದು

ಪ್ರತಿವಾದಿಗಳಾದ ಚಾರ್ವಾಕರನ್ನು ಪ್ರಶ್ನಿಸಬೇಕು. ಗುರುಗಳಿಗೆ ಮತ್ತು ಬಡವರಿಗೆ ಎಂಬ ಮೊದಲ ಎರಡು ಪಕ್ಷಗಳು ಸರಿಯಲ್ಲ. ಏಕೆಂದರೆ ಆನೆಯನ್ನು ನಿಯಂತ್ರಿಸಲು ಅಂಕುಶವಿರುವಂತೆ ಮಾಡಬಾರದ್ದನ್ನು ಮಾಡುವ ಮನುಷ್ಯರನ್ನು ನಿಯಂತ್ರಿಸಲು ಎರಡು ಅಂಕುಶಗಳಿವೆ. ಒಂದು ವೇದಾದಿಶಾಸ್ತ್ರವಿಹಿತವಾದ ಧರ್ಮ, ಎರಡನೆಯದು ಧನಾದಿ ಸಂಪನ್ಮೂಲಗಳ ಕೊರತೆ. ವೇದಾದಿ ಶಾಸ್ತ್ರಗಳ ಪ್ರಾಮಾಣ್ಯವನ್ನು ನಿರಾಕರಿಸುವ ನೀವು ಮೊದಲ ಅಂಕುಶವನ್ನು ಭಗ್ನಗೊಳಿಸುವ ಪ್ರಯತ್ನವನ್ನಾದರೂ ಮಾಡಿದ್ದೀರಿ. ಆದರೆ ಸಂಪನ್ಮೂಲಗಳ ಕೊರತೆಯೆಂಬ ಎರಡನೆಯ ಅಂಕುಶವನ್ನೂ ಭಗ್ನಗೊಳಿಸಲು ನೀವು ಸಮರ್ಥರಾಗಿಲ್ಲ. ಧನದ ಸಂಪನ್ಮೂಲಗಳಿದ್ದರೆ ಮಾತ್ರ ನಿರಂಕುಶ ಕಾಮೋಪಭೋಗಸಾಧ್ಯವಾಗಬಹುದು. ಸಂಪನ್ಮೂಲಗಳ ಕೊರತೆಯಿಂದ ಬಳಲುತ್ತಿರುವ ಚಾರ್ವಾಕ ಗುರುವಿಗೆ ಮತ್ತು ಬಡವರಿಗೆ ಶಾಸ್ತ್ರದಿಂದ ಏನು ಉಪಯೋಗವಾದೀತು?

ಇದಕ್ಕೆ ಪ್ರತಿವಾದಿಗಳಾದ ಚಾರ್ವಾಕರು ಹೀಗೆ ಪ್ರಶ್ನಿಸಬಹುದು. ಗುರುವಿನ ಬೋಧನವನ್ನು ಪಡೆದುಕೊಂಡು ಜಗತ್ತಿನ ಜನರು ಮತ್ತು ಶಿಷ್ಯರು ಇವರು ನಮಗೆ ಉಪಕಾರ ಮಾಡಿದ್ದಾರೆಂದು ಧನಾದಿಗಳನ್ನು ಕೊಡುತ್ತಾರಲ್ಲವೇ? ಇದರಿಂದ ಗುರುಗಳಿಗೆ ಉಪಯೋಗವಿದೆಯಲ್ಲವೇ?

ಅದಕ್ಕೆ ಹೀಗೆ ಉತ್ತರಿಸಬೇಕು :- ಉಪಕಾರ ಮಾಡಿದವರಿಗೆ ಪ್ರತಿಯಾಗಿ ನಾವೂ ಉಪಕಾರ ಮಾಡಿದರೆ ಅದು ಧರ್ಮ ಇಲ್ಲದಿದ್ದರೆ ಅದು ಅಧರ್ಮವಾದೀತೆಂಬ ಬುದ್ಧಿ ಜನರಿಗೆ ಇದ್ದರೆ ನೀವು ಹೇಳಿದ್ದೆಲ್ಲ ಸರಿಯಾಗುತ್ತಿತ್ತು. ಆದರೆ ವೇದಾದಿಗಳನ್ನೊಪ್ಪದೇ ಧರ್ಮಾಧರ್ಮ ವಿವೇಕವನ್ನು ನೀವೇ ನಾಶಪಡಿಸಿದ್ದೀರಿ. ಅದಲ್ಲದೇ ಜನರು ಮತ್ತು ಶಿಷ್ಯರು ತಮ್ಮ ಬಳಿ ಧನಾದಿಗಳಿದ್ದರೆ ಅವನ್ನು ಗುರುವಿಗೆ ಕೊಟ್ಟಾರು. ಅವರಿಗೆ ಆ ಸಂಪನ್ಮೂಲಗಳು ಹಿಂದಿನ ಜನ್ಮದಲ್ಲಿ ಅಥವಾ ಇದೇ ಜನ್ಮದಲ್ಲಿ ಮಾಡಿದ ಪುಣ್ಯಗಳಿಂದ ಬರಬೇಕಷ್ಟೇ? ಅತೀಂದ್ರಿಯ ವಸ್ತುಗಳನ್ನು ಒಪ್ಪದ ನಿಮ್ಮ ಮತದಲ್ಲಿ ಇದಾದರೂ ಹೇಗೆ ಸಾಧ್ಯವಾದೀತು? ತಮಗೆ ಶಾಸ್ತ್ರಬೋಧನ ಮಾಡಿದ ಗುರುವಿಗೆ ಧನಾದಿಗಳನ್ನು ಕೊಡುವವರು ತಮಗೇನೂ ಸಂಬಂಧವಿಲ್ಲದ ಬಡವರಿಗೆ ಕನಿಕರದಿಂದ ಧನಾದಿಗಳನ್ನು ಏಕೆ ಕೊಡುತ್ತಾರೆ? ಆದ್ದರಿಂದ ನಿರಂಕುಶ ಕಾಮೋಪಭೋಗವು ದೊರೆಯಬೇಕಿರುವುದು ಚಾರ್ವಾಕ ಗುರುವಿಗೆ ಅಥವಾ ಬಡವರಿಗೆ ಎಂಬ ಮೊದಲ ಎರಡು ಪಕ್ಷಗಳನ್ನು ನಿರಾಕರಿಸಿದಂತಾಯಿತು.

**ಧನಿನಾಂ ಪರಿಚರ್ಯಾ ವಾ ಚೌರ್ಯಂ ವಾ ಕಾರ್ಯತೇ ತ್ವಯಾ ॥೨೧೩॥**

**ತಚ್ಚ ಬಂಧಾದಿನಿರ್ಬಂಧೈರ್ಮೃತಿಭೀತಿಗತಾಗತೈಃ ।**
**ತೇಷಾಂ ದುಃಖಾರ್ಣವೇ ಮಂಕ್ತುಮಭೂದ್ರಂತುಂ ನ ಕರ್ಹಿಚಿತ್ ॥೨೧೪॥**

**ಅತಸ್ತೇನೈವ ಮಜ್ಜೇರನ್ ಭವಚ್ಛಾಸ್ತ್ರಮಹೋದಧೌ** **॥ ೨೧೫ ॥**

**ಅರ್ಥ–** ಧನಿನಾಂ = ಶ್ರೀಮಂತರ, ಪರಿಚರ್ಯಾ = ಸೇವೆಯು, ವಾ = ಅಥವಾ, ಚೌರ್ಯಂ ವಾ = ಕಳ್ಳತನವಾಗಲಿ, ತ್ವಯಾ = ನಿನ್ನಿಂದ, ಕಾರ್ಯತೇ = ಮಾಡಿಸಲ್ಪಡಬೇಕು.

ತಚ್ಚ = ಆ ಪರಿಚರ್ಯಚೌರ್ಯಾದಿಯಾದರೂ, ಬಂಧಾದಿನಿರ್ಬಂಧೈಃ = ಬಂಧನಾದಿ ನಿರ್ಬಂಧಗಳಿಂದ (ನಿಗಡಬಂಧಕಾರಾಗೃಹವಾಸಾದಿಗಳಿಂದ), ಮೃತಿಭೀತಿಗತಾಗತೈಃ = ಮರಣಭಯ ಗಡಿಪಾರು ಮೊದಲಾದ ಮಹಾಭಯಗಳಿಂದ, ತೇಷಾಂ = ಶಿಷ್ಯರಿಗೆ, ದುಃಖಾರ್ಣವೇ = ದುಃಖಸಮುದ್ರದಲ್ಲಿ, ಮಂಕ್ತುಂ= ಮುಳುಗಲು, ಅಭೂತ್ = ಕಾರಣವಾಯಿತು, ಕರ್ಹಿಚಿತ್ = ಎಂದಿಗೂ, ರಂತುಂ = ಸುಖಪಡಲಿಕ್ಕೆ, ನ = ಕಾರಣವಾಗುವುದಿಲ್ಲ.

ಅತಃ = ನಿರಂಕುಶಕಾಮೋಪಭೋಗವೆಂಬ ಫಲವು ಸಿಗುವುದಿಲ್ಲವಾದ್ದರಿಂದ, ತೇ= ಶ್ರೋತೃಜನರು ಭವಚ್ಛಾಸ್ತ್ರಮಹೋದದೌ= ನಿಮ್ಮ ಶಾಸ್ತ್ರವೆಂಬ ಮಹಾಸಾಗರದಲ್ಲಿ, ನ ಏವ ಮುಚ್ಚೇರನ್= ಮುಳುಗಿ ಸ್ನಾನ ಮಾಡುವುದೇ ಇಲ್ಲ.

**ಅನುವಾದ–** **ನಿರಂಕುಶ ಕಾಮೋಪಭೋಗವೆಂಬ ಫಲವು ದೊರೆಯಬೇಕಾಗಿರುವುದು ಚಾರ್ವಾಕ ಶಾಸ್ತ್ರವನ್ನು ಶ್ರವಣ ಮಾಡುವ ಶಿಷ್ಯರಿಗೆ ಎಂಬ ಮೂರನೆಯ ಪಕ್ಷವೂ ಉಚಿತವಾಗಿಲ್ಲ. ಏಕೆಂದರೆ ಗುರುಗಳು ಶೋತೃಗಳನ್ನು ಕುರಿತು 'ಧನಕ್ಕಾಗಿ ಶ್ರೀಮಂತರ, ಸೇವೆಯನ್ನು ಮಾಡಿರಿ ಅಥವಾ ಕಳ್ಳತನ ವಂಚನೆಗಳನ್ನು ಮಾಡಿರಿ' ಎಂದು ಉಪದೇಶ ಮಾಡಬೇಕು; ಮತ್ತು ತಾನೂ ಹಾಗೆಯೇ ಮಾಡಬೇಕು. ಧನಾರ್ಜನಕ್ಕಾಗಿ ಸರ್ಕಾರಿ ಅಥವಾ ಶ್ರೀಮಂತರ ಖಾಸಗಿ ಸಂಸ್ಥೆಗಳಲ್ಲಿ ನೌಕರಿ ರೂಪದ ಸೇವೆ ಮಾಡಬೇಕೆಂಬ ಸಂಗತಿಯು ರಾಜ್ಯಶಾಸ್ತ್ರ ಅರ್ಥಶಾಸ್ತ್ರಗಳಿಂದಲೇ ತಿಳಿದುಬರುತ್ತದೆ. ಅದನ್ನು ತಿಳಿಸಲು ಚಾರ್ವಾಕ ಸಿದ್ಧಾಂತದ ಶ್ರವಣದ ಅಗತ್ಯವಿದೆಯೇ?**

**ಅದಲ್ಲದೆ, ನಿಮ್ಮ ಬೋಧನ ಕೇಳಿ ನಾಸ್ತಿಕರಾಗಿರುವ ಜನರು ತಮಗೆ ದೊರೆಯುವ ವೇತನಕ್ಕೆ ಪ್ರತಿಯಾಗಿ ಪ್ರಾಮಾಣಿಕವಾಗಿ ದುಡಿಯುವರೇ? ಹಾಗೆ ದುಡಿಯದಿದ್ದರೆ ನೌಕರಿದಾತರು ಈ ನೌಕರಿಗೆ ಸಂಬಳ, ಬಡ್ತಿಗಳ ಕಡಿತ ಮತ್ತು ಭ್ರಷ್ಟಾಚಾರದಂತಹ ಅಪರಾಧಗಳಿಗೆ ಜೈಲು ಶಿಕ್ಷೆ ಇತ್ಯಾದಿಗಳನ್ನು ವಿಧಿಸಲಾರರೇ?**

**ಇನ್ನು ದುಡ್ಡಿಗಾಗಿ ಕಳ್ಳತನ, ದರೋಡೆ ಕೊಲೆಗಳನ್ನೇ ಮಾಡತೊಡಗಿದರೆ ಜೈಲು ಶಿಕ್ಷೆ, ಗಡಿಪಾರು, ಮರಣದಂಡನಗಳು ನಿಶ್ಚಿತವಾಗಿ ಆಯಾ ಅಪರಾಧಿಗಳಿಗೆ ಸಿಗುತ್ತವೆ. ಹೀಗೆ ಗುರುಗಳಿಗೂ ಶಿಷ್ಯರಿಗೂ ಈ ಶಾಸ್ತ್ರದಿಂದ ಮಹಾದುಃಖವೇ**

ಆದೀತು ಹೊರತು ಸುಖವಲ್ಲ. ಹೀಗೆ ಯಾವ ಸುಖಪ್ರಾಪ್ತಿರೂಪಫಲವೂ ಸಿಗುವುದಿಲ್ಲವಾದ್ದರಿಂದ ಶ್ರೋತೃಗಳು ನಿಮ್ಮ ಶಾಸ್ತ್ರವನ್ನು ಶ್ರವಣ ಮಾಡಬಯಸುವುದಿಲ್ಲ.

**ಭಾವವಿಲಾಸಿನೀ**–ತಸ್ಮಾದ್ಗುರೋಃ ಶಿಷ್ಯಸ್ಯ ಚ ಧನಾಭಾವಾಂಕುಶಚ್ಛೇದಾಯಾಯಮೇ-ವೋಪಾಯ ಇತ್ಯಾಹ – **ಧನಿನಾಮಿತಿ** ॥ ಧನಾರ್ಥಂ ಧನಿನಾಂ ಪರಿಚರ್ಯಾ ವಾ ಕಾರ್ಯತೇ ತ್ವಯಾ ಚ ಕ್ರಿಯತೇ ॥ ೨೧೩ ॥

ತತಃ ಕಿಮಿತ್ಯತ ಆಹ – **ತಚ್ಚೇತಿ** ॥ ತಚ್ಚ ಧನಿಪರಿಚರ್ಯಾದಿಕಂ ಬಂಧಾದಿನಿರ್ಬಂಧೈಃ ನಿಗಲ-ಬಂಧಾದಿನಿರ್ಬಂಧೈಃ ಅತಿಚೌರ್ಯೇ ಅತ್ಯಪರಾಧೇ ಚ ಮೃತ್ಯಾ ಅನಿಷ್ಟಂ ಭವಿಷ್ಯತೀತಿ ಭೀತ್ಯಾ ಅತಿದೂರಗತಾಗತೈಶ್ಚ ತೇಷಾಂ ಲೋಕಾನಾಂ ತವ ಚ ದುಃಖಾರ್ಣವೇ ಮಂಕ್ತುಂ ಮಜ್ಜನಂ ಕರ್ತುಮಭೂತ್ ಸ್ಯಾತ್ । ಕರ್ಹಿಚಿತ್ ಕದಾಪಿ ರಂತುಂ ನಾಭೂದಿತಿ ಸಂಬಂಧಃ ॥ ೨೧೪ ॥

ಅತಸ್ತ್ವದುಕ್ತನಿರಂಕುಶಕಾಮೋಪಭೋಗಾಖ್ಯಫಲಾಸಂಭವಾತ್ತೇ ಲೋಕಾಃ ಭವಚ್ಛಾಸ್ತ್ರ-ಮಹೋದಧೌ ನೈವ ಮಜ್ಜೇರನ್ । ನ ಶ್ಲಾಘ್ಯಂ ಕುರ್ಯುರಿತಿ ಭಾವಃ ॥ ೨೧೫ ॥

**ಧನಿನಸ್ತು ಮದೇನಾಂಧಾಃ ಪ್ರವರ್ತಂತೇ ನ ತೇ ಮತೇ ।**
**ತೇಷಾಂ ಚ ನ ಫಲಾಯಾಲಂ ತವ ಶಾಸ್ತ್ರಪ್ರಚೋದನಾ ॥ ೨೧೬ ॥**

**ಅರ್ಥ**– ಧನಿನಃ ತು= ಶ್ರೀಮಂತರಾದರೂ, ಮದೇನ = ಧನಮದದಿಂದ, ಅಂಧಾಃ = ಕುರುಡರಾದ, ತೇ ಮತೇ = ನಿನ್ನ ಮತದಲ್ಲಿ, ನ ಪ್ರವರ್ತಂತೇ = ಅನುಸರಣೆಯುಳ್ಳವರಾಗುವುದಿಲ್ಲ, ತವ= ನಿನ್ನ ಶಾಸ್ತ್ರಪ್ರಚೋದನಾ = ಶಾಸ್ತ್ರತತ್ವಗಳು, ತೇಷಾಂ ಚ= ಆ ಧನಿಕರ, ಫಲಾಯ = ಫಲಕ್ಕಾಗಿ (ಫಲ ಕೊಡಲಿಕ್ಕೆ) ನ ಅಲಂ ಚ = ಸಮರ್ಥವಾದುದು ಅಲ್ಲವೇ ಅಲ್ಲ.

**ಅನುವಾದ**– ನಿರಂಕುಶಕಾಮೋಪಭೋಗವೆಂಬ ಫಲವು ದೊರೆಯುವುದು ಶ್ರೀಮಂತರಿಗೆ ಎಂಬ ನಾಲ್ಕನೆಯ ಪಕ್ಷವೂ ಯೋಗ್ಯವಲ್ಲ. ಏಕೆಂದರೆ ಧನಮದದಿಂದ ಕುರುಡರಾದ ಅವರು ನಿಮ್ಮ ಶಾಸ್ತ್ರದ ಉಪದೇಶವನ್ನು ಕೇಳಲು ಪ್ರಯತ್ನವನ್ನೇ ಮಾಡುವುದಿಲ್ಲ. ಆದ್ದರಿಂದ ನಿಮ್ಮ ಶಾಸ್ತ್ರವು ಅವರಿಗೆ ಫಲವನ್ನು ಕೊಡಲೂ ಸಮರ್ಥವಾಗಲಾರದು.

**ಭಾವವಿಲಾಸಿನೀ**–ನನು ಧನಿನಾಂ ಭೋಗಾಯ ಮದ್ಬೋಧನಂ ಸ್ಯಾದಿತ್ಯತ ಆಹ – **ಧನಿನ ಇತಿ** ॥ ಮದೇನ ಧನಮದೇನಾಂಧಾಃ ತೇ ತವ ಮತೇ ಶಾಸ್ತ್ರೇ ನ ಪ್ರವರ್ತಂತೇ । ಪ್ರವರ್ತತಾಂ ವಾ ಯಥಾ ಕಥಂಚಿತ್ । ತೇಷಾಂ ಪ್ರವರ್ತಮಾನಾನಾಂ ಧನಿನಾಂ ಚ ತವ ಶಾಸ್ತ್ರಸ್ಯ ಪ್ರಚೋದನಾ ಫಲಾಯಾಭಿಮತಫಲಾಯ ನಾಲಮಿತಿ ಸಂಬಂಧಃ ॥ ೨೧೬ ॥

**ಬಹುಭುಕ್ತ್ಯಾವಜೀರ್ತಿಃ ಸ್ಯಾದ್ಬಹುಪಾನೇ ಮಹೋದರಮ್ ।**
**ಬಹುಸ್ತ್ರೀಭೋಗತೋ ರೋಗಾ ಯದ್ದೃಶ್ಯಂತೇ ಪದೇಪದೇ ॥ ೨೧೭ ॥**

**ಅರ್ಥ–** ಯತ್= ಯಾವ ಕಾರಣದಿಂದ, ಬಹುಭುಕ್ತ್ಯಾ = ಬಹುವಾಗಿ ತಿನ್ನುವುದರಿಂದ, ಅಜೀರ್ತಿಃ = ಅಜೀರ್ಣವು, ಸ್ಯಾತ್ = ಉಂಟಾಗುತ್ತದೆ, ಬಹುಪಾನೇ = ಅತಿಪಾನದಿಂದ, ಮಹೋದರಂ = ಮಹೋದರ ರೋಗವೂ, ಬಹುಸ್ತ್ರೀಭೋಗತಃ = ಬಹುವಾರ ಬಹುಸ್ತ್ರೀ ಭೋಗದಿಂದ, ಪದೇ ಪದೇ = ಮತ್ತೆ ಮತ್ತೆ, ರೋಗಾಃ = ರೋಗಗಳು, ದೃಶ್ಯಂತೇ = ಕಾಣಿಸುತ್ತವೋ (ಆ ಕಾರಣದಿಂದ ನಿನ್ನ ಮತವು ಫಲವನ್ನು ಕೊಡುವುದಿಲ್ಲ)

**ಅನುವಾದ– ನಿಮ್ಮ ಚಾರ್ವಾಕ ಸಿದ್ಧಾಂತದ ಉಪದೇಶವನ್ನು ಪಡೆದುಕೊಂಡವರು ಅತಿಯಾದ ತಿನ್ನುವಿಕೆಯಿಂದ ಉಂಟಾಗುವ ಅಜೀರ್ಣರೋಗದಿಂದಲೂ, ಅತಿಯಾದ ಮದ್ಯಾದಿಪಾನಗಳಿಂದ ಮಹೋದರವೆಂಬ ರೋಗದಿಂದಲೂ ಅತಿಸ್ತ್ರೀಭೋಗದಿಂದ ಉಂಟಾಗುವ ಲೈಂಗಿಕವ್ಯಾಧಿಗಳಿಂದಲೂ ಪುನಃ ಪುನಃ ಪೀಡಿತರಾಗುವ ಸಾಧ್ಯತೆ ಇರುವುದರಿಂದ ನಿಮ್ಮ ಶಾಸ್ತ್ರದ ಶ್ರವಣದಿಂದ ಆಗುವ ಪ್ರಯೋಜನವೇನೂ ಇಲ್ಲ.**

**ಭಾವವಿಲಾಸಿನೀ–**ತದುಪಪಾದಯತಿ – **ಬಹುಭುಕ್ತ್ಯೇತಿ** ॥ ತ್ವಯಾ ಧರ್ಮಾಭಾವೇ ಬೋಧಿತೇ ದಶಪಂಚವಾರಂ ಯೋಗ್ಯಾಯೋಗ್ಯಭಕ್ಷ್ಯಭೋಜ್ಯಾದೀನಾಂ ಭೋಜನಂ ಕುರ್ಯುಃ । ತಥಾಚ ಬಹುಭುಕ್ತ್ಯಾಽಜೀರ್ತಿಃಸ್ಯಾತ್ । ತಥಾ ಬಹುಪಾನೇ ಮಹೋದರಾಖ್ಯವ್ಯಾಧಿಃ ಸ್ಯಾತ್ । ತಥಾ ಬಹುಸ್ತ್ರೀಭೋಗತೋ ರೋಗಾ ಶಿಶ್ನೋಪದ್ರವಾದ್ಯಾಃ । ಯದ್ಯಸ್ಮಾತ್ಪದೇಪದೇ ಕ್ಷಣೇಕ್ಷಣೇ ದೃಶ್ಯತೇ ಅತಸ್ತ್ವಚ್ಛಾಸ್ತ್ರಚೋದನಾ ಫಲಾಯ ನಾಲಮಿತಿ ಪೂರ್ವೇಣಾನ್ವಯಃ ॥ ೨೧೭ ॥

**ಕಿಂ ನ ಭಾರಾಯ ಮಹತೇ ಬಹುದಾರಪರಿಗ್ರಹಃ ।**
**ಪರಸ್ಪರವಿರೋಧಾದ್ಯೈಃ ಪತ್ಯುರ್ಮೃತ್ಯುಪ್ರದಾ ಹಿ ತೇ ॥ ೨೧೮ ॥**

**ಅರ್ಥ–** ಬಹುದಾರಪರಿಗ್ರಹಃ = ಬಹು ಪತ್ನಿಯರನ್ನು ಸ್ವೀಕರಿಸುವುದು, ಮಹತೇ ಭಾರಾಯ = (ಪೋಷಣಾದಿಗಳಿಂದ ಧನ, ಬಲಗಳ ಹಾನಿಯಿಂದ) ಮಹಾಭಾರಕ್ಕಾಗಿ, ನಕಿಂ = ಅಲ್ಲವೇನು? ತೇ = ಆ ನಿನ್ನ ಬಹುಪತ್ನಿಯರು, ಪರಸ್ಪರವಿರೋಧಾದ್ಯೈಃ = ಅನ್ಯೋನ್ಯ ದ್ವೇಷಾದಿಗಳಿಂದ, ಪತ್ಯುಃ = ಪತಿಯಾದ ನಿನಗೆ, ಮೃತ್ಯುಪ್ರದಾ ಹಿ = ಮೃತ್ಯುವನ್ನೇ ಉಂಟು ಮಾಡುವರು.

**ಅನುವಾದ– ನಿಮ್ಮ ಉಪದೇಶವನ್ನು ಕೇಳಿ ಅತಿಯಾದ ರತಿಸುಖವನ್ನು ಅಪೇಕ್ಷಿಸಿ ಅನೇಕ ಮದುವೆಗಳನ್ನು ಮಾಡಿಕೊಂಡರೆ ಆ ಎಲ್ಲ ಪತ್ನಿಯರ ಪೋಷಣಕ್ಕಾಗಿ ಹಣ, ಸಮಯ ಮತ್ತು ದೈಹಿಕ ಶಕ್ತಿಗಳ ವ್ಯಯದಿಂದ ಗಂಡನಿಗೆ ಬಹಳ**

ಶ್ರಮವಾಗುವುದಿಲ್ಲವೇ? ಅವರೆಲ್ಲರ ನಡುವಣ ಮಾತ್ಸರ್ಯ, ದ್ವೇಷ ಇತ್ಯಾದಿಗಳು ಗಂಡನಾದವನಿಗೆ ಪ್ರಾಣಾಂತಕರ ವೇದನೆಯನ್ನು ಕೊಡುವುದಿಲ್ಲವೇ?

**ಭಾವವಿಲಾಸಿನೀ**—ಬಹುಸ್ತ್ರೀಸಂಗ್ರಹಲಭ್ಯಂ ದುಃಖಾಂತರಂ ಚಾಹ – ಕಿಂ ನೇತಿ ॥ ಮಹತೇ ಭಾರಾಯ ಪೋಷಣಾದಿನಾ ಧನಬಲಹಾನಿಲಕ್ಷಣಮಹಾಭಾರಾಯೇತ್ಯರ್ಥಃ । ತೇ ಬಹುದಾರಾಃ ॥ ೨೧೮ ॥

**ಪರಸ್ತ್ರೀಭೋಗತಃ ಕಿಂ ನ ಶಿರಶ್ಛೇದಾದಿಕಂ ಭಯಮ್ ॥ ೨೧೯ ॥**

**ಅರ್ಥ**— ಪರಸ್ತ್ರೀ ಭೋಗತಃ = ಪರ ಸ್ತ್ರೀ ಭೋಗದಿಂದ, ಶಿರಶ್ಛೇದಾದಿಕಂ ಭಯಂ = ಶಿರಶ್ಛೇದಾದಿ ಭಯವು, ನ ಕಿಂ = ಇಲ್ಲವೇನು?

**ಅನುವಾದ**— ನಿಮ್ಮ ಉಪದೇಶವನ್ನು ಕೇಳಿ ಧರ್ಮಾಧರ್ಮವಿವೇಕವನ್ನು ಕಳೆದುಕೊಂಡವನು ಪರಸ್ತ್ರೀಯರ ಸಂಗಕ್ಕೂ ಭಯಪಡುವುದಿಲ್ಲ. ಆದರೆ ಆ ಸ್ತ್ರೀಯ ಕಡೆಯ ಜನರು ಇವನ ತಲೆ ತೆಗೆಯದೇ ಬಿಡುವರೇನು? ಆ ಭಯ ಇವನಿಗಿಲ್ಲವೇನು?

**ಭಾವವಿಲಾಸಿನೀ**—ಪಾಪಾಭಾವಬೋಧನೇ ಪರಸ್ತ್ರೀಭೋಗೋಽಪ್ಯವರ್ಜನೀಯ ಏವ । ತತಃ ಶಿರಶ್ಛೇದಾದಿಕಂ ಭಯಂ ನ ಕಿಮಿತಿ ಸಂಬಂಧಃ ॥ ೨೧೯ ॥

**ದುಃಖೋಜ್ಝಿತಂ ಸುಖಂ ಪ್ರಾರ್ಥ್ಯಂ ನ ತು ದುಃಖಾನ್ವಿತಂ ಸುಖಮ್ ।**
**ದುಃಖೋದರ್ಕಸುಖೇಽತ್ಯಲ್ಪೇ ಕೋ ನೂನ್ಮತ್ತಃ ಪ್ರವರ್ತತೇ ॥ ೨೨೦ ॥**

**ಅರ್ಥ**— ದುಃಖೋಜ್ಝಿತಂ = ದುಃಖರಹಿತವಾದ, ಸುಖಂ = ಸುಖವು, ಪ್ರಾರ್ಥ್ಯಂ = ಅಪೇಕ್ಷಿಸಲ್ಪಡಬೇಕಷ್ಟೆ, ದುಃಖಾನ್ವಿತಂ = ದುಃಖದಿಂದ ಕೂಡದ, ಸುಖಂ = ಸುಖವು, ನ ತು = ಅಪೇಕ್ಷಿಸಲ್ಪಡಬಾರದು, ಅತ್ಯಲ್ಪೇ = ಅತ್ಯಂತ ಅಲ್ಪವಾದ, ದುಃಖೋದರ್ಕ ಸುಖೇ = ದುಃಖಪ್ರಚುರವಾದ ಸುಖದಲ್ಲಿ, ಕಃ ನು ಉನ್ಮತ್ತಃ = ಯಾವ ಬುದ್ಧಿಶೂನ್ಯನು ತಾನೆ, ಪ್ರವರ್ತತೇ = ಪ್ರವರ್ತಿಸುತ್ತಾನೆ?

**ಅನುವಾದ**— ಮನುಷ್ಯನು ದುಃಖದ ಸ್ಪರ್ಶವಿಲ್ಲದ ಸುಖವನ್ನೇ ಬಯಸಿ ಅದಕ್ಕಾಗಿ ಪ್ರಯತ್ನಿಸಬೇಕೇ ಹೊರತು ದುಃಖಮಿಶ್ರವಾದ ಸುಖಕ್ಕಾಗಿ ಅಲ್ಲ. ತತ್ಕಾಲದಲ್ಲಿ ಸ್ವಲ್ಪ ಸುಖಕೊಟ್ಟು ಕಾಲಾಂತರದಲ್ಲಿ ಮಹಾದುಃಖವನ್ನು ಕೊಡುವ ಕಾರ್ಯಕ್ಕೆ ಕೈ ಹಾಕುವ ಮೂರ್ಖ ಯಾರವನು?

**ಭಾವವಿಲಾಸಿನೀ**—ನನು ದುಃಖಸಂಕುಲಮಪಿ ಕಿಂಚಿದ್ವಾ ಸುಖಂ ಮಚ್ಛಾಸ್ತ್ರಾದ್ಭವತೀತ್ಯತ ಆಹ – **ದುಃಖೇತಿ** ॥ ದುಃಖೋಜ್ಝಿತಂ ದುಃಖರಹಿತಮ್ । ದುಃಖೋದರ್ಕಸುಖೇ (ದುಃಖೋತ್ತರಫಲಕೇ) ದುಃಖಬಹುಲಸುಖೇ ॥ ೨೨೦ ॥

ತಸ್ಮಾನ್ಮಹಾನರ್ಥಸಾರ್ಥಸಂಕುಲಾಃ ಸುಖವಿಪ್ರುಷಃ ।
ನ ಪ್ರೇಕ್ಷಾವತ್ಪ್ರವೃತ್ತ್ಯೈಸ್ಯುರ್ನಿವೃತ್ತ್ಯೈಸ್ಯುಃ ಪರಂ ವಿದಾಮ್ ॥ ೨೨೧ ॥

**ಅರ್ಥ–** ತಸ್ಮಾತ್ = ಚಾರ್ವಾಕಮತಾನುಸರಣೆಯಿಂದ ಫಲವು ಹೀಗಿರುವುದರಿಂದ ಮಹಾನರ್ಥಸಾರ್ಥಸಂಕುಲಾಃ = ಪೂರ್ವೋಕ್ತ ಮಹಾನರ್ಥಗಳ ಸಮೂಹಗಳಿಂದ ಕೂಡಿದ, ಸುಖವಿಪ್ರುಷಃ = ಸುಖತುಂತುರುಗಳು, ಪ್ರೇಕ್ಷಾವತ್ಪ್ರವೃತ್ತ್ಯೈ= ವಿವೇಕಿಗಳ ಪ್ರವೃತ್ತಿಗೆ (ಸ್ವೀಕಾರಕ್ಕೆ), ನ ಸ್ಯುಃ = ಕಾರಣವಾಗುವುದಿಲ್ಲ, ಪರಂ = ಮತ್ತೇನೆಂದರೆ, ವಿದಾಂ = ಜ್ಞಾನಿಗಳ, ನಿವೃತ್ತ್ಯೈ = ತ್ಯಾಗಕ್ಕೆ, ಸ್ಯುಃ = ಕಾರಣವಾಗುತ್ತದೆ.

**ಅನುವಾದ–** ಆದ್ದರಿಂದ ಅನೇಕ ರೀತಿಯ ದುಷ್ಪರಿಣಾಮಗಳಿರುವುದರಿಂದ ಕೇವಲ ತುಂತುರು ಹನಿಗಳಂತಿರುವ ಇಂತಹ ಸುಖಗಳನ್ನು ಪಡೆಯಲು ಯಾವ ವಿವೇಕಿಯೂ ಪ್ರವೃತ್ತಿ ಮಾಡುವುದಿಲ್ಲ ಹೊರತಾಗಿ ಅವುಗಳಿಂದ ದೂರವೇ ಇರುತ್ತಾನೆ.

**ಭಾವವಿಲಾಸಿನೀ–**ಮಹಾನರ್ಥಾಃ ಪೂರ್ವೋಕ್ತಾಃ ತೇಷಾಂ ಸಾರ್ಥಾಃ ಸಮೂಹಾಃ ತೈಸ್ಸಂಕುಲಾಃ ಸುಖವಿಪ್ರುಷಃ ಪ್ರೇಕ್ಷಾವತ್ಪ್ರವೃತ್ತ್ಯೈ ನ ಸ್ಯುಃ । ತದುದ್ದಿಶ್ಯ ಪ್ರೇಕ್ಷಾವತೋ ನ ಪ್ರವರ್ತತ ಇತಿ ಯಾವತ್ । ವಿದಾಂ ಜ್ಞಾನಿನಾಂ ಪರಂ ನಿವೃತ್ತ್ಯೈ ಸ್ಯುಃ ॥ ೨೨೧ ॥

ಅಜ್ಞಾಸ್ತು ರಾಗತೋ ಭೋಗೇ ಪ್ರವೃತ್ತಾಃ ಪೂರ್ವಮೇವ ಹಿ ।
ನ ತೇ ಶಾಸ್ತ್ರಮಪೇಕ್ಷಂತೇ ನಾಪಿ ಧರ್ಮಾಂಕುಶಾದ್ಭಯಮ್ ।
ರಾಗೋದ್ರೇಕಾಖ್ಯದುಷ್ಪ್ರೇಕ್ಷರೂಕ್ಷಹರ್ಯಕ್ಷರಕ್ಷಿಣಾಮ್ ॥ ೨೨೨ ॥

**ಅರ್ಥ–** ಅಜ್ಞಾಃ ತು= ಅಜ್ಞಜನರಾದರೂ ಪೂರ್ವಂ ಏವ= ಚಾರ್ವಾಕಶಾಸ್ತ್ರೋಪದೇಶದ ಶ್ರವಣಕ್ಕಿಂತ ಮುಂಚೆಯೇ ರಾಗತಃ= ವಿಷಯಾಭಿಲಾಷೆಯಿಂದ, ಭೋಗೇ= ವಿಷಯಗಳನ್ನು ಅನುಭವಿಸುವ ಕ್ರಿಯೆಯಲ್ಲಿ ಪ್ರವೃತ್ತಾಃ ಹಿ= ಪ್ರವೃತ್ತರಾಗಿದ್ದಾರೆ. ತೇ= ಅವರು, ತೇ= ನಿನ್ನ, ಶಾಸ್ತ್ರಂ= ಶಾಸ್ತ್ರವನ್ನು, ನ ಅಪೇಕ್ಷಂತೇ= ಶ್ರವಣ ಮೂಡಬಯಸುವುದಿಲ್ಲ. ರಾಗೋದ್ರೇಕಾಖ್ಯ= ವಿಷಯಾಭಿಲಾಷೆಯ ಹೆಚ್ಚಳವೆಂಬ ದುಷ್ಪ್ರೇಕ್ಷ= ನೋಡಲು ಅಸಾಧ್ಯವಾದ ರೂಕ್ಷ= ಉಗ್ರವಾದ ಹರ್ಯಕ್ಷ= ಸಿಂಹವೇ, ರಕ್ಷಿಣಾಂ= ರಕ್ಷಕನಾಗಿವುಳ್ಳ, ತೇಷಾಂ= ಆ ಅಜ್ಞಾನಿಗಳಿಗೆ, ಧರ್ಮಾಂಕುಶಾತ್ ಅಪಿ= ಧರ್ಮವೆಂಬ ಅಂಕುಶದಿಂದಲೂ, ನ ಭಯಂ= ಭಯವಿಲ್ಲ.

**ಅನುವಾದ–** ವಿವೇಕಿಗಳಾದವರು ನಮ್ಮ ಶಾಸ್ತ್ರವನ್ನೋದಿದ್ದರೂ ಅಜ್ಞಾನಿಗಳಿಗಾದರೂ ಇದರ ಅವಶ್ಯಕತೆಯಿದೆ ಎನ್ನುವುದೂ ಸರಿಯಲ್ಲ; ಏಕೆಂದರೆ ಆ ಅಜ್ಞಾನಿಗಳು ನಿಮ್ಮ ಉಪದೇಶವನ್ನು ಕೇಳುವುದಕ್ಕಿಂತ ಮುಂಚೆಯೇ ರಾಗವಶರಾಗಿ ಭೋಗದಲ್ಲಿ

ಪ್ರವೃತ್ತರಾಗಿದ್ದಾರೆ. ಹಾಗಾಗಿ ಅವರಿಗೂ ನಿಮ್ಮ ಶಾಸ್ತ್ರದ ಅವಶ್ಯಕತೆಯಿಲ್ಲ. ನೋಡಲು ಸಹ ಅಸಾಧ್ಯವಾದ ಭಯಂಕರವಾದ ವಿಷಯಾಸಕ್ತಿಯೆಂಬ ಸಿಂಹವನ್ನು. ತಮ್ಮೊಳಗೆ ಇಟ್ಟುಕೊಂಡವರಿಗೆ ಕರ್ತವ್ಯಾಕರ್ತವ್ಯಗಳನ್ನು ಬೋಧಿಸುವ ಧರ್ಮವೆಂಬ ಅಂಕುಶದ ಭಯವೇ ಇಲ್ಲ. ಹಾಗಾಗಿ ಆ ಧರ್ಮಾಂಕುಶದ ಭಯವನ್ನು ಪರಿಹರಿಸಲು ಯಾವ ಶಾಸ್ತ್ರದ ನೆರವೂ ಬೇಕಿಲ್ಲ.

**ಭಾವವಿಲಾಸಿನೀ–**ನನು ಪ್ರೇಕ್ಷಾವತಾಮನುಪಯೋಗಿತ್ವೇऽಪ್ಯಜ್ಞಜನೋಪಯೋಗಿತ್ವಾನ್ಮಚ್ಛಾಸ್ತ್ರಂ ಗ್ರಾಹ್ಯಮಿತ್ಯತ ಆಹ – **ಅಜ್ಞಾ ಇತಿ** ॥ ಪೂರ್ವಮೇವ ಶಾಸ್ತ್ರಪ್ರವೃತ್ತೇರಿತಿ ಶೇಷಃ । ತೇ ಅಜ್ಞಾಃ । 'ನಾಪಿ ಧರ್ಮಾದ್ಭಯಂ ತೇಷಾಮ್' ಇತ್ಯತ್ರ ಹೇತುಃ – **ರಾಗೇತಿ** ॥ ರಾಗೋದ್ರೇಕಾಖ್ಯಃ ದುಷ್ಪ್ರೇಕ್ಷ್ಯಶ್ಚ ರೂಕ್ಷಶ್ಚಾಸೌ ಹರ್ಯಕ್ಷಸ್ಸಿಂಹಸ್ತದ್ರಕ್ಷಿಣಾಮಿತ್ಯನೇನ ರಾಗೋದ್ರೇಕಾದೇವ ಧರ್ಮಾಂಕುಶಾದ್ಭಯಂ ನಾಸ್ತೀತಿ ಸೂಚಿತಮ್ ॥ ೨೨೨ ॥

**ಅತೋ ನಿಷ್ಫಲಮೇವಾಭೂಚ್ಛಾಸ್ತ್ರಂ ತೇ ಕ್ಲೀಬಶಸ್ತ್ರವತ್ ॥ ೨೨೩ ॥**

**ಅರ್ಥ–** ಅತಃ = ಪೂರ್ವೋಕ್ತ ರೀತಿಯಿಂದ, ತೇ = ನಿನ್ನ, ಶಾಸ್ತ್ರಂ = ಶಾಸ್ತ್ರವು, ಕ್ಲೀಬಶಸ್ತ್ರವತ್ = ನಪುಂಸಕನ ಕೈಯಲ್ಲಿರುವಂತೆ ಶಸ್ತ್ರದಂತೆ, ನಿಷ್ಫಲಂ ಏವ ಅಭೂತ್ = ಫಲರಹಿತವೇ ಆಯಿತು.

**ಅನುವಾದ–** ಹೇಡಿಯ ಕೈಯಲ್ಲಿರುವ ಆಯುಧದಿಂದ ಶತ್ರುವಿನ ಸಂಹಾರ, ನಂಬಿದವರ ರಕ್ಷಣ ಮೊದಲಾದ ಯಾವ ಪ್ರಯೋಜನಗಳೂ ನೆರವೇರುವುದಿಲ್ಲ; ಹೊರತಾಗಿ ಆತನ ಮೈ ಕೈ ನಡುಗಿ ಅಪಾಯವೇ ಆಗುತ್ತದೆ. ಅದರಂತೆ ನಿಮ್ಮ ಚಾರ್ವಾಕ ಶಾಸ್ತ್ರದಿಂದಲೂ ನಿಮಗಾಗಲೀ ಮತ್ತೊಬ್ಬರಿಗಾಗಲೀ ಯಾವ ಪ್ರಯೋಜನವೂ ಆಗದೇ ದೊಡ್ಡ ಅನರ್ಥವೇ ಆಗುತ್ತದೆ.

**ಭಾವವಿಲಾಸಿನೀ–**ಪ್ರಯೋಜನಾಭಾವಸಾಧನಮುಪಸಂಹರತಿ – **ಅತ ಇತಿ** ॥ ಅತಃ ಪೂರ್ವೋಕ್ತ-ಪ್ರಕಾರಾತ್ ಕ್ಲೀಬಶಸ್ತ್ರವನ್ನಪುಂಸಕಶಸ್ತ್ರವತ್ । ಯಥಾ ತಸ್ಮಾತ್ಪರಘಾತಾದಿಪ್ರಯೋಜನಂ ನಾಸ್ತಿ ಪ್ರತ್ಯುತ ಸ್ವಸ್ಯೈವ ಕರಕಂಪಾದಿನಾ ಶಸ್ತ್ರಸ್ಯ ಪತನೇ ಅನರ್ಥಶ್ಚಾಸ್ತಿ ತಥಾ ತ್ವಚ್ಛಾಸ್ತ್ರಾನ್ನ ಕಿಂಚಿತ್ಫಲಂ ಅನರ್ಥಸ್ತು ಮಹಾನಿತಿ ಭಾವಃ ॥ ೨೨೩ ॥

**ಕಸ್ತೇऽಧಿಕಾರೀ ಸ್ವಸ್ಥಾತ್ಮಾ ಮತ್ತಸ್ಯಾಪ್ಯಸ್ತಿ ಮೃತ್ಯುಭೀಃ ।**
**ವಿಷಯಸ್ಯ ವಿಚಾರಶ್ಚ ಯುಕ್ತಿತಸ್ಸ್ಯಾನ್ನ ಶಕ್ತಿತಃ ॥ ೨೨೪ ॥**

**ಅರ್ಥ–** ಸ್ವಸ್ಥಾತ್ಮಾ = ವಿವೇಕಿಯಾದ, ಕಃ = ಯಾವನು, ತೇ = ನಿನ್ನ ಶಾಸ್ತ್ರಕ್ಕೆ, ಅಧಿಕಾರೀ = ಅಧಿಕಾರಿಯಾಗುತ್ತಾನೆ? ಮತ್ತಸ್ಯಾಪಿ = ಮತ್ತನಾದವನಿಗೂ ಸಹ, ಮೃತ್ಯುಭೀಃ = ಮರಣಭಯವು, ಅಸ್ತಿ = ಇದ್ದೇ ಇದೆ, ವಿಷಯಸ್ಯ ವಿಚಾರಶ್ಚ = ಶಾಸ್ತ್ರವಿಷಯದ

ವಿಮರ್ಶೆಯಾದರೂ, ಯುಕ್ತಿತಃ ಸ್ಯಾತ್ = ಯುಕ್ತಿಯಿಂದ ಆಗಬೇಕು, ಶಕ್ತಿತಃ ನ = ಶಕ್ತಿಯಿಂದಲ್ಲ.

**ಅನುವಾದ–** ನಿಮ್ಮ ಶಾಸ್ತ್ರವನ್ನೂ ಯಾವ ವಿವೇಕವಿದ್ದ ಮನುಷ್ಯನು ಓದಲು ಪ್ರವೃತ್ತವಾದಾನು? ಏಕೆಂದರೆ ಹುಚ್ಚನಿಗೂ ಮರಣಭಯವಿರುತ್ತದೆ. ಹಾಗಿರುವಾಗ ತಾವು ಮಾಡುವ ದುಷ್ಕೃತ್ಯಗಳ ಪರಿಣಾಮವಾಗಿ ಬಂಧನ, ಮರಣ ದಂಡನ ಇತ್ಯಾದಿಗಳು ಆಗುತ್ತವೆಂದು ವಿವೇಕಿಗಳಿಗೆ ಭಯ, ಎಚ್ಚರಿಕೆಗಳು ಇರುವುದಿಲ್ಲವೆ? ಆದ್ದರಿಂದ ನಿಮ್ಮ ಶಾಸ್ತ್ರಕ್ಕೆ ಅಧಿಕಾರಿಗಳೇ ಯಾರೂ ಇಲ್ಲ. ವಿಷಯದ ಪ್ರತಿಪಾದನವನ್ನು ನೀವು ಯಾವ ಪ್ರಮಾಣದಿಂದ ಮಾಡುತ್ತೀರಿ? ಪ್ರತ್ಯಕ್ಷಯೋಗ್ಯ ವಸ್ತುಗಳನ್ನು ಮಾತ್ರ ನೀವು ಒಪ್ಪುತ್ತೀರಿ. ಪ್ರತ್ಯಕ್ಷ ಸಿದ್ಧವಸ್ತುಗಳ ಪ್ರತಿಪಾದನ, ವಿಮರ್ಶೆಗಳಿಗೆ ಶಾಸ್ತ್ರದ ಅವಶ್ಯಕತೆ ಇಲ್ಲವಾದ್ದರಿಂದ ಯುಕ್ತಿಯಿಂದ ವಿಮರ್ಶೆ ಮಾಡಬೇಕೇ ಹೊರತು ಶಕ್ತಿಯಿಂದಲ್ಲ.

**ಭಾವವಿಲಾಸಿನೀ–**ಅತ ಏವನಾಧಿಕಾರ್ಯಪೀತ್ಯಾಹ – **ಕಸ್ತು ಇತಿ** ॥ ಸ್ವಸ್ಥಾತ್ಮಾ ಸ್ವಸ್ಥಚಿತ್ತಃ ಪ್ರೇಕ್ಷಾವಾನಿತಿ ಯಾವತ್ । ತೇ ಶಾಸ್ತ್ರೇ ಕೋಽಧಿಕಾರೀ ಪೂರ್ವೋಕ್ತಾನರ್ಥಶಂಕಯಾ ನ ಕೋಽಪಿ ಪ್ರೇಕ್ಷಾವಾನ್ ಪ್ರವರ್ತತ ಇತಿ ಭಾವಃ । ನನು ಮತ್ತ ಏವಾಸ್ಮಚ್ಛಾಸ್ತ್ರೇ ಅಧಿಕಾರೀತ್ಯತ ಆಹ – **ಮತ್ತಸ್ಯೇತಿ** ॥ ಮತ್ತೋಽಪಿ ಸ್ವಶಿರಶ್ಛೇದಾದಿನಾ ಬಿಭೇತೀತಿ ಭಾವಃ । ಇದಾನೀಂ ವಿಷಯಂ ನಿರಾಕರೋತಿ – **ವಿಷಯಸ್ಯೇತಿ** ॥ ಪ್ರತ್ಯಕ್ಷಸಿದ್ಧೇಽರ್ಥೇ ಶಾಸ್ತ್ರಸ್ಯ ವೈಯರ್ಥ್ಯಾದ್ ಯುಕ್ತ್ಯಾ ವಿಚಾರಯಿತುಂ ಯೋಗ್ಯೋಽರ್ಥೋ ವಿಷಯೋ ಭವತಿ । ಯುಕ್ತಿಮನಂಗೀಕುರ್ವತಃ ಕೋ ವಾ ಶಾಸ್ತ್ರಸ್ಯ ವಿಷಯೋ ಭವೇದಿತಿ ಭಾವಃ ॥ ೨೨೪ ॥

**ಅಕ್ಷಂ ಸ್ಯಾತ್ತವ ಲೀಲಾಯೈ ನ ಪಕ್ಷಾಂತರಶಿಕ್ಷಣೇ ।**
**ತಚ್ಚ ಯುಕ್ತ್ಯಾಖ್ಯಶಸ್ತ್ರೇಣ ನಾನ್ಯೇನೇತಿ ಮತಿರ್ಮಮ ॥ ೨೨೫ ॥**

**ಅರ್ಥ–** ಅಕ್ಷಂ = ಪ್ರತ್ಯಕ್ಷವು, ತವ ಲೀಲಾಯೈ = ನಿನ್ನ ಭೋಗಕ್ಕೋಸ್ಕರ, ಸ್ಯಾತ್ = ಉಪಯುಕ್ತವಾಗುತ್ತದೆ, ಪಕ್ಷಾಂತರ ಶಿಕ್ಷಣೇ = ಪರಪಕ್ಷವನ್ನು ನಿರಾಕರಣೆ ಮಾಡಲು, ನ = ಉಪಯುಕ್ತವಾಗುವುದಿಲ್ಲ, ತಚ್ಚ = ಆ ಪರಪಕ್ಷ ನಿರಾಕರಣೆಯಾದರೂ, ಯುಕ್ತ್ಯಾಖ್ಯಶಸ್ತ್ರೇಣ = ಯುಕ್ತಿ ಎಂಬ ಶಸ್ತ್ರದಿಂದಲೇ ಆಗಬೇಕು, ಅನ್ಯೇನ ನ = ಇನ್ನೊಂದರಿಂದ ಆಗುವುದಿಲ್ಲ, ಇತಿ = ಎಂದು, ಮೇ ಮತಿಃ = ನನ್ನ ಅಭಿಪ್ರಾಯ.

**ಅನುವಾದ–** ಪ್ರತ್ಯಕ್ಷವು ನಿನ್ನ (ಸ್ತ್ರೀದರ್ಶನಾದಿ) ಲೀಲೆಗೆ ಉಪಯುಕ್ತವಾಗುತ್ತದೆ. ಪ್ರತಿಪಕ್ಷ ನಿರಾಕರಣೆಗೆ ಉಪಯುಕ್ತವಾಗುವುದಿಲ್ಲ. ಪ್ರತಿಪಕ್ಷನಿರಾಕರಣೆ ಯನ್ನಾದರೂ ಯುಕ್ತಿ ಎಂಬ ಶಸ್ತ್ರದಿಂದಲೇ ಮಾಡಬೇಕು. ಬೇರೆ ಯಾವುದರಿಂದಲೂ ಮಾಡಲು ಬರುವುದಿಲ್ಲವೆಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ**–ನನು ಅಕ್ಷಾದೇವ ಶಾಸ್ತ್ರಸ್ಯ ವಿಷಯಸಿದ್ಧಿರಿತ್ಯತ ಆಹ – **ಅಕ್ಷಮಿತಿ** ॥ ತವ ಲೀಲಾಯೈ ಕಾಮಿನ್ಯಾದಿಭೋಗಾರ್ಥಂ ಚತುರಂಗಾದಿಕ್ರೀಡಾಯೈ ವಾ ಅಕ್ಷಂ ಪ್ರತ್ಯಕ್ಷಂ ಗಜದಂತರಚಿತಲೀಲಾಸಾಧನಖಣ್ಡದ್ವಯಂ ವಾ ಉಪಯುಕ್ತಂ ಸ್ಯಾತ್ । ನ ಪಕ್ಷಾಂತರಶಿಕ್ಷಣೇ ಅಯಮೇವ ವಿಷಯೋ ನಾನ್ಯ ಇತಿ ಪಕ್ಷಾಂತರನಿರಾಕರಣೇ ಅಕ್ಷಮುಪಯುಕ್ತಂ ನ ಸ್ಯಾದಿತಿ ಪೂರ್ವೇಣ ಸಂಬಂಧಃ । ತತ್ ಪಕ್ಷಾಂತರಶಿಕ್ಷಣಮ್ । ಯುಕ್ತೇಶ್ಚ ಪ್ರಾಮಾಣ್ಯಂ ನಾಂಗೀಕೃತಮಿತಿ ಭಾವಃ ॥ ೨೨೫ ॥

**ಅಕ್ಷಾನುಕೂಲಸ್ಸ್ಯಾದರ್ಥಸ್ತದ್ವಿರುದ್ಧಸ್ತು ನೇತ್ಯಪಿ ॥ ೨೨೬ ॥**

**ತಥಾ ಸರ್ವತ್ರ ದೃಷ್ಟತ್ವಾದಿತಿ ಯುಕ್ತ್ಯೈವ ಸಿದ್ಧ್ಯತಿ ।**
**ಯುಕ್ತೇರಮಾನತಾ ಯಸ್ಯ ತಸ್ಯ ನಿರ್ವಿಷಯಂ ಮತಮ್ ॥ ೨೨೭ ॥**

**ಅರ್ಥ**– ಅಕ್ಷಾನುಕೂಲಃ= ಪ್ರತ್ಯಕ್ಷಕ್ಕೆ ವಿಷಯವಾದದ್ದೇ ಅರ್ಥಃ= ವಿಷಯವು ಸ್ಯಾತ್= ಆಗುತ್ತದೆ, ತದ್ವಿರುದ್ಧಃ ತು= ಪ್ರತ್ಯಕ್ಷಕ್ಕೆ ನಿಲುಕದ್ದಾದರೂ ನ= ವಿಷಯವಾಗುವುದಿಲ್ಲ, ಇತಿ ಅಪಿ= ಎಂಬ ವಿಷಯವೂ ಕೂಡ, ತಥಾ= ಪ್ರತ್ಯಕ್ಷ ಗೋಚರವಾದುದೇ ವಿಷಯವೆಂದು, ಸರ್ವತ್ರ ದೃಷ್ಟತ್ವಾತ್= ಎಲ್ಲೆಲ್ಲಿಯೂ ಬರುವುದರಿಂದ, ಇತಿ= ಎಂಬ, ಯುಕ್ತ್ಯೈವ= ಯುಕ್ತಿಯಿಂದಲೇ, ಸಿದ್ಧ್ಯತಿ= ಸಿದ್ಧವಾಗುತ್ತದೆ, ಯಸ್ಯ= ಯಾರಿಗೆ, ಯುಕ್ತೇಃ= ಯುಕ್ತಿಗೆ, ಅಮಾನತಾ = ಪ್ರಮಾಣ್ಯವಿಲ್ಲವೋ, ತಸ್ಯ = ಆತನ, ಮತಂ = ಶಾಸ್ತ್ರವು, ನಿರ್ವಿಷಯಂ = ವಿಷಯವಿಲ್ಲದುದೇ ಸರಿ.

**ಅನುವಾದ**– ಪ್ರತ್ಯಕ್ಷದಿಂದಲೂ ನಿಮ್ಮ ಶಾಸ್ತ್ರದ ವಿಚಾರವನ್ನು ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಆ ಅಕ್ಷವು (ಪ್ರತ್ಯಕ್ಷವು) ನಿಮ್ಮ ಭೋಗ, ವಿಲಾಸಗಳಿಗೆ ಸಾಧನವಾದೀತೇ ಹೊರತು ನಿಮ್ಮ ಪ್ರತಿಪಕ್ಷದವರನ್ನು ಖಂಡನೆ ಮಾಡಲಿಕ್ಕಲ್ಲ. ಪ್ರತಿಪಕ್ಷದ ವಿಮರ್ಶವನ್ನು ಯುಕ್ತಿಯೆಂಬ ಶಾಸ್ತ್ರದ ಮೂಲಕವೇ ಮಾಡಲು ಸಾಧ್ಯವೇ ಹೊರತು ಬೇರೆ ಯಾವ ಸಾಧನದಿಂದಲೂ ಅಲ್ಲವೆಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ**–ನನು ಪ್ರತ್ಯಕ್ಷಾನುಕೂಲೋ ವಿಷಯಃ ತದ್ವಿರುದ್ಧಸ್ತು ನ ವಿಷಯ ಇತ್ಯಾಶಂಕ್ಯ ಪರಿಹರತಿ – **ಅಕ್ಷಾನುಕೂಲ** ಇತಿ ॥ ೨೨೬ ॥

ತಥಾ ಅಕ್ಷಾನುಕೂಲೋ ವಿಷಯಃ ತದ್ವಿರುದ್ಧಸ್ತು ವಿಷಯೋ ನೇತಿ ಸರ್ವತ್ರ ದೃಷ್ಟತ್ವಾದಿತಿ ಯುಕ್ತ್ಯೈವ ಸಿದ್ಧ್ಯತೀತ್ಯರ್ಥಃ । ಯುಕ್ತೇರಮಾನತಾ ಯಸ್ಯ ತಸ್ಯಶಾಸ್ತ್ರಂ ನಿರ್ವಿಷಯಂ ವಿಷಯಶೂನ್ಯಮ್ ॥ ೨೨೭ ॥

**ವ್ಯಾಖ್ಯಾನವಿಶೇಷ**– ಅಕ್ಷ ಶಬ್ದಕ್ಕೆ ಪ್ರತ್ಯಕ್ಷವೆಂದೂ ಆನೆಯ ದಂತ ಮುಂತಾದವುಗಳಿಂದ ನಿರ್ಮಿತಗಳಾದ ಪಗಡೆಯಾಟದಲ್ಲಿ ಉಪಯೋಗಿಸಲಾಗುವ ದಾಳಗಳೆಂದೂ ಎರಡು

ಅರ್ಥಗಳಿವೆ. ಅವುಗಳಲ್ಲಿ ಅಕ್ಷ ಎಂದರೆ ಪ್ರತ್ಯಕ್ಷವು ಸ್ತ್ರೀಭೋಗ ಮೊದಲಾದ ನಿನ್ನ ಲೀಲೆ ಎಂದರೆ ಭೋಗಕ್ಕೆ ಸಾಧನವೆಂದೂ ಅಕ್ಷ ಎಂದರೆ ದಾಳಗಳು ನಿನ್ನ ಪಗಡೆಯಾಟ ಮೊದಲಾದ ವಿಹಾರಗಳಿಗೆ ಸಾಧನಗಳೆಂದೂ ಅರ್ಥವಾಗುತ್ತದೆ.

**ಕಿಂಚ ದೃಷ್ಟಂ ಸಮಸ್ತಂ ಚ ದೃಷ್ಟ್ಯಾ ಸಿದ್ಧ್ಯೇನ್ನ ಶಾಸ್ತ್ರತಃ ।**
**ಅದೃಷ್ಟಂ ನಾಸ್ತಿ ಚೇತ್ತರ್ಹಿ ವಿಷಯಸ್ತೇ ವಿಷಂ ಪಪೌ ॥ ೨೨೮ ॥**

**ಅರ್ಥ–** ಕಿಂ ಚ = ಮತ್ತೂ ಏನೆಂದರೆ, ದೃಷ್ಟಂ = ಕಾಣುವ, ಸಮಸ್ತಂ ಚ = ಎಲ್ಲವೂ, ದೃಷ್ಟ್ಯಾ = ಪ್ರತ್ಯಕ್ಷದಿಂದ, ಸಿದ್ಧಃ = ಸಿದ್ಧವೇ ಆಗಿದೆ, ನ ಶಾಸ್ತ್ರತಃ = ಶಾಸ್ತ್ರದಿಂದಲ್ಲ, ಅದೃಷ್ಟಂ = ಪ್ರತ್ಯಕ್ಷವಲ್ಲದ್ದು, ನಾಸ್ತಿ ಚೇತ್ = ಇಲ್ಲವೆಂದರೆ, ತರ್ಹಿ = ಆಗ, ತೇ = ನಿನ್ನ, ವಿಷಯಃ = ವಿಷಯವು, ವಿಷಂ = ವಿಷವನ್ನು, ಪಪೌ = ಪಾನಮಾಡಿತು.

**ಅನುವಾದ–** ಇನ್ನೊಂದು ವಿಧದಿಂದಲೂ ಚಾರ್ವಾಕ ಮತದ ವಿಷಯವನ್ನು ಖಂಡಿಸಬಹುದಾಗಿದೆ. ನಿಮ್ಮ ಶಾಸ್ತ್ರಕ್ಕೆ ಪ್ರತ್ಯಕ್ಷಯೋಗ್ಯವಾದದ್ದು ವಿಷಯವೋ ಅಥವಾ ಪ್ರತ್ಯಕ್ಷಕ್ಕೆ ಅಯೋಗ್ಯವಾದದ್ದೋ? ಪ್ರತ್ಯಕ್ಷಯೋಗ್ಯವಾದದ್ದು (ದೃಷ್ಟ) ವಿಷಯವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಎಲ್ಲ ಪ್ರತ್ಯಕ್ಷಯೋಗ್ಯ (ದೃಷ್ಟ) ವಸ್ತುಗಳ ಅಸ್ತಿತ್ವದ ಸಮರ್ಥನವೂ ಪ್ರತ್ಯಕ್ಷಪ್ರಮಾಣದಿಂದಲೇ ಆಗುತ್ತದೆ ಹೊರತು ಶಬ್ದಪ್ರಮಾಣವೆನಿಸಿಕೊಂಡ ಶಾಸ್ತ್ರದಿಂದಲ್ಲ. ಪ್ರತ್ಯಕ್ಷಕ್ಕೆ ಅಯೋಗ್ಯವಾದದ್ದೇ (ಅದೃಷ್ಟವೇ) ನಿಮ್ಮ ಶಾಸ್ತ್ರಕ್ಕೆ ವಿಷಯವೆಂಬ ಎರಡನೇ ಪಕ್ಷವೂ ಸಮಂಜಸವಲ್ಲ. ಏಕೆಂದರೆ ಪ್ರತ್ಯಕ್ಷಾಯೋಗ್ಯ (ಅದೃಷ್ಟ) ವಸ್ತುಗಳನ್ನೇ ನೀವು ಒಪ್ಪುವುದಿಲ್ಲ. ಆದ್ದರಿಂದ ನಿಮ್ಮ ಶಾಸ್ತ್ರದ ವಿಷಯವು ವಿಷವನ್ನು ಕುಡಿಯಿತು (ಹಾಳಾಗಿ ಹೋಯಿತು).

**ಭಾವವಿಲಾಸಿನೀ**–ಪ್ರಕಾರಾಂತರೇಣ ವಿಷಯಂ ನಿರಾಕರೋತಿ – **ಕಿಂಚೇತಿ** ॥ ತ್ವಚ್ಛಾಸ್ತ್ರಸ್ಯ ದೃಷ್ಟಂ ವಾ ವಿಷಯಃ ಅದೃಷ್ಟಂ ವಾ । ನಾದ್ಯಮಿತ್ಯಾಹ – **ದೃಷ್ಟಮಿತಿ** ॥ ನ ದ್ವಿತೀಯಮಿತ್ಯಾಹ – **ಅದೃಷ್ಟಮಿತಿ** ॥ ನಾಸ್ತಿ ಚೇದ್, ಅನಂಗೀಕಾರಾನ್ನಾಸ್ತಿ ಚೇತ್ ತೇ ವಿಷಯಃ ತ್ವಚ್ಛಾಸ್ತ್ರಸ್ಯ ವಿಷಯ ಇತಿ ಯಾವತ್ ॥ ೨೨೮ ॥

**ಧರ್ಮಾಭಾವೋಽಪಿ ತತ್ತ್ವಂ ಚೇತ್ಪ್ರತ್ಯಕ್ಷೇಣೈವ ಸಿಧ್ಯತಿ ।**
**ಅತತ್ತ್ವಂ ಯದಿ ತರ್ಹ್ಯಾಸೀದ್ಧರ್ಮೋ ನಿಷ್ಕಂಟಕೋ ಮಮ ॥ ೨೨೯ ॥**

**ಅರ್ಥ–** ಧರ್ಮಾಭಾವಃ ಅಪಿ = ಧರ್ಮಾಭಾವವೂ, ತತ್ತ್ವಂಚೇತ್ = ಸತ್ಯವಾದರೆ, ಪ್ರತ್ಯಕ್ಷೇಣ ಏವ = ಪ್ರತ್ಯಕ್ಷದಿಂದಲೇ, ಸಿಧ್ಯತಿ = ಸಿದ್ಧವಾಗುತ್ತದೆ, ಯದಿ ಅತತ್ತ್ವಂ = ಅಸತ್ಯವಾದರೆ, ತರ್ಹಿ = ಆಗ, ಮಮ = ನನ್ನ (ನನಗೆ ಅಭಿಮತವಾದ), ಧರ್ಮಃ =

ಧರ್ಮವ, ನಿಷ್ಕಂಟಕಃ = ಕಂಟಕರಹಿತವು (ಯಾವ ತೊಂದರೆಯೂ ಇಲ್ಲದ್ದು), ಆಸೀತ್ = ಆಯಿತು.

**ಅನುವಾದ–** ಧರ್ಮಾಭಾವವೂ ಸತ್ಯವಾದರೆ ಪ್ರತ್ಯಕ್ಷದಿಂದಲೇ ಸಿದ್ಧವಾಗುತ್ತದೆ, ಅಸತ್ಯವಾದರೆ ಆಗ ನನ್ನ ಧರ್ಮವು ಕಂಟಕ ರಹಿತವು ಆಯಿತು.

**ಭಾವವಿಲಾಸಿನೀ–**ನನು ಧರ್ಮಾಭಾವಃ ಶಾಸ್ತ್ರೇಣ ಬೋಧ್ಯ ಇತ್ಯತ ಆಹ – **ಧರ್ಮಾಭಾವೋಽಪೀತಿ** ॥ ತತ್ತ್ವಸ್ಯ ಪ್ರತ್ಯಕ್ಷೈಕವೇದ್ಯತ್ವಾಂಗೀಕಾರಾತ್ । ಧರ್ಮಾಭಾವೋ ಯದ್ಯತತ್ತ್ವಮ್, ತರ್ಹಿ ತದ್ವಿರುದ್ಧಸ್ಯ ಧರ್ಮಸ್ಯ ತತ್ತ್ವತಾ ಸ್ಯಾದಿತಿ ಮಮ ಧರ್ಮೋ ನಿಷ್ಕಂಟಕೋ ಭವೇತ್। ಧರ್ಮಕಂಟಕಸ್ಯ ತವೈವ ರೀತ್ಯಾ ಮದ್ಧರ್ಮಸಿದ್ಧೇರಿತಿ ಭಾವಃ । ಉಪಲಕ್ಷಣಂ ಚೈತತ್ । ಧರ್ಮಾಭಾವಸ್ಯಾತತ್ತ್ವತಾಯಾಂ ನೃಶೃಂಗವತ್ ವಿಷಯತಾ ಚ ನೇತಿ ಗ್ರಾಹ್ಯಮ್ ॥ ೨೨೯ ॥

ನಾಪಿ ಧರ್ಮೇ ಪ್ರಮಾಣಸ್ಯಾಭಾವಃ ಶಾಸ್ತ್ರೇಣ ಬೋಧ್ಯತೇ ॥ ೨೩೦ ॥

**ಅರ್ಥ–** ಧರ್ಮೇ = ಧರ್ಮದಲ್ಲಿ (ಧರ್ಮವಿರುತ್ತದೆಂಬ ವಿಷಯದಲ್ಲಿ), ಪ್ರಮಾಣಸ್ಯ = ಪ್ರಮಾಣದ, ಅಭಾವಃ = ಅಭಾವವು, ಶಾಸ್ತ್ರೇಣ = ಈ ಶಾಸ್ತ್ರದಿಂದ, ಬೋಧ್ಯತೇ = ಉಪದೇಶಿಸಲ್ಪಡುತ್ತದೆ, (ಇತಿ) ಅಪಿ = ಹೀಗೆಂಬುದೂ, ನ = ಯುಕ್ತವಲ್ಲ.

**ಅನುವಾದ–** ಧರ್ಮದಲ್ಲಿ ಪ್ರಮಾಣವಿಲ್ಲವೆಂದು ಶಾಸ್ತ್ರದಿಂದ ಉಪದೇಶಿಸಲ್ಪಡುತ್ತದೆ ಎಂಬುದೂ ಯುಕ್ತವಲ್ಲ.

**ಭಾವವಿಲಾಸಿನೀ–**ನನು ಧರ್ಮೇ ಪ್ರಮಾಣಾಭಾವಃ ಶಾಸ್ತ್ರೇಣ ಬೋಧ್ಯತ ಇತ್ಯತ ಆಹ–**ನಾಪೀತಿ** ॥ ೨೩೦ ॥

ಸೋಽಪಿ ತತ್ತ್ವಂ ಯದಿ ತದಾ ಪ್ರತ್ಯಕ್ಷೇಣೈವ ಸಿದ್ಧ್ಯತಿ ।
ಅತತ್ತ್ವಂ ಚೇದ್ಧರ್ಮಶಾಸ್ತ್ರಮಕಂಟಕಮಭೂನ್ಮಮ ॥ ೨೩೧ ॥

**ಅರ್ಥ–** ಸೋಽಪಿ = ಧರ್ಮದ ವಿಷಯದಲ್ಲಿ ಪ್ರಮಾಣಾಭಾವವೂ ಸಹ, ಯದಿ = ಒಂದು ಪಕ್ಷ, ತತ್ತ್ವಂ = ತತ್ತ್ವವಾದರೆ, ಪ್ರತ್ಯಕ್ಷೇಣೈವ = ಪ್ರತ್ಯಕ್ಷದಿಂದಲೇ, ಸಿದ್ಧ್ಯತಿ = ಸಿದ್ಧಿಸುತ್ತದೆ (ಆಗ ನಿನ್ನ ಶಾಸ್ತ್ರವು ವ್ಯರ್ಥವಾಗುತ್ತದೆ), ಅತತ್ತ್ವಂ ಚೇತ್ = ಆ ಪ್ರಮಾಣಾಭಾವವು ಅತತ್ತ್ವವಾದರೆ (ಧರ್ಮವು ಇದೆಯೆಂದು ಸಿದ್ಧಿಸುವುದರಿಂದ, ಮಮ ಧರ್ಮಶಾಸ್ತ್ರಂ = ನನ್ನ ಧರ್ಮಶಾಸ್ತ್ರವು, ನಿಷ್ಕಂಟಕಮಭೂತ್ = ನಿಷ್ಕಂಟಕವಾಯಿತು.

**ಅನುವಾದ–** ಧರ್ಮದ ವಿಷಯದಲ್ಲಿ ಪ್ರಮಾಣವಿಲ್ಲವೆಂಬುದು ತತ್ತ್ವವೋ, ಅತತ್ತ್ವವೋ? ತತ್ತ್ವವಾದರೆ ನಿನಗೆ ಎಲ್ಲಾ ತತ್ತ್ವಗಳು ಪ್ರತ್ಯಕ್ಷದಿಂದಲೇ ಸಿದ್ಧವಾಗುವುದರಿಂದ ಶಾಸ್ತ್ರವು ವ್ಯರ್ಥ. ಅತತ್ವವಾದರೆ ಧರ್ಮದ ವಿಷಯದಲ್ಲಿ

ಪ್ರಮಾಣವಿಲ್ಲವೆಂಬುದು ಸುಳ್ಳು ಎಂದಾಯಿತು. ಆಗ ನನ್ನ ಧರ್ಮಶಾಸ್ತ್ರಕ್ಕೆ ಯಾವ ವಿರೋಧವೂ ಇಲ್ಲ.

**ಭಾವವಿಲಾಸಿನೀ**—ಸೋಽಪಿ ಧರ್ಮೇ ಪ್ರಮಾಣಾಭಾವೋಽಪಿ । ಧರ್ಮೇ ಪ್ರಮಾಣಾ-ಭಾವಸ್ಯಾತತ್ತ್ವತಾಯಾಂ ತದ್ವಿರುದ್ಧಧರ್ಮಶಾಸ್ತ್ರಪ್ರಾಮಾಣ್ಯಸ್ಯ ಬಲಾದಾಪಾತಾದ್ ಧರ್ಮ-ಶಾಸ್ತ್ರಮಕಂಟಕಮಭೂನ್ಮಮೇತಿ ಭಾವಃ ॥ ೨೩೧ ॥ ಇತಿಚಾರ್ವಾಕವಾದಃ ॥

ಏವಂ ಚಾರ್ವಾಕಮರ್ಯಾದಾ ಸರ್ವಾಪ್ಯಾರ್ಯವಿಗರ್ಹಿತಾ ।
ಜಿನಬುದ್ಧಾಗಮಾದ್ಯಧ್ವಶೋಧನಾಯಾಧುನಾಯತೇ ॥ ೨೩೨ ॥

**ಅರ್ಥ**— ಏವಂ = ಹೀಗೆ, ಚಾರ್ವಾಕಮರ್ಯಾದಾ = ಚಾರ್ವಾಕಶಾಸ್ತ್ರವು, ಸರ್ವಾಪಿ = ಎಲ್ಲವೂ, ಆರ್ಯೈಃ = ಜ್ಞಾನಿಗಳಿಂದ, ವಿಗರ್ಹಿತಾ = ತಿರಸ್ಕರಿಸಲಾಗಿದೆ, ಜಿನಬುದ್ಧಾ-ಗಮಾದ್ಯಧ್ವಶೋಧನಾಯ = ಜೈನ ಬೌದ್ಧಾದಿ ಶಾಸ್ತ್ರಗಳ ಮಾರ್ಗವನ್ನು ಪರಿಶೀಲಿಸಲು, ಅಧುನಾ = ಈಗ, ಯತೇ = ಯತ್ನಿಸುತ್ತೇನೆ.

**ಅನುವಾದ**— ಹೀಗೆ ಚಾರ್ವಾಕಶಾಸ್ತ್ರವು ಎಲ್ಲವೂ ಜ್ಞಾನಿಗಳಿಂದ ತಿರಸ್ಕೃತವಾಗಿದೆ. ಜೈನ ಬೌದ್ಧಾದಿ ಶಾಸ್ತ್ರಗಳ ಮಾರ್ಗವನ್ನು ಪರಿಶೀಲಿಸಲು ಈ ಮುಂದೆ ಯತ್ನಿಸುತ್ತೇನೆ.

**ಭಾವವಿಲಾಸಿನೀ**—ವೃತ್ತಾನುವಾದಪೂರ್ವಕಂ ವರ್ತಿಷ್ಯಮಾಣಂ ಕೀರ್ತಯತೇ — ಏವಮಿತ್ಯಾ-ದಿನಾ ॥ ೨೩೨ ॥

ಯದೀದಂ ನ ತದಾ ತನ್ನೇತ್ಯಾಜ್ಞಾ ರಾಜ್ಞಃ ಪರಂ ಭವೇತ್ ।
ಸಮಾನಂ ನೋಭಯೋರ್ಮಾನಮನುಮಾನನುಮಾ ಕ್ವ ಮಾ ॥ ೨೩೩ ॥

**ಅರ್ಥ**— ಯದಿ = ಒಂದು ಪಕ್ಷ, ಇದಂ = ಕ್ರತುಬಾಹ್ಯವಾದ ಪಶುಹಿಂಸೆಯು, ನ = ನಿಷಿದ್ಧವೋ, ತದಾ = ಆಗ, ತತ್ = ಕ್ರತುವಿನಲ್ಲಿನ ಪಶುಹಿಂಸೆಯೂ, ನ = ನಿಷಿದ್ಧವು, ಇತಿ = ಎಂದು, ಪರಂ = ಕೇವಲ, ರಾಜ್ಞಃ ಆಜ್ಞಾ = ರಾಜಾಜ್ಞೆಯು, ಭವೇತ್ = ಆಗಬಹುದು, ಉಭಯೋಃ = ವಾದಿಪ್ರತಿವಾದಿಗಳಿಬ್ಬರಿಗೂ, ಸಮಾನಂ = ಪ್ರಮಾಣತ್ವೇನ ಸಮ್ಮತವಾದ, ಮಾನಂ = ಪ್ರಮಾಣವು, ನ = ಇಲ್ಲ, ಅನುಮಾನಂ = ಅನುಮಾನವು, ನತು = (ಉಭಯ ಸಮ್ಮತವಾಗಿ) ಇಲ್ಲ. (ಯದಿ ಅನುಮಾ) = ಒಂದು ಪಕ್ಷ ಕೇವಲ ಅನುಮಾನವೇ ಪ್ರಮಾಣವಾಗುವುದಾದರೆ, (ಅನುಮಾ) = ಅನುಮಾನವು, ಕ್ವ = ಎಲ್ಲಿ, ಮಾನಂ (ನ) = ಪ್ರಮಾಣವಾಗುವುದಿಲ್ಲ ?

**ಅನುವಾದ**— ಕ್ರತುಬಾಹ್ಯ ಪಶುಹಿಂಸೆಯು ಅಧರ್ಮವಾದರೆ ಕ್ರತುವಿನಲ್ಲಿನ ಪಶು-ಹಿಂಸೆಯೂ ಅಧರ್ಮವಾಗಲಿ ಎಂಬ ಬೌದ್ಧರ ವಾಕ್ಯವು ರಾಜಾಜ್ಞೆಯಂತಿ-

ರಬಹುದೇ ಹೊರತು. ಪ್ರಮಾಣಸಮ್ಮತವಲ್ಲ. ವೈದೀ ಹಿಂಸಾ ಅಧರ್ಮಸಾಧನಂ ಹಿಂಸಾತ್ವಾತ್ ವಿಪ್ರಹಿಂಸಾವತ್ ಎಂಬ ಅನುಮಾನದಿಂದ ಅಧರ್ಮಸಾಧನತ್ವವನ್ನು ಸಾಧಿಸುತ್ತೇವೆಂದು ಹೇಳಿದರೆ, ಕೇವಲ ಅನುಮಾನದಿಂದ ಏನನ್ನೂ ಸಾಧನೆ ಮಾಡಲು ಬರುವುದಿಲ್ಲ. ಪ್ರತ್ಯಕ್ಷ ಆಗಮಗಳು ಮೂಲವಾಗಿದ್ದರೆ ಮಾತ್ರ ಆ ಅನುಮಾನದಿಂದ ಏನನ್ನಾದರೂ ಸಾಧನೆ ಮಾಡಬಹುದು ಎಂದು ನಮ್ಮ ಉತ್ತರ. ಪ್ರತ್ಯಕ್ಷ ಆಗಮಗಳ ಸಹಾಯವಿಲ್ಲದ ಅನುಮಾನವೂ ಸಾಧ್ಯಸಾಧಕ ವಾಗುವು ದಾದರೆ ಅಂತಹ ಅನುಮಾನವನ್ನು ಎಲ್ಲಿ ಪ್ರಯೋಗ ಮಾಡಲು ಬರುವುದಿಲ್ಲ?

**ಭಾವವಿಲಾಸಿನೀ**–ಯದಿ ಕ್ರತುಬಾಹ್ಯಹಿಂಸಾದಿಕಂ ನ ತದಾ ಕ್ರತ್ವಂತವರ್ತಿನೀ ಹಿಂಸಾಽಪಿ ನೇತಿ ಬೌದ್ಧಾದ್ಯೈರುಚ್ಯತೇ । ತದನೂದ್ಯ ದೂಷಯತಿ – **ಯದೀತಿ** ॥ ಇದಂ ಕ್ರತುಬಾಹ್ಯಹನನಂ ಯದಿ ನ ತದಾ ತದ್ ಯಾಜ್ಞೀಯಪಶುಹನನಂ ನೇತ್ಯಾಜ್ಞಾ। ನನು ನೇಯಂ ರಾಜಾಜ್ಞಾ ಕಿಂತು ಪ್ರಮಾಣಬಲಾದೇವೋಚ್ಯತ ಇತ್ಯತ ಆಹ – **ಸಮಾನಮಿತಿ** ॥ ಉಭಯೋ-ರ್ವಾದಿಪ್ರತಿವಾದಿನೋಃ ಸಮಾನಂ ಮಾನಂ ಧರ್ಮಾಧರ್ಮಬೋಧಕಂ ನ । ಪ್ರತ್ಯಕ್ಷಸ್ಯ ಧರ್ಮಾದಾವನುಪಯೋಗಾತ್ ಆಗಮಸ್ಯ ಚ ತ್ವದೀಯಸ್ಯ ಮಯಾನಂಗೀಕಾರಾತ್ ಮದೀಯಸ್ಯ ತ್ವಯಾನಂಗೀಕಾರಾದಿತಿ ಭಾವಃ । ನನು ವೈಧಹಿಂಸಾ ಅಧರ್ಮಸಾಧನಂ ಹಿಂಸಾತ್ವಾತ್ ವಿಪ್ರಹಿಂಸಾವದಿತ್ಯನುಮಾನಂ ಪ್ರಮಾಣಮಿತ್ಯತ ಆಹ – **ಅನುಮೇತಿ** ॥ ವ್ಯಾಪ್ತಿಧರ್ಮಿಲಿಂಗಗ್ರಾಹಕಪ್ರಮಾಣಂ ಪ್ರತ್ಯಕ್ಷಮಾಗಮಂ ವಾ ಅನುಸೃತ್ಯ ಪ್ರಮಾಣಂ ನನು ಅನುಮಾ । ಅನೇನೈವ ಮೂಲೀಭೂತಪ್ರತ್ಯಕ್ಷಾ- ಗಮಯೋರುಕ್ತವಿಧಯಾ ಅಭಾವಾತ್ ಪಾಪಸಾಧನಾನುಮೈವ ನ ಸಂಭವತೀತಿ ಸೂಚಿತಮ್ । ನನು ಕೇವಲಾನುಮಯೈವ ಧರ್ಮಾದಿಸಾಧನಂ ಕ್ರಿಯತೇ । ಕಿಂ ಮೂಲೀಭೂತಪ್ರಮಾಣೇನೇತ್ಯೌದ್ಧತ್ಯಾದ್ವದಂತಂ ಪ್ರತ್ಯಾಹ – **ಮಾ ಕ್ವಮೇತಿ** ॥ ಅನುಮೇತ್ಯಾವರ್ತನೀಯಮ್ । ಅನುಮಾ ಕ್ವ ಕುತ್ರ ಮಾ ಪ್ರಮಾಣಂ ಮಾ ನ ಭವತಿ। ಅಮಾನೋನಾಃ ಪ್ರತಿಷೇಧ ಇತಿ ವಚನಾದತ್ರ ಮಾಶಬ್ದೋ ನಞರ್ಥಕಃ। ಸರ್ವತ್ರಾಪಿ ಪ್ರಯೋಕ್ತುಂ ಶಕ್ಯೇತಿ ಭಾವಃ ॥ ೨೩೩ ॥

ನ ಚೇತ್ಸುರಾವತ್ಕ್ಷೀರಂ ಚ ಕಿಮಪೇಯಂ ನ ತೇ ಮತೇ ।
ದ್ರವದ್ರವ್ಯತ್ವತೋ ಹೇತೋಸ್ತತೋ ಮೂಲಾನುಗೈವ ಸಾ ॥ ೨೩೪ ॥

**ಅರ್ಥ**– ನಚೇತ್ = ಹಾಗಲ್ಲದಿದ್ದರೆ, ದ್ರವದ್ರವ್ಯತ್ವತಃ = ದ್ರವಿಸುವ ದ್ರವ್ಯತ್ವವಿರುತ್ತದೆಂಬ, ಹೇತೋಃ = ಕಾರಣದಿಂದ, ಸುರಾವತ್ = ಮದ್ಯದಂತೆ, ಕ್ಷೀರಂ ಚ = ಹಾಲೂ ಸಹ, ತೇ ಮತೇ = ನಿನ್ನ ಮತದಲ್ಲಿ ಅಪೇಯಂ = ಪಾನಕ್ಕೆ ಅನರ್ಹವಾದುದು, ಕಿಂ ನ = ಏಕೆ ಅಲ್ಲ? (ಕ್ಷೀರವೂ ಮದ್ಯದಂತೆ ಅಪೇಯವೇ ಆಗಬೇಕಾಗುವುದು), ತತಃ = ಆದ್ದರಿಂದ, ಸಾ = ಅನುಮಾನವು, ಮೂಲಾನುಗಾ ಏವ = ಪ್ರತ್ಯಕ್ಷ ಅಥವಾ ಆಗಮದ ಆಧಾರವನ್ನು ಅನುಸರಿಸಿಯೇ ಪ್ರಯೋಗಿಸಲ್ಪಡಲರ್ಹವು.

**ಅನುವಾದ–** ಹಾಗಲ್ಲದಿದ್ದರೆ ದ್ರವಿಸುವ ದ್ರವ್ಯತ್ವವಿರುತ್ತದೆಂಬ ಕಾರಣದಿಂದ ಮದ್ಯದಂತೆ ಹಾಲೂ ಸಹ ನಿನ್ನ ಮತದಲ್ಲಿ ಪಾನಕ್ಕೆ ಅನರ್ಹವಾದುದು ಏಕೆ ಅಲ್ಲ? ಆದ್ದರಿಂದ ಅನುಮಾನವು ಆಧಾರವನ್ನು ಅನುಸರಿಸಿಯೇ ಪ್ರಯೋಗಿಸಲ್ಪಡಲರ್ಹವು.

**ಭಾವವಿಲಾಸಿನೀ–**ತದೇವ ವಿಶದಯತಿ – **ನಚೇದಿತಿ** ॥ ಕ್ಷೀರಮಪೇಯಂ ದ್ರವದ್ರವ್ಯತ್ವಾತ್ಸುರಾವದಿತ್ಯನುಮಾನೇನ ತೇ ಮತೇ ಕ್ಷೀರಮಪೇಯಂ ಕಿಂ ಕಿಮರ್ಥಂ ನೇತಿ ಯೋಜನಾ। ತತಃ ಉಕ್ತವಿಧಯಾ ಶುಷ್ಕಾನುಮಾನಸ್ಯಾತಿಪ್ರಸಂಜಕತ್ವಾದಿತ್ಯರ್ಥಃ । ಮೂಲಾನುಗೈವ ಮೂಲ ಪ್ರಮಾಣಾನುಸಾರಿಣ್ಯೇವ ಸಾಽನುಮಾ ಪ್ರವರ್ತತ ಇತ್ಯರ್ಥಃ ॥ ೨೩೪ ॥

**ಮೂಲಂ ನಾತೀಂದ್ರಿಯೇಽಧ್ಯಕ್ಷಂ ಸ್ವಸ್ವವಾಕ್ಕಸ್ಯಕಸ್ಯ ನ ॥ ೨೩೫ ॥**

**ಅರ್ಥ–** ಅತೀಂದ್ರಿಯೇ = ಅತೀಂದ್ರಿಯವಲ್ಲದ ವಿಷಯದಲ್ಲಿ, ಅಧ್ಯಕ್ಷಂ = ಪ್ರತ್ಯಕ್ಷವು, ಮೂಲಂ = ಮೂಲವು, ನ = ಪ್ರಮಾಣವಲ್ಲ (ಆಧಾರವಲ್ಲ) ಅಲ್ಲ (ಆಯಾ ಮತಾಚಾರ್ಯರ ನುಡಿಗಳು ಆಧಾರವಾಗಲೆಂದರೆ), ಸ್ವಸ್ವವಾಕ್ = ಸ್ವ ಸ್ವ (ತಮ್ಮ ತಮ್ಮ) ಆಚಾರ್ಯರ ವಾಕ್ಯವು, ಕಸ್ಯ ಕಸ್ಯ = ಯಾವ ಯಾವ ವಾದಿಗೆ, ನ = ಇಲ್ಲ? ಎಲ್ಲರಿಗೂ ಇದ್ದೇ ಇದೆ.

**ಅನುವಾದ–** ಅತೀಂದ್ರಿಯ ವಿಷಯದಲ್ಲಿ ಪ್ರತ್ಯಕ್ಷವು ಮೂಲವಲ್ಲ. ತಮ್ಮ ತಮ್ಮ ವಾಕ್ಯಗಳೇ ಮೂಲವಾಗುವುದಾದರೆ ಅವು ಯಾರಿಗೆ ಇಲ್ಲ.

**ಭಾವವಿಲಾಸಿನೀ–**ನನು ಪ್ರತ್ಯಕ್ಷಂ ಮೂಲಪ್ರಮಾಣಂ ಭವಿಷ್ಯತೀತ್ಯತ ಆಹ – **ಮೂಲಮಿತಿ** ॥ ಅತೀಂದ್ರಿಯೇ ಕ್ರತುಹಿಂಸಾದೇಃ ಪಾಪಸಾಧನತ್ವಾದೌ । ನನು ಸ್ವಸ್ವಾಚಾರ್ಯವಚಾಂಸಿ ಮೂಲಾನಿ ಸ್ಯುರಿತ್ಯತ ಆಹ – **ಸ್ವಸ್ವವಾಗಿತಿ** ॥ ಸ್ವಸ್ವಾಚಾರ್ಯವಾಕ್ ಕಸ್ಯಕಸ್ಯ ವಾದಿನೋ ನ ಸರ್ವಸ್ಯಾಪ್ಯಸ್ತೀತ್ಯರ್ಥಃ। ಅತಸ್ತನ್ಮಾತ್ರೇಣ ಧರ್ಮನಿರ್ಣಯೇ ಪರಸ್ಪರವಿರುದ್ಧಸರ್ವವಾದಿಭಿರುಕ್ತಃ ಸರ್ವೋಽಪಿ ಧರ್ಮಃ ಸ್ಯಾದಿತಿ ಭಾವಃ ॥ ೨೩೫ ॥

**ಪ್ರಾಚಾಂ ವಾಚಸ್ತು ಶೋಚಂತೇ ದೇಹಃ ಕಾರಾಗೃಹಂ ಕಿಲ ।**
**ಅತೋ ಯುಕ್ತ್ಯಾಪಿ ನಾರ್ಥಸ್ತೇ ಯತ್ಸಾ ಹಿಂಸಾಂ ಪ್ರಶಂಸತಿ ॥ ೨೩೬ ॥**

**ಅರ್ಥ–** ಪ್ರಾಚಾಂ = ಪ್ರಾಚೀನರಾದ ವ್ಯಾಸ ವಾಲ್ಮೀಕಿಗಳ, ವಾಚಃ ತು = ವಾಕ್ಯಗಳಾದರೋ, ಶೋಚಂತೇ = ದುಃಖಿಸುತ್ತವೆ, ದೇಹಃ = ದೇಹವು, ಕಾರಾಗೃಹಂ ಕಿಲ = ಬಹುದುಃಖ ಹೇತುವಾದ್ದರಿಂದ ಕಾರಾಗೃಹ ಪ್ರಾಯವಷ್ಟೆ ಅತಃ = ಶಿರಚ್ಛೇದದಿಂದ ಜೀವನನ್ನು ಈ ಕಾರಾಗೃಹದಿಂದ ಬಿಡುಗಡೆ ಮಾಡುವುದೂ, ಪುಣ್ಯಕರವೆಂದೇ ಯುಕ್ತಿಯಿಂದ ಸಿದ್ಧವಾಗುವುದರಿಂದ, ತೇ = ನಿನಗೆ, ಯುಕ್ತ್ಯಾ ಅಪಿ = ಅನುಮಾನದಿಂದ

ಸಹ, ಅರ್ಥಃ ನ = ಪ್ರಯೋಜನವಿಲ್ಲ, ಯತ್ = ಏಕೆಂದರೆ, ಸಾ = ಯುಕ್ತಿಯೂ, ಹಿಂಸಾಂ = ಹಿಂಸೆಯನ್ನೇ, ಪ್ರಶಂಸತಿ = ಪ್ರಶಸ್ತವೆಂದು ಸಾಧಿಸುತ್ತದೆ.

**ಅನುವಾದ–** ಪ್ರಾಚೀನರಾದ ವ್ಯಾಸ ವಾಲ್ಮೀಕಿಗಳ ರಾಮಾಯಣಭಾರತಾದಿ ವಾಕ್ಯಗಳಾದರೋ ನೀನು ಅವುಗಳಿಗೆ ಪ್ರಾಮಾಣ್ಯವನ್ನು ಒಪ್ಪುವುದಿಲ್ಲವಾದ್ದರಿಂದ ದುಃಖಿಸುತ್ತವೆ ದೇಹವು ಬಹು ದುಃಖ ಹೇತುವಾದ್ದರಿಂದ ಕಾರಾಗೃಹ ಪ್ರಾಯವಷ್ಟೆ (ಚಾರ್ವಾಕನನ್ನು ಬಿಟ್ಟು ಅನ್ಯವಾದಿಗಳಿಗೆಲ್ಲ ಈ ಅಭಿಪ್ರಾಯವು ಸಮ್ಮತವಷ್ಟೆ) ಶಿರಚ್ಛೇದದಿಂದ ಜೀವನನ್ನು ಈ ಕಾರಾಗೃಹದಿಂದ ಬಿಡುಗಡೆ ಮಾಡುವುದೂ ಪುಣ್ಯಕರವೆಂದೇ ಯುಕ್ತಿಯಿಂದ ಸಿದ್ಧವಾಗುವುದರಿಂದ ನಿನಗೆ ಅನುಮಾನದಿಂದ ಸಹ ಪ್ರಯೋಜನವಿಲ್ಲ. ಏಕೆಂದರೆ ಯುಕ್ತಿಯೂ ಹಿಂಸೆಯನ್ನೇ ಪ್ರಶಸ್ತವೆಂದು ಸಾಧಿಸುತ್ತದೆ.

**ಭಾವವಿಲಾಸಿನೀ–**ತರ್ಹಿ ಪೂರ್ವೇಷಾಂ ವ್ಯಾಸವಾಲ್ಮೀಕಿಪ್ರಭೃತೀನಾಂ ವಾಚಃ ಪ್ರಮಾಣಾನಿ ಸ್ಯುರಿತ್ಯತಃ ಸತ್ಯಮಿದಂ ನ ತ್ವಯಾ ತಾನಿ ಧರ್ಮಮೂಲತ್ವೇನಾಂಗೀಕ್ರಿಯಂತ ಇತ್ಯಾಹ – **ಪ್ರಾಚಾಮಿತಿ ॥** ವಾಚಸ್ತು ವಾಚಃ ಭಾರತರಾಮಾಯಣಾದ್ಯಾಃ ಶೋಚಂತೇ । ತಾಸಾಂ ತ್ವಯಾ ಪ್ರಾಮಾಣ್ಯಾನಂಗೀಕಾರಾದಿತಿ ಭಾವಃ । ನನು ಯುಕ್ತ್ಯಾ ಧರ್ಮಾಧರ್ಮನಿರ್ಣಯಃ ಕ್ರಿಯತ ಇತ್ಯತಃ ಸಾ ತವೈವ ವಿರುದ್ಧೇತ್ಯಾಹ – **ದೇಹ ಇತಿ ॥** ದೇಹಃ ಬಹುತರದುಃಖಹೇತುತ್ವೇನ ಕಾರಾಗೃಹಂ ಕಾರಾಗೃಹಪ್ರಾಯಮ್ । ಕಿಲೇತ್ಯನೇನ ಚಾರ್ವಾಕವ್ಯತಿರಿಕ್ತಸರ್ವವಾದಿನಾಂ ಅಸ್ಮಿನ್ನರ್ಥೇ ಸಮ್ಮತಿಂ ಸೂಚಯತಿ । ಅತೋ ದೇಹಸ್ಯ ಕಾರಾಗೃಹೋಪಮತ್ವೇನ ಹೇಯತ್ವಾದ್ ಯುಕ್ತ್ಯಾ ಹಿಂಸಾಯಾ ಅಕರ್ತವ್ಯತ್ವೋಪಪಾದಕಯುಕ್ತ್ಯಾಪಿ ತೇ ಅರ್ಥೋ ನ । ಯದ್ ಯಸ್ಮಾತ್ಸಾ ಯುಕ್ತಿರ್ಹಿಂಸಾಂ ಪ್ರಶಂಸತಿ। ಕಾರಾಗೃಹದ್ವಾರೋದ್ಘಾಟನೇನ ತದಂತಸ್ಥಪುರುಷಬಹಿಷ್ಕರಣಸ್ಯ ಪುಣ್ಯಹೇತುತ್ವವದ್ ಬಂಧಕೀಭೂತದೇಹಾಂತಸ್ಥಿತಜೀವಸ್ಯ ಶಿರಶ್ಛೇದೇನ ದೇಹಾದ್ಬಹಿಷ್ಕರಣರೂಪಹಿಂಸಾಂ ಪುಣ್ಯಹೇತುತಯಾ ಸ್ತೌತಿ । ತ್ವದಭಿಮತಾಂ ಹಿಂಸಾಂ ತು ಕಾರಾಗೃಹಾಂತ-ರಾವಸ್ಥಿತಿಹೇತುಪ್ರಯತ್ನವದ್ ಬಂಧಕೀಭೂತದೇಹಗುಹಾಯಾಮೇವ ಸ್ಥಿತಿಹೇತುಭೂತಾ ಪಾಪಹೇತುತ್ವೇನ ನಿಂದತಿ ಚ । ತಸ್ಮಾದ್ಯುಕ್ತ್ಯಾಪಿ ನಾರ್ಥಃ । ಪ್ರತ್ಯುತಾನರ್ಥ ಏವೇತಿ ಪೂರ್ವೇಣಾನ್ವಯಃ ॥ ೨೩೬ ॥

ತನ್ಮಾನಿನೋಽಪ್ಯಮಾನಸ್ಯ ಕಥಂಕಾರಂ ಮಿಥಃ ಕಥಾ ॥ ೨೩೭ ॥

**ಅರ್ಥ–** ತತ್ = ಆದ್ದರಿಂದ, ಮಾನಿನೋಽಪಿ = ಪ್ರತಿವಾದಿಗಳೊಂದಿಗೆ ವಾದ ಮಾಡುವೆನೆಂಬ ಅಭಿಮಾನಿಯಾದ ನಿನಗೆ, ಅಮಾನಸ್ಯ = ಯಾವ ಪ್ರಮಾಣವೂ ಇಲ್ಲದಿರುವುದರಿಂದ, ಮಿಥಃ = ಪರಸ್ಪರವಾಗಿ, ಕಥಾ = ಜಲ್ಪ ವಿತಂಡಗಳೆಂಬ ಕಥೆಯು, ಕಥಂಕಾರಂ ಸ್ಯಾತ್ = ಹೇಗೆ ಸಾಧ್ಯವಾದೀತು? (ಹೇಗಾದರೂ ಕೂಡುವುದೇ ಇಲ್ಲ).

**ಅನುವಾದ–** ಹಾಗಲ್ಲದಿದ್ದರೆ ದ್ರವಿಸುವ ದ್ರವ್ಯತ್ವವಿರುತ್ತದೆಂಬ ಕಾರಣದಿಂದ ಮದ್ಯದಂತೆ ಹಾಲೂ ಸಹ ನಿನ್ನ ಮತದಲ್ಲಿ ಪಾನಕ್ಕೆ ಅನರ್ಹವಾದುದು ಏಕೆ ಅಲ್ಲ? ಆದ್ದರಿಂದ ಅನುಮಾನವು ಆಧಾರವನ್ನು ಅನುಸರಿಸಿಯೇ ಪ್ರಯೋಗಿಸಲ್ಪಡಲರ್ಹವು.

**ಭಾವವಿಲಾಸಿನೀ–**ತದೇವ ವಿಶದಯತಿ – **ನಚೇದಿತಿ** ॥ ಕ್ಷೀರಮಪೇಯಂ ದ್ರವದ್ರವ್ಯತ್ವಾತ್ಸುರಾವದಿತ್ಯನುಮಾನೇನ ತೇ ಮತೇ ಕ್ಷೀರಮಪೇಯಂ ಕಿಂ ಕಿಮರ್ಥಂ ನೇತಿ ಯೋಜನಾ। ತತಃ ಉಕ್ತವಿಧಯಾ ಶುಷ್ಕಾನುಮಾನಸ್ಯಾತಿಪ್ರಸಂಜಕತ್ವಾದಿತ್ಯರ್ಥಃ । ಮೂಲಾನುಗೈವ ಮೂಲ ಪ್ರಮಾಣಾನುಸಾರಿಣ್ಯೇವ ಸಾಽನುಮಾ ಪ್ರವರ್ತತ ಇತ್ಯರ್ಥಃ ॥ ೨೩೪ ॥

**ಮೂಲಂ ನಾತೀಂದ್ರಿಯೇಽಧ್ಯಕ್ಷಂ ಸ್ವಸ್ವವಾಕ್ಕಸ್ಯಕಸ್ಯ ನ ॥ ೨೩೫ ॥**

**ಅರ್ಥ–** ಅತೀಂದ್ರಿಯೇ = ಅತೀಂದ್ರಿಯವಲ್ಲದ ವಿಷಯದಲ್ಲಿ, ಅಧ್ಯಕ್ಷಂ = ಪ್ರತ್ಯಕ್ಷವು, ಮೂಲಂ = ಮೂಲವು, ನ = ಪ್ರಮಾಣವಲ್ಲ (ಆಧಾರವಲ್ಲ) ಅಲ್ಲ (ಆಯಾ ಮತಾಚಾರ್ಯರ ನುಡಿಗಳು ಆಧಾರವಾಗಲೆಂದರೆ), ಸ್ವಸ್ವವಾಕ್ = ಸ್ವ ಸ್ವ (ತಮ್ಮ ತಮ್ಮ) ಆಚಾರ್ಯರ ವಾಕ್ಯವು, ಕಸ್ಯ ಕಸ್ಯ = ಯಾವ ಯಾವ ವಾದಿಗೆ, ನ = ಇಲ್ಲ? ಎಲ್ಲರಿಗೂ ಇದ್ದೇ ಇದೆ.

**ಅನುವಾದ–** ಅತೀಂದ್ರಿಯ ವಿಷಯದಲ್ಲಿ ಪ್ರತ್ಯಕ್ಷವು ಮೂಲವಲ್ಲ. ತಮ್ಮ ತಮ್ಮ ವಾಕ್ಯಗಳೇ ಮೂಲವಾಗುವುದಾದರೆ ಅವು ಯಾರಿಗೆ ಇಲ್ಲ.

**ಭಾವವಿಲಾಸಿನೀ–**ನನು ಪ್ರತ್ಯಕ್ಷಂ ಮೂಲಪ್ರಮಾಣಂ ಭವಿಷ್ಯತೀತ್ಯತ ಆಹ – **ಮೂಲಮಿತಿ** ॥ ಅತೀಂದ್ರಿಯೇ ಕ್ರತುಹಿಂಸಾದೇಃ ಪಾಪಸಾಧನತ್ವಾದೌ । ನನು ಸ್ವಸ್ವಾಚಾರ್ಯವಚಾಂಸಿ ಮೂಲಾನಿ ಸ್ಯುರಿತ್ಯತ ಆಹ – **ಸ್ವಸ್ವವಾಗಿತಿ** ॥ ಸ್ವಸ್ವಾಚಾರ್ಯವಾಕ್ ಕಸ್ಯಕಸ್ಯ ವಾದಿನೋ ನ ಸರ್ವಸ್ಯಾಪ್ಯಸ್ತೀತ್ಯರ್ಥಃ। ಅತಸ್ತನ್ಮಾತ್ರೇಣ ಧರ್ಮನಿರ್ಣಯೇ ಪರಸ್ಪರವಿರುದ್ಧಸರ್ವವಾದಿಭಿರುಕ್ತಃ ಸರ್ವೋಽಪಿ ಧರ್ಮಃ ಸ್ಯಾದಿತಿ ಭಾವಃ ॥ ೨೩೫ ॥

**ಪ್ರಾಚಾಂ ವಾಚಸ್ತು ಶೋಚಂತೇ ದೇಹಃ ಕಾರಾಗೃಹಂ ಕಿಲ ।**
**ಅತೋ ಯುಕ್ತ್ಯಾಪಿ ನಾರ್ಥಸ್ತೇ ಯತ್ಸಾ ಹಿಂಸಾಂ ಪ್ರಶಂಸತಿ ॥ ೨೩೬ ॥**

**ಅರ್ಥ–** ಪ್ರಾಚಾಂ = ಪ್ರಾಚೀನರಾದ ವ್ಯಾಸ ವಾಲ್ಮೀಕಿಗಳ, ವಾಚಃ ತು = ವಾಕ್ಯಗಳಾದರೋ, ಶೋಚಂತೇ = ದುಃಖಿಸುತ್ತವೆ, ದೇಹಃ = ದೇಹವು, ಕಾರಾಗೃಹಂ ಕಿಲ = ಬಹುದುಃಖ ಹೇತುವಾದ್ದರಿಂದ ಕಾರಾಗೃಹ ಪ್ರಾಯವಷ್ಟೆ ಅತಃ = ಶಿರಚ್ಛೇದದಿಂದ ಜೀವನನ್ನು ಈ ಕಾರಾಗೃಹದಿಂದ ಬಿಡುಗಡೆ ಮಾಡುವುದೂ, ಪುಣ್ಯಕರವೆಂದೇ ಯುಕ್ತಿಯಿಂದ ಸಿದ್ಧವಾಗುವುದರಿಂದ, ತೇ = ನಿನಗೆ, ಯುಕ್ತ್ಯಾ ಅಪಿ = ಅನುಮಾನದಿಂದ

ಸಹ, ಅರ್ಥಃ ನ = ಪ್ರಯೋಜನವಿಲ್ಲ, ಯತ್ = ಏಕೆಂದರೆ, ಸಾ = ಯುಕ್ತಿಯೂ, ಹಿಂಸಾಂ = ಹಿಂಸೆಯನ್ನೇ, ಪ್ರಶಂಸತಿ = ಪ್ರಶಸ್ತವೆಂದು ಸಾಧಿಸುತ್ತದೆ.

**ಅನುವಾದ–** ಪ್ರಾಚೀನರಾದ ವ್ಯಾಸ ವಾಲ್ಮೀಕಿಗಳ ರಾಮಾಯಣಭಾರತಾದಿ ವಾಕ್ಯಗಳಾದರೋ ನೀನು ಅವುಗಳಿಗೆ ಪ್ರಾಮಾಣ್ಯವನ್ನು ಒಪ್ಪುವುದಿಲ್ಲವಾದ್ದರಿಂದ ದುಃಖಿಸುತ್ತವೆ ದೇಹವು ಬಹು ದುಃಖ ಹೇತುವಾದ್ದರಿಂದ ಕಾರಾಗೃಹ ಪ್ರಾಯವಷ್ಟೆ (ಚಾರ್ವಾಕನನ್ನು ಬಿಟ್ಟು ಅನ್ಯವಾದಿಗಳಿಗೆಲ್ಲ ಈ ಅಭಿಪ್ರಾಯವು ಸಮ್ಮತವಷ್ಟೆ) ಶಿರಚ್ಛೇದದಿಂದ ಜೀವನನ್ನು ಈ ಕಾರಾಗೃಹದಿಂದ ಬಿಡುಗಡೆ ಮಾಡುವುದೂ ಪುಣ್ಯಕರವೆಂದೇ ಯುಕ್ತಿಯಿಂದ ಸಿದ್ಧವಾಗುವುದರಿಂದ ನಿನಗೆ ಅನುಮಾನದಿಂದ ಸಹ ಪ್ರಯೋಜನವಿಲ್ಲ. ಏಕೆಂದರೆ ಯುಕ್ತಿಯೂ ಹಿಂಸೆಯನ್ನೇ ಪ್ರಶಸ್ತವೆಂದು ಸಾಧಿಸುತ್ತದೆ.

**ಭಾವವಿಲಾಸಿನೀ–**ತರ್ಹಿ ಪೂರ್ವೇಷಾಂ ವ್ಯಾಸವಾಲ್ಮೀಕಿಪ್ರಭೃತೀನಾಂ ವಾಚಃ ಪ್ರಮಾಣಾನಿ ಸ್ಯುರಿತ್ಯತಃ ಸತ್ಯಮಿದಂ ನ ತ್ವಯಾ ತಾನಿ ಧರ್ಮಮೂಲತ್ವೇನಾಂಗೀಕ್ರಿಯಂತ ಇತ್ಯಾಹ – **ಪ್ರಾಚಾಮಿತಿ** ॥ ವಾಚಸ್ತು ವಾಚಃ ಭಾರತರಾಮಾಯಣಾದ್ಯಾಃ ಶೋಚಂತೇ । ತಾಸಾಂ ತ್ವಯಾ ಪ್ರಾಮಾಣ್ಯಾನಂಗೀಕಾರಾದಿತಿ ಭಾವಃ । ನನು ಯುಕ್ತ್ಯಾ ಧರ್ಮಾಧರ್ಮನಿರ್ಣಯಃ ಕ್ರಿಯತ ಇತ್ಯತಃ ಸಾ ತವೈವ ವಿರುದ್ಧೇತ್ಯಾಹ – **ದೇಹ ಇತಿ** ॥ ದೇಹಃ ಬಹುತರದುಃಖಹೇತುತ್ವೇನ ಕಾರಾಗೃಹಂ ಕಾರಾಗೃಹಪ್ರಾಯಮ್ । ಕಿಲೇತ್ಯನೇನ ಚಾರ್ವಾಕವ್ಯತಿರಿಕ್ತಸರ್ವವಾದಿನಾಂ ಅಸ್ಮಿನ್ನರ್ಥೇ ಸಮ್ಮತಿಂ ಸೂಚಯತಿ । ಅತೋ ದೇಹಸ್ಯ ಕಾರಾಗೃಹೋಪಮತ್ವೇನ ಹೇಯತ್ವಾದ್ ಯುಕ್ತ್ಯಾ ಹಿಂಸಾಯಾ ಅಕರ್ತವ್ಯತ್ವೋಪಪಾದಕಯುಕ್ತ್ಯಾಪಿ ತೇ ಅರ್ಥೋ ನ । ಯದ್ ಯಸ್ಮಾತ್ಸಾ ಯುಕ್ತಿರ್ಹಿಂಸಾಂ ಪ್ರಶಂಸತಿ। ಕಾರಾಗೃಹದ್ವಾರೋದ್ಘಾಟನೇನ ತದಂತಸ್ಥಪುರುಷಬಹಿಷ್ಕರಣಸ್ಯ ಪುಣ್ಯಹೇತುತ್ವವದ್ ಬಂಧಕೀಭೂತದೇಹಾಂತಸ್ಥಿತಜೀವಸ್ಯ ಶಿರಶ್ಛೇದೇನ ದೇಹಾದ್ಬಹಿಷ್ಕರಣರೂಪಹಿಂಸಾಂ ಪುಣ್ಯಹೇತುತಯಾ ಸ್ತೌತಿ । ತ್ವದಭಿಮತಾಂ ಹಿಂಸಾಂ ತು ಕಾರಾಗೃಹಾಂತರಾವಸ್ಥಿತಿಹೇತುಪ್ರಯತ್ನವದ್ ಬಂಧಕೀಭೂತದೇಹಗುಹಾಯಾಮೇವ ಸ್ಥಿತಿಹೇತುಭೂತಾ ಪಾಪಹೇತುತ್ವೇನ ನಿನ್ದತಿ ಚ । ತಸ್ಮಾದ್ಯುಕ್ತ್ಯಾಪಿ ನಾರ್ಥಃ । ಪ್ರತ್ಯುತಾನರ್ಥ ಏವೇತಿ ಪೂರ್ವೇಣಾನ್ವಯಃ ॥ ೨೩೬ ॥

ತನ್ಮಾನಿನೋಽಪ್ಯಮಾನಸ್ಯ ಕಥಂಕಾರಂ ಮಿಥಃ ಕಥಾ ॥ ೨೩೭ ॥

**ಅರ್ಥ–** ತತ್ = ಆದ್ದರಿಂದ, ಮಾನಿನೋಽಪಿ = ಪ್ರತಿವಾದಿಗಳೊಂದಿಗೆ ವಾದ ಮಾಡುವೆನೆಂಬ ಅಭಿಮಾನಿಯಾದ ನಿನಗೆ, ಅಮಾನಸ್ಯ = ಯಾವ ಪ್ರಮಾಣವೂ ಇಲ್ಲದಿರುವುದರಿಂದ, ಮಿಥಃ = ಪರಸ್ಪರವಾಗಿ, ಕಥಾ = ಜಲ್ಪ ವಿತಂಡಗಳೆಂಬ ಕಥೆಯು, ಕಥಂಕಾರಂ ಸ್ಯಾತ್ = ಹೇಗೆ ಸಾಧ್ಯವಾದೀತು? (ಹೇಗಾದರೂ ಕೂಡುವುದೇ ಇಲ್ಲ).

**ಅನುವಾದ–** ಆದ್ದರಿಂದ ನಿನಗೆ ನಾನು ಪ್ರತಿವಾದಿಗಳ ಜೊತೆಯಲ್ಲಿ ಚರ್ಚೆಮಾಡುತ್ತೇನೆ ಎಂಬ ಅಭಿಮಾನವಿದ್ದರೂ, ನಿನ್ನ ಬಳಿ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಪರಸ್ಪರವಾಗಿ ಜಲ್ಪ ಅಥವಾ ವಿತಂಡಾರೂಪವಾದ ಕಥೆಯು ಹೇಗೆ ಸಂಭವಿಸುತ್ತದೆ?

**ಭಾವವಿಲಾಸಿನೀ–**ಯದೀತ್ಯಾದಿನೋಕ್ತಮುಪಸಂಹರತಿ – **ತದಿತಿ** ॥ ಮಾನಿನೋಽಪಿ ಪ್ರತಿವಾದಿಭಿಃ ಕಥಾಂ ಕರೋಮೀತ್ಯಭಿಮಾನಿನೋಽಪಿ ಅಮಾನಸ್ಯ ಉಕ್ತವಿಧಯಾ ಸ್ವಾಭಿಮತಾರ್ಥೇ ಪ್ರಮಾಣಶೂನ್ಯಸ್ಯ ಮಿಥಃ ಪರಸ್ಪರಂ ಕಥಾ ಜಲ್ಪಾದಿಃ ಕಥಂಕಾರಂ ಸ್ಯಾತ್ ಕಿಂ ಕೃತ್ವಾ ಸ್ಯಾತ್ । ನ ಕಥಮಪೀತಿ ಭಾವಃ ॥ ೨೩೭ ॥

**ಕಿಂಚ ಯುಕ್ತ್ಯೇಕಭಕ್ತಶ್ಚೇತ್ ಕಥಂ ಮಾಂಸಂ ನಿಷೇಧಸಿ ॥ ೨೩೮ ॥**

**ಅರ್ಥ–** ಕಿಂಚ = ಮತ್ತೇನೆಂದರೆ, ಯುಕ್ತ್ಯೇಕಭಕ್ತಃ ಚೇತ್ = ಯುಕ್ತಿಮಾತ್ರದಲ್ಲಿ ಆದರವುಳ್ಳವನಾದರೆ, ಕಥಂ = ಹೇಗೆ, ಮಾಂಸಂ = ಮಾಂಸಾಹಾರವನ್ನು, ನಿಷೇಧಸಿ = ವಿರೋಧಿಸುವಿ?

**ಅನುವಾದ–** ಮತ್ತೇನೆಂದರೆ ಯುಕ್ತಿ ಮಾತ್ರದಲ್ಲಿ ಆದರವುಳ್ಳವನಾದರೆ ಹೇಗೆ ಮಾಂಸಾಹಾರವನ್ನು ವಿರೋಧಿಸುವಿ?

**ಭಾವವಿಲಾಸಿನೀ–**ಕೇವಲಯುಕ್ತಿಸಿದ್ಧಾರ್ಥಾಂಗೀಕಾರೇ ಬಾಧಕಾಂತರಾಣಿ ಚಾಹ – **ಕಿಂಚೇತ್ಯಾದಿನಾ** ॥ ೨೩೮ ॥

**ಭೂತೇಭ್ಯೋಽನ್ಯನ್ನವೈ ಮಾಂಸೇನಾನ್ಯದನ್ನೇಽಪಿದೃಶ್ಯತೇ ।**
**ಏಕಂ ತ್ಯಾಜ್ಯಂ ಭೋಜ್ಯಮನ್ಯದಿತ್ಯೇತತ್ಕೇನ ತೇ ಮತೇ ॥ ೨೩೯ ॥**

**ಅರ್ಥ–**ಮಾಂಸೇ = ಮಾಂಸದಲ್ಲಿ, ಭೂತೇಭ್ಯಃ = ಪಂಚಮಹಾಭೂತಗಳಿಂದ, ಅನ್ಯತ್ = ಬೇರೆಯಾದ ವಸ್ತುವು, ನವೈ = ಇಲ್ಲವಷ್ಟೆ ಅನ್ನೇ ಅಪಿ = ಅನ್ನದಲ್ಲಿ ಸಹ, ಅನ್ಯತ್ = ಅನ್ಯ ವಸ್ತುವು, ನ ದೃಶ್ಯತೇ = ಕಂಡುಬರುವುದಿಲ್ಲ, ತತ್ = ಆದ್ದರಿಂದ, ತೇ ಮತೇ = ನಿನ್ನ ಮತದಲ್ಲಿ, ಏಕಂ = ಒಂದು (ಮಾಂಸವು), ತ್ಯಾಜ್ಯಂ = ತ್ಯಾಜ್ಯವು, ಅನ್ಯತ್ = ಮತ್ತೊಂದು (ಅನ್ನವು), ಭೋಜ್ಯಂ = ಭೋಜ್ಯವು (ಭೋಗಾರ್ಹವು), ಇತಿ ಏತತ್ = ಹೀಗೆಂಬುದು, ಕೇನ = ಯಾವ ಕಾರಣದಿಂದ?

**ಅನುವಾದ–** ಮಾಂಸದಲ್ಲಿ ಪಂಚ ಮಹಾಭೂತಗಳಿಂದ ಬೇರೆಯಾದ ವಸ್ತುವು ಇಲ್ಲವಷ್ಟೆ? ಅನ್ನದಲ್ಲಿ ಸಹ ಪಂಚಮಹಾಭೂತಗಳಿಗಿಂತ ಅನ್ಯವಸ್ತುವು ಕಂಡುಬರುವುದಿಲ್ಲ, ಆದ್ದರಿಂದ ನಿನ್ನ ಮತದಲ್ಲಿ ಒಂದು (ಮಾಂಸವು) ತ್ಯಾಜ್ಯವು

ಮತ್ತೊಂದು (ಅನ್ನವು) ಭೋಜ್ಯವು (ಭೋಗಾರ್ಹವು) ಹೀಗೆಂಬುದು ಯಾವ ಕಾರಣದಿಂದ?

**ಭಾವವಿಲಾಸಿನೀ–**ಯುಕ್ತ್ಯೇಕಶರಣಸ್ಯ ಮಾಂಸಭಕ್ಷನಿಷೇಧಾಯೋಗಃ ಕಥಮಿತ್ಯತ ಆಹ – **ಭೂತೇಭ್ಯ ಇತಿ** ॥ ಮಾಂಸೇ ಭೂತೇಭ್ಯಃ ಪಂಚಮಹಾಭೂತೇಭ್ಯೋऽನ್ಯದ್ ವಸ್ತು ನವೈ ನಾಸ್ತಿ ವೈ । ಅನ್ನೇऽಪಿ ಭೂತೇಭ್ಯೋऽನ್ಯದ್ವಸ್ತು ನ ದೃಶ್ಯತೇ । ತಸ್ಮಾದೇಕಂ ಮಾಂಸಂ ತ್ಯಾಜ್ಯಮನ್ಯದನ್ನಂ ಭೋಜ್ಯಮಿತ್ಯೇತತ್ ತೇ ಮತೇ ಕೇನ ನ ಕೇನಾಪಿ ಉಭಯೋರಪಿ ಪಾಂಚಭೌತಿಕತ್ವಾದಿತಿ ಭಾವಃ । ಸುಗಂಧದುರ್ಗಂಧಾಭ್ಯಾಂ ವಿಶೇಷ ಇತಿ ಚೇತ್ತರ್ಹಿ ಸೌಕರ್ಯಾಭಾವಮಾತ್ರಮ್, ನ ಪಾಪಹೇತುತಾ । ದುಃಖಸಹಿಷ್ಣುತ್ವೇನ ಪುಣ್ಯಹೇತುತಾಯಾ ಏವೌಚಿತ್ಯಾತ್ । ಕಥಮನ್ಯಥಾ ಪಂಚಮಲಧಾರಣೇನ ಸ್ವಾಂಗದೌರ್ಗಂಧ್ಯಸ್ಯ ಮಹಾವ್ರತತಯಾ ಪುಣ್ಯಹೇತುತಾಂಗೀಕಾರಃ । ನಚ ಸೌಕರ್ಯಾಭಾವೋऽಪಿ । ಪಾಕವಿಶೇಷೇಣ ಸುಗಂಧೀಕರಣಸಂಭವಾತ್ । ಅಭಿನವ-ಮಾಂಸೇ ದುರ್ಗಂಧಾದರ್ಶನೇನ ತದ್ಭಕ್ಷಣಪ್ರಸಂಗಾಚ್ಚ । ಪರ್ಯುಷಿತಮಾಂಸೇ ದುರ್ಗಂಧ-ದರ್ಶನಸ್ಯ ಪರ್ಯುಷಿತಾನ್ನೇ ದುರ್ಗಂಧದರ್ಶನಸಮಾನ ಯೋಗಕ್ಷೇಮತ್ವಾತ್ । ದಧಿಲವ-ಣಾದಿನಾ ಪರ್ಯುಷಿತಾನ್ನೇ ದುರ್ಗಂಧಪರಿಹಾರಶ್ಚೇತ್ ಪರ್ಯುಷಿತಮಾಂಸೇऽಪಿ ಸಂಸ್ಕಾರಾ-ದಿನಾ ತತ್ಪರಿಹಾರ ಇತಿ ಸಮಂ ಸಮಾಧಾನಮ್ । ಅತೋ ನ ಕೋऽಪಿ ವಿಶೇಷಃ ॥ ೨೩೯ ॥

**ಹಿಂಸಾದೋಷೇಣ ಯೌಕ್ತಸ್ಯ ಯಜ್ಞಾವಜ್ಞಾ ಚ ತೇ ಕಥಮ್ ॥ ೨೪೦ ॥**

**ಅರ್ಥ–** ಯೌಕ್ತಸ್ಯ = ಯುಕ್ತಿ ಮಾತ್ರ ಶರಣನಾದ, ತೇ = ನಿನಗೆ, ಹಿಂಸಾದೋಷೇಣ = (ಯಜ್ಞಪಶುವಧವೆಂಬ) ಹಿಂಸಾ ದೋಷದಿಂದ, ಯಜ್ಞಾವಜ್ಞಾ ಚ = ಯಜ್ಞದಲ್ಲಿ ಹೇಯತಾ ಬುದ್ಧಿಯಾದರೋ, ಕಥಂ = ಹೇಗೆ (ಯುಕ್ತವಾಗುತ್ತದೆ?)

**ಅನುವಾದ–** ಯುಕ್ತಿಮಾತ್ರಶರಣನಾದ ನಿನಗೆ ಹಿಂಸಾದೋಷದಿಂದ ಯಜ್ಞದಲ್ಲಿ ಹೇಯತಾಬುದ್ಧಿಯಾದರೂ ಹೇಗೆ?

**ಭಾವವಿಲಾಸಿನೀ–**ಯೌಕ್ತಸ್ಯ ಯುಕ್ತಿಮಾತ್ರಶರಣಸ್ಯ ಹಿಂಸಾದೋಷೇಣ ಯಾಜ್ಞೀಯ-ಪಶುಹಿಂಸಾಖ್ಯದೋಷೇಣ ಯಜ್ಞಾವಜ್ಞಾ ಚ ತೇ ಮತೇ ಕಥಂ ನ ಕಥಂಚಿತ್ । ಹಿಂಸಾಯಾ ಏವ ಪುಣ್ಯಹೇತುತ್ವಸ್ಯ ಪೂರ್ವೋಕ್ತರೀತ್ಯಾ ಯೌಕ್ತತ್ವಾದಿತಿ ಭಾವಃ ॥ ೨೪೦ ॥

**ಜಿನಮಂದಿರನಿರ್ಮಾಣೇ ತದ್ಯಾತ್ರಾಯಾಂ ಚ ಕೋಟಿಶಃ ॥**
**ಭೂಶೋಧಾದ್ಯೈಃ ಪಾದಘಾತೈರ್ಹಿಂಸಾಸ್ತೇ ಮಖವನ್ನ ಕಿಮ್ ॥ ೨೪೧ ॥**

**ಅರ್ಥ–** ಜಿನಮಂದಿರ ನಿರ್ಮಾಣೇ = ಜಿನಮಂದಿರದ ನಿರ್ಮಾಣದಲ್ಲಿ ಭೂಶೋಧಾದ್ಯೈಃ = ಭೂಮಿಯನ್ನು ಶುದ್ಧಿಗೊಳಿಸುವ ಮುಂತಾದ ಕಾರ್ಯಗಳಿಂದಲೂ, ತದ್ಯಾತ್ರಾಯಾಂ ಚ = ಜಿನ ಸಂಚಾರದಿಂದಲೂ, ಪಾದಘಾತೈಃ = ಕಾಲಿನಿಂದ

**ಅನುವಾದ–** ಆದ್ದರಿಂದ ನಿನಗೆ ನಾನು ಪ್ರತಿವಾದಿಗಳ ಜೊತೆಯಲ್ಲಿ ಚರ್ಚೆಮಾಡುತ್ತೇನೆ ಎಂಬ ಅಭಿಮಾನವಿದ್ದರೂ, ನಿನ್ನ ಬಳಿ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಪರಸ್ಪರವಾಗಿ ಜಲ್ಪ ಅಥವಾ ವಿತಂಡಾರೂಪವಾದ ಕಥೆಯು ಹೇಗೆ ಸಂಭವಿಸುತ್ತದೆ?

**ಭಾವವಿಲಾಸಿನೀ–**ಯದೀತ್ಯಾದಿನೋಕ್ತಮುಪಸಂಹರತಿ – **ತದಿತಿ** ॥ ಮಾನಿನೋಽಪಿ ಪ್ರತಿವಾದಿಭಿಃ ಕಥಾಂ ಕರೋಮೀತ್ಯಭಿಮಾನಿನೋಽಪಿ ಅಮಾನಸ್ಯ ಉಕ್ತವಿಧಯಾ ಸ್ವಾಭಿಮತಾರ್ಥೇ ಪ್ರಮಾಣಶೂನ್ಯಸ್ಯ ಮಿಥಃ ಪರಸ್ಪರಂ ಕಥಾ ಜಲ್ಪಾದಿಃ ಕಥಂಕಾರಂ ಸ್ಯಾತ್ ಕಿಂ ಕೃತ್ವಾ ಸ್ಯಾತ್ । ನ ಕಥಮಪೀತಿ ಭಾವಃ ॥ ೨೩೭ ॥

**ಕಿಂಚ ಯುಕ್ತ್ಯೇಕಭಕ್ತಶ್ಚೇತ್ ಕಥಂ ಮಾಂಸಂ ನಿಷೇಧಸಿ ॥ ೨೩೮ ॥**

**ಅರ್ಥ–** ಕಿಂಚ = ಮತ್ತೇನೆಂದರೆ, ಯುಕ್ತ್ಯೇಕಭಕ್ತಃ ಚೇತ್ = ಯುಕ್ತಿಮಾತ್ರದಲ್ಲಿ ಆದರವುಳ್ಳವನಾದರೆ, ಕಥಂ = ಹೇಗೆ, ಮಾಂಸಂ = ಮಾಂಸಾಹಾರವನ್ನು, ನಿಷೇಧಸಿ = ವಿರೋಧಿಸುವಿ?

**ಅನುವಾದ–** ಮತ್ತೇನೆಂದರೆ ಯುಕ್ತಿ ಮಾತ್ರದಲ್ಲಿ ಆದರವುಳ್ಳವನಾದರೆ ಹೇಗೆ ಮಾಂಸಾಹಾರವನ್ನು ವಿರೋಧಿಸುವಿ?

**ಭಾವವಿಲಾಸಿನೀ–**ಕೇವಲಯುಕ್ತಿಸಿದ್ಧಾರ್ಥಾಂಗೀಕಾರೇ ಬಾಧಕಾಂತರಾಣಿ ಚಾಹ – **ಕಿಂಚೇತ್ಯಾದಿನಾ** ॥ ೨೩೮ ॥

**ಭೂತೇಭ್ಯೋಽನ್ಯನ್ನವೈ ಮಾಂಸೇನಾನ್ಯದನ್ನೇಽಪಿದೃಶ್ಯತೇ ।**
**ಏಕಂ ತ್ಯಾಜ್ಯಂ ಭೋಜ್ಯಮನ್ಯದಿತ್ಯೇತತ್ಕೇನ ತೇ ಮತೇ ॥ ೨೩೯ ॥**

**ಅರ್ಥ–**ಮಾಂಸೇ = ಮಾಂಸದಲ್ಲಿ, ಭೂತೇಭ್ಯಃ = ಪಂಚಮಹಾಭೂತಗಳಿಂದ, ಅನ್ಯತ್ = ಬೇರೆಯಾದ ವಸ್ತುವು, ನವೈ = ಇಲ್ಲವಷ್ಟೆ ಅನ್ನೇ ಅಪಿ = ಅನ್ನದಲ್ಲಿ ಸಹ, ಅನ್ಯತ್ = ಅನ್ಯ ವಸ್ತುವು, ನ ದೃಶ್ಯತೇ = ಕಂಡುಬರುವುದಿಲ್ಲ, ತತ್ = ಆದ್ದರಿಂದ, ತೇ ಮತೇ = ನಿನ್ನ ಮತದಲ್ಲಿ, ಏಕಂ = ಒಂದು (ಮಾಂಸವು), ತ್ಯಾಜ್ಯಂ = ತ್ಯಾಜ್ಯವು, ಅನ್ಯತ್ = ಮತ್ತೊಂದು (ಅನ್ನವು), ಭೋಜ್ಯಂ = ಭೋಜ್ಯವು (ಭೋಗಾರ್ಹವು), ಇತಿ ಏತತ್ = ಹೀಗೆಂಬುದು, ಕೇನ = ಯಾವ ಕಾರಣದಿಂದ?

**ಅನುವಾದ–** ಮಾಂಸದಲ್ಲಿ ಪಂಚ ಮಹಾಭೂತಗಳಿಂದ ಬೇರೆಯಾದ ವಸ್ತುವು ಇಲ್ಲವಷ್ಟೆ? ಅನ್ನದಲ್ಲಿ ಸಹ ಪಂಚಮಹಾಭೂತಗಳಿಗಿಂತ ಅನ್ಯವಸ್ತುವು ಕಂಡುಬರುವುದಿಲ್ಲ, ಆದ್ದರಿಂದ ನಿನ್ನ ಮತದಲ್ಲಿ ಒಂದು (ಮಾಂಸವು) ತ್ಯಾಜ್ಯವು

ಮತ್ತೊಂದು (ಅನ್ನವು) ಭೋಜ್ಯವು (ಭೋಗಾರ್ಹವು) ಹೀಗೆಂಬುದು ಯಾವ ಕಾರಣದಿಂದ?

**ಭಾವವಿಲಾಸಿನೀ–**ಯುಕ್ತ್ಯೇಕಶರಣಸ್ಯ ಮಾಂಸಭಕ್ಷನಿಷೇಧಾಯೋಗಃ ಕಥಮಿತ್ಯತ ಆಹ – **ಭೂತೇಭ್ಯ ಇತಿ** ॥ ಮಾಂಸೇ ಭೂತೇಭ್ಯಃ ಪಂಚಮಹಾಭೂತೇಭ್ಯೋಽನ್ಯದ್ ವಸ್ತು ನವೈ ನಾಸ್ತಿ ವೈ । ಅನ್ನೇಽಪಿ ಭೂತೇಭ್ಯೋಽನ್ಯದ್ವಸ್ತು ನ ದೃಶ್ಯತೇ । ತಸ್ಮಾದೇಕಂ ಮಾಂಸಂ ತ್ಯಾಜ್ಯಮನ್ಯದನ್ನಂ ಭೋಜ್ಯಮಿತ್ಯೇತತ್ ತೇ ಮತೇ ಕೇನ ನ ಕೇನಾಪಿ ಉಭಯೋರಪಿ ಪಾಂಚಭೌತಿಕತ್ವಾದಿತಿ ಭಾವಃ । ಸುಗಂಧದುರ್ಗಂಧಾಭ್ಯಾಂ ವಿಶೇಷ ಇತಿ ಚೇತ್ತರ್ಹಿ ಸೌಕರ್ಯಾಭಾವಮಾತ್ರಮ್, ನ ಪಾಪಹೇತುತಾ । ದುಃಖಸಹಿಷ್ಣುತ್ವೇನ ಪುಣ್ಯಹೇತುತಾಯಾ ಏವೌಚಿತ್ಯಾತ್ । ಕಥಮನ್ಯಥಾ ಪಂಚಮಲಧಾರಣೇನ ಸ್ವಾಂಗದೌರ್ಗಂಧ್ಯಸ್ಯ ಮಹಾವ್ರತತಯಾ ಪುಣ್ಯಹೇತುತಾಂಗೀಕಾರಃ । ನಚ ಸೌಕರ್ಯಾಭಾವೋಽಪಿ । ಪಾಕವಿಶೇಷೇಣ ಸುಗಂಧೀಕರಣಸಂಭವಾತ್ । ಅಭಿನವ-ಮಾಂಸೇ ದುರ್ಗಂಧಾದರ್ಶನೇನ ತದ್ಭಕ್ಷಣಪ್ರಸಂಗಾಚ್ಚ । ಪರ್ಯುಷಿತಮಾಂಸೇ ದುರ್ಗಂಧ-ದರ್ಶನಸ್ಯ ಪರ್ಯುಷಿತಾನ್ನೇ ದುರ್ಗಂಧದರ್ಶನಸಮಾನ ಯೋಗಕ್ಷೇಮತ್ವಾತ್ । ದಧಿಲವ-ಣಾದಿನಾ ಪರ್ಯುಷಿತಾನ್ನೇ ದುರ್ಗಂಧಪರಿಹಾರಶ್ಚೇತ್ ಪರ್ಯುಷಿತಮಾಂಸೇಽಪಿ ಸಂಸ್ಕಾರಾ-ದಿನಾ ತತ್ಪರಿಹಾರ ಇತಿ ಸಮಂ ಸಮಾಧಾನಮ್ । ಅತೋ ನ ಕೋಽಪಿ ವಿಶೇಷಃ ॥ ೨೩೯ ॥

**ಹಿಂಸಾದೋಷೇಣ ಯೌಕ್ತಸ್ಯ ಯಜ್ಞಾವಜ್ಞಾ ಚ ತೇ ಕಥಮ್ ॥ ೨೪೦ ॥**

**ಅರ್ಥ–** ಯೌಕ್ತಸ್ಯ = ಯುಕ್ತಿ ಮಾತ್ರ ಶರಣನಾದ, ತೇ = ನಿನಗೆ, ಹಿಂಸಾದೋಷೇಣ = (ಯಜ್ಞಪಶುವಧವೆಂಬ) ಹಿಂಸಾ ದೋಷದಿಂದ, ಯಜ್ಞಾವಜ್ಞಾ ಚ = ಯಜ್ಞದಲ್ಲಿ ಹೇಯತಾ ಬುದ್ಧಿಯಾದರೋ, ಕಥಂ = ಹೇಗೆ (ಯುಕ್ತವಾಗುತ್ತದೆ?)

**ಅನುವಾದ–** ಯುಕ್ತಿಮಾತ್ರಶರಣನಾದ ನಿನಗೆ ಹಿಂಸಾದೋಷದಿಂದ ಯಜ್ಞದಲ್ಲಿ ಹೇಯತಾಬುದ್ಧಿಯಾದರೂ ಹೇಗೆ?

**ಭಾವವಿಲಾಸಿನೀ–**ಯೌಕ್ತಸ್ಯ ಯುಕ್ತಿಮಾತ್ರಶರಣಸ್ಯ ಹಿಂಸಾದೋಷೇಣ ಯಾಜ್ಞೀಯ-ಪಶುಹಿಂಸಾಖ್ಯದೋಷೇಣ ಯಜ್ಞಾವಜ್ಞಾ ಚ ತೇ ಮತೇ ಕಥಂ ನ ಕಥಂಚಿತ್ । ಹಿಂಸಾಯಾ ಏವ ಪುಣ್ಯಹೇತುತ್ವಸ್ಯ ಪೂರ್ವೋಕ್ತರೀತ್ಯಾ ಯೌಕ್ತತ್ವಾದಿತಿ ಭಾವಃ ॥ ೨೪೦ ॥

**ಜಿನಮಂದಿರನಿರ್ಮಾಣೇ ತದ್ಯಾತ್ರಾಯಾಂ ಚ ಕೋಟಿಶಃ ॥**
**ಭೂಶೋಧಾದ್ಯೈಃ ಪಾದಘಾತೈರ್ಹಿಂಸಾಸ್ತೇ ಮಖವನ್ನ ಕಿಮ್ ॥ ೨೪೧ ॥**

**ಅರ್ಥ–** ಜಿನಮಂದಿರ ನಿರ್ಮಾಣೇ = ಜಿನಮಂದಿರದ ನಿರ್ಮಾಣದಲ್ಲಿ ಭೂಶೋಧಾದ್ಯೈಃ = ಭೂಮಿಯನ್ನು ಶುದ್ಧಿಗೊಳಿಸುವ ಮುಂತಾದ ಕಾರ್ಯಗಳಿಂದಲೂ, ತದ್ಯಾತ್ರಾಯಾಂ ಚ = ಜಿನ ಸಂಚಾರದಿಂದಲೂ, ಪಾದಘಾತೈಃ = ಕಾಲಿನಿಂದ

ತುಳಿಯುವುದರಿಂದಲೂ (ಸಂಭವಿಸುವ) ಕೋಟಿಶಃ = ಬಹುಕೋಟಿ ಸಂಖ್ಯಾಕವಾದ, ಹಿಂಸಾಃ = ಪ್ರಾಣಿ ಹಿಂಸೆಗಳು, ತೇ = ನಿನ್ನ ಮತದಲ್ಲಿ, ಮಖವತ್ = ಯಜ್ಞದಲ್ಲಿ ಸಂಭವಿಸುವ ಹಿಂಸೆಯಂತೆ, ನಕಿಂ = ಅಲ್ಲವೇನು?

**ಅನುವಾದ–** ಜಿನಮಂದಿರದ ನಿರ್ಮಾಣದಲ್ಲಿ ಭೂಮಿಯನ್ನು ಶುದ್ಧಿಗೊಳಿಸುವ ಮುಂತಾದ ಕಾರ್ಯಗಳಿಂದಲೂ, ಜಿನ ಸಂಚಾರದಿಂದಲೂ ಕಾಲಿನಿಂದ ತುಳಿಯುವುದರಿಂದಲೂ ಸಂಭವಿಸುವ ಬಹು ಕೋಟಿ ಪ್ರಾಣಿ ಹಿಂಸೆಗಳು ನಿನ್ನ ಮತದಲ್ಲಿ ಯಜ್ಞದಲ್ಲಿ ಸಂಭವಿಸುವ ಹಿಂಸೆಯಂತೆ ಅಲ್ಲವೇನು?

**ಭಾವವಿಲಾಸಿನೀ–**ಯುಕ್ತ್ಯಂತರಂ ಚಾಹ – **ಜಿನೇತಿ** ।। ಜಿನಮಂದಿರನಿರ್ಮಾಣೇ ಭೂಶೋಧನಾದ್ಯೈಃ ಆದ್ಯಪದೇನ ಛಿದ್ಯಮಾನಸ್ಥೂಲವೃಕ್ಷಪತನಾದಿಕಂ ಗೃಹ್ಯತೇ। ಭೂಮ್ಯಂತಃಸ್ಥಿತ ಮಂಡೂಕಪಿಪೀಲಿಕಾದ್ಯನೇಕಕೋಟಿನಾನೇಂದ್ರಿಯಯುಕ್ತಪ್ರಾಣಿಹಿಂಸಾಃ ಪ್ರಾಪ್ನುವಂತಿ । ಜಿನಯಾತ್ರಾಯಾಂ ಚ ಪಾದಘಾತೈಃ ಪಿಪೀಲಿಕಾದೀನಾಮೇವ ಹಿಂಸಾಃ ಪ್ರಾಪ್ನುವಂತಿ । ತಾಸ್ಸರ್ವಾಸ್ತೇ ತವ ಮತೇ ಕ್ರಿಯಮಾಣಹಿಂಸಾ ಮಖವದ್ ಯಜ್ಞೇ ಕ್ರಿಯಮಾಣಹಿಂಸಾವನ್ನಕಿಂ ಭವತ್ಯೇವೇತ್ಯರ್ಥಃ । ಸಾವದ್ಯಲೇಶೋ ಬಹುಪುಣ್ಯರಾಶಿರಿತಿ ತು ತವ ಪ್ರಕ್ರಿಯಾ ಮಮೈವಾನುಕೂಲಾ । ಏಕಪಶುಹಿಂಸಾಯಾ ಬಹುತರದೇವತಾಪ್ರೀಣನೇನಾನಂತ ಪುಣ್ಯರಾಶೇಸ್ಸಿದ್ಧೇಃ । ತ್ವಂ ತು ಸಾವದ್ಯರಾಶಿರ್ಲಘುಪುಣ್ಯಲೇಶ ಇತಿ ನ್ಯಾಯೇ ಪತಿತೋऽಸಿ । ಬಹುಪ್ರಾಣಿಹಿಂಸಾಯಾ ಏಕಜಿನಪ್ರೀಣನಾಂಗೀಕಾರಾತ್ ।। ೨೪೧ ।।

ಬರ್ಹಹಸ್ತಸ್ಯ ಯಾ ಶಂಖೇ ಗರ್ಹಾ ಸಾಪಿ ನ ಶೋಭತೇ ।। ೨೪೨ ।।

**ಅರ್ಥ–** ಬರ್ಹಹಸ್ತಸ್ಯ = ನವಿಲು ಗರಿಯನ್ನು ಕೈಯಲ್ಲಿ ಧರಿಸಿರುವವರೆಗೆ (ಜಿನನಿಗೆ), ಶಂಖೇ = ಶಂಖಾದಿಗಳ ವಿಷಯದಲ್ಲಿ, ಯಾ ಗರ್ಹಾ = ಯಾವ ನಿಂದೆಯೋ (ತಿರಸ್ಕಾರ ಬುದ್ಧಿಯೋ) ಸಾಪಿ = ಅದೂ ಕೂಡ, ನ ಶೋಭತೇ = ಶೋಭಿಸುವುದಿಲ್ಲ.

**ಅನುವಾದ–** ನವಿಲು ಗರಿಯನ್ನು ಕೈಯಲ್ಲಿ ಧರಿಸಿರುವವರೆಗೆ (ಜಿನನಿಗೆ) ಶಂಖಾದಿಗಳ ವಿಷಯದಲ್ಲಿ ಯಾವ ನಿಂದೆಯು ಇದೆಯೋ (ತಿರಸ್ಕಾರ ಬುದ್ಧಿಯು) ಅದೂ ಕೂಡ ಶೋಭಿಸುವುದಿಲ್ಲ.

**ಭಾವವಿಲಾಸಿನೀ–**ಶಂಖಸ್ಪರ್ಶನಿಂದಾಂ ನಿಷೇಧತಿ – **ಬರ್ಹೇತಿ** ।। ಬರ್ಹಹಸ್ತಸ್ಯೇತಿ ಹೇತುಗರ್ಭವಿಶೇಷಣಮ್ । ಬರ್ಹಸ್ಯಾದಾವಸ್ಥ್ನಃ ರೋಮಮೂಲೇ ತ್ವಚಃ ಅಂತೇ ರೋಮ್ಣಾಂ ಚ ದರ್ಶನಾತ್ಸದಾ ತಾದೃಶಬರ್ಹಗ್ರಾಹಿತ್ವಾಖ್ಯಹೇತೋಃ ಸೂಚನಾತ್ । ಶಂಖೇತಿ ಕೃಷ್ಣಾಜಿನವರಾಹಕೇಸರಾಣಾಮಪ್ಯುಪಲಕ್ಷಣಮ್ ।। ೨೪೨ ।।

ಲವಣಂ ಭಕ್ಷ್ಯತೇ ಚೇತ್ಸ್ಯಾಚ್ಛುಕ್ತಿರೂಪಾಸ್ಥಿಭಕ್ಷಣಮ್ ।
ಜಲೀಕೃತ್ಯ ಸ್ವೀಕೃತಿಶ್ಚೇದಸ್ಥಿಕ್ಷಾಲನವಾರಿಣಃ ।। ೨೪೩ ।।

**ಅರ್ಥ–** ಲವಣಂ = ಉಪ್ಪನ್ನು, ಭಕ್ಷ್ಯತೇ ಚೇತ್ = ತಿನ್ನುವುದಾದರೂ, ಶುಕ್ತಿರೂಪ ಅಸ್ಥಿ ಭಕ್ಷಣಂ = ಶುಕ್ತಿ (ಶಂಖ = ಕಪ್ಪೆ ಚಿಪ್ಪು) ರೂಪವಾದ ಅಸ್ಥಿಯನ್ನು ತಿಂದಂತೆಯೇ, ಸ್ಯಾತ್ = ಆಗುತ್ತದೆ ಎಂದು, ಜಲೀಕೃತ್ಯ = ಶೋಧಿಸಿ, ಸ್ವೀಕೃತಿಃ ಚೇತ್= ಅಸ್ಥಿಯ ರೇಣುಗಳು ಬಾರದಂತೆ ಮಾಡಿ ಸೇವಿಸುತ್ತೇವೆಂದರೆ, ತತ್ = ಅದು, ಅಸ್ಥಿಕ್ಷಾಲನವಾರಿಣಃ = ಅಸ್ಥಿಯನ್ನು ತೊಳೆದ ನೀರಿನ ಸ್ವೀಕೃತಿಃ, ಸ್ಯಾತ್ = ಸ್ವೀಕಾರದಂತೆಯೇ ಆಗುತ್ತದೆ.

**ಅನುವಾದ–** ಉಪ್ಪನ್ನು ತಿಂದರೆ ಶುಕ್ತಿ ರೂಪದ ಅಸ್ಥಿಯನ್ನು ತಿಂದಂತೆಯೇ ಆಗುತ್ತದೆ ಎಂದು. ಶೋಧಿಸಿ (ಅಸ್ಥಿಯ ರೇಣುಗಳು ಬಾರದಂತೆ ಮಾಡಿ) ಸೇವಿಸುತ್ತೇವೆಂದರೆ ಅದು ಅಸ್ಥಿಯನ್ನು ತೊಳೆದ ನೀರಿನ ಸ್ವೀಕಾರದಂತೆಯೇ ಆಗುತ್ತದೆ.

**ಭಾವವಿಲಾಸಿನೀ–**ಯುಕ್ತ್ಯಂತರಂ ಚಾಹ – **ಲವಣಮಿತಿ** ॥ ಲವಣಂ ತಥೈವ ಶಾಕಾದಿಷು ದತ್ವಾ ಭಕ್ಷ್ಯತೇ ಚೇತ್ಶುಕ್ತಿರೂಪಾಸ್ಥಿಭಕ್ಷಣಂ ಸ್ಯಾತ್ । ಶುಕ್ತಿರೂಪಾಣಾಂ ಲವಣೋದಕೇ ನಿಕ್ಷಿಪ್ಯ ಮಾಣಸಿಕತಾವದಣೂನಾಂ ಅಸ್ಥ್ನಾಂ ಲವಣೇ ಬಹುಲಮುಪಲಮ್ಭಾತ್ । ಜಲೀಕೃತ್ಯ ಲವಣಂ ಜಲಮಯಂ ಕೃತ್ವಾ ಸ್ವೀಕೃತಿಃ ಸ್ವೀಕಾರಶ್ಚೇದಸ್ಥಿಕ್ಷಾಲನವಾರಿಣಃ ಸ್ವೀಕೃತಿಃ ಸ್ಯಾದಿತ್ಯಾವೃತ್ಯಾ ಯೋಜನೀಯಮ್ । ಮಮ ತು ಶಂಖೋದಕಪ್ರೋಕ್ಷಣಮಾತ್ರಮ್, ತವ ತು ಅಸ್ಥ್ನಾಂ ಭಕ್ಷಣಂ ತತ್ಕ್ಷಾಲನೋದಕಪಾನಂ ವಾ ಸ್ಯಾದಿತಿ ಮಹದ್ವೈಲಕ್ಷಣ್ಯಮ್ । ತಸ್ಮಾಚ್ಛುಷ್ಕಯುಕ್ತಿ-ಮಾತ್ರಾನುಸಾರೇಣ ವೈದಿಕಮತನಿರಾಕರಣೇ ಸಕಲಸ್ವಪ್ರಕ್ರಿಯಾ ನಿರಾಕರಣಮೇವ ಸ್ಯಾದಿತಿ ಭಾವಃ ॥ ೨೪೩ ॥

**ಕರ್ತಾ ಸರ್ವಸ್ಯ ಕಾರ್ಯಸ್ಯ ಕಸ್ಮಾದೀಶೋ ವಿಸೃಜ್ಯತೇ ॥ ೨೪೪ ॥**

**ಅರ್ಥ–** ಸರ್ವಸ್ಯ = ಸಮಸ್ತವಾದ, ಕಾರ್ಯಸ್ಯ= ಕಾರ್ಯಕ್ಕೆ, ಕರ್ತಾ = ಕರ್ತೃವು, ಈಶಃ= ಪರಮಾತ್ಮನು, ಅಸ್ತಿ = ಇದ್ದಾನೆ, ಕಸ್ಮಾದ್= ಯಾವ ಕಾರಣದಿಂದ, ವಿಸೃಜ್ಯತೇ = ಬಿಡುತ್ತೀರಿ.

**ಅನುವಾದ–** ಎಲ್ಲ ಕಾರ್ಯಗಳಿಗೆ ಕರ್ತೃನಾಗಿರುವ ಮತ್ತು ಸಮಸ್ತ ಜಗತ್ತಿಗೆ ಸ್ವಾಮಿಯಾಗಿರುವ ಜಗತಿನ ನಿಯಾಮಕನೂ ಆಗಿರುವ ಪರಮಾತ್ಮನನ್ನು ಯಾವ ಕಾರಣದಿಂದ ಒಪ್ಪುತ್ತಿಲ್ಲ?

**ಭಾವವಿಲಾಸಿನೀ–**ಯಚ್ಚೋಕ್ತಂ ಮುಕ್ತವರ್ಗಸಂಸಾರಿವರ್ಗಶ್ಚೇತಿ ದ್ವಿಧೈವ ಚೇತನರಾಶಿಃ । ನತು ಸರ್ವೇಶ್ವರಾಖ್ಯಸ್ತೃತೀಯಶ್ಚೇತನೋಽಸ್ತೀತಿ । ತದನೂದ್ಯ ದೂಷಯತಿ – **ಕರ್ತೇತಿ** ॥ ಸರ್ವಸ್ಯ ಕಾರ್ಯಸ್ಯ ಕರ್ತೇತಿ ಸಂಬಂಧಃ ॥ ೨೪೪ ॥

**ವಿವರಣೆ–** ಚೇತನರಾಶಿ ಎರಡು ವಿಧವಾಗಿದೆ. ಸಂಸಾರಿ ಚೇತನರು ಹಾಗು ಮುಕ್ತ ಚೇತನರು ಎಂದು. ಮೂರನೆಯದಾದ 'ಈಶ್ವರ' ನೆಂಬ ಚೇತನವನ್ನು ಏಕೆ

ಅಂಗೀಕರಿಸಬೇಕು? ಎಂಬುದು ಜೈತಮತದವಾದವಾಗಿದೆ. ಈ ಮತವನ್ನು ನಿರಾಕರಿಸುವ ಸಲುವಾಗಿ ಶ್ರೀವಾದಿರಾಜರು 'ಕರ್ತಾಸರ್ವಸ್ಯ' ಇತ್ಯಾದಿ ಶ್ಲೋಕವನ್ನು ಹೇಳುತ್ತಿದ್ದಾರೆ.

ಜೈನಮತದಲ್ಲಿ ಜೀವರು ಮಾಡುವ ಕರ್ಮಕ್ಕೆ ಜೀವರೇ ಒಡೆಯರು. ಅದಕ್ಕಾಗಿ ದೈವಶಕ್ತಿಯ ಅವಶ್ಯಕತೆ ಬೇಕಿಲ್ಲ. ಮೋಕ್ಷಸಾಧನೆಗಾಗಿ ಸ್ವಸಾಮರ್ಥ್ಯ ಹಾಗು ಆತ್ಮ ಸಾಕ್ಷಾತ್‌ಕಾರಕ್ಕಾಗಿ ಆಧ್ಯಾತ್ಮಿಕವಾಗಿ ನಡೆಸುವ ಹೋರಾಟಕ್ಕೆ ಪ್ರಾಶಸ್ತ್ಯ ಈ ಜೈನಮತದಲ್ಲಿ ಪರಮಾತ್ಮನಿಗೆ ಸ್ಥಳವಿಲ್ಲ. ಇದರಿಂದಾಗಿ ಇವರು ನೀರೀಶ್ವರವಾದಿಗಳೆಂದು ಕರೆಸಿಕೊಳ್ಳುತ್ತಾರೆ.

**ಸ್ವಭಾವಾದೇವ ಸರ್ವಂ ಚ ಜಗತ್ಸ್ಯಾತ್ ಸಚರಾಚರಮ್ ।**
**ಕಿಮೀಶ್ವರೇಣೇತಿ ವದನ್ ಪ್ರಷ್ಟವ್ಯಃ ಪ್ರತಿವಾದಿನಾ ॥ ೨೪೫ ॥**

**ಅರ್ಥ–** ಸಚರಾಚರಂ = ಚೇತನ-ಜಡಗಳಿಂದ ಕೂಡಿದ, ಸರ್ವಂ ಚ = ಸಮಸ್ತವಾದ, ಜಗತ್ = ಪ್ರಪಂಚವು, ಸ್ವಭಾವಾದೇವ = ಸ್ವಾಭಾವಿಕವಾಗಿ (ತನ್ನಷ್ಟಕ್ಕೆತಾನೆ) ಸ್ಯಾತ್ = ಉತ್ಪತ್ತಿಯಾಗಿ ನಾಶವನ್ನು ಹೊಂದುತ್ತಿರುವಾಗ, ಈಶ್ವರೇಣ =ಪರಮಾತ್ಮನಿಂದ, ಕಿಂ = ಆಗಬೇಕಿದ್ದೇನಿದೆ? ಇತಿ = ಎಂಬುದಾಗಿ, ವದನ್ = ಹೇಳುವವನು, ಪ್ರತಿವಾದಿನಾ = ಪ್ರತಿವಾದಿಯಿಂದ, ಪ್ರಷ್ಟವ್ಯಃ = ಪ್ರಶ್ನಿಸಲು ಯೋಗ್ಯನು.

**ಅನುವಾದ–** ಸಮಗ್ರವಾದ, ಈ ಚರಾಚರಾತ್ಮಕವಾದ ಪ್ರಪಂಚವು ತನ್ನಷ್ಟಕ್ಕೆ ತಾನೆ ಉತ್ಪತ್ತಿಯಾಗಿ ನಾಶವಾಗುತ್ತಿರುವಾಗ ಇದರ ಸಲುವಾಗಿ ಪರಮಾತ್ಮನನ್ನೇಕೆ ಅಂಗೀಕರಿಸಬೇಕು ಎಂಬ ಬೌದ್ಧನನ್ನು ಕುರಿತು ಪ್ರತಿವಾದಿಯು ಪ್ರಶ್ನೆ ಮಾಡಬೇಕು.

**ಭಾವವಿಲಾಸಿನೀ–**ನನು ಸ್ವಭಾವಾದೇವ ಸರ್ವಂ ಜಗದ್ಭವೇತ್ ಕಿಮೀಶ್ವರೇಣೇತ್ಯೇತ-ದ್ಬೌದ್ಧಮತಮನೂದ್ಯ ದೂಷಯತಿ – **ಸ್ವಭಾವಾದಿತಿ** ॥ ಪ್ರತಿವಾದಿನಾ ಪ್ರಷ್ಟವ್ಯಃ ॥ ೨೪೫ ॥

**ವಿವರಣೆ–** ಬೌದ್ಧ ಮತವನ್ನು 'ಸ್ವಭಾವಾದೇವ' ಇತ್ಯಾದಿ ಶ್ಲೋಕಗಳಿಂದ

'ದ್ರವ್ಯಂ ಕರ್ಮಚ ಕಾಲಶ್ಚಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥

ಎಂಬ ಶ್ರುತ್ಯನುಸಾರವಾಗಿ ದ್ರವ್ಯಾದಿಗಳಂತೆ ಸ್ವಭಾವವೂ ಭಗವಂತನ ಅಧಿ ೕನವಾದುದರಿಂದ, ಅವನ ಪ್ರಸಾದವಿಲ್ಲದೆ ಮುನ್ನಡೆಯಲು ಸಾಧ್ಯವಿಲ್ಲದಿರು ವುದರಿಂದ ಮೊದಲು ಸ್ವಭಾವ ವಾದವನ್ನೇ ನಿರಾಕರಿಸುತ್ತಾರೆ.

**ಸ್ವಭಾವೋಽಪಿ ಜಡಶ್ಚೇತ್ಸ್ಯಾದನ್ಯಪ್ರೇರ್ಯೋ ಘಟಾದಿವತ್ ।**
**ಜಾನಾತೀಚ್ಛತಿ ಪಶ್ಚಾಚ್ಚ ಗಚ್ಛತೀತಿ ನ ಕಿಂ ಶ್ರುತಮ್ ॥ ೨೪೬ ॥**

**ಅರ್ಥ—** ಸ್ವಭಾವೋಽಪಿ - ಸ್ವಭಾವವಾದರೂ, ಜಡಶ್ಚೇತ್ = ಜಡ ಪದಾರ್ಥವೆಂದಾದಲ್ಲಿ, ಘಟಾದಿವತ್ = ಘಟಾದಿಗಳಂತೆ, ಅನ್ಯಪ್ರೇರ್ಯಃ = ಬೇರೊಬ್ಬರಿಂದ ಪ್ರೇರಿತವಾಗಿದೆ, ಏಕೆಂದರೆ ಜಾನಾತಿ = (ಮೊದಲು) ತಿಳಿಯುತ್ತಾನೆ, ಇಚ್ಛತಿ = (ನಂತರ) ಇಚ್ಛಿಸುತ್ತಾನೆ, ಪಶ್ಚಾಚ್ಚ = ಅನಂತರ, ಗಚ್ಛತಿ = ಗಮನಾದಿಕ್ರಿಯೆ ಮಾಡುತ್ತಾನೆ, ಇತಿ = ಈ ರೀತಿಯಾಗಿ, ಕಿಂ ನ ಶ್ರುತಂ = ಕೇಳಿಲ್ಲವೇನು?

**ಅನುವಾದ—** ಸ್ವಾಭಾವಿಕವಾಗಿ (ತನ್ನಷ್ಟಕ್ಕೆತಾನೆ) ಈ ಜಗತ್ತು ಉತ್ಪತ್ತಿಯಾಗಿ ನಾಶವನ್ನು ಹೊಂದುತ್ತದೆ ಎಂದು ಹೇಳಿದಲ್ಲಿ ಆ ಸ್ವಭಾವವು ಜಡವೋ ಅಜಡವೋ ಎಂದು ವಿಕಲ್ಪಮಾಡಿದಾಗ ಆ ಸ್ವಭಾವವು ಜಡವೆಂದು ಹೇಳಿದರೆ ಘಟ-ಪಟಾದಿಗಳಂತೆ ಸ್ವತಃ ಯಾವ ಕಾರ್ಯವನ್ನೂ ಮಾಡುವದಿಲ್ಲವಾದ್ದರಿಂದ ಈ ಜಡವೆಂಬ ಸ್ವಭಾವವೂ ಸಹ ಸ್ವತಃ ಯಾವ ಕಾರ್ಯವನ್ನು ಮಾಡುವಂತಿಲ್ಲ. ಏಕೆಂದರೆ ಮೊದಲು ವಸ್ತುವಿನ ಜ್ಞಾನ, ನಂತರ ಇಚ್ಛೇ ಅನಂತರ, ಗಮನಾದಿ ಕ್ರಿಯೆ ಎಂದು ಪ್ರಪಂಚದ ಧರ್ಮವಿದೆ. ಈ ಜಡವೆಂಬ ಸ್ವಭಾವಕ್ಕೆ ಜ್ಞಾನವೇ ಇಲ್ಲದಿರುವುದರಿಂದ ಪ್ರವೃತ್ತಿಯು ಕೂಡುವುದಿಲ್ಲ.

**ಭಾವವಿಲಾಸಿನೀ—** ಕಥಂ ಸ್ವಭಾವೋಽಪಿ ಜಡಃ ಅಜಡೋ ವೇತಿ । ಆದ್ಯಂ ಹಿನಸ್ತಿ – **ಜಡಶ್ಚೇದಿತಿ** ॥ ನನು ಜಡಸ್ಯಾಪಿ ಸ್ವತ ಏವ ಪ್ರವೃತ್ತಿಃ ಕುತೋ ನೇತ್ಯಾಶಂಕಾಂ ಸ್ವತಃ ಪ್ರವೃತ್ತಿರಹಿತಘಟದೃಷ್ಟಾಂತೇನ ಪರಿಹೃತಾಮಪಿ ಕಿಂ ತತ್ರ ಕಾರಣಮಿತಿ ಸುಹೃದ್ಭಾವೇನ ಪೃಚ್ಛಂತಂ ಪ್ರತ್ಯಾಹ – **ಜಾನಾತೀತಿ** ॥ ಪ್ರವೃತ್ತಿಹೇತುಭೂತಜ್ಞಾನೇಚ್ಛಾದ್ಯಭಾವಾದಿತಿ ಭಾವಃ ॥ ೨೪೬ ॥

**ವಿವರಣೆ—** ಈ ಲೋಕದಲ್ಲಿ ಪ್ರವೃತ್ತಿಯನ್ನು ಕುರಿತು ಜ್ಞಾನ-ಇಚ್ಛಾಕೃತಿ ಇವುಗಳು ಕಾರಣ. ಮೊದಲು ವಸ್ತುವಿನ ಜ್ಞಾನ ಬಂದ ಮೇಲೆ ಅದನ್ನು ಪಡೆಯಲು ಇಚ್ಛೆಯು ಹುಟುತ್ತದೆ. ನಂತರ ಆ ವಸ್ತುವನ್ನು ಪಡೆಯುವ ಪ್ರಯತ್ನ ಉಂಟಾಗುತ್ತದೆ. ಹೀಗೆ ಲೋಕದ ನಿಯಮವಿದೆ. ಈ ನಿಯಮ ಸಕಲ ತಾಂತ್ರಿಕ ಸಿದ್ಧವಾಗಿದೆ. ಪ್ರಕೃತದಲ್ಲಿ ಸ್ವಭಾವವು ಜಡವಾದಲ್ಲಿ ಅದಕ್ಕೆ ಜ್ಞಾನವೇ ಇಲ್ಲ. ಜ್ಞಾನವಿಲ್ಲದಿದ್ದರೆ ಇಚ್ಛೆ ಹುಟ್ಟುವುದಿಲ್ಲ. ಇಚ್ಛೆ ಇಲ್ಲದ ಮೇಲೆ ಪ್ರಯತ್ನವೂ ಇಲ್ಲ. ಆದ್ದರಿಂದ ಪ್ರವೃತ್ತಿಯೇ ಕೂಡುವುದಿಲ್ಲವೆಂದರ್ಥ.

**ಅಜಡೋಽಪ್ಯಸ್ವತಂತ್ರಶ್ಚೇತ್ಪ್ರಾಗುಕ್ತಂ ದೂಷಣಂ ಸ್ಮರ ।**
**ಸ್ವಾತನ್ತ್ರ್ಯೇ ತು ಕಿಮೀಶೇನಾಪರಾದ್ಧಂ ಲಘುಮೂರ್ತಿನಾ ॥ ೨೪೭ ॥**

**ಅರ್ಥ—** ಅಜಡೋಽಪಿ = ಚೇತನವಾದರೂ ಕೂಡ, ಅಸ್ವತಂತ್ರಃ ಚೇತ್ = ಅಸ್ವತಂತ್ರವಾದಲ್ಲಿ, ಪ್ರಾಗುಕ್ತಂ = ಹಿಂದೆ ಹೇಳಿದ, ದೂಷಣಂ = ಅಸ್ವತಂತ್ರಕ್ಕೆ ಇನ್ನೊಬ್ಬರಿಂದ ಪ್ರೇರ್ಯತ್ವ ಲಕ್ಷಣವಾದ ದೂಷಣವನ್ನು, ಸ್ಮರ = ಸ್ಮರಿಸು, ಸ್ವಾತಂತ್ರ್ಯೇತು = ಆ ಸ್ವಭಾವವು

ಸ್ವತಂತ್ರವೆಂದು ಹೇಳಿದರೆ, ಲಘುಮೂರ್ತಿನಾ = ಆಯಾಸ ಪಡದೆ ಇರುವ, ಈಶ್ವರೇಣ = ಸ್ವತಂತ್ರನಾದ ಈಶ್ವರನಿಂದ, ಕಿಮಪರಾದ್ಧಂ = ನಮಗೆ ಏನೂ ಅಪಕಾರವಿಲ್ಲ.

**ಅನುವಾದ–** ಆ ಸ್ವಭಾವವು ಚೇತನವಾದರೂ ಅಸ್ವತಂತ್ರವಾದಲ್ಲಿ ಅಸ್ವತಂತ್ರವಾದ ವಸ್ತುವಿಗೆ ಇನ್ನೊಬ್ಬರಿಂದ ಪ್ರೇರಣೆ ಎಂಬ ಹಿಂದೆ ಹೇಳಿದ ದೂಷಣವು ಬಂದೇ ಬರುತ್ತದೆ. ಆ ಸ್ವಭಾವವು ಸ್ವತಂತ್ರವೆಂದು ಹೇಳಿದಲ್ಲಿ ಹಿಂದಿನ ದೋಷವು ಪರಿಹೃತವಾದರೂ ಬಹುಗೌರವ ದೋಷಬರುತ್ತದೆ. ಅದಕ್ಕಿಂತ ಲಘುವಾದ, ಒಬ್ಬನಾದ, ಸ್ವತಂತ್ರ ಪರಮಾತ್ಮನನ್ನು (ಈಶ್ವರನನ್ನು) ಒಪ್ಪಿದಲ್ಲಿ ಏನೂ ಪ್ರಯಾಸವಿಲ್ಲ.

**ಭಾವವಿಲಾಸಿನೀ–**ದ್ವಿತೀಯಂ ನಿರಾಹ – **ಅಜಡೋಽಪೀತಿ** ॥ ಸ ಸ್ವಭಾವಃ ಅಜಡೋಽಪ್ಯಸ್ವತಂತ್ರಶ್ಚೇತ್ಪ್ರಾಗುಕ್ತಂ ದೂಷಣಂ ಅಸ್ವತಂತ್ರಸ್ಯ ಪರಪ್ರೇರ್ಯತ್ವಲಕ್ಷಣಮ್ । ಸ್ವಭಾವಸ್ಯ ಸ್ವಾತನ್ತ್ರ್ಯೇ ತತ್ತದ್ವಸ್ತುಸ್ವಭಾವಾನಾಂ ಬಹುತ್ವೇನ ಧರ್ಮಿಣಾಂ ಜಡತ್ವಮಂಗೀಕೃತ್ಯ ತತ್ಸ್ವಭಾವಾನಾಂ ಚೇತನತ್ವಾಂಗೀಕಾರೇ ಅರ್ಧ(ಚ) ಜರತೀಯಾಪತ್ತ್ಯಾ ಅನೇಕೇಷಾಂ ಸ್ವಾತನ್ತ್ರ್ಯೇ ಪರಸ್ಪರವಿರೋಧೇನ ಜಗದ್ವಿಲಯಾಪತ್ತ್ಯಾ ಚ ಗೌರವಾತ್ ಲಘುಮೂರ್ತಿನಾ ಉಕ್ತತ್ರಿವಿಧಗೌರವಾಖ್ಯದೋಷರಹಿತಮೂರ್ತಿನಾ ಈಶೇನ ಕಿಮಪರಾದ್ಧಮ್। ಅಥವಾ ಯದ್ಯನೇಕಜಗನ್ನಿಯಾಮಕಃ ಏಕ ಏವ ನ ತದಂತರ್ಭೂತಃ ಸ್ವತಂತ್ರಶ್ಚ। ತರ್ಹಿ ನ ನಾಮ್ನಿ ವಿಪ್ರತಿಪತ್ತಿರಿತಿ ಸ ಏವೇಶ್ವರೋ ಭವಿಷ್ಯತೀತ್ಯಾಹ – **ಲಘುಮೂರ್ತಿನೇತಿ** ॥ ಏಕತ್ವಾಲ್ಲಘುಮೂರ್ತಿನಾ ಸ್ವತಂತ್ರಚೇತನತ್ವಾಂಗೀಕಾರಾದೀಶೇನ ಈಶತ್ವಯೋಗ್ಯೇನ ಚ ತ್ವದುಕ್ತಸ್ವಭಾವೇನ ಕಿಮಪರಾದ್ಧಮ್ । ಅಸ್ಮಾಕಂ ನ ಕೋಽಪ್ಯಪಕಾರ ಇತಿ ಭಾವಃ (ಪ್ರಕ್ಷಿಪ್ತೋಽಯಂ ಗ್ರಂಥಃ) ॥ ೨೪೭ ॥

**ವಿವರಣೆ–** ಶ್ರೀ ಸುರೋತ್ತಮತೀರ್ಥರ 'ಅರ್ಧಚರತಿ' ನ್ಯಾಯವೆಂದು ತಿಳಿಸಿ ಇದನ್ನು ದೂಷಿಸಿದ್ದಾರೆ. ಸ್ವಭಾವವು ಸ್ವತಂತ್ರವಾದಲ್ಲಿ ಒಂದೊಂದು ವಸ್ತುವಿನ ಸ್ವಭಾವಗಳು ಬಹಳವಾದ್ದರಿಂದ ಧರ್ಮಿಗಳಿಗೆ ಜಡತ್ವವನ್ನು ಅಂಗೀಕರಿಸಿ ತತ್ಸ್ವಭಾವಗಳಿಗೆ ಚೇತನತ್ವವನ್ನು ಅಂಗೀಕರಿಸಿದರೆ ಅರ್ಧಚರಲೇಯವಾಗುತ್ತದೆ. ಉದಾ : ಕೋಳಿಯ ಅರ್ಧ ದೇಹವನ್ನು ತಿನ್ನುವದಕ್ಕಾಗಿಯೂ ಉಳಿದರ್ಧಭಾಗವನ್ನು ತತ್ತಿ (ಮೊಟ್ಟೆ) ಇಡುವುದಕ್ಕಾಗಿಯೂ ಉಪಯೋಗಿಸುವುದು ಸಾಧ್ಯವಿಲ್ಲವಷ್ಟೇ. ಅದರಂತೆ ಈ ಮೇಲಿನ ವಿಷಯ ಎಂದಿದ್ದಾರೆ.

ಅನೇಕ ಸ್ವಭಾವಗಳಿಗೆ ಸ್ವಾತಂತ್ರವನ್ನು ಒಪ್ಪಿದಲ್ಲಿ ಪರಸ್ಪರ ವಿರೋಧಗಳು ಸಂಭವಿಸಿ ಜಗತ್ತು ವಿಲಯವಾಗುತ್ತದೆ. ಇದು ಗೌರವಗ್ರಸ್ತ (ಗುರುಭೂತವಾಗಿದೆ) ಎಂದರೆ ಸ್ವಭಾವಪಕ್ಷದಲ್ಲಿ ವಸ್ತು ಭಿನ್ನವಾದ ಸ್ವಭಾವ ಹಾಗೂ ಅದರ ಏಕತ್ವ ಮತ್ತು ಅದರ ಸ್ವಾತಂತ್ರ್ಯ ಈ ಮೂರನ್ನೂ ಒಪ್ಪುವುದು ಗೌರವಗ್ರಸ್ತವಾಗುತ್ತದೆ. ಇದಕ್ಕಿಂತ ಒಬ್ಬ ಸ್ವತಂತ್ರ ಚೇತನನನ್ನು (ಈಶ್ವರನನ್ನು) ಒಪ್ಪುವುದು ಲಘುಭೂತವಾಗಿದೆ. ಜಗತ್ತಿನಿಂದ ಭಿನ್ನವಾದ

ಒಬ್ಬ ಸ್ವತಂತ್ರನು ಎಂಬ ಪಕ್ಷವು ನಾಮಾಂತರದಿಂದ ಈಶ್ವರನನ್ನು ಒಪ್ಪುವಲ್ಲಿ ಪರ್ಯವಸಾನವಾಗುತ್ತದಷ್ಟೆ ಎಂದು ಸುರೋತ್ತಮತೀರ್ಥರ ವ್ಯಾಖ್ಯಾನ.

**ಸ್ವಸ್ವಭಾವಾತ್ ಸ್ವಯಂ ಚೇತ್ಸ್ಯಾತ್ತರ್ಹ್ಯಾತ್ಮಾಶ್ರಯದೂಷಣಮ್ ।**
**ಸ್ವಕಾರಣಸ್ವಭಾವಾಚ್ಚೇತ್ಸ್ವಭಾವಸ್ತೇ ಗುರುಃ ಪತೇತ್ ॥ ೨೪೮ ॥**

**ಅರ್ಥ—**ಸ್ವ = ತನ್ನ ಸ್ವಭಾವಾತ್ = ಸ್ವಭಾವದಿಂದ, ಸ್ವಯಂ = ತಾನೇ, ಚೇತ್ ತರ್ಹಿ = ಉತ್ಪತ್ತಿಯಾಗುತ್ತದೆಂದು ಹೇಳಿದರೆ ಆಗ, ಆತ್ಮಾಶ್ರಯ = ತನಗೆ ತಾನೆ ಆಶ್ರಯನು ಎಂದು, ದೂಷಣಂ = ದೋಷವು, ಸ್ಯಾತ್ = ಆಗುತ್ತದೆ, ಸ್ವ = ತನ್ನ ಕಾರಣ ಸ್ವಭಾವಾತ್ = ಕಾರಣಸ್ವಭಾವದಿಂದ, ಚೇತ್= ಉತ್ಪತ್ತಿ ಎಂದು ಹೇಳುವುದಾದರೆ, ತೇ = ನಿನಗೆ, ಸ್ವಭಾವಃ = ಸ್ವಭಾವ ಎಂಬ ಪದಾರ್ಥವು, ಗುರುಃ = ಗುರುಭೂತವಾಗಿ, ಪತೇತ್ = ಬಿದ್ದುಹೋಗುತ್ತದೆ.

**ಅನುವಾದ— ಈಗ ತನ್ನ ತನ್ನ ಸ್ವಭಾವದಿಂದ ಕಾರ್ಯವು ಉತ್ಪತ್ತಿಯಾಗುತ್ತದೆಂದು ಹೇಳಿದರೆ ಆ ಸ್ವಭಾವ ಎಂಬ ಪದಾರ್ಥವು ತನ್ನ ಸ್ವಭಾವವೇ ಆಗುತ್ತದೆಯೋ ಅಥವಾ ತನ್ನ ಕಾರಣ ಸಾಮಗ್ರಿಗಳ ಸ್ವಭಾವವೋ ಎಂಬ ವಿಕಲ್ಪಮಾಡಿ ಅದರಲ್ಲಿ ಮೊದಲನೆಯ ಕಲ್ಪವನ್ನು ದೂಷಿಸುತ್ತಿದ್ದಾರೆ. ಈ ಮೇಲಿನ ಶ್ಲೋಕದಿಂದ ತನ್ನ ಉತ್ಪತ್ತಿಯ ಪೂರ್ವದಲ್ಲಿ ತನ್ನ ಸ್ವಭಾವವು ಉತ್ಪನ್ನವಾಗದಿರುವುದರಿಂದ ಪೂರ್ವಭಾವಿತ್ವವೇ ಇಲ್ಲದಿರುವುದರಿಂದ ಕಾರಣತ್ವವು ಹೇಗೆ? ತಾನೇ ಕಾರ್ಯ ತಾನೇ ಕಾರಣವೆಂದಲ್ಲಿ ಆತ್ಮಾಶ್ರಯ ದೋಷ ಬರುವುದು. ತನ್ನ ಕಾರಣ ಸಾಮಗ್ರೀಸ್ವಭಾವದಿಂದ ಉತ್ಪತ್ತಿಯಾಗುತ್ತದೆ ಎಂಬ ಎರಡನೆ ಕಲ್ಪವೂ ಸಹ ಸರಿಯಲ್ಲ. ಕಾರಣದಿಂದಲೇ ಕಾರ್ಯದ ಉತ್ಪತ್ತಿಯಾಗುತ್ತಿರುವಾಗ ಅಧಿಕವಾದ, ಅನಾವಶ್ಯಕವಾದ ಸ್ವಭಾವವೆಂಬ ಪದಾರ್ಥವನ್ನು ಅಂಗೀಕರಿಸುವುದು ಗುರುಭೂತವಾಗುತ್ತದೆ (ಗೌರವಗ್ರಸ್ತವಾಗುತ್ತದೆ).**

**ಭಾವವಿಲಾಸಿನೀ—**ಅಧುನಾ ಸ್ವಸ್ಯಸ್ವಸ್ಯ ಸ್ವಭಾವಾತ್ಸ್ವಯಂಸ್ವಯಮುತ್ಪದ್ಯತೇ ವಾ ಸ್ವಕಾರಣ-ಸ್ವಕಾರಣಸ್ವಭಾವಾದ್ವೇತಿ ವಿಕಲ್ಪಾದ್ಯಂ ದೂಷಯತಿ – **ಸ್ವಸ್ವಭಾವಾದಿತಿ ॥** ಸ್ವೋತ್ಪತ್ತೇಃ ಪೂರ್ವಂ ಸ್ವಸ್ವಭಾವಸ್ಯಾಪ್ಯನುತ್ಪನ್ನತ್ವೇನ ಪೂರ್ವಭಾವಿತ್ವಾಭಾವಾತ್ ಕಥಂ ಕಾರಣತ್ವಮಿತಿ ಭಾವಃ । ದ್ವಿತೀಯಂ ದೂಷಯತಿ – **ಸ್ವಕಾರಣೇತಿ ॥** ಗುರುಃ ಗೌರವದೋಷಗ್ರಸ್ತಃ ತೇ ತ್ವದುಕ್ತಸ್ವಭಾವಃ ಪತೇದ್ವ್ಯರ್ಥೋ ಭವೇದಿತ್ಯರ್ಥಃ । ಗೌರವಸ್ಯ ಪತನಹೇತುತ್ವಾತ್ಪತೇದಿತ್ಯುಕ್ತಮ್ । ತದಾಕಾರಾದೇವ ಕಾರ್ಯೋತ್ಪತ್ತಿಸಂಭವಾತ್ ಪುನಃ ಕಾರಣಸ್ವಭಾವಸ್ಯಾಪಿ ಹೇತುತ್ವಾಂಗೀಕಾರೇ ಕಲ್ಪನಾಗೌರವಮಿತಿ ಭಾವಃ ॥ ೨೪೮ ॥

**ವಿವರಣೆ—** 'ಕಾರ್ಯನಿಯತಪೂರ್ವವೃತ್ತಿ ಕಾರಣಂ' ಎಂಬುದಾಗಿ ಕಾರಣದ ಲಕ್ಷಣ ಇರುತ್ತದೆ. ಕಾರ್ಯಕ್ಕಿಂತಲೂ ಮೊದಲು ನಿಯತವಾಗಿ ಕಾರಣವು ಇರಬೇಕು ಎಂದರ್ಥ.

ತನ್ನ ಸ್ವಭಾವದ ಉತ್ಪತ್ತಿಕ್ಕಿಂತ ಪೂರ್ವದಲ್ಲಿ ತನ್ನ ಸ್ವಭಾವವು ಉತ್ಪನ್ನವಾಗದಿರುವುದರಿಂದ ಪೂರ್ವದಲ್ಲಿರುವಿಕೆ ಇಲ್ಲವಾದ್ದರಿಂದ ಕಾರಣತ್ವವು ಹೇಗೆ? ಕಾರಣದಿಂದಲೇ ಕಾರ್ಯದ ಉತ್ಪತ್ತಿಯು ಸಂಭವಿಸುವುದರಿಂದ ಮತ್ತು ಕಾರಣಸ್ವಭಾವಕ್ಕೂ ಕಾರಣತ್ವವನ್ನು ಅಂಗೀಕಾರ ಮಾಡಿದ ಪಕ್ಷದಲ್ಲಿ ಕಲ್ಪನಾಗೌರವವೆಂಬ ದೋಷವು ಬರುವುದೆಂದು ಸುರೋತ್ತಮ ತೀರ್ಥರ ವ್ಯಾಖ್ಯಾನ ಹೇಳುತ್ತಿದೆ.

ತನ್ನ ಕಾರಣಸಾಮಗ್ರಿಯ ಉತ್ಪತ್ತಿಯಿಂದ ತನ್ನ ಉತ್ಪತ್ತಿಯಾಗುವುದಾದರೆ ಈಶ್ವರನು ಹೇಗೆ ತಾನೆ ಸಿದ್ಧನಾಗುತ್ತಾನೆಂಬುದನ್ನು 'ತದಾ' ಇತ್ಯಾದಿ ಶ್ಲೋಕದಿಂದ ತಿಳಿಸುತ್ತಾರೆ -

**ತದಾ ಕಾರಣಚಕ್ರಸ್ಥಃ ಕರ್ತಾಪ್ಯಾವಶ್ಯಕೋऽಸ್ಯ ಹಿ ।**
**ಮಹೀಮಹೀಧರಾದೇಶ್ಚ ಯಃ ಕರ್ತಾ ಸ ಮಹೇಶ್ವರಃ ॥ ೨೪೯ ॥**

**ಅರ್ಥ–** ತದಾ = ಆಗ, ಕಾರಣಚಕ್ರಸ್ಥಃ = ಕಾರಣಸಾಮಗ್ರಿಯಲ್ಲಿ ಅನುಪ್ರವಿಷ್ಟವಾದ, ಅಸ್ಯ = ಈ ಜಗತ್ತಿನ, ಕರ್ತಾಪಿ = ಕರ್ತನೂ, ಆವಶ್ಯಕಃ = ಅವಶ್ಯಕನು, ಹಿ = ನಿಶ್ಚಯ, ಮಹೀ= ಭೂಮಿಗೆ, ಮಹೀಧರಾದೇಶ್ಚ= ಪರ್ವತಾದಿಗಳಿಗೂ ಕೂಡ, ಯಃ = ಯಾವನು, ಕರ್ತಾ= ಸೃಷ್ಟ್ಯಾದಿಗಳನ್ನು ಮಾಡುವನೋ, ಸಃ = ಅವನು, ಮಹೇಶ್ವರಃ = ಪರಮಾತ್ಮನು.

**ಅನುವಾದ–** ಕಾರ್ಯವನ್ನುಂಟು ಮಾಡುವ ಕಾರಣಸಾಮಗ್ರಿಗಳಲ್ಲಿ ಕರ್ತೃವೂ ಕೂಡ ಸೇರಿಕೊಂಡಿರುತ್ತಾನಾದ್ದರಿಂದ ನಮ್ಮಿಂದ ಉತ್ಪತ್ತಿಮಾಡಲಸಾಧ್ಯವಾದ ಈ ಭೂಮಿ, ಪರ್ವತ, ಆಕಾಶಾದಿಗಳನ್ನು ಬೇರೊಬ್ಬನು ಸೃಷ್ಟಿಮಾಡಿರಲೇಬೇಕು. ಅವನೇ ಪರಮಾತ್ಮನು (ಈಶ್ವರನು).

**ಭಾವವಿಲಾಸಿನೀ–**ಸ್ವಕಾರಣಾತ್ ಸ್ವಯಂ ಭವತೀತ್ಯುಕ್ತೇऽಪಿ ಜಗದೀಶಸ್ಯ ಕಾರಣತ್ವೇ ಕಿಮಾಯಾತಮಿತ್ಯತ ಆಹ – **ತದೇತಿ** ॥ ಕಾರಣಚಕ್ರಸ್ಥಃ ಕಾರಣಕಲಾಪಪ್ರವಿಷ್ಟಃ । ಅಸ್ಯ ಜಗತಃ । ನನು ಅಸ್ಮದಾದಿರೇವ ಜಗತ್ಕರ್ತೇತ್ಯತ ಆಹ – **ಮಹೀತಿ** ॥ ಮಹ್ಯಾದ್ಯುಪಾದಾನಗೋಚರಾಪರೋಕ್ಷಜ್ಞಾನಾದಿಕಮಸ್ಮದಾದೇರ್ನಾಸ್ತೀತಿ ಭಾವಃ । ನಚ ಮಹ್ಯಾದಿಕಂ ನಿತ್ಯಮೇವೇತಿ ವಾಚ್ಯಮ್ । ತನ್ನಿತ್ಯತ್ವೇ ಪ್ರಮಾಣಾಭಾವಾತ್ । ಅಂಕುರಾದೀನಾಮನಿತ್ಯತ್ವಾನುಭವಾಚ್ಚ ॥ ನಹಿ ಗಿರಿದರೀವತ್ಯಂಕುರಾದೀನಾಮಸ್ಮದಾದಿಃ ಕರ್ತಾ ॥ ಕಿಂಚ ಕೃಷೀವಲಾದೇಃ ಬೀಜಾವಾಪಮಾತ್ರಕರ್ತೃತ್ವೇऽಪಿ ಬೀಜಾದಂಕುರಜನನಸ್ಯ ಈಶ್ವರಕರ್ತೃಕಸ್ಯಾವಶ್ಯಂಭಾವಾಚ್ಚ । ಅಸ್ಮದಾದೀನಾಮಸ್ವಾತಂತ್ರ್ಯೇಣಾಸ್ಮತ್ಪ್ರೇರಣಕರ್ತೃತ್ವೇನಾಪೀಶ್ವರಸ್ಯಾಂಗೀಕಾರ್ಯತ್ವಾಚ್ಚ ॥ ೨೪೯ ॥

**ವಿವರಣೆ–** ಭೂಮಿ-ಪರ್ವತಾದಿಗಳ ಉಪಾದಾನ ವಿಷಯಕವಾದ ಅಪರೋಕ್ಷ ಜ್ಞಾನವು ನಮಗಿಲ್ಲವಾದುದರಿಂದ ನಮಗೆ ಭೂಮಿ ಪರ್ವತಾದಿಗಳ ಕರ್ತೃತ್ವವು ಇಲ್ಲ. ಭೂಮ್ಯಾದಿಗಳು ನಿತ್ಯವೇ ಆಗಿವೆ ಎಂದು ಹೇಳಲಿಕ್ಕಾಗದು. ಅವು ನಿತ್ಯ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಅಂಕುರಾದಿಗಳು ಅನಿತ್ಯವೆಂಬುದು ಅನುಭವಸಿದ್ಧವಾಗಿದೆ.

ಪರ್ವತಗಳ ತುದಿಯಲ್ಲಿ ಹಾಗೂ ಗುಹೆಗಳಲ್ಲಿಯೂ ಅಂಕುರಗಳ ಉತ್ಪತ್ತಿ ಇದೆ. ಆ ಅಂಕುರಗಳ ಉತ್ಪತ್ತಿಗೆ ಕರ್ತೃಗಳು ನಾವಲ್ಲ. ಅದರ ಕರ್ತಾ ಈಶ್ವರ (ಪರಮಾತ್ಮ) ನು ಆಗಿದ್ದಾನೆ. ರೈತನಾದವನು ಭೂಮಿಯಲ್ಲಿ ಬೀಜವನ್ನು ಮಾತ್ರ ಬಿತ್ತುತ್ತಾನೆ. ಆದರೆ ಅಂಕುರವನ್ನು ಹುಟ್ಟಿಸಲು ಪರಮಾತ್ಮನು ಬೇಕೇಬೇಕು. ಅಷ್ಟೇ ಏಕೆ, ನಾವುಗಳು ಅಸ್ವತಂತ್ರರಾಗಿರುವುದರಿಂದ ನಮ್ಮನ್ನೂ ಪ್ರೇರೇಪಿಸುವನು (ಪರಮಾತ್ಮ) ಈಶ್ವರನೆಂದು ಅವಶ್ಯವಾಗಿ ಒಪ್ಪಲೇಬೇಕು ಎಂದು ತಾತ್ಪರ್ಯ.

**ಕಾರಣಚಕ್ರದಲ್ಲಿ (ಕಾರಣಸಾಮಗ್ರಿಯಲ್ಲಿ) ಕರ್ತೃವಿನ ಅಪೇಕ್ಷಾ ಇಲ್ಲ. ಒಂದು ವೇಳೆ ಅಪೇಕ್ಷಿತವಾದಲ್ಲಿ ಅದೃಷ್ಟದ್ವಾರಕವಾದ ಕರ್ತೃವೆ ಸಾಕು. ಬೇರೆ ಈಶ್ವರ ಏಕೆ? ಎಂದರೆ ಬಾಧಕ ಹೇಳಿ ನಿರಾಕರಿಸುತ್ತಾರೆ. 'ನಚೇತ್ಕುಲಾಲಾ' ಇತ್ಯಾದಿ ಶ್ಲೋಕದಿಂದ-**

**ನಚೇತ್ಕುಲಾಲಕಾರ್ಮಾದ್ಯಾ ನಾಪೇಕ್ಷ್ಯೇರನ್ ಸ್ಥಲೇಸ್ಥಲೇ ।**
**ಅನ್ಯಥಾ ದೃಷ್ಟಹಾನಿಃ ಸ್ಯಾದದೃಷ್ಟಸ್ಯ ಚ ಕಲ್ಪನಾ ॥ ೨೫೦ ॥**

**ಅರ್ಥ–** ನಚೇತ್ = ಬೇರೆ ಕರ್ತೃವು ಬೇಡವೆಂದು ಹೇಳಿದಲ್ಲಿ, ಕುಲಾಲಕಾರ್ಮಾದ್ಯಾಃ = ಕುಂಬಾರ ಕಮ್ಮಾರಾದಿಗಳು, ಸ್ಥಲೇಸ್ಥಲೇ = ಬೇರೆ ಬೇರೆ ಸ್ಥಳಗಳಲ್ಲಿ, ನಾಪೇಕ್ಷೇರನ್ = ಆ ಆ ಕಾರ್ಯಗಳಿಗೆ ಅವರ ಅಪೇಕ್ಷೆ ಇಲ್ಲದೆ ಹೋದಾರು.

**ಅನುವಾದ–** ಕರ್ತೃವಿಲ್ಲದೆ ಅಥವಾ ಅದೃಷ್ಟದ್ವಾರಕ ಕರ್ತೃವಿನಿಂದಲೇ ಕಾರ್ಯವುಂಟಾಗುತ್ತಿರಲು ಪ್ರತಿ ಗ್ರಾಮಗಳಲ್ಲಿ ಘಟ-ಮನೆ-ತೈಲಾದಿಕಾರ್ಯಗಳಿಗೋಸ್ಕರ ಕುಂಬಾರ ಮನೆಕಟ್ಟುವ ಮೊದಲಾದ ಕರ್ತೃಗಳ ಸಂಗ್ರಹವು ವ್ಯರ್ಥವಾಗುತ್ತದೆ. ಅಲ್ಪ ಕಾರ್ಯಗಳಿಗೆ ಆ ಆ ವ್ಯಕ್ತಿಗಳ ಅಪೇಕ್ಷೆ ಇದ್ದಲ್ಲಿ ಇನ್ನು ಭೂಮಿ-ಪರ್ವತ ಗುಹಾದಿ ಮಹಾಕಾರ್ಯಗಳಿಗೆ ಮಹಾಕರ್ತೃವಿನ ಅಪೇಕ್ಷೆ ಇದ್ದೇ ಇರುತ್ತದೆ. ಇದನ್ನು ಒಪ್ಪದೇ ಹೋದಲ್ಲಿ ಕುಂಬಾರಾದಿಗಳಿಗೆ ಘಟಾದಿಕಾರ್ಯಕರ್ತೃತ್ವವು ಕಂಡು ಬಂದಿದ್ದು ಇದೆ. ಅದು ಕಾಣದೇ ಹೋಗಬೇಕಾದೀತು. ಕರ್ತೃವಿಲ್ಲದೇ ಕಾರ್ಯವುಂಟಾಗುವುದು ಎಲ್ಲೂ ಕಂಡು ಬಂದಿಲ್ಲವಾದ್ದರಿಂದ ಅದೃಷ್ಟವಾದದ್ದನ್ನು ಕಲ್ಪನೆಮಾಡುವಂತಹ ಪ್ರಸಂಗವು ಬರುತ್ತದೆ.

**ಭಾವವಿಲಾಸಿನೀ–**ನನು ಕಾರಣಚಕ್ರೇ ಕರ್ತೈವನಾಪೇಕ್ಷಿತಃ ಅಪೇಕ್ಷಿತಶ್ಚೇದ್ ಅದೃಷ್ಟದ್ವಾರಕಕರ್ತ್ರೈವಾಲಮ್, ಕಿಮನ್ಯೇನೇತ್ಯತ ಆಹ – **ನಚೇದಿತಿ** ॥ ಸ್ಥಲೇಸ್ಥಲೇ ಗ್ರಾಮೇಗ್ರಾಮೇ। ಕರ್ತಾರಂ ವಿನಾ ವಾ ಅದೃಷ್ಟದ್ವಾರಕಕರ್ತ್ರಾ ವಾ ಕಾರ್ಯೋತ್ಪತ್ತೌ ಗ್ರಾಮೇಗ್ರಾಮೇ ಪ್ರೇಕ್ಷಾವತಾಂ ಘಟಗೃಹತೈಲಾದಿಕಾರ್ಯಾಯ ಕುಲಾಲಕಾರ್ಮಾದ್ಯದೃಷ್ಟಾದ್ವಾರಕಕರ್ತೃಸಂಗ್ರಹೋ ವ್ಯರ್ಥಃ ಸ್ಯಾತ್। ಅಲ್ಪಕಾರ್ಯೇಷ್ವಪಿ ತದಪೇಕ್ಷಾಯಾಂ ಮಹೀಮಹೀಧರಾದಿಮಹಾಕಾರ್ಯಕರಣಾಯ ಸುತರಾಂ ತದಪೇಕ್ಷೇತಿ ಭಾವಃ ।

ತದನಂಗೀಕಾರೇ ಬಾಧಕಮಾಹ – **ಅನ್ಯಥೇತಿ** ॥ ಕುಲಾಲಾದೀನಾಂ ತತ್ಕಾರ್ಯಕರ್ತೃತ್ವಸ್ಯ ದೃಷ್ಟತ್ವಾದ್ ದೃಷ್ಟಹಾನಿಃ ಸ್ಯಾತ್ । ಕರ್ತೃನಿರಪೇಕ್ಷಕಾರಣಚಕ್ರಾತ್ ಕಾರ್ಯಸ್ಯ ಕ್ವಾಪ್ಯದೃಷ್ಟತ್ವೇನ ಅದೃಷ್ಟಕಲ್ಪನಾಪ್ರಸಂಗಃ ಸ್ಯಾದಿತ್ಯರ್ಥಃ ॥ ೨೫೦ ॥

**ವಿವರಣೆ**– 'ದೃಷ್ಟಹಾನಿಃ ಅದೃಷ್ಟಸ್ಯಕಲ್ಪನಾ ಪ್ರಸಂಗಃ' ಎದು ಶಾಸ್ತ್ರದಲ್ಲಿ ಪ್ರಧಾನವಾದ ಪ್ರಸಂಗದೋಷವನ್ನು ಅಲ್ಲಲ್ಲಿ ಹೇಳುವುದುಂಟು. ಕಣ್ಣಿಗೆ ಕಂಡು ಅನುಭವಸಿದ್ಧ ವಾದುದನ್ನು ಬಿಟ್ಟು ಪ್ರಮಾಣವಿರುದ್ಧವಾದ ಅನುಭವಕ್ಕೆ ವಿರುದ್ಧವಾದ ಪ್ರಮೇಯಗಳನ್ನು ಅಂಗೀಕರಿಸಿದಾಗ ಈ ಪ್ರಸಂಗದೋಷವನ್ನು ಹೇಳುತ್ತಾರೆ. ಪ್ರಕೃತದಲ್ಲಿ ನಮಗೆ ಅಸಾಧ್ಯವಾದ ಕಣ್ಣಿಗೆ ಕಾಣುವ ಹಾಗು ಅನುಭವಸಿದ್ಧವಾದ, ಈ ಚರಾಚರ ಪ್ರಪಂಚಕ್ಕೆ ಮಹಾಪುರುಷನಾದ ಪರಮಾತ್ಮನು ಉತ್ಪತ್ತ್ಯಾದಿಗಳನ್ನು ಮಾಡುತ್ತಾನೆಂಬುದನ್ನು ಒಪ್ಪದೆ ಕಣ್ಣಿಗೆ ಕಾಣದೇ ಇರುವ ಸ್ವಭಾವ (ತನ್ನಷ್ಟಕ್ಕೆ ತಾನೇ)ವನ್ನು ಒಪ್ಪುವುದು ಇದೆ. ಆದ್ದರಿಂದ ಈ ದೋಷಬರುತ್ತದೆ.

**ಯತ್ನೇನ ಸಾಧ್ಯತೇ ಮೋಕ್ಷೋ ಯದಿ ತರ್ಹಿ ಸ್ವಭಾವವಾಕ್ ।**
**ಅಭಾವಮಾಪ ನೋಚೇತ್ತೇ ವ್ರತಚರ್ಯಾ ಬಹಿರ್ಯಯೌ ॥ ೨೫೧ ॥**

**ಅರ್ಥ**– ಯದಿ = ಒಂದು ವೇಳೆ, ಮೋಕ್ಷಃ = ಮೋಕ್ಷವು, ಯತ್ನೇನ = ಪ್ರಯತ್ನದಿಂದ, ಸಾಧ್ಯತೇ = ಸಾಧಿಸಲ್ಪಡುವುದಾದರೆ, ತರ್ಹಿ = ಆಗ, ಸ್ವಭಾವವಾಕ್ = ಸ್ವಭಾವದಿಂದ ಎಲ್ಲವೂ ಆಗುತ್ತದೆ ಎಂಬ ಮಾತು, ಅಭಾವಂ = ನಾಶವನ್ನು, ಆಪ = ಹೊಂದಿತು, ನೋ ಚೇತ್ = ಇಲ್ಲವಾದರೆ, ತೇ = ನಿನ್ನ (ಬೌದ್ಧನ) ವ್ರತಚರ್ಯಾ = ವ್ರತನಿಯಮಾದಿಗಳು, ಬಹಿಃ = ಗ್ರಾಮದಿಂದ ಹೊರಗೆ, ಯಯೌ = ಹೋಯಿತು.

**ಅನುವಾದ**– ಬೌದ್ಧ ಮತದಲ್ಲಿ, ಮೋಕ್ಷವು ಸಿಗಬೇಕಾದರೆ ವ್ರತ ನಿಯಮಾದಿಗಳನ್ನು ಮಾಡಬೇಕೆಂದು ಅಂಗೀಕರಿಸಿದ್ದಾರೆ. ಆದ್ದರಿಂದ ಸ್ವಭಾವದಿಂದಲೇ ಎಲ್ಲವೂ ಆಗುತ್ತದೆಂಬ ಮಾತು ನಾಶವಾಯಿತು. ಇಲ್ಲವಾದಲ್ಲಿ ವ್ರತನಿಯಮಾದಿಗಳನ್ನು ಮಾಡಬೇಕೆಂಬ ನಿಯಮಗಳು ಹಾಳಾಗಿ ಹೋದವು ಎಂದು ಅಭಿಪ್ರಾಯ.

**ಭಾವವಿಲಾಸಿನೀ**–ಪ್ರಕಾರಾಂತರೇಣ ದೂಷಯತಿ – **ಯತ್ನೇತಿ** ॥ ಯದಿ ಮೋಕ್ಷಃ ಯತ್ನೇನ ಸಾಧ್ಯತೇ, ತರ್ಹಿ ಸ್ವಭಾವವಾಕ್ ಸ್ವಭಾವಾದೇವ ಸರ್ವಂ ಭವತೀತಿ ವಾಗ್ ಅಭಾವಂ ನಾಶಮಾಪೇತಿ ಸಂಬಂಧಃ। ನೋಚೇದ್ ಯತ್ನಸಾಧ್ಯೋ ನ ಭವತಿ ಕಿನ್ತು ಸ್ವಭಾವಾದೇವ ಭವತೀತ್ಯಂಗೀಕಾರೇ ತೇ ತವ ಬೌದ್ಧಜೈನಾದೇಃ ವ್ರತಚರ್ಯಾ ವ್ರತಾಚರಣಂ ಬಹಿರ್ಯಯೌ ಗ್ರಾಮಾದ್ಬಹಿರ್ಗತೇತ್ಯರ್ಥಃ ॥ ೨೫೧ ॥

**ವಿವರಣೆ**– ಬೌದ್ಧರು ಹಾಗು ಜೈನರು ಇಬ್ಬರೂ ನಿರೀಶ್ವರವಾದಿಗಳು. ಈರ್ವರೂ ಸಹ ಅವರವರ ಮತದಲ್ಲಿ ಮೋಕ್ಷವು ಪ್ರಾಪ್ತವಾಗಬೇಕಾದರೆ ವ್ರತ-ನಿಯಮಾದಿಗಳನ್ನು

ಮಾಡಬೇಕೆಂದು ಅಂಗೀಕರಿಸಿದ್ದಾರೆ. ಸ್ವಭಾವದಿಂದಲೇ ಎಲ್ಲವೂ ಆಗುತ್ತದೆ ಎಂದು ಇದಕ್ಕಾಗಿ 'ಈಶ್ವರನನ್ನು' ಒಪ್ಪುವುದು ಬೇಡ ಎಂದು ಹೇಳುತ್ತಿದ್ದಾರೆ. ಹಾಗಾದರೆ ಸ್ವಭಾವದಿಂದಲೇ ಮೋಕ್ಷ ಸಿಗುತ್ತಿರುವಾಗ ಈ ವ್ರತ-ನಿಯಮಾದಿಗಳು ಹಾಳಾಗಿ ಹೋಯಿತಲ್ಲ ಎಂದು ಶ್ರೀವಾದಿರಾಜರ ಆಕ್ಷೇಪವಾಗಿದೆ. ಬೌದ್ಧರ ಹಾಗು ಜೈನರ ಅನುಯಾಯಿಗಳಲ್ಲಿ ಇಂದಿಗೂ ಅವರ ವೇಷ-ಭೂಷಣ-ಅಹಿಂಸಾದಿ ವ್ರತಗಳನ್ನು ನಾವು ಕಾಣುತ್ತಿದ್ದೇವೆ. ಅದೆಲ್ಲವೂ ವ್ಯರ್ಥವಾದಂತೆಯೇ ಸರಿ ಎಂದು ಅಭಿಪ್ರಾಯ.

**ಜಡಸ್ವಭಾವಕರ್ಮಾದಿಪ್ರೇರ್ಯಂಸ್ಯಾದಜಡೇನ ಹಿ ।**
**ಕಿಂ ಕುಠಾರಃ ಸ್ವಯಂ ಗಚ್ಛೇದ್‌ಘಟೋ ವಾ ಜಲಮಾಹರೇತ್ ॥ ೨೫೨ ॥**

**ಅರ್ಥ–** ಜಡ = ಜಡಪದಾರ್ಥದ, ಸ್ವಭಾವಕರ್ಮಾದಿ = ಸ್ವಭಾವಕರ್ಮಾದಿಗಳು, ಅಜಡೇನ = ಚೇತನ ಪದಾರ್ಥದಿಂದಲೇ, ಪ್ರೇರ್ಯಂ = ಪ್ರೇರೇಪಿಸಲ್ಪಡುವುದು, ಸ್ಯಾತ್ = ಆಗುತ್ತದೆ, ಹಿ = ನಿಶ್ಚಯ, ಕುಠಾರ = ಕೊಡಲಿಯು, ಸ್ವಯಂ = ತನ್ನಷ್ಟಕ್ಕೆ ತಾನೇ, ಗಚ್ಛೇತ್ ಕಿಂ = ಹೋಗುತ್ತದೆ ಏನು? ಘಟೋ ವಾ = ಮಡಕೆಯಾದರೂ, ಸ್ವಯಂ = ತನ್ನಷ್ಟಕ್ಕೆ ತಾನೇ, ಜಲಂ = ನೀರನ್ನು, ಆಹರೇತ್ ಕಿಂ = ತರುತ್ತದೆಯೇನು?

**ಅನುವಾದ–** ಲೋಕದಲ್ಲಿ ಜಡಪದಾರ್ಥಗಳು ಚೇತನದಿಂದ ಪ್ರೇರಿತಗಳಾಗಿ ಕಂಡು ಬಂದಿವೆ. ಕೊಡಲಿಯು ಅಚೇತನವಾದ್ದರಿಂದ ಸ್ವತಃ ಪ್ರವೃತ್ತಿಸುವ ಉದ್ದೇಶದಿಂದ ತನ್ನಷ್ಟಕ್ಕೆ ತಾನೇ ಹಸ್ತದ ಅವಲಂಬನೆ ಇಲ್ಲದ ವನಕ್ಕೆ ಹೋಗುತ್ತದೆಯೇನು? ಹಾಗೆಯೇ ಗಡಿಗೆಯು ನೀರನ್ನು ತಾನಾಗಿ ತರುತ್ತದೆಯೇನು?

**ಭಾವವಿಲಾಸಿನೀ–**ಯದುಕ್ತಸ್ವಭಾವಸ್ಯ ಜಡತ್ವೇ ಪರಪ್ರೇರ್ಯತ್ವಂ ತಜ್ಜ್ಞನಕರ್ತೃತಯೋಕ್ತ-ಕರ್ಮಾದಿಷ್ವಪ್ಯತಿದಿಶನ್ ಉಪಪಾದಯತಿ – **ಜಡೇತಿ** ॥ ಜಡಂ ಚ ತತ್ಸ್ವಭಾವಕರ್ಮಾದಿಕಂ ಚೇತಿ ವಿಗ್ರಹಃ । ಸ್ವಯಂ ಹಸ್ತಾದ್ಯಾಲಂಬನಂ ವಿನಾ ಗಚ್ಛೇದ್ ವನಂ ಪ್ರತೀತಿ ಶೇಷಃ । ಘಟೋ ವೇತ್ಯತ್ರಾಪಿ ಸ್ವಯಮಿತ್ಯಾವರ್ತನೀಯಮ್ ॥ ೨೫೨ ॥

**ವಿವರಣೆ–** ಇಲ್ಲಿ 'ಘಟೋ ವಾ' ಎಂಬಲ್ಲಿಯೂ ಸಹ 'ಸ್ವಯಂ' ಎನ್ನುವುದನ್ನು ಆವೃತ್ತಿ ಮಾಡಿಕೊಳ್ಳಬೇಕೆಂದು ಸುರೋತ್ತಮತೀರ್ಥರ ವ್ಯಾಖ್ಯಾನ.

**ಸ್ವಭಾವಸ್ಯ ತಿರಸ್ಕಾರಃ ಪುರಸ್ಕಾರಶ್ಚ ಪಾವಕೇ ।**
**ದೃಶ್ಯತೇ ಮಣಿಮನ್ತ್ರಾದ್ಯೈರ್ನತತ್ತಸ್ಯ ಸ್ವತಂತ್ರತಾ ॥ ೨೫೩ ॥**

**ಅರ್ಥ–** ಪಾವಕೇ = ಅಗ್ನಿಯಲ್ಲಿ, ಸ್ವಭಾವಸ್ಯ = ಸುಡುವಿಕೆಯ ಸ್ವಭಾವದ, ತಿರಸ್ಕಾರಃ = ಪ್ರತಿಬಂಧವು, ಮಣಿಮಂತ್ರಾದ್ಯೈಃ = ಮಣಿಗಳ, ಅಗ್ನಿಸ್ಥಂಭಕಮಂತ್ರಾದಿಗಳಿಂದ ದೃಶ್ಯತೇ =

ಕಾಣುತ್ತದೆ, ಪುರಸ್ಕಾರಶ್ಚ = ಪುನಃ ಸುಡುವಿಕೆಯು, ದೃಶ್ಯತೇ = ಕಾಣುತ್ತದೆ, ತತ್ = ಆದ ಕಾರಣದಿಂದ, ತಸ್ಯ = ಸ್ವಭಾವಕ್ಕೆ, ಸ್ವತಂತ್ರತಾ = ಸ್ವಾತಂತ್ರ್ಯವು, ನ = ಇರುವುದಿಲ್ಲ.

**ಅನುವಾದ–** ಬೆಂಕಿಯ ಸ್ವಭಾವವು ಸುಡುವಂಥಾದ್ದು. ಆದರೆ ಅಗ್ನಿಸ್ಥಂಭಕ ಮಂತ್ರವನ್ನುಚ್ಚರಿಸಿದಾಗ ಅಗ್ನಿಯು ಶಾಂತವಾಗುತ್ತದೆ. ಪುನಃ ಪ್ರತಿಮಂತ್ರವನ್ನು ಅಥವಾ ಔಷಧಿಗಳನ್ನು ಹಾಕಿದಾಗ ಪುನಃ ಅಗ್ನಿಯು ಪ್ರಜ್ವಲಿಸುತ್ತದೆ. ಇದರಿಂದ ಪ್ರತಿಯೊಂದು ಪದಾರ್ಥದ ಸ್ವಭಾವಕ್ಕೆ ಸ್ವಾತಂತ್ರ್ಯ ಇಲ್ಲವೆಂಬುದು ಗೊತ್ತಾಗುತ್ತದೆ.

**ಭಾವವಿಲಾಸಿನೀ–**ಮಣಿಮನ್ತ್ರಾದಿನಾ ವಹ್ನೇರುಷ್ಣತ್ವಸ್ವಭಾವಸ್ಯಾಪಿ ತಿರಸ್ಕಾರದರ್ಶನಾತ್ ಪುನರುತ್ತೇಜಕೇನ ಪುರಸ್ಕಾರದರ್ಶನಾಚ್ಚ ನ ಸ್ವಭಾವಸ್ಯ ಸ್ವಾತಂತ್ರ್ಯಮಿತ್ಯಾಹ – **ಸ್ವಭಾವಸ್ಯೇತಿ** ॥ ತಿರಸ್ಕಾರಃ ಪ್ರತಿಬಂಧಃ । ಪುರಸ್ಕಾರಃ ಶಕ್ತ್ಯಾವಿರ್ಭಾವಃ । ತತ್ತಸ್ಮಾತ್ತಸ್ಯ ಸ್ವಭಾವಸ್ಯ ॥ ೨೫೩ ॥

**ವಿವರಣೆ–** ಮಣಿಮಂತ್ರಾದಿಗಳಿಂದ ಬೆಂಕಿಯಲ್ಲಿರುವ ದಾಹಸ್ವಭಾವವನ್ನು ಪ್ರತಿಬಂಧಿಸುವುದನ್ನು ಕಂಡಾಗ ಹಾಗೂ ಪುನಃ ಉತ್ತೇಜಕದಿಂದ ಬೆಂಕಿಯಲ್ಲಿರುವ ದಾಹವನ್ನು ಕಂಡಾಗ ಪ್ರತಿಯೊಂದು ವಸ್ತುವಿನ ಸ್ವಭಾವಕ್ಕೆ ಸ್ವಾತಂತ್ರ್ಯವಿಲ್ಲವೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಇಲ್ಲಿ ತಿರಸ್ಕಾರವೆಂದರೆ ಪ್ರತಿಬಂಧವೆಂದೂ ಪುರಸ್ಕಾರವೆಂದರೆ ಶಕ್ತಿಯ ಆವಿರ್ಭಾವವೆಂದೂ, ತತ್ ಎಂಬ ಪ್ರಥಮಾಂತ ಶಬ್ದಕ್ಕೆ ತಸ್ಮಾತ್ ಎಂಬ ಪಂಚಮ್ಯರ್ಥವನ್ನು ಇಟ್ಟುಕೊಳ್ಳಬೇಕೆಂದೂ ಶ್ರೀ ಸುರೋತ್ತಮತೀರ್ಥರ ವ್ಯಾಖ್ಯಾನ.

ಸ್ವಭಾವ ಹಾಗೂ ಕರ್ಮಾದಿಗಳು ಚೇತನವ್ಯಕ್ತಿಯಿಂದಲೇ ಪ್ರೇರಿತವಾಗುತ್ತವೆ ಎಂಬುದಾಗಿ ಹೇಳಲಾಗಿದೆ. ಆ ಚೇತನವು ನಾವುಗಳು ಆಗಲಿಕ್ಕೆ ಸಾಧ್ಯವಿಲ್ಲ ಏಕೆಂದರೆ ಬಾಧಿತವಾಗುತ್ತದೆಂದು 'ಸ್ವಾನಿಷ್ಟಸ್ಯ' ಮುಂತಾದ ಶ್ಲೋಕದಿಂದ ಹೇಳುತ್ತಿದ್ದಾರೆ.

**ಸ್ವಾನಿಷ್ಟಸ್ಯ ಹಿ ಕರ್ಮಾದೇಃ ಪ್ರೇರಕೋ ನ ಸ್ವಯಂ ಜನಃ ।**
**ಅತಸ್ತತ್ಪ್ರೇರಣಾಯಾನ್ಯೋ ಮಾನ್ಯಂ ಕೋಽಪಿ ಮನೀಷಿಣಾ ॥ ೨೫೪ ॥**

**ಅರ್ಥ–** ಜನಃ = ಯಾವೊಬ್ಬ ಮನುಷ್ಯನೂ, ಸ್ವ = ತನಗೆ, ಅನಿಷ್ಟಸ್ಯ = ಅನಿಷ್ಟವಾದ, ಕರ್ಮ = ನಾಲಿಗೆ ಕಚ್ಚುವಿಕೆ ಮುಂತಾದ ಕ್ರಿಯೆಗಳಿಗೆ ಮತ್ತು, ಆದೇಃ = ಉನ್ಮಾದಾದಿಸ್ವಭಾವಗಳಿಗೆ, ಸ್ವಯಂ = ತಾನೇ, ಪ್ರೇರಕಃ = ಪ್ರೇರಕನು, ನ = ಆಗುವುದಿಲ್ಲ, ಹಿ = ನಿಶ್ಚಯ, ಅತಃ = ಆದ ಕಾರಣದಿಂದ, ತತ್ = ಅಂತಹ ಅನಿಷ್ಟಕರ್ಮದ, ಪ್ರೇರಣಾಯ = ಪ್ರೇರಣೆಗೋಸ್ಕರ, ಅನ್ಯಃ = ಬೇರೆಯಾಗಿರತಕ್ಕ, ಕೋಽಪಿ = ಯಾವನಾದರೊಬ್ಬ ಮಾನ್ಯಃ = ಮಹಾತ್ಮನು, ಮನೀಷಿಣಾ = ವಿಚಾರಿ ಪುರುಷನಿಂದ, ಅಂಗೀಕಾರ್ಯಃ = ಅಂಗೀಕರಿಸಲ್ಪಡಬೇಕು.

**ಅನುವಾದ–** ನಾವು ನಮ್ಮ ನಾಲಿಗೆಯನ್ನು ನಾವೇ ಒಮ್ಮೆ ಕಚ್ಚಿಕೊಳ್ಳುತ್ತೇವೆ. ಈ ಕಾರ್ಯಕ್ಕೆ ನಾವು ಪ್ರೇರಕರಾಗಲಾರೆವು. ಏಕೆಂದರೆ ಅದು ನಮಗೆ

ಅನಿಷ್ಟವಾಗಿರುತ್ತದೆ. ಆದ್ದರಿಂದ ಇದನ್ನು ಪ್ರೇರೇಪಿಸುವನು ಬೇರೆಯಾದ ಒಬ್ಬ ಮಹಾತ್ಮನು ಇರುತ್ತಾನೆಂದು ಅಂಗೀಕರಿಸುವುದು ಅವಶ್ಯಕವಾಗುತ್ತದೆ. ಆ ಮಹಾತ್ಮನೇ (ಈಶ್ವರ) ಪರಮಾತ್ಮನೆಂದು ಅಂಗೀಕರಿಸುವುದು ಸೂಕ್ತ.

**ಭಾವವಿಲಾಸಿನೀ**–ಸ್ವಭಾವಕರ್ಮಾದೇಶ್ಚೇತನಪ್ರೇರ್ಯತ್ವಮುಕ್ತಮ್ । ಸ ಚೇತನೋ ನಾಸ್ಮದಾದಿರನುಭವಬಾಧಿತತ್ವಾದಿತ್ಯಾಹ – **ಸ್ವಾನಿಷ್ಟಸ್ಯೇತಿ** ॥ ಕರ್ಮಪದೇನ ಸ್ವಜಿಹ್ವಾದಂಶನಾದಿಕರ್ಮ ಸ್ವೋದರಶೂಲಾದೇರ್ಹೇತುಭೂತಪಾಪಂ ಚೋಚ್ಯತೇ । ಆದಿಪದೇನ ಉನ್ಮಾದಾದಿಕಂ ಸ್ವಭಾವೋ ಗೃಹ್ಯತೇ । ಅತಃ ಸ್ವಸ್ಯ ಸ್ವಾನಿಷ್ಟಪ್ರೇರಕತ್ವಾಯೋಗಾತ್ । ಅನ್ಯಃ ಅಸ್ಮದಾದೇಃ । ಕೋಽಪೀತ್ಯನೇನ ಅಸ್ಮದಾದ್ಯದೃಷ್ಟಶಕ್ತಿಮತ್ತ್ವಂ ದ್ಯೋತಯತಿ ॥ ೨೫೪ ॥

**ವಿವರಣೆ**– ಇಲ್ಲಿ ಕರ್ಮ ಪದದಿಂದ ನಮ್ಮ ನಾಲಿಗೆಯನ್ನು ನಾವೇ ಕಚ್ಚಿಕೊಳ್ಳುವುದೂ, ತನ್ನ ಹೊಟ್ಟೆಯ ಶೂಲೆಗೆ ಕಾರಣವಾದ ಪಾಪವಿಶೇಷವೂ ವಿವಕ್ಷಿತವಾಗಿದೆ ಎಂದು ತಿಳಿಯಬೇಕು ಮತ್ತು ಆದಿಪದದಿಂದ ಉನ್ಮಾದಾದಿಸ್ವಭಾವವನ್ನು ತೆಗೆದುಕೊಳ್ಳಬೇಕು. ಅನ್ಯಪದಕ್ಕೆ ನಮಗಿಂತಲೂ ಬೇರೆಯಾದ ಒಬ್ಬ ವ್ಯಕ್ತಿ ಎಂದು ಅರ್ಥೈಸಬೇಕು. ಈ ಶ್ಲೋಕದಲ್ಲಿರುವ 'ಕೋಽಪಿ' ಎಂಬ ಪದದಿಂದ 'ನಾವು ಕಾಣದಿರುವ ಶಕ್ತಿ ವಿಶೇಷವಿದೆ' ಎಂದು ಗೊತ್ತಾಗುತ್ತದೆ. ಆ ಅದೃಷ್ಟಶಕ್ತಿ ವಿಶೇಷವೇ ಪರಮಾತ್ಮ ಅವನೇ ಪರಮ ಚೇತನ.

ಉತ್ಕೃಷ್ಟವಾದ ವಾಯುವಿನಿಂದ ಪುರುಷನು ಮೇಲೆ ಹೋಗುವಂತೆ, ಕುತ್ತಿಗೆಯಲ್ಲಿರುವ ಕಲ್ಲಿನ ಭಾರದಿಂದ ಪುರುಷನು ಕೆಳಗೆ ಹೋಗುವಂತೆ ಕಂಡು ಬಂದಿರುವುದರಿಂದ ಜಡವಾದ ಪುಣ್ಯಪಾಪಗಳು ಊರ್ಧ್ವ ಹಾಗು ಅಧೋ ಲೋಕಗಳ ಗಮನಕ್ಕೆ ಕಾರಣವಾಗಿವೆ. ಈಶ್ವರ ಏಕೆ ಬೇಕು? ಎಂಬುದನ್ನು ಪರಿಹರಿಸಲು 'ನಹಿ' ಇತ್ಯಾದಿ ಶ್ಲೋಕ ಹೊರಟಿದೆ.

**ನಹಿ ಪುಣ್ಯಸ್ಯ ಲಘುತಾ ಪಾಪಸ್ಯ ಗುರುತಾಽಪಿ ವಾ ।**
**ಯದುನ್ನಯೇಲ್ಲಾಘವಾದ್ವಾ ಗೌರವಾದ್ವಾಽಪ್ಯಧೋ ನಯೇತ್ ।**
**ಅತಃ ಶಿಲಾದಿದೃಷ್ಟಾನ್ತೋಽಪ್ಯುಕ್ತೇರ್ಭಾರಾಯ ಕೇವಲಮ್ ॥ ೨೫೫ ॥**

**ಅರ್ಥ**– ಪುಣ್ಯಸ್ಯ = ಪುಣ್ಯಕ್ಕೆ, ಲಘುತಾ = ಹಗುರವಾಗಿರುವಿಕೆಯು, ವಾ = ಅಥವಾ, ಪಾಪಸ್ಯ = ಪಾಪಕ್ಕೆ, ಗುರುತಾಽಪಿ = ಭಾರವಾಗಿರುವಿಕೆಯು ಆಗಲಿ, ನಹಿ = ಇರುವುದಿಲ್ಲ ಯತ್ = ಯಾವ ಪುಣ್ಯವು, ಲಾಘವಾತ್ = ಹಗುರವಾಗಿರುವುದರಿಂದ, ಉನ್ನಯೇತ್ = ಮೇಲಕ್ಕೆ ಕೊಂಡುಹೋಗಬಹುದು. ಯಚ್ಚ = ಯಾವ ಪಾಪವಾದರೂ, ಗೌರವಾತ್ = ಭಾರವಾಗಿರುವುದರಿಂದ, ಅಧೋ = ನರಕವನ್ನು ಕುರಿತು, ನಯೇತ್ = ಕೊಂಡು ಹೋಗಬಹುದು. ಅತಃ = ಆದುದರಿಂದ, ಶಿಲಾದಿ = ಕಲ್ಲು ವಾಯುಗಳ, ದೃಷ್ಟಾಂತೋಪಿ = ಉದಾಹರಣೆಯೂ ಕೂಡ, ಕೇವಲಂ = ಕೇವಲ, ಉಕ್ತೇಃ = ವಚನದ, ಭಾರಾಯ ಗೌರವಕ್ಕೋಸ್ಕರ (ಅನುಪಯುಕ್ತವಾಗಿದೆ).

**ಅನುವಾದ–** ಭಾರವಾದ ಕಲ್ಲು ಕೆಳಗೆಕೊಂಡು ಹೋಗುವಂತೆ, ಹಗುರವಾದ ಗಾಳಿಯು, ಹತ್ತಿಯೇ ಮೊದಲಾದ ವಸ್ತುಗಳನ್ನು ಮೇಲಕ್ಕೆ ತೆಗೆದುಕೊಂಡು ಹೋಗುವಂತೆ ಪುಣ್ಯಕರ್ಮ ಹಾಗು ಪಾಪಕರ್ಮಗಳೇ ಪುರುಷನನ್ನು ಸ್ವರ್ಗವೇ ಮೊದಲಾದ ಪುಣ್ಯಲೋಕಕ್ಕೆ ಹಾಗು ನರಕವೇ ಮೊದಲಾದ ಅಧೋಲೋಕಕ್ಕೆ ಕೊಂಡೊಯ್ಯುತ್ತವೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಪುಣ್ಯಕರ್ಮ ಹಗುರವಾಗಿಯಾಗಲಿ, ಪಾಪಕರ್ಮವು ಭಾರವಾಗಿಯಾಗಲಿ ಇರುವುದಿಲ್ಲ. ಕರ್ಮದಲ್ಲಿ ಭಾರವೆಂಬ ಪದಾರ್ಥವು ಇರುವುದಿಲ್ಲವಾದ್ದರಿಂದ ಕಲ್ಲಿನ ಉದಾಹರಣೆಯು ಉಪಯುಕ್ತವಾಗಿಲ್ಲ.

**ಭಾವವಿಲಾಸಿನೀ–**ನನು ಉತ್ಕಟವಾಯುನಾ ಪುರುಷಸ್ಯಾಪ್ಯುದ್ಗಮನದರ್ಶನಾತ್ ಕಂಠಲಗ್ನಶಿಲಾಭಾರೇ ಜಲೇ ಪುರುಷಸ್ಯಾಧೋಗಮನದರ್ಶನಾಚ್ಚ ಜಡಮೇವ ಪುಣ್ಯಪಾಪರೂಪಂ ಕರ್ಮ ಊರ್ಧ್ವಾಧೋಗಮನಹೇತುರ್ಭವೇತ್ । ಕಿಮೀಶ್ವರೇಣೇತಿ ಮಂದಾಶಂಕಾಂ ಪರಿಹರತಿ – **ನಹೀತಿ** ॥ ಲಘುತೇತ್ಯುಪಲಕ್ಷಣಮ್ । ವೇಗೋಽಪಿ ಗ್ರಾಹ್ಯಃ । ನನು ಪುಣ್ಯಪಾಪಯೋರ್ಲಘುತ್ವಗುರುತ್ವಚಿಂತಾ ಕಿಮರ್ಥೇತ್ಯತ ಉಕ್ತಮ್ – **ಯದಿತಿ** ॥ ಯತ್ಪುಣ್ಯಂ ಉನ್ನಯೇತ್ ಪುರುಷಂ ಊರ್ಧ್ವಂ ಸ್ವರ್ಗಂ ನಯೇತ್। ಯಚ್ಚ ಪಾಪಂ ಪುರುಷಮಧೋ ನರಕಂ ನಯೇತ್ । ತಯೋಃ ಪುಣ್ಯಪಾಪಯೋಃ ವಾಯುವತ್ ಶಿಲಾವಚ್ಚ ಲಘುತ್ವಗುರುತ್ವೇ ನೈವ ಸ್ತೋ ಹೀತಿ ಭಾವಃ । ಅತಃ ಪುಣ್ಯಪಾಪಯೋರ್ಲ-ಘುತ್ವಗುರುತ್ವಾಭಾವಾತ್ । ಆದಿಪದೇನ ವಾಯುರ್ಗ್ರಾಹ್ಯಃ । ಉಕ್ತೇರ್ಭಾರಾಯ ವಚನಗೌರವಾಯ ಶಾಸ್ತ್ರಬಹುತ್ವಾಯೇತ್ಯರ್ಥಃ ॥ ೨೫೫ ॥

**ವಿವರಣೆ–** ಲಘುತಾ ಎಂಬುದು ಉಪಲಕ್ಷಣವಾಗಿದೆ (ಅನುಕ್ತ ಸಂಗ್ರಾಹಕವಾಗಿದೆ). ವೇಗವನ್ನು ಕೂಡ ಸ್ವೀಕರಿಸಬಹುದು. ಪುಣ್ಯಪಾಪಗಳಲ್ಲಿ ವಾಯುವಿನಂತೆ ಹಗುರತೆಯು, ಕಲ್ಲಿನಂತೆ ಭಾರವು ಇರುವುದಿಲ್ಲ. ಶಿಲಾದಿ ಎಂಬಲ್ಲಿ ಆದಿ ಪದವಿದೆ. ಆ ಆದಿಪದದಿಂದ ವಾಯುವು ಸ್ವೀಕರಿಸಲು ಯೋಗ್ಯ.

ನಮ್ಮ ಮತದಲ್ಲಿ ದೃಷ್ಟಾಂತದಲ್ಲಿಯೂ ಕೂಡ ಕೇವಲ ಜಡ ಪದಾರ್ಥಕ್ಕೆ ಕರ್ತೃತ್ವವು ಇಲ್ಲದಿರುವುದರಿಂದ ದೃಷ್ಟಾಂತದಲ್ಲಿ ಸಮ್ಮತಿ ಇಲ್ಲವೆಂದು ಈ ಶ್ಲೋಕದಿಂದ ಹೇಳುತ್ತಿದ್ದಾರೆ.

ಸರ್ವಸ್ಯ ಕರ್ತಾ ತತ್ರಾಪಿ ಕಿಂ ನ ಕರ್ತಾ ಮಹೇಶ್ವರಃ ॥ ೨೫೬ ॥

**ಅರ್ಥ–** ಮಹೇಶ್ವರಃ = ಪರಮಾತ್ಮನು, ಸರ್ವಸ್ಯ = ಎಲ್ಲದಕ್ಕೂ, ಕರ್ತಾ = ಕರ್ತೃವಾಗಿದ್ದಾನೆ, ತತ್ರಾಽಪಿ = ಕಲ್ಲು ಹತ್ತಿ ಮುಂತಾದ ಪದಾರ್ಥಗಳಲ್ಲಿಯೂ, ಕರ್ತಾ = ಕರ್ತೃವು, ನ ಕಿಂ = ಆಗಿಲ್ಲವೇನು?

**ಅನುವಾದ–** ಪರಮಾತ್ಮನು ಸಮಸ್ತ ಜಗತ್ತಿಗೆ ಕರ್ತೃನಾದ ಮೇಲೆ ಜಡವಾದ ವಾಯು-ಕಲ್ಲುಗಳಿಗೂ ಕೂಡ ಕರ್ತೃನಾಗಲಾರನೇನು?

**ಭಾವವಿಲಾಸಿನೀ**–ಇದಾನೀಂ ದೃಷ್ಟಾಂತೇऽಪಿ ಕೇವಲಜಡಕರ್ತೃತಾಯಾ ಮನ್ಮತೇऽಭಾವಾದ-ಸಂಪ್ರತಿಪನ್ನೋ ದೃಷ್ಟಾಂತ ಇತ್ಯಾಹ – **ಸರ್ವಸ್ಯೇತಿ** ॥ ತತ್ರಾಪಿ ಶಿಲಾದಾವಪಿ ॥ ೨೫೬ ॥

**ವಿವರಣೆ**– ಈರ್ವರಿಗೂ ಉದಾಹರಣೆಯು ಸರ್ವಸ್ಯ ಕರ್ತಾ ಎಂಬ ಅನುಮಾನದಲ್ಲಿರುವ (ದೃಷ್ಟಾಂತವು) ಉದಾಹರಣೆಯು ಈರ್ವರಿಗೂ ಅಂದರೆ ವಾದಿ ಪ್ರತಿವಾದಿಗಳಿಗೆ ಸಮ್ಮತಿ ಇರಬೇಕು. ಪ್ರಕೃತದಲ್ಲಿ ಕರ್ತೃತ್ವವನ್ನು ಒಪ್ಪುವುದಿಲ್ಲ. ಆದ್ದರಿಂದ ದೃಷ್ಟಾಂತ ಈರ್ವರಿಗೂ ಸಮ್ಮತವಾದದ್ದಾಗಲಿಲ್ಲ.

ಶ್ರೀ ಪರಮಾತ್ಮನು ಕಲ್ಲು ಮುಂತಾದ ಪದಾರ್ಥಗಳ ಒಳಗಿದ್ದು ಪ್ರೇರಕನಾಗಿದ್ದಾನೆಂಬುದನ್ನು ತೋರಿಸಿಕೊಡುತ್ತಿದ್ದಾರೆ 'ಯಸ್ತಂಭಸಂಭವಃ' ಇತ್ಯಾದಿ ಶ್ಲೋಕದಿಂದ.

**ಯಃ ಸ್ತಂಭಸಂಭವೋ ಡಿಂಭಂ ಹಿರಣ್ಯಕಶಿಪೋರಪಾತ್ ।**
**ಸೋऽಂತರ್ಯಾಮೀ ಮಮ ಸ್ವಾಮೀ ಕಸ್ಯ ನ ಸ್ಯಾದ್ವಿಚಾರಯ ॥ ೨೫೭ ॥**

**ಅರ್ಥ**– ಯಃ = ಯಾವ ಶ್ರೀನರಸಿಂಹದೇವರು, ಸ್ತಂಭಸ್ತಂಭವಃ = ಕಲ್ಲಿನ ಕಂಬದಿಂದ ಆವಿರ್ಭೂತನಾಗಿ ಬಂದು, ಹಿರಣ್ಯಕಶಿಪೋಃ = ಹಿರಣ್ಯಕಶಿಪುವಿನ, ಡಿಂಭಂ = ಮಗನಾದ ಪ್ರಹ್ಲಾದನನ್ನು, ಅಪಾತ್ = ರಕ್ಷಿಸಿದನೋ, ಸಃ = ಅಂತಹ, ಮಮ = ನನ್ನ, ಸ್ವಾಮಿ = ಸ್ವಾಮಿಯು, ಕಸ್ಯ = ಯಾವ ಪದಾರ್ಥಕ್ಕೆ, ಅಂತರ್ಯಾಮಿ = ಒಳಗಿದ್ದು ಪ್ರೇರಕನಾಗಿ, ನಸ್ಯಾತ್ = ಆಗಲಾರನು? (ಆಗೇ ಆಗುತ್ತಾನೆಂದರ್ಥ).

**ಅನುವಾದ**– ಶಿಲಾಸ್ತಂಭದ ಮಧ್ಯದಿಂದ ಆವಿರ್ಭೂತನಾದ ಶ್ರೀ ನರಸಿಂಹದೇವರು ಹಿರಣ್ಯಕಶಿಪುವಿನ ಪುತ್ರನಾದ ಪ್ರಹ್ಲಾದನನ್ನು ರಕ್ಷಿಸಿದನು. ಈ ರಕ್ಷಣೆಯಕ್ರಮದಿಂದ ಶ್ರೀ ಪರಮಾತ್ಮನಿಗೆ ಸರ್ಪ-ಅಗ್ನಿ-ನೀರು-ಶಸ್ತ್ರ ಇವುಗಳಲ್ಲಿದ್ದು ಆ ಪದಾರ್ಥಗಳ ಸ್ವಭಾವ ತಿರಸ್ಕಾರದ ಕರ್ತೃತ್ವವು ಇದೆ ಎಂಬುದು ತಿಳಿದುಬರುತ್ತದೆ. ಇಂತಹ ನನ್ನ ಸ್ವಾಮಿಯು ಎಲ್ಲಿಲ್ಲ? ಎಲ್ಲ ಕಡೆಯೂ ಇದ್ದಾನೆಂಬುದನ್ನು ಯುಕ್ತಿಯಿಂದ ವಿಚಾರಿಸಿ ನೋಡು. ಅತ್ಯಂತ ಗಟ್ಟಿಯಾದ ಕಲ್ಲಿನ ಮಧ್ಯದಲ್ಲಿ ಇರುವ ಪರಮಾತ್ಮನು ಬೇರೆ ಕಡೆ ಅಂದರೆ ವಾಯ್ವಾದಿ ಮೃದು ಪದಾರ್ಥಗಳಲ್ಲಿ ಯಾಕಿಲ್ಲ? ಎಲ್ಲ ಕಡೆಗೂ ಇದ್ದಾನೆ.

**ಭಾವವಿಲಾಸಿನೀ**–ತಸ್ಯ ಶಿಲಾಂತರ್ಗತತ್ವಮನುಭಾವಯತಿ – **ಯ ಇತಿ** ॥ ಸ್ತಂಭಸಂಭವಃ ಶಿಲಾಸ್ತಂಭಮಧ್ಯಾದಾವಿರ್ಭೂತೋ ನರಸಿಂಹಃ ಹಿರಣ್ಯಕಶಿಪೋರ್ಡಿಂಭಮರ್ಭಕಂ ಪ್ರಹ್ಲಾದಮ್ । 'ಪೋತಃ ಪಾಕೋऽರ್ಭಕೋ ಡಿಂಭಃ' ಇತ್ಯಭಿಧಾನಾತ್ । ಅಪಾದ್ ಅರಕ್ಷತ್ । ಅನೇನ ಸರ್ಪಾಗ್ನಿಜಲಶಸ್ತ್ರಾದಿಸ್ವಭಾವತಿರಸ್ಕಾರಕರ್ತೃತ್ವಂ ಚ ಭಗವತೋ ದ್ಯೋತಯತಿ । ಸೋऽಯಂ ಮಮ ಸ್ವಾಮೀ ಕಸ್ಯಾಂತರ್ಯಾಮೀ ನ ಸ್ಯಾತ್ । ವಿಚಾರಯ ಯುಕ್ತಿಂ ಪಶ್ಯೇತಿ ಯೋಜನಾ । ಅತಿದೃಢತರಶಿಲಾಂತರಪಿ ಯಸ್ತಿಷ್ಠತಿ । ಸೋऽನ್ಯತ್ರ ವಾಯ್ವಾದೌ ಮೃದುತರವಸ್ತುನಿ

ಕುತ್ರಕುತ್ರ ನ ಸ್ಯಾತ್ । ಸರ್ವತ್ರಾಪಿ ಸ್ಯಾದೇವೇತಿ ಭಾವಃ। ಮಮ ಸ್ವಾಮೀತ್ಯನೇನ ಚೇತನಾನಾಮಪಿ ಪ್ರವೃತ್ತಿಸ್ತದಧೀನಾ । ಅನ್ಯಥಾ ಚೇತನಾಂತರೇ ಅದೃಷ್ಟಾ ಈದೃಶೀ ಗ್ರನ್ಥಕರಶಕ್ತಿಃ ಕಥಮಭೂದಿತಿ ಸೂಚಯತಿ। ನಚೈತತ್ಕುತಃ? ಇತಿ ವಾಚ್ಯಮ್ । ಅಹೋ(ಬ)ಬಲಕ್ಷೇತ್ರೇ ನಿರ್ಗಚ್ಛತಾ ನೃಸಿಂಹೇನ ವಿದಾರಿತಶಿಲಾಸ್ತಮ್ಭೇ ಬೃಹತ್ತರಚ್ಛಿದ್ರಸ್ಯಾದ್ಯಾಪಿ ಸರ್ವೈರ್ದೃಶ್ಯಮಾನತ್ವಾತ್ ॥ ೨೫೭ ॥

**ವಿವರಣೆ–** ಇಲ್ಲಿ ಡಿಂಭ ಎಂದರೆ 'ಪೋತಃ ಪಾಕೋಽರ್ಭಕೋಡಿಂಭಃ' ಎಂದು ಅಭಿಧಾನವಿರುವುದರಿಂದ ಪುತ್ರ ಎಂದರ್ಥ. ಮಮಸ್ವಾಮಿ ಎಂದು ಹೇಳಿದ್ದರಿಂದ ಚೇತನಗಳ ಪ್ರವೃತ್ತಿಯೂ ಕೂಡ ಪರಮಾತ್ಮನ ಅಧೀನವಾಗಿದೆ ಎಂದರ್ಥ. ಇಲ್ಲದಿದ್ದಲ್ಲಿ ಈ ಯುಕ್ತಿಮಲ್ಲಿಕಾ ಎಂಬ ಗ್ರಂಥವನ್ನು ಬರೆಯುವ ಶಕ್ತಿಯು ನಮಗೆ ಹೇಗೆ ತಾನೆ ಬಂದೀತು ಎಂಬುದು ಸೂಚಿತವಾಗುತ್ತದೆಂಬುದು ಶ್ರೀ ಸುರೋತ್ತಮತೀರ್ಥರ ವ್ಯಾಖ್ಯಾನ. ಇದೂ ಕೂಡ ಹೇಗೆ ಎಂಬುದಾಗಿ ಪ್ರಶ್ನಿಸಬೇಡಿ. ಅಹೋಬಲ ಕ್ಷೇತ್ರದಲ್ಲಿರುವ ಸ್ತಂಭದಿಂದ ಹೊರಬಂದ ಶ್ರೀ ನರಸಿಂಹದೇವರು ಸೀಳಿದ ಸ್ತಂಭದ ಛಿದ್ರವು ಇಂದಿಗೂ ಕೂಡ ಎಲ್ಲರೂ ನೋಡಬಹುದಾಗಿದೆ.

**ಶಿಲಾ ಯದಿ ಸ್ವಸತ್ತ್ವೇನ ಜಲೇ ನಯತಿ ಪೂರುಷಮ್ ।**
**ಸ್ಥಲೇ ಕಸ್ಮಾನ್ನ ನಯತಿ ಸಮೇ ಯಾ ನೀಯತೇ ನರೈಃ ॥ ೨೫೮ ॥**

**ಅರ್ಥ–** ಶಿಲಾ = ಶಿಲೆಯು, ಯದಿ = ಒಂದು ಪಕ್ಷ, ಸ್ವಸತ್ತ್ವೇನ = ತನ್ನ ಸಾಮರ್ಥ್ಯದಿಂದಲೇ, ಪೂರುಷಂ = ಪುರುಷನನ್ನು, ನಯತಿ = ಒಯ್ಯುತ್ತದೆ ಎಂದಾದರೆ, ಯಾ = ಯಾವ ಆ ಶಿಲೆಯು, ಸ ಮೇ = ಸಮವಾದ ಪ್ರದೇಶದಲ್ಲಿಯೂ, ಪುರುಷೈಃ = ಪುರುಷರಿಂದ, ನೀಯತೇ = ಎಳೆದುಕೊಂಡು ಹೋಗಲ್ಪಡುತ್ತದೆಯೋ ಅದು, ಸ್ಥಳೇ = ಭೂಮಿಯ ಮೇಲೆ, ಕಸ್ಮಾತ್ = ಏಕೆ, ನ ನಯತಿ = ಒಯ್ಯುವುದಿಲ್ಲ?

**ಅನುವಾದ–** ಜಡವಾದ ಕಲ್ಲು ನೀರಿನಲ್ಲಿ ಪುರುಷನನ್ನು ಕೊಂಡೊಯ್ಯುವುದಾದರೆ ಭೂಮಿಯಲ್ಲಿ ಪುರುಷನನ್ನು ಏಕೆ ಕೊಂಡೊಯ್ಯುವುದಿಲ್ಲ? ಪ್ರತ್ಯುತ ಪುರುಷನೆ ಸಮನಾದ ಭೂಮಿಯಲ್ಲಿಯೂ ಕಲ್ಲನ್ನು ಒಯ್ಯುತ್ತಾನೆಂಬ ಅನುಭವವಿದೆ.

**ಭಾವವಿಲಾಸಿನೀ–**ಕಿಂಚ ಶಿಲಾ ಯಾ ಯದಿ ಜಲೇ ಪುರುಷಪ್ರವರ್ತಕತ್ವಮ್, ತರ್ಹಿ ಸ್ಥಲೇಽಪಿ ಪುರುಷಂ ಪ್ರವರ್ತಯೇತ್ । ನಚೈತದ್ದೃಷ್ಟಮ್ । ಪ್ರತ್ಯುತ ಸ್ವಸ್ಯಾಃ ಏವ ಪುರುಷೇಣ ನೀಯಮಾನತ್ವಂ ದೃಶ್ಯತೇ । ಅತಃ ಪತನಹೇತುಭಾರಾದೇವ ಅಧೋಗಮನಮಿತ್ಯಾಹ – **ಶಿಲೇತಿ** ॥ ಸ್ವಸತ್ತ್ವೇನ ಸ್ವಸಾಮರ್ಥ್ಯೇನ ಸಮೇ ಸ್ಥಲೇ ಕಸ್ಮಾನ್ನ ನಯತಿ । ಯಾ ಶಿಲಾ ನರೈರ್ನೀಯತೇ । ಸಮೇ ಸ್ಥಲ ಇತ್ಯಾವರ್ತನೀಯಮ್ । ಸಾ ಶಿಲೇತಿ ಸಂಬಂಧಃ । ಅತಃ ಶಿಲಾಯಾಃ ಪುರುಷಪ್ರವರ್ತಕತ್ವಮನಾನುಭವಿಕಮಿತಿ ಭಾವಃ ॥ ೨೫೮ ॥

**ವಿವರಣೆ–** ಜಡವಾದ ಕಲ್ಲಿಗೆ ನೀರಿನಲ್ಲಿ ಪುರುಷ ಪ್ರವರ್ತಕತ್ವವಿದೆ ಎಂದರೆ ಸಮನಾದ ಭೂಮಿಯಲ್ಲಿರುವ ಅದೇ ಕಲ್ಲು ಪುರುಷನನ್ನು ಪ್ರವೃತ್ತಿಸಲಿ. ಇದು ಹೀಗೆ ಕಂಡಿಲ್ಲ ಪ್ರತ್ಯುತ ಪುರುಷನೇ ಕಲ್ಲನ್ನು ಒಯ್ಯಲ್ಪಡುತ್ತಾನೆ. ಆದ್ದರಿಂದ ಬೀಳುವಿಕೆಗೆ ಕಾರಣವಾದ ಭಾರದಿಂದಲೇ ಅಧೋಗಮನವೆಂದು ಶಿಲಾಯದಿ ಮುಂತಾದ ಶ್ಲೋಕದಿಂದ ತಿಳಿಸುತ್ತಾರೆ. ಸ್ವಸಾಮರ್ಥ್ಯದಿಂದ ಅದೇ ಕಲ್ಲು ಸಮವಾದ ಸ್ಥಳದಲ್ಲಿ ಏತಕ್ಕೆ ಒಯ್ಯುವುದಿಲ್ಲವೆಂದು ಆಕ್ಷೇಪ. ಆದ್ದರಿಂದ ಜಡವಾದ ಕಲ್ಲಿಗೆ ಪುರುಷ ಪ್ರವರ್ತಕತ್ವವು ಅನುಭವದಿಂದ ಸಿದ್ಧವಾಗಿಲ್ಲವೆಂದು ಅಭಿಪ್ರಾಯ.

**ಅಶ್ಮಾ ಯಸ್ಮಾನ್ನತೇಽಪ್ಸ್ವೇವ ತಿರ್ಯಕ್ಪರ್ಯಕ್ಚ ಗಚ್ಛತಿ ।**
**ಅತಃ ಸ್ವತಃಕೃತಿಸ್ತಸ್ಯ ನ ಜಲೇ ನಾಪಿ ಚ ಸ್ಥಲೇ ॥ ೨೫೯ ॥**

**ಅರ್ಥ–** ತೇ = ನಿನ್ನ, ಅಶ್ಮಾ = ಕಲ್ಲು, ಅಪ್ಸು = ನೀರಿನಲ್ಲಿ, ತಿರ್ಯಕ್ = ಅಡ್ಡವಾಗಿ, ಪರ್ಯಕ್ ಚ = ಮತ್ತು ವೃತ್ತಾಕಾರವಾಗಿ, ಸ್ವತಃ = ತಾನೇ, ನ ಗಚ್ಛತಿ = ಹೋಗುವುದಿಲ್ಲವೋ, ಅತಃ = ಆ ಕಾರಣದಿಂದಲೇ, ತಸ್ಯ = ಅದಕ್ಕೆ, ಸ್ವತಃ ಕೃತಿಃ = ಸ್ವತಂತ್ರವಾದ ಪ್ರವೃತ್ತಿಯು, ಜಲೇ = ಜಲದಲ್ಲಿ, ನ = ಇರುವುದಿಲ್ಲ, ಚ = ಮತ್ತು, ಸ್ಥಲೇಪಿ = ಭೂಮಿಯ ಮೇಲೆ ಕೂಡ, ನ = ಇಲ್ಲ.

**ಅನುವಾದ–** ಕಲ್ಲು ಜಡವಾದ್ದರಿಂದ ಭಾರದ ಕಾರಣದಿಂದ ನೀರಿನಲ್ಲಿ ಕೆಳಮುಖವಾಗಿ ಸಾಗಿ ಮುಳುಗುತ್ತದೆ. ಆದರೆ ಅಡ್ಡಲಾಗಿ ಅಥವಾ ವೃತ್ತಾಕಾರವಾಗಿ ಸಂಚರಿಸುವುದಿಲ್ಲ. ಅದಕ್ಕೆ ಸ್ವತಃ ಪ್ರವೃತ್ತಿಯು ಇಲ್ಲ. ಇನ್ನೊಂದು ವಸ್ತುವನ್ನು ಪ್ರವೃತ್ತಿಸುವ ಶಕ್ತಿಯನ್ನು ಸಹ ಅದು ಹೊಂದಿಲ್ಲ.

**ಭಾವವಿಲಾಸಿನೀ–**ಯುಕ್ತ್ಯಂತರಂ ಚಾಹ – **ಅಶ್ಮೇತಿ** ॥ ತೇ ತವ ದೃಷ್ಟಾಂತಭೂತಃ ಅಶ್ಮಾ ಶಿಲಾ ಅಪ್ಸು ಜಲೇಷು ತಿರ್ಯಕ್ ತಿರಶ್ಚೀನತಯಾ ಪರ್ಯಕ್ ಪರಿತಃ । ಸ್ವತ ಇತ್ಯಾವರ್ತನೀಯಮ್ । ಯಸ್ಮಾನ್ನ ಗಚ್ಛತಿ । ಅತಸ್ತಸ್ಯಾಃ ಶಿಲಾಯಾಃ ಸ್ವತಃಕೃತಿಃ ಪ್ರವೃತ್ತಿಃ । ಉಪಲಕ್ಷಣಮೇತತ್ । ಪ್ರವರ್ತಕತ್ವಂ ಚೇತಿ ದ್ರಷ್ಟವ್ಯಮ್ ॥ ೨೫೯ ॥

**ವಿವರಣೆ–** ಈ ಶ್ಲೋಕದಿಂದ ಯುಕ್ತ್ಯಂತರವನ್ನು ಹೇಳುತ್ತಾನೆ. ನೀನು ಕೊಟ್ಟಂತಹ ದೃಷ್ಟಾಂತವಾದ ಕಲ್ಲು ನೀರಲ್ಲಿ ಸುತ್ತಿಸುತ್ತಿ ಬೀಳುತ್ತದೆ. ಅದಕ್ಕೆ ಸ್ವಾಭಾವಿಕವಾದ ಪ್ರವೃತ್ತಿಯು ಇರುವುದಿಲ್ಲ. ಇಲ್ಲಿ 'ಸ್ವತಃ' ಎನ್ನುವುದನ್ನು ಆವೃತ್ತಿಸಿಕೊಳ್ಳಬೇಕು. ಇಲ್ಲಿ ಕೃತಿ ಶಬ್ದವು ಉಪಲಕ್ಷಣವಾಗಿದೆ. ಇನ್ನೊಂದನು ಪ್ರವೃತ್ತಿಸುವುದು ಸಹ ಇಲ್ಲ ಎಂದು ತಿಳಿಯಬೇಕು.

**ತದೀಶಗೌರವಾತ್ ಸ್ವೀಯಗೌರವಾಚ್ಚ ನಯೇದಧಃ ।**
**ಯತಸ್ಸ ಗೌರವಂ ಧರ್ಮಂ ಚಕ್ರೇ ಪತನಕಾರಣಮ್ ॥ ೨೬೦ ॥**

**ಅರ್ಥ–** ತತ್ = ಇನ್ನೊಬ್ಬರ ಪ್ರೇರಣೆಯು ಕೂಡದಿರುವುದರಿಂದ, ಈಶಗೌರವಾತ್ = ಪರಮಾತ್ಮನ ಮಹಾತ್ಮೆಯಿಂದ, ಚ = ಮತ್ತು, ಸ್ವೀಯಗೌರವಾತ್ = ತನ್ನ ಗೌರವದಿಂದ (ಭಾರದಿಂದ) ಅಧಃ = ಕೆಳಗೆ, ನಯೇತ್ = ಒಯ್ಯುತ್ತದೆ, ಯತಃ = ಏಕೆಂದರೆ, ಸಃ = ಆ ಪರಮಾತ್ಮನು, ಗೌರವಂ = ಭಾರ ಎನ್ನುವ, ಧರ್ಮಂ = ಧರ್ಮವನ್ನು, ಪತನಕಾರಣಂ = ಬೀಳುವ ಕಾರಣವನ್ನಾಗಿ, ಚಕ್ರೇ = ಮಾಡಿದನು.

**ಅನುವಾದ–** ಶ್ರೀಪರಮಾತ್ಮನ ಮಹಾತ್ಮೆಯಿಂದ ಮತ್ತು ಕಲ್ಲಿನಲ್ಲಿ ಭಾರವೆಂಬ ಗುಣವನ್ನು ಕೆಳಗೆ ಬೀಳುವ ಕಾರಣವನ್ನಾಗಿ ಇಟ್ಟಿರುವುದರಿಂದಲೂ ಹಾಗೆ ಬೀಳುತ್ತದೆ ಹೊರತು ಬೇರೇನಿಲ್ಲ.

**ಭಾವವಿಲಾಸಿನೀ–**ಕಸ್ತರ್ಹಿ ಸ್ವಶಕ್ತ್ಯಾಧೋಗಮನಹೇತುರಿತ್ಯತ ಆಹ – **ತದಿತಿ** ॥ ತತ್ತಸ್ಮಾದನ್ಯಸ್ಯ ಪ್ರವರ್ತಕತ್ವಾಯೋಗಾದ್ ಈಶಗೌರವಾದೀಶಮಾಹಾತ್ಮ್ಯಾದ್ ಈಶಾನುಗೃಹೀತಸ್ವೀಯ ಗೌರವಾದ್ಭಾರಾಚ್ಚೇತ್ಯರ್ಥಃ । ಅಧಃ ಪುರುಷಂ ನಯೇತ್ । ನನು ಗುರುತ್ವಸ್ಯಾಪ್ಯಧೋ-ಗಮನಹೇತುತ್ವಂ ಕಥಮ್? ಇತ್ಯತ ಆಹ – **ಯತ ಇತಿ** ॥ ಸ ಈಶ್ವರಃ । ಗೌರವಂ ಗುರುತ್ವಮ್ । 'ಗುರುತ್ವಂ ತು ಗುಣೋ ಹೇತುರಾದ್ಯೇ ಪತನಕರ್ಮಣಿ' ಇತಿ ಹಿ ತಲ್ಲಕ್ಷಣಮ್ । ಅತ ಈಶಾನುಗೃಹೀತಸ್ಯ ತಸ್ಯಾಪ್ಯಧೋಗಮನಹೇತುತ್ವಂ ಯುಜ್ಯತ ಇತಿ ಭಾವಃ ॥ ೨೬೦ ॥

**ವಿವರಣೆ–** ಕಲ್ಲು ಕೆಳಗೆ ಬೀಳಲು ಕಾರಣವೇನು ಎಂಬುದನ್ನು ತದೀಶ ಇತ್ಯಾದಿ ಶ್ಲೋಕದಿಂದ ಹೇಳುತ್ತಾರೆ. ಭಾರವೆಂಬ ಗುಣವು ಕೆಳಗೆ ಹೇಗೆ ಬೀಳುತ್ತದೆ ಎಂಬುದನ್ನು ಯತ ಇತ್ಯಾದಿಯಿಂದ ಹೇಳುತ್ತಾರೆ. ಪರಮಾತ್ಮನಿಂದ ಅನುಗ್ರಹೀತವಾದ ಭಾರಕ್ಕೆ ಅಧೋಗಮನ ಹೇತುತ್ವವು ಯುಕ್ತವೇ ಆಗಿದೆ. ಎಲ್ಲವೂ ಪರಮಾತ್ಮನ ಅಧೀನವಾಗಿದೆ.

**ಯದಾ ಸ ಧರ್ಮಸಾಮರ್ಥ್ಯಂ ರುಣದ್ಧಿ ನ ತದಾ ಪತೇತ್ ।**
**ನ ಮಗ್ನೋ ಮಂದರಃ ಕಸ್ಮಾನ್ ಮಹೀವಾ ನಾಪ್ಸು ಮಜ್ಜತಿ ॥ ೨೬೧ ॥**

**ಅರ್ಥ–** ಯದಾ = ಯಾವಾಗ, ಸಃ = ಆ ಪರಮಾತ್ಮನು, ಧರ್ಮಸಾಮರ್ಥ್ಯಂ = ಭಾರದ ಶಕ್ತಿಯನ್ನು, ನಿರುಣದ್ಧಿ = ತಡೆ ಹಿಡಿಯುತ್ತಾನೋ, ತದಾ = ಆಗ, ನ ಪತೇತ್ = ಅದು ಕೆಳಗೆ ಬೀಳುವುದಿಲ್ಲ, ಕಸ್ಮಾತ್ = ಏತಕ್ಕೆ, ಮಂದರಃ = ಮಂದರ ಪರ್ವತವು, ಅಪ್ಸು = ನೀರಿನಲ್ಲಿ (ಕ್ಷೀರ ಸಮುದ್ರದಲ್ಲಿ) ನ ಮಗ್ನಃ = ಮುಳುಗಲಿಲ್ಲ?, ವಾ = ಮತ್ತು, ಮಹೀ = ಭೂಮಿಯು, ಅಪ್ಸು = ಕೆಳಗೆ ಗರ್ಭೋದಕದಲ್ಲಿ, ನ ಮಜ್ಜತಿ = ಮುಳುಗುವುದಿಲ್ಲ?

**ಅನುವಾದ–** ಪರಮಾತ್ಮನು ಭಾರವೆಂಬ ಧರ್ಮದಲ್ಲಿರುವ ಕೆಳಗೆ ಬೀಳಿಸುವ ಶಕ್ತಿಯನ್ನು ತಡೆಹಿಡಿಯುತ್ತಾನೆಯೋ ಆಗ ಆ ವಸ್ತುವು ಬೀಳುವುದಿಲ್ಲ. ಇಲ್ಲದಿದ್ದರೆ ಮಂದರ ಪರ್ವತವು ಕ್ಷೀರಸಾಗರದಲ್ಲಿ ಏಕೆ ಮುಳುಗಲಿಲ್ಲ? ಮತ್ತು ಭೂಮಿಯು ಬ್ರಹ್ಮಾಂಡಗರ್ಭ ಜಲದಲ್ಲಿ ಏಕೆ ಮುಳುಗುವುದಿಲ್ಲ ?

**ಭಾವವಿಲಾಸಿನೀ–** ನನ್ವೇವಂ ತರ್ಹಿ ಗುರುತ್ವಾದೇವ ಪಾತೋಽಸ್ತು ಕಿಮೀಶ್ವರಾನುಗ್ರಹೇಣೇತ್ಯತ ಆಹ – **ಯದೇತಿ** ॥ ಧರ್ಮಸಾಮರ್ಥ್ಯಂ ಗೌರವಾಖ್ಯಧರ್ಮ- ಸಾಮರ್ಥ್ಯಮ್ । ತದಾ ನ ಪತೇತ್ ಶಿಲೇತ್ಯನುವರ್ತತೇ । ಏತದನುಭಾವಯತಿ – **ನೇತಿ** ॥ ಮಂದರಃ ಮಹಾಭಾರವಾನ್ ಶತಯೋಜನಪರಿಮಿತಃ ಕನಕಾಚಲಃ ಅಪ್ಸು ಕ್ಷೀರಸಮುದ್ರಜಲೇಷು । ಮಹೀ ಪಂಚಾಶತ್ಕೋಟಿವಿಸ್ತೀರ್ಣಾ ಭೂಃ ಅಪ್ಸು ಸ್ವಾಧೋಭಾಗಸ್ಥಿತಗರ್ಭೋದಕೇಷು ॥ ೨೬೧ ॥

**ವಿವರಣೆ–** ಕಲ್ಲು ನೀರಿನಲ್ಲಿ ಭಾರದಿಂದಲೇ ಕೆಳಗೆ ಬೀಳಲಿ. ಇದಕ್ಕೆ ಪರಮಾತ್ಮನ ಅನುಗ್ರಹವೇಕೆ ಬೇಕೆಂದರೆ ಉತ್ತರವನ್ನು ನೀಡುತ್ತಿದ್ದಾರೆ. ಶತಯೋಜನ ಪರಿಮಿತವಾದ ಮಹಾಭಾರವುಳ್ಳ ಆ ಮಂದರ ಪರ್ವತವು ಕ್ಷೀರ ಸಮುದ್ರದ ಜಲದಲ್ಲಿ ಮುಳುಗಲಿಲ್ಲ. ಮುಳುಗದಂತೆ ತಡೆ ಹಿಡಿದವನು ಶ್ರೀಹರಿ. ಅಷ್ಟೇ ಅಲ್ಲ, ಆ ಮಂದರ ಪರ್ವತವನ್ನು ಕೂರ್ಮರೂಪದಿಂದ ತನ್ನ ಬೆನ್ನಿನ ಮೇಲೆ ಇಟ್ಟುಕೊಂಡು ಮಥನ ಮಾಡಲು ಅನುಕೂಲ ಮಾಡಿಕೊಟ್ಟವನು ಶ್ರೀಹರಿ. ಅಷ್ಟೇ ಅಲ್ಲ ದೇವದೈತ್ಯರಲ್ಲಿದ್ದು ತಾನೆ ಮಥಿಸಿರುವನು. ಆ ಮಂದರ ಪರ್ವತವನ್ನು ತರಬೇಕಾದರೂ ಶ್ರೀಹರಿಯ ಅನುಗ್ರಹವಿದ್ದುದರಿಂದಲೇ ಎಂದು ಭಾವಿಸಬೇಕು. ಹೀಗೆಯೇ ಪಂಚಾಶತ್ ಕೋಟಿ ವಿಸ್ತಾರವುಳ್ಳ ಭೂಮಿಯು ಕೆಳಗಿನ ಗರ್ಭೋದಕದಲ್ಲಿ ಮುಳುಗದ ಹಾಗೆ ತಡೆ ಹಿಡಿದವನು ಶ್ರೀಹರಿ ಎಂದು ಸಹ ತಿಳಿಯಬೇಕು.

**ಯದ್ದತ್ತವರತೋ ವಾರ್ಷು ನಲಹಸ್ತಾರ್ಪಿತಾಃ ಶಿಲಾಃ ।**
**ಉನ್ಮಮಜ್ಜುಸ್ಸ ದೌರ್ಜನ್ಯಂ ಕಸ್ಯ ಕಸ್ಯ ನ ಭರ್ಜಯೇತ್ ॥ ೨೬೨ ॥**

**ಅರ್ಥ–** ಯದ್ದತ್ತವರತಃ = ಯಾವ ಶ್ರೀರಾಮಚಂದ್ರನ ವರಬಲದಿಂದ, ನಲಹಸ್ತಾರ್ಪಿತಾಃ ನಲ= ನಲನಾಮಕ ಕಪಿಯ, ಹಸ್ತಾರ್ಪಿತಾಃ = ಕೈಯಿಂದ ಸ್ಥಾಪಿತವಾದ, ಶಿಲಾಃ = ಕಲ್ಲುಗಳು, ಉನ್ಮಮಜ್ಜುಃ = ನೀರಿನ ಮೇಲೆ ತೇಲುತ್ತಿದ್ದವೋ, ಸಃ = ಅಂಥ ಶ್ರೀರಾಮಚಂದ್ರನು, ಕಸ್ಯಕಸ್ಯ = ಯಾರ ಯಾರ, ದೌರ್ಜನ್ಯಂ = ಶ್ರೀಹರಿಯ ಅಚಿಂತ್ಯ ಶಕ್ತಿಯನ್ನು ಧಿಕ್ಕರಿಸುವ ಬುದ್ಧಿಯನ್ನು, ನ ಭರ್ಜಯೇತ್ – ಅಂಕುರಿಸದಂತೆ ಮಾಡಲಾರ.

**ಅನುವಾದ–** ಸೇತುನಿರ್ಮಾಣಕಾಲದಲ್ಲಿ ನಲನು ಸಮುದ್ರದಲ್ಲಿ ಹಾಕಿದ ಕಲ್ಲುಗಳು ರಾಮನು ನಲನಿಗೆ ಕೊಟ್ಟ ವರಬಲದಿಂದ ಮುಳುಗದೇ ತೇಲಿದವು. ಇಂಥಹ ವಸ್ತು ಸ್ವಭಾವ ಶಕ್ತಿಗೆ ನಿಯಾಮಕನಾದ ಶ್ರೀಹರಿಯು ತನ್ನ ಅಚಿಂತ್ಯ ಮಹಿಮೆಯನ್ನು ಧಿಕ್ಕರಿಸುವ ದುಷ್ಟಬುದ್ಧಿಯುಳ್ಳ ಜನರನ್ನು ನಿರುತ್ತರನನ್ನಾಗಿ ಮಾಡದಿರುವನೇ?

**ಭಾವವಿಲಾಸಿನೀ–** ಸ್ಥಲಾಂತರೇಽಪ್ಯೇತದನುಭಾವಯತಿ – **ಯದ್ದತ್ತೇತಿ** ॥ ಯೇನೇಶ್ವರೇಣ ದತ್ತವರತಃ ನಲಹಸ್ತಾರ್ಪಿತಾಃ ಸೇತುಂ ಕುರ್ವತೋ ನಲಾಖ್ಯವಾನರಸ್ಯ ಹಸ್ತಾರ್ಪಿತಾಃ ಉನ್ಮಮಜ್ಜುಃ ಊರ್ಧ್ವಂ ಮಮಜ್ಜುಃ । ಜಲೋಪರ್ಯೇವ ಸ್ಥಿತಾಃ ನಾಧೋ ಗತಾ ಇತ್ಯರ್ಥಃ ।

**ನಾಧೋ ಗಚ್ಛನ್ತ್ವಿತಿ ಯಸ್ಯ ವಚನಮಾತ್ರಾತ್ ಪರ್ವತರೂಪಸ್ಥೂಲಶಿಲಾ ಅಪಿ ನಾಧೋಗತಾ ಇತಿ ಭಾವಃ । ಸ ಈಶ್ವರಃ ಜಡಸ್ಯೈವ ಸ್ವತಃ ಪ್ರವರ್ತಕತ್ವಂ ವದತಃ ಕಸ್ಯ ಕಸ್ಯ ದೌರ್ಜನ್ಯಂ ನ ಭರ್ಜಯೀತ್ । ಇಮಾಮೀಶ್ವರಶಕ್ತಿಂ ದೃಷ್ಟ್ವಾ ಸರ್ವಸ್ಯಾಪಿ ನಿರುತ್ತರತೇತಿ ಭಾವಃ ॥ ೨೬೨ ॥**

**ವಿವರಣೆ–** ಈ ಶ್ಲೋಕದಿಂದ ಸ್ಥಲಾಂತರದಲ್ಲಿ ಪರಮಾತ್ಮ ಮಹಿಮೆಯನ್ನು (ಸರ್ವ ಪ್ರವರ್ತಕತ್ವವನ್ನು) ತೋರಿಸಿಕೊಡುತ್ತಿದ್ದಾರೆ. ಶ್ರೀರಾಮಚಂದ್ರನು ನಲನೆಂಬ ಕಪಿಗೆ ವರಕೊಡುವ ಸಂದರ್ಭ ಹೀಗಿದೆ - ಋಷಿಮುನಿಗಳ ಪೂಜಾದ್ರವ್ಯಗಳನ್ನು ತೆಗೆದುಕೊಂಡು ಹೋಗಿ ಕಪಿಯ ಜಾತಿಗೆ ಅನುಗುಣವಾಗಿ ಆ ನಲನು ಸಮುದ್ರದ ನೀರಿನಲ್ಲಿ ಹಾಕಿ ಬಿಡುತ್ತಿದ್ದನಂತೆ. ಋಷಿಮುನಿಗಳಿಗೆ ಕಷ್ಟವಾಗಿ ಅವರೆಲ್ಲರೂ ಶ್ರೀರಾಮನ ಹತ್ತಿರ ದೂರಿದರು. ಆಗ ಶ್ರೀರಾಮ ನಲನೆಂಬ ಕಪಿಗೆ ವರವಿತ್ತ, ನೀನು ನೀರಿಗೆ ಹಾಕುವ ಪದಾರ್ಥಗಳೆಲ್ಲ ತೇಲಲಿ ಎಂದು. ಆಗ ಋಷಿಮುನಿಗಳು ಪುನಃ ತಮ್ಮ ತಮ್ಮ ಪದಾರ್ಥಗಳನ್ನು ಹೊಂದುತ್ತಿದ್ದರಂತೆ. ಹೀಗೆ ಐತಿಹ್ಯವಿದೆ. ಶ್ರೀರಾಮನು ಸೇತು ನಿರ್ಮಾಣ ಹಂತದಲ್ಲಿ ನಲನ ಮೂಲಕವಾಗಿ ಸೇತುವೆಯನ್ನು ಕಟ್ಟಿಸಿ ಲಂಕೆಗೆ ಪ್ರಯಾಣ ಬೆಳಸಿದ. ಇದು ಆ ನಲನ ಸಾಮರ್ಥ್ಯವಲ್ಲ, ಶ್ರೀಹರಿಯು ಕೊಟ್ಟ ವರದಿಂದಲೇ ಈ ಕಾರ್ಯ ಜರುಗಿತು. ಇಂಥಹ ಅಚಿಂತ್ಯಶಕ್ತಿಸಂಪನ್ನನಾದ ಶ್ರೀಹರಿಯು 'ಜಡವೇ ಸ್ವತಃ ಪ್ರವರ್ತಿಸುತ್ತದೆ' ಎಂದು ವಾದವನ್ನು ಮಾಡುವವರಿಗೆ ಉತ್ತರ ನೀಡದಿರುವನೇ? ಎಂದು ತಾತ್ಪರ್ಯ. ಅಂದರೆ ಈ ಅಚಿಂತ್ಯಶಕ್ತಿಯನ್ನು ಸರ್ವರೂ ವೀಕ್ಷಿಸಿ ನಿರುತ್ತರರಾಗುವರು ಎಂದರ್ಥ.

**ವಿಷಮಾರೋಹತೀಶಸ್ಯ ಸತ್ತ್ವಾದೇವ ನತು ಸ್ವತಃ ।**
**ಕಿಂವಿಷಾದೋ ವಿಷಾದಾಸೀಚ್ಛಿಶೋಸ್ತಸ್ಯ ಶಿವಸ್ಯ ವಾ ॥ ೨೬೩ ॥**

**ಅರ್ಥ–** ವಿಷಂ = ವಿಷವು, ಈಶಸ್ಯ = ಪರಮಾತ್ಮನ, ಸತ್ವಾದೇವ = ವಿಷಾಂತರ್ಗತ ಈಶ ಶಕ್ತಿಯಿಂದಲೇ ಆರೋಹತಿ = ಮೇಲೇರುತ್ತದೆ, ಸ್ವತಃ ನತು = ತನ್ನ ಶಕ್ತಿಯಿಂದಲ್ಲ, ಶಿಶೋಃ = ಬಾಲಕನಾದ ಪ್ರಹ್ಲಾದನಿಗೆ, ತಸ್ಯ = ಶಿಶುವಾದ ಶ್ರೀಕೃಷ್ಣನಿಗೆ, ಶಿವಸ್ಯ ವಾ = ಅಥವಾ ರುದ್ರ ದೇವರಿಗೆ, ವಿಷಾತ್= ವಿಷದಿಂದ, ವಿಷಾದಃ = ದುಃಖವು, ಆಸೀತ್ ಕಿಂ = ಆಯಿತೇನು? (ಇಲ್ಲವೆಂದರ್ಥ).

**ಅನುವಾದ– ವಿಷಾಂತರ್ಗತನಾದ ಶ್ರೀಹರಿಯ ಸಾಮರ್ಥ್ಯದಿಂದಲೇ ವಿಷವು ಮೇಲೆ ಹೋಗುತ್ತದೆ. ಶಿಶುವಾದ ಪ್ರಹ್ಲಾದನಿಗೆ, ಶಿಶುವಾದ ಶ್ರೀಕೃಷ್ಣನಿಗೆ, ಹಾಗು ಶಿವನಿಗೆ ಕ್ರಮವಾಗಿ ಸರ್ಪದಂಶನ ವಿಷದಿಂದ, ಪೂತನಾಳಿಂದ ಕೊಡಲ್ಪಟ್ಟ ವಿಷದಿಂದ ಹಾಗು ಕಾಲಕೂಟ ವಿಷದಿಂದಲೂ ದುಃಖವು ಆಯಿತೇನು? ಇಲ್ಲವಲ್ಲ, ಆದ್ದರಿಂದ ಶ್ರೀಪರಮಾತ್ಮನ ಅನುಗ್ರಹವಿಲ್ಲದಲೆ ವಿಷಕ್ಕೂ ಕೂಡ ದೇಹವನ್ನು ವ್ಯಾಪಿಸುವ ಶಕ್ತಿಯು ಇಲ್ಲವೆಂಬುದು ಸರ್ವ ಅನುಭವ ಸಿದ್ಧವಾಗಿದೆ ಎಂದು ಭಾವ.**

**ಭಾವವಿಲಾಸಿನೀ**— ನನು ಸರ್ಪಾದಿದಂಶಜನಿತವಿಷಂ ಸ್ವತ ಏವೋರ್ಧ್ವಂ ಗಚ್ಛತೀತ್ಯತ ಆಹ – **ವಿಷಮಿತಿ** ॥ ಈಶಸ್ಯ ಸತ್ತ್ವಾದೇವ ಉಕ್ತಯುಕ್ತ್ಯಾ ವಿಷಸ್ಯಾಪ್ಯಂತರ್ಗತೇಶಸ್ಯ ಸತ್ತ್ವಾತ್ಸಾಮರ್ಥ್ಯಾದ್ ಆರೋಹತಿ । ಊರ್ಧ್ವಂ ಗಚ್ಛತಿ । ನ ಸ್ವಸಾಮರ್ಥ್ಯಾತ್ । ಕುತ ಏತದ್? ಇತ್ಯತ ಆಹ–**ಕಿಮಿತಿ** ॥ ಶಿಶೋಃ ಪ್ರಹ್ಲಾದಸ್ಯ ತಸ್ಯ ಶಿಶುರೂಪಸ್ಯ ಕೃಷ್ಣಸ್ಯ ಶಿವಸ್ಯ ವಾ ವಿಷಾತ್ ಸರ್ಪದಂಶನವಿಷಾತ್ ಪೂತನಾದತ್ತವಿಷಾತ್ ಕಾಲಕೂಟವಿಷಾದ್ವಾ ವಿಷಾದಃ ಊರ್ಧ್ವಾರೋಹಜನಿತ ದುಃಖಮಾಸೀತ್ಕಿಂ ನಾಸೀದೇವೇತ್ಯೇರ್ಥಃ । ಅತ ಈಶಾನುಗ್ರಹಾಭಾವೇ ವಿಷಸ್ಯಾಪ್ಯೂರ್ಧ್ವ-ಗಮನಶಕ್ತಿರ್ನಾಸ್ತೀತಿ ಸರ್ವಾನುಭವಸಿದ್ಧಮಿತಿ ಭಾವಃ ॥ ೨೬೩ ॥

**ವಿವರಣೆ**— ಸರ್ಪಾದಿದಂಶನದಿಂದ ಉತ್ಪನ್ನವಾದ ಜಡವಾದ ವಿಷವು ತನ್ನಷ್ಟಕ್ಕೆ ತಾನೆ ಮೇಲೇರುತ್ತದೆಯಲ್ಲವೆ ಎಂದರೆ ಅದಕ್ಕೆ ಉತ್ತರವನ್ನು ನೀಡುತ್ತಿದ್ದಾರೆ. ಈ ಶ್ಲೋಕದಿಂದ. ಹಾವು, ಚೇಳುಗಳು ಕಚ್ಚಿದಾಗ ಆ ವಿಷವು ಮೇಲೆರಲು ಶ್ರೀಹರಿಯ ಅನುಗ್ರಹ ಪ್ರೇರಣೆ ಇದ್ದರೆ ಮಾತ್ರ ಸಾಧ್ಯ. ಇಲ್ಲದಿದ್ದರೆ ಇಲ್ಲ. ಇದಕ್ಕೂ ದೃಷ್ಟಾಂತವಾಗಿ ಶ್ರೀ ಪ್ರಹ್ಲಾದ ರಾಜನಿಗೆ ಸರ್ಪ ಕಚ್ಚಿದಾಗ ವಿಷದ ಬಾಧೆಯಾಗಲಿಲ್ಲ. ಹಾಗೆಯೇ ಶ್ರೀಕೃಷ್ಣನು ಶಿಶುವಾಗಿದ್ದಾಗ ಪೂತನೆಯು ಬಂದು ವಿಷಪೂರಿತಸ್ತನ್ಯದಿಂದ ಸಾಯಿಸಲು ಪ್ರಯತ್ನಿಸಿದಾಗ ಆ ವಿಷದಿಂದ ಬಾಧೆಯಾಗಲಿಲ್ಲ. ಹಾಗೆಯೇ ಪ್ರಾಣನಿಗೆ, ಕ್ಷೀರಸಮುದ್ರ ಕಡೆದಾಗ ಉತ್ಪನ್ನವಾದ ಕಾಲಕೂಟ ವಿಷಪಾನ ಮಾಡಿದರೂ ಅದು ಬಾಧಿಸಲಿಲ್ಲ. ಆದ್ದರಿಂದ ಜಡ ಪದಾರ್ಥಗಳಿಗೂ ಶ್ರೀಹರಿ ಪ್ರೇರಕನಾಗಿದ್ದಾನೆ. ಎಲ್ಲ ಅಣುರೇಣುತೃಣ ಕಾಷ್ಠಗಳಲ್ಲಿ ಪರಮಾತ್ಮ ಅಂತರ್ಯಾಮಿಯಾಗಿದ್ದಾನೆಂದು ತಿಳಿಯಬೇಕು.

**ಅತೋ ದೃಷ್ಟಂ ಸಮಸ್ತಂ ಚ ದೃಷ್ಟಾಚ್ಚೇಶ್ವರತೋ ಭವೇತ್ ।**
**ಅದೃಷ್ಟಮೀಶ್ವರಾದೇವೇತ್ಯಾಸೀತ್ ಸರ್ವಧುರಂಧರಃ ॥ ೨೬೪ ॥**

**ಅರ್ಥ**— ಅತಃ = ಆದ್ದರಿಂದ, ದೃಷ್ಟಂ = ಕಣ್ಣಿಗೆ ಕಾಣುವ, ಸಮಸ್ತಂ = ಸರ್ವವು, ದೃಷ್ಟಾತ್ = ಕಣ್ಣಿಗೆ ಕಾಣುವ ಕಾರಣಗಳಿಂದ, ಚ = ಮತ್ತು, ಈಶ್ವರತಃ = ಈಶ್ವರನಿಂದಲೂ, ಭವೇತ್ = ಸಂಭವಿಸುತ್ತದೆ. ಅದೃಷ್ಟಂ = ಕರ್ತೃವು ಕಾಣದಿರುವ ಅಂಕುರಾದಿಗಳು, ಈಶ್ವರಾದೇವ = ಪರಮಾತ್ಮನಿಂದಲೇ (ಸಂಭವಿಸುತ್ತವೆ), ಇತಿ = ಎಂಬ ನಿರ್ಣಯವು, ಸರ್ವಧುರಂಧರಃ = ಸರ್ವವನ್ನು ನಿರ್ವಹಿಸುವುದು, ಆಸೀತ್ = ಆಯಿತು.

**ಅನುವಾದ**— ಆದ್ದರಿಂದ ಕಣ್ಣಿಗೆ ಕಾಣುವ ಘಟಪಟಾದಿ ವಸ್ತುಗಳು ಈಶ್ವರ ಮತ್ತು ಕುಲಾಲಾದಿ ಎರಡು ಕಾರಣಗಳಿಂದ ಜನಿಸುತ್ತವೆ. ಎಲ್ಲಿ ಕರ್ತೃವು ನಮ್ಮ ಕಣ್ಣಿಗೆ ಗೋಚರಿಸುವುದಿಲ್ಲವೋ ಅಲ್ಲಿ ಈಶ್ವರನೇ ಕರ್ತೃವಾಗಿರುತ್ತಾನೆ ಎಂಬ ವ್ಯವಸ್ಥೆಯು ಎಲ್ಲಾ ಕಾರ್ಯಗಳನ್ನು ನಿರ್ವಹಿಸುತ್ತದೆ.

**ಭಾವವಿಲಾಸಿನೀ**— ನನ್ವೇವಮೀಶ್ವರಾದೇವ ಸರ್ವಕಾರ್ಯಸಂಭವೇ ದೃಷ್ಟಕಾರಣ-ಕಲಾಪಾಪಲಾಪಃ ಸ್ಯಾದಿತ್ಯತ ಆಹ – **ಅತ ಇತಿ** ॥ ಅತಃ ಯಥಾಪ್ರಮಾಣಂ ಸರ್ವಸ್ಯಾಪ್ಯಂಗೀ-

ಕರ್ತವ್ಯತ್ವಾದ್ ದೃಷ್ಟಂ ಮೃತ್ಕುಲಾಲಾದಿಕಾರಣವತ್ತಯಾ ದೃಷ್ಟಂ ಘಟಾದಿ ದೃಷ್ಟಾತ್ ಕುಲಾಲಾದಿ-ಕಾರಣಾದೀಶ್ವರತಶ್ಚೇತಿ ಸಂಬಂಧಃ । ಅದೃಷ್ಟಂ ದೃಷ್ಟಕರ್ತ್ರಾದಿಕಾರಣಶೂನ್ಯಮಂಕುರಾದೀ-ತ್ಯರ್ಥಃ । ಸರ್ವಧುರಂಧರಃ ಸಕಲಕಾರ್ಯಧುರಂಧರಃ ॥ ೨೬೪ ॥

**ವಿವರಣೆ–** ಈಶ್ವರನೇ ಎಲ್ಲಾ ಕಾರ್ಯಗಳಿಗೂ ಕಾರಣನಾಗುವುದಾದರೆ ಪ್ರತ್ಯಕ್ಷವಾಗಿ ಕಾಣುವ ಕಾರಣಗಳು ಇಲ್ಲವೆಂದು ಅಪಲಾಪಮಾಡಬೇಕಾಗುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ನಾವು ಪ್ರತ್ಯಕ್ಷವಾಗಿ ಕಾಣುವ ಕುಂಬಾರ ಮೊದಲಾದ ಕಾರಣಗಳು ಇಲ್ಲವೆಂದು ಅಪಲಾಪಮಾಡುವುದಿಲ್ಲ. ಎಲ್ಲಾ ಕಾರ್ಯಗಳಿಗೂ ಈಶ್ವರನೂ ಕಾರಣನಾದ್ದರಿಂದ ಘಟಾದಿ ಕಾರ್ಯಸ್ಥಳದಲ್ಲಿ ಈಶ್ವರ ಮತ್ತು ಕುಂಬಾರ ಇಬ್ಬರು ಕರ್ತೃಗಳು. ಯಾವ ಕರ್ತೃವೂ ಕಾಣದಿದ್ದ ಕಾರ್ಯಸ್ಥಳದಲ್ಲಿ ಮಾತ್ರ ಈಶ್ವರನೊಬ್ಬನೇ ಕರ್ತೃ ಎಂದು ಅಂಗೀಕರಿಸುವುದರಿಂದ ಯಾವ ವಿರೋಧವೂ ಇಲ್ಲವೆಂದು ಅಭಿಪ್ರಾಯ.

**ತಸ್ಮಾತ್ಪಕ್ಷೇ ಪಕ್ಷಸಮೇ ಯಸ್ಯಾನೈಕಾನ್ತ್ಯಚೋದನಾ ।**
**ವೇದ ನಾಸೌ ಪುಮಾನ್ ಶಾಸ್ತ್ರಮರ್ಯಾದಾಮಾರ್ಯಗರ್ಹಿತಃ॥ ೨೬೫ ॥**

**ಅರ್ಥ–** ತಸ್ಮಾತ್ = ಸರ್ವ ಕಾರ್ಯಗಳು ಶ್ರೀಹರಿಯಿಂದ ಮಾಡಲ್ಪಟ್ಟಿವೆಂದು ಅಂಗೀಕರಿಸುವುದರಿಂದ, ಪಕ್ಷೇ = ಸ್ವಭಾವಸಿದ್ಧ ಭೂಮಿಯೇ ಮೊದಲಾದವುಗಳಲ್ಲಿ, ಪಕ್ಷಸಮೇ = ಶಿಲಾದಿ ವಸ್ತುಗಳಲ್ಲಿ, ಯಸ್ಯ = ವಾದಿಯ ಅನೈಕಾಂತ್ಯಚೋದನಾ = ವ್ಯಭಿಚಾರ ಕಥನವು ಇರುತ್ತದೆಯೋ, ಆರ್ಯಗರ್ಹಿತಃ = ಜ್ಞಾನಿಗಳಿಂದ ತಿರಸ್ಕೃತನಾದ, ಅಸೌ = ಈ, ಪುಮಾನ್ = ಪುರುಷನು, ಶಾಸ್ತ್ರಮರ್ಯಾದಾಂ = ವಾದದ ನಿಯಮವನ್ನು, ನ ವೇದ = ತಿಳಿದಿಲ್ಲ.

**ಅನುವಾದ–** ಎಲ್ಲ ಕಾರ್ಯಗಳು ಪರಮಾತ್ಮನಿಂದ ಮಾಡಲ್ಪಟ್ಟಿವೆ ಎಂದು ಅಂಗೀಕರಿಸಿರುವುದರಿಂದ ಪಕ್ಷವಾದ ಸ್ವಭಾವಾದಿಗಳಲ್ಲಿ ಪಕ್ಷಸಮವಾದ ಶಿಲಾದಿಗಳಲ್ಲಿ ವ್ಯಭಿಚಾರವನ್ನು ಉದ್ಭಾವನೆ ಮಾಡುವ ವಾದಿಯು ಆರ್ಯರಿಂದ ಗರ್ಹಿತನಾಗುತ್ತಾನೆ. ಈ ವಾದಿಯು ಶಾಸ್ತ್ರಮರ್ಯಾದೆಯನ್ನು ತಿಳಿದಿಲ್ಲ ವೆಂದರ್ಥ. ವ್ಯಭಿಚಾರವನ್ನು ತೋರಿಸುವ ಎಲ್ಲದಕ್ಕೂ ಪಕ್ಷಸಮತ್ವವಿರುವುದರಿಂದ ವ್ಯಭಿಚಾರವಿಲ್ಲವೆಂದು ಭಾವ.

**ಭಾವವಿಲಾಸಿನೀ–** ಈಶ್ವರಕರ್ತೃಕತ್ವಸ್ಯ ವ್ಯಭಿಚಾರಸ್ಥಲತಯಾ ತೈಸ್ತೈರ್ವಾದಿಭಿರುಕ್ತ ವಕ್ಷ್ಯಮಾಣಸಕಲದೃಷ್ಟಾಂತಾನಾಮಪಿ ಸಾಧಾರಣಂ ದೂಷಣಮಾಹ –ತಸ್ಮಾದಿತಿ॥ ತಸ್ಮಾತ್ಸರ್ವಸ್ಯ ಕಾರ್ಯಸ್ಯಾಸ್ಮಾಭಿರೀಶಕರ್ತೃಕತ್ವಾಂಗೀಕಾರಾತ್ಪಕ್ಷೇ ಸ್ವಭಾವಾದೌ ಪಕ್ಷಸಮೇ ಶಿಲಾದೌ ಯಸ್ಯ ವಾದಿನಃ ಅನೈಕಾನ್ತ್ಯಚೋದನಾ ವ್ಯಭಿಚಾರಕಥನಮ್ ಆರ್ಯಗರ್ಹಿತಃ ಅಸೌ ಪುಮಾನ್ ಶಾಸ್ತ್ರಮರ್ಯಾದಾಂ ನ ವೇದೇತಿ ಸಂಬಂಧಃ । ನಹಿ ಪಕ್ಷೇ ಪಕ್ಷಸಮೇ ವಾ ವ್ಯಭಿಚಾರ

ಇತ್ಯಾರ್ಯವಚನಾತ್ । ಪಕ್ಷಸಮಾನೀಮಾನಿ ಯತ್ಕಾರ್ಯಂ ತತ್ಸಕರ್ತೃಕಮಿತ್ಯಸ್ಮದುಕ್ತವ್ಯಾಪ್ತೇರ್ನ ವ್ಯಭಿಚಾರಸ್ಥಲಾನೀತಿ ಭಾವಃ ॥ ೨೬೫ ॥

**ವಿವರಣೆ–** ಈಶ್ವರನನ್ನು ಸಾಧನ ಮಾಡುವ ಅನುಮಾನಕ್ಕೆ ವ್ಯಭಿಚಾರವನ್ನು ಹೇಳಲು ಆಯಾ ವಾದಿಗಳು ಯಾವ ಯಾವ ಸ್ಥಳಗಳನ್ನು ತೋರಿಸುತ್ತಾರೋ ಆ ಎಲ್ಲ ಸ್ಥಳಗಳಿಗೂ ಅನ್ವಯವಾಗುವ ದೋಷವನ್ನು ಹೇಳುತ್ತಿದ್ದಾರೆ. 'ತಸ್ಮಾತ್ ಪಕ್ಷೇ' ಇತ್ಯಾದಿ ಶ್ಲೋಕದಿಂದ. ಪೃಥ್ವಿ-ಅಗ್ನಿ-ಜಲ ಪರ್ವತ ಮುಂತಾದ ವಸ್ತುಗಳ ಸೃಷ್ಟಿಕರ್ತನು ಮತ್ತು ಅವುಗಳ ಎಲ್ಲ ಕ್ರಿಯೆಗಳಿಗೂ ನಿಯಾಮಕನು ಶ್ರೀಹರಿಯೇ ಆಗಿರುತ್ತಾನೆ ಎಂಬುದು ನಾವು ಅಂಗೀಕರಿಸುವ ಪ್ರಮೇಯವಾಗಿದೆ. ಇದರ ಮೇಲೆ ಹೀಗೆ ಆಕ್ಷೇಪ ಬರುವುದುಂಟು. ಅದೇನೆಂದರೆ ಪೃಥ್ವಿ ಇತ್ಯಾದಿಗಳ ಕರ್ತನು ಪರಮಾತ್ಮನು ಆಗಲಿ. ಆದರೆ ಕಾಲ ವಿಶೇಷದಲ್ಲಿ ತಮ್ಮಷ್ಟಕ್ಕೆ ತಾವೇ ಹುಟ್ಟಿ ನಾಶವನ್ನೂ ಹೊಂದುವಂಥ ಕ್ರಿಮಿ-ಕೀಟ-ತೃಣಾದಿ (ಹುಲ್ಲು) ಗಳಲ್ಲಿ ಶ್ರೀಹರಿಯ ಕರ್ತೃತ್ವವಿಲ್ಲ ಅಂದರೆ ಸಕರ್ತೃಕತ್ವರೂಪವಾದ ಸಾಧ್ಯವಿಲ್ಲದಿದ್ದರು ಕಾರ್ಯತ್ವರೂಪವಾದ ಹೇತು ಇದೆಯಾದ್ದರಿಂದ ವ್ಯಭಿಚಾರ ದೋಷ ಬಂದಿತೆಂದು (ಸಾಧ್ಯವಿಲ್ಲದ ಸ್ಥಳದಲ್ಲಿ ಹೇತುವಿನ ಇರುವಿಕೆ ಎಂಬ ವ್ಯಭಿಚಾರ ದೋಷಬಂದಿತೆಂದು) ಹೇಳುತ್ತಾರೆ. ಆದರೆ ಇದು ಸರಿಯಲ್ಲ, ವ್ಯಭಿಚಾರ ದೋಷವನ್ನು ಎಲ್ಲಿ ಮತ್ತು ಹೇಗೆ ಹೇಳಬೇಕೆಂಬ ನಿಯಮವನ್ನೇ ತಿಳಿಯದವರು ಮಾತ್ರ ಈ ರೀತಿ ಹೇಳುತ್ತಾರೆ. ನಾವು ಕ್ರಿಮಿ ಕೀಟ ತೃಣಾದಿಗಳಲ್ಲಿಯೂ ಸಹ ಈಶ್ವರ ಕರ್ತೃತ್ವವನ್ನು ಒಪ್ಪಿದ್ದೇವಾದ್ದರಿಂದ ಸಮಪಕ್ಷಗಳಾದ ಕ್ರಿಮಿ, ಕೀಟ, ತೃಣಾದಿಗಳಲ್ಲಿ ವ್ಯಭಿಚಾರ ದೋಷವನ್ನು ಹೇಳಲು ಬರುವುದಿಲ್ಲ, ಪಕ್ಷದಲ್ಲಿ ಅಥವಾ ಪಕ್ಷ ಸಮದಲ್ಲಿ ವ್ಯಭಿಚಾರವಿಲ್ಲ ಎಂಬ ಆರ್ಯವಚನವೂ ಇದೆ. ಕ್ರಿಮ್ಯಾದಿಗಳು ಪಕ್ಷ ಸಮವಾದ್ದರಿಂದ 'ಯತ್ ಕಾರ್ಯಂ ತತ್‌ಸಕರ್ತೃಕಂ' ಎಂಬ ನಮ್ಮ ವ್ಯಾಪ್ತಿಗೆ ವ್ಯಭಿಚಾರ ದೋಷವಿಲ್ಲವೆಂದು ಅಭಿಪ್ರಾಯ.

ರತ್ನಪ್ರಭಾ ಸ್ವಭಾವಶ್ಚೇತ್ ಕುತೋ ನಾಸ್ತಿ ಶಿಲಾಂತರೇ ।
ತತಸ್ತತ್ರೈವ ಸಾ ಭೂಯಾದಿತ್ಯತ್ರಾಸ್ತಿ ನಿಯಾಮಕಃ ॥ ೨೬೬ ॥

**ಅರ್ಥ–** ರತ್ನಪ್ರಭಾ = ರತ್ನದಕಾಂತಿಯು, ಸ್ವಭಾವಶ್ಚೇತ್ = ಶಿಲೆಯ ಸ್ವಭಾವವಾದಲ್ಲಿ, ಶಿಲಾಂತರೇ = ಬೇರೆ ಶಿಲೆಯಲ್ಲಿಯೂ, ಕುತಃ = ಏಕೆ, ನಾಸ್ತಿ = ಇರುವುದಿಲ್ಲ?, ತತಃ = ಆದುದರಿಂದ, ತತ್ರೈವ = ರತ್ನ ರೂಪದಲ್ಲಿರುವ ಶಿಲೆಯಲ್ಲಿಯೇ, ಸಾ = ಆ ಪ್ರಭೆಯು, ಭೂಯಾತ್ = ಇರೋಣವಾಗಲಿ, ಇತಿ = ಎಂಬ, ಅತ್ರ = ಈ ಸ್ಥಳದಲ್ಲಿಯೂ, ನಿಯಾಮಕಃ = ನಿಯಾಮಕವು, ಅಸ್ತಿ = ಇದೆ.

**ಅನುವಾದ–** ರತ್ನವು ಪ್ರಭಾವುಳ್ಳದ್ದಾಗಿದೆ. ಆ ಪ್ರಭೆಯು ಅದರ ಸ್ವಭಾವವೆಂದು ಹೇಳಿದರೆ ರತ್ನವು ಶಿಲಾ ವಿಶೇಷವಾದ್ದರಿಂದ ರತ್ನವಲ್ಲದ ಬೇರೆ ಶಿಲೆಯಲ್ಲಿ ಆ

ಕರ್ತವ್ಯತ್ವಾದ್ ದೃಷ್ಟಂ ಮೃತ್ಕುಲಾಲಾದಿಕಾರಣವತ್ತಯಾ ದೃಷ್ಟಂ ಘಟಾದಿ ದೃಷ್ಟಾತ್ ಕುಲಾಲಾದಿ-ಕಾರಣಾದೀಶ್ವರತಶ್ಚೇತಿ ಸಂಬಂಧಃ । ಅದೃಷ್ಟಂ ದೃಷ್ಟಕರ್ತ್ರಾದಿಕಾರಣಶೂನ್ಯಮಂಕುರಾದೀ-ತ್ಯರ್ಥಃ । ಸರ್ವಧುರಂಧರಃ ಸಕಲಕಾರ್ಯಧುರಂಧರಃ ॥ ೨೬೪ ॥

**ವಿವರಣೆ–** ಈಶ್ವರನೇ ಎಲ್ಲಾ ಕಾರ್ಯಗಳಿಗೂ ಕಾರಣನಾಗುವುದಾದರೆ ಪ್ರತ್ಯಕ್ಷವಾಗಿ ಕಾಣುವ ಕಾರಣಗಳು ಇಲ್ಲವೆಂದು ಅಪಲಾಪಮಾಡಬೇಕಾಗುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ನಾವು ಪ್ರತ್ಯಕ್ಷವಾಗಿ ಕಾಣುವ ಕುಂಬಾರ ಮೊದಲಾದ ಕಾರಣಗಳು ಇಲ್ಲವೆಂದು ಅಪಲಾಪಮಾಡುವುದಿಲ್ಲ. ಎಲ್ಲಾ ಕಾರ್ಯಗಳಿಗೂ ಈಶ್ವರನೂ ಕಾರಣನಾದ್ದರಿಂದ ಘಟಾದಿ ಕಾರ್ಯಸ್ಥಳದಲ್ಲಿ ಈಶ್ವರ ಮತ್ತು ಕುಂಬಾರ ಇಬ್ಬರು ಕರ್ತೃಗಳು. ಯಾವ ಕರ್ತೃವೂ ಕಾಣದಿದ್ದ ಕಾರ್ಯಸ್ಥಳದಲ್ಲಿ ಮಾತ್ರ ಈಶ್ವರನೊಬ್ಬನೇ ಕರ್ತೃ ಎಂದು ಅಂಗೀಕರಿಸುವುದರಿಂದ ಯಾವ ವಿರೋಧವೂ ಇಲ್ಲವೆಂದು ಅಭಿಪ್ರಾಯ.

**ತಸ್ಮಾತ್ಪಕ್ಷೇ ಪಕ್ಷಸಮೇ ಯಸ್ಯಾನೈಕಾನ್ತ್ಯಚೋದನಾ ।**
**ವೇದ ನಾಸೌ ಪುಮಾನ್ ಶಾಸ್ತ್ರಮರ್ಯಾದಾಮಾರ್ಯಗರ್ಹಿತಃ॥ ೨೬೫ ॥**

**ಅರ್ಥ–** ತಸ್ಮಾತ್ = ಸರ್ವ ಕಾರ್ಯಗಳು ಶ್ರೀಹರಿಯಿಂದ ಮಾಡಲ್ಪಟ್ಟಿವೆಂದು ಅಂಗೀಕರಿಸುವುದರಿಂದ, ಪಕ್ಷೇ = ಸ್ವಭಾವಸಿದ್ಧ ಭೂಮಿಯೇ ಮೊದಲಾದವುಗಳಲ್ಲಿ, ಪಕ್ಷಸಮೇ = ಶಿಲಾದಿ ವಸ್ತುಗಳಲ್ಲಿ, ಯಸ್ಯ = ವಾದಿಯ ಅನೈಕಾಂತ್ಯಚೋದನಾ = ವ್ಯಭಿಚಾರ ಕಥನವು ಇರುತ್ತದೆಯೋ, ಆರ್ಯಗರ್ಹಿತಃ = ಜ್ಞಾನಿಗಳಿಂದ ತಿರಸ್ಕೃತನಾದ, ಅಸೌ = ಈ, ಪುಮಾನ್ = ಪುರುಷನು, ಶಾಸ್ತ್ರಮರ್ಯಾದಾಂ = ವಾದದ ನಿಯಮವನ್ನು, ನ ವೇದ = ತಿಳಿದಿಲ್ಲ.

**ಅನುವಾದ–** ಎಲ್ಲ ಕಾರ್ಯಗಳು ಪರಮಾತ್ಮನಿಂದ ಮಾಡಲ್ಪಟ್ಟಿವೆ ಎಂದು ಅಂಗೀಕರಿಸಿರುವುದರಿಂದ ಪಕ್ಷವಾದ ಸ್ವಭಾವಾದಿಗಳಲ್ಲಿ ಪಕ್ಷಸಮವಾದ ಶಿಲಾದಿಗಳಲ್ಲಿ ವ್ಯಭಿಚಾರವನ್ನು ಉದ್ಭಾವನೆ ಮಾಡುವ ವಾದಿಯು ಆರ್ಯರಿಂದ ಗರ್ಹಿತನಾಗುತ್ತಾನೆ. ಈ ವಾದಿಯು ಶಾಸ್ತ್ರಮರ್ಯಾದೆಯನ್ನು ತಿಳಿದಿಲ್ಲ ವೆಂದರ್ಥ. ವ್ಯಭಿಚಾರವನ್ನು ತೋರಿಸುವ ಎಲ್ಲದಕ್ಕೂ ಪಕ್ಷಸಮತ್ವವಿರುವುದರಿಂದ ವ್ಯಭಿಚಾರವಿಲ್ಲವೆಂದು ಭಾವ.

**ಭಾವವಿಲಾಸಿನೀ–** ಈಶ್ವರಕರ್ತೃಕತ್ವಸ್ಯ ವ್ಯಭಿಚಾರಸ್ಥಲತಯಾ ತೈಸ್ತೈರ್ವಾದಿಭಿರುಕ್ತ ವಕ್ಷ್ಯಮಾಣಸಕಲದೃಷ್ಟಾಂತಾನಾಮಪಿ ಸಾಧಾರಣಂ ದೂಷಣಮಾಹ–ತಸ್ಮಾದಿತಿ॥ ತಸ್ಮಾತ್ಸರ್ವಸ್ಯ ಕಾರ್ಯಸ್ಯಾಸ್ಮಾಭಿರೀಶಕರ್ತೃಕತ್ವಾಂಗೀಕಾರಾತ್ಪಕ್ಷೇ ಸ್ವಭಾವಾದೌ ಪಕ್ಷಸಮೇ ಶಿಲಾದೌ ಯಸ್ಯ ವಾದಿನಃ ಅನೈಕಾನ್ತ್ಯಚೋದನಾ ವ್ಯಭಿಚಾರಕಥನಮ್ ಆರ್ಯಗರ್ಹಿತಃ ಅಸೌ ಪುಮಾನ್ ಶಾಸ್ತ್ರಮರ್ಯಾದಾಂ ನ ವೇದೇತಿ ಸಂಬಂಧಃ । ನಹಿ ಪಕ್ಷೇ ಪಕ್ಷಸಮೇ ವಾ ವ್ಯಭಿಚಾರ

ಇತ್ಯಾರ್ಯವಚನಾತ್ । ಪಕ್ಷಸಮಾನೀಮಾನಿ ಯತ್ಕಾರ್ಯಂ ತತ್ಸಕರ್ತೃಕಮಿತ್ಯಸ್ಮದುಕ್ತವ್ಯಾಪ್ತೇರ್ನ ವ್ಯಭಿಚಾರಸ್ಥಲಾನೀತಿ ಭಾವಃ ॥ ೨೬೫ ॥

**ವಿವರಣೆ–** ಈಶ್ವರನನ್ನು ಸಾಧನ ಮಾಡುವ ಅನುಮಾನಕ್ಕೆ ವ್ಯಭಿಚಾರವನ್ನು ಹೇಳಲು ಆಯಾ ವಾದಿಗಳು ಯಾವ ಯಾವ ಸ್ಥಳಗಳನ್ನು ತೋರಿಸುತ್ತಾರೋ ಆ ಎಲ್ಲ ಸ್ಥಳಗಳಿಗೂ ಅನ್ವಯವಾಗುವ ದೋಷವನ್ನು ಹೇಳುತ್ತಿದ್ದಾರೆ. 'ತಸ್ಮಾತ್ ಪಕ್ಷೇ' ಇತ್ಯಾದಿ ಶ್ಲೋಕದಿಂದ. ಪೃಥ್ವಿ-ಅಗ್ನಿ-ಜಲ ಪರ್ವತ ಮುಂತಾದ ವಸ್ತುಗಳ ಸೃಷ್ಟಿಕರ್ತನು ಮತ್ತು ಅವುಗಳ ಎಲ್ಲ ಕ್ರಿಯೆಗಳಿಗೂ ನಿಯಾಮಕನು ಶ್ರೀಹರಿಯೇ ಆಗಿರುತ್ತಾನೆ ಎಂಬುದು ನಾವು ಅಂಗೀಕರಿಸುವ ಪ್ರಮೇಯವಾಗಿದೆ. ಇದರ ಮೇಲೆ ಹೀಗೆ ಆಕ್ಷೇಪ ಬರುವುದುಂಟು. ಅದೇನೆಂದರೆ ಪೃಥ್ವಿ ಇತ್ಯಾದಿಗಳ ಕರ್ತನು ಪರಮಾತ್ಮನು ಆಗಲಿ. ಆದರೆ ಕಾಲ ವಿಶೇಷದಲ್ಲಿ ತಮ್ಮಷ್ಟಕ್ಕೆ ತಾವೇ ಹುಟ್ಟಿ ನಾಶವನ್ನೂ ಹೊಂದುವಂಥ ಕ್ರಿಮಿ-ಕೀಟ-ತೃಣಾದಿ (ಹುಲ್ಲು) ಗಳಲ್ಲಿ ಶ್ರೀಹರಿಯ ಕರ್ತೃತ್ವವಿಲ್ಲ ಅಂದರೆ ಸಕರ್ತೃಕತ್ವರೂಪವಾದ ಸಾಧ್ಯವಿಲ್ಲದಿದ್ದರು ಕಾರ್ಯತ್ವರೂಪವಾದ ಹೇತು ಇದೆಯಾದ್ದರಿಂದ ವ್ಯಭಿಚಾರ ದೋಷ ಬಂದಿತೆಂದು (ಸಾಧ್ಯವಿಲ್ಲದ ಸ್ಥಳದಲ್ಲಿ ಹೇತುವಿನ ಇರುವಿಕೆ ಎಂಬ ವ್ಯಭಿಚಾರ ದೋಷಬಂದಿತೆಂದು) ಹೇಳುತ್ತಾರೆ. ಆದರೆ ಇದು ಸರಿಯಲ್ಲ, ವ್ಯಭಿಚಾರ ದೋಷವನ್ನು ಎಲ್ಲಿ ಮತ್ತು ಹೇಗೆ ಹೇಳಬೇಕೆಂಬ ನಿಯಮವನ್ನೇ ತಿಳಿಯದವರು ಮಾತ್ರ ಈ ರೀತಿ ಹೇಳುತ್ತಾರೆ. ನಾವು ಕ್ರಿಮಿ ಕೀಟ ತೃಣಾದಿಗಳಲ್ಲಿಯೂ ಸಹ ಈಶ್ವರ ಕರ್ತೃತ್ವವನ್ನು ಒಪ್ಪಿದ್ದೇವಾದ್ದರಿಂದ ಸಮಪಕ್ಷಗಳಾದ ಕ್ರಿಮಿ, ಕೀಟ, ತೃಣಾದಿಗಳಲ್ಲಿ ವ್ಯಭಿಚಾರ ದೋಷವನ್ನು ಹೇಳಲು ಬರುವುದಿಲ್ಲ. ಪಕ್ಷದಲ್ಲಿ ಅಥವಾ ಪಕ್ಷ ಸಮದಲ್ಲಿ ವ್ಯಭಿಚಾರವಿಲ್ಲ ಎಂಬ ಆರ್ಯವಚನವೂ ಇದೆ. ಕ್ರಿಮ್ಯಾದಿಗಳು ಪಕ್ಷ ಸಮವಾದ್ದರಿಂದ 'ಯತ್ ಕಾರ್ಯಂ ತತ್ಸಕರ್ತೃಕಂ' ಎಂಬ ನಮ್ಮ ವ್ಯಾಪ್ತಿಗೆ ವ್ಯಭಿಚಾರ ದೋಷವಿಲ್ಲವೆಂದು ಅಭಿಪ್ರಾಯ.

**ರತ್ನಪ್ರಭಾ ಸ್ವಭಾವಶ್ಚೇತ್ ಕುತೋ ನಾಸ್ತಿ ಶಿಲಾಂತರೇ ।**
**ತತಸ್ತತ್ರೈವ ಸಾ ಭೂಯಾದಿತ್ಯತ್ರಾಸ್ತಿ ನಿಯಾಮಕಃ ॥ ೨೬೬ ॥**

**ಅರ್ಥ–** ರತ್ನಪ್ರಭಾ = ರತ್ನದಕಾಂತಿಯು, ಸ್ವಭಾವಶ್ಚೇತ್ = ಶಿಲೆಯ ಸ್ವಭಾವವಾದಲ್ಲಿ, ಶಿಲಾಂತರೇ = ಬೇರೆ ಶಿಲೆಯಲ್ಲಿಯೂ, ಕುತಃ = ಏಕೆ, ನಾಸ್ತಿ = ಇರುವುದಿಲ್ಲ?, ತತಃ = ಆದುದರಿಂದ, ತತ್ರೈವ = ರತ್ನ ರೂಪದಲ್ಲಿರುವ ಶಿಲೆಯಲ್ಲಿಯೇ, ಸಾ = ಆ ಪ್ರಭೆಯು, ಭೂಯಾತ್ = ಇರೋಣವಾಗಲಿ, ಇತಿ = ಎಂಬ, ಅತ್ರ = ಈ ಸ್ಥಳದಲ್ಲಿಯೂ, ನಿಯಾಮಕಃ = ನಿಯಾಮಕವು, ಅಸ್ತಿ = ಇದೆ.

**ಅನುವಾದ–** ರತ್ನವು ಪ್ರಭಾವುಳ್ಳದ್ದಾಗಿದೆ. ಆ ಪ್ರಭೆಯು ಅದರ ಸ್ವಭಾವವೆಂದು ಹೇಳಿದರೆ ರತ್ನವು ಶಿಲಾ ವಿಶೇಷವಾದ್ದರಿಂದ ರತ್ನವಲ್ಲದ ಬೇರೆ ಶಿಲೆಯಲ್ಲಿ ಆ

ಪ್ರಭೆಯು ಯಾಕಿಲ್ಲ? ರತ್ನವಲ್ಲದ ಶಿಲೆಯಲ್ಲಿ ಪ್ರಭೆಯು ಇರುವುದಿಲ್ಲ. ರತ್ನದಲ್ಲಿ ಪ್ರಭೆ ಇದೆ ಇದಕ್ಕೆ ಕಾರಣನು ಪರಮಾತ್ಮನೇ ಆಗಿದ್ದಾನೆ. ರತ್ನವಿದ್ದಲ್ಲಿ ಆ ಪ್ರಭೆಯು ಇರಲಿ ಎಂದು ವಿಧಿಸುವ ನಿಯಾಮಕನು ಶ್ರೀಹರಿ ಆಗಿದ್ದಾನೆ.

**ಭಾವವಿಲಾಸಿನೀ–** ಅಧುನಾ ಸ್ವಭಾವವಾದಿನೋ ಮುಖೇನೈವ ನಿಯಾಮಕಮೀಶ್ವರಂ ಸಾಧಯತಿ – ರತ್ನೇತಿ ॥ ರತ್ನಸ್ಯಾಪಿ ಶಿಲಾತ್ವಾತ್ ತತ್ಪ್ರಭಾ ಶಿಲಾಸ್ವಭಾವಶ್ಚೇತ್ತರ್ಹಿ ಶಿಲಾಂತರೇ ರತ್ನಾತಿರಿಕ್ತಶಿಲಾಂತರೇ। ತತ್ರೈವ ರತ್ನರೂಪಶಿಲಾಯಾಮೇವ । ಸಾ ಪ್ರಭಾ । ಸ ಏವೇಶ್ವರ ಇತಿ ಭಾವಃ ॥ ೨೬೬ ॥

**ವಿವರಣೆ–** ವಸ್ತುವಿನ ಸ್ವಭಾವದಿಂದಲೇ ಎಲ್ಲಕಾರ್ಯ ನಡೆಯುತ್ತಿರುವಾಗ ಈಶ್ವರನಿಂದೇನು ಎಂದು ವಾದ ಮಾಡುತ್ತಿರುವ ಸ್ವಭಾವವಾದಿಯ ಮುಖದಿಂದಲೇ ಸರ್ವ ನಿಯಾಮಕನಾದ ಈಶ್ವರನನ್ನು ಸಾಧಿಸುತ್ತಾರೆ. ರತ್ನಪ್ರಭಾ ಇತ್ಯಾದಿ ಶ್ಲೋಕದಿಂದ, ರತ್ನಶಿಲೆಯಲ್ಲಿ ಮಾತ್ರ ಆ ಪ್ರಭೆಯು ಇರಲಿ ಎಂದು ವಿಧಾನ ಮಾಡತಕ್ಕವನು ಆ ಪರಮಾತ್ಮನೇ ಆಗಿದ್ದಾನೆಂದು ಹೇಳಬೇಕು. ಇಲ್ಲವಾದರೆ ರತ್ನವು ಶಿಲಾವಿಶೇಷವಾದ್ದರಿಂದ ಬೇರೆ ಶಿಲೆಯಲ್ಲಿ ಅಂದರೆ ರತ್ನವಲ್ಲದೆ ಇರುವ ಬರಿಶಿಲೆಯಲ್ಲಿ ಆ ಪ್ರಭೆಯು ಇರುವಂತಾಗಬೇಕಾಗುತ್ತದೆ. ಏಕೆಂದರೆ ರತ್ನಗಳಲ್ಲಿರುವ ಪ್ರಕಾಶವು (ಪ್ರಭೆಯು) ಸ್ವಭಾವಸಿದ್ಧವಾದುದರಿಂದ ಅದನ್ನು ಸೃಷ್ಟಿ ಮಾಡಿದವರು ಯಾರೂ ಇಲ್ಲವಾದ್ದರಿಂದ ರತ್ನವಲ್ಲದ ಶಿಲೆಯಲ್ಲಿಯೂ ಆ ಪ್ರಕಾಶವು (ಪ್ರಭೆಯು) ಏಕಿರುವುದಿಲ್ಲ? ಆದ್ದರಿಂದ ಪ್ರಭೆಯ ನಿಯಾಮಕನು ಪರಮಾತ್ಮನಿರುವನೆಂದು ಸ್ವಭಾವವಾದಿ ಮೂಲಕವಾಗಿಯೇ ಈಶ್ವರನನ್ನು ಸಾಧಿಸಿದ್ದಾರೆ.

ನಾರ್ಯೈಶ್ಚ ವಾರ್ಯಃ ಕಾರ್ಯೇಽಸೌ ಹರ್ಯೈಶ್ವರ್ಯೇರ್ಯವೀರ್ಯವಾನ್ ।
ನಿರ್ದೈವಮೃದ್ಧ್ಯೈ ತಂ ವಿದ್ವಾನ್ ಕೋಽದ್ಯಾದದ್ಯಾದ್ಧಿ ಬೌದ್ಧವತ್ ॥ ೨೬೭ ॥

**ಅರ್ಥ–** ಹರ್ಯೈಶ್ವರ್ಯ = ಶ್ರೀಹರಿಯ ಅಚಿಂತ್ಯಶಕ್ತಿಯಿಂದ, ಈರ್ಯ = ಪ್ರೇರಿತವಾದ, ವೀರ್ಯವಾನ್ = ಸಾಮರ್ಥ್ಯವುಳ್ಳ, ಅಸೌ = ಈ ಸ್ವಭಾವವು, ಕಾರ್ಯೇ= ಕಾರ್ಯದಲ್ಲಿ ಆರ್ಯೈಃ = ಜ್ಞಾನಿಗಳಿಂದ, ನ ವಾರ್ಯಃ = ಬಿಡತಕ್ಕವುಗಳಲ್ಲ ನಿರ್ದೈವಂ = ಈಶ್ವರ ನಿಯಮ್ಯವಲ್ಲವೆಂದು, ತಂ = ಆ ಸ್ವಭಾವವನ್ನು ಋದ್ಧ್ಯೈ = ಪೂರ್ಣತೆಗಾಗಿ, ಅದ್ಯ = ಈಗ, ಕೋವಾ ವಿದ್ವಾನ್ = ಯಾವ ವಿವೇಕಿಯು, ಬೌದ್ಧವತ್ = ಬೌದ್ಧನಂತೆ, ಆದದ್ಯಾತ್ = ಸ್ವೀಕರಿಸಿಯಾನು?

**ಅನುವಾದ–** ಪರಮಾತ್ಮನ ಸಾಮರ್ಥ್ಯದಿಂದ ಆಗುವ ಕಾರ್ಯದಲ್ಲಿ ವಸ್ತು ಸ್ವಭಾವಾದಿಗಳು ತ್ಯಾಜ್ಯಗಳಲ್ಲ. ಸ್ವಭಾವಾದಿಗಳು ಪರಮಾತ್ಮನ ಅಧೀನಗಳಾಗಿ ಕಾರ್ಯವನ್ನು ಹುಟ್ಟಿಸುವುದರಲ್ಲಿ ಪರಂಪರಾ ಕಾರಣಗಳಾಗಿವೆ ವಿನಃ ಸ್ವತಂತ್ರ

ಕಾರಣಗಳಲ್ಲವೆಂದು ಅಭಿಪ್ರಾಯ. ಬೌದ್ಧರು ಮಾತ್ರ ಸ್ವಭಾವಕ್ಕೆ ಸ್ವತಂತ್ರ ಕಾರಣತ್ವವನ್ನು ಹೇಳುವರು.

**ಭಾವವಿಲಾಸಿನೀ—** ಏವಂ ಸರ್ವಸ್ಯಾಪೀಶ್ವರಕೃತತ್ವೇ ಪರೋದೀರಿತಸ್ವಭಾವಾದಿಕಂ ಕಿಂ ಸರ್ವಥಾ ನಾಪೇಕ್ಷಿತವಮ್? ನೇತ್ಯಾಹ – **ನೇತಿ ॥** ಹರ್ಯೈಶ್ವರ್ಯೇಣ ಈರ್ಯಂ ಪ್ರೇರ್ಯಂ ವೀರ್ಯಮಸ್ಯಾಸ್ತೀತಿ ಸ ತಥೋಕ್ತಃ । ಅಸೌ ಸ್ವಭಾವಾದಿ । ನಿರ್ದೈವಂ ದೈವರಹಿತಂ ದೈವಾನಧೀನಮಿತ್ಯರ್ಥಃ । ತಂ ಸ್ವಭಾವಂ ಕೋ ವಾ ಆದದ್ಯಾತ್ । ಅನಾದಾನೇ ವ್ಯತಿರೇಕದೃಷ್ಟಾಂತಮಾಹ – **ಬೌದ್ಧವದಿತಿ ॥** ಯಥಾ ಬೌದ್ಧ ಆದದ್ಯಾತ್ತಥಾನ್ಯೋ ನ ಕೋಽಪೀತಿ ಭಾವಃ । ಕಿಂಚಾಂಗೀಕೃತೋಽಪ್ಯಯಂ ಸ್ವಭಾವಃ ನ ಸಾಕ್ಷಾತ್ತತ್ತತ್ಕಾರ್ಯೇಷು ಕಾರಣಮ್ । ಕಿಂತು ದಂಡಮೃತ್ಪಿಂಡಾದೀನಾಂ ಕಾರಣಾನಾಂ ಯೋಗ್ಯತಾರೂಪಃ ಸ್ವಭಾವಃ ಕಾರಣತಾವಚ್ಛೇದಕತಯಾ ಪರಂಪರಾಕಾರಣಮೇವ ॥ ೨೬೭ ॥

**ವಿವರಣೆ—** ಎಲ್ಲದಕ್ಕೂ ಈಶಕರ್ತೃಕತ್ವವಿದೆ ಎಂದು ಹೇಳಿ ಹಾಗಾದರೆ ಬೇರೆ ವಾದಿ ಹೇಳುವ ವಸ್ತುವಿನ ಸ್ವಭಾವಾದಿಗಳು ಸರ್ವಥಾ ಅನಪೇಕ್ಷಿತಗಳೇ ಅದೂ ಸಹ ಸರಿಯಲ್ಲವೆಂದು ಹೇಳುತ್ತಿದ್ದಾರೆ. 'ನಾರ್ಯೈಶ್ಚ' ಮುಂತಾದ ಶ್ಲೋಕದಿಂದ ಸ್ವಭಾವಕ್ಕೆ ಕಾರಣತ್ವವಿರುವುದನ್ನು ನಾವುಗಳು (ಈಶ್ವರನನ್ನು ಒಪ್ಪತಕ್ಕವರು) ಅಲ್ಲಗಳೆಯುವುದಿಲ್ಲ ಒಪ್ಪಿದ್ದೇವೆ. ಆದರೆ ಸ್ವಭಾವವು ಕಾರ್ಯಗಳಲ್ಲಿ ಸಾಕ್ಷಾತ್ತಾಗಿ ಕಾರಣವಲ್ಲ. ಘಟವೆಂಬ ಕಾರ್ಯವನ್ನು ಕುರಿತು ಮೃತ್‌ಪಿಂಡ ದಂಡಾದಿಗಳು ಕಾರಣ. ಸ್ವಭಾವವು ಕಾರಣತಾವಚ್ಛೇದಕವಾಗಿ ಈಶ್ವರನಿಯಮ್ಯವಾಗಿ ಪರಂಪರೆಯಿಂದ ಕಾರಣವಾಗುತ್ತದೆ.

**ಕಿಂಚಾಚೇತನಮಾತ್ರಸ್ಯ ಸ್ವಭಾವೋಽನ್ಯನಿಯಮ್ಯತಾ ।**
**ಅತೋ ಭವತ್ಸ್ವಭಾವೇನ ಪ್ರಭುರಾವಿರ್ಬಭೂವ ಮೇ ॥ ೨೬೮ ॥**

**ಅರ್ಥ—** ಕಿಂಚ = ಮತ್ತು ಏನೆಂದರೆ, ಅನ್ಯನಿಯಮ್ಯತಾ = ಅನ್ಯರ ಅಧೀನವಾಗಿರುವುದು, ಅಚೇತನಮಾತ್ರಸ್ಯ = ಎಲ್ಲಾ ಜಡ ಪದಾರ್ಥಗಳ, ಸ್ವಭಾವಃ = ಸ್ವಭಾವವು ಆಗಿರುತ್ತದೆ, ಅತಃ = ಆದ್ದರಿಂದ, ಭವತ್ ಸ್ವಭಾವೇನ = ನಿನ್ನ ಸ್ವಭಾವದಿಂದಲೇ, ಮೇ = ನನ್ನ, ಪ್ರಭುಃ = ಸ್ವಾಮಿಯು (ಪರಮಾತ್ಮನು) ಆವಿರ್ಬಭೂವ = ಸಿದ್ಧಿಸಿದನು.

**ಅನುವಾದ—** ಅನ್ಯನಿಯಮ್ಯತ್ವವು ಎಲ್ಲಾ ಅಚೇತನಗಳ ಸ್ವಭಾವವಾಗಿರುವ ಕಾರಣದಿಂದಲೇ ನಿನ್ನ ಸ್ವಭಾವವಾದದಿಂದ ನನ್ನ ಸ್ವಾಮಿಯಾದ ಪರಮಾತ್ಮನು ಸಿದ್ಧನಾಗುತ್ತಾನೆ.

**ಭಾವವಿಲಾಸಿನೀ—** ರೀತ್ಯಂತರೇಣ ಸ್ವಭಾವಾದೇವ ಜಗದೀಶ್ವರಃ ಸಿದ್ಧ್ಯತೀತ್ಯಾಹ – **ಕಿಂಚೇತಿ ॥** ಯತೋಽಚೇತನಮಾತ್ರಸ್ಯಾನ್ಯನಿಯಮ್ಯತಾಸ್ವಭಾವಃ ಅತ ಇತ್ಯರ್ಥಃ । ತಥಾಚ ಸ್ವಭಾವಕರ್ಮಾದ್ಯಚೇತನಸ್ಯೈವಾನ್ಯನಿಯಮ್ಯತ್ವಸ್ವಭಾವಾದೇವ ಮೇ ಪ್ರಭುರೀಶ್ವರಃ

ಆವಿರ್ಭಭೂವ ಸಿದ್ಧೋಽಭೂದಿತ್ಯರ್ಥಃ । ಸ್ವಭಾವವಾದಿನಾಽಪಿ ತ್ವಯಾ ಸ್ವಭಾವಸ್ವಭಾವಸ್ಯಾಪಿ ರಕ್ಷಣೀಯತ್ವಾದಿತಿ ಭಾವಃ ॥ ೨೬೮ ॥

**ವಿವರಣೆ–** ರೀತ್ಯಂತರದಿಂದ ಸ್ವಭಾವದಿಂದಲೇ ಜಗದೀಶ್ವರನು ಸಿದ್ಧನಾಗುತ್ತಾನೆಂದು ಕಿಂಚಾಚೇತನ ಇತ್ಯಾದಿ ಶ್ಲೋಕದಿಂದ ಹೇಳುತ್ತಾರೆ. ಅಚೇತನವೆಲ್ಲವೂ ಚೇತನ ನಿಯಮ್ಯವೆಂದು ಸಿದ್ಧವಾಗಿದೆ. ಅಚೇತನ ಪದಾರ್ಥವಾದ ಸ್ವಭಾವವನ್ನು ನೀನು ಜಗತ್ಕಾರಣವೆಂದು ಅಂಗೀಕರಿಸಿದಲ್ಲಿ ಅಂತಹ ಜಡ ಪದಾರ್ಥವಾದರು ತನ್ನಷ್ಟಕ್ಕೆ ತಾನೇ ಕಾರ್ಯವನ್ನೂ ಮಾಡುವಂತಿಲ್ಲವಾದುದರಿಂದ ಆ ಜಡಪದಾರ್ಥವಾದ ಸ್ವಭಾವಕ್ಕೆ ನಿಯಾಮಕನಾದ ನನ್ನ ಸ್ವಾಮಿಯು (ಈಶನು) ಸಿದ್ಧನಾಗುತ್ತಾನೆ. ಸ್ವಭಾವವಾದಿಯಾದ ನೀನು ಸ್ವಭಾವದ ಸ್ವಭಾವವನ್ನು ರಕ್ಷಿಸಬೇಕಲ್ಲವೆ ಎಂದು ತಾತ್ಪರ್ಯ.

**ಸಚ ಸ್ವೇಚ್ಛಾನುಸಾರೇಣ ತತ್ತದ್ವಸ್ತು ತಥಾತಥಾ ।**
**ತನುತೇ ತೇಷು ಚಾಪ್ಯೇಕಮುಚ್ಚಂ ನೀಚಂ ಕರೋತಿ ಚ ॥ ೨೬೯ ॥**

**ಅರ್ಥ–** ಸಚ = ಆ ಸ್ವತಂತ್ರನಾದ ಶ್ರೀಹರಿಯು, ಸ್ವೇಚ್ಛಾನುಸಾರೇಣ = ತನ್ನ ಇಚ್ಛಾನುಸಾರವಾಗಿ, ತತ್ತದ್ವಸ್ತು = ಆಯಾ ಪದಾರ್ಥಗಳನ್ನು, ತಥಾ ತಥಾ = ಹೇಗಿರಬೇಕೋ ಹಾಗೆಯೇ, ತನುತೇ = ಮಾಡುತ್ತಾನೆ. ತೇಷು ಚಾಪಿ = ಆ ಪದಾರ್ಥಗಳಲ್ಲಿಯಾದರೂ, ಏಕಂ = ಒಂದನ್ನು, ಉಚ್ಚಂ = ಶ್ರೇಷ್ಠವನ್ನಾಗಿಯೂ, ಚ = ಮತ್ತು, ಏಕಂ = ಇನ್ನೊಂದನ್ನು, ನೀಚಂ = ಕನಿಷ್ಠವನ್ನಾಗಿಯೂ, ಕರೋತಿ = ಮಾಡುತ್ತಾನೆ.

**ಅನುವಾದ–** ಶ್ರೀಹರಿಯು ತನ್ನ ಇಚ್ಛೆಯಂತೆ ಪದಾರ್ಥಗಳನ್ನು ನಿರ್ಮಾಣ ಮಾಡುತ್ತಾನೆ. ಆ ಪದಾರ್ಥಗಳಲ್ಲಿಯೂ ಕೂಡ ಒಂದನ್ನು ಶ್ರೇಷ್ಠವನ್ನಾಗಿ ಮತ್ತೊಂದನ್ನು ಕನಿಷ್ಠವನ್ನಾಗಿ ಮಾಡುತ್ತಾನೆ. ಲೋಕದಲ್ಲಿ ನಮಗೆ ಕಾಣುವ ಉಚ್ಚ ನೀಚ ಭಾವಗಳು ಶ್ರೀಹರಿಯ ಇಚ್ಛೆಯಂತೆ ನಡೆಯುತ್ತವೆ.

**ಭಾವವಿಲಾಸಿನೀ–** ನನು ಸ್ವತಂತ್ರಚೇತನಾಂಗೀಕಾರೇಽಪಿ ನಾನಾಪದಾರ್ಥೇಷು ವೈಚಿತ್ರ್ಯಂ ಕಥಂ ಸ್ಯಾದಿತ್ಯತ ಆಹ – **ಸ ಚೇತಿ** ॥ ತತ್ತದ್ವಸ್ತು ತಥಾತಥಾ ಯದ್ವಸ್ತು ಯಾದೃಶಂ ತಥೇತ್ಯರ್ಥಃ । ತೇಷು ಸೃಷ್ಟೇಷು ಪದಾರ್ಥೇಷು ಏಕಮುಚ್ಚಮ್ ಅಪರಂ ನೀಚಂ ಕರೋತೀತಿ ಸಂಬಂಧಃ ॥ ೨೬೯ ॥

**ವಿವರಣೆ–** ಸ್ವತಂತ್ರವಾದ ಚೇತನನ್ನು (ಈಶ್ವರನನ್ನು) ಒಪ್ಪಿದರೂ ಕೂಡ ಅನೇಕ ಪದಾರ್ಥಗಳಲ್ಲಿ ವೈಚಿತ್ರ್ಯ ಹೇಗೆ ಕೂಡುತ್ತದೆ? ಎಂಬುದನ್ನು ಸಚ ಸ್ವೇಚ್ಛಾನುಸಾರೇಣ ಮುಂತಾದ ಶ್ಲೋಕದಿಂದ ಹೇಳುತ್ತಾರೆ. ಸ್ವತಂತ್ರನಾದ ಪರಮಾತ್ಮನು ಕೂಡ ಆ ಆ ಪದಾರ್ಥಗಳನ್ನು ಹಾಗೆ ಹಾಗೆಯೇ ಮಾಡುತ್ತಾನೆ. ಆದುದರಿಂದ ಪದಾರ್ಥಗಳಲ್ಲಿರುವ ವೈಚಿತ್ರ್ಯವು ಕೂಡುತ್ತದೆ. ಉಚ್ಚನೀಚ ಭಾವಗಳೂ ಸಹ ಕೂಡುತ್ತವೆ. ಎಲ್ಲದಕ್ಕೂ ಶ್ರೀಹರಿಯ ಇಚ್ಛೆಯೇ ನಿಮಿತ್ತ.

**ಸ್ವತಂತ್ರಸ್ಯ ಚ ತಸ್ಯೇಚ್ಛಾ ನಿಯೋಕ್ತುಂ ನೈವ ಶಕ್ಯತೇ ।**
**ಅರಾಜಕಮಿದಂ ರಾಷ್ಟ್ರಂ ನಚೇನ್ನಷ್ಟಂ ಭವಿಷ್ಯತಿ ॥ ೨೭೦ ॥**

**ಅರ್ಥ–** ಸ್ವತಂತ್ರಸ್ಯ = ಸರ್ವಸ್ವತಂತ್ರನಾದ, ತಸ್ಯ = ಆ ಪರಮಾತ್ಮನ, ಇಚ್ಛಾ = ಇಚ್ಛೆಯು, ನಿಯೋಕ್ತುಂ = ನಿಯಮನ ಮಾಡಲು, ನೈವಶಕ್ಯತೇ= ಶಕ್ಯವಿಲ್ಲ, ನಚೇತ್ = ಸ್ವತಂತ್ರನಲ್ಲದಿದ್ದರೆ ಇದಂ ರಾಷ್ಟ್ರಂ = ಈ ರಾಜ್ಯವು, ಅರಾಜಕಂ = ನಿಯಮನ ರಹಿತವಾಗಿ, ನಷ್ಟಂ = ವಿನಷ್ಟವು, ಭವಿಷ್ಯತಿ = ಆಗುತ್ತದೆ.

**ಅನುವಾದ–** **ಆ ಪರಮಾತ್ಮನ ಇಚ್ಛೆಯನ್ನು ನಿಯಂತ್ರಿಸಲು ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಪರಮಾತ್ಮನು ಸ್ವತಂತ್ರನಾಗಿದ್ದಾನೆ. ಸ್ವತಂತ್ರನಲ್ಲದಿದ್ದರೆ ಈ ರಾಷ್ಟ್ರವು ನಿಯಾಮಕನಿಲ್ಲದೇ ವಿನಾಶವನ್ನು ಹೊಂದುವ ಪ್ರಸಂಗ ಬರುತ್ತದೆ.**

**ಭಾವವಿಲಾಸಿನೀ–** ನನ್ವೇವಂ ಕುತಃ ಕರೋತೀತ್ಯತ ಆಹ – **ಸ್ವತಂತ್ರಸ್ಯೇತಿ ॥** ಸ್ವತಂತ್ರೇಚ್ಛಾಯಾ ನಿಯಂತುಮಶಕ್ಯತ್ವಾದಿತಿ ಲೌಕಿಕಪ್ರವಾದಾದಿತಿ ಭಾವಃ । ತಸ್ಯ ಸ್ವಾತಂತ್ರ್ಯಾನಂಗೀಕಾರೇ ಬಾಧಕಮಾಹ – **ಅರಾಜಕಮಿತಿ ॥** ಅರಾಜಕಂ ನಿಯಾಮಕ- ರಹಿತಮ್ । ನಚೇತ್ ಸ ತು ಸ್ವತಂತ್ರೋ ನ ಚೇತ್ ॥ ೨೭೦ ॥

**ವಿವರಣೆ–** ಪರಮಾತ್ಮನು ' ಪದಾರ್ಥಗಳನ್ನು ಉಚ್ಚನೀಚಗಳನ್ನಾಗಿ ಏತಕ್ಕೆ ಮಾಡುತ್ತಾನೆಂಬ ಪ್ರಶ್ನೆಗೆ ಉತ್ತರಿಸುತ್ತಾರೆ. 'ಸ್ವತಂತ್ರಸ್ಯ ಚ' ಎಂಬೀ ಶ್ಲೋಕದಿಂದ. ಪರಮಾತ್ಮನು ಸ್ವತಂತ್ರ. ಅವನು ತನ್ನ ಸ್ವರೂಪಸತ್ತಾ, ಅರ್ಥಕ್ರಿಯಾ ಮತ್ತು ಪ್ರಮಿತಿಗಳಲ್ಲಿ ಇನ್ನೊಂದನ್ನು ಅನುಸರಿಸುವುದಿಲ್ಲ. ಸ್ವತಂತ್ರನಾದವನ ಇಚ್ಛೆಯನ್ನು ನಿಯಮಿಸಲು ಬರುವುದಿಲ್ಲವೆಂದು ಲೋಕದಲ್ಲಿ ಗಾದೆ ಇದೆ. ಆದ್ದರಿಂದ ಅವನ ಇಚ್ಛೆಯನ್ನು ಪ್ರಶ್ನೆಮಾಡುವಂತಿಲ್ಲ. ಅಂತಹ ಸ್ವತಂತ್ರನಾದ ಎಂದರೆ ಅನ್ಯನಿಯಮ್ಯನಲ್ಲದ ಪರಮಾತ್ಮನನ್ನು ಒಪ್ಪದಿದ್ದರೆ ಈ ಜಗತ್ತಿಗೆ ನಿಯಾಮಕನೇ ಇಲ್ಲವಾಗುವುದರಿಂದ ರಾಜನಿಲ್ಲದ ರಾಷ್ಟ್ರದಂತೆ ಸರ್ವಕ್ಷೋಭೆಯುಂಟಾಗುತ್ತದೆ ಎಂದು ಅಭಿಪ್ರಾಯ.

**ನರೇಷು ಕಶ್ಚಿನ್ಮೂಕೋಽಸ್ತಿ ವಾಚಾಲೋಽಪ್ಯಸ್ತಿ ಕಶ್ಚನ ।**
**ಸೋಽಯಂ ನರಸ್ವಭಾವೋ ನ ತವಾಪಿ ಚ ಮಮಾಪಿ ಚ ॥ ೨೭೧ ॥**

**ಅರ್ಥ–** ನರೇಷು = ಮನುಷ್ಯರುಗಳಲ್ಲಿ, ಕಶ್ಚಿತ್ = ಒಬ್ಬನು, ಮೂಕಃ = ಮೂಗನು, ಕಶ್ಚನ = ಒಬ್ಬನು, ವಾಚಾಲೋಽಪಿ = ವಾಗ್ಮಿಯೂ ಕೂಡ, ಅಸ್ತಿ = ಇರುತ್ತಾನೆ. ಸೋಽಯಂ = ಈ ಮೂಕತ್ವಾದಿಯು, ತವಾಪಿಚ = ನಿನಗಾದರೂ ಮತ್ತು, ಮಮಾಪಿ ಚ = ನನಗಾದರೂ, ನರಸ್ವಭಾವಃ = ಮನುಷ್ಯನಸ್ವಭಾವವು, ನ = ಆಗಿರುವುದಿಲ್ಲ

**ಅನುವಾದ–** ಮನುಷ್ಯರಲ್ಲಿ ಇರುವಂಥ ಮೂಕತ್ವ-ವಾಗ್ಮಿತ್ವಾದಿ ತಾರತಮ್ಯವು ನನ್ನ ಮತ (ವಾದಿಮತ) ದಲ್ಲಿ ನಿನ್ನ ಮತ ಪ್ರತಿವಾದಿಮತದಲ್ಲಿಯೂ ಮನುಷ್ಯನ ಸ್ವಭಾವವೆಂಬುದಾಗಿ ಒಪ್ಪಿಲ್ಲ. ಪುಣ್ಯಪಾಪಾದಿಕರ್ಮಗಳೇ ಕಾರಣ ವಿನಃ ಸ್ವಭಾವವಲ್ಲವೆಂದು ಹೇಳಲೇಬೇಕು.

**ಭಾವವಿಲಾಸಿನೀ–** ಸ್ವಭಾವವಾದಿನೋ ಮುಖೇನೈವ ಕರ್ಮಣೋಽಪಿ ಕಾರಣತಾಂ ವಾಚಯಿತುಮಾಹ – **ನರೇಷ್ವಿತಿ** ॥ ನಿರ್ಧಾರಣೇ ಸಪ್ತಮೀ । **ಸೋಽಯಂ** ಮೂಕತ್ವಾದಿಃ ತವಾಪಿ ಚ ಮಮಾಪಿ ಚ । ಮತ ಇತಿ ಶೇಷಃ ॥ ೨೭೧ ॥

**ವಿವರಣೆ–** ಮನುಷ್ಯರಲ್ಲಿ ಕಾಣುವಂಥ ಉಚ್ಚತ್ವ ಹಾಗು ನೀಚತ್ವಾದಿ ಭೇದಕ್ಕೆ ಆವರವರ ಕರ್ಮವೇ ಕಾರಣವೆಂದು ಸ್ವಭಾವವಾದಿಯ ಮುಖದಿಂದಲೇ ಸಾಧಿಸುತ್ತಾರೆ. ನರೇಷು ಕಶ್ಚಿತ್ ಇತ್ಯಾದಿ ಶ್ಲೋಕದಿಂದ. ನರೇಷು ಎಂಬಲ್ಲಿರುವ ಸಪ್ತಮಿ ವಿಭಕ್ತಿ ಬಹುವಚನದ ಪ್ರಯೋಗವು ನಿರ್ಧಾರಣೆ ಸಪ್ತಮೀ ಎಂಬುದಾಗಿ ನಿಶ್ಚಯಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದರ್ಥ.

**ಕರ್ಮಾಪಿ ಚೇದ್ಗತಂ ತರ್ಹಿಸ್ವಭಾವಾಂಘ್ರ್ಯುಪಸರ್ಪಣಮ್ ।**
**ಕ್ವಚಿತ್ಸಭಾವಃ ಕರ್ಮಾಪಿ ಕ್ವಚಿಚ್ಚೇತ್ ಕಲಹೋ ಭವೇತ್ ॥ ೨೭೨ ॥**

**ಅರ್ಥ–** ಕರ್ಮಾಪಿ = ಕರ್ಮವು ಕೂಡ, ಚೇತ್ = ಕಾರಣವೆಂದಲ್ಲಿ, ಸ್ವಭಾವಾಂಘ್ರ್ಯುಪಸರ್ಪಣಂ, ಸ್ವಭಾವ = ಸ್ವಭಾವದ, ಅಂಘ್ರಿ = ಕಾಲನ್ನು (ಪಾದವನ್ನು), ಉಪಸರ್ಪಣಂ = ಹಿಡಿಯುವುದು, ಗತಂ = ಬಿದ್ದುಹೋಯಿತು, ಕ್ವಚಿತ್ = ಕೆಲವುಕಡೆ, ಸ್ವಭಾವಃ = ಸ್ವಭಾವವು, ಕ್ವಚಿತ್ = ಕೆಲವೆಡೆ, ಕರ್ಮಾಪಿ = ಕರ್ಮವು ಕೂಡ, ಚೇತ್ = ಕಾರಣವೆಂದಲ್ಲಿ, ಕಲಹಃ = ಜಗಳವು, ಭವೇತ್ = ಆಗುತ್ತದೆ.

**ಅನುವಾದ–** ಮೂಕತ್ವಾದಿಗಳಿಗೆ ಪಾಪಾದಿಗಳೇ ಕಾರಣವೆಂದಲ್ಲಿ ಸ್ವಭಾವದಿಂದಲೇ ಎಲ್ಲವೂ ಆಗುತ್ತದೆಂಬ ಸ್ವಭಾವವಾದವು ಬಿದ್ದು ಹೋಯಿತು. ಈ ವಾದವನ್ನು ಎತ್ತಿಹಿಡಿಯುವುದಕ್ಕೋಸ್ಕರವಾಗಿ ಕೆಲವೆಡೆ ಸ್ವಭಾವವು ಕಾರಣ, ಇನ್ನು ಕೆಲವೆಡೆ ಕರ್ಮವು ಕಾರಣ ಎಂದರೆ ಜಗಳವೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಮೂಕತ್ವಾದೌ ಪಾಪಾದಿಕಕಾರಣಮಿತ್ಯತ ಆಹ – **ಕರ್ಮಾಪೀತಿ** ॥ ಅತ್ರ ಕರ್ಮಕಾರಣತಾಂಗೀಕಾರಾತ್ ಸ್ವಭಾವಾದೇವ ಸರ್ವಂ ಭವತೀತಿ ವಾದೋ ಗತ ಇತಿ ಭಾವಃ । ಕ್ವಚಿತ್ಕಾರ್ಯೇ ಸ್ವಭಾವಃ ಕ್ವಚಿಚ್ಚ ಕರ್ಮ ಕಾರಣಮಿತ್ಯಂಗೀಕ್ರಿಯತ ಇತ್ಯತ ಆಹ – **ಕಲಹ ಇತಿ** ॥ ಉಭಯೋರಪಿ ಸ್ವತಂತ್ರಕಾರಣತ್ವೇ ಅನ್ಯೋನ್ಯಪ್ರತಿಬಂಧಾತ್ ಕಿಮಪಿ ಕಾರ್ಯಂ ನ ಭವೇದಿತಿ ಭಾವಃ ॥ ೨೭೨ ॥

**ವಿವರಣೆ–** ಮೂಕತ್ವಾದಿಗಳಿಗೆ ಪಾಪಾದಿಗಳೇ ಕಾರಣವೆಂದರೆ ದೋಷವನ್ನು ಹೇಳುತ್ತಿದ್ದಾರೆ ಕರ್ಮಾಪಿ ಚೇದ್ಗತಂ ಎಂಬೀ ಶ್ಲೋಕದಿಂದ ಮೂಕತ್ವಾದಿಗಳಿಗೆ ಕೆಲವುಕಡೆ ಸ್ವಾಭಾವವು ಕಾರಣವೆಂದೂ ಇನ್ನು ಕೆಲವೆಡೆ ಕರ್ಮಾದಿಗಳು ಕಾರಣವೆಂದೂ ಒಪ್ಪಿದಾಗ ಎರಡೂ ಸ್ವತಂತ್ರ ಕಾರಣವೆಂದಾಗಿ ಪರಸ್ಪರವಾಗಿ ಪ್ರತಿಬಂಧಕವಾದ್ದರಿಂದ ಯಾವಕಾರ್ಯವೂ ಹುಟ್ಟದೇ ಹೋಗಬೇಕಾದೀತು ಎಂಬುದನ್ನು ಕಲಹೋ ಭವೇತ್ ಎಂಬ ಪದಗಳಿಂದ ವಿವರಿಸಿದ್ದಾರೆ.

**ಅಥ ಕರ್ಮಾಪಿ ರಾಜಾ ಚೇಜ್ಜಡತಾ ತಸ್ಯ ಕಿಂಕೃತಾ ।**
**ಜನನೇ ಮರಣೇ ವಾಪಿ ಕಿಂ ಕರ್ತಾ ತಸ್ಯ ನೇಷ್ಯತೇ ॥ ೨೭೩ ॥**

**ಅರ್ಥ–** ಅಥ = ಒಂದು ಪಕ್ಷ, ಕರ್ಮಾಪಿ = ಕರ್ಮವು ಕೂಡ, ರಾಜಾ = ಸ್ವತಂತ್ರಕಾರಣವೆಂದು, ಚೇತ್ = ಹೇಳಿದಲ್ಲಿ, ತಸ್ಯ = ಆಕರ್ಮಕ್ಕೆ, ಜಡತಾ = ಅಚೇತನತ್ವವು, ಕಿಂ ಕೃತಾ = ಯಾವ ನಿಮಿತ್ತದಿಂದ ಇದೆ. ತಸ್ಯ = ಆ ಕರ್ಮದ, ಜನನೇ = ಉತ್ಪತ್ತಿಯಲ್ಲಿ ಮರಣೇವಾಪಿ = ಅಥವಾ ನಾಶದಲ್ಲಾದರೂ, ಕರ್ತಾ = ಕರ್ತೃವೊಬ್ಬನು, ನೇಷ್ಯತೇ ಕಿಂ = ಸ್ವೀಕರಿಸಲ್ಪಡುವುದಿಲ್ಲವೇನು?

**ಅನುವಾದ–** ಕರ್ಮವೂ ಸ್ವತಂತ್ರ ಕಾರಣವೆಂದು ಹೇಳಿದರೆ ಅದಕ್ಕೆ ಜಡತ್ವವು ಹೇಗೆ ಉಂಟಾಯಿತು? ಕರ್ಮದ ಉತ್ಪತ್ತಿಯಲ್ಲಿ ಮತ್ತು ನಾಶದಲ್ಲಿಯಾದರೂ ಒಬ್ಬ ಕರ್ತೃವನ್ನು ಒಪ್ಪಬೇಕಷ್ಟೇ ? ಕರ್ಮಕ್ಕೆ ಸ್ವತಂತ್ರವಾದ ಕಾರಣತ್ವವಿದೆ ಎಂದು ಹೇಳಿದರೆ ಆ ಕರ್ಮಕ್ಕೆ ಜಡತ್ವ, ಅನಿತ್ಯತ್ವಾದಿಗಳು ಹೇಗೆ ಉಂಟಾಗುತ್ತವೆ? ಕರ್ಮದ ನಾಶಕ್ಕೆ ಹಾಗೂ ಉತ್ಪತ್ತಿಗಳಿಗೆ ಒಬ್ಬ ಕರ್ತನು ಬೇಕೇ ಬೇಕಾಗುತ್ತದೆ ಬಹಳಮಂದಿ ಸ್ವತಂತ್ರ ಕರ್ತೃಗಳಾದರೆ ಪರಸ್ಪರ ಪ್ರತಿಬಂಧದಿಂದ ಕಾರ್ಯವುಹುಟ್ಟದೇ ಹೋಗ ಬೇಕಾದೀತೆಂಬ ಪೂರ್ವೋಕ್ತವಾದ ದೋಷವು ಬರುತ್ತದೆ.

**ಭಾವವಿಲಾಸಿನೀ–** ಕರ್ಮಣಸ್ಸ್ವತಂತ್ರಕಾರಣತ್ವಂ ರೀತ್ಯಂತರೇಣ ದೂಷಯತಿ – **ಅಥೇತಿ** ॥ ರಾಜಾ ಚೇತ್ ಸ್ವತಂತ್ರಕಾರಣಂ ಚೇತ್ತಸ್ಯ ಕರ್ಮಣಃ । ಜಡತೇತ್ಯನಿತ್ಯತ್ವಾದೇರುಪಲಕ್ಷಣಮ್ । ಯದ್ಯಪೀದಂ ದೂಷಣಂ ಸ್ವಭಾವಪಕ್ಷೇऽಪಿ ವಕ್ತುಂ ಶಕ್ಯತೇ । ತಥಾಪಿ ಚೇತನಸ್ವಭಾವೇ ಜಡತ್ವಾಭಾವಾದುಪೇಕ್ಷಿತಮ್। ಕರ್ಮ ತು ಪುಣ್ಯಪಾಪರೂಪಂ ಜಡಮೇವೇತಿ ಸುಷ್ಠೂಕ್ತಂ 'ಜಡತಾ ತಸ್ಯ ಕಿಂಕೃತಾ' ಇತಿ । ಮರಣೇ ನಾಶೇ ತಸ್ಯ ಕರ್ಮಣಃ ॥ ೨೭೩ ॥

**ವಿವರಣೆ–** ಕರ್ಮಕ್ಕೆ ಸ್ವತಂತ್ರ ಕಾರಣತ್ವವನ್ನು ಬೇರೆರೀತಿಯಿಂದ ದೂಷಿಸುತ್ತಿದ್ದಾರೆ ಅಥ ಕರ್ಮಾಪಿ ರಾಜಾ ಎಂಬೀ ಶ್ಲೋಕದಿಂದ. ಕರ್ಮಕ್ಕೆ ಸ್ವತಂತ್ರ ಕಾರಣತ್ವವನ್ನು ಹೇಳಿದಾಗ ಬರುವಂಥ ದೋಷವು ಸ್ವಭಾವವಾದ ಪಕ್ಷದಲ್ಲಿಯೂ ಹೇಳಲಿಕ್ಕೆ ಬರುತ್ತದೆ. ಆದಾಗ್ಯೂ ಚೇತನ ಸ್ವಭಾವದಲ್ಲಿ ಜಡತ್ವವಿಲ್ಲದಿರುವುದರಿಂದ ಅನ್ವಯಿಸುವುದಿಲ್ಲವೆಂದು

**ಅನುವಾದ–** ಮನುಷ್ಯರಲ್ಲಿ ಇರುವಂಥ ಮೂಕತ್ವ-ವಾಗ್ಮಿತ್ವಾದಿ ತಾರತಮ್ಯವು ನನ್ನ ಮತ (ವಾದಿಮತ) ದಲ್ಲಿ ನಿನ್ನ ಮತ ಪ್ರತಿವಾದಿಮತದಲ್ಲಿಯೂ ಮನುಷ್ಯನ ಸ್ವಭಾವವೆಂಬುದಾಗಿ ಒಪ್ಪಿಲ್ಲ. ಪುಣ್ಯಪಾಪಾದಿಕರ್ಮಗಳೇ ಕಾರಣ ವಿನಃ ಸ್ವಭಾವವಲ್ಲವೆಂದು ಹೇಳಲೇಬೇಕು.

**ಭಾವವಿಲಾಸಿನೀ–** ಸ್ವಭಾವವಾದಿನೋ ಮುಖೇನೈವ ಕರ್ಮಣೋಽಪಿ ಕಾರಣತಾಂ ವಾಚಯಿತುಮಾಹ – **ನರೇಷ್ವಿತಿ** ॥ ನಿರ್ಧಾರಣೇ ಸಪ್ತಮೀ । ಸೋಽಯಂ ಮೂಕತ್ವಾದಿಃ ತವಾಪಿ ಚ ಮಮಾಪಿ ಚ । ಮತ ಇತಿ ಶೇಷಃ ॥ ೨೭೧ ॥

**ವಿವರಣೆ–** ಮನುಷ್ಯರಲ್ಲಿ ಕಾಣುವಂಥ ಉಚ್ಚತ್ವ ಹಾಗು ನೀಚತ್ವಾದಿ ಭೇದಕ್ಕೆ ಅವರವರ ಕರ್ಮವೇ ಕಾರಣವೆಂದು ಸ್ವಭಾವವಾದಿಯ ಮುಖದಿಂದಲೇ ಸಾಧಿಸುತ್ತಾರೆ. ನರೇಷು ಕಶ್ಚಿತ್ ಇತ್ಯಾದಿ ಶ್ಲೋಕದಿಂದ. ನರೇಷು ಎಂಬಲ್ಲಿರುವ ಸಪ್ತಮಿ ವಿಭಕ್ತಿ ಬಹುವಚನದ ಪ್ರಯೋಗವು ನಿರ್ಧಾರಣೆ ಸಪ್ತಮೀ ಎಂಬುದಾಗಿ ನಿಶ್ಚಯಾರ್ಥದಲ್ಲಿ ಪ್ರಯುಕ್ತವಾಗಿದೆ ಎಂದರ್ಥ.

**ಕರ್ಮಾಪಿ ಚೇದ್ಗತಂ ತರ್ಹಿಸ್ವಭಾವಾಂಘ್ರ್ಯುಪಸರ್ಪಣಮ್ ।**
**ಕ್ವಚಿತ್ಸ್ವಭಾವಃ ಕರ್ಮಾಪಿ ಕ್ವಚಿಚ್ಚೇತ್ ಕಲಹೋ ಭವೇತ್ ॥ ೨೭೨ ॥**

**ಅರ್ಥ–** ಕರ್ಮಾಪಿ = ಕರ್ಮವು ಕೂಡ, ಚೇತ್ = ಕಾರಣವೆಂದಲ್ಲಿ, ಸ್ವಭಾವಾಂಘ್ರ್ಯುಪಸರ್ಪಣಂ, ಸ್ವಭಾವ = ಸ್ವಭಾವದ, ಅಂಘ್ರಿ = ಕಾಲನ್ನು (ಪಾದವನ್ನು), ಉಪಸರ್ಪಣಂ = ಹಿಡಿಯುವುದು, ಗತಂ = ಬಿದ್ದುಹೋಯಿತು, ಕ್ವಚಿತ್ = ಕೆಲವುಕಡೆ, ಸ್ವಭಾವಃ = ಸ್ವಭಾವವು, ಕ್ವಚಿತ್ = ಕೆಲವೆಡೆ, ಕರ್ಮಾಪಿ = ಕರ್ಮವು ಕೂಡ, ಚೇತ್ = ಕಾರಣವೆಂದಲ್ಲಿ, ಕಲಹಃ = ಜಗಳವು, ಭವೇತ್ = ಆಗುತ್ತದೆ.

**ಅನುವಾದ–** ಮೂಕತ್ವಾದಿಗಳಿಗೆ ಪಾಪಾದಿಗಳೇ ಕಾರಣವೆಂದಲ್ಲಿ ಸ್ವಭಾವದಿಂದಲೇ ಎಲ್ಲವೂ ಆಗುತ್ತದೆಂಬ ಸ್ವಭಾವವಾದವು ಬಿದ್ದು ಹೋಯಿತು. ಈ ವಾದವನ್ನು ಎತ್ತಿಹಿಡಿಯುವುದಕ್ಕೋಸ್ಕರವಾಗಿ ಕೆಲವೆಡೆ ಸ್ವಭಾವವು ಕಾರಣ, ಇನ್ನು ಕೆಲವೆಡೆ ಕರ್ಮವು ಕಾರಣ ಎಂದರೆ ಜಗಳವೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಮೂಕತ್ವಾದೌ ಪಾಪಾದಿಕಕಾರಣಮಿತ್ಯತ ಆಹ – **ಕರ್ಮಾಪೀತಿ** ॥ ಅತ್ರ ಕರ್ಮಕಾರಣತಾಂಗೀಕಾರಾತ್ ಸ್ವಭಾವಾದೇವ ಸರ್ವಂ ಭವತೀತಿ ವಾದೋ ಗತ ಇತಿ ಭಾವಃ । ಕ್ವಚಿತ್ಕಾರ್ಯೇ ಸ್ವಭಾವಃ ಕ್ವಚಿಚ್ಚ ಕರ್ಮ ಕಾರಣಮಿತ್ಯಂಗೀಕ್ರಿಯತ ಇತ್ಯತ ಆಹ – **ಕಲಹ ಇತಿ** ॥ ಉಭಯೋರಪಿ ಸ್ವತಂತ್ರಕಾರಣತ್ವೇ ಅನ್ಯೋನ್ಯಪ್ರತಿಬಂಧಾತ್ ಕಿಮಪಿ ಕಾರ್ಯಂ ನ ಭವೇದಿತಿ ಭಾವಃ ॥ ೨೭೨ ॥

**ವಿವರಣೆ–** ಮೂಕತ್ವಾದಿಗಳಿಗೆ ಪಾಪಾದಿಗಳೇ ಕಾರಣವೆಂದರೆ ದೋಷವನ್ನು ಹೇಳುತ್ತಿದ್ದಾರೆ ಕರ್ಮಾಪಿ ಚೇದ್ಗತಂ ಎಂಬೀ ಶ್ಲೋಕದಿಂದ ಮೂಕತ್ವಾದಿಗಳಿಗೆ ಕೆಲವುಕಡೆ ಸ್ವಾಭಾವವು ಕಾರಣವೆಂದೂ ಇನ್ನು ಕೆಲವೆಡೆ ಕರ್ಮಾದಿಗಳು ಕಾರಣವೆಂದೂ ಒಪ್ಪಿದಾಗ ಎರಡೂ ಸ್ವತಂತ್ರ ಕಾರಣವೆಂದಾಗಿ ಪರಸ್ಪರವಾಗಿ ಪ್ರತಿಬಂಧಕವಾದ್ದರಿಂದ ಯಾವಕಾರ್ಯವೂ ಹುಟ್ಟದೇ ಹೋಗಬೇಕಾದೀತು ಎಂಬುದನ್ನು ಕಲಹೋ ಭವೇತ್ ಎಂಬ ಪದಗಳಿಂದ ವಿವರಿಸಿದ್ದಾರೆ.

**ಅಥ ಕರ್ಮಾಪಿ ರಾಜಾ ಚೇಜ್ಜಡತಾ ತಸ್ಯ ಕಿಂಕೃತಾ ।**
**ಜನನೇ ಮರಣೇ ವಾಪಿ ಕಿಂ ಕರ್ತಾ ತಸ್ಯ ನೇಷ್ಯತೇ ॥ ೨೭೩ ॥**

**ಅರ್ಥ–** ಅಥ = ಒಂದು ಪಕ್ಷ, ಕರ್ಮಾಪಿ = ಕರ್ಮವು ಕೂಡ, ರಾಜಾ = ಸ್ವತಂತ್ರಕಾರಣವೆಂದು, ಚೇತ್ = ಹೇಳಿದಲ್ಲಿ, ತಸ್ಯ = ಆಕರ್ಮಕ್ಕೆ, ಜಡತಾ = ಆಚೇತನತ್ವವು, ಕಿಂ ಕೃತಾ = ಯಾವ ನಿಮಿತ್ತದಿಂದ ಇದೆ. ತಸ್ಯ = ಆ ಕರ್ಮದ, ಜನನೇ = ಉತ್ಪತ್ತಿಯಲ್ಲಿ, ಮರಣೇವಾಪಿ = ಅಥವಾ ನಾಶದಲ್ಲಾದರೂ, ಕರ್ತಾ = ಕರ್ತೃವೊಬ್ಬನು, ನೇಷ್ಯತೇ ಕಿಂ = ಸ್ವೀಕರಿಸಲ್ಪಡುವುದಿಲ್ಲವೇನು?

**ಅನುವಾದ–** ಕರ್ಮವೂ ಸ್ವತಂತ್ರ ಕಾರಣವೆಂದು ಹೇಳಿದರೆ ಅದಕ್ಕೆ ಜಡತ್ವವು ಹೇಗೆ ಉಂಟಾಯಿತು? ಕರ್ಮದ ಉತ್ಪತ್ತಿಯಲ್ಲಿ ಮತ್ತು ನಾಶದಲ್ಲಿಯಾದರೂ ಒಬ್ಬ ಕರ್ತೃವನ್ನು ಒಪ್ಪಬೇಕಷ್ಟೇ ? ಕರ್ಮಕ್ಕೆ ಸ್ವತಂತ್ರವಾದ ಕಾರಣತ್ವವಿದೆ ಎಂದು ಹೇಳಿದರೆ ಆ ಕರ್ಮಕ್ಕೆ ಜಡತ್ವ, ಅನಿತ್ಯತ್ವಾದಿಗಳು ಹೇಗೆ ಉಂಟಾಗುತ್ತವೆ? ಕರ್ಮದ ನಾಶಕ್ಕೆ ಹಾಗೂ ಉತ್ಪತ್ತಿಗಳಿಗೆ ಒಬ್ಬ ಕರ್ತನು ಬೇಕೇ ಬೇಕಾಗುತ್ತದೆ ಬಹಳಮಂದಿ ಸ್ವತಂತ್ರ ಕರ್ತೃಗಳಾದರೆ ಪರಸ್ಪರ ಪ್ರತಿಬಂಧದಿಂದ ಕಾರ್ಯವುಹುಟ್ಟದೇ ಹೋಗ ಬೇಕಾದೀತೆಂಬ ಪೂರ್ವೋಕ್ತವಾದ ದೋಷವು ಬರುತ್ತದೆ.

**ಭಾವವಿಲಾಸಿನೀ–**ಕರ್ಮಣಸ್ಸ್ವತಂತ್ರಕಾರಣತ್ವಂ ರೀತ್ಯಂತರೇಣ ದೂಷಯತಿ–**ಅಥೇತಿ**॥ ರಾಜಾ ಚೇತ್ ಸ್ವತಂತ್ರಕಾರಣಂ ಚೇತ್ತಸ್ಯ ಕರ್ಮಣಃ । ಜಡತೇತ್ಯನಿತ್ಯತ್ವಾದೇರುಪಲಕ್ಷಣಮ್ । ಯದ್ಯಪೀದಂ ದೂಷಣಂ ಸ್ವಭಾವಪಕ್ಷೇಽಪಿ ವಕ್ತುಂ ಶಕ್ಯತೇ । ತಥಾಪಿ ಚೇತನಸ್ವಭಾವೇ ಜಡತ್ವಾಭಾವಾದುಪೇಕ್ಷಿತಮ್। ಕರ್ಮ ತು ಪುಣ್ಯಾಪಾಪರೂಪಂ ಜಡಮೇವೇತಿ ಸುಷ್ಠೂಕ್ತಂ 'ಜಡತಾ ತಸ್ಯ ಕಿಂಕೃತಾ' ಇತಿ । ಮರಣೇ ನಾಶೇ ತಸ್ಯ ಕರ್ಮಣಃ ॥ ೨೭೩ ॥

**ವಿವರಣೆ–** ಕರ್ಮಕ್ಕೆ ಸ್ವತಂತ್ರ ಕಾರಣತ್ವವನ್ನು ಬೇರೆರೀತಿಯಿಂದ ದೂಷಿಸುತ್ತಿದ್ದಾರೆ ಅಥ ಕರ್ಮಾಪಿ ರಾಜಾ ಎಂಬೀ ಶ್ಲೋಕದಿಂದ. ಕರ್ಮಕ್ಕೆ ಸ್ವತಂತ್ರ ಕಾರಣತ್ವವನ್ನು ಹೇಳಿದಾಗ ಬರುವಂಥ ದೋಷವು ಸ್ವಭಾವವಾದ ಪಕ್ಷದಲ್ಲಿಯೂ ಹೇಳಲಿಕ್ಕೆ ಬರುತ್ತದೆ. ಆದಾಗ್ಯೂ ಚೇತನ ಸ್ವಭಾವದಲ್ಲಿ ಜಡತ್ವವಿಲ್ಲದಿರುವುದರಿಂದ ಅನ್ವಯಿಸುವುದಿಲ್ಲವೆಂದು

ತಿಳಿದು ಉಪೇಕ್ಷೆಮಾಡಿರುತ್ತಾರೆ. ಕರ್ಮವಾದರೂ ಪುಣ್ಯಪಾಪರೂಪವಾಗಿ ಜಡವೇ ಆಗಿರೋಣದರಿಂದ ಅದಕ್ಕೆ ಜಡತ್ವವು ಯಾವ ನಿಮಿತ್ತದಿಂದ ಉಂಟಾಗುತ್ತದೆ ಎಂಬ ಪ್ರಶ್ನೆ ಮಾಡಲು ಬರುತ್ತದೆ.

**ಅತೋವದ್ಯಂ ಜಡತ್ವಾದ್ಯಂ ಸ್ವಭಾವಾನಾಂ ಚ ಕರ್ಮಣಾಮ್ ।**
**ಯತೋಽಭೂನ್ನಿರವದ್ಯೋಽಸೌ ಕಥಂ ಸಿದ್ಧ್ಯೇನ್ನಸಿದ್ಧರಾಟ್ ॥ ೨೭೪ ॥**

**ಅರ್ಥ–** ಅತಃ = ಸ್ವಭಾವ ಮತ್ತು ಕರ್ಮಗಳಿಗೆ ಸ್ವತಂತ್ರಕಾರಣತ್ವವು ಬಹಳ ದೋಷಯುಕ್ತವಾದ್ದರಿಂದ, ಸ್ವಭಾವಾನಾಂ = ಸ್ವಭಾವಗಳಿಗೆ, ಚ = ಮತ್ತು, ಕರ್ಮಣಾಂ = ಕರ್ಮಗಳಿಗೆ, ಜಡತ್ವಾದ್ಯಂ = ಜಡತ್ವ-ಉತ್ಪನ್ನತ್ವಾದಿರೂಪವಾದ, ಅವದ್ಯಂ = ದೋಷವು, ಯತಃ = ಯಾವ ಪರಮಾತ್ಮನಿಂದ, ಅಭೂತ್ = ಆಯಿತೋ, ಅಸೌ = ಅಂತಹ, ನಿರವದ್ಯಃ = ದೋಷವಿಲ್ಲದೆ ಇರುವ, ಸಿದ್ಧರಾಟ್ = ಪ್ರಮಾಣಗಳಿಂದ ಸಿದ್ಧನಾದ ಸ್ವತಂತ್ರನಾದ ಪರಮಾತ್ಮನು, ಕಥಂ = ಹೇಗೆ ತಾನೆ, ನಸಿದ್ಧ್ಯೇತ್ = ಸಿದ್ಧನಾಗದೆ ಇದ್ದಾನು? (ಸಿದ್ಧನಾಗುತ್ತಾನೆ ಎಂದರ್ಥ).

**ಅನುವಾದ–** ಸ್ವಭಾವ-ಕರ್ಮಾದಿಗಳು ಸ್ವತಂತ್ರ ಕಾರಣಗಳು ಆಗಿವೆ ಎಂದಲ್ಲಿ ಜಡತ್ವ-ಉತ್ಪನ್ನತ್ವಾದಿ ಬಹಳ ದೋಷಗಳು ಯಾವ ಶ್ರೀಪರಮಾತ್ಮನಿಂದ ಆದವೋ ಅಂತಹ ದೋಷದೂರನಾದ, ಪ್ರಮಾಣಗಣಗಳಿಂದ ಸಿದ್ಧನಾದ, ಸ್ವತಂತ್ರನಾದ ಪರಮಾತ್ಮನು (ಈಶ್ವರನು) ಇದ್ದಾನೆಂದು ಅವಶ್ಯವಾಗಿ ಅಂಗೀಕರಿಸಲೇಬೇಕು.

**ಭಾವವಿಲಾಸಿನೀ– ಅತಃ ಕರ್ಮಾದಿಸ್ವತಂತ್ರಕಾರಣತಾವಾದೋ ನಾಂಗೀಕಾರ್ಯ ಇತ್ಯಾಹ – ಅತ ಇತಿ ॥ ಸ್ವಭಾವಾನಾಂ ಚ ಕರ್ಮಣಾಂ ಜಡತ್ವೋತ್ಪನ್ನತ್ವಾದ್ಯಮ್ ಅವದ್ಯಂ ದೂಷಣಂ ಯತೋ ನಾರಾಯಣಾದಭೂತ್ । ಅಸೌ ನಿರವದ್ಯಃ ಸಿದ್ಧರಾಟ್ ಕಥಂ ನ ಸಿದ್ಧ್ಯೇದಿತಿ ಸಂಬಂಧಃ । ನಿರವದ್ಯ ಇತ್ಯನೇನ ಕರ್ಮಣ್ಯುಕ್ತಂ ದೂಷಣಂ ಭಗವತಿ ನಾಯಾತೀತಿ ಸೂಚಿತಮ್ ॥ ೨೭೪ ॥**

**ವಿವರಣೆ–** ಸ್ವಭಾವ-ಕರ್ಮಾದಿಗಳಿಗೆ ಸ್ವತಂತ್ರ ಕಾರಣತ್ವವನ್ನು ಅಂಗೀಕರಿಸಬಾರದೆಂದು ಹೇಳುತ್ತಿದ್ದಾರೆ ಅತೋಽವದ್ಯಂ ಇತ್ಯಾದಿಶ್ಲೋಕದಿಂದ. ಕರ್ಮಕ್ಕೆ ಸ್ವತಂತ್ರಕಾರಣತ್ವವನ್ನು ಹೇಳಿದಾಗ ಯಾವ ದೋಷಗಳು ಹೇಳಲ್ಪಟ್ಟವೊ ಆ ಎಲ್ಲ ದೋಷಗಳು ಪರಮಾತ್ಮನು ಸ್ವತಂತ್ರ ಕಾರಣನಾಗಿದ್ದಾನೆಂಬ ಪಕ್ಷದಲ್ಲಿ ಬರಬಹುದಲ್ಲ ಎಂಬ ಶಂಕೆಯು ಬಂದರೆ ಅದನ್ನು ನಿವಾರಿಸಲು ಶ್ರೀವಾದಿರಾಜರು ನಿರವದ್ಯಂ ಎಂಬ ಪದವನ್ನು ಹಾಕಿದ್ದಾರೆ. ಈ ನಿರವದ್ಯಂ ಎಂಬ ಪದವನ್ನು ಹೇಳಿರುವುದರಿಂದ ಸರ್ವದೋಷದೂರ ಎಂಬರ್ಥವು ಉಂಟಾಗುವುದರಿಂದ ಕರ್ಮಕ್ಕೆ ಹೇಳಿದ ದೋಷಗಳು ಭಗವಂತನಲ್ಲಿ ಬರುವುದಿಲ್ಲವೆಂದು ಸೂಚಿತವಾಗುತ್ತದೆ.

ಯದಿ ತತ್ತತ್ಕೃತಂ ಕರ್ಮ ತಜ್ಜನ್ಮಮರಣಾದಿಕಂ ।
ಅನ್ಯಚೈತನ್ಯಸಾಚಿವ್ಯಶೂನ್ಯಮೇವ ಕರೋತಿ ತೇ ॥ ೨೭೫ ॥

ತರ್ಹಿ ಹಂತಾ ನ ಕೋಪ್ಯಾಸೀತ್ ಸ್ವಸ್ವಕರ್ಮಹತೇ ಜನೇ ।
ಅತೋ ಹಿಂಸಾದೋಷವಾದೋ ಗತೋ ಯಸ್ತೇಮತೇ ಮತಃ ॥ ೨೭೬ ॥

**ಅರ್ಥ–** ತತ್ತತ್‌ಕೃತಂ = ಆ ಆ ಪುರುಷರಿಂದ ಮಾಡಲ್ಪಟ್ಟ ಕರ್ಮ = ಕರ್ಮವು, ತಜ್ಜನ್ಮಮರಣಾದಿಕಂ = ಅವರುಗಳ ಜನನ-ಮರಣಾದಿಗಳನ್ನು, ಅನ್ಯಚೈತನ್ಯ = ತನ್ನಿಂದ ಭಿನ್ನನಾದ ಚೇತನದ, ಸಾಚಿವ್ಯಶೂನ್ಯಮೇವ = ಸಹಾಯವಿಲ್ಲದಲೇ, ಯದಿ = ಒಂದು ವೇಳೆ, ಕರೋತಿ = ಮಾಡುತ್ತದೆ ಎಂದಾದರೆ, ತರ್ಹಿ = ಆಗ, ಜನೇ = ಜನಗಳು, ಸ್ವಸ್ವ = ತಮ್ಮ ತಮ್ಮ ಕರ್ಮಹತೇ = ಕರ್ಮಗಳಿಂದಲೇ ನಾಶವಾಗುತ್ತಿರಲು, ಹಂತಾ = ಕೊಲ್ಲತಕ್ಕವನು, ನ ಕೋಪ್ಯಾಸೀತ್ = ಯಾರೂ ಇಲ್ಲವೆಂದಾದೀತು. ಅತಃ = ಆದುದರಿಂದ, ಯಃ = ಯಾವ, ಹಿಂಸಾದೋಷವಾದಃ = ಹಿಂಸಕನೆಂಬದೋಷವಾದವು, ತೇ = ನಿನ್ನ, ಮತೇ = ಮತದಲ್ಲಿ ಮತಃ = ತಿಳಿಯಲ್ಪಡುವುದೋ, (ಅದು) ಗತಃ = ಬಿದ್ದು ಹೋಯಿತು.

**ಅನುವಾದ–** ಆ ಆ ಮನುಷ್ಯರಿಂದ ಮಾಡಲ್ಪಟ್ಟ ಕರ್ಮವು ಅವರವರ ಜನನ-ಮರಣಾದಿಗಳಿಗೆ ಬೇರೆಯವರ ಸಹಾಯವಿಲ್ಲದೆ ಕಾರಣವಾಗುತ್ತದೆ ಎಂದಾದರೆ, ಜನಗಳು ತಮ್ಮತಮ್ಮ ಕರ್ಮಗಳಿಂದಲೇ ನಾಶವಾಗುತ್ತಿರಲು ಹಂತಾ ಹಾಗು ಹಿಂಸಕನು ಇಲ್ಲವಾದಲ್ಲಿ ನಿನ್ನ ಮತದಲ್ಲಿ ಒಪ್ಪಿರುವ ಹಿಂಸಾದೋಷವಾದವು ಬಿದ್ದುಹೋಯಿತು.

**ಭಾವವಿಲಾಸಿನೀ–** ಲೋಕಸಿದ್ಧಹಿಂಸ್ಯಹಿಸಂಕಭಾವಾನ್ಯಥಾನುಪಪತ್ತ್ಯಾಪಿ ಕೇವಲಕರ್ಮ-ಕಾರಣತ್ವವಾದಸ್ತ್ಯಾಜ್ಯ ಇತ್ಯಾಹ –ಯದೀತಿ ॥ ತತ್ತತ್ಕೃತಂ ತೈಸ್ತೈಃ ಪುರುಷೈಃ ಕೃತಂ ತವ ಕರ್ತೃತ್ವೇನಾಭಿಮತಂ ಕರ್ಮ ತಜ್ಜನ್ಮಮರಣಾದಿಕಂ ತೇಷಾಂ ತೇಷಾಂ ಜನ್ಮಮರಣಾದಿಕಮ್ ಅನ್ಯಚೈತನ್ಯಸಾಚಿವ್ಯಶೂನ್ಯಮಿತ್ಯನೇನ ಕೇವಲತ್ವಂ ದ್ಯೋತಯತಿ। ಅನ್ಯಃ ಹನ್ಯಮಾನಾದನ್ಯಶ್ಚೇತನಃ ತಸ್ಯ ಯಚ್ಚೈತನ್ಯಂ ಜ್ಞಾನೇಚ್ಛಾಪ್ರಯತ್ನಾದಿತತ್ಸಾಚಿವ್ಯಂ ಸಾಹಾಯ್ಯಂ ತೇನ ಶೂನ್ಯಮೇವೇ-ತ್ಯರ್ಥಃ । ಅದೃಷ್ಟದ್ವಾರಕಕರ್ತೃಭೂತಾದ್ ಹಿಂಸ್ಯಾದನ್ಯಾದೃಷ್ಟಾದ್ವಾರಕಪ್ರಯತ್ನ-ಪೂರ್ವಕಹನ್ತೃಚೇತನ ಸಾಹಾಯ್ಯರಹಿತಮಿತಿ ಭಾವಃ ॥ ೨೭೫ ॥

ದೂಷಯತಿ – **ತರ್ಹೀತಿ** ॥ ಹನ್ತೃಚೇತನಸ್ಯಾಕಾರಣತ್ವಾದ್ ಹಂತಾ ಪುರುಷೋ ನ ಕೋಽಪ್ಯಾಸೀದಿತ್ಯರ್ಥಃ। ಹನ್ತುಶ್ಚೇತನಸ್ಯಾಭಾವೇ ಕೋ ದೋಷ ಇತ್ಯತ ಆಹ – **ಅತ ಇತಿ** ॥ ಹಿಂಸಾದೋಷವಾದಃ ದೇವದತ್ತೇನ ಯಜ್ಞದತ್ತಸ್ಯ ಹಿಂಸಾಕರಣೇ ದೋಷವಾದೋ ಗತ ಇತಿ ಸಂಬಂಧಃ ॥ ೨೭೬ ॥

**ವಿವರಣೆ–** ಲೋಕದಲ್ಲಿ ಪ್ರಸಿದ್ಧವಾದ ಹಿಂಸ್ಯ-ಹಿಂಸಕಭಾವವನ್ನು ಕೂಡಿಸುವುದಕ್ಕಾಗಿಯೂ ಕರ್ಮವೇ ಕಾರಣವೆಂಬವಾದವನ್ನು ಕೈಬಿಡಬೇಕೆಂದು ತಿಳಸುತ್ತಿದ್ದಾರೆ ಯದಿತತ್ತತ್ಕೃತಂ ಕರ್ಮ ಇತ್ಯಾದಿ ಶ್ಲೋಕದಿಂದ. ಅವರವರ ಕರ್ಮದಿಂದ ಆ ಆ ಪುರುಷರುಗಳ ಜನನ ಹಾಗು ಮರಣಗಳು ಉಂಟಾಗುತ್ತದೆ ಎಂದು ಹೇಳಿ ಇಂತಹ ಕರ್ಮಕ್ಕೆ ಪುರುಷನ ಸಹಾಯವಿಲ್ಲದೆ ಅಂದರೆ ಜ್ಞಾನೇಚ್ಛಾ ಪ್ರಯತ್ನವುಳ್ಳ ಪುರುಷನ ಸಹಾಯ ವಿಲ್ಲದೆ ಸ್ವತಂತ್ರಕಾರಣತ್ವವನ್ನು ಒಪ್ಪಿದಲ್ಲಿ ಲೋಕದಲ್ಲಿರುವ ವ್ಯವಹಾರವು ಕೂಡದೆ ಹೋಗುವಪ್ರಸಂಗ ಬರುತ್ತದೆ ಎಂದರೆ ಯಜ್ಞದತ್ತನು ದೇವದತ್ತನನ್ನು ಕೊಂದನು ಎಂಬ ವ್ಯವಹಾರವು ವ್ಯರ್ಥವಾಗುವ ಪ್ರಸಂಗವು ಬಂದೀತೆಂದರ್ಥ ಅಹಿಂಸಾಪರಮಧರ್ಮವಾದಿಗಳಾದ ಜಿನಾದಿಗಳ ಹಿಂಸಾ ದೋಷವಾದವು ಬಿದ್ದು ಹೋಗುವ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

ಕೇವಲವಾದ ಕರ್ಮಕ್ಕೆ ಕಾರಣತ್ವವನ್ನು ಒಪ್ಪುವುದಿಲ್ಲ ಬೇರೆ ಕರ್ತೃವನ್ನು ಅಪೇಕ್ಷಿಸಿಕೊಂಡು ಅದರ ಸಹಕಾರದಿಂದ ಜನನ-ಮರಣಾದಿಗಳಿಗೆ ಕರ್ಮವು ಕಾರಣವಾಗುತ್ತದೆ ಎಂಬ ಇನ್ನೊಂದು ಪಕ್ಷವನ್ನು ದೂಷಿಸುತ್ತಾರೆ 'ಅಥ ಕರ್ತ್ರಂತರಾಪೇಕ್ಷಂ' ಎಂಬ ಶ್ಲೋಕದಿಂದ-

**ಅಥ ಕರ್ತ್ರಂತರಾಪೇಕ್ಷಂ ಕರ್ಮಾಪಿ ಕುರುತೇ ತವ ।**
**ತರ್ಹಿ ಸರ್ವಸ್ಯ ಕರ್ತಾರಮಾಕ್ಷಿಪೇತ್ಕಂಚನೇಶ್ವರಮ್ ॥ ೨೭೭ ॥**

**ಅರ್ಥ–** ಅಥ = ಒಂದುಪಕ್ಷ ಕರ್ತ್ರಂತರಾಪೇಕ್ಷಂ = ಅನ್ಯಕರ್ತೃವನ್ನು ಅಪೇಕ್ಷಿಸಿ, ಕರ್ಮಾಪಿ = ಕರ್ಮವೂ ಕೂಡ, ತವ = ನಿನ್ನ ಮತದಂತೆ ಜನನ ಮರಣಾದಿಗಳನ್ನು ಕುರುತೇ = ಮಾಡುವುದು ಎಂದಾದರೆ, ತರ್ಹಿ = ಆಗ, ಸರ್ವಸ್ಯ = ಎಲ್ಲದಕ್ಕೂ, ಕರ್ತಾರಂ = ಕರ್ತೃವಾದ, ಕಂಚನ = ಒಬ್ಬ ಈಶ್ವರಂ = ಈಶ್ವರನನ್ನು, ಆಕ್ಷಿಪೇತ್ = ಸಾಧಿಸುತ್ತದೆ.

**ಅನುವಾದ– ಬೇರೊಬ್ಬ ಕರ್ತೃವಿನ ಸಹಾಯದಿಂದ ಕರ್ಮವು ಜನನ-ಮರಣಾದಿಗಳಿಗೆ ಕಾರಣವಾಗುತ್ತದೆ ಎಂದ ಪಕ್ಷದಲ್ಲಿ ಕೇವಲ ಜಡವಾದ ಕರ್ಮಕ್ಕೆ ಕ್ಷಿತ್ಯಾದಿಗಳ ಕರ್ತೃತ್ವ ಕೂಡುವುದಿಲ್ಲವಾದ್ದರಿಂದ ಈ ವಾದವು ಸರ್ವಕ್ಕೂ ಅದೃಷ್ಟದ ಮೂಲಕ ಕರ್ತೃವಾದ ಒಬ್ಬ ಈಶ್ವರನನ್ನು (ಪರಮಾತ್ಮನನ್ನು) ಸಾಧಿಸುತ್ತದೆ.**

**ಭಾವವಿಲಾಸಿನೀ–** ನನು ಕೇವಲಕರ್ಮಣೋ ನ ಕಾರಣತ್ವಮ್ । ಯೇನೋಕ್ತಂ ಸಮಸ್ತಂ ಸ್ಯಾತ್ । ಕಿಂತು ಕರ್ತ್ರಂತರಸಾಪೇಕ್ಷಂ ಕರ್ಮ ಕಾರಣಮಿತಿ ಪಕ್ಷಾಂತರಮನೂದ್ಯ ದೂಷಯತಿ – **ಅಥೇತಿ** ॥ ತವ ಮತ ಇತಿ ಶೇಷಃ । ತರ್ಹಿ ಕೇವಲಕರ್ಮಣಃ ಕ್ಷಿತ್ಯಾದಿಕರ್ತೃತ್ವಾಯೋಗಾತ್ ಸರ್ವಸ್ಯಾಪ್ಯದೃಷ್ಟದ್ವಾರಕಕರ್ತಾರಮೀಶ್ವರಮಾಕ್ಷಿಪೇತ್ ಸಾಧಯೇದಿತಿ ಸಂಬಂಧಃ । ಕಂಚನೇತ್ಯನೇನ ಇದಾನೀಮೀಶ್ವರಸ್ವರೂಪಚರ್ಚಾಽನವಸರ ಇತಿ ಸೂಚಯತಿ

ಅತರ್ಕ್ಯಮಹಿಮಾನಮಿತಿ ವಾ । ಅಯಂ ವಿಕಲ್ಪಃ ಸ್ವಭಾವಮತೇಽಪಿ ಸಮಃ । ತಸ್ಯಾಪಿ ಹಿಂಸಾದೋಷವಾದಿತ್ವಾತ್ ॥ ೨೭೭ ॥

**ವಿವರಣೆ–** 'ಕಂಚನೇಶ್ವರಂ' ಎಂಬಲ್ಲಿ 'ಕಂಚನ' ಶಬ್ದವು ಇಲ್ಲಿ ಈಶ್ವರನ ಸ್ವರೂಪದ ಚರ್ಚೆ ಮಾಡುವ ಅಗತ್ಯವಿಲ್ಲ ಎಂಬುದನ್ನು ಸೂಚಿಸುತ್ತದೆ. ಅಥವಾ ತರ್ಕಕ್ಕೆ ನಿಲುಕದೆ ಇರುವ ಮಹಿಮೆಯುಳ್ಳವನು ಎಂಬುದನ್ನು ಸೂಚಿಸುತ್ತದೆ. ಇದೇ ರೀತಿಯ ವಿಕಲ್ಪ ಹಾಗೂ ಖಂಡನಗಳನ್ನು ಸ್ವಭಾವ ವಾದಿಗಳಾದ ಬೌದ್ಧರ ನಿರಾಕರಣಕ್ಕೂ ಬಳಸಬಹುದಾಗಿದೆ. ಏಕೆಂದರೆ ಅವರೂ ಅಹಿಂಸಾವಾದಿಗಳೇ ಆಗಿದ್ದಾರೆ.

**ಹೇಳಲ್ಪಟ್ಟ ದೋಷಗಳನ್ನು ಬೇರೆ ಬೇರೆ ಮತಗಳಲ್ಲಿ ಅತಿದೇಶಮಾಡುತ್ತಾ ಈಶ್ವರನ (ಪರಮಾತ್ಮನ) ಸಮರ್ಥನೆಯನ್ನು ಉಪಸಂಹರಿಸುತ್ತಾರೆ 'ನಿರೀಶ್ವರಾನ್' ಇತ್ಯಾದಿ ಎರಡು ಶ್ಲೋಕದಿಂದ-**

ನಿರೀಶ್ವರಾನ್ ಭಾಟ್ಟಸಾಂಖ್ಯ ಪ್ರಭಾಕರಮತಾನುಗಾನ್ ।
ಚಿತ್ರಮೇಕಪ್ರಹಾರೋಽಯಂ ಯುಕ್ತ್ಯಾ ತ್ರೀನಪ್ಯಖಂಡಯತ್ ॥ ೨೭೮ ॥

ತಸ್ಮಾಜ್ಜಡಾನುಸರಣಂ ತ್ಯಕ್ತ್ವಾ ಭಜ ಮಹಾಪ್ರಭುಮ್ ।
ಸ್ವಭಾವಕಾಲಕರ್ಮಾದೇಃ ಸರ್ವಸ್ಯಾಸ್ಯ ನಿಯಾಮಕಮ್ ॥ ೨೭೯ ॥

**ಅರ್ಥ–** ನಿರೀಶ್ವರಾನ್ = ಈಶ್ವರನನ್ನು ಒಪ್ಪದಿರುವ, ಭಾಟ್ಟ-ಸಾಂಖ್ಯ-ಪ್ರಾಭಾಕರಮತಾನುಗಾನ್ = ಭಾಟ್ಟಸಾಂಖ್ಯ ಮತ್ತು ಪ್ರಾಭಾಕರ ಮತಾನುಯಾಯಿಗಳಾದ, ತ್ರೀನ್ ಅಪಿ= ಮೂವರನ್ನೂ ಕೂಡ, ಅಯಂ = ಈಯಾವ, ಏಕಪ್ರಹಾರಃ = ಕರ್ತನ ಸಹಕಾರವಿಲ್ಲದೇ ಸಾಮಗ್ರಿಗಳು ಕಾರ್ಯವನ್ನು ಹುಟ್ಟಿಸಲಾರವು ಎಂಬ ಒಂದೇ ಪೆಟ್ಟು ಯುಕ್ತ್ಯಾ = ಯುಕ್ತಿಯ ಬಲದಿಂದ, ಅಖಂಡಯತ್ = ಖಂಡಿಸಿತು, ಚಿತ್ರಂ = ಆಶ್ಚರ್ಯವು, ತಸ್ಮಾತ್ = ಆದಕಾರಣದಿಂದ, ಜಡಾನುಸರಣಂ = ಸ್ವಭಾವ-ಕರ್ಮ-ಮೊದಲಾದ ಅಚೇತನ ಪದರ್ಥಗಳನ್ನು ಅನುಸರಿಸುವುದನ್ನು, ತ್ಯಕ್ತ್ವಾ = ಬಿಟ್ಟು, ಸ್ವಭಾವ ಕಾಲಕರ್ಮಾದೇಃ = ಸ್ವಭಾವಕಾಲ ಕರ್ಮಗಳೇ ಮೊದಲಾದ, ಅಸ್ಯ ಸರ್ವಸ್ಯ = ಈ ಸಮಸ್ತವಾದ ಜಗತ್ತಿಗೆ, ನಿಯಾಮಕಂ = ನಿಯಾಮಕನಾದ, ಮಹಾಪ್ರಭುಂ = ಎಲ್ಲರಿಗೂ ಸ್ವಾಮಿಯಾದ ನಾರಾಯಣನನ್ನು, ಭಜ = ಭಜಿಸು (ಸೇವಿಸು).

**ಅನುವಾದ–** ಈಶ್ವರನನ್ನು ಒಪ್ಪದೇ ಇರುವ ಭಾಟ್ಟಮೀಮಾಂಸಕರು, ಸಾಂಖ್ಯರು-ಪ್ರಭಾಕರ ಮೀಮಾಂಸಕರು ಇವರೆಲ್ಲರನ್ನೂ ಕರ್ತೃವಿನ ಸಹಕಾರವಿಲ್ಲದೆ ಸ್ವಭಾವ-ಕರ್ಮ ಮುಂತಾದ ಸಾಮಗ್ರಿಗಳು ಕಾರ್ಯವನ್ನು ಹುಟ್ಟಿಸಲಾರವು ಎಂಬ ಯುಕ್ತಿಯು ಮೂರೂ ಮತವನ್ನು ಖಂಡಿಸಿದೆ. ಆದ್ದರಿಂದ ಜಡವಾದ ಸ್ವಭಾವ-ಕರ್ಮಾದಿಗಳನ್ನು ಬಿಟ್ಟು ಎಲ್ಲದಕ್ಕೂ ನಿಯಾಮಕನಾದ ಮಹಾಪ್ರಭುವಾದ ಪರಮಾತ್ಮನನ್ನು ಅಂಗೀಕರಿಸು.

**ಭಾವವಿಲಾಸಿನೀ–** ಏಕಂ ಪ್ರತ್ಯುಕ್ತಂ ದೂಷಣಮನ್ಯತ್ರಾಪ್ಯತಿದಿಶತಿ – ನಿರೀಶ್ವರಾನಿತಿ ॥ ಅಯಮೇಕಪ್ರಹಾರಃ ಕರ್ತ್ರನಪೇಕ್ಷಕಾರಣಕಲಾಪಸ್ಯ ಕಾರ್ಯಾರ್ಜಕತ್ವಾಯೋಗರೂಪ-ಪ್ರಹಾರಃ ॥ ೨೭೮ ॥

ಈಶ್ವರಸಮರ್ಥನಮುಪಸಂಹರತಿ – **ತಸ್ಮಾದಿತಿ** ॥ ೨೭೯ ॥

**ವಿವರಣೆ–** ಸ್ವಭಾವವೇ ಸಾಕು ಪರಮಾತ್ಮನನ್ನು ಏಕೆ ಅಂಗೀಕರಿಸಬೇಕು ಎಂಬ ವಾದವನ್ನೂ ಕರ್ಮವೇ ಸಾಕು. ಸ್ವಭಾವ ಅಥವಾ ಕರ್ಮಗಳಿಂದಲೇ ಎಲ್ಲವೂ ನಡೆಯುತ್ತಿರುವಾಗ ಪರಮಾತ್ಮನನ್ನು ಒಪ್ಪುವ ಆವಶ್ಯಕತೆಯಿಲ್ಲ ಎಂಬ ವಾದವನ್ನು ಹಾಗೂ ಭಟ್ಟಾದಿ ಮೂವರನ್ನೂ ಚೇತನದ ಸಹಾಯವಿಲ್ಲದೇ ಸ್ವಭಾವ ಕರ್ಮಾದಿಗಳು ಯಾವ ಕಾರ್ಯವನ್ನೂ ಮಾಡಲಾರವು ಎಂಬ ಒಂದೇ ಯುಕ್ತಿಯಿಂದ ಖಂಡಿಸಿ ಈಶ್ವರನ ಅಸ್ತಿತ್ವದ ಸಮರ್ಥನವನ್ನು ಸಮಾಪ್ತಗೊಳಿಸುತ್ತಿದ್ದಾರೆ.

ಸರ್ವಸಂಹಾರಕನಾದ, ಗೋಪಿಕಾಸ್ತ್ರೀಯರಿಗೆ-ರಮಣನಾದ ಶ್ರೀಕೃಷ್ಣಪರಮಾತ್ಮನ ಗೋಬ್ರಾಹ್ಮಣರ ಹನನ, ಹಾಗು ಅಗಮ್ಯಾಗಮನಾದಿಗಳು ದೋಷವಲ್ಲವೆಂದು ಹೇಳಿದರೆ ಬೇರೆಯವರಿಗೂ ಅದು ದೋಷವಾಗದೇ ಹೋಗಬೇಕಾದೀತು ಎಂಬ ಕುಚೋದ್ಯವನ್ನು ಪರಿಹರಿಸುತ್ತಾರೆ ಏಕಸ್ಯಪಾಪಂ ಇತ್ಯಾದಿ ಶ್ಲೋಕದಿಂದ -

**ಏಕಸ್ಯ ಪಾಪಮನ್ಯಸ್ಯ ನಾಂಹಸ್ಸ್ಯಾದಿತಿ ಚೋಹ್ಯತೇ ।**
**ದಾರಾ ಗುರೂಣಾಂ ಪಾಪಾಯ ನ ತಥಾ ಗೃಹಮೇಧಿನಾಮ್ ॥ ೨೮೦ ॥**

**ಅರ್ಥ–** ಏಕಸ್ಯ = ಒಬ್ಬ ಪುರುಷನಿಗೆ, ಪಾಪಂ = ಪಾಪಕರ್ಮವಾಗುವುದು, ಅನ್ಯಸ್ಯ = ಇನ್ನೊಬ್ಬರಿಗೆ, ಅಂಹಃ = ದೋಷವು, ನ ಸ್ಯಾದಿತಿ = ಆಗುವದಿಲ್ಲವೆಂದು, ಊಹ್ಯತೇ = ಯುಕ್ತಿಯಿಂದ ತಿಳಿಯಲ್ಪಡುತ್ತದೆ, ಗುರೂಣಾಂ = ತಪಸ್ವಿಗಳಿಗೆ (ಸನ್ಯಾಸಿಗಳಿಗೆ), ದಾರಾಃ = ಭಾರ್ಯಾಭೋಗವು, ಪಾಪಾಯ = ದೋಷಕ್ಕೆ ಕಾರಣ (ಆಗುತ್ತದೆ), ಗೃಹಮೇಧಿನಾಂ = ಗ್ರಹಸ್ಥಾಶ್ರಮಿಗಳಿಗೆ, ನ ತಥಾ = ದೋಷವಾಗುವುದಿಲ್ಲ.

**ಅನುವಾದ–** ಒಬ್ಬನ ಪಾಪಕರ್ಮವೆನಿಸುವುದು ಮತ್ತೊಬ್ಬನಿಗೆ ದೋಷವಲ್ಲವೆಂದು ಯುಕ್ತಿಯಿಂದಲೇ ತಿಳಿಯಬಹುದು. ಒಬ್ಬನ ಪಾಪದೋಷವು ಮತ್ತೊಬ್ಬನಿಗೂ ಪಾಪವೆ ಆಗುತ್ತದೆಂಬ ಯುಕ್ತಿಯು ವ್ಯಭಿಚರಿತವಾಗಿದೆ. ಹೇಗೆಂದರೆ ಸನ್ಯಾಸಿಗಳಿಗೆ ಭಾರ್ಯಾಭೋಗವು ದೋಷವಾಗಿದೆ. ಅದೇ ಭಾರ್ಯಭೋಗವು ಗ್ರಹಸ್ಥಾಶ್ರಮಿಗಳಿಗೆ ದೋಷವಾಗುವುದಿಲ್ಲ.

**ಭಾವವಿಲಾಸಿನೀ–** ಸರ್ವಸಂಹಾರಕಸ್ಯ ಗೋಪೀರಮಣಸ್ಯ ವಿಷ್ಣೋರ್ಗೋವಿ- ಪ್ರಹನ-ನಾಗಮ್ಯಾಗಮನಾದಿಕಂ ನ ದೋಷಶ್ಚೇತ್ತದನ್ಯೇಷಾಮಪಿ ದೋಷೋ ನ ಸ್ಯಾದಿತಿ ಚೋದ್ಯಂ ಪರಿಹರತಿ – **ಏಕಸ್ಯೇತಿ** ॥ ಏಕಸ್ಯ ಪಾಪರೂಪಕವರ್ಮಾನ್ಯಸ್ಯ ಪಾಪಹೇತುರ್ನ-

ಭವತೀತ್ಯೇತದುಪಪಾದಯತಿ – **ದಾರಾ ಇತಿ** ॥ ಗುರೂಣಾಂ ತಪಸ್ವಿನಾಮ್ । ತಥಾಚಾನ್ಯೇಷಾಂ ದೋಷಕೃದಪಿ ಹನನಾದಿಕಂ ನ ವಿಷ್ಣೋರ್ದೋಷಕೃದಿತಿ ಭಾವಃ ॥ ೨೮೦ ॥

ಪುಣ್ಯಪಾಪವಿಷಯದಲ್ಲಿ ವಿಧಿನಿಷೇಧರೂಪಗಳಾದ ಶ್ರುತಿ-ಸ್ಮೃತಿ ಪ್ರಾಜ್ಞರ ವಚನಗಳೇ ಪ್ರಮಾಣವೆಂಬುದಾಗಿ ಸಮರ್ಥಿಸುತ್ತಾರೆ ಯುಕ್ತಿಸ್ತು ತತ್ರ ವ್ಯರ್ಥೈವ ಎಂಬ ಶ್ಲೋಕದಿಂದ

ಯುಕ್ತಿಸ್ತು ತತ್ರ ವ್ಯರ್ಥೈವ ವಿವೇಕೋಽತೋ ವಿಧೇರ್ಬಲಾತ್ ।
ತತ್ರಾಂಹಸ್ತದ್ಯತ್ರ ತತ್ವೇ ಪ್ರಾಚಾಂ ವಾಚೋ ನ ಚೇನ್ನ ಚ ॥ ೨೮೧ ॥

**ಅರ್ಥ–** ತತ್ರ = ಪುಣ್ಯ ಪಾಪ ವಿಷಯದಲ್ಲಿ, ಯುಕ್ತಿಸ್ತು = ಒಬ್ಬನ ಪಾಪವು ಇನ್ನೊಬ್ಬನಿಗೂ ಬರಲಿ ಎಂಬ ಯುಕ್ತಿಯಾದರೂ, ವ್ಯರ್ಥೈವ = ವ್ಯರ್ಥವೇ ಆಗುತ್ತದೆ. ಅತಃ = ಆದುದರಿಂದ, ವಿಧೇಃ = ವಿಧಿನಿಷೇಧಗಳ, ಬಲಾತ್ = ಬಲದಿಂದ, ವಿವೇಕಃ = ಪುಣ್ಯಪಾಪಗಳ ವ್ಯತ್ಯಾಸವು ಇರುತ್ತದೆ, ಯತ್ರ = ಯಾವ ಕರ್ಮವಿಷಯದ, ತತ್ವೇ = ದೋಷವಿಷಯದಲ್ಲಿ, ಪ್ರಾಚಾಂ = ಪ್ರಾಚೀನರಾದ ಋಷಿಮುನಿಗಳ ವಾಚಃ = ವಾಕ್ಯಗಳು (ಇರುತ್ತವೆಯೋ) ತತ್ = ಆ ಕರ್ಮವು, ತತ್ರ = ಅಂತಹ ಸ್ಥಳದಲ್ಲಿ, ಅಂಹಃ = ಪಾಪವು (ಪಾಪಕ್ಕೆ ಸಾಧನವು) ಆಗುತ್ತದೆ. ನಚೇತ್ = ಅಂತಹ ವಾಕ್ಯಗಳಿಲ್ಲದಿದ್ದಾಗ, ನಚ = ಪಾಪವಾಗುವುದಿಲ್ಲ.

**ಅನುವಾದ–** ಯಾವುದು ಯಾವನಿಗೆ ವಿಹಿತವಾಗಿದೆಯೋ ಅದು ಅವನಿಗೆ ಪುಣ್ಯವನ್ನು ಕೊಡುವಂಥಾದ್ದು. ಯಾವುದು ಯಾವನಿಗೆ ನಿಷಿದ್ಧವೋ ಅದು ಅವನಿಗೆ ಪಾಪವನ್ನು ಕೊಡುವಂಥಾದ್ದು ಎಂಬ ವಿಧಿ-ನಿಷೇಧಗಳಿಂದಲೆ ಪುಣ್ಯ ಪಾಪಗಳ ವ್ಯವಸ್ಥೆಯೆ ಹೊರತು ಯುಕ್ತಿಯಿಂದಲ್ಲ. ಆದ್ದರಿಂದಲೆ ಯತಿಗಳಿಗೆ ಭಾರ್ಯಾಪರಿಗ್ರಹವು ನಿಷಿದ್ಧವಾಗಿರುವುದರಿಂದ ದೋಷಕ್ಕೆ (ಪಾಪಕ್ಕೆ) ಕಾರಣವು ಆಗುತ್ತದೆ. ಅದೇ ಗೃಹಸ್ಥಾಶ್ರಮಿಗೆ ವಿಹಿತವಾದುದರಿಂದ ಪಾಪಹೇತುವಾಗುವುದಿಲ್ಲ ಆದ್ದರಿಂದ ಶ್ರುತಿ-ಸ್ಮೃತಿ-ಪ್ರಾಜ್ಞರ ವಚನಗಳಿಂದ ಪುಣ್ಯಪಾಪಗಳ ನಿರ್ಧಾರವೇ ಹೊರತು ಯುಕ್ತಿಯಿಂದಲ್ಲ.

**ಭಾವವಿಲಾಸಿನೀ–** ತತ್ರ ಪುಣ್ಯಪಾಪವಿಷಯೇ ಏಕಸ್ಯ ಪಾಪಮನ್ಯಸ್ಯಾಪಿ ಪಾಪಂ ಸ್ಯಾದಿತ್ಯಾದಿಯುಕ್ತಿಃ ವ್ಯರ್ಥಾ ವ್ಯಭಿಚಾರಾತ್ಮಯೋಜನಾಽಸಾಧಿಕೇತ್ಯರ್ಥಃ । ತರ್ಹಿ ಕಸ್ಮಾತ್ಪುಣ್ಯಪಾಪನಿಯಮಃ? ಇತ್ಯತ ಆಹ – **ವಿವೇಕ ಇತಿ** ॥ ಅತಃ ಯುಕ್ತೇರಭಾವಾತ್ । ವಿಧೇರಿತ್ಯುಪಲಕ್ಷಣಮ್ । ನಿಷೇಧಾದಿತ್ಯಪಿ ಗ್ರಾಹ್ಯಮ್ । ವಿವೇಕಃ ಪುಣ್ಯತ್ವಪಾಪತ್ವವಿವೇಕಃ । ಯದ್ಯಸ್ಯ ವಿಹಿತಂ ತತ್ತಸ್ಯ ಪುಣ್ಯದಮ್ । ಯತ್ತು ಯಸ್ಯ ನಿಷಿದ್ಧಮ್ ತತ್ತಸ್ಯ ಪಾಪದಮಿತಿ ವಿಧಿ ನಿಷೇಧಾಭ್ಯಾಮೇವ ಪುಣ್ಯಪಾಪವ್ಯವಸ್ಥಾ । ಅತ ಏವ ದಾರಪರಿಗ್ರಹೋ

ನಿಷಿದ್ಧತ್ವಾದ್ಗುರೋರ್ದೋಷಹೇತುಃ । ಗೃಹಸ್ಥಸ್ಯ ತು ತದಭಾವಾನ್ನ ದೋಷಹೇತುರಿತಿ ತ್ವಯಾಪಿ ವಕ್ತವ್ಯಮ್ । ಏವಂಚ ಹಿಂಸಾಽಗಮ್ಯಾಗಮನಾದಿಕಂ ರಾಜಾಜ್ಞೋಲ್ಲಂಘನಂ ಪ್ರಜಾನಾಮಿವಾ-ಸ್ಮಾಕಮೇವ ದೋಷಹೇತುಃ । ನತು ವಿಧಿನಿಷೇಧಾದಿನಿಯಾಮಕಸ್ಯ ಸರ್ವೇಶ್ವರಸ್ಯ ತು ರಾಜಾಜ್ಞೋಲ್ಲಂಘನಂ ರಾಜ್ಞ ಇವ ನ ದೋಷಹೇತುರಿತಿ ಭಾವಃ । ತದೇವ ವಿಶದಯತಿ – **ತತ್ರೇತಿ** ॥ ಯತ್ರ ಯಸ್ಮಿನ್ಕರ್ಮಣಿ ತತ್ತ್ವೇ ದೋಷತ್ವೇ ಪ್ರಾಚಾಂ ಶ್ರುತಿಸ್ಮೃತಿನಿಯಾಮಕಾನಾಂ ಸರ್ವೇಶ್ವರಮನ್ವಾದೀನಾಂ ವಾಚಃ ಸಂತೀತಿ ಶೇಷಃ । ತತ್ಕರ್ಮ ತತ್ರ ತಸ್ಮಿನ್ ಸ್ಥಲೇ ಅಂಹಃ ಪಾಪಮ್ । ತತ್ಸಾಧನಮಿತಿ ಯಾವತ್ ॥ ೨೮೧ ॥

**ವಿವರಣೆ–** ಭಗವಂತ ನಿರ್ದೋಷನೆಂದು ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧನಾಗಿದ್ದಾನೆ ವಿಧಿ -ನಿಷೇಧಗಳು ಜೀವರಿಗೆ ಹೊರತು ನಿಯಾಮಕನಾದ ಸ್ವತಂತ್ರನಾದಪರಮಾತ್ಮನಿಗಲ್ಲ. ಆದ್ದರಿಂದ ಪರಮಾತ್ಮನು ಏನೇ ಕರ್ಮ ಮಾಡಿದರೂ ಅದರ ಲೋಪವಿರುವುದಿಲ್ಲ. ರಾಜನ ಆಜ್ಞೆಯ ಉಲ್ಲಂಘನೆಯ ದೋಷ ಪ್ರಜೆಗಳಾದ ನಮಗಿದೆ ವಿನಾ ಆಜ್ಞಾಪ್ರದನಾದ ರಾಜನಿಗೆ ಇಲ್ಲವೆಂಬುದು ಲೋಕದ ಸಾಮಾನ್ಯನಿಯಮವಾಗಿದೆ. ಸೇವಕನಾದವನು ತನ್ನ ಸ್ವಾಮಿಯ ಆಜ್ಞೆಯನ್ನು ಪಾಲಿಸುವುದು ಕರ್ತವ್ಯವಾಗಿದೆ. ಸ್ವಾಮಿಯೇ ಬೇರೆ ರೀತಿಯಲ್ಲಿ ನಡೆದರೆ ಅದು ದೋಷವಾಗುವುದಿಲ್ಲವಾದ್ದರಿಂದ ವಿಧಿ ನಿಷೇಧ ರೂಪವಾದ ಶ್ರುತಿ-ಸ್ಮೃತಿ- ಪ್ರಾಜ್ಞಸಮ್ಮತ ವಾಕ್ಯಗಳೇ ಇದು ಪುಣ್ಯ ಇದು ಪಾಪ ಎಂಬ ವಿವೇಕದಲ್ಲಿ ಪ್ರಮಾಣವಾಗುತ್ತದೆ ವಿನಾ ಯುಕ್ತಿಯಲ್ಲವೆಂದು ವಿವರಿಸಿದ್ದಾರೆ.

**ನಿರವದ್ಯತಯಾ ಯಸ್ತು ಶ್ರುತ್ಯಾದ್ಯೈಃ ಸ್ತೂಯತೇತರಾಮ್ ।**
**ಕೃತ್ವಾಪಿ ನ ಸ ಕರ್ಮಾಣಿ ಲಿಪ್ಯತೇ ಜಗದೀಶ್ವರಃ ॥ ೨೮೨ ॥**

**ಅರ್ಥ–** ಯಃ = ಯಾವ, ಜಗದೀಶ್ವರಃ ತು = ಪರಮಾತ್ಮನಾದರೋ, ನಿರವದ್ಯತಯಾ = ದೋಷದೂರನೆಂದು, ಶ್ರುತ್ಯಾದ್ಯೈಃ = ವೇದಾದಿಗಳಿಂದ, ಸ್ತೂಯತೇತರಾಂ = ಅತಿಶಯವಾಗಿ ಸ್ತೋತ್ರಮಾಡಿಸಿಕೊಳ್ಳಲ್ಪಡುವವನೋ, ಸಃ = ಅಂತಹ ಪರಮಾತ್ಮನು, ಕರ್ಮಾಣಿ = ಪುಣ್ಯಪಾಪರೂಪವಾದ ಕರ್ಮಗಳನ್ನು, ಕೃತ್ವಾಪಿ = ಮಾಡಿದರೂ ಕೂಡ, ನ ಲಿಪ್ಯತೇ = ಲೇಪವನ್ನು ಹೊಂದುವುದಿಲ್ಲ.

**ಅನುವಾದ–** ಪರಮಾತ್ಮನನ್ನು ನಿರ್ದೋಷನೆಂದು ಶಾಸ್ತ್ರಗಳು ಅತಿಶಯವಾಗಿ ಹೊಗಳುತ್ತಿವೆ. ಆದ್ದರಿಂದ ಅವನು ಪುಣ್ಯಪಾಪ ಮೊದಲಾದ ಯಾವ ಕರ್ಮಗಳನ್ನು ಮಾಡಿದರೂ ಅವುಗಳ ಲೇಪ ಆತನಿಗಿಲ್ಲ.

**ಭಾವವಿಲಾಸಿನೀ–** ಏವಂ ಪ್ರಾಚೀನವಚನಾನುಸರಣೇ ನ ಕ್ವಾಪಿ ವಿಷ್ಣೋರ್ದೋಷ ಇತ್ಯಾಹ – **ನಿರವದ್ಯತಯೇತಿ** ॥ ಯಸ್ತು ಜಗದೀಶ್ವರ ಇತಿ ಸಂಬಂಧಃ ॥ ೨೮೨ ॥

'ಪಾಪಪ್ರೇರಕನಾದ ಶ್ರೀ ಭಗವಂತನಿಗೆ' ಕರ್ತಾ ಕಾರಯಿತಾ ಚ ಇತ್ಯಾದಿ ವಚನದಂತೆ ಪಾಪವು ಬರಲಿ ಎಂದರೆ ಅದನ್ನು ಯುಕ್ತಿಯಿಂದ ಪರಿಹರಿಸುತ್ತಾರೆ 'ನಾಪಿ ಕಾರಯಿತುಃ' ಇತ್ಯಾದಿ ಶ್ಲೋಕದಿಂದ-

**ನಾಪಿ ಕಾರಯಿತುಃ ಪಾಪಂ ಕರ್ತೃವದ್ ಯುಕ್ತಿತೋ ಭವೇತ್ ।**
**ಮಂಕ್ತುರ್ಜಲೇಷು ಯದ್ದುಃಖಂ ಕಿಂ ತನ್ಮಜ್ಜಯಿತುಃ ಪ್ರಭೋಃ ॥ ೨೮೩ ॥**

**ಅರ್ಥ–** ಕರ್ತೃವತ್ = ಪಾಪಕರ್ತನಂತೆ, ಕಾರಯಿತುಃ = ಪ್ರೇರಕನಿಗೂ, ಪಾಪಂ = ಪಾಪವು, ಯುಕ್ತಿತೋಪಿ = ಯುಕ್ತಿಯಿಂದಲೂ ಕೂಡ, ನಭವೇತ್ = ಉಂಟಾಗುವುದಿಲ್ಲ, ಜಲೇಷು = ನೀರಿನಲ್ಲಿ, ಮಂಕ್ತುಃ = ಮುಳುಗುವವನಿಗೆ, ಯದ್ದುಃಖಂ = ಯಾವ ದುಃಖವಾಗುವುದೋ, ತತ್ = ಆ ದುಃಖವು, ಮಜ್ಜಯಿತುಃ = ಮುಳುಗಿಸುವಂತಹ, ಪ್ರಭೋಃ = ಶಕ್ತನಾದ ಮನುಷ್ಯನಿಗೆ, ಕಿಂ = ಆಗುತ್ತದೆ ಏನು ?

**ಅನುವಾದ–** ಪಾಪಕರ್ತನಿಗೆ ದುಃಖವಿದ್ದರೆ ಪಾಪಪ್ರೇರಕನಿಗೆ ದುಃಖವಿರಬೇಕೆಂಬ ನಿಯಮವಿಲ್ಲ. ಏಕೆಂದರೆ ನೀರಿನಲ್ಲಿ ಮುಳುಗುವವನಿಗೆ ಆಗುವ ದುಃಖವು ಮುಳುಗಿಸುವವನಿಗೆ ಆಗುವದಿಲ್ಲ ಎಂಬ ಲೋಕದ ಯುಕ್ತಿಯೇ ಪ್ರಮಾಣ.

**ಭಾವವಿಲಾಸಿನೀ–** ನನು ಪಾಪಪ್ರೇರಕಸ್ಯ ಜಗದೀಶ್ವರಸ್ಯ ಕರ್ತಾ ಕಾರಯಿತಾ ಚೇತಿ ವಚನೇನ ಪಾಪಂ ಸ್ಯಾದಿತ್ಯತ ಆಹ – ನಾಪೀತಿ ॥ ಕರ್ತೃವತ್ ಪಾಪಕರ್ತೃವತ್ । ಯುಕ್ತಿತಃ ನ ಭವೇದಿತ್ಯೇತದುಪಪಾದಯತಿ – ಮಂಕ್ತುರಿತಿ ॥ ಮಂಕ್ತುಃ ಮಜ್ಜನಕರ್ತುಃ । ತದ್ ದುಃಖಮ್। ಪ್ರಭೋರಾಜಾದೇಃ ॥ ೨೮೩ ॥

**ವಿವರಣೆ–** ಲೋಕದಲ್ಲಿ ಈಜುವುದನ್ನು ಕಲಿಯುವ ಶಿಷ್ಯನೊಡನೆ ಅವನ ಗುರುವು ಸಹ ನೀರಿನಲ್ಲಿ ಮುಳುಗಿ ಈಜನ್ನು ಕಲಿಸುತ್ತಾನೆ ಆ ಕಲಿಸುವ ಗುರುವಿಗೆ ದುಃಖದ ಸ್ಪರ್ಶವಿಲ್ಲದೇ ಇರುವುದನ್ನು ನಾವು ನೋಡಿದ್ದೇವೆ ಅದರಂತೆ ಪರಮಾತ್ಮನು ಪಾಪಪ್ರೇರಕನಾದರೂ ದುಃಖವಿರುವುದಿಲ್ಲ ಸರ್ವಶಕ್ತನಾಗಿರುವುದರಿಂದ ಎಂಬುದನ್ನು ತನ್ಮಜ್ಜಯಿತುಃ ಪ್ರಭೋಃ ಎಂಬ ಪದಗಳಿಂದ ವಿವರಿಸಿದ್ದಾರೆ.

ಪಾಪಕರ್ತನಿಗಿರುವಂತೆ ಪಾಪಪ್ರೇರಕನಿಗೂ ಪಾಪಲೋಪ ಉಂಟು ಎಂಬುದನ್ನು ಯುಕ್ತಿಯನ್ನು ಬಿಟ್ಟು ವಿಧಿವಾಕ್ಯದಿಂದಲೇ ನಿರ್ಣಯಿಸುತ್ತೇವೆ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಿದ್ದಾರೆ ವಿಧೇಃಪದಾನುಸರಣೇ ಎಂಬೀ ಶ್ಲೋಕದಿಂದ-

**ವಿಧೇಃ (ಪಾ) ಪದಾನುಸರಣೇ ವಿಧಿತಾತಸ್ಯ ಕಿಂ ಭಯಮ್ ।**
**ಕರಣಾತ್ ಪ್ರೇರಣಾದ್ಯಸ್ಯ ನ ಭೀರಿತಿ ಸ ಗರ್ಜತಿ ॥ ೨೮೪ ॥**

**ಅರ್ಥ–** ವಿಧೇಃ = ವಿಧಿಯ, ಪದಾನುಸರಣೇ = ವಾಕ್ಯವನ್ನು ಅನುಸರಿಸಿದಲ್ಲಿ, ವಿಧಿ ತಾತಸ್ಯ = ವಿಧಿಕರ್ತನಾದ (ಬ್ರಹ್ಮನ ತಂದೆಯಾದ) ಪರಮಾತ್ಮನಿಗೆ, ಕಿಂ ಭಯಂ = ಏನು

ಭಯವಿದೆ? ಕರಣಾತ್ = ಪಾಪವನ್ನು ಆಚರಿಸುವುದರಿಂದಲೂ, ಪ್ರೇರಣಾತ್ = ಪ್ರೇರಿಸುವುದರಿಂದಲೂ ಸಹ, ಯಸ್ಯ = ಯಾವ ಪರಮಾತ್ಮನಿಗೆ ನ ಭೀಃ = ಯಾವ ಭಯವೂ ಇಲ್ಲ, ಇತಿ = ಎಂಬುದಾಗಿ, ಸಃ = ವಿಧಿವಾಕ್ಯವು, ಗರ್ಜತಿ = ಗರ್ಜಿಸುತ್ತದೆ.

**ಅನುವಾದ–** ವಿಧಿವಾಕ್ಯವನ್ನು ಅನುಸರಿಸಿದರೆ ವಿಧಿಯನ್ನು ಉಪದೇಶಿಸುವವನಿಗೆ ಏನು ಭಯ? ವಿಧಿವಾಕ್ಯರೂಪವಾದ ಶ್ರುತಿಯು ಪರಮಾತ್ಮನು ಯಾವ ಕರ್ಮವನ್ನು ಮಾಡಿದರೂ, ಯಾವ ಕರ್ಮವನ್ನು ಪ್ರೇರಿಸಿದರೂ ಅವನಿಗೆ ದೋಷವಿಲ್ಲವೆಂದು ಗರ್ಜಿಸುತ್ತಿದೆಯಷ್ಟೆ?

**ಭಾವವಿಲಾಸಿನೀ–** ನನು ಯುಕ್ತಿಂ ವಿಹಾಯ ವಿಧಿಬಲಾತ್ತನ್ನಿರ್ಣಯ ಇತ್ಯತ ಆಹ **–ವಿಧೇರಿತಿ ॥** ಪದಾನುಸರಣೇ ಪಾದಾನುಸರಣ ಇತ್ಯರ್ಥಃ । ವಿಧಿತಾತಸ್ಯ ವಿಧಿಕರ್ತುಃ ಬ್ರಹ್ಮತಾತಸ್ಯೇತಿ ವಾ । ಕರಣಾತ್ ಪಾಪಕರಣಾತ್ । ಪ್ರೇರಣಾತ್ ತತ್ಪ್ರೇರಣಾತ್ । ಯಸ್ಯ ಜಗದೀಶ್ವರಸ್ಯ । ಸ ವಿಧಿಃ । 'ನ ಕರ್ಮಣಾ ವರ್ಧತೇ ನೋ ಕನೀಯಾನ್' 'ಸೃಜತ್ಯವತ್ಯತ್ತಿ ನ ತತ್ರ ಸಜ್ಜತೇ' ಇತ್ಯಾದಿಶ್ರುತಿ-ಸ್ಮೃತಿರೂಪಃ ॥ ೨೮೪ ॥

**ವಿವರಣೆ–** ನ ಕರ್ಮಣಾವರ್ಧತೇ ನೋ ಕನೀಯಾನ್ ಸೃಜತ್ಯವತ್ಯತ್ತಿ ನ ತತ್ರ ಸಜ್ಜತೇ ಎಂಬೀ ಶ್ರುತಿ-ಸ್ಮೃತಿಗಳು ಶ್ರೀಹರಿಗೆ ಪುಣ್ಯಪಾಪಾದಿಗಳಿಂದ ವೃದ್ಧಿಹ್ರಾಸಾದಿಗಳು ಇರುವುದಿಲ್ಲ. ಶ್ರೀಪರಮಾತ್ಮನೇ ಜಗತ್ತನ್ನು ಸೃಷ್ಟಿಸಿ, ರಕ್ಷಿಸಿ, ಭಕ್ಷಿಸುತ್ತಾನೆ ಶ್ರೀಪರಮಾತ್ಮನು ಮಾಡುವ ಯಾವ ಕರ್ಮಗಳೂ ಆತನ ಮೇಲೆ ಯಾವುದೇ ವಿಧವಾದ ಪರಿಣಾಮವನ್ನು ಬೀರಲಾರವೆಂದು ಸಾರುತ್ತಿವೆ. ಅಷ್ಟೇ ಅಲ್ಲ, ವಿಧಿಕರ್ತನಾದ ಶ್ರೀಹರಿಯು ವಿಧಿಯನ್ನು ಪಾಲಿಸದೇ ಇರುವುದು. ಅವರವರ ಅದೃಷ್ಟವನ್ನು ನಿಮಿತ್ತೀಕರಿಸಿ ಪ್ರೇರಿಸುವುದು ಇದಾವದೂ ದೋಷಾದಾಯಕವಾಗುವುದಿಲ್ಲವೆಂದು ಸಹ ಶ್ರುತಿವಾಕ್ಯಗಳು ಸಾರುತ್ತಿವೆ. ಇಲ್ಲಿ ಬ್ರಹ್ಮದೇವರ ಪಾದವನ್ನು ಹಿಡಿದರೆ ಬ್ರಹ್ಮದೇವರ ತಂದೆಯಾದ ಪರಮಾತ್ಮನಿಗೆ ಯಾವ ಭಯವಿರಲು ಸಾಧ್ಯ ಎಂಬ ಧ್ವನಿ ಇದೆ.

ಪ್ರಕಾರಾಂತರದಿಂದ ಪರಮಾತ್ಮನಿಗೆ ವಿಧಿನಿಷೇಧಗಳು ಅನ್ವಯಿಸುವುದಿಲ್ಲವೆಂದು ಉಪಪಾದಿಸುತ್ತಿದ್ದಾರೆ ಯತೋವಿಧಿರ್ನಿಷೇಧಃ ಇತ್ಯಾದಿ ಶ್ಲೋಕದಿಂದ –

**ಯತೋ ವಿಧಿರ್ನಿಷೇಧೋ ನೄನ್ ವಿದಧಾತಿ ನಿಷೇಧತಿ ।**
**ತಾಭ್ಯಾಂ ಬಂಧೋ ಹಿ ಬದ್ಧಾನಾಂ ಮುಕ್ತಾನಾಂ ಸ್ಯಾತ್ ಕಥಂ ವದ**
**॥ ೨೮೫ ॥**

**ಅರ್ಥ–** ಯತಃ = ಯಾವ ಕಾರಣದಿಂದ, ವಿಧಿಃ = ವಿಧಿಯು, ಮತ್ತು ನಿಷೇಧಃ = ನಿಷೇಧವು, ನೄನ್ = ಸಾಂಸಾರಿಕಪುರುಷರನ್ನು ಕುರಿತು, ವಿದಧಾತಿ = ವಿಧಿಸುತ್ತದೆ, ನಿಷೇಧತಿ = ನಿಷೇಧಿಸುತ್ತದೆ, ತತಃ = ಆ ಕಾರಣದಿಂದ, ತಾಭ್ಯಾಂ = ಆ ವಿಧಿ ನಿಷೇಧಗಳಿಂದ, ಬಂಧಃ =

ಲೇಪವು, ಬದ್ಧಾನಾಂ = ಸಂಸಾರದಲ್ಲಿರುವವರಿಗೆ, ಸ್ಯಾತ್ = ಉಂಟಾಗುತ್ತದೆ, ಮುಕ್ತಾನಾಂ = ಮುಕ್ತರಾದವರಿಗೆ, ಕಥಂ = ಹೇಗೆ, ಸ್ಯಾತ್ = ಆಗುತ್ತದೆ? ವದ = ಹೇಳು.

**ಅನುವಾದ–** ಅಹರಹಃ ಸಂಧ್ಯಾಮುಪಾಸೀತ ಎಂಬ ಸಂಧ್ಯಾವಂದನ ವಿಧಿಯು, 'ನ ಸುರಾಂ ಪಿಬೇತ್' ಎಂಬ ಸುರಾಪಾನನಿಷೇಧವು ಸಂಸಾರಿಗಳಿಗೆ ಮಾತ್ರ ವಿಧಾಯಕಗಳಾಗಿವೆ. ಕರ್ತವ್ಯಾಂಶವನ್ನು ಹಾಗು ಮಾಡಬಾರದೆಂಬ ನಿಷೇಧವನ್ನು ತಿಳಿಸುತ್ತಿವೆ. ಇವುಗಳ ಫಲವು ಸಂಸಾರದಿಂದ ಬಂಧಿತರಾದವರಿಗೆ ಮಾತ್ರ ಉಂಟಾಗುತ್ತವೆ. ಸಂಸಾರದಿಂದ ಬಿಡುಗಡೆಯನ್ನು ಪಡೆದವರಿಗೆ (ಮುಕ್ತರಿಗೆ) ಇವುಗಳ ಬಂಧವು ಹೇಗೆ ತಾನೆ ಸಂಭವಿಸುತ್ತದೆ? ಹೇಳು.

**ಭಾವವಿಲಾಸಿನೀ–** ಪ್ರಕಾರಾಂತರೇಣ ಹರೇರ್ವಿಧಿನಿಷೇಧಾವಿಷಯತ್ವಮುಪಪಾದಯತಿ – **ಯತ ಇತಿ** ॥ ವಿಧಿಃ 'ಪ್ರಾತಃ ಸಂಧ್ಯಾಮುಪಾಸೀತ' ಇತ್ಯಾದಿ । ನಿಷೇಧೋ 'ನ ಸುರಾಂ ಪಿಬೇದ್' ಇತ್ಯಾದಿ । ನೄನ್ ಸಾಂಸಾರಿಕಪುರುಷಾನ್ ಪ್ರತೀತಿ ಶೇಷಃ । ಸ್ಯಾತ್ ಬಂಧ ಇತ್ಯನುವರ್ತತೇ । ಕಥಂ ನ ಕಥಂಚಿದಪೀತಿ ಭಾವಃ । ಮುಕ್ತಾನಾಮಿತ್ಯುಕ್ತ್ಯಾ ಭವನ್ಮತೇಽಪಿ ಸ್ವಸಮಯೋಕ್ತಸಾಂಸಾರಿಕವ್ರತಾಚರಣಾಭಾವೇಽಪಿ ಮುಕ್ತತ್ವಾದೇವ ಹಿ ಮುಕ್ತಾನಾಂ ನ ದೋಷ ಇತಿ ಧ್ವನಯತಿ । ವದೇತ್ಯುಕ್ತ್ಯಾ ಸ್ವೋಕ್ತೇರತಿದೃಢತ್ವಂ ಪರಸ್ಯ ಪ್ರತ್ಯುತ್ತರಾಭಾವಂ ಚ ಸೂಚಯತಿ ॥ ೨೮೫ ॥

**ವಿವರಣೆ–** ಜೈನಮತದಲ್ಲಿ ಸಂಸಾರಿಗಳಿಗೆ ಹೇಳುವ ವ್ರತಗಳನ್ನು ಆಚರಿಸದಿದ್ದರೂ ಮುಕ್ತರಿಗೆ (ಜೈನಸನ್ಯಾಸಿಗಳಿಗೆ) ದೋಷವಿಲ್ಲವೆಂಬ ಯುಕ್ತಿಯನ್ನು ಮುಕ್ತಾನಾಂ ಎಂಬ ಪದದಿಂದ ಇಲ್ಲಿ ಶ್ರೀವಾದಿರಾಜರು ಸೂಚಿಸಿದ್ದಾರೆ ಮತ್ತು ಅಪಿ ಎಂಬ ಪದದಿಂದ ತಮ್ಮ ಮಾತಿಗೆ ಅತ್ಯಂತದಾರ್ಢ್ಯವನ್ನು ಮತ್ತು ಪರನಿಗೆ ಪ್ರತ್ಯುತ್ತರವನ್ನು ಕೊಡಲಿಕ್ಕೆ ಬಾರದು ಎಂಬುದನ್ನೂ ಸೂಚಿಸುತ್ತಾರೆ ಇಲ್ಲಿ ಮುಕ್ತಾನಾಂ ಎಂಬ ಪದವು ಉಪಲಕ್ಷಣವಾಗಿದೆ. ಜೀವನ್ಮುಕ್ತರನ್ನು ಸಮಾಧಿಗ್ರಸ್ತರಾಗಿ ಧ್ಯಾನಿಸುವವರನ್ನೂ ಸ್ವೀಕರಿಸಲು ಬರುತ್ತದೆ.

**ಯಸ್ತು ಪ್ರಸ್ತೂಯತೇ ಶ್ರುತ್ಯಾ ನಿತ್ಯಮುಕ್ತತಯಾ ಪ್ರಭುಃ ।**
**ಸ ನಿರ್ದೋಷೋ ವಿಜಯತೇ ಹಯಗ್ರೀವಾಭಿಧೋ ಹರಿಃ ॥ ೨೮೬ ॥**

**ಅರ್ಥ–** ಯಸ್ತು = ಯಾವ, ಪ್ರಭುಃ = ಸಮರ್ಥನಾದ ಶ್ರೀಪರಮಾತ್ಮನು, ನಿತ್ಯಮುಕ್ತತಯಾ = ನಿತ್ಯಮುಕ್ತನೆಂದು, ಶ್ರುತ್ಯಾ = ವೇದದಿಂದ, ಪ್ರಸ್ತೂಯತೇ = ಚೆನ್ನಾಗಿ ಸ್ತೋತ್ರಮಾಡಲ್ಪಡುತ್ತಾನೋ, ಸಃ = ಅಂತಹ, ನಿರ್ದೋಷಃ = ದೋಷದೂರನಾದ, ಹಯಗ್ರೀವಾಭಿಧಃ = ಹಯಗ್ರೀವ ಎಂಬ ಹೆಸರುಳ್ಳ, ಹರಿಃ = ಶ್ರೀಪರಮಾತ್ಮನು, ವಿಜಯತೇ = ಸರ್ವೋತ್ತಮನಾಗಿದ್ದಾನೆ.

**ಅನುವಾದ–** ಮುಕ್ತರಾದ ಜೀವರಿಗೇ ವಿಧಿನಿಷೇಧರೂಪವಾದ ಬಂಧವು ಇಲ್ಲದಿರುವಾಗ ಇನ್ನು ನಿತ್ಯಮುಕ್ತನಾದ ಶ್ರೀಹರಿಗೆ ವಿಧಿನಿಷೇಧರೂಪವಾದ

ಬಂಧವು ಇಲ್ಲವೆಂದು ಏನು ಹೇಳಬೇಕು? ಹೀಗೆ ಕೈಮುತ್ಯನ್ಯಾಯದಿಂದ ಶ್ರೀಪರಮಾತ್ಮನಿಗೆ ವಿಧಿನಿಷೇಧಗಳು ಇಲ್ಲವೆಂಬುದು ಸಿದ್ಧವಾಗುತ್ತದೆ. ಇಂತಹ ದೋಷದೂರನಾದ ಹಯಗ್ರೀವರೂಪಿಯಾದ ಪರಮಾತ್ಮನು ಸರ್ವೋತ್ತಮನಾಗಿರುತ್ತಾನೆ.

**ಭಾವವಿಲಾಸಿನೀ–** ಮುಕ್ತಾನಾಮಪಿ ವಿಧಿನಿಷೇಧರೂಪಬಂಧೋ ನಾಸ್ತಿ ಕಿಲ ನಿತ್ಯಮುಕ್ತಸ್ಯ ತು ಕಿಮುತೇತಿ ಭಾವೇನಾಹ – **ಯ ಇತಿ** ॥ ಶ್ರುತೇತ್ಯುಪಲಕ್ಷಣಮ್ । ಪ್ರಲಯೇಽಪಿ ವಟಪತ್ರಶಾಯಿನೋ ಜನನಮರಣಾಭಾವಯುಕ್ತ್ಯಾ ಚೇತ್ಯಪಿ ಗ್ರಾಹ್ಯಮ್ ॥ ೨೮೬ ॥

**ವಿವರಣೆ–** ಇಲ್ಲಿ ಇದನ್ನು ಮಾಡು ಇದನ್ನು ಮಾಡಬೇಡ ಎಂಬ ವಿಧಿ ಹಾಗು ನಿಷೇಧಗಳು ಸಂಸಾರಿಜೀವರಿಗೆ ಇರುತ್ತವೆ. ಮುಕ್ತರಿಗೆ ಇರುವುದಿಲ್ಲ ಮುಕ್ತರಿಗೇ ವಿಧಿ ನಿಷೇಧಗಳು ಇಲ್ಲವೆಂದ ಮೇಲೆ ನಿತ್ಯಮುಕ್ತನಾದ ಶ್ರೀ ಹರಿಗೆ ಇಲ್ಲವೆಂದೇ ತಿಳಿಯಬೇಕು. ಶ್ಲೋಕದಲ್ಲಿರುವ ಶ್ರುತ್ಯಾ ಎಂಬ ಪದವು ಉಪಲಕ್ಷಣವಾಗಿದೆ. ಪ್ರಳಯಕಾಲದಲ್ಲಿ ವಟಪತ್ರಶಾಯಿಯಾದ ಶ್ರೀಹರಿಗೆ ಜನನ ಮರಣಗಳು ಇಲ್ಲವೆಂಬ ಯುಕ್ತಿಯಿಂದಲೂ ಕೂಡ ತಿಳಿಯಬೇಕು ಹೀಗೆ ವೇದ ಹಾಗು ಯುಕ್ತಿಗಳಿಂದ ಶ್ರೀಹರಿಯು ನಿತ್ಯಮುಕ್ತನೆಂದು ಹೊಗಳಲ್ಪಡುತ್ತಾನೆ ಎಂದು ಭಾವ.

ವ್ರತಸ್ಥಾ ಹಸ್ತವಿನ್ಯಸ್ತಸೂತ್ರಾತ್ ತೇ ಸೂತಕಾಂಹಸಾ ।<br>
ನ ಲಿಪ್ಯತೇ ಕಿಲ ಸ್ತ್ರೀ ಚ ಹಂತೇಶೋ ಲಿಪ್ಯತೇ ಕಿಲ ॥ ೨೮೭ ॥

**ಅರ್ಥ–** ವ್ರತಸ್ಥಾ = ವ್ರತಸ್ಥಳಾದ, ತೇ = ನಿನ್ನ (ಜೈನಮತದ), ಸ್ತ್ರೀ = ಸ್ತ್ರೀಯು, ಹಸ್ತ = ಕೈಯಲ್ಲಿ, ವಿನ್ಯಸ್ತ = ಕಟ್ಟಲ್ಪಟ್ಟ ಸೂತ್ರಾತ್ = ದಾರದ ಪ್ರಭಾವದಿಂದ, ಸೂತಕಾಂಹಸಾ= ರಜೋದರ್ಶನವೆಂಬ ದೋಷದಿಂದ, ನ ಲಿಪ್ಯತೇ ಕಿಲ = ಲೇಪಿಸಲ್ಪಡುವುದಿಲ್ಲವಷ್ಟೇ? ಈಶಃ = ಪರಮಾತ್ಮನು, ಲಿಪ್ಯತೇ ಕಿಲ = ದೋಷಲೇಪವುಳ್ಳವನಾಗುವನು, ಹಂತ = ಆಶ್ಚರ್ಯ.

**ಅನುವಾದ–** ವ್ರತಧಾರಿಣಿಯಾದ ನಿನ್ನ (ಜೈನನ) ಪತ್ನಿಯೂ ಕೈಯಲ್ಲಿ ಮಂತ್ರಿಸಿದ ಸೂತ್ರವನ್ನು ಕಟ್ಟಿಕೊಂಡರೆ ರಜೋದರ್ಶನ ರೂಪ ಸೂತಕದೋಷದಿಂದ ಲಿಪ್ತಳಾಗುವುದಿಲ್ಲ. ಇನ್ನು ಸರ್ವೇಶ್ವರನಾದ ಪರಮಾತ್ಮನು ಲಿಪ್ತನಾಗಲಿ ಎಂದು ಆಕ್ಷೇಪಿಸಿದರೆ ಎಂತಹ ಆಶ್ಚರ್ಯ.

**ಭಾವವಿಲಾಸಿನೀ–** ಹರೇರ್ದೋಷಿತ್ವಕಥಾಂ ಪ್ರತಿಬಂದ್ಯಾ ಪರಿಹರತಿ– **ವ್ರತಸ್ಥೇತಿ** ॥ ವ್ರತಸ್ಥಾ ಜಿನಸಮಯೋಕ್ತವ್ರತಸ್ಥಾ ತೇ ತವ ಸ್ತ್ರೀ ಚೇತಿ ಸಂಬಂಧಃ । ಹಸ್ತವಿನ್ಯಸ್ತಸೂತ್ರಾತ್ ಮನ್ತ್ರಿತಹಸ್ತಬದ್ಧಕಂಕಣಸೂತ್ರಾತ್ । ಸೂತಕಾಂಹಸಾ ರಜೋರೂಪಸೂತಕದೋಷೇಣ । ಕಿಲೇತ್ಯುಪಹಾಸಃ । ಹಸ್ತನ್ಯಸ್ತಸೂತ್ರತುಲ್ಯಮಪಿ ಜಗದೀಶ್ವರಸ್ಯ ಸಾಮರ್ಥ್ಯಂ ನಾಸ್ತೀತ್ಯೇತದತಿನಿಕೃಷ್ಟಮಿತಿ ಭಾವಃ ॥ ೨೮೭ ॥

ಒಬ್ಬ ನೇಕಾರನು ನೇಯ್ದ ದಾರವನ್ನು ಕಟ್ಟಿಕೊಂಡ ವ್ರತನಿಷ್ಠಳಾದ ಜೈನ ಸ್ತ್ರೀಯೇ ಯಾವ ಸೂತಕಾದಿ ದೋಷಗಳಿಗೂ ತುತ್ತಾಗುವುದಿಲ್ಲವೆಂದ ಮೇಲೆ ತನ್ನಿಂದಲೇ ವ್ಯಾಸರೂಪದಿಂದ ರಚಿಸಲ್ಪಟ್ಟ ದೈವೀ ಮೀಮಾಂಸಾ ಶಾಸ್ತ್ರದ ಏಳುನೂರು ಸೂತ್ರಗಳಿಂದ ಪ್ರತಿಪಾದಿಸಲ್ಪಟ್ಟ ಮಹಿಮೆಯುಳ್ಳ ಮತ್ತು ಯಜ್ಞೋಪವೀತವನ್ನು ಕಂಠದಲ್ಲಿ ಧರಿಸಿದ ವಿಷ್ಣುವಿಗೆ ಯಾವ ಪಾಪಲೇಪವೂ ಇಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕೇ ಎಂದು ಕಾ ಭೀಃ ಎಂಬ ಶ್ಲೋಕದಿಂದ ಕೇಳುತ್ತಿದ್ದಾರೆ-

ಕಾ ಭೀಃ ಸ್ವಗುಣಸಂಬದ್ಧಸೂತ್ರಸಪ್ತಶತೀಪತೇಃ ।
ಕಂಠೋಪಕಂಠೇ ನೃಹರೇಸ್ತ್ರಿಸೂತ್ರೀಸೂತ್ರಿತಸ್ಯ ಚ ॥ ೨೮೮ ॥

**ಅರ್ಥ–** ಸ್ವಗುಣ= ತನ್ನ ಗುಣಗಳೊಂದಿಗೆ ಸಂಬದ್ಧ= ಪ್ರತಿಪಾದಕತ್ವವೆಂಬ ಸಂಬಂಧವನ್ನು ಹೊಂದಿದ ಸೂತ್ರಸಪ್ತಶತೀಪತೇಃ= ಏಳುನೂರು ಸೂತ್ರಗಳನ್ನೊಳಗೊಂಡ, ದೈವೀಮೀಮಾಂಸಾಶಾಸ್ತ್ರಕ್ಕೆ ಪತೇಃ= ರಚಿಸಿದವನಾದ್ದರಿಂದ ಪತಿಯಾದ, ಚ= ಮತ್ತು, ಕಂಠೋಪಕಂಠೇ= ಕಂಠದ ಸಮೀಪದಲ್ಲಿ (ಕಂಠದಲ್ಲಿ), ತ್ರಿಸೂತ್ರೀಸೂತ್ರಿತಸ್ಯ= ಮೂರೆಳೆಯ ಯಜ್ಞೋಪವೀತವನ್ನು ಧರಿಸಿರುವ, ನೃಹರೇಃ= ಪುರುಷೋತ್ತಮನಾದ ಶ್ರೀಹರಿಗೆ, ಕಾಭೀಃ= ಯಾವ ಪಾಪದ ಭಯವು ಇರುತ್ತದೆ?

**ಅನುವಾದ–** ತನ್ನ ಮಹಿಮೆಯನ್ನೇ ಸರ್ವದಾ ಪ್ರತಿಪಾದಿಸುವ ಏಳು ನೂರು ಸೂತ್ರಗಳ ಒಡೆಯನಾದ ಮತ್ತು ತನ್ನ ಕಂಠದಲ್ಲಿ ಯಾವಾಗಲೂ ಯಜ್ಞೋಪವಿತವನ್ನು ಧರಿಸಿರುವ ನರಹರಿಗೆ ಯಾವ ಭಯ?

**ಭಾವವಿಲಾಸಿನೀ–** ತಂತುವಾಯಕೃತೈಕಸೂತ್ರಸಂಬಂಧಮಾತ್ರೇಣ ಪಾಪಾಲೇಪೇ ವ್ಯಾಸಕೃತಶಾಸ್ತ್ರರೂಪ ಸಪ್ತಶತೀಸೂತ್ರಪ್ರತಿಪಾದ್ಯಮಹಿಮ್ನೋ ಯಜ್ಞೋಪವೀತಾಖ್ಯತ್ರಿಸೂತ್ರೀ-ಶೋಭಿತಕಂಠಸ್ಯ ಚ ವಿಷ್ಣೋಃ ಪಾಪಾಲೇಪಃ ಕಿಮು ವಕ್ತವ್ಯ ಇತ್ಯಾಹ – **ಕಾ ಭೀರಿತಿ ॥** ಸ್ವಗುಣಸಂಬದ್ಧೇತ್ಯನೇನಾನಂತಗುಣಪ್ರತಿಪಾದಕತ್ವಂ ಸೂತ್ರಸಪ್ತಶತ್ಯಾಃ ದ್ಯೋತಯತಿ । ಬ್ರಹ್ಮಮೀಮಾಂಸಾಶಾಸ್ತ್ರೇ ಸಯುಕ್ತಿಕಂ ನಿರ್ದೋಷತಯಾ ಪ್ರತಿಪಾದಿತಸ್ಯ । ಲೋಕೇ ಪಾಪಕೃತೋ ಬ್ರಾಹ್ಮಣಸ್ಯ ಶಿಖಾಯಜ್ಞೋಪವೀತಚ್ಛೇದದರ್ಶನಾದ್ ಅಸ್ಯ ಚ ಸದಾ ಅಚ್ಛಿನ್ನವೈಶಿಷ್ಟ್ಯದ್ಯೋತಕಯಜ್ಞೋಪವೀತವತಃ ನ ಕಥಂಚಿದಪಿ ಪಾಪಶಂಕೇತಿ ಭಾವಃ । ಏವಂಚ ಸರ್ವತ್ರಾಸ್ಯ ಗ್ರಂಥಕೃತಃ ಸಾಹಿತ್ಯೋಕ್ತಿರಪಿ ಶಾಸ್ತ್ರರೂಪೈವೇತಿ ದ್ರಷ್ಟವ್ಯಮ್ ॥ ೨೮೮ ॥

**ವಿವರಣೆ–** ತನ್ನ ಮಹಿಮೆಯನ್ನು ಪ್ರತಿಪಾದಿಸುವ ಏಳುನೂರು ದೈವೀ ಮೀಮಾಂಸಾಸೂತ್ರಗಳನ್ನು ರಚಿಸಿರುವ ಮತ್ತು ತನ್ನ ಕಂಠದಲ್ಲಿ ಮೂರೆಳೆಯ ಯಜ್ಞೋಪವೀತವನ್ನು ಧರಿಸಿರುವ ಕ್ಷರಾಕ್ಷರ ಪುರುಷರ ಮಿತಿಯನ್ನು ಮೀರಿದ ಶ್ರೀಹರಿಗೆ ಯಾವ ಪಾಪದ ಲೇಪವಿದ್ದೀತು?

ಏಳು ನೂರು ಸೂತ್ರಗಳಿಂದ ಕೂಡಿದ ದೈವೀಮೀಮಾಂಸಾಶಾಸ್ತ್ರಕ್ಕೆ ಜೈಮಿನಿಗಳೇ ಕರ್ತೃಗಳಾಗಿದ್ದರೂ ಅದರ ಮೊದಲ ಮತ್ತು ಕೊನೆಯ ಸೂತ್ರಗಳನ್ನು ವ್ಯಾಸರೇ

ರಚಿಸಿದ್ದಾರೆ. ಈ ಸಮಗ್ರಶಾಸ್ತ್ರವೂ ನಾರಾಯಣನ ಗುಣಗಳನ್ನು ಪ್ರತಿಪಾದಿಸುವಂತಹದಾಗಿದೆ. ಇದು ಜ್ಞಾನಿಗಳು ಹೇಳಿದ ಅರ್ಥವಾಗಿದೆ.

ಇತರ ಕೆಲವು ಜ್ಞಾನಿಗಳು ಹೇಳುವಂತೆ ಸೂತ್ರವೆಂದರೆ ಬ್ರಹ್ಮಸೂತ್ರಗಳು ಮತ್ತು ಸಪ್ತಶತೀ ಎಂದರೆ ಭಗವದ್ಗೀತೆ. ಇವೆರಡೂ ವ್ಯಾಸ ರಚಿತಗ್ರಂಥಗಳೂ ಭಗವಂತನಗುಣಗಳನ್ನು ಪ್ರತಿಪಾದಿಸುವಂತಹವೇ ಆಗಿವೆ.

ಈ ಜಗತ್ತಿನಲ್ಲಿ ಪಾಪಿಷ್ಠರಾದ ಬ್ರಾಹ್ಮಣರ ಶಿಖೆ ಮತ್ತು ಯಜ್ಞೋಪವೀತಗಳು ಲುಪ್ತವಾಗಿರುತ್ತವೆ. ಹೀಗೆ ಜುಟ್ಟು ಮತ್ತು ಜನಿವಾರಗಳ ಲೋಪ ಅಥವಾ ಛೇದವು ಪತಿತತ್ವ ಮತ್ತು ಪಾಪಗಳಿಗೆ ಸಂಕೇತವಾಗಿದೆ. ಭಗವಂತನು ಧರಿಸಿರುವ ಯಜ್ಞೋಪವೀತವು ಆತನ ಅಖಂಡ, ಅಚ್ಛಿನ್ನ ಮಹಿಮೆಗಳಿಗೆ ಸೂಚಕವಾಗಿದೆ ಆದ್ದರಿಂದ ಆತನಿಗೆ ಯಾವ ಪಾಪವೂ ಇಲ್ಲವೆಂದರ್ಥ.

ಜೈನ ಸ್ತ್ರೀಯು ಸೂತಕದೋಷವನ್ನು ದೂರವಿಡಲು ದಾರದ ಒಂದೇ ಸೂತ್ರವನ್ನು ಕಟ್ಟಿಕೊಂಡಿದ್ದರೆ ಭಗವಂತನು ದಾರದ ಯಜ್ಞೋಪವೀತವನ್ನಲ್ಲದೇ ತನ್ನ ಮಹಿಮೆಯನ್ನೇ ಪ್ರತಿಪಾದಿಸುವ ಅನೇಕಾನೇಕ ಸೂತ್ರಗಳನ್ನೂ ಭಗವದ್‌ಗೀತೆಯನ್ನೂ ಧರಿಸಿದ್ದಾನೆ ಎಂಬ ವಾದಿರಾಜರ ಸಾಹಿತ್ಯ ಸೌಂದರ್ಯದಿಂದ ಕೂಡಿದ ವಾಣಿಯು ಶಾಸ್ತ್ರದ ವಿಷಯಗಳನ್ನು ಹೇಳುತ್ತಿದೆ.

ಶ್ರೀಪರಮಾತ್ಮನಿಗೆ ನಿತ್ಯಮುಕ್ತತ್ವವಿರುವುದರಿಂದ ಸಂಸಾರವಿಲ್ಲವೆಂದು ಹೇಳುತ್ತಿದ್ದಾರೆ ಅಸ್ತ್ಯಾವಶ್ಯಕ-ಧರ್ಮಸ್ಯ ಇತ್ಯಾದಿ ಶ್ಲೋಕದಿಂದ-

**ಅಸ್ತ್ಯಾವಶ್ಯಕಧರ್ಮಸ್ಯ ಪ್ರತ್ಯವಾಯೋಕೃತೌ ಸೃತೌ ।**
**ಮುಕ್ತೇ ಮುಕ್ತತ್ವತೋಸೌ ನ ತತಸ್ತಚ್ಚಾಘವಾರಕಮ್ ॥ ೨೮೯ ॥**

**ಅರ್ಥ–** ಸೃತೌ = ಸಂಸಾರಾವಸ್ಥೆಯಲ್ಲಿ ಆವಶ್ಯಕಧರ್ಮಸ್ಯ = ನಿತ್ಯನೈಮಿತ್ತಿಕ ಕರ್ಮಗಳನ್ನು ಅಕೃತೌ = ಮಾಡದೆ ಇದ್ದರೆ, ಪ್ರತ್ಯವಾಯಃ = ಪಾಪವು, ಅಸ್ತಿ = ಇರುತ್ತದೆ, ಮುಕ್ತೇ = ಮುಕ್ತನಾದ ಪುರುಷನಲ್ಲಿ, ಮುಕ್ತತ್ವತಃ = ಮುಕ್ತತ್ವವೆಂಬ ಕಾರಣದಿಂದಲೇ, ಅಸೌ = ಈ ಪಾಪವು, ನ = ಇಲ್ಲ, ತತಃ = ಆದ್ದರಿಂದ ತಚ್ಚ = ಮುಕ್ತತ್ವವು. ಅಘವಾರಕಂ = ಪಾಪನಾಶಕವಾಗಿದೆ.

**ಅನುವಾದ–** ಸಂಸಾರದಲ್ಲಿರುವಾಗ ನಿತ್ಯನೈಮಿತ್ತಿಕಕರ್ಮಗಳನ್ನು ಅವಶ್ಯವಾಗಿ ಮಾಡಲೇಬೇಕು. ಇಲ್ಲದಿದ್ದರೆ ಪಾಪ ಬರುತ್ತದೆ. ಆದರೆ ಮುಕ್ತರಾದವರಿಗೆ ಈ ದೋಷವಿಲ್ಲ.

**ಭಾವವಿಲಾಸಿನೀ–** ಮುಕ್ತತ್ವಾದೀಶ್ವರಸ್ಯ ಬಂಧೋ ನಾಸ್ತೀತ್ಯೇತತ್ ಪ್ರಪಂಚಯತಿ – ಅಸ್ತೀತ್ಯಾದಿನಾ ॥ ಆವಶ್ಯಕಧರ್ಮಸ್ಯಾಕೃತಾವಿತಿ ಸಂಬಂಧಃ । ಮುಕ್ತೇ ಪುರುಷೇ ಅಸೌ ಪ್ರತ್ಯವಾಯಃ । ಮುಕ್ತತ್ವತಃ ಬಂಧರಹಿತತ್ವಾತ್ । ತಚ್ಚ ಮುಕ್ತತ್ವಂ ಚ ॥ ೨೮೯ ॥

**ವಿವರಣೆ–** ಮುಕ್ತರಾದ ಸಾಮಾನ್ಯಜೀವರಿಗೇನೇ ದೋಷವಿಲ್ಲವೆಂದು ಹೇಳಿದಾಗ ಶ್ರೀಪರಮಾತ್ಮನಾದರೂ ನಿತ್ಯಮುಕ್ತನಾಗಿದ್ದಾನಾದ್ದರಿಂದ ದೋಷದಗಂಧವೂ ಅವನಿಗೆ ಇಲ್ಲವೆಂದು ತಿಳಿಯಬೇಕು. ಹೀಗೆ ಮುಕ್ತತ್ವವೇ ದೋಷಸಂಬಂಧವನ್ನು ತಡೆಯುತ್ತಿರುವಾಗ ಇನ್ನು ನಿತ್ಯಮುಕ್ತತ್ವವು ದೋಷವನ್ನು ತಡೆಯುತ್ತದೆ ಎಂದು ಏನು ಹೇಳಬೇಕು?

**ತಸ್ಮಾದೇವಾಸ್ಮದೀಶೋಽಪಿ ಸರ್ವಸ್ಮಾಚ್ಚ ನ ಲಿಪ್ಯತಾಮ್ ।**
**ಏಕತ್ರಾವಾರಕಂ ಕಸ್ಮಾನ್ನಾಪರತ್ರ ನಿವಾರಕಮ್ ॥ ೨೯೦ ॥**

**ಅರ್ಥ–** ತಸ್ಮಾದೇವ = ಆದ್ದರಿಂದಲೇ, ಅಸ್ಮತ್ = ನಮ್ಮ ಈಶೋಽಪಿ = ಪರಮಾತ್ಮನೂ ಸಹ, ಸರ್ವಸ್ಮಾಚ್ಚ = ಎಲ್ಲದೋಷಗಳಿಂದ, ನಲಿಪ್ಯತಾಂ = ಲೇಪವಿಲ್ಲದೇ ಇರುವವನಾಗಲಿ, ಏಕತ್ರ = ಒಂದು ಸ್ಥಳದಲ್ಲಿ, ವಾರಕಂ = ಕಶ್ಮಲವನ್ನು ತೊಳೆಯುವ ನೀರು, ಅಪರತ್ರ = ಮತ್ತೊಂದು ಕಡೆಯೂ, ಕಸ್ಮಾತ್ = ಏಕೆ, ನ ನಿವಾರಕಂ = ತೊಳೆಯುವುದಿಲ್ಲ?

**ಅನುವಾದ–** ಪುಣ್ಯಪಾಪರೂಪವಾದ ಸಂಸಾರ ಬಂಧನದಿಂದ ಮುಕ್ತರಾದವರಿಗೆ ದೋಷವಿಲ್ಲವೆಂದ ಮೇಲೆ ನಿತ್ಯ ಮುಕ್ತನಾದ ನಮ್ಮ ಶ್ರೀಹರಿಯೂ ಸಮಸ್ತದೋಷಗಳಿಂದ ದೂರನಾದವನಾಗಲಿ. ಒಂದು ಕಡೆಯ ಕೆಸರನ್ನು ತೊಳೆಯುವ ಜಲವು ಇನ್ನೊಂದು ಕಡೆ ಇರುವ ಕೆಸರನ್ನೂ ತೊಳೆಯದೇ ಇರುವುದೇನು?

**ಭಾವವಿಲಾಸಿನೀ–** ತಸ್ಮಾದೇವ ಮುಕ್ತತ್ವಾದೇವ ಸರ್ವಸ್ಮಾತ್ಪುಣ್ಯಪಾಪರೂಪಬಂಧಾತ್ । ಏಕತ್ರ ಕರ್ತವ್ಯಕರ್ಮಾಕರಣೇ ಅಪರತ್ರ ಹಿಂಸಾಽಗಮ್ಯಾಗಮನಾದೌ । ವಿಹಿತಾಕರಣಾದಾಗತ-ಪಾಪವಾರಕಸ್ಯ ನಿಷಿದ್ಧಕರಣಾದಾಗತಪಾಪನಿವಾರಕತ್ವಮಪಿ ಸ್ಯಾದೇವ ನ್ಯಾಯಸಾಮ್ಯಾತ್ । ನಹಿ ಸ್ವಗೃಹಪಂಕಕ್ಷಾಲನಸಮರ್ಥಂ ಜಲಂ ಪರಗೃಹ ಪಂಕಕ್ಷಾಲನಾಸಮರ್ಥಂ ದೃಷ್ಟಮಿತಿ ಭಾವಃ ॥ ೨೯೦ ॥

**ವಿವರಣೆ–** ಮುಕ್ತರಿಗೆ ದೋಷಸಂಪರ್ಕವಾಗದಂತೆ ತಡೆಯುವ ಮುಕ್ತತ್ವವೆಂಬ ಧರ್ಮವು ನಿತ್ಯಮುಕ್ತನಾದ ಪರಮಾತ್ಮನಿಗೂ ದೋಷಸಂಪರ್ಕವಾಗದಂತೆ ತಡೆಯುವುದಿಲ್ಲವೇನು? ವಿಹಿತಕರ್ಮಗಳನ್ನು ಮಾಡದೇ ಇದ್ದಾಗ ಬರುವ ಪಾಪವನ್ನು ತಡೆಹಿಡಿಯುವ ಮುಕ್ತತ್ವವೆಂಬ ಹೇತುವು ನಿಷಿದ್ಧವಾದ ಕರ್ಮಗಳನ್ನು ಮಾಡಿದಾಗ ಬರುವ ಪಾಪವನ್ನು ತಡೆಹಿಡಿಯುವುದಿಲ್ಲವೇನು? ಅವಶ್ಯವಾಗಿ ತಡೆಯುತ್ತದೆಂರ್ಥ.

ಹೇಗೆಂದರೆ ತನ್ನಮನೆಯ ಕಶ್ಮಲವನ್ನು ತೊಳೆಯುವುದಲ್ಲಿ ಸಮರ್ಥವಾದ ಜಲವು ಬೇರೆಮನೆಯ ಕಶ್ಮಲವನ್ನು ತೊಳೆಯುವುದರಲ್ಲಿ ಸಮರ್ಥವಾಗುವುದಿಲ್ಲವೆಂಬುದು ಕಂಡುಬಂದಿಲ್ಲ.

ಪರಮಾತ್ಮನಲ್ಲಿ ಮುಕ್ತತ್ವವೆಂಬ ಹೇತುವು ಇಲ್ಲವೆಂದರೆ ಅದಕ್ಕೆ ಉತ್ತರವನ್ನು ಮುಕ್ತತ್ವಂ ಚ ಎಂಬ ಶ್ಲೋಕದಿಂದ ಹೇಳುತ್ತಿದ್ದಾರೆ-

**ಮುಕ್ತತ್ವಂ ಚ ಸದಾ ಕ್ಲೇಶವರ್ಜಿತತ್ವೇನ ಸಿದ್ಧ್ಯತಿ ॥ ೨೯೧ ॥**

**ಅರ್ಥ–** ಮುಕ್ತತ್ವಂ ಚ = ಮುಕ್ತತ್ವವಾದರೂ, ಸದಾ = ಯಾವಾಗಲೂ, ಕ್ಲೇಶವರ್ಜಿತತ್ವೇನ = ದುಃಖರಹಿತನಾಗಿರುವುದರಿಂದ, ಸಿದ್ಧ್ಯತಿ = ಸಿದ್ಧಿಸುತ್ತದೆ.

**ಅನುವಾದ– ಪರಮಾತ್ಮನಿಗೆ ಮುಕ್ತತ್ವವಾದರೋ ಯಾವಾಗಲೂ ಕ್ಲೇಶರಹಿತನಾಗಿರುವ ಕಾರಣದಿಂದ ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–** ನನ್ವಸಿದ್ಧೋ ಹೇತುರಿತ್ಯತ ಆಹ – **ಮುಕ್ತತ್ವಂ ಚೇತಿ ॥** ದುಃಖಮೇವ ಹಿ ಸಂಸಾರಃ। ದೇಹಗೇಹಾದಿಕಂ ತು ದುಃಖಸಾಧನತ್ವಾತ್ ಸಂಸಾರ ಇತ್ಯುಪಚರ್ಯತೇ । ಅತಃ ಸರ್ವದಾ ದುಃಖರಹಿತತ್ವಾತ್ ಮುಕ್ತತ್ವಂ ಹರೇಃ ಸೇತ್ಸ್ಯತೀತಿ ಭಾವಃ ॥ ೨೯೧ ॥

**ವಿವರಣೆ–** ದುಃಖವೇ ಸಂಸಾರವೆಂದು ಹೇಳಲ್ಪಡುತ್ತದೆ. ದೇಹ ಮನೆ ಮಠ ಇವೆ ಮೊದಲಾದವುಗಳು ದುಃಖಕ್ಕೆ ಸಾಧನವಾಗಿದ್ದರಿಂದ ಸಂಸಾರವೆಂದು ಔಪಚಾರಿಕವಾಗಿ ಹೇಳಲ್ಪಡುತ್ತದೆ. ಆದ್ದರಿಂದ ಯಾವಾಗಲೂ ದುಃಖರಹಿತನಾದ್ದರಿಂದ ಮುಕ್ತತ್ವವು ಪರಮಾತ್ಮನಿಗೆ ಕೂಡುತ್ತದೆ. ವಿಮತಃ ಮುಕ್ತತ್ವವಾನ್ ಕ್ಲೇಶರಹಿತತ್ವಾತ್ ಎಂಬ ಅನುಮಾನದಲ್ಲಿ ಹೇತುವಿಗೆ ಅಸಿದ್ಧಿ ಎಂಬ ದೋಷವು ಇಲ್ಲವೆಂದರ್ಥ.

**ತಚ್ಚ ಜನ್ಮಜರಾಮೃತ್ಯುಕ್ಷುತ್ತೃಡಾದಿವಿವರ್ಜನಾತ್ ।**
**ಅನುಮೀಯತೇ ಶ್ರಿಯಾ ಸಾಕಂ ಸರ್ಪತಲ್ಪಪರಾಯಣೇ ।**
**ನಾರಾಯಣೇ ಪಯಸ್ಸಿಂಧೌ ಕೃತಧಾಮ್ನಿ ತ್ರಿಧಾಮ್ನಿ ನಃ ॥ ೨೯೨ ॥**

**ಅರ್ಥ–** ತತ್ ಚ= ದುಃಖರಹಿತತ್ತ್ವವಾದರೂ, ಜನ್ಮ= ಹುಟ್ಟು, ಜರಾ= ಮುಪ್ಪು, ಮೃತ್ಯು= ಸಾವು, ಕ್ಷುತ್= ಹಸಿವೆ, ತೃಟ್= ಬಾಯಾರಿಕೆ, ಆದಿ= ಇತ್ಯಾದಿಗಳ, ವರ್ಜನಾತ್= ಅಭಾವವಿರುವುದರಿಂದ, ಪಯಃ ಸಿಂಧೌ= ಕ್ಷೀರಸಾಗರದಲ್ಲಿ, ಕೃತಧಾಮ್ನಿ= ನೆಲೆನಿಂತಿರುವ, ಶ್ರಿಯಾ= ಲಕ್ಷ್ಮೀದೇವಿಯಿಂದ, ಸಾಕಂ= ಕೂಡಿಕೊಂಡು, ಸರ್ಪತಲ್ಪ= ಆದಿಶೇಷನ ಹಾಸಿಗೆಯಲ್ಲಿ, ಪರಾಯಣೇ= ಮಲಗಿರುವ, ನಃ= ನಮ್ಮ ತ್ರಿಧಾಮ್ನಿ= ವೈಕುಂಠ, ಶ್ವೇತದ್ವೀಪ, ಅನಂತಾಸನ ಎಂಬ ಲೋಕಗಳಲ್ಲಿರುವುದರಿಂದ ತ್ರಿಧಾಮಾ ಎಂದು ಹೆಸರುಳ್ಳ, ನಾರಾಯಣೇ= ನಾರಾಯಣನಲ್ಲಿ, ಅನುಮೀಯತೇ= ಊಹಿಸಲ್ಪಡುತ್ತದೆ.

**ಅನುವಾದ–** ವೈಕುಂಠ, ಶ್ವೇತದ್ವೀಪ, ಅನಂತಾಸನಗಳೆಂಬ ಮೂರುಲೋಕಗಳಲ್ಲಿಯೂ ಇರುವುದರಿಂದ ಭಗವಂತನು ತ್ರಿಧಾಮಾ ಎನಿಸಿದ್ದಾನೆ. ಅವನು ಪ್ರಳಯಕಾಲದಲ್ಲಿಯೂ ಕ್ಷೀರಸಮುದ್ರದಲ್ಲಿ ಶೇಷತಲ್ಪದಲ್ಲಿ ಲಕ್ಷ್ಮೀದೇವಿಯೊಂದಿಗೆ ಪವಡಿಸಿದ್ದಾನೆ. ನಮ್ಮ ನಾರಾಯಣನಿಗೆ ಯಾವ ಕಾಲದಲ್ಲಿಯೂ ಹುಟ್ಟು, ಮುಪ್ಪು, ಸಾವು, ಹಸಿವೆ, ನೀರಡಿಕೆಗಳು ಇಲ್ಲದಿರುವುದರಿಂದ ಆತನಿಗೆ ಯಾವ ದುಃಖವೂ ಇಲ್ಲವೆಂದೂ ಊಹಿಸಬಹುದಾಗಿದೆ.

**ಭಾವವಿಲಾಸಿನೀ–** ತತ್ಕ್ಲೇಶವರ್ಜಿತತ್ವಂ ಸರ್ಪತಲ್ಪಪರಾಯಣೇ ಮಹಾಪ್ರಲಯ ಇತಿ ಶೇಷಃ । ಪ್ರಲಯೇ ಸರ್ಪತಲ್ಪಪರಾಯಣ ಇತಿ ಹೇತುಗರ್ಭಂ ವಿಶೇಷಣಮ್ । ಪ್ರಲಯೇಽಪಿ ಬ್ರಹ್ಮಣಃ ಶತವರ್ಷಪರ್ಯಂತಮ್ ಅನ್ನಾದ್ಯಭಾವೇಽಪಿ ಸುಖಿತಯಾ ಉರ್ವರಿತಸ್ಯ ಜನ್ಮಾದ್ಯಭಾವೋಽಪಿ ಸಿದ್ಧ್ಯತೀತಿ ಹೇತುಸೂಚನಾತ್ । ನೋಽಸ್ಮಾಕಂ ನಾರಾಯಣ ಇತಿ ಸಂಬಂಧಃ । ತತಶ್ಚಾಯಂ ಪ್ರಯೋಗಃ । ವಿಷ್ಣುರ್ಮುಕ್ತೋ ಭವಿತುಮರ್ಹತಿ ದುಃಖರಹಿತತ್ವಾತ್ ಸಂಪ್ರತಿಪನ್ನಮುಕ್ತವತ್ । ವಿಷ್ಣುರ್ನಿರ್ದುಃಖೋ ಭವಿತುಮರ್ಹತಿ ಜನ್ಮಾದಿಶೂನ್ಯತ್ವಾತ್ ಸಮ್ಮತಿಪನ್ನಮುಕ್ತವತ್ । ವಿಷ್ಣುರ್ಜನ್ಮಾದಿರಹಿತೋ ಭವಿತುಮರ್ಹತಿ ಪ್ರಲಯೇಽಪ್ಯನಷ್ಟದೇಹಾದಿಮತ್ತ್ವಾತ್ ಸಂಪ್ರತಿಪನ್ನಮುಕ್ತವದಿತಿ । ತ್ರಿಧಾಮ್ನೀತ್ಯನೇನ ತದ್ಧಾಮತ್ರಯೇಽಪಿ ಕ್ಲೇಶೋ ನಾಸ್ತೀತಿ ಸೂಚಿತಮ್ ॥ ೨೯೨ ॥

**ವಿವರಣೆ–** ಪ್ರಲಯದಲ್ಲಿಯೂ ಸರ್ಪತಲ್ಪ ಪಾರಾಯಣನಾಗಿರುತ್ತಾನೆಂಬ ವಿಶೇಷಣವು ಒಂದು ಹೇತುವನ್ನು ಒಳಗೊಂಡಿದೆ. ಪ್ರಲಯದ ಬ್ರಹ್ಮನ ನೂರು ವರ್ಷಗಳಷ್ಟು ದೀರ್ಘಕಾಲವೂ ಅನ್ನಾಹಾರಾಗಳಿಲ್ಲದೆಯೂ ಸುಖವಾಗಿರುವ ಭಗವಂತನಿಗೆ ಹುಟ್ಟು ಸಾವು ಮುಂತಾದವುಗಳಿಲ್ಲವೆಂಬ ಸಾಧ್ಯವನ್ನು, ಪ್ರಳಯದಲ್ಲಿಯೂ ನಾಶಕ್ಕೀಡಾಗದ ಶರೀರಾದಿಗಳುಳ್ಳವನಾದ್ದರಿಂದ ಎಂಬ ಹೇತುವಿನಿಂದ ಸಾಧಿಸಬಹುದಾಗಿದೆ. ಈ ಹೇತುವೇ ಸರ್ಪತಲ್ಪ ಪರಾಯಣೇ ಎಂಬ ವಿಶೇಷಣದಿಂದ ಸೂಚಿತವಾಗಿದೆ.

ಆದ್ದರಿಂದ ಹೀಗೆ ಅನುಮಾನಗಳಾಗುತ್ತವೆ :-

1) ನಾರಾಯಣನು (ಪಕ್ಷ) ಜನ್ಮಾದಿರಹಿತನಾಗಿದ್ದಾನೆ (ಸಾಧ್ಯ) ಪ್ರಳಯದಲ್ಲಿಯೂ ನಾಶಕ್ಕೊಳಗಾಗದ ದೇಹಾದಿಗಳುಳ್ಳವನಾದ್ದರಿಂದ (ಹೇತು).

2) ನಾರಾಯಣನು (ಪಕ್ಷ) ದುಃಖರಹಿತನಾಗಿದ್ದಾನೆ (ಸಾಧ್ಯ) ಜನ್ಮಾದಿರಹಿತನಾದ್ದರಿಂದ (ಹೇತು)

3) ನಾರಾಯಣನು (ಪಕ್ಷ) ನಿತ್ಯಮುಕ್ತನಾಗಿದ್ದಾನೆ (ಸಾಧ್ಯ) ದುಃಖರಹಿತನಾದ್ದರಿಂದ (ಹೇತು).

ಈ ಮೂರೂ ಅನುಮಾನಗಳಿಗೂ, ನಮಗೂ ಜೈನಾದಿಗಳಿಗೂ ಸಂಪ್ರತಿಪನ್ನನಾದ ಮುಕ್ತ ಜೀವನೇ ದೃಷ್ಟಾಂತನಾಗಿದ್ದಾನೆ. ಹಿಂದೆ ಹೇಳಿದ ಮೂರು ಲೋಕಗಳಲ್ಲಿಯೂ ಭಗವಂತನಿಗೆ (ಆತನ ಭಕ್ತರಾದ ಮುಕ್ತರಿಗೂ) ದುಃಖವಿಲ್ಲವೆಂಬ ವಿಷಯವನ್ನು ತ್ರಿಧಾಮಾ ಎಂಬ ಶಬ್ದದಿಂದ ತಿಳಿಯಬಹುದಾಗಿದೆ.

ಶ್ರೀಹರಿಗೆ ಕ್ಲೇಶಾದಿಗಳಿಲ್ಲವೆನ್ನುವುದನ್ನು ಬೇರೊಂದು ಯುಕ್ತಿಯಿಂದ ಹೇಳುತ್ತಾರೆ ಯುಗೇ ಯುಗೇ ಇತ್ಯಾದಿ ಶ್ಲೋಕದಿಂದ -

**ಯುಗೇಯುಗೇ ಪರಕ್ಲೇಶಹತ್ಯೈ ಚಾವತಿತೀರ್ಷತಿ ।**
**ಅನುತ್ತೀರ್ಣಃ ಸ್ವಯಂ ಪಂಕಾತ್ ಪರಂ ತಾರಯತೀಹ ಕಃ ॥ ೨೯೩ ॥**

**ಅರ್ಥ–** ಹರಿಃ= ಶ್ರೀಹರಿಯು, ಯುಗೇ ಯುಗೇಚ = ಪ್ರತಿ ಯುಗದಲ್ಲಿಯೂ, ಪರಕ್ಲೇಶ = ಬೇರೆಯವರ ದುಃಖವನ್ನು, ಹತ್ಯೈ = ನಾಶಮಾಡುವುದಕ್ಕಾಗಿ, ಅವತಿತೀರ್ಷತಿ = ಅವತಾರ ಮಾಡಲು ಇಚ್ಛೆಪಡುತ್ತಾನೆ, ಸ್ವಯಂ = ತಾನೇ, ಪಂಕಾತ್ = ಕೆಸರಿನಿಂದ, ಅನುತ್ತೀರ್ಣಃ = ದಾಟಲಶಕ್ತನಾದ, ಕಃ = ಯಾವನು, ಪರಂ = ಬೇರೊಬ್ಬನನ್ನು, ಇಹ = ಈ ಲೋಕದಲ್ಲಿ, ತಾರಯತಿ = ದಾಟಿಸುತ್ತಾನೆ.

**ಅನುವಾದ–** ತನಗೇನೂ ಪ್ರಯೋಜನವಿಲ್ಲದಿದ್ದರೂ ಮತ್ತೊಬ್ಬರ ದುಃಖಗಳನ್ನು ಪರಿಹರಿಸುವುದಕ್ಕಾಗಿಯೇ ಶ್ರೀಹರಿಯು ಪ್ರತಿಯುಗಗಳಲ್ಲಿಯೂ ಅವತಾರಗಳನ್ನು ಮಾಡುತ್ತಾನೆ. ತಾನೇ ಕೆಸರಿನಲ್ಲಿ ಸಿಲುಕಿಕೊಂಡು ಮೇಲೇಳಲಾಗದೇ ಪರದಾಡುತ್ತಿರುವ ಮನುಷ್ಯನು ಕೆಸರಿನಲ್ಲಿ ಸಿಲುಕಿಕೊಂಡ ಮತ್ತೊಬ್ಬನನ್ನು ಮೇಲೆಬ್ಬಿಸಬಲ್ಲನೇ?

**ಭಾವವಿಲಾಸಿನೀ–** ತಸ್ಯ ಕ್ಲೇಶಾಭಾವೇ ಯುಕ್ತ್ಯಂತರಂ ಚಾಹ – **ಯುಗೇ ಯುಗ ಇತಿ ॥** ಅವತಿತೀರ್ಷತಿ ಅವತಾರಂ ಕರ್ತುಮಿಚ್ಛತಿ । ನಾರಾಯಣ ಇತಿ ಪೂರ್ವೇಣಾನ್ವಯಃ । ಅವ-ತಿತೀರ್ಷತೀತಿ ವದತಾ ತದಾಪ್ಯವತರಣಮೇವ ನ ಜನ್ಮೇತಿ ಸೂಚಿತಮ್ । ಪರಮನ್ಯಮ್ । ಇಹ ಲೋಕೇ ॥ ೨೯೩ ॥

ಪತ್ನಿವುಳ್ಳವನಾದ್ದರಿಂದ ನಾರಾಯಣನಿಗೂ ಸಂಸಾರ ಇದೆ ಎಂದು ಜೈನಮತದ ಶಂಕೆಯನ್ನು ನಿವಾರಿಸುತ್ತಾರೆ ನಿತ್ಯಮುಕ್ತಾಚ ಇತ್ಯಾದಿ ಶ್ಲೋಕದಿಂದ-

**ನಿತ್ಯಮುಕ್ತಾಚ ಸಾ ಭಾರ್ಯಾ ನಿತ್ಯಮುಕ್ತಃ ಪತಿಶ್ಚ ಸಃ ।**
**ಬಾಹುಭ್ಯಾಮೇವ ಬಂಧೋಸ್ತಿ ನ ತಯೋರ್ಭವಬಂಧನಂ ॥ ೨೯೪ ॥**

**ಅರ್ಥ–** ಸಾ ಭಾರ್ಯಾ = ಪತ್ನಿಯಾದ ಆ ಲಕ್ಷ್ಮೀದೇವಿಯು, ನಿತ್ಯಮುಕ್ತಾ = ನಿತ್ಯಮುಕ್ತಳು, ಸಃಪತಿಶ್ಚ= ಆ ನಾರಾಯಣನಾದರೂ, ನಿತ್ಯಮುಕ್ತಃ = ನಿತ್ಯಮುಕ್ತನಾಗಿದ್ದಾನೆ,

ತಯೋಃ = ಆ ಲಕ್ಷ್ಮೀನಾರಾಯಣರಿಗೆ, ಬಾಹುಭ್ಯಾಮೇವ = ಬಾಹುಗಳಿಂದ ಮಾತ್ರ, ಬಂಧಃ = ಬಂಧನವು, ಅಸ್ತಿ = ಇರುತ್ತದೆ, ಭವಬಂಧನಂ = ಸಂಸಾರಬಂಧನವು, ನ = ಇರುವುದಿಲ್ಲ.

**ಅನುವಾದ–** ಪತಿಯಾದ ನಾರಾಯಣನು ನಿತ್ಯಮುಕ್ತನಾಗಿದ್ದರೆ ಪತ್ನಿಯಾದ ಲಕ್ಷ್ಮೀದೇವಿಯೂ ನಿತ್ಯಮುಕ್ತಳಾಗಿದ್ದಾಳೆ. ಅವರಿಬ್ಬರಿಗೆ ಸಂಸಾರದ ಯಾವ ಬಂಧನವೂ ಇಲ್ಲ; ಇರುವ ಒಂದೇ ಬಂಧನವೆಂದರೆ ಪರಸ್ಪರ ಬಾಹುಗಳ ಪ್ರೇಮಬಂಧನ. ಆದ್ದರಿಂದ ನಾರಾಯಣನು ಸಪತ್ನೀಕನಾದರೂ ಆತನಿಗೆ ಸಂಸಾರವಿಲ್ಲ.

**ಭಾವವಿಲಾಸಿನೀ–** ನನು ಕಲತ್ರವತ್ತ್ವಾನ್ನಾರಾಯಣಸ್ಯ ಸಂಸಾರ ಇತಿ ಜೈನಾದೀನಾಂ ಶಂಕಾಂ ಪರಿಹರತಿ – **ನಿತ್ಯಮುಕ್ತಾ ಚೇತ್ಯಾದಿನಾ** ॥ ಸಾ ಭಾರ್ಯಾ ಲಕ್ಷ್ಮೀಃ ಸ ಪತಿರ್ನಾರಾಯಣಃ। ಉಭಯೋರಪಿ ಪ್ರಲಯೇಽಪ್ಯವಿನಷ್ಟದೇಹತ್ವೇನ ಪತಿವತ್ ಪತ್ನ್ಯಾ ಅಪಿ ಮುಕ್ತತ್ವಸಾಧನಸೌಲಭ್ಯಾದಿತಿ ಭಾವಃ। ಭಾರ್ಯಾ ಹಿ ನ ಸ್ವತ ಏವ ಸಂಸಾರರೂಪಾ। ಅಪಿ ತು ಸಂಸಾರದುಃಖಸಾಧನತಯಾ । ಭಾರ್ಯಾಯಾ ಭರ್ತುರ್ದುಃಖಹೇತುತ್ವಂ ಚ ಸ್ವಜರಾಮರಣಾದಿನಾ ಲೋಕೇ ದೃಷ್ಟಮ್। ಪ್ರಲಯೇಽಪ್ಯವಿನಷ್ಟದೇಹಾ ಲಕ್ಷ್ಮೀರ್ನ ತಾದೃಶೀತಿ ಕಥಂ ತಸ್ಯಾಃ ಸಂಸಾರಹೇತುತ್ವಮಿತಿ ಭಾವೇನಾಹ – **ಬಾಹುಭ್ಯಾಮೇವೇತಿ** ॥ ತಯೋಃ ಲಕ್ಷ್ಮೀನಾರಾಯಣಯೋಃ । ಬಾಹುಭ್ಯಾಮೇವ ಬನ್ಧೋಽಸ್ತೀತಿ ಸರಸೋಕ್ತಿಃ । ಆಲಿಂಗನಮಿತ್ಯರ್ಥಃ। ನನು ದುಃಖಾಹೇತುತ್ವೇಽಪಿ ಸ್ತ್ರೀತ್ವಾದೇವ ಸಂಸಾರಹೇತುತ್ವಮಿತಿ ಚೇತ್, ತರ್ಹಿ ಪುಂಸ್ತ್ವಾದೇವ ಭವದೀಯಮುಕ್ತಾನಾಮಪಿ ಕುತೋ ನ ಸಂಸಾರಹೇತುತ್ವಮ್? ಪುಂಸಾಂ ಸ್ತ್ರ್ಯಾದಿವಿಷಯಾಶಾಯಾ ಅಪರಿಹಾರಾತ್। ಅಲೌಕಿಕಪುರುಷತ್ವಾನ್ನ ತದಾಶೇತಿ ಚೇತ್, ತರ್ಹಿ ಅಲೌಕಿಕಸ್ತ್ರೀತ್ವಾದಿಯಮಪಿ ನ ಸಂಸಾರಹೇತುರಿತಿ ಸಮಮ್। ನಚ ಮುಕ್ತೌ ಸ್ತ್ರೀಣಾಮ-ಭಾವಃ। ಪುರುಷಾಣಾಮಪ್ಯಭಾವಾಪಾತಾತ್। ಮುಕ್ತ್ಯರ್ಥಂ ವ್ರತಾದಿಕಮಾಚರತಃ ಪುರುಷಸ್ಯ ಮುಕ್ತಾವಾವಶ್ಯಕತಾ ಚೇತ್, ತರ್ಹಿ ತಾದೃಶಸ್ತ್ರೀಣಾಮಪಿ ಮುಕ್ತೌ ಕಥಂ ನಾವಶ್ಯಕತಾ। ನನು ತಾಸಾಮಪಿ ಪುಂಸ್ತ್ವಾಪತ್ತ್ಯೈವಮುಕ್ತಿರಿತಿ ಚೇತ್, ತರ್ಹಿ ಪುಂಸಾಮಪಿ ಸ್ತ್ರೀತ್ವಾಪತ್ತ್ಯೈವಮುಕ್ತಿರಿತಿ ಮುಕ್ತೌ ಪುಂಸಾಮೇವಾಭಾವಃ ಕಿಂ ನ ಸ್ಯಾತ್? ವಿನಿಗಮನೇ ಕಾರಣಾಭಾವಾದುಭಯೋರಪಿ ಮುಕ್ತಾವಾವಶ್ಯಕತೇತ್ಯತೋ ಯತ್ಕಿಂಚಿದೇತತ್। ವಕ್ಷ್ಯತಿ ಚೈತದ್ ಗ್ರಂಥಕಾರಃ ಸ್ವಯ-ಮೇವ ॥ ೨೯೪ ॥

**ವಿವರಣೆ–** ಲಕ್ಷ್ಮೀನಾರಾಯಣರಿಬ್ಬರೂ ಪ್ರಳಯದಲ್ಲಿಯೂ ನಾಶಕ್ಕೀಡಾಗದ ದೇಹವುಳ್ಳವರಾದ್ದರಿಂದ ಪತಿಯಾದ ನಾರಾಯಣನಂತೆ ಪತ್ನಿಯಾದ ಲಕ್ಷ್ಮೀಯೂ ನಿತ್ಯಮುಕ್ತಳೆಂದು ಸಾಧಿಸಬಹುದಾಗಿದೆ. ಈ ಜಗತ್ತಿನ ಹೆಂಡತಿಯರು ಸ್ವತಃ ಸಂಸಾರ ರೂಪರಲ್ಲ; ಹೊರತು ಸಾಂಸಾರಿಕ ದುಃಖಕ್ಕೆ ಸಾಧನರು ಮಾತ್ರ. ತನ್ನ ಮುಪ್ಪು, ಸಾವು ಇತ್ಯಾದಿಗಳ ಮೂಲಕ ಲೌಕಿಕ ಹೆಂಡತಿಯು ಗಂಡ ಮೊದಲಾದವರ ದುಃಖಕ್ಕೆ

ಕಾರಣಳಾಗುತ್ತಾಳೆ. ಆದರೆ ಪ್ರಳಯದಲ್ಲಿಯೂ ನಾಶಹೊಂದದ ಶರೀರವುಳ್ಳ ಲಕ್ಷ್ಮೀದೇವಿಯು ನಾರಾಯಣನ ಸಂಸಾರಕ್ಕೆ ಕಾರಣಳಾಗುವುದಿಲ್ಲ.

ಅವಳು ದುಃಖಕಾರಣಳಾಗಿದ್ದರೂ ಸ್ತ್ರೀಯಾದ ಅವಳ ಸಂಗವೇ ನಾರಾಯಣನ ಸಂಸಾರಕ್ಕೆ ಕಾರಣವಾಗುವುದೆಂಬ ಆಕ್ಷೇಪವೂ ಯುಕ್ತವಲ್ಲ. ಏಕೆಂದರೆ ನಿಮ್ಮ ಮತದಲ್ಲಿ ಹೇಳಲ್ಪಟ್ಟ ಮುಕ್ತರೂ ಪುರುಷರಾದ್ದರಿಂದಲೇ ತಾವೇ ಸಂಸಾರಿಗಳಾಗುವುದಕ್ಕೆ ಕಾರಣರಾಗಬೇಕಾದೀತು. ಏಕೆಂದರೆ ಪುರುಷರಿಗೆ ಸ್ತ್ರೀ ಮೊದಲಾದ ವಿಷಯ ಪದಾರ್ಥಗಳ ಬಗ್ಗೆ ಇರುವ ರಾಗವು ಸುಲಭವಾಗಿ ನಾಶವಾಗುವಂತಹದಲ್ಲ. ಆ ಮುಕ್ತರು ಅಲೌಕಿಕ ಪುರುಷರಾದ್ದರಿಂದ ಅವರಿಗೆ ಅಂತಹ ರಾಗಾದಿಗಳು ಇರುವುದಿಲ್ಲವೆಂದು ನೀವು ಸಮಾಧಾನ ಹೇಳುವುದಾದರೆ ಈ ಲಕ್ಷ್ಮೀದೇವಿಯೂ ಅಲೌಕಿಕ ಸ್ತ್ರೀಯಾದ್ದರಿಂದ ನಾರಾಯಣನ ಸಂಸಾರಕ್ಕೆ ಕಾರಣಳಾಗಲಾರಳು.

ನಮ್ಮ ಮುಕ್ತಿಯಲ್ಲಿ ಸ್ತ್ರೀಯರೇ ಇರುವುದಿಲ್ಲವೆಂದು ನೀವು ಹೇಳಿದರೆ ಪುರುಷರಾದರೂ ಹೇಗೆ ಇರಲು ಸಾಧ್ಯವೆಂಬ ಪ್ರಶ್ನೆ ಬರುತ್ತದೆ. ಮುಕ್ತಿಯನ್ನು ಪಡೆಯುವುದಕ್ಕಾಗಿಯೇ ಪುರುಷರು ವ್ರತನಿಯಮಗಳನ್ನು ಆಚರಿಸುವುದರಿಂದ ಮುಕ್ತಿಯಲ್ಲಿ ಪುರುಷರು ಇರುವುದು ಅವಶ್ಯಕವೆಂದು ಹೇಳಿದರೆ ಮುಕ್ತಿಗಾಗಿ ವ್ರತಾದಿಗಳನ್ನು ಸ್ತ್ರೀಯರೂ ಮಾಡುವುದರಿಂದ ಸ್ತ್ರೀಯರೂ ಮುಕ್ತಿಯಲ್ಲಿ ಇರುವುದು ಅವಶ್ಯಕವಾಗಿದೆ ಎಂದು ಹೇಳಬಹುದಾಗಿದೆ.

ನಮ್ಮ ಜೈನಮತದಲ್ಲಿ ಸ್ತ್ರೀಯರು ಪುರುಷರಾದ ಬಳಿಕವೇ ಮೋಕ್ಷಕ್ಕೆ ಹೋಗುವುದರಿಂದ ಅಲ್ಲಿ ಸ್ತ್ರೀಯರು ಇರುವುದಿಲ್ಲವೆಂದು ಹೇಳುವುದಾದರೆ ಪುರುಷರೂ ಸ್ತ್ರೀಯರಾದ ಬಳಿಕವೇ ಮೋಕ್ಷಕ್ಕೆ ಹೋಗುವುದರಿಂದ ಅಲ್ಲಿ ಪುರುಷರು ಇರುವುದಿಲ್ಲವೆಂದೂ ಹೇಳಬೇಕಾಗುತ್ತದೆ. ಹೀಗೆ ಯಾವುದನ್ನೂ ನಿರ್ಧರಿಸಲೂ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಸ್ತ್ರೀಪುರುಷರಿಬ್ಬರೂ ಮುಕ್ತಿಯಲ್ಲಿ ಇರುತ್ತಾರೆಂದೇ ಒಪ್ಪಬೇಕು. ಮೂಲಕಾರರೇ ಈ ವಿಷಯವನ್ನು ಮುಂದೆ ಹೇಳುತ್ತಾರೆ.

**ಯುಕ್ತ್ಯಂತರದಿಂದ ಶ್ರೀಹರಿಗೆ ಮುಕ್ತತ್ವವನ್ನು ಉಪಪಾದನೆ ಮಾಡುತ್ತಾರೆ ಅನಾದ್ಯೋಃ ಇತ್ಯಾದಿ ಶ್ಲೋಕದಿಂದ-**

**ಅನಾದ್ಯೋರ್ನ ಭವಾದ್ಯೋಸ್ತಿ ಭವೋಹ್ಯೇಷ ಪುನರ್ಭವಃ ॥ ೨೯೫ ॥**

**ಅರ್ಥ–** ಅನಾದ್ಯೋಃ = ಅನಾದಿಯಾಗಿರುವ ಲಕ್ಷ್ಮೀನಾರಾಯಣರಿಗೆ, ಭವಾದ್ಯಃ = ಜನ್ಮಾದಿ ಸಂಸಾರ ಮತ್ತು ಸಂಸಾರ ಧ್ವಂಸವು, ನ ಅಸ್ತಿ = ಇರುವುದಿಲ್ಲ, ಏಷಃಭವಃ = ಈ ಸಂಸಾರವು, ಪುನರ್ಭವಃ = ಪುನಃ ಉತ್ಪತ್ತಿ ಇರುವುದರಿಂದ ಪುನರ್ಭವ ಎಂಬ ಸಂಜ್ಞೆವುಳ್ಳದ್ದು

**ಅನುವಾದ–** ಅನಾದಿಯಾದ ಲಕ್ಷ್ಮೀನಾರಾಯಣರಿಗೆ ದೇಹದ ಉತ್ಪತ್ತಿರೂಪವಾದ ಸಂಸಾರವಾಗಲೀ ಸಂಸಾರಧ್ವಂಸವಾಗಲೀ ಇಲ್ಲ. ಈ ಸಂಸಾರಕ್ಕೆ ಪುನಃ ಪುನಃ ದೇಹದ ಉತ್ಪತ್ತಿಯುಳ್ಳದ್ದು ಎಂಬ ಅರ್ಥದಲ್ಲಿ ಪುನರ್ಭವ ಎಂದು ಹೆಸರಿದೆಯಷ್ಟೇ ?

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ಮುಕ್ತತ್ವಮುಪಪಾದಯತಿ – **ಅನಾದ್ಯೋರಿತಿ ॥** ಭವಃ ಸಂಸಾರಃ । ಆದ್ಯಪದೇನ ಸಂಸಾರಧ್ವಂಸೋ ಗೃಹ್ಯತೇ । ಅನಾದಿಕಾಲಮಾರಭ್ಯ ಅನುತ್ಪನ್ನೇನ ಕೇವಲಂ ಸುಖಹೇತುನಾ ದೇಹೇನ ವಿಶಿಷ್ಟಯೋಃ ಕಥಂ ಸಂಸಾರ ಇತಿ ಭಾವಃ । ನನ್ವನಾದಿತ್ವೇನ ಜನ್ಮಾಭಾವಸಿದ್ಧಾವಪಿ ಸಂಸಾರಾಭಾವಃ ಕಥಂ ಸಿದ್ಧ್ಯೇದಿತ್ಯತ ಆಹ – **ಭವೋ ಹೀತಿ ॥** ಏಷ ಭವ ಇತಿ ಸಂಬಂಧಃ । ಭವಃ ಸಂಸಾರಃ ಪುನರ್ಭವಃ ನಿಘಂಟ್ವಾದೌ ಪುನಃಪುನರುತ್ಪತ್ತ್ಯಾ ಪುನರ್ಭವ-ಸಂಜ್ಞಿತಃ । ಉತ್ಪತ್ತ್ಯಭಾವೇ ತು ಅಪುನರ್ಭವ ಏವೇತಿ ಕಥಮನಾದ್ಯೋರ್ಭವಾದ್ಯ ಇತಿ ಭಾವಃ । ನಚಾನಾದಿತ್ವಮಸಿದ್ಧಮ್ । ರುದ್ರಪಿತುರ್ಬ್ರಹ್ಮಣ ಇವ ಬ್ರಹ್ಮಪಿತುರ್ನಾರಾಯಣಸ್ಯೇವ ನಾರಾಯಣಪಿತುಃ ಕಸ್ಯಚಿಲ್ಲೋಕೇ ಪ್ರಸಿದ್ಧ್ಯಭಾವಾದೇವಾನಾದಿತ್ವಸಿದ್ಧೇಃ ॥ ೨೯೫ ॥

**ವಿವರಣೆ–** ಅನಾದಿ ಕಾಲದಿಂದಾರಂಭಿಸಿ ಉತ್ಪತ್ತಿಇಲ್ಲದೆ ಇರುವ, ಸುಖಕ್ಕೆ ಹೇತುವಾದ ದೇಹದಿಂದ ವಿಶಿಷ್ಟರಾದ ಲಕ್ಷ್ಮೀನಾರಾಯಣರಿಗೆ ಜನ್ಮವಾಗಲೀ, ಸಂಸಾರಧ್ವಂಸವಾಗಲೀ ಇಲ್ಲ. ಅನಾದಿತ್ವವೂ ಸಿದ್ಧವಾಗಿದೆ. ರುದ್ರನಿಗೆ ತಂದೆ ಚತುರ್ಮುಖಬ್ರಹ್ಮ ಚತುರ್ಮುಖಬ್ರಹ್ಮನ ತಂದೆ ನಾರಾಯಣನು, ನಾರಾಯಣನ ತಂದೆಗೆ ಲೋಕದಲ್ಲಿ ಪ್ರಸಿದ್ಧಿ ಇಲ್ಲದೇ ಇರುವುದರಿಂದ ಅನಾದಿತ್ವಸಿದ್ಧವಾಯಿತು.

**ಪತ್ಯಾ ತೇನ ಕುತೋಽಪತ್ಯಶತವತ್ಯಭವನ್ನ ಸಾ ।**
**ಸತ್ಸು ದಾರೇಷು ನಾಭೇಃ ಸ ಪುತ್ರಂ ಕಸ್ಮಾದಜೀಜನತ್ ॥ ೨೯೬ ॥**

**ಅರ್ಥ–** ಸಾ = ಆ ಲಕ್ಷ್ಮೀಯು, ತೇನ ಪತ್ಯಾ= ಆ ಪತಿಯಾದ ನಾರಾಯಣನಿಂದ, ಅಪತ್ಯಶತವತೀ = ನೂರಾರು ಮಕ್ಕಳುವುಳ್ಳವಳಾಗಿ, ಕುತಃ = ಏತಕ್ಕೆ?, ನ ಅಭವತ್ = ಆಗಲಿಲ್ಲ? ಸಃ= ಪರಮಾತ್ಮನು, ದಾರೇಷು ಸತ್ಸು = ಪತ್ನಿಯರಿರುವಾಗ, ನಾಭೇಃ = ನಾಭಿ (ಹೊಕ್ಕಳಿನಿಂದ) ಕಮಲದಿಂದ, ಪುತ್ರಂ = ಚತುರ್ಮುಖನನ್ನು, ಕಸ್ಮಾತ್ = ಯಾವಕಾರಣದಿಂದ, ಅಜೀಜನತ್ = ಪಡೆದನು.

**ಅನುವಾದ–** ಆ ಲಕ್ಷ್ಮಿಯು ತನ್ನ ಪತಿಯಾದ ನಾರಾಯಣನಿಂದ (ಪ್ರಳಯಕಾಲದಲ್ಲಿ) ಏಕೆ ನೂರು ಮಕ್ಕಳನ್ನು ಪಡೆಯಲಿಲ್ಲ? ಶ್ರೀ-ಭೂ-ದುರ್ಗಾರೂಪರಾದ ಪತ್ನಿಯರಿದ್ದರೂ ಅವನು ಏಕೆ ತನ್ನ ನಾಭಿಕಮಲದಿಂದ ಬ್ರಹ್ಮನನ್ನು ಪಡೆದ?

**ಭಾವವಿಲಾಸಿನೀ–** ನನು ಕಾಮಿತಯಾ ರಮಾಯಾಂ ರಮಣಾದ್ಧರೇಃ ಸಂಸಾರ ಇತಿ ಚೇನ್ನ । ತಥಾಪಿ ದುಃಖಸ್ಯಾಭಾವಾತ್ ಕುತಃ ಸಂಸಾರಃ? ದುಃಖಸ್ಯೈವ ಸಂಸಾರತ್ವಾತ್ । ನನು ಕಾಮಃ

ಕಾರಣಳಾಗುತ್ತಾಳೆ. ಆದರೆ ಪ್ರಳಯದಲ್ಲಿಯೂ ನಾಶಹೊಂದದ ಶರೀರವುಳ್ಳ ಲಕ್ಷ್ಮೀದೇವಿಯು ನಾರಾಯಣನ ಸಂಸಾರಕ್ಕೆ ಕಾರಣಳಾಗುವುದಿಲ್ಲ.

ಅವಳು ದುಃಖಕಾರಣಳಾಗಿದ್ದರೂ ಸ್ತ್ರೀಯಾದ ಅವಳ ಸಂಗವೇ ನಾರಾಯಣನ ಸಂಸಾರಕ್ಕೆ ಕಾರಣವಾಗುವುದೆಂಬ ಆಕ್ಷೇಪವೂ ಯುಕ್ತವಲ್ಲ. ಏಕೆಂದರೆ ನಿಮ್ಮ ಮತದಲ್ಲಿ ಹೇಳಲ್ಪಟ್ಟ ಮುಕ್ತರೂ ಪುರುಷರಾದ್ದರಿಂದಲೇ ತಾವೇ ಸಂಸಾರಿಗಳಾಗುವುದಕ್ಕೆ ಕಾರಣರಾಗಬೇಕಾದೀತು. ಏಕೆಂದರೆ ಪುರುಷರಿಗೆ ಸ್ತ್ರೀ ಮೊದಲಾದ ವಿಷಯ ಪದಾರ್ಥಗಳ ಬಗ್ಗೆ ಇರುವ ರಾಗವು ಸುಲಭವಾಗಿ ನಾಶವಾಗುವಂತಹದಲ್ಲ. ಆ ಮುಕ್ತರು ಅಲೌಕಿಕ ಪುರುಷರಾದ್ದರಿಂದ ಅವರಿಗೆ ಅಂತಹ ರಾಗಾದಿಗಳು ಇರುವುದಿಲ್ಲವೆಂದು ನೀವು ಸಮಾಧಾನ ಹೇಳುವುದಾದರೆ ಈ ಲಕ್ಷ್ಮೀದೇವಿಯೂ ಅಲೌಕಿಕ ಸ್ತ್ರೀಯಾದ್ದರಿಂದ ನಾರಾಯಣನ ಸಂಸಾರಕ್ಕೆ ಕಾರಣಳಾಗಲಾರಳು.

ನಮ್ಮ ಮುಕ್ತಿಯಲ್ಲಿ ಸ್ತ್ರೀಯರೇ ಇರುವುದಿಲ್ಲವೆಂದು ನೀವು ಹೇಳಿದರೆ ಪುರುಷರಾದರೂ ಹೇಗೆ ಇರಲು ಸಾಧ್ಯವೆಂಬ ಪ್ರಶ್ನೆ ಬರುತ್ತದೆ. ಮುಕ್ತಿಯನ್ನು ಪಡೆಯುವುದಕ್ಕಾಗಿಯೇ ಪುರುಷರು ವ್ರತನಿಯಮಗಳನ್ನು ಆಚರಿಸುವುದರಿಂದ ಮುಕ್ತಿಯಲ್ಲಿ ಪುರುಷರು ಇರುವುದು ಅವಶ್ಯಕವೆಂದು ಹೇಳಿದರೆ ಮುಕ್ತಿಗಾಗಿ ವ್ರತಾದಿಗಳನ್ನು ಸ್ತ್ರೀಯರೂ ಮಾಡುವುದರಿಂದ ಸ್ತ್ರೀಯರೂ ಮುಕ್ತಿಯಲ್ಲಿ ಇರುವುದು ಅವಶ್ಯಕವಾಗಿದೆ ಎಂದು ಹೇಳಬಹುದಾಗಿದೆ.

ನಮ್ಮ ಜೈನಮತದಲ್ಲಿ ಸ್ತ್ರೀಯರು ಪುರುಷರಾದ ಬಳಿಕವೇ ಮೋಕ್ಷಕ್ಕೆ ಹೋಗುವುದರಿಂದ ಅಲ್ಲಿ ಸ್ತ್ರೀಯರು ಇರುವುದಿಲ್ಲವೆಂದು ಹೇಳುವುದಾದರೆ ಪುರುಷರೂ ಸ್ತ್ರೀಯರಾದ ಬಳಿಕವೇ ಮೋಕ್ಷಕ್ಕೆ ಹೋಗುವುದರಿಂದ ಅಲ್ಲಿ ಪುರುಷರು ಇರುವುದಿಲ್ಲವೆಂದೂ ಹೇಳಬೇಕಾಗುತ್ತದೆ. ಹೀಗೆ ಯಾವುದನ್ನೂ ನಿರ್ಧರಿಸಲೂ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಸ್ತ್ರೀಪುರುಷರಿಬ್ಬರೂ ಮುಕ್ತಿಯಲ್ಲಿ ಇರುತ್ತಾರೆಂದೇ ಒಪ್ಪಬೇಕು. ಮೂಲಕಾರರೇ ಈ ವಿಷಯವನ್ನು ಮುಂದೆ ಹೇಳುತ್ತಾರೆ.

ಯುಕ್ತ್ಯಂತರದಿಂದ ಶ್ರೀಹರಿಗೆ ಮುಕ್ತತ್ವವನ್ನು ಉಪಪಾದನೆ ಮಾಡುತ್ತಾರೆ ಅನಾದ್ಯೋಃ ಇತ್ಯಾದಿ ಶ್ಲೋಕದಿಂದ-

**ಅನಾದ್ಯೋರ್ನ ಭವಾದ್ಯೋಸ್ತಿ ಭವೋಹ್ಯೇಷ ಪುನರ್ಭವಃ ॥ ೨೮೫ ॥**

**ಅರ್ಥ–** ಅನಾದ್ಯೋಃ = ಅನಾದಿಯಾಗಿರುವ ಲಕ್ಷ್ಮೀನಾರಾಯಣರಿಗೆ, ಭವಾದ್ಯಃ = ಜನ್ಮಾದಿ ಸಂಸಾರ ಮತ್ತು ಸಂಸಾರ ಧ್ವಂಸವು, ನ ಅಸ್ತಿ = ಇರುವುದಿಲ್ಲ, ಏಷಃಭವಃ = ಈ ಸಂಸಾರವು, ಪುನರ್ಭವಃ = ಪುನಃ ಉತ್ಪತ್ತಿ ಇರುವುದರಿಂದ ಪುನರ್ಭವ ಎಂಬ ಸಂಜ್ಞೆವುಳ್ಳದ್ದು

**ಅನುವಾದ–** ಅನಾದಿಯಾದ ಲಕ್ಷ್ಮೀನಾರಾಯಣರಿಗೆ ದೇಹದ ಉತ್ಪತ್ತಿರೂಪವಾದ ಸಂಸಾರವಾಗಲೀ ಸಂಸಾರಧ್ವಂಸವಾಗಲೀ ಇಲ್ಲ. ಈ ಸಂಸಾರಕ್ಕೆ ಪುನಃ ಪುನಃ ದೇಹದ ಉತ್ಪತ್ತಿಯುಳ್ಳದ್ದು ಎಂಬ ಅರ್ಥದಲ್ಲಿ ಪುನರ್ಭವ ಎಂದು ಹೆಸರಿದೆಯಷ್ಟೇ?

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ಮುಕ್ತತ್ವಮುಪಪಾದಯತಿ – **ಅನಾದ್ಯೋರಿತಿ** ॥ ಭವಃ ಸಂಸಾರಃ । ಆದ್ಯಪದೇನ ಸಂಸಾರಧ್ವಂಸೋ ಗೃಹ್ಯತೇ । ಅನಾದಿಕಾಲಮಾರಭ್ಯ ಅನುತ್ಪನ್ನೇನ ಕೇವಲಂ ಸುಖಹೇತುನಾ ದೇಹೇನ ವಿಶಿಷ್ಟಯೋಃ ಕಥಂ ಸಂಸಾರ ಇತಿ ಭಾವಃ । ನನ್ವನಾದಿತ್ವೇನ ಜನ್ಮಾಭಾವಸಿದ್ಧಾವಪಿ ಸಂಸಾರಾಭಾವಃ ಕಥಂ ಸಿದ್ಧ್ಯೇದಿತ್ಯತ ಆಹ – **ಭವೋ ಹೀತಿ** ॥ ಏಷ ಭವ ಇತಿ ಸಂಬಂಧಃ । ಭವಃ ಸಂಸಾರಃ ಪುನರ್ಭವಃ ನಿಘಂಟ್ವಾದೌ ಪುನಃಪುನರುತ್ಪತ್ತ್ಯಾ ಪುನರ್ಭವ-ಸಂಜ್ಞಿತಃ । ಉತ್ಪತ್ತ್ಯಭಾವೇ ತು ಅಪುನರ್ಭವ ಏವೇತಿ ಕಥಮನಾದ್ಯೋರ್ಭವಾದ್ಯ ಇತಿ ಭಾವಃ । ನಚಾನಾದಿತ್ವಮಸಿದ್ಧಮ್ । ರುದ್ರಪಿತುರ್ಬ್ರಹ್ಮಣ ಇವ ಬ್ರಹ್ಮಪಿತುರ್ನಾರಾಯಣಸ್ಯೇವ ನಾರಾಯಣಪಿತುಃ ಕಸ್ಯಚಿಲ್ಲೋಕೇ ಪ್ರಸಿದ್ಧ್ಯಭಾವಾದೇವಾನಾದಿತ್ವಸಿದ್ಧೇಃ ॥ ೨೯೫ ॥

**ವಿವರಣೆ–** ಅನಾದಿ ಕಾಲದಿಂದಾರಂಭಿಸಿ ಉತ್ಪತ್ತಿಇಲ್ಲದೆ ಇರುವ, ಸುಖಕ್ಕೆ ಹೇತುವಾದ ದೇಹದಿಂದ ವಿಶಿಷ್ಟರಾದ ಲಕ್ಷ್ಮೀನಾರಾಯಣರಿಗೆ ಜನ್ಮವಾಗಲೀ, ಸಂಸಾರಧ್ವಂಸವಾಗಲೀ ಇಲ್ಲ. ಅನಾದಿತ್ವವೂ ಸಿದ್ಧವಾಗಿದೆ. ರುದ್ರನಿಗೆ ತಂದೆ ಚತುರ್ಮುಖಬ್ರಹ್ಮ ಚತುರ್ಮುಖಬ್ರಹ್ಮನ ತಂದೆ ನಾರಾಯಣನು, ನಾರಾಯಣನ ತಂದೆಗೆ ಲೋಕದಲ್ಲಿ ಪ್ರಸಿದ್ಧಿ ಇಲ್ಲದೇ ಇರುವುದರಿಂದ ಅನಾದಿತ್ವಸಿದ್ಧವಾಯಿತು.

**ಪತ್ಯಾ ತೇನ ಕುತೋಽಪತ್ಯಶತವತ್ಯಭವನ್ನ ಸಾ ।**
**ಸತ್ಸು ದಾರೇಷು ನಾಭೇಃ ಸ ಪುತ್ರಂ ಕಸ್ಮಾದಜೀಜನತ್ ॥ ೨೯೬ ॥**

**ಅರ್ಥ–** ಸಾ = ಆ ಲಕ್ಷ್ಮೀಯು, ತೇನ ಪತ್ಯಾ= ಆ ಪತಿಯಾದ ನಾರಾಯಣನಿಂದ, ಅಪತ್ಯಶತವತೀ = ನೂರಾರು ಮಕ್ಕಳುವುಳ್ಳವಳಾಗಿ, ಕುತಃ = ಏತಕ್ಕೆ?, ನ ಅಭವತ್ = ಆಗಲಿಲ್ಲ? ಸಃ= ಪರಮಾತ್ಮನು, ದಾರೇಷು ಸತ್ಸು = ಪತ್ನಿಯರಿರುವಾಗ, ನಾಭೇಃ = ನಾಭಿ (ಹೊಕ್ಕಳಿನಿಂದ) ಕಮಲದಿಂದ, ಪುತ್ರಂ = ಚತುರ್ಮುಖನನ್ನು ಕಸ್ಮಾತ್ = ಯಾವಕಾರಣದಿಂದ, ಅಜೀಜನತ್ = ಪಡೆದನು.

**ಅನುವಾದ–** ಆ ಲಕ್ಷ್ಮಿಯು ತನ್ನ ಪತಿಯಾದ ನಾರಾಯಣನಿಂದ (ಪ್ರಳಯಕಾಲದಲ್ಲಿ) ಏಕೆ ನೂರು ಮಕ್ಕಳನ್ನು ಪಡೆಯಲಿಲ್ಲ? ಶ್ರೀ-ಭೂ-ದುರ್ಗಾರೂಪರಾದ ಪತ್ನಿಯರಿದ್ದರೂ ಅವನು ಏಕೆ ತನ್ನ ನಾಭಿಕಮಲದಿಂದ ಬ್ರಹ್ಮನನ್ನು ಪಡೆದ?

**ಭಾವವಿಲಾಸಿನೀ–** ನನು ಕಾಮಿತಯಾ ರಮಾಯಾಂ ರಮಣಾದ್ಧರೇಃ ಸಂಸಾರ ಇತಿ ಚೇನ್ನ । ತಥಾಪಿ ದುಃಖಸ್ಯಾಭಾವಾತ್ ಕುತಃ ಸಂಸಾರಃ? ದುಃಖಸ್ಯೈವ ಸಂಸಾರತ್ವಾತ್ । ನನು ಕಾಮಃ

ಸಂಸಾರ ಇತಿ ಚೇನ್ನ । ಸೋऽಪಿ ಕಾಮಿತಪದಾರ್ಥಾಲಾಭೇ ದುಃಖಹೇತುತಯಾऽಸ್ತು ವಾ ಸಂಸಾರಃ । ಸತ್ಯಕಾಮತ್ವೇ ತು ಕಾಮೋऽಪಿ ಮುಕ್ತತ್ವಸಾಧಕ ಏವ । ಪರಿಪೂರ್ಣಸ್ಯ ಹರೇಃ ಸೋऽಪಿ ನ ಲಕ್ಷ್ಮ್ಯಾಮಿತ್ಯಾಹ– **ಪತ್ಯೇತಿ** ॥ ಯದಿ ತಸ್ಯಾಂ ರಮತೇ ತರ್ಹಿ ಪತ್ಯಾ ಭರ್ತ್ರಾ ತೇನ ನಾರಾಯಣೇನ ತತ್ಸಕಾಶಾದಿತಿ ಯಾವತ್ । ಸಾ ಲಕ್ಷ್ಮೀಃ । ಕಾಮಾದ್ ರಮಣಾಭಾವೇ ನಿಮಿತ್ತಾಂತರಂ ಚಾಹ – **ಸತ್ಸ್ವಿತಿ** ॥ ಸಃ ನಾರಾಯಣಃ ಪುತ್ರಂ ಬ್ರಹ್ಮಾಣಮ್ । ಅಜೀಜನತ್ ಜನಯಾಮಾಸ ॥ ೨೯೬ ॥

**ವಿವರಣೆ–** ಕಾಮುಕತನದಿಂದ ಲಕ್ಷ್ಮೀಯಲ್ಲಿ ಕ್ರೀಡಾಮಾಡುತ್ತಾನಾದ್ದರಿಂದ ಶ್ರೀಹರಿಯು ಸಂಸಾರಿ ಆಗಿದ್ದಾನೆ ಎಂದರೆ ಅದು ಸರಿಯಲ್ಲ ದುಃಖವೇ ಇಲ್ಲದಿರುವುದರಿಂದ ಸಂಸಾರ ಎಲ್ಲಿದೆ? ದುಃಖಕ್ಕೇ ಸಂಸಾರವೆನ್ನುವರು.

ಇನ್ನು ಕಾಮನೆಯೇ ಸಂಸಾರವೆಂದಲ್ಲಿ ಅಂತಹ ಕಾಮನೆಯು ಶ್ರೀಹರಿಗೆ ಇಲ್ಲ. ಅವನು ನಿತ್ಯತೃಪ್ತನಾಗಿದ್ದಾನೆ. ಸ್ತ್ರೀಕಾಮುಕನಾಗಿ ಕ್ರೀಡಾ ಮಾಡುತ್ತಾನೆಂದರೆ ರಮಾದೇವಿಯಲ್ಲಿ ನೂರಾರು ಮಕ್ಕಳೇಕೆ ಹುಟ್ಟಲಿಲ್ಲ ಎಂಬ ಪ್ರಶ್ನೆ ಬರುತ್ತದೆ ಮತ್ತು ಅನೇಕ ಪತ್ನಿಯರಿರುವಾಗ ತನ್ನ ನಾಭಿಕಮಲದಿಂದ ಚತುರ್ಮುಖಬ್ರಹ್ಮನನ್ನು ಏಕೆ ಸೃಷ್ಟಿಮಾಡಿದ ಎಂಬ ಶಂಕೆಯೂ ಬರುತ್ತದೆ.

ಲಕ್ಷ್ಮೀನಾರಾಯಣರಿಗೆ ಸಂಸಾರವಿಲ್ಲವೆಂದು ಉಪಸಂಹಾರ ಮಾಡುತ್ತಾ ಯುಕ್ತ್ಯಂತರವನ್ನು ಹೇಳುತ್ತಾರೆ ತದಿತ್ಯಾದಿ ಶ್ಲೋಕದಿಂದ-

**ಅತಃ ಸ ಭರಣಾದ್ ಭರ್ತಾ ಸಾ ಭಾರ್ಯಾ ಭ್ರಿಯತೇ ಯತಃ ।**
**ತತ್ತಯೋರ್ನಿತ್ಯಸುಖಿನೋರ್ನ ಸಂಸಾರೋಽಸ್ತ್ಯದುಃಖಿನೋಃ ॥ ೨೯೬ ॥**

**ಅರ್ಥ–** ಅತಃ = ಆದ ಕಾರಣದಿಂದ, ಭರಣಾತ್ = ಪೋಷಣೆ ಮಾಡಿರುವುದರಿಂದಲೇ, ಸಃ= ಪರಮಾತ್ಮನು, ಭರ್ತಾ = ಭರ್ತೃವೆಂದೂ, ಸಾ = ಆ ಲಕ್ಷ್ಮೀಯು, ಯತಃ = ಯಾವಕಾರಣದಿಂದ, ಭ್ರಿಯತೇ = ಪೋಷಿತಳಾಗಿದ್ದಾಳೋ, ತತಃ= ಆ ಕಾರಣದಿಂದ, ಭಾರ್ಯಾ = ಹೆಂಡತಿ ಎಂದೂ ಕರೆಸಿಕೊಳ್ಳುತ್ತಾರೆ, ತತ್ = ಆದ್ದರಿಂದ, ನಿತ್ಯಸುಖಿನೋಃ = ನಿತ್ಯಸುಖಿಗಳಾದ, ಅದುಃಖಿನೋಃ = ದುಃಖವಿಲ್ಲದೆ ಇರುವ, ತಯೋಃ = ಆ ಲಕ್ಷ್ಮೀನಾರಾಯಣರಿಗೆ, ಸಂಸಾರಃ = ಸಂಸಾರವು, ನಾಸ್ತಿ = ಇರುವುದಿಲ್ಲ.

**ಅನುವಾದ–** ಆದ್ದರಿಂದ ಪೋಷಿಸುವುದರಿಂದಲೇ ನಾರಾಯಣನು ಭರ್ತಾ. ಪೋಷಿಸಲ್ಪಡುವುದರಿಂದಲೇ ಲಕ್ಷ್ಮಿಯು ಭಾರ್ಯೆ. ನಿತ್ಯಸುಖಿಗಳಾದ ಮತ್ತು ಶಾಶ್ವತವಾಗಿ ದುಃಖರಹಿತರಾದ ಅವರಿಗೆ ಸಂಸಾರವಿಲ್ಲ.

**ಭಾವವಿಲಾಸಿನೀ–** ಅತಃ ಕಾಮಿತಯಾ ರಮಣಾಭಾವಾತ್ ಸ ನಾರಾಯಣಃ ಭರಣಾತ್ ಪೋಷಣಾತ್ । ಯತಃ ಭ್ರಿಯತೇ ಪೋಷ್ಯತ, ಅತಃ ಸಾ ಭಾರ್ಯೇತಿ ಸಂಬಂಧಃ ।

ಸಂಸಾರಾಭಾವಸಾಧನಮುಪಸಂಹರನ್ನೇವ ಯುಕ್ತ್ಯಂತರಂ ಚಾಹ – **ತದಿತ್ಯಾದಿನಾ** ॥ **ಲಕ್ಷ್ಮೀನಾರಾಯಣಯೋಃ** ॥ ೨೯೭ ॥

**ವಿವರಣೆ–** ನಿತ್ಯಸುಖಿಗಳೆಂಬುದು ಮತ್ತು ಅದುಃಖಿಗಳೆಂಬುದು ಅವರಿಬ್ಬರಿಗೆ ಸಂಸಾರವಿಲ್ಲವೆಂಬುದನ್ನು ಸಾಧಿಸುವ ಮತ್ತೊಂದು ಯುಕ್ತಿಯಾಗಿದೆ.

**ದುಃಖಮೇವ ಹಿ ಸಂಸಾರೋ ದುಃಖಹೇತುತ್ವತೋಽಪರಮ್ ।**
**ಉಪಚಾರೇಣ ಸಂಸಾರೋ ನ ದುಃಖಂ ನಾಪಿ ದುಃಖದಾ ॥ ೨೯೮ ॥**

**ಅರ್ಥ–** ಹಿ = ಯಾವ ಕಾರಣದಿಂದ, ದುಃಖಮೇವ = ದುಃಖವೇ, ಸಂಸಾರಃ = ಸಂಸಾರವು, ಅಪರಂ = ಪ್ರಾಕೃತಶರೀರವು, ದುಃಖಹೇತುತ್ವತಃ = ದುಃಖಕ್ಕೆ ಕಾರಣವಾಗಿರುವುದರಿಂದ, ಉಪಚಾರೇಣ = ಗೌಣವಾಗಿ, ಸಂಸಾರಃ = ಸಂಸಾರವೆಂದು, (ಉಚ್ಯತೇ = ಹೇಳಲ್ಪಡುತ್ತದೆ) ಲಕ್ಷ್ಮೀಶ್ಚ = ಲಕ್ಷ್ಮೀಯಾದರೂ, ನದುಃಖಂ = ದುಃಖರೂಪಳೂ ಅಲ್ಲ, ದುಃಖದಾಪಿ ನ = ದುಃಖಹೇತವೂ ಅಲ್ಲ.

**ಅನುವಾದ–** ದುಃಖವೇ ನಿಜವಾದ ಸಂಸಾರ. ದುಃಖಕ್ಕೆ ಕಾರಣವಾದ್ದರಿಂದ ದೇಹಾದಿಗಳು ಸಂಸಾರವೆಂದು ಅಮುಖ್ಯವೃತ್ತಿಯಿಂದ ಹೇಳಲ್ಪಡುತ್ತವೆ. ಲಕ್ಷ್ಮಿಯು ದುಃಖರೂಪಳೂ ಅಲ್ಲ ದುಃಖಕಾರಣಳೂ ಅಲ್ಲ.

**ಭಾವವಿಲಾಸಿನೀ–** ಹಿ ಯಸ್ಮಾದ್ ದುಃಖಮೇವ ಸಂಸಾರಃ । ಅಪರಂ ಪ್ರಾಕೃತಶರೀರಾದಿಕಂ ದುಃಖಹೇತುತ್ವತಃ ಉಪಚಾರೇಣ ಸಂಸಾರ ಇತ್ಯುಚ್ಯತೇ । ಲಕ್ಷ್ಮೀಶ್ಚ ನ ದುಃಖಂ ದುಃಖರೂಪಾ ನೇತಿ ಯಾವತ್ । ದುಃಖದಾ ನಾಪಿ, ದುಃಖಹೇತುರ್ನೇತ್ಯರ್ಥಃ ॥ ೨೯೮ ॥

**ವಿವರಣೆ–** ದುಃಖವೇ ಮುಖ್ಯವಾಗಿ ಸಂಸಾರವೆನಿಸುತ್ತದೆ. ದೇಹ, ಅದರ ಉತ್ಪತ್ತಿ ಇತ್ಯಾದಿಗಳು ದುಃಖಕ್ಕೆ ಕಾರಣವಾದ್ದರಿಂದ ಅಮುಖ್ಯವೃತ್ತಿಯಿಂದ ಸಂಸಾರವೆಂದು ಕರೆಯಲ್ಪಡುತ್ತದೆ. ಲಕ್ಷ್ಮಿಯು ದುಃಖರೂಪಳೂ ಅಲ್ಲ, ನಾರಾಯಣನಿಗೆ ದುಃಖಪ್ರದಳೂ ಅಲ್ಲ. ಆದ್ದರಿಂದ ನಾರಾಯಣನಿಗೆ ಲಕ್ಷ್ಮಿಯ ಸಂಬಂಧವು ಸಂಸಾರರೂಪವಾಗುವುದಿಲ್ಲ ಎಂದು ಅಭಿಪ್ರಾಯ.

**ಸಾ ಭಾರ್ಯಾ ಕೇನ ಸಂಸಾರೋ ಯದಿ ಸ್ತ್ರೀತ್ವೇನ ಸಂಸೃತಿಃ ।**
**ತರ್ಹಿ ಪುಂಸ್ತ್ವಾಚ್ಚ ಸಂಸಾರ ಇತಿ ಮುಕ್ತಿರ್ಗತಾ ತವ ॥ ೨೯೯ ॥**

**ಅರ್ಥ–** ಸಾ ಭಾರ್ಯಾ = ಪತ್ನಿಯಾದ ಆ ಲಕ್ಷ್ಮೀದೇವಿಯು, ಕೇನ = ಯಾವನಿಮಿತ್ತದಿಂದ, ಸಂಸಾರಃ = ಸಂಸಾರವಾಗುತ್ತಾಳೆ? ಯದಿ = ಒಂದು ವೇಳೆ ಸ್ತ್ರೀತ್ವೇನ = ಸ್ತ್ರೀತ್ವವಿರುವುದರಿಂದ, ಸಂಸೃತಿಃ = ಸಂಸಾರವೆಂದಲ್ಲಿ, ತರ್ಹಿ = ಆಗ, ಪುಂಸ್ತ್ವಾಚ್ಚ =

ಮುಕ್ತನಿಗೆ ಪುರುಷತ್ವವಿರುವುದರಿಂದ, ಸಂಸಾರಃ = ಸಂಸಾರಿ, ಇತಿ = ಎಂದು, ತವ = ನಿನ್ನಮತದ, ಮುಕ್ತಿಃ = ಮೋಕ್ಷವು, ಗತಾ = ಹೊರಟು ಹೋಯಿತು.

**ಭಾವವಿಲಾಸಿನೀ–** ಸಾ ಭಾರ್ಯಾ ಲಕ್ಷ್ಮೀಃ ತೇನ ನಿಮಿತ್ತೇನ ಸಂಸಾರಃ ಸಂಸಾರರೂಪಾ । ಯುಕ್ತಿಸ್ತು ಪೂರ್ವೋಕ್ತ್ಯೈವ ದ್ರಷ್ಟವ್ಯಾ । ಸ್ತ್ರೀತ್ವೇನ ಸಂಸೃತಿಃ ಸಂಸಾರರೂಪಾ ತರ್ಹಿ ಪುಂಸ್ತ್ವಾಚ್ಚ ಮುಕ್ತೋऽಪಿ ಸಂಸಾರಃ ಸಂಸಾರರೂಪ ಇತಿ ಹೇತುತೋಸ್ತವ ಮುಕ್ತಿರ್ಗತೇತಿ ಸಂಬಂಧಃ ॥ ೨೯೯ ॥

**ವಿವರಣೆ–** ವನಿತೆಯೇ ಸಂಸಾರ. ಅವಳ ಸಂಬಂಧವಿರುವುದರಿಂದ ನಾರಾಯಣನಿಗೆ ಸಂಸಾರವಿದೆ ಎಂದು ಹೇಳಿದರೆ. ವನಿತೆಯೇ ಸಂಸಾರವೆಂಬುದಕ್ಕೆ ಪ್ರಮಾಣವೇನು? ಅದಕ್ಕೆ ಪ್ರತಿಯಾಗಿ ನಾವು ಪುರುಷನೇ ಸಂಸಾರವೆಂದು ಹೇಳುತ್ತೇವೆ. ಆದ್ದರಿಂದ ನೀನು ಮುಕ್ತಿಯಲ್ಲಿ ಒಪ್ಪುವ ಪುರುಷರೂ ಸಂಸಾರರೂಪರೂ ಸಂಸಾರಿಗಳೂ ಆದ್ದರಿಂದ ನಿನ್ನ ಮುಕ್ತಿಯು ಹೊರಟುಹೋಯಿತು ಎಂದು ಅಭಿಪ್ರಾಯ.

ಕಲತ್ರಸಂಪತ್ತಿಗೆ ಸಂಸಾರತ್ವವನ್ನು ಪ್ರತಿಬಂದೀ ಮೂಲಕ ದೂಷಿಸುತ್ತಿದ್ದಾರೆ ಕಲತ್ರಾಣೀವ ಎಂಬ ಶ್ಲೋಕದಿಂದ

**ಕಲತ್ರಾಣೀವ ಮಿತ್ರಾಣಿ ಭವಾಯೇಹ ಭವಂತಿಹಿ ।**
**ಮುಕ್ತೌ ಚೇನ್ಮಿತ್ರಸಂಪತ್ತಿಃ ಸ್ತ್ರೀಸಂಪತ್ತಿಃ ಕುತೋ ನ ತೇ ॥ ೩೦೦ ॥**

**ಅರ್ಥ–** ಇಹ = ಈ ಲೋಕದಲ್ಲಿ, ಕಲತ್ರಾಣೀವ = ಪತ್ನಿಯರಂತೆ, ಮಿತ್ರಾಣಿ = ಸ್ನೇಹಿತರೂ, ಭವಾಯ = ಸಂಸಾರ ಕಾರಣರಾಗಿ, ಭವಂತಿ = ಆಗಿರುತ್ತಾರೆ, ಹಿ = ನಿಶ್ಚಯ, ಮುಕ್ತೌ = ಮೋಕ್ಷದಲ್ಲಿ, ಮಿತ್ರಸಂಪತ್ತಿಃ = ಮಿತ್ರಸಂಪತ್ತು, ಅಸ್ತಿಚೇತ್ ಇರುವುದಾದರೆ, ಸ್ತ್ರೀಸಂಪತ್ತಿಃ = ಸ್ತ್ರೀಸಂಪತ್ತೂ, ತೇ = ನಿನಗೆ, ಕುತಃ ನ= ಏಕಿಲ್ಲ?

**ಅನುವಾದ–** ಈ ಲೋಕದಲ್ಲಿ ಪತ್ನಿಯರಂತೆ ಮಿತ್ರರೂ ಸಂಸಾರ(ದುಃಖ)ಕ್ಕೆ ಕಾರಣರಾಗಿರುತ್ತಾರೆ. ಮೋಕ್ಷದಲ್ಲಿ ಮಿತ್ರಸಮಾಗಮವನ್ನು ಒಪ್ಪುವುದಾದರೆ ಪತ್ನೀಸಂಪತ್ತಿಯನ್ನು ಏಕೆ ಒಪ್ಪಬಾರದು ?

**ಭಾವವಿಲಾಸಿನೀ–** ಕಲತ್ರಸಮ್ಪತ್ತೇಸ್ಸಂಸಾರತ್ವಂ ಪ್ರತಿಬನ್ದ್ಯಾ ದೂಷಯತಿ – **ಕಲತ್ರಾಣೀತಿ** ॥ ಇಹ ಲೋಕೇ ಕಲತ್ರಾಣೀವ ಮಿತ್ರಾಣಿ ಭವಾಯ ಸಂಸಾರಾಯ ಭವನ್ತಿ ಹಿ । ಮುಕ್ತೌ ಮಿತ್ರಸಮ್ಪತ್ತಿಶ್ಚೇದಸ್ತಿ ತರ್ಹಿ ಸ್ತ್ರೀಸಮ್ಪತ್ತಿಃ ಕುತಸ್ತೇ ಮತೇ ನೇತಿ ಸಂಬಂಧಃ ॥ ೩೦೦ ॥

**ವಿವರಣೆ–** ಇಬ್ಬರೂ ಸಂಸಾರಕ್ಕೆ ಕಾರಣರಾದರೂ ಮಿತ್ರರನ್ನು ಒಪ್ಪಿ ಪತ್ನಿಯರನ್ನು ಒಪ್ಪದಿರುವುದು ಅರ್ಧಜರತೀಯ ನ್ಯಾಯವೆನಿಸುತ್ತದೆ ಎಂದು ಅಭಿಪ್ರಾಯ.

ಅನುರಾಗವಿಲ್ಲದಿರುವುದರಿಂದ ಮಿತ್ರಸಂಪತ್ತಿ ಇದ್ದರೂ ಅದು ಸಂಸಾರವೆಂದೆನಿಸುವುದಿಲ್ಲ ಎಂದರೆ ಅದಕ್ಕೆ ರಾಗಾಭಾವೇನ ಇತ್ಯಾದಿ ಶ್ಲೋಕದಿಂದ ಉತ್ತರವನ್ನು ಹೇಳುತ್ತಿದ್ದಾರೆ.

**ರಾಗಾಭಾವೇನ ಯಾ ಶಾಂತಿಃ ಸಾ ದೇವೀದೇವಯೋಃ ಸಮಾ ।**
**ಅತಃ ಕಲತ್ರಶೂನ್ಯಸ್ಯ ಗುರೋರ್ವಾಕ್ಯೇ ಭರಂ ತ್ಯಜ ॥ ೩೦೧ ॥**

**ಅರ್ಥ–** ರಾಗಾಭಾವೇನ = ಸ್ನೇಹವಿಲ್ಲದಿರುವುದರಿಂದ (ಮೋಕ್ಷದಲ್ಲಿ) ಯಾ ಶಾಂತಿಃ = ದೋಷಪರಿಹಾರವಾಗಿರುವುದೋ, ಸಾ = ಅದು, ದೇವಿದೇವಯೋಃ = ಲಕ್ಷ್ಮೀನಾರಾಯಣರಿಗೆ, ಸಮಾ = ಸಮಾನವಾಗಿರುತ್ತದೆ. ಅತಃ = ಆದ್ದರಿಂದ, ಕಲತ್ರಶೂನ್ಯಸ್ಯ = ಪತ್ನಿಶೂನ್ಯನಾದ, ಗುರೋಃ = (ಜಿನ) ನಿನ್ನಗುರುವಿನ, ವಾಕ್ಯೇ= ಮಾತಿನಲ್ಲಿ, ಭರಂ = ವಿಶ್ವಾಸವನ್ನು, ತ್ಯಜ = ಬಿಟ್ಟುಬಿಡು.

**ಅನುವಾದ– ಮೋಕ್ಷದಲ್ಲಿ ಮಿತ್ರರಿದ್ದರೂ ಪರಸ್ಪರ ಮೋಹಾದಿಗಳು ಇಲ್ಲವಾದ್ದರಿಂದ ಸಂಸಾರವೆಂದು ಎನಿಸಿಕೊಳ್ಳುವುದಿಲ್ಲವೆಂದರೆ ಈ ಸಮಾಧಾನವು ಲಕ್ಷ್ಮೀನಾರಾಯಣರಿಗೂ ಸಮಾನವಾಗಿದೆ. ಆದ್ದರಿಂದ ಪತ್ನಿಶೂನ್ಯನಾದ ನಿನ್ನ (ಜಿನ) ಗುರುವಿನ ಮಾತಿನಲ್ಲಿ ವಿಶ್ವಾಸವನ್ನು ಬಿಡು.**

**ಭಾವವಿಲಾಸಿನೀ–** ನನು ರಾಗಾಭಾವಾತ್ ಮಿತ್ರಸಂಪತ್ತಿರ್ನ ಸಂಸಾರಾಯೇತ್ಯತ ಆಹ – **ರಾಗಾಭಾವೇನೇತಿ ॥** ಯಾ ಶಾಂತಿರ್ದೋಷಪರಿಹಾರರೂಪಾ । ಸಾ ಶಾಂತಿರ್ದೇವೀದೇವಯೋ ಲಕ್ಷ್ಮೀನಾರಾಯಣಯೋಸ್ಸಮಾ । ನಾರೀದರ್ಶನೇ ಕಥಂ ನ ರಾಗ ಇತಿ ಚೇತ್ ಮಿತ್ರದರ್ಶನೇ ಕಥಂ ನ ರಾಗಃ? ಇತಿ ಸಮಮ್ । ಅಲೌಕಿಕರೂಪತ್ವಾನ್ಮಿತ್ರದರ್ಶನೇಽಪಿ ನ ರಾಗಶ್ಚೇತ್ ಸಮಂ ಕಲತ್ರೇಽಪಿ । ಕಲತ್ರಶೂನ್ಯಸ್ಯೇತ್ಯನೇನ ಸ್ವಯಂ ನಷ್ಟಃ ಪರಾನ್ನಾಶಯತೀತಿ ನ್ಯಾಯಾವತಾರಂ ಸೂಚಯತಿ ॥ ೩೦೧ ॥

**ವಿವರಣೆ–** ಮೋಕ್ಷದಲ್ಲಿ ಮಿತ್ರರಿದ್ದರೂ ಅವರಲ್ಲಿ ರಾಗಾದಿಗಳು ಇಲ್ಲದಿರುವುದರಿಂದ ಮಿತ್ರರನ್ನು ಒಪ್ಪುತ್ತೇವೆ ಎಂದು ಜೈನರು ಹೇಳುತ್ತಾರೆ. ಹಾಗಾದರೆ ಭಾರ್ಯೆಯನ್ನು ಒಪ್ಪು ಏನು ತೊಂದರೆ ಎಂದರೆ ಭಾರ್ಯೆಯನ್ನು ನೋಡಿದರೆ ರಾಗವು ಉಂಟಾಗುವುದೇ ತೊಂದರೆ ಎಂದು ಅವರ ಉತ್ತರ. ಹಾಗಾದರೆ ಮಿತ್ರರನ್ನು ನೋಡಿದರೂ ರಾಗವು ಉಂಟಾಗುತ್ತದೆ ಎಂಬ ನಮ್ಮ ಆಕ್ಷೇಪಕ್ಕೆ, ಮಿತ್ರರು ಮೋಕ್ಷದಲ್ಲಿ ಅಲೌಕಿಕರೂಪವನ್ನು ಹೊಂದಿರುವುದರಿಂದ ರಾಗಾದಿಗಳು ಉಂಟಾಗುವುದಿಲ್ಲ ಎಂದು ಅವರು ಉತ್ತರ ಹೇಳುತ್ತಾರೆ. ಹಾಗಾದರೆ ಭಾರ್ಯೆಗೂ ಮೋಕ್ಷದಲ್ಲಿ ಅಲೌಕಿಕದೇಹವಿರುವುದರಿಂದ ಭಾರ್ಯೆಯನ್ನು ಅಂಗೀಕರಿಸು. ಸಂನ್ಯಾಸಿಯಾದ ನಿನ್ನ ಗುರುವಿನ ಮಾತನ್ನು ನಂಬಬೇಡ. ಅವನು ತಾನೂ ವನಿತೆಯರನ್ನು ದ್ವೇಷಿಸಿ ಇನ್ನೊಬ್ಬರನ್ನೂ ವನಿತೆಯರನ್ನು ದ್ವೇಷಿಸುವಂತೆ ಮಾಡುತ್ತಾನೆ. ತಾನೂ ಕೆಟ್ಟು ಇನ್ನೊಬ್ಬರನ್ನೂ ಕೆಡಿಸುತ್ತಾನೆ ಎಂದು ಅಭಿಪ್ರಾಯ.

**ಉನ್ನಯೋರ್ಜಿತಧರ್ಮೇಣ ಭಾರ್ಯಾಂ ಚ ಸಹಧರ್ಮಿಣೀಂ ॥ ೩೦೨ ॥**

**ಅರ್ಥ**– ಊರ್ಜಿತಧರ್ಮೇಣ = ಶ್ರೇಷ್ಠಧರ್ಮದಿಂದ, ಸಹಧರ್ಮಿಣೀಂ = ಸಹ ಧರ್ಮಿಣಿಯಾದ, ಭಾರ್ಯಾಂ ಚ = ಹೆಂಡತಿಯನ್ನೂ ಕೂಡ, ಉನ್ನಯ = ಉನ್ನತಸ್ಥಿತಿಗೆ (ಮೋಕ್ಷಕ್ಕೆ) ತರುವಂಥವನಾಗು.

**ಅನುವಾದ**– ನೀನು ಮಾಡುವ ಧರ್ಮಕಾರ್ಯಗಳಲ್ಲಿ ನಿನ್ನ ಸಹಧರ್ಮಿಣಿಯನ್ನೂ ಪಾಲುಗೊಳ್ಳುವಂತೆ ಮಾಡಿ ನಿನ್ನ ಸಂಗಡ ಅವಳನ್ನೂ ಉನ್ನತ ಸ್ಥಿತಿಗೇರಿಸು.

**ಜೈನಮತದ ಮೋಕ್ಷಸ್ವರೂಪವನ್ನು ದೂಷಿಸಿ ಭಾರ್ಯಾ ಸಂಪತ್ತಿಯು ದೋಷವಲ್ಲವೆಂದು ಸಾಧಿಸುತ್ತಾರೆ ಸತತೋರ್ಧ್ವ ಇತ್ಯಾದಿ ಶ್ಲೋಕದಿಂದ.**

**ಸತತೋರ್ಧ್ವಗತಿರ್ನೃಣಾಂ ಮಹಾಕ್ಲೇಶಕರೀ ತವ ।**
**ಮುಕ್ತೌ ಸ್ಯಾಚ್ಚೇತ್ಸುಖಕರೀ ಭಾರ್ಯಾ ಕೇನ ಭಯಂಕರೀ ॥ ೩೦೩ ॥**

**ಅರ್ಥ**– ನೃಣಾಂ = ಮನುಷ್ಯರಿಗೆ, ಮಹಾಕ್ಲೇಶಕರೀ = ಅತ್ಯಂತ ದುಃಖದಾಯಕವಾದ, ಸತತೋರ್ಧ್ವಗತಿಃ = ಯಾವಾಗಲು ಮೇಲುಗಡೆ ಹೋಗಿಕೊಂಡಿರುವುದು, ತವ = ನಿನ್ನ ಮುಕ್ತೌ = ಮೋಕ್ಷದಲ್ಲಿ, ಸುಖಕರೀ = ಸುಖಕಾರಣವಾಗಿ, ಸ್ಯಾಚ್ಚೇತ್ = ಆಗಿದೆ ಎಂದಲ್ಲಿ, ಭಾರ್ಯಾ = ಹೆಂಡತಿಯು ಮಾತ್ರ, ಕೇನ = ಯಾವಕಾರಣದಿಂದ, ಭಯಂಕರೀ = ಭಯಂಕರಳಾಗುತ್ತಾಳೆ.

**ಅನುವಾದ**– ಜೈನಮತದಲ್ಲಿ ಮೋಕ್ಷವೆಂದರೆ ಸತತವಾಗಿ ಊರ್ಧ್ವಗಮನ ಮಾಡುತ್ತಿರುವುದು. ಸತತವಾಗಿ ಮೇಲೆ ಮೇಲೆ ಹೋಗುತ್ತಿರುವುದು ಅತ್ಯಂತ ದುಃಖದಾಯಕವಾಗಿ ಶ್ರಮದಾಯಕ ವಾಗಿರುವುದರಿಂದ ಲೋಕದಲ್ಲಿ ಅತ್ಯಂತ ಕ್ಲೇಶಕರವಾಗಿ ಕಂಡಿದೆ. ಮೋಕ್ಷದಲ್ಲಿ ಅದು ಸುಖಕರೀ ಎಂದಲ್ಲಿ ಹೆಂಡತಿಯು ಸುಖಕಾರಣಗಳು ಏಕಾಗಬಾರದು? ಭಾರ್ಯೆ ಮಾತ್ರ ಯಾವ ಕಾರಣದಿಂದ ಭಯಂಕರೀ ಎನಿಸುತ್ತಾಳೆ?

**ಭಾವವಿಲಾಸಿನೀ**– ತದುಕ್ತಮೋಕ್ಷಸ್ವರೂಪಂ ದೂಷಯನ್ನೇವ ಭಾರ್ಯಾಸಮ್ಪತ್ತೇರ್ದೋಷತ್ವಂ ದೂಷಯತಿ – **ಸತತೇತಿ** ॥ ತವ ಮತೇ ಮುಕ್ತೌ ಸುಖಕರೀ ಸ್ಯಾಚ್ಚೇದಿತಿ ಸಂಬಂಧಃ । ತರ್ಹಿ ಭಾರ್ಯಾಪಿ ಕೇನ ನಿಮಿತ್ತೇನ ಭಯಂಕರೀ । ತಥಾಚ ಮುಕ್ತೌ ಸತತೋರ್ಧ್ವಗತಿ-ವದ್ಭಾರ್ಯಾಪ್ಯಂಗೀಕಾರ್ಯೇತಿ ಭಾವಃ ॥ ೩೦೩ ॥

**ವೃಥಾ ವೇದೇಷು ದೇವೇಷು ಸತ್ಸು ಯಜ್ಞಾದಿಕಾರಿಷು ।**
**ನ ಮತ್ಸರಂ ಕುರು ಮಹಾದೋಷಮೀಷತ್ ಪರಾಕುರು ॥ ೩೦೪ ॥**

**ಅರ್ಥ–** ವೇದೇಷು = ಅಪೌರುಷೇಯವೇದಗಳಲ್ಲಿ, ದೇವೇಷು = ದೇವತೆಗಳಲ್ಲಿ ಯಜ್ಞಯಾಗಾದಿಕಾರಿಷು = ಯಜ್ಞಯಾಗವನ್ನು ಮಾಡುವಂತಹ, ಸತ್ಸು = ಸಜ್ಜನರಲ್ಲಿ ವೃಥಾ = ವ್ಯರ್ಥವಾಗಿ, ಮತ್ಸರಂ = ಮತ್ಸರವನ್ನು, ನ ಕುರು = ಮಾಡಬೇಡ. ಮಹಾದೋಷಂ = ದೋಷಗಳಲ್ಲಿ ದೊಡ್ಡವಾದ, ಮತ್ಸರಂ = ಮತ್ಸರವನ್ನು, ಈಷತ್ = ಸ್ವಲ್ಪವಾದರೂ, ಪರಾಕುರು = ಕಡಿಮೆಮಾಡು.

**ಅನುವಾದ–** ವೇದಗಳಲ್ಲಿ, ದೇವತೆಗಳಲ್ಲಿ ಮತ್ತು ಯಜ್ಞವನ್ನು ಮಾಡುವ ಬ್ರಾಹ್ಮಣಾದಿಗಳಲ್ಲಿ ವ್ಯರ್ಥವಾಗಿ ಮತ್ಸರವನ್ನು ಮಾಡಬೇಡ. ಈ ಮಹಾದೋಷವನ್ನು ಸ್ವಲ್ಪವಾದರೂ ಕಡಿಮೆ ಮಾಡಿಕೋ.

**ಭಾವವಿಲಾಸಿನೀ–** ವೃಥೇತ್ಯನೇನ ವೇದಾದಿನಿಂದನಂ ಮಹಾದೋಷಕರಂ ಮತ್ಸರಾದೇವೇತಿ ಸೂಚಯತಿ ॥ ೩೦೪ ॥

**ವಿವರಣೆ–** ವೃಥಾ ಎಂಬ ಶಬ್ದದಿಂದ ಸುರೋತ್ತಮರು ಜೈನಾದಿಗಳು ಮಾಡುವ ವೇದನಿಂದನೆಯು ಕೇವಲ ಮತ್ಸರದಿಂದ ಮಾತ್ರ ಎಂದು ಸೂಚಿಸುತ್ತಾರೆ.

**ಅತೋ ವೈದಿಕಮರ್ಯಾದೈವಾಂಗೀಕಾರ್ಯಾ ವಿವೇಕಿನಾ ।**
**ವೈದಿಕಾನಾಂ ತು ಕಲಹೋ ವೇದಾರ್ಥಾಸ್ಫೂರ್ತಿತಃ ಪರಂ ॥ ೩೦೫ ॥**

**ಅರ್ಥ–** ಅತಃ = ಆದ್ದರಿಂದ, ವಿವೇಕಿನಾ = ವಿವೇಕಿಯಾದ ಪುರುಷನಿಂದ, ವೈದಿಕಮರ್ಯಾದೈವ = ವೇದೋಕ್ತವಾದ ಧರ್ಮಮಾರ್ಗವೇ, ಅಂಗೀಕಾರ್ಯಾ = ಅಂಗೀಕರಿಸಲು ಯೋಗ್ಯ, ಪರಂ = ಆದರೆ, ವೈದಿಕಾನಾಂತು = ವೈದಿಕರುಗಳಿಗಾದರೂ ವೇದಾರ್ಥಾಸ್ಫೂರ್ತಿತಃ = ವೇದದ ನಿಜವಾದ ಅರ್ಥವನ್ನು ತಿಳಿಯದಿರುವುದರಿಂದ, ಕಲಹಃ = ವಿವಾದವು, ಭವತಿ = ಆಗುತ್ತದೆ.

**ಅನುವಾದ–** ಅತಃ= ಆದ್ದರಿಂದ ವಿವೇಕಿಯಾದ ಪುರುಷನು ವೈದಿಕ ಧರ್ಮ-ಮರ್ಯಾದೆಯನ್ನೇ ಸ್ವೀಕರಿಸಬೇಕು. ಇನ್ನು ವೈದಿಕರಲ್ಲಿಯೂ ಕೂಡ ಕಲಹವು ಉಂಟಾಗಲು ನಿಜವಾದ ವೇದದ ಅರ್ಥವೇನೆಂಬುದನ್ನು ತಿಳಿಯದೆ ಇರುವುದೇ ಕಾರಣವಾಗಿದೆ.

**ಭಾವವಿಲಾಸಿನೀ–** ಅತ ಇತ್ಯುಪಸಂಹಾರಃ । ನನು ವೈದಿಕಮರ್ಯಾದಾಂಗೀಕಾರಿಣಾಮಪಿ ಭವತಾಂ ಕುತಃ ಪರಸ್ಪರಂ ಕಲಹ ಇತ್ಯತ ಆಹ – **ವೈದಿಕಾನಾಮಿತಿ** ॥ (ಅಸ್ಫೂರ್ತಿತ ಇತ್ಯುಪಲಕ್ಷಣಮ್ । ವಿಪರೀತಸ್ಫೂರ್ತಿತ ಇತ್ಯಪಿ ಗ್ರಾಹ್ಯಮ್ । ಕಲಹಶಾಂತಿಸ್ತು ಬ್ರಹ್ಮ-ಮೀಮಾಂಸೋಕ್ತರೀತ್ಯಾ ಸಮ್ಯಗುಪಕ್ರಮಾದೀನಾಂ ನಿರ್ಣಯೇ ಸತಿ ಸ್ಯಾತ್ । ಅತ ಏವ ಮಧ್ವಭಾಷ್ಯೋಪರಿ ನ ಭಾಷ್ಯಮಿತಿ ಭಾವಃ) (ಪ್ರಕ್ಷಿಪ್ತೋಽಯಂ ಗ್ರಂಥಃ) ॥ ೩೦೫ ॥

**ವಿವರಣೆ**— ಇಲ್ಲಿ ಅಸ್ಫೂರ್ತಿತಃ ಎಂಬುದು ಉಪಲಕ್ಷಣವಾಗಿರುತ್ತದೆ. ವಿಪರೀತ ಸ್ಫೂರ್ತಿತಃ ಎಂಬುದಾಗಿಯೂ ತೆಗೆದುಕೊಳ್ಳಬೇಕು. ಕಲಹದ ಸಮಾಪ್ತಿಯು ಬ್ರಹ್ಮಮೀಮಾಂಸಾ-ಶಾಸ್ತ್ರೋಕ್ತರೀತಿಯಿಂದ, ಸಮೀಚೀನವಾದ ಉಪಕ್ರಮಾದಿಗಳ ನಿರ್ಣಯದಿಂದ ಆಗುವುದು. ಆದ್ದರಿಂದಲೇ ಮಧ್ವಭಾಷ್ಯದ ನಂತರ ಇನ್ನೊಂದು ಭಾಷ್ಯವು ಬರಲಿಲ್ಲ ಎಂದು ಅಭಿಪ್ರಾಯ. (ಅಸ್ಫೂರ್ತಿ= ಸರಿಯಾದ ಅರ್ಥವು ಹೊಳೆಯದಿರುವುದು, ವಿಪರೀತ ಸ್ಫೂರ್ತಿ= ತಪ್ಪಾದ ಅರ್ಥವು ಹೊಳೆಯುವುದು).

**ಕ್ವಚಿತ್ ಸದಸತೋಶ್ಚೈಕೀಭಾವಃ ಸ್ವಾರ್ಥೈಕ್ಯತೋ ಭವೇತ್ ।**
**ಸುರಾಸುರಾಃ ಸುಧಾರ್ಥೇಪ್ರಾಕ್‌ನೈಕೀಭೂತಾಃ ಕಿಮಂಬುಧೌ ॥ ೩೦೬ ॥**

**ಅರ್ಥ**—ಸದಸತೋಶ್ಚ= ಪ್ರಶಸ್ತಾಪ್ರಶಸ್ತವಾದಿಗಳ, ಏಕೀಭಾವಃ = ಒಟ್ಟಿಗೆ ಸೇರುವಿಕೆಯು, ಸ್ವಾರ್ಥೈಕ್ಯತಃ = ಅಭಿಪ್ರಾಯದ ಐಕ್ಯದಿಂದ, ಭವೇತ್ = ಆಗುತ್ತದೆ. ಪ್ರಾಕ್ = ಪೂರ್ವದಲ್ಲಿ, ಸುಧಾರ್ಥೇ = ಅಮೃತಕ್ಕೋಸ್ಕರವಾಗಿ, ಸುರಾಸುರಾಃ = ದೇವಾಸುರರು, ಏಕೀಭೂತಾಃ = ಒಂದಾಗಿದ್ದು ನ ಕಿಂ = ಇಲ್ಲವೇನು?

**ಅನುವಾದ**— ಸದ್ವಾದಿ ದುರ್ವಾದಿಗಳೂ ಕೂಡ ಒಮ್ಮೊಮ್ಮೆ ಸಮಾನ ಪ್ರಯೋಜನ ಸಿದ್ಧಿಗಾಗಿ ಒಗ್ಗಟ್ಟಿನಿಂದ ಕಾರ್ಯ ಮಾಡುವುದುಂಟು. ಹಿಂದೆ ಅಮೃತದ ಸಲುವಾಗಿ ದೇವತೆಗಳೂ ಮತ್ತು ಅಸುರರೂ ಒಟ್ಟಿಗೆ ಸೇರಲಿಲ್ಲವೇನು?

**ಭಾವವಿಲಾಸಿನೀ**— ತರ್ಹಿ ಮಾಂ ಪ್ರತಿ ಸರ್ವೇ ಭವದಾದಯ ಏಕೀಭೂಯ ಕುತೋ ವಿವದಂತ ಇತ್ಯತ ಆಹ — **ಕ್ವಚಿದಿತಿ** ॥ ಸದಸತೋಃ ಪ್ರಶಸ್ತಾಪ್ರಶಸ್ತಯೋರ್ವಾದಿನೋಃ । ತದನುಭಾವಯತಿ — **ಸುರಾಸುರಾ ಇತಿ** ॥ ಯದ್ವಾ ಮಹಾಪ್ರಮಾಣಭೂತೋ ವೇದಃ ಸದಸತೋಃ ಕಥಮಾಪಾತತೋಽಪ್ಯನುಕೂಲ ಇತ್ಯತ ಆಹ — **ಕ್ವಚಿದಿತಿ** ॥ ಯೋಜನಾ ತು ಪೂರ್ವವತ್ । ದೈತ್ಯಾನಾಮಮೃತಾಶಯಾ ದೇವೈಸ್ಸಹೈಕತ್ವವಾಸ ಇವ ಸ್ವೇಷಾಮಪ್ಯುಪಕಾರಃ ಸ್ಯಾದಿತಿ ದುರಾಶಯಾಸ್ಮದೇಕಾನುಕೂಲೇ ವೇದೇ ಪರೇಷಾಮಪಿ ಪ್ರವೇಶಃ । ವಸ್ತುತಸ್ತು ದೇವಾನಾಮೇವಾಮೃತಮಿವಾಸ್ಮಾಕಮೇವಾನುಕೂಲೋ ವೇದ ಇತಿ ಭಾವಃ । (ಯದ್ವಾ ವೇದೋಕ್ತಯಜ್ಞಕರ್ತವ್ಯತ್ವಾದೌ ಉಭಯೋಸ್ಸಮ್ಮತ್ಯಾ ತ್ವಯಾ ಸಹ ವಿವಾದ ಇತಿ ಭಾವಃ) (ಪ್ರಕ್ಷಿಪ್ತೋಽಯಂ ಗ್ರಂಥಃ) ॥ ೩೦೬ ॥

**ವಿವರಣೆ**— ವೈದಿಕರಾದ ನಿಮ್ಮಲ್ಲೇ ಒಗ್ಗಟ್ಟು ಇಲ್ಲದಿರುವಾಗ ಅವೈದಿಕ ಜೈನ ಬೌದ್ಧಾದಿ ಮತಾವಲಂಬಿಗಳಾದ ನಮ್ಮೊಂದಿಗೆ ನೀವೆಲ್ಲರೂ ಸೇರಿ ವಿವಾದ ಮಾಡುವುದೇಕೆ ಎಂಬ ಜೈನಾದಿಗಳ ಆಕ್ಷೇಪಕ್ಕೆ ಹೀಗೆ ಉತ್ತರಿಸಬೇಕು. ಚಾರ್ವಾಕ, ಬೌದ್ಧ, ಜೈನಾದಿಗಳು ವೇದಾಪ್ರಾಮಾಣ್ಯವಾದಿಗಳು. ಅವರನ್ನು ಸೋಲಿಸುವ ಸಮಾನ ಉದ್ದೇಶದಿಂದ ಎಲ್ಲ ವೈದಿಕರೂ ಒಟ್ಟಾಗುತ್ತಾರೆ. ಹಿಂದೆ ಅಮೃತಕ್ಕಾಗಿ ಕಡುವಿರೋಧಿಗಳಾದ ದೇವಾಸುರರು ಒಟ್ಟಾಗಲಿಲ್ಲವೇ?

ಈ ಶ್ಲೋಕಕ್ಕೆ ಇನ್ನೊಂದು ಹಿನ್ನೆಲೆಯನ್ನು ಹೇಳಬಹುದಾಗಿದೆ : ಮಹಾಪ್ರಮಾಣವಾದ ವೇದವು ಸದ್ವಾದಿಗಳಾದ ನಿಮಗೆ ಮಾತ್ರ ಅನುಕೂಲವಾಗಿರುವುದಾದರೆ ದುರ್ವಾದಿಗಳಾದ ಇತರ ವೈದಿಕರಿಗೆ ಮೇಲ್ನೋಟಕ್ಕಾದರೂ ಅದೇ ವೇದವು ಅನುಕೂಲಕರವೆಂದು ತೋರುವುದು ಹೇಗೆ ಎಂದು ಜೈನಾದಿಗಳ ಪ್ರಶ್ನೆ.

ಅದಕ್ಕೂ ಈ ಶ್ಲೋಕವು ಉತ್ತರವಾಗಿದೆ : ಅಮೃತದ ಆಸೆಯಿಂದ ಹಿಂದೆ ದೈತ್ಯರು ದೇವತೆಗಳೊಡನೆ ಸೇರಿಕೊಂಡಂತೆ ತಮ್ಮ ಸಿದ್ಧಾಂತಗಳಿಗೂ ವೇದಗಳಲ್ಲಿ ಆಧಾರ ಕಂಡೀತೆಂಬ ದುರಾಸೆಯಿಂದ ಇತರ ವೈದಿಕ ಮತದವರೂ ವೇದಗಳಲ್ಲಿ ಪ್ರವೇಶ ಮಾಡಿದ್ದಾರೆ. ವಾಸ್ತವಿಕವಾಗಿ ದೇವತೆಗಳೇ ಅಮೃತವನ್ನು ಪಡೆದುಕೊಂಡಂತೆ ತತ್ತ್ವವಾದಿಗಳಾದ ನಮಗೆ ಮಾತ್ರವೇ ವೇದಗಳು ಅನುಕೂಲಕರಗಳಾಗಿವೆ. ಅಥವಾ, ವೇದೋಕ್ತ ಯಜ್ಞಾದಿಕರ್ತವ್ಯಗಳ ವಿಷಯದಲ್ಲಿ ಎಲ್ಲ ವೈದಿಕರಿಗೂ ಸಹಮತವಿರುವುದರಿಂದ ನಾವು ಅವೈದಿಕರ ವಿರುದ್ಧ ಒಗ್ಗಟ್ಟನ್ನು ತೋರಿಸುತ್ತೇವೆ ಎಂದೂ ಹೇಳಬಹುದು.

**ತ್ಯಕ್ತೈಕ್ಯಮತ್ಯರೂಪೈಕ್ಯಾನ್ನಿಘ್ನಂತಿ ಬಲಿನೋऽಬಲಾನ್ ।**
**ಯಥಾ ಪುರಂದರಃ ಪೂರ್ವದೇವಾನ್ ದೇವರ್ಷಿಹರ್ಷಕೃತ್ ॥ ೩೦೭ ॥**

**ಅರ್ಥ–** ಯಥಾ= ಹೇಗೆ ದೇವರ್ಷಿಹರ್ಷಕೃತ್= ದೇವತೆಗಳು ಮತ್ತು ಋಷಿಗಳಿಗೆ ಹರ್ಷದಾಯಕನಾದ, ಪುರಂದರಃ= ಇಂದ್ರನು, ಪೂರ್ವದೇವಾನ್= ರಾಕ್ಷಸರನ್ನು, ನಿಜಘಾನ= ಕೊಂದನೋ, ತಥಾ= ಅದೇ ರೀತಿಯಲ್ಲಿ, ತ್ಯಕ್ತೈಕ ಮತ್ಯ್ಯರೂಪೈಕ್ಯಾನ್= ಬಿಡಲ್ಪಟ್ಟ ಸಮಾನ ಮನೋಭಾವವೆಂಬ, ಐಕ್ಯಾನ್= ಏಕತೆಯುಳ್ಳ, ಅಬಲಾನ್= ದುರ್ಬಲರನ್ನು, ಬಲಿನಃ= ಬಲಿಶಾಲಿಗಳು, ನಿಘ್ನಂತಿ= ಕೊಲ್ಲುತ್ತಾರೆ (ಸೋಲಿಸುತ್ತಾರೆ).

**ಅನುವಾದ–** ಮೊದಲು ಅಮೃತಮಥನಕಾಲದಲ್ಲಿ ದೇವತೆಗಳು ಮತ್ತು ದೈತ್ಯರ ನಡುವೆ ಒಗ್ಗಟ್ಟು ಇದ್ದೇ ಇತ್ತು. ಅಮೃತವು ಹುಟ್ಟಿದ ಬಳಿಕ ಆ ಒಗ್ಗಟ್ಟು ಮುರಿದಾಗ ದೇವರಾಜನಾದ ಇಂದ್ರನು ರಾಕ್ಷಸರನ್ನು ಕೊಂದು ದೇವತೆಗಳು ಮತ್ತು ಋಷಿಗಳಿಗೆ ಸಂತೋಷವುಂಟು ಮಾಡಿದನು. ಅದರಂತೆ ವೈದಿಕರು ಪರಸ್ಪರ ಒಗ್ಗಟ್ಟುಳ್ಳವರಾಗಿ ಅವೈದಿಕರನ್ನು ಖಂಡಿಸಿದರೂ ವೇದಾದಿಗಳ ವಾಸ್ತವಾರ್ಥವೇನೆಂಬ ಪ್ರಶ್ನೆ ಬಂದಾಗ ಮೊದಲು ಇದ್ದ ಒಗ್ಗಟ್ಟು ಭಿನ್ನವಾದಾಗ ಬಲಿಷ್ಠರಾದ ತತ್ತ್ವವಾದಿಗಳು ದುರ್ಬಲರಾದ ಇತರ ವೈದಿಕರನ್ನು ಸೋಲಿಸುತ್ತಾರೆ.

**ಭಾವವಿಲಾಸಿನೀ–** ಕ್ವಚಿತ್ ಸ್ವಾರ್ಥೇ ಏಕೀಭೂತಾ ಏವ ಮತ್ಯೈಕ್ಯಾಭಾವೇ ಪುನರ್ವಿವದಂತ ಇತ್ಯೇತದಪಿ ದೇವಾಸುರದೃಷ್ಟಾಂತೇನೈವ ದರ್ಶಯತಿ – **ತ್ಯಕ್ತೇತಿ** ॥ ೩೦೭ ॥

**ವಿವರಣೆ—** ಇಲ್ಲಿ ಅಸ್ಫೂರ್ತಿತಃ ಎಂಬುದು ಉಪಲಕ್ಷಣವಾಗಿರುತ್ತದೆ. ವಿಪರೀತ ಸ್ಫೂರ್ತಿತಃ ಎಂಬುದಾಗಿಯೂ ತೆಗೆದುಕೊಳ್ಳಬೇಕು. ಕಲಹದ ಸಮಾಪ್ತಿಯು ಬ್ರಹ್ಮಮೀಮಾಂಸಾ-ಶಾಸ್ತ್ರೋಕ್ತರೀತಿಯಿಂದ, ಸಮೀಚೀನವಾದ ಉಪಕ್ರಮಾದಿಗಳ ನಿರ್ಣಯದಿಂದ ಆಗುವುದು. ಆದ್ದರಿಂದಲೇ ಮಧ್ವಭಾಷ್ಯದ ನಂತರ ಇನ್ನೊಂದು ಭಾಷ್ಯವು ಬರಲಿಲ್ಲ ಎಂದು ಅಭಿಪ್ರಾಯ. (ಅಸ್ಫೂರ್ತಿ= ಸರಿಯಾದ ಅರ್ಥವು ಹೊಳೆಯದಿರುವುದು, ವಿಪರೀತ ಸ್ಫೂರ್ತಿ= ತಪ್ಪಾದ ಅರ್ಥವು ಹೊಳೆಯುವುದು).

**ಕ್ವಚಿತ್ ಸದಸತೋಶ್ಚೈಕೀಭಾವಃ ಸ್ವಾರ್ಥೈಕ್ಯತೋ ಭವೇತ್ ।**
**ಸುರಾಸುರಾಃ ಸುಧಾರ್ಥೇ ಪ್ರಾಕ್ ನೈಕೀಭೂತಾಃ ಕಿಮಂಬುಧೌ ॥ ೩೦೬ ॥**

**ಅರ್ಥ—** ಸದಸತೋಶ್ಚ = ಪ್ರಶಸ್ತಾಪ್ರಶಸ್ತವಾದಿಗಳ, ಏಕೀಭಾವಃ = ಒಟ್ಟಿಗೆ ಸೇರುವಿಕೆಯು, ಸ್ವಾರ್ಥೈಕ್ಯತಃ = ಅಭಿಪ್ರಾಯದ ಐಕ್ಯದಿಂದ, ಭವೇತ್ = ಆಗುತ್ತದೆ. ಪ್ರಾಕ್ = ಪೂರ್ವದಲ್ಲಿ ಸುಧಾರ್ಥೇ = ಅಮೃತಕ್ಕೋಸ್ಕರವಾಗಿ, ಸುರಾಸುರಾಃ = ದೇವಾಸುರರು, ಏಕೀಭೂತಾಃ = ಒಂದಾಗಿದ್ದು, ನ ಕಿಂ = ಇಲ್ಲವೇನು?

**ಅನುವಾದ—** ಸದ್ವಾದಿ ದುರ್ವಾದಿಗಳೂ ಕೂಡ ಒಮ್ಮೊಮ್ಮೆ ಸಮಾನ ಪ್ರಯೋಜನ ಸಿದ್ಧಿಗಾಗಿ ಒಗ್ಗಟ್ಟಿನಿಂದ ಕಾರ್ಯ ಮಾಡುವುದುಂಟು. ಹಿಂದೆ ಅಮೃತದ ಸಲುವಾಗಿ ದೇವತೆಗಳೂ ಮತ್ತು ಅಸುರರೂ ಒಟ್ಟಿಗೆ ಸೇರಲಿಲ್ಲವೇನು?

**ಭಾವವಿಲಾಸಿನೀ—** ತರ್ಹಿ ಮಾಂ ಪ್ರತಿ ಸರ್ವೇ ಭವದಾದಯ ಏಕೀಭೂಯ ಕುತೋ ವಿವದಂತ ಇತ್ಯತ ಆಹ – **ಕ್ವಚಿದಿತಿ** ॥ ಸದಸತೋಃ ಪ್ರಶಸ್ತಾಪ್ರಶಸ್ತಯೋರ್ವಾದಿನೋಃ । ತದನುಭಾವಯತಿ – **ಸುರಾಸುರಾ ಇತಿ** ॥ ಯದ್ವಾ ಮಹಾಪ್ರಮಾಣಭೂತೋ ವೇದಃ ಸದಸತೋಃ ಕಥಮಾಪಾತತೋಽಪ್ಯನುಕೂಲ ಇತ್ಯತ ಆಹ – **ಕ್ವಚಿದಿತಿ** ॥ ಯೋಜನಾ ತು ಪೂರ್ವವತ್ । ದೈತ್ಯಾನಾಮಮೃತಾಶಯಾ ದೇವೈಸ್ಸಹೈಕತ್ವವಾಸ ಇವ ಸ್ವೇಷಾಮಪ್ಯುಪಕಾರಃ ಸ್ಯಾದಿತಿ ದುರಾಶಯಾಸ್ಮದೇಕಾನುಕೂಲೇ ವೇದೇ ಪರೇಷಾಮಪಿ ಪ್ರವೇಶಃ । ವಸ್ತುತಸ್ತು ದೇವಾನಾಮೇವಾಮೃತಮಿವಾಸ್ಮಾಕಮೇವಾನುಕೂಲೋ ವೇದ ಇತಿ ಭಾವಃ । (ಯದ್ವಾ ವೇದೋಕ್ತಯಜ್ಞಕರ್ತವ್ಯತ್ವಾದೌ ಉಭಯೋಸ್ಸಮ್ಮತ್ಯಾ ತ್ವಯಾ ಸಹ ವಿವಾದ ಇತಿ ಭಾವಃ) (ಪ್ರಕ್ಷಿಪ್ತೋಽಯಂ ಗ್ರಂಥಃ) ॥ ೩೦೬ ॥

**ವಿವರಣೆ—** ವೈದಿಕರಾದ ನಿಮ್ಮಲ್ಲೇ ಒಗ್ಗಟ್ಟು ಇಲ್ಲದಿರುವಾಗ ಅವೈದಿಕ ಜೈನ ಬೌದ್ಧಾದಿ ಮತಾವಲಂಬಿಗಳಾದ ನಮ್ಮೊಂದಿಗೆ ನೀವೆಲ್ಲರೂ ಸೇರಿ ವಿವಾದ ಮಾಡುವುದೇಕೆ ಎಂಬ ಜೈನಾದಿಗಳ ಆಕ್ಷೇಪಕ್ಕೆ ಹೀಗೆ ಉತ್ತರಿಸಬೇಕು. ಚಾರ್ವಾಕ, ಬೌದ್ಧ, ಜೈನಾದಿಗಳು ವೇದಾಪ್ರಾಮಾಣ್ಯವಾದಿಗಳು. ಅವರನ್ನು ಸೋಲಿಸುವ ಸಮಾನ ಉದ್ದೇಶದಿಂದ ಎಲ್ಲ ವೈದಿಕರೂ ಒಟ್ಟಾಗುತ್ತಾರೆ. ಹಿಂದೆ ಅಮೃತಕ್ಕಾಗಿ ಕಡುವಿರೋಧಿಗಳಾದ ದೇವಾಸುರರು ಒಟ್ಟಾಗಲಿಲ್ಲವೇ?

ಈ ಶ್ಲೋಕಕ್ಕೆ ಇನ್ನೊಂದು ಹಿನ್ನೆಲೆಯನ್ನು ಹೇಳಬಹುದಾಗಿದೆ : ಮಹಾಪ್ರಮಾಣವಾದ ವೇದವು ಸದ್ವಾದಿಗಳಾದ ನಿಮಗೆ ಮಾತ್ರ ಅನುಕೂಲವಾಗಿರುವುದಾದರೆ ದುರ್ವಾದಿಗಳಾದ ಇತರ ವೈದಿಕರಿಗೆ ಮೇಲ್ನೋಟಕ್ಕಾದರೂ ಅದೇ ವೇದವು ಅನುಕೂಲಕರವೆಂದು ತೋರುವುದು ಹೇಗೆ ಎಂದು ಜೈನಾದಿಗಳ ಪ್ರಶ್ನೆ.

ಅದಕ್ಕೂ ಈ ಶ್ಲೋಕವು ಉತ್ತರವಾಗಿದೆ : ಅಮೃತದ ಆಸೆಯಿಂದ ಹಿಂದೆ ದೈತ್ಯರು ದೇವತೆಗಳೊಡನೆ ಸೇರಿಕೊಂಡಂತೆ ತಮ್ಮ ಸಿದ್ಧಾಂತಗಳಿಗೂ ವೇದಗಳಲ್ಲಿ ಆಧಾರ ಕಂಡೀತೆಂಬ ದುರಾಸೆಯಿಂದ ಇತರ ವೈದಿಕ ಮತದವರೂ ವೇದಗಳಲ್ಲಿ ಪ್ರವೇಶ ಮಾಡಿದ್ದಾರೆ. ವಾಸ್ತವಿಕವಾಗಿ ದೇವತೆಗಳೇ ಅಮೃತವನ್ನು ಪಡೆದುಕೊಂಡಂತೆ ತತ್ತ್ವವಾದಿಗಳಾದ ನಮಗೆ ಮಾತ್ರವೇ ವೇದಗಳು ಅನುಕೂಲಕರಗಳಾಗಿವೆ. ಅಥವಾ, ವೇದೋಕ್ತ ಯಜ್ಞಾದಿಕರ್ತವ್ಯಗಳ ವಿಷಯದಲ್ಲಿ ಎಲ್ಲ ವೈದಿಕರಿಗೂ ಸಹಮತವಿರುವುದರಿಂದ ನಾವು ಅವೈದಿಕರ ವಿರುದ್ಧ ಒಗ್ಗಟ್ಟನ್ನು ತೋರಿಸುತ್ತೇವೆ ಎಂದೂ ಹೇಳಬಹುದು.

**ತ್ಯಕ್ತೈಕ್ಯಮತ್ಯರೂಪೈಕ್ಯಾನ್ನಿಘ್ನಂತಿ ಬಲಿನೋಽಬಲಾನ್ ।**
**ಯಥಾ ಪುರಂದರಃ ಪೂರ್ವದೇವಾನ್ ದೇವರ್ಷಿಹರ್ಷಕೃತ್ ॥ ೩೦೭ ॥**

**ಅರ್ಥ–** ಯಥಾ= ಹೇಗೆ ದೇವರ್ಷಿಹರ್ಷಕೃತ್= ದೇವತೆಗಳು ಮತ್ತು ಋಷಿಗಳಿಗೆ ಹರ್ಷದಾಯಕನಾದ, ಪುರಂದರಃ= ಇಂದ್ರನು, ಪೂರ್ವದೇವಾನ್= ರಾಕ್ಷಸರನ್ನು, ನಿಜಘಾನ= ಕೊಂದನೋ, ತಥಾ= ಅದೇ ರೀತಿಯಲ್ಲಿ, ತ್ಯಕ್ತೈಕ ಮತ್ಯರೂಪೈಕ್ಯಾನ್= ಬಿಡಲ್ಪಟ್ಟ ಸಮಾನ ಮನೋಭಾವವೆಂಬ, ಐಕ್ಯಾನ್= ಏಕತೆಯುಳ್ಳ, ಅಬಲಾನ್= ದುರ್ಬಲರನ್ನು, ಬಲಿನಃ= ಬಲಿಶಾಲಿಗಳು, ನಿಘ್ನಂತಿ= ಕೊಲ್ಲುತ್ತಾರೆ (ಸೋಲಿಸುತ್ತಾರೆ).

**ಅನುವಾದ–** ಮೊದಲು ಅಮೃತಮಥನಕಾಲದಲ್ಲಿ ದೇವತೆಗಳು ಮತ್ತು ದೈತ್ಯರ ನಡುವೆ ಒಗ್ಗಟ್ಟು ಇದ್ದೇ ಇತ್ತು. ಅಮೃತವು ಹುಟ್ಟಿದ ಬಳಿಕ ಆ ಒಗ್ಗಟ್ಟು ಮುರಿದಾಗ ದೇವರಾಜನಾದ ಇಂದ್ರನು ರಾಕ್ಷಸರನ್ನು ಕೊಂದು ದೇವತೆಗಳು ಮತ್ತು ಋಷಿಗಳಿಗೆ ಸಂತೋಷವುಂಟು ಮಾಡಿದನು. ಅದರಂತೆ ವೈದಿಕರು ಪರಸ್ಪರ ಒಗ್ಗಟ್ಟುಳ್ಳವರಾಗಿ ಅವೈದಿಕರನ್ನು ಖಂಡಿಸಿದರೂ ವೇದಾದಿಗಳ ವಾಸ್ತವಾರ್ಥವೇನೆಂಬ ಪ್ರಶ್ನೆ ಬಂದಾಗ ಮೊದಲು ಇದ್ದ ಒಗ್ಗಟ್ಟು ಭಿನ್ನವಾದಾಗ ಬಲಿಷ್ಠರಾದ ತತ್ತ್ವವಾದಿಗಳು ದುರ್ಬಲರಾದ ಇತರ ವೈದಿಕರನ್ನು ಸೋಲಿಸುತ್ತಾರೆ.

**ಭಾವವಿಲಾಸಿನೀ–** ಕ್ವಚಿತ್ ಸ್ಥಾನೇ ಏಕೀಭೂತಾ ಏವ ಮತ್ಯೈಕ್ಯಾಭಾವೇ ಪುನರ್ವಿವದಂತ ಇತ್ಯೇತದಪಿ ದೇವಾಸುರದೃಷ್ಟಾಂತೇನೈವ ದರ್ಶಯತಿ – **ತ್ಯಕ್ತೇತಿ** ॥ ೩೦೭ ॥

**ವಿವರಣೆ–** ಒಂದು ಕಡೆ ಏಕೀಭೂತರಾದರೂ ಪುನಃ ಭಿನ್ನಮತಿಯು ಉಂಟಾದರೆ ಪುನಃ ವಿವಾದವನ್ನು ಮಾಡುತ್ತಾರೆ ಎಂಬುದನ್ನೂ ದೇವಾಸುರದೃಷ್ಟಾಂತದಿಂದಲೇ ಈ ಶ್ಲೋಕದಲ್ಲಿ ಉಪಪಾದನೆ ಮಾಡುತ್ತಾರೆ.

ರಾಕ್ಷಸ ಶಬ್ದಕ್ಕೆ ಪರ್ಯಾಯ ಪದವಾದ ಪೂರ್ವದೇವಾಃ ಎಂಬ ಶಬ್ದವು ಮೊದಲು ದೇವತೆಗಳೊಂದಿಗೆ ಒಗ್ಗಟ್ಟಿನಿಂದ ಇದ್ದ ರಾಕ್ಷಸರು ಎಂಬ ಭಾವವನ್ನೂ ಹೊಮ್ಮಿಸುತ್ತದೆ.

**ಪ್ರತಿಪಕ್ಷೀ ಸದೃಕ್ಷಃ ಸ್ಯಾತ್ ಪ್ರಾಚೋ ನೀಚೋ ನವೈ ಭವೇತ್ ।**
**ಕಾಲಾತ್ಯಯಾಪದಿಷ್ಟಸ್ಯ ನೋ ಚೇತ್ ಸತ್‌ಪ್ರತಿಪಕ್ಷತಾ ॥ ೩೦೮ ॥**

**ಅರ್ಥ–** ಪ್ರಾಚಃ = ನಿರವಕಾಶಾರ್ಥವಾದಿಯಾದ ತತ್ತ್ವವಾದಿಗೆ, ನೀಚಃ = ಪೂರ್ವೋತ್ತರ ವಿರುದ್ಧವಾದ ಅರ್ಥವನ್ನು ಹೇಳುವ ಮತ್ತು ಅನ್ಯಾರ್ಥದಲ್ಲಿ ಸಾವಕಾಶವಾದ ಅರ್ಥವನ್ನು ಹೇಳುವ, ಪ್ರತಿಪಕ್ಷೀ = ಮಾಯಾವಾದಿ ಮೊದಲಾದ ಪ್ರತಿವಾದಿಯು, ಸದೃಕ್ಷಃ = ಸಮಾನನು ನವೈ ಭವೇತ್ = ಎಂದೂ ಆಗಲಾರ. ನೋ ಚೇತ್ = ಇಲ್ಲದಿದ್ದರೆ, ಕಾಲಾತ್ಯಯಾಪದಿಷ್ಟಸ್ಯ = ಬಾಧರೂಪವಾದ ದೋಷಕ್ಕೆ, ಸತ್ಪ್ರತಿಪಕ್ಷತಾ = ಸತ್ಪ್ರತಿಪಕ್ಷತ್ವವು, ಸ್ಯಾತ್ = ಬಂದೀತು.

**ಅನುವಾದ– ನಿರವಕಾಶಾರ್ಥವಾದಿಯಾದ ತತ್ತ್ವವಾದಿಗೆ ಪೂರ್ವೋತ್ತರವಿರುದ್ಧವಾದ ಮತ್ತು ಅನ್ಯಾರ್ಥದಲ್ಲಿ ಸಾವಕಾಶವಾದ ಅರ್ಥವನ್ನು ಹೇಳುವ ಮಾಯಾವಾದಿ ಮೊದಲಾದ ವೈದಿಕರು ಎಂದೂ ಸಮಬಲರಾಗುವುದಿಲ್ಲ. ಇಲ್ಲದಿದ್ದರೆ ಬಾಧದೋಷಕ್ಕೆ ಸತ್ಪ್ರತಿಪಕ್ಷತ್ವವು ಬರಬೇಕಾದೀತು.**

**ಭಾವವಿಲಾಸಿನೀ–** ನನು ತಥಾಪಿ ಸತಾಮಸತಾಂ ಚ ವೈದಿಕತ್ವೇನ ಸಾಮ್ಯಾತ್ತತ್ತ್ವವಾದಿನಾ ಭವತಾ ಮಾಯಾವಾದೀ ಜೇತುಮಶಕ್ಯ ಇತ್ಯತ ಆಹ – **ಪ್ರತಿಪಕ್ಷೀತಿ** ॥ ಪ್ರತಿಪಕ್ಷೀ ಪ್ರತಿವಾದೀ । ಸದೃಕ್ಷಃ ಸದೃಶಃ । ತತ್ತ್ವವಾದಿವತ್ ನಿರವಕಾಶತಯಾ ವೇದಾರ್ಥವಾದೀತಿ ಯಾವತ್ । ಪ್ರಾಚಃ ಶ್ರೇಷ್ಠಸ್ಯ ನಿರವಕಾಶಾರ್ಥವಾದಿನ ಇತಿ ಯಾವತ್ । ನೀಚಃ ಅಪಕೃಷ್ಟಃ ಸಾವಕಾಶಪೂರ್ವೋತ್ತರ-ವಿರುದ್ಧಾರ್ಥವಾದೀ । ತದನಂಗೀಕಾರೇ ಬಾಧಕಮಾಹ – **ಕಾಲಾತ್ಯಯಾಪದಿಷ್ಟಸ್ಯೇತಿ** ॥ ನೋ ಚೇತ್ ಸದೃಶಃ ಪ್ರತಿಪಕ್ಷೀ ನೋ ಚೇತ್ । ಕಾಲಾತ್ಯಯಾಪದಿಷ್ಟಸ್ಯ ಸತ್ಪ್ರತಿಪಕ್ಷತಾ ಸ್ಯಾತ್ । ನೀಚಸ್ಯಾಪಿ ಪ್ರತಿಪಕ್ಷತ್ವೇ ವಹ್ನಿರನುಷ್ಣಃ ಪದಾರ್ಥತ್ವಾದಿತ್ಯನುಮಾನಸ್ಯಾಪಿ ವಹ್ನೇರುಷ್ಣತ್ವಗ್ರಾಹಿ-ಸ್ಪಾರ್ಶನಪ್ರತ್ಯಕ್ಷಂ ಪ್ರತಿ ವಾ ತದನುಗೃಹೀತಪ್ರಬಲಾನುಮಾನಂ ಪ್ರತಿ ವಾ ಸತ್ಪ್ರತಿಪಕ್ಷತಾ ಸ್ಯಾತ್ । ತಥಾಚ ಕಾಲಾತ್ಯಯಾಪದಿಷ್ಟಸ್ಯೋಚ್ಛೇದಃ ಸ್ಯಾದಿತಿ ಭಾವಃ ॥ ೩೦೮ ॥

**ವಿವರಣೆ–** ಆದರೂ ಸದಸದ್ವಾದಿಗಳಿಬ್ಬರೂ ವೈದಿಕರಾದುದರಿಂದ ಸಾಮ್ಯ ವಿರುವುದರಿಂದ ತತ್ತ್ವವಾದಿಗಳು ಮಾಯಾವಾದಿ ಮೊದಲಾದ ವೈದಿಕರನ್ನು ಗೆಲ್ಲಲು

ಸಾಧ್ಯವಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ನಮಗೂ ಮಾಯಾವಾದಿಗೂ ಸಾಮ್ಯವಿಲ್ಲ. ನಾವು ನಿರವಕಾಶವಾದ ಅರ್ಥವನ್ನು ಹೇಳುವುದರಿಂದ ಪ್ರಬಲರು ಪ್ರತಿವಾದಿಗಳು ಸಾವಕಾಶವಾದ ಅರ್ಥವನ್ನು ಹೇಳುವುದರಿಂದ ದುರ್ಬಲರು. ದುರ್ಬಲರು ಪ್ರಬಲರಿಗೆ ಎಂದೂ ಸಮಾನರಾಗುವುದಿಲ್ಲ. ಆದ್ದರಿಂದ ನಾವು ಗೆಲ್ಲುತ್ತೇವೆ. ದುರ್ಬಲರು ಪ್ರಬಲರಿಗೆ ಸಮಾನರೆಂದು ಒಪ್ಪಿದರೆ ಅತಿಪ್ರಸಂಗವು ಬರುತ್ತದೆ. ಅಗ್ನಿಃ ಉಷ್ಣಃ ಅಗ್ನಿತ್ವಾತ್ ಎಂಬ ಅನುಮಾನವು ಪ್ರತ್ಯಕ್ಷಾನುಗೃಹೀತವಾದುದರಿಂದ ಪ್ರಬಲ. ಅಗ್ನಿಃ ಅನುಷ್ಣಃ ಪದಾರ್ಥತ್ವಾತ್ ಎಂಬ ಅನುಮಾನವು ದುರ್ಬಲ. ಆದ್ದರಿಂದ ಮೊದಲನೆಯ ಅನುಮಾನಕ್ಕೆ ವಿರೋಧಿಯಲ್ಲ. ಈ ಎರಡನೆಯ ಅನುಮಾನದಲ್ಲಿ ಬೇರೆ ಹೇತುವಿನಿಂದ ಸಾಧ್ಯಾಭಾವವನ್ನು ಸಾಧಿಸುವುದರಿಂದ ಅದು ಸತ್ಪ್ರತಿಪಕ್ಷವೆನಿಸುತ್ತದೆ. ಅದು ದುರ್ಬಲವಾದುದರಿಂದ ಮೊದಲನೆಯ ಅನುಮಾನಕ್ಕೆ ವಿರೋಧಿಯಾಗುವುದಿಲ್ಲ. ದುರ್ಬಲವೂ ವಿರೋಧಿ ಎಂದು ಒಪ್ಪಿದರೆ ಮೊದಲನೆಯ ಅನುಮಾನಕ್ಕೆ ವಿರೋಧವನ್ನು ಮಾಡಿ ಸಾಧ್ಯಸಾಧನೆಯನ್ನು ಪ್ರತಿಬಂಧಿಸುತ್ತದೆ. ಆಗ ಸತ್ಪ್ರತಿಪಕ್ಷವೇ ಬಾಧವೆನಿಸುವುದರಿಂದ ಬೇರೆ ಬಾಧರೂಪವಾದ ದೋಷವನ್ನು ಅಂಗೀಕರಿಸಬೇಕಾದ ಅವಶ್ಯಕತೆ ಇಲ್ಲವೆಂಬ ಅತಿಪ್ರಸಂಗವು ಬರುವುದೆಂದು ಅಭಿಪ್ರಾಯ.

**ಮಾಯಾವಾದಿಗಳು ಸಹ ಬಹಳ ಗ್ರಂಥಗಳನ್ನು ಬರೆದಿರುವುದಿರಿಂದ ತತ್ವವಾದಿಗಳ ಸಾಮ್ಯವಿದೆ ಎಂದರೆ ಅದನ್ನು ನಿರಾಕರಿಸುತ್ತಾರೆ ಮಹತ್ವಂ ಚ ಎಂಬ ಶ್ಲೋಕದಿಂದ-**

**ಮಹತ್ವಂ ಚ ಗುಣೇನೈವ ನಾಕಾರೇಣ ಧನೇನ ವಾ ।**
**ಸಾವಕಾಶೈಕ್ಯವಾಕ್ಯಾನಿ ಬಾಧತೇ ಕಿಂ ನ ಭೇದವಾಕ್ ॥ ೩೦೯ ॥**

**ಅರ್ಥ–** ಮಹತ್ವಂಚ = ಮಹತ್ವವಾದರೂ, ಗುಣೇನೈವ = ಯುಕ್ತ್ಯಾದಿಗುಣಗಳಿಂದಲೇ, ಅಸ್ತಿ = ಇರುತ್ತದೆ, ಆಕಾರೇಣ = ಆಕಾರದಿಂದಾಗಲಿ, ಧನೇನ ವಾ = ಆಭಾಸಯುಕ್ತಿಯಿಂದ, ನ = ಇರುವುದಿಲ್ಲ, ಭೇದವಾಕ್ = ಜೀವೇಶ್ವರ ಭೇದವನ್ನು ಹೇಳುಮಾತು, ಸಾವಕಾಶ = ಇನ್ನೊಂದು ಅರ್ಥವನ್ನು ಹೇಳಲಿಕ್ಕೆ ಬರುವ, ಐಕ್ಯವಾಕ್ಯಾನಿ = ಜೀವಬ್ರಹ್ಮರಿಗೆ ಐಕ್ಯವನ್ನು (ಅಭೇದವನ್ನು) ಹೇಳುವ ವಾಕ್ಯಗಳನ್ನು, ಕಿಂನ ಬಾಧತೇ = ಬಾಧಿಸುವುದಿಲ್ಲವೇನು?

**ಅನುವಾದ– ಮಾಯಾವಾದಿಗಳಿಗೆ ಮಹತ್ವವಿಲ್ಲ. ಮಹತ್ವವನ್ನು ಆಕಾರದಿಂದ ಆಗಲಿ, ಆಭಾಸಯುಕ್ತಿಗಳಿಂದಾಗಲಿ ಹೇಳುವುದಿಲ್ಲ. ನಿರವಕಾಶತ್ವ ಹಾಗು ಯುಕ್ತ್ಯಾದಿ ಗುಣಗಳಿಂದ ಎಂದು ತಿಳಿಯಬೇಕು. ನಿರವಕಾಶವಾದ (ಇನ್ನೊಂದರ್ಥವನ್ನು ಹೇಳಲಿಕ್ಕೆಬರದಿರುವ) ಭೇದವಾಕ್ಯಕ್ಕೆ ಯಾವ ಮಹತ್ವವು ಉಂಟೋ ಅಂತಹ ಮಹತ್ವವು ಐಕ್ಯವಾಕ್ಯಗಳಿಗೆ ಇರುವುದಿಲ್ಲ ಮತ್ತು ಯುಕ್ತಿರಹಿತವಾದ ಬೃಹದ್‌ಗ್ರಂಥಕರ್ತೃಗಳಾದ ಮಾಯಾವಾದಿಗಳಿಗೆ ಮಹತ್ವಬರಲಿಲ್ಲ. ಯುಕ್ತಿಯಿಂದ**

ಕೂಡಿದ, ನಿರವಕಾಶಾರ್ಥವನ್ನು ಪ್ರತಿಪಾದಿಸುವ ತತ್ವವಾದಕ್ಕೆ ಮಹತ್ವವಿದೆ ಎಂದು ತಿಳಿಯಬೇಕು.

**ಭಾವವಿಲಾಸಿನೀ–** ನನು ಮಾಯಾವಾದಿನಾಮಪಿ ಬಹುಗ್ರನ್ಥಕರ್ತೃತ್ವಾತ್ ತತ್ತ್ವವಾದಿಸಾಮ್ಯಮಿತ್ಯತ ಆಹ – **ಮಹತ್ತ್ವಂ ಚೇತಿ** ॥ ಗುಣೇನೈವ ಯುಕ್ತ್ಯಾದಿಗುಣೇನೈವ । ಗುಣವತ ಏವ ಮಹತ್ತ್ವಮುಪಪಾದಯತಿ – **ಸಾವಕಾಶೇತಿ** ॥ ನಿರವಕಾಶತ್ವಗುಣವತೀ ಭೇದವಾಗೇಕೈವ ಸಾವಕಾಶೈಕ್ಯವಾಕ್ಯಾನಿ ನ ಬಾಧತೇ ಕಿಮ್, ಬಾಧತ ಏವ । ಸಾವಕಾಶೈಕ್ಯವಾಕ್ಯಾನೀತ್ಯನೇನ ನಿರವಕಾಶತ್ವಾಭಾವಂ ಬಹುತ್ವಂ ನಾನಾರ್ಥಾನುಕೂಲತ್ವಂ ಚ ಧ್ವನಯತಿ । ತಥಾಚ ನಿರವಕಾಶಭೇದವಾಕ್ಯಸ್ಯ ಯಥಾ ಮಹತ್ತ್ವಂ ಸಾವಕಾಶೈಕ್ಯವಾಕ್ಯಸ್ಯ ನಿರವಕಾಶತ್ವಲಕ್ಷಣಗುಣಾಭಾವೇನಾಮಹತ್ತ್ವಂ ಚ, ತಥಾ ಯುಕ್ತಿರಹಿತಬಹುಗ್ರನ್ಥಕರ್ತೄಣಾಂ ಮಾಯಾವಾದಿನಾಂ ನ ಮಹತ್ತ್ವಮ್ । ಸಯುಕ್ತಿಕಗ್ರಂಥಕರ್ತೄಣಾಂ ತತ್ತ್ವವಾದಿನಾಮೇವ ಮಹತ್ತ್ವಮ್ । ಅತೋ ನ ವೈದಿಕತ್ವಮಾತ್ರೇಣೋಭಯೋಸ್ಸಾಮ್ಯಮಿತಿ ಭಾವಃ ॥ ೩೦೯ ॥

**ವಿವರಣೆ–** ಶ್ಲೋಕದಲ್ಲಿ ಸಾವಕಾಶ ಎಂಬುದು ಉಪಲಕ್ಷಣವಾಗಿದೆ. ಉಪಜೀವಕ ಎಂದೂ ಸ್ವೀಕರಿಸಬೇಕು ಹೀಗೆ ಸ್ವೀಕರಿಸಿದಾಗ ಭೇದವಾಕ್ ಎಂಬ ಪದದ ನಂತರ ನಿರವಕಾಶ ಉಪಜೀವ್ಯ ಎಂದು ಶೇಷಪೂರಣೆ ಮಾಡಬೇಕು. ಅಂದರೆ ಭೇದವನ್ನು ಪ್ರತಿಪಾದಿಸುವ ವಾಕ್ಯವು ನಿರವಕಾಶವಾಗಿದ್ದಲ್ಲದೆ ಉಪಜೀವ್ಯವೂ ಆಗಿದೆ ಎಂದರ್ಥ ಬರುತ್ತದೆ. ಇದು ಮಹತ್ವವನ್ನು ಉಪಪಾದಿಸುವಂತಾದ್ದಾಗಿದೆ. ಒಂದೇ ಒಂದು ಸ್ವಭಾವದಿಂದ ಪ್ರಬಲವಾದ ಭೇದವಾಕ್ಯವು ದುರ್ಬಲವಾದ ಅನೇಕ ಐಕ್ಯವಾಕ್ಯಗಳನ್ನು ಬಾಧಿಸುತ್ತದೆ ಎಂದು ತಿಳಿಯಬೇಕು. ಆದ್ದರಿಂದ ವೈದಿಕತ್ವ ಮಾತ್ರದಿಂದ ಮಾಯವಾದಿಗಳಿಗೆ ಹಾಗು ತತ್ವವಾದಿಗಳಿಗೆ ಸಾಮ್ಯವಿಲ್ಲವೆಂದು ತಿಳಿಯಬೇಕು.

ಭೇದ ಶ್ರುತಿಯು ಸಹ ಮಿಥ್ಯಾಭೂತವಾದ ಭೇದವನ್ನು (ಜೀವಬ್ರಹ್ಮರ ಭೇದವನ್ನು) ಹೇಳುತ್ತವೆ ಎಂಬುದನ್ನು ನಿರಾಕರಿಸುತ್ತಾರೆ ಮಾನತ್ವಸ್ಯ ಸ್ವತಸ್ತ್ವೇನ ಇತ್ಯಾದಿ ಶ್ಲೋಕದಿಂದ

**ಮಾನತ್ವಸ್ಯ ಸ್ವತಸ್ತ್ವೇನ ಸಾ ನಾತತ್ವಂ ವದೇತ್ ಕ್ವಚೇತ್ ।**
**ದೋಷಶ್ಚ ವೇದೇ ನಾನಾದೌ ಬಾಧೋಽಪ್ಯನ್ಯಾರ್ಥತೈವ ತತ್ ॥ ೩೧೦ ॥**

**ಅರ್ಥ–** ಮಾನತ್ವಸ್ಯ = ಪ್ರಾಮಾಣ್ಯಕ್ಕೆ, ಸ್ವತಸ್ತ್ವೇನ = ಸ್ವತಸ್ತ್ವವಿರುವದರಿಂದ, ಸಾ = ಆ ಭೇದವಾಕ್ಯವು, ಅತತ್ವಂ = ಮಿಥ್ಯಾರೂಪವಾದಭೇದವನ್ನು, ಕ್ವಚಿದಪಿ = ಎಲ್ಲಿಯೂ, ನ ವದೇತ್ = ಹೇಳುವುದಿಲ್ಲ ಅನಾದೌ = ಅನಾದಿಯಾದ, ವೇದೇ = ವೇದದಲ್ಲಿ, ದೋಷಶ್ಚ = ದೋಷವು ಕೂಡ, ನ = ಇಲ್ಲ, ಬಾಧೋಪಿ = ಬಾಧವೆಂದರೆ, ಅನ್ಯಾರ್ಥತೈವ = ವಿರುದ್ಧಾರ್ಥವನ್ನು ಬಿಟ್ಟು ಅವಿರುದ್ಧಾರ್ಥವನ್ನು ಹೇಳುವುದು.

**ಅನುವಾದ–** ತತ್ವವಾದಿಗಳ ಮತದಲ್ಲಿ ಪ್ರಾಮಾಣ್ಯಕ್ಕೆ ಸ್ವತಸ್ತ್ವವಿರುವುದರಿಂದ ಭೇದಶ್ರುತಿಯು ಎಲ್ಲಿಯೂ ಅತತ್ವವನ್ನು (ಮಿಥ್ಯಾರೂಪವಾದ ಭೇದ-ರೂಪಾರ್ಥವನ್ನು) ಹೇಳುವುದಿಲ್ಲ. ಮತ್ತು ಅನಾದಿಯಾದ, ಅಪೌರುಷೇಯ ವಾದವೇದದಲ್ಲಿ ದೋಷವಿಲ್ಲ. ಆಪಾತತಃಅಭೇದವನ್ನು ಪ್ರತಿಪಾದಿಸುವ ಶ್ರುತಿಯಿಂದ ಬಾಧವೂ ಇರುವುದಿಲ್ಲ. ಆ ಶ್ರುತಿಗೆ ಅನ್ಯಾರ್ಥವನ್ನು ಕಲ್ಪಿಸಿ ಬಾಧವನ್ನು ಪರಿಹರಿಸಬಹುದು. ಇಲ್ಲಿ ಬಾಧವೆಂದರೆ ಅಪ್ರಾಮಾಣ್ಯವೆಂದು ಹೇಳಬಾರದು. ಆಪಾತ ಪ್ರತೀತವಾದವಿರುದ್ಧವಾದ ಅರ್ಥವನ್ನು ಬಿಟ್ಟು ಅವಿರುದ್ಧವಾದ ಅರ್ಥಕಲ್ಪನೆ ಎಂದು ಹೇಳಬೇಕು. ಆದ್ದರಿಂದ ಭೇದ ಶ್ರುತಿಯು ಅರ್ಥಾಂತರವನ್ನು ಹೇಳುವುದಿಲ್ಲ. ಭೇದರೂಪವಾದ ಅರ್ಥವನ್ನೇ ತಿಳಿಸುತ್ತದೆಯಾದ್ದರಿಂದ ನಿರವಕಾಶವಾಗಿ ಪ್ರಮಾಣವಾಗಿದೆ.

**ಭಾವವಿಲಾಸಿನೀ–** ನನು ಮಿಥ್ಯಾಭೂತಮೇವ ಭೇದಂ ಭೇದವಾಗ್ ವದತೀತ್ಯತ ಆಹ – **ಮಾನತ್ವಸ್ಯೇತಿ ॥** ಭೇದವಾಕ್ಯಜನಿತಭೇದಜ್ಞಾನಸ್ಯ ಯನ್ಮಾನತ್ವಮ್, ತದ್ವತಿ ತತ್ಪ್ರಕಾರಕತ್ವ-ಲಕ್ಷಣಪ್ರಮಾಣತ್ವಮ್, ತಸ್ಯ ಸ್ವತಸ್ತ್ವೇನ ದೋಷಾಭಾವೇ ಜ್ಞಾನಕರಣಮಾತ್ರಜನ್ಯತ್ವೇನೇ-ತ್ಯರ್ಥಃ । ಸಾ ಭೇದವಾಕ್ ಅತತ್ವಂ ಮಿಥ್ಯಾಭೂತಭೇದರೂಪಾರ್ಥಂ ಕ್ವಚಿದಪಿ ನ ವದೇತ್ । ಆವಯೋರ್ಮತೇ ಪ್ರಾಮಾಣ್ಯಸ್ಯ ಸ್ವತಸ್ತ್ವೇನೌತ್ಸರ್ಗಿಕತ್ವಾದ್ ಭೇದವಾಕ್ಯಜನಿತಂ ಜ್ಞಾನ-ಮುತ್ಸರ್ಗತಃ ಪ್ರಮೈವ ಭವೇತ್ । ಅತಸ್ತದ್ವಿಷಯೋ ಭೇದೋಽಪಿ ವಿದ್ಯಮಾನ ಏವ ಭವೇನ್ನಾವಿದ್ಯಮಾನ ಇತಿ ಭಾವಃ । ನನು ದೋಷಜನ್ಯತ್ವೇನಾಪವಾದೇನ ವೇದವಾಕ್ಯಜನ್ಯ-ಜ್ಞಾನೇಽಪ್ಯಪ್ರಾಮಾಣ್ಯಮಿತ್ಯತ ಆಹ – **ದೋಷಶ್ಚೇತಿ ॥** ಸ್ಪಷ್ಟೇ ನಿರವಕಾಶೇ ಚ ಭೇದವಾಕ್ಯೇ ಪ್ರತಿಪತ್ತೃದೋಷಾಸಂಭವೇನ ವೇದರೂಪಕರಣದೋಷಾತ್ಖಲು ಜ್ಞಾನೇ ದುಷ್ಟತಾ ವಾಚ್ಯಾ। ಅನಾದೌ ವೇದೇ ಚ ಸ ನಾಸ್ತೀತಿ ವೇದಜನ್ಯಭೇದಜ್ಞಾನಂ ಪ್ರಮೈವೇತಿ ಭಾವಃ । ನನು ಭವ-ತೈವೈಕ್ಯವಾಕ್ಯಸ್ಯ ಬಾಧ ಉಕ್ತಃ । ತತ್ಕಥಂ ನ ವೇದಸ್ಯ ದುಷ್ಟತ್ವಮಿತ್ಯತ ಆಹ – **ಬಾಧೋಽಪೀತಿ ॥** ತದ್ ವೇದಸ್ಯ ಸರ್ವಥಾಽಪ್ರಾಮಾಣ್ಯೇ ರೂಪದುಷ್ಟತ್ವಾಸಂಭವಾದ್ ಆಪಾತಪ್ರತೀತ-ವಿರುದ್ಧಾರ್ಥ ಪ್ರಚ್ಯಾವನೇನಾ- ವಿರುದ್ಧಾರ್ಥತಾಕಲ್ಪನಮೇವ ಬಾಧೋ ನ ಸರ್ವಥಾಽ-ಪ್ರಾಮಾಣ್ಯಮೇವೇತಿ ಭಾವಃ । ಏತೇನ ಭೇದವಾಕ್ಯಪ್ರತೀತಭೇದವತ್ ಪ್ರಾಮಾಣ್ಯಸ್ಯ ಸ್ವತಸ್ತ್ವಾದೇವೈಕ್ಯವಾಕ್ಯಪ್ರತೀತಮೈಕ್ಯಮಪಿ ತತ್ತ್ವಂ ಸ್ಯಾದಿತಿ ಕಾ ಪರಾಸ್ತಾ । ಪೂರ್ವೋತ್ತರವಿರುದ್ಧಸ್ಯ ಅತ ಏವ ವಾಕ್ಯತಾತ್ಪರ್ಯಾಪರಿಜ್ಞಾನಾತ್ತ್ವಯೈವ ಭ್ರಾನ್ತ್ಯಾ ಪ್ರತಿಪನ್ನಸ್ಯ ತ್ವದೈಕ್ಯಸ್ಯ ವಾಕ್ಯಾರ್ಥ-ತ್ವಸ್ಯೈವಾಭಾವಾತ್ । ಸಾವಕಾಶೇಽಸ್ಮಿನ್ ಯೋಗ್ಯಸ್ಯೈವ ಕಸ್ಯಚಿದೈಕ್ಯಸ್ಯ ತದರ್ಥತ್ವಾಚ್ಚ । ನಹಿ ಸಿಂಹೋ ದೇವದತ್ತ ಇತಿ ವಾಕ್ಯಾದಾಪಾತಪ್ರತೀತಂ ಸಿಂಹದೇವದತ್ತಸ್ವರೂಪೈಕ್ಯಂ ವಾಕ್ಯಾರ್ಥ ಇತ್ಯುಚ್ಯತೇ । ಕಿಂತು ತಯೋಸ್ಸಾದೃಶ್ಯೈಕ್ಯಮೇವ । ತತ್ರ ಚ ತದ್ವಾಕ್ಯಸ್ಥಪ್ರಾಮಾಣ್ಯವದ್ ಐಕ್ಯವಾಕ್ಯಸ್ಯಾಪಿ ಜೀವಬ್ರಹ್ಮಣೋಃ ಸಾದೃಶ್ಯೈಕ್ಯ ಏವ ಪ್ರಾಮಾಣ್ಯಮಿತಿ ಸ್ವತಸ್ತ್ವೇನಾತ್ರಾಪಿ ಪ್ರಾಮಾಣ್ಯನಿಯಮಾತ್ಯಾಗಾತ್ । ಭೇದವಾಕ್ಯೇ ತು ಅರ್ಥಾಂತರೇ ಪ್ರಾಮಾಣ್ಯಾಸಂಭವಾದ್

**ಭೇದರೂಪಾರ್ಥ ಏವ ಸ್ವತಸ್ತ್ವಬಲಾತ್ಪ್ರಾಮಾಣ್ಯಮಿತಿ ನ ಭೇದವಾಕ್ಯಸ್ಯೈಕ್ಯ ಪ್ರತಿಬನ್ದೀತಿ ಭಾವಃ ॥ ೩೧೦ ॥ ಇತಿಬೌದ್ಧವಾದಃ ॥**

**ವಿವರಣೆ–** ಭೇದವಾಕ್ಯವು ಮಿಥ್ಯಾಭೇದವನ್ನು ಹೇಳುವುದಿಲ್ಲ. ಏಕೆಂದರೆ ನಮ್ಮಿಬ್ಬರ ಮತದಲ್ಲಿ ಪ್ರಾಮಾಣ್ಯಸ್ವತಸ್ತ್ವವಿದೆ. ಅದು ದೋಷದಿಂದ ಮಾತ್ರ ಅಪೋದ್ಯವಾಗುತ್ತದೆ. ವೇದದಲ್ಲಾದರೂ ಅಪೌರುಷೆಯವಾದ ಕಾರಣದಿಂದ ದೋಷವಿಲ್ಲ. ಆದ್ದರಿಂದ ತಾತ್ತ್ವಿಕವಾದ ಭೇದವನ್ನೇ ಶ್ರುತಿಯು ತಿಳಿಸುತ್ತದೆ. ಇದರ ಮೇಲೆ ಅದ್ವೈತಿಗಳು ಹೀಗೆ ಶಂಕೆ ಮಾಡುತ್ತಾರೆ - ನೀವು ಐಕ್ಯವಾಕ್ಯಕ್ಕೆ ಪ್ರತ್ಯಕ್ಷ ಮತ್ತು ಭೇದಶ್ರುತಿಗಳಿಂದ ಬಾಧವನ್ನು ಹೇಳುತ್ತೀರಿ. ಹಾಗಾದರೆ ಶ್ರುತಿಗೂ ಬಾಧವಿದೆ ಎಂದು ನೀವೇ ಒಪ್ಪಿದ್ದೀರಿ. ಇಲ್ಲದಿದ್ದರೆ ಐಕ್ಯಶ್ರುತಿಗೆ ಬಾಧವನ್ನು ಹೇಳುವುದು ಹೇಗೆ? ಅದರಂತೆ ಭೇದಶ್ರುತಿಯೂ ಏಕೆ ಬಾಧಿತವಾಗಿ ಅತಾತ್ತ್ವಿಕವಾದ ಭೇದವನ್ನು ಹೇಳಬಾರದು? ಎಂದು. ಅದಕ್ಕೆ ನಮ್ಮ ಉತ್ತರ ಶ್ರುತಿಯ ಯಾವ ವಾಕ್ಯಕ್ಕೂ ಸರ್ವಾತ್ಮನಾ ಬಾಧವು ಇಲ್ಲವೇ ಇಲ್ಲ. ಐಕ್ಯಶ್ರುತಿಗೆ ಬಾಧವಿದೆ ಎಂದರೆ ಅದು ಅಪ್ರಮಾಣವೆಂದು ಅರ್ಥವಲ್ಲ. ಪ್ರತೀತಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಮಾಡಿ ಪ್ರಮಾಣವಿರೋಧವು ಬರದಂತೆ ಮಾಡಿ ಪ್ರಾಮಾಣ್ಯವನ್ನು ಉಳಿಸಬೇಕೆಂದೇ ಅರ್ಥ. ಐಕ್ಯಶ್ರುತಿಯು ಹಿಂದೆ ಹೇಳಿದಂತೆ ಸಾವಕಾಶವಾದುದರಿಂದ ಸ್ವಯಂ ಅನೇಕ ಅರ್ಥಗಳನ್ನು ಹೇಳುವ ಸಾಮರ್ಥ್ಯವುಳ್ಳದ್ದಾದ್ದರಿಂದ ಪ್ರಮಾಣವಿರುದ್ಧವಾದ ಅರ್ಥವನ್ನು ಬಿಟ್ಟು ಅವಿರುದ್ಧವಾದ ಅರ್ಥವನ್ನು ಸ್ವೀಕರಿಸಬೇಕು. ಭೇದಶ್ರುತಿಗಾದರೋ ಪ್ರತೀತಾರ್ಥವನ್ನು ಬಿಟ್ಟು ಬೇರೆ ಅರ್ಥವೇ ಇಲ್ಲವಾದ್ದರಿಂದ ಅದು ಪ್ರತೀತವಾದ ಭೇದವನ್ನೇ ಹೇಳುತ್ತದೆ ಎಂದೂ ಮತ್ತು ಶ್ರುತಿಗೆ ಅಪ್ರಾಮಾಣ್ಯವಿಲ್ಲದ ಕಾರಣ ಆ ಭೇದವು ತಾತ್ತ್ವಿಕವೆಂದೂ ಅಂಗೀಕರಿಸಬೇಕು.

ಭೇದವಾಕ್ಯದಿಂದ ಪ್ರತೀತವಾದ ಭೇದದಂತೆ ಐಕ್ಯವಾಕ್ಯದಿಂದ ಪ್ರತೀತವಾದ ಜೀವಬ್ರಹ್ಮೈಕ್ಯವೂ ಕೂಡ ತತ್ವವಾಗಲಿ ಎಂಬ ಶಂಕೆ ಬರಬಹುದು. ಅದು ಕೂಡ ಸರಿಯಲ್ಲ. ಐಕ್ಯರೂಪವಾದ ಅರ್ಥವನ್ನು ಹೇಳಿದಲ್ಲಿ ಪೂರ್ವೋತ್ತರ ವಾಕ್ಯಗಳಿಗೆ ವಿರೋಧಬರುತ್ತದೆ ಆದ್ದರಿಂದಲೇ ವೇದವಾಕ್ಯದ ತಾತ್ಪರ್ಯದ ಪರಿಜ್ಞಾನ ಪೂರ್ವಕವಲ್ಲವಾದ್ದರಿಂದ ಐಕ್ಯಕ್ಕೆ ವಾಕ್ಯಾರ್ಥತ್ವವೆ ಇರುವುದಿಲ್ಲ. ಸಾವಕಾಶವಾದ ಈ ವಾಕ್ಯಕ್ಕೆ ಯೋಗ್ಯವಾದ ಯಾವದೋ ಒಂದು ಗೌಣವಾದ ಐಕ್ಯವನ್ನು (ಸಾದೃಶ್ಯವನ್ನು) ಅರ್ಥವನ್ನಾಗಿ ಹೇಳಬಹುದಾಗಿದೆ. ಸಿಂಹೋದೇವದತ್ತ ಎಂಬ ವಾಕ್ಯದಿಂದ ಆಪಾತಪ್ರತೀತವಾದ ಸಿಂಹದೇವದತ್ತರ ಸ್ವರೂಪೈಕ್ಯವನ್ನು ಹೇಳುವುದೇ ವಾಕ್ಯಾರ್ಥವಲ್ಲ. ಅವೆರಡರ ಸಾದೃಶ್ಯೈಕ್ಯವನ್ನು ಹೇಳಿ ಸಿಂಹದಲ್ಲಿರುವ ಪರಾಕ್ರಮಾದಿಗಳು ದೇವದತ್ತನಲ್ಲಿವೆ ಆ ವಾಕ್ಯವು ಪ್ರಮಾಣವಾಗುವದೋ ಅದರಂತೆಯೆ ಐಕ್ಯವಾಕ್ಯಕ್ಕೆ ಎಂಬ ಅರ್ಥದಿಂದಲೇ ಜೀವಬ್ರಹ್ಮರ ಸಾದೃಶ್ಯೈಕ್ಯದಲ್ಲಿಯೇ ಪ್ರಾಮಾಣ್ಯವಿದೆ ಯಾದ್ದರಿಂದ ಪ್ರಾಮಾಣ್ಯದ ತ್ಯಾಗವಿಲ್ಲ. ಐಕ್ಯವಾಕ್ಯವು ಪ್ರಮಾಣವಾಗಿದೆ. ಆದರೆ ಐಕ್ಯಾರ್ಥವು ಅಪ್ರಮಾಣವಾಗಿದೆ

ಎಂದು ತಿಳಿಯಬೇಕು. ಭೇದವಾಕ್ಯಕ್ಕಾದರೂ ಅರ್ಥಾಂತರದಲ್ಲಿ ಪ್ರಾಮಾಣ್ಯವು ಸಂಭವಿಸುವುದಿಲ್ಲವಾದ್ದರಿಂದ ಭೇದರೂಪವಾದ ಅರ್ಥದಲ್ಲಿಯೇ ಸ್ವತಸ್ತ್ವದ ಬಲದಿಂದ ಪ್ರಾಮಾಣ್ಯವಿದೆ ಎಂದು ಭೇದ ವಾಕ್ಯಕ್ಕೆ ಐಕ್ಯವಾಕ್ಯವು ಪ್ರತಿಬಂದೀ ಅಲ್ಲ ಎಂದು ತಿಳಿಯಬೇಕು. ಹೀಗೆ ಶ್ರೀವಾದಿರಾಜರು ಯುಕ್ತಿಮಲ್ಲಿಕಾದ ಗುಣಸೌರಭದಲ್ಲಿ ಪರಮತಗಳ ವಿಚಾರಸರಣಿಯನ್ನು ಯುಕ್ತಿಗಳಿಂದ ವಿವರ್ಶಿಸಿ ಶ್ರೀಮದಾಚಾರ್ಯ ಸಿದ್ಧಾಂತವನ್ನು ಸಮರ್ಥಿಸಿದ್ದಾರೆ.

ಭಾರತೀಯ ದರ್ಶನದಲ್ಲಿ ಪ್ರಾಮಾಣ್ಯಸ್ವತಸ್ತ್ವದ ಬಗ್ಗೆ ಬಹಳಷ್ಟು ವಿವಾದವಿದೆ. ಕೆಲವರು ಪ್ರಾಮಾಣ್ಯಂ ಸ್ವತಃ, ಎಂದರೆ ಇನ್ನು ಕೆಲವರು ಪ್ರಾಮಾಣ್ಯಂ ಪರತಃ ಎನ್ನುತ್ತಾರೆ. ದ್ವೈತದರ್ಶನದಲ್ಲಿ ಪ್ರಾಮಾಣ್ಯಂ ಸ್ವತಃ, ಅಪ್ರಾಮಾಣ್ಯಂ ಪರತಃ. ಬೌದ್ಧರು ಇದಕ್ಕೆ ವಿರುದ್ಧವಾಗಿ ಅಪ್ರಾಮಾಣ್ಯಂ ಸ್ವತಃ, ಪ್ರಾಮಾಣ್ಯಂ ಪರತಃ ಎನ್ನುತ್ತಾರೆ. ತಾರ್ಕಿಕರು ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಇವೆರಡೂ ಪರತಃ ಎನ್ನುತ್ತಾರೆ.

ಪ್ರಾಮಾಣ್ಯವೆಂದರೇನು? - ಯಥಾರ್ಥಜ್ಞಾನಕ್ಕೆ ಪ್ರಮಾ ಎಂದು ಹೆಸರು. ಪ್ರಮಾಕ್ಕೆ ಕಾರಣವಾದುದು ಪ್ರಮಾಣ. ಪ್ರತ್ಯಕ್ಷ, ಅನುಮಾನ, ಆಗಮ ಎಂದು ಪ್ರಮಾಣಗಳು ಮೂರು ವಿಧವಾಗಿದೆ. ಇಂತಹ ಪ್ರಮಾಣಗಳು ಮತ್ತು ಅವುಗಳಿಂದ ಹುಟ್ಟುವ ಪ್ರಮಾ ಇವೆರಡರಲ್ಲೂ ಪ್ರಮಾಣ್ಯಎಂಬ ಧರ್ಮವಿದೆ. ಅವುಗಳಲ್ಲಿ ಪ್ರಮಾದಲ್ಲಿರುವ ಪ್ರಾಮಾಣ್ಯವನ್ನು ಫಲಗತಪ್ರಾಮಾಣ್ಯ ಎಂದೂ, ಕರಣದಲ್ಲಿರುವ ಪ್ರಾಮಾಣ್ಯವನ್ನು ಕರಣಗತಪ್ರಾಮಾಣ್ಯ ಎಂದೂ ಕರೆಯಲಾಗುತ್ತದೆ. ಯಥಾರ್ಥಂ ಪ್ರಮಾಣಂ ಎಂದು ಶ್ರೀಜಯತೀರ್ಥರು ಜ್ಞಾನ ಮತ್ತು ಕರಣದಲ್ಲಿರುವ ಪ್ರಮಾಣಲಕ್ಷಣವನ್ನು ಹೇಳಿದ್ದಾರೆ. ಅದಕ್ಕೆ ಅನುಸಾರವಾಗಿ ಯಾಥಾರ್ಥ್ಯಂ ಪ್ರಾಮಾಣ್ಯಂ ಎಂದು ಪ್ರಾಮಾಣ್ಯವನ್ನು ನಿರೂಪಿಸಬಹುದಾಗಿದೆ.

ಸ್ವತಸ್ತ್ವ ಎಂದರೇನು? - ಸ್ವತಃ ಎಂದರೆ ತನ್ನಿಂದಲೇ ಎಂದು ಅರ್ಥ. ಆದರೆ ಪ್ರಾಮಾಣ್ಯಂ ಸ್ವತಃ ಎಂದರೆ ಪ್ರಾಮಾಣ್ಯವು ತನ್ನಿಂದಲೇ (ತಿಳಿಯಲ್ಪಡುತ್ತದೆ ಅಥವಾ ಹುಟ್ಟುತ್ತದೆ) ಎಂದು ಅರ್ಥವನ್ನು ಮಾಡಬಾರದು. ಪ್ರಾಮಾಣ್ಯವು ತನಗೆ ಆಶ್ರಯವಾದ ಜ್ಞಾನಕ್ಕೆ ಯಾವುದು ಜನಕವೋ ಅದರಿಂದ ಹುಟ್ಟುತ್ತದೆ. ಹೀಗೆ ಸ್ವತಃ ಎಂಬ ಪದಕ್ಕೆ ಸ್ವೀಯ ಎಂದು ಅರ್ಥ.

ಪ್ರಾಮಾಣ್ಯಸ್ವತಸ್ತ್ವವು ಎರಡು ವಿಧವಾಗಿದೆ.

1. ಉತ್ಪತ್ತೌ ಸ್ವತಸ್ತ್ವ, 2. ಜ್ಞಪ್ತೌ ಸ್ವತಸ್ತ್ವ.

**೧. ಜ್ಞಾನಜನಕಮಾತ್ರಜನ್ಯತ್ವಂ ಉತ್ಪತ್ತೌ ಸ್ವತಸ್ತ್ವಂ** - ಜ್ಞಾನಕ್ಕೆ ಯಾವುದು ಕಾರಣವೋ ಅದರಿಂದಲೇ ಪ್ರಾಮಾಣ್ಯವೂ ಹುಟ್ಟುತ್ತದೆ. ಉದಾಹರಣೆಗೆ ಕಣ್ಣಿನಿಂದ

ನೀರಿನ ಜ್ಞಾನ ಬರುತ್ತದೆ. ಆ ಜ್ಞಾನದಲ್ಲಿರುವ ಪ್ರಾಮಾಣ್ಯವೂ ಕಣ್ಣಿನಿಂದಲೇ ಹುಟ್ಟುತ್ತದೆ. ಅರ್ಥಾತ್ ಜ್ಞಾನಕ್ಕೆ ಯಾವುದು ಕಾರಣವೋ, ಆ ಜ್ಞಾನದಲ್ಲಿರುವ ಪ್ರಾಮಾಣ್ಯಕ್ಕೂ ಅದೇ ಕಾರಣ. ಮಗುವಿಗೆ ಕಾರಣರಾದ ತಂದೆ ತಾಯಂದಿರೇ ಅದರ ಗುಣಸ್ವಭಾವಗಳಿಗೂ ಕಾರಣ ಎಂದಂತೆ ಇದು. ಇದನ್ನು ಉತ್ಪತ್ತೌ ಸ್ವತಸ್ತ್ವಂ ಎನ್ನಲಾಗುತ್ತದೆ.

ತಾರ್ಕಿಕರು ಇದನ್ನು ನಿರಾಕರಿಸುತ್ತಾರೆ. ಜ್ಞಾನಕ್ಕೆ ಕಾರಣವಾದುದು ಇಂದ್ರಿಯ. ಜ್ಞಾನದಲ್ಲಿರುವ ಪ್ರಾಮಾಣ್ಯಕ್ಕೆ ಇಂದ್ರಿಯದ ಗುಣ ಕಾರಣ ಎಂದು ಅವರ ವಾದ. ಆದ್ದರಿಂದ ಜ್ಞಾನಪ್ರಾಮಾಣ್ಯಂ ಉತ್ಪತ್ತೌ ಪರತಃ - ಇದು ತಾರ್ಕಿಕ ಸಿದ್ಧಾಂತ.

**೨. ಜ್ಞಪ್ತೌ ಸ್ವತಸ್ತ್ವಂ** – ಜ್ಞಾನಗ್ರಾಹಕಮಾತ್ರಗ್ರಾಹ್ಯತ್ವಂ ಜ್ಞಪ್ತೌ ಸ್ವತಸ್ತ್ವಂ. ಜ್ಞಾನವನ್ನು ಗ್ರಹಿಸುವ ಇಂದ್ರಿಯವೇ ಅದರಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಇದೇ ಜ್ಞಪ್ತಿಯಲ್ಲಿ ಸ್ವತಸ್ತ್ವ. ದ್ವೈತದರ್ಶನದಲ್ಲಿ ಜ್ಞಾನವು ಅಂತಃಕರಣದ ಧರ್ಮ. ಅದನ್ನು ಸಾಕ್ಷೀಂದ್ರಿಯವು ಗ್ರಹಿಸುತ್ತದೆ. ಆ ಸಾಕ್ಷಿಯು ಜ್ಞಾನವನ್ನು ಗ್ರಹಿಸುವಾಗ ಅದು ಪ್ರಮಾಣವೆಂದೂ ಗ್ರಹಿಸುತ್ತದೆ. ಇದು ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವ. ತಾರ್ಕಿಕರು ಜ್ಞಪ್ತೌ ಪರತಸ್ತ್ವವಾದಿಗಳು. ಜ್ಞಾನವು ಆತ್ಮನ ಗುಣ, ಅದನ್ನು ಮನಸ್ಸು ಗ್ರಹಿಸುತ್ತದೆ. ಆದರಲ್ಲಿರುವ ಪ್ರಾಮಾಣ್ಯವನ್ನು ಮನಸ್ಸು ಗ್ರಹಿಸುವುದಿಲ್ಲ. ಅನುಮಾನದಿಂದ ಪ್ರಾಮಾಣ್ಯವು ತಿಳಿಯುತ್ತದೆ. ಇದು ತಾರ್ಕಿಕರ ವಾದ.

ದ್ವೈತದರ್ಶನದಲ್ಲಿ ಸಾಕ್ಷಿಯು ಯಾವಾಗಲೂ ಪ್ರಾಮಾಣ್ಯವನ್ನು ನಿರ್ಧಾರಾತ್ಮಕವಾಗಿ ಗ್ರಹಿಸುವುದಿಲ್ಲ. ಕೆಲವೊಮ್ಮೆ ಜ್ಞಾನವನ್ನು ಮಾತ್ರ ಗ್ರಹಿಸಿ ಸುಮ್ಮನಾಗುತ್ತದೆ. ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಉದಾಹರಣೆಗೆ ಎತ್ತರದ ಆಕಾಶದಲ್ಲಿ ಹಾರಾಡುವ ವಿಮಾನವು ಹಕ್ಕಿಯಷ್ಟೇ ಚಿಕ್ಕದು ಎಂದು ಜ್ಞಾನಬರುತ್ತದೆ. ಇಂತಹ ಜ್ಞಾನವನ್ನು ಸಾಕ್ಷಿಯು ಗ್ರಹಿಸದರೂ ಅದರಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಏಕೆಂದರೆ ದೂರದಲ್ಲಿ ವಸ್ತುವಿನ ಗಾತ್ರ ಕಂಡಾಗ, ಅದರ ಗಾತ್ರವು ಕಾಣುವಷ್ಟೇ ದೊಡ್ಡದಾಗಿರುವುದಿಲ್ಲ ಎಂದು ನಮಗೆ ಮೊದಲೇ ಅನುಭವಕ್ಕೆ ಬಂದಿರುತ್ತದೆ. ಅಂತಹ ಸಂದರ್ಭದಲ್ಲಿ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅದರಂತೆ ಮನಸ್ಸಿನಲ್ಲಿ ಸಂದೇಹವಿದ್ದ ಸಂದರ್ಭದಲ್ಲೂ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆದ್ದರಿಂದ ಪ್ರಾಮಾಣ್ಯಂ ಸ್ವತಃ ಎನ್ನುವುದು ಉತ್ಸರ್ಗನಿಯಮ.

ಇದಿಷ್ಟು ದ್ವೈತದರ್ಶನದ ನಿಲುವು. ಅತಿಕ್ಲಿಷ್ಟವಾದ ಶಾಸ್ತ್ರೀಯವಿಷಯಗಳಲ್ಲಿ ಪ್ರಾಮಾಣ್ಯಸ್ವತಸ್ತ್ವವೂ ಒಂದು. ಅದನ್ನು ಸ್ಪಷ್ಟವಾಗಿ, ಅಷ್ಟೇ ನಿಖರವಾಗಿ ರಾಜರು ಪದ್ಯರೂಪದಲ್ಲಿ ನಿರೂಪಿಸಿದ್ದಾರೆ-

**ದೋಷಾದ್ಯಪ್ರತಿರುದ್ಧೇನ ಜ್ಞಾನಗ್ರಾಹಕಸಾಕ್ಷಿಣಾ ।**<br>
**ಸ್ವತಸ್ತ್ವಂ ಜ್ಞಾನಮಾನತ್ವನಿರ್ಣೀತಿನಿಯಮೋ ಹಿ ನಃ ॥ ೩೧೧ ॥**

**ಅರ್ಥ–** ದೋಷಾದ್ಯಪ್ರತಿರುದ್ಧೇನ = ದೋಷಾದಿಪ್ರತಿರೋಧರಹಿತವಾದ, ಜ್ಞಾನಗ್ರಾಹಕ ಸಾಕ್ಷಿಣಾ = ಜ್ಞಾನವನ್ನು ಗ್ರಹಿಸುವ ಸಾಕ್ಷಿಯಿಂದ, ಜ್ಞಾನಮಾನತ್ವ ನಿರ್ಣೀತಿನಿಯಮಃ = ನಿಯಮೇನ ಜ್ಞಾನದ ಪ್ರಾಮಾಣ್ಯಗ್ರಹಣವಾಗುವುದು, ನಃ = ನಮ್ಮ (ನಾವು ಅಂಗೀಕರಿಸುವ) ಸ್ವತಸ್ತ್ವಂ = ಸ್ವತಸ್ತ್ವವು.

**ಅನುವಾದ–** ದೋಷಾದಿಪ್ರತಿಬಂಧಕಗಳಿಲ್ಲದಿರುವಾಗ, ಜ್ಞಾನವನ್ನು ಗ್ರಹಿಸುವ ಸಾಕ್ಷಿಯಿಂದಲೇ ಆ ಜ್ಞಾನದಲ್ಲಿರುವ ಪ್ರಾಮಾಣ್ಯದ ನಿರ್ಣಯವೂ ಆಗುತ್ತದೆ ಎಂಬ ನಿಯಮವೇ ನಮ್ಮ ದರ್ಶನದಲ್ಲಿ ಪ್ರಾಮಾಣ್ಯಸ್ವತಸ್ತ್ವ

**ಭಾವವಿಲಾಸಿನೀ–** ನನು ಕಿಮಿದಂ ಜ್ಞಾನಮಪ್ರಾಮಾಣ್ಯಸ್ಯ ಸ್ವತಸ್ತ್ವಂ ನಾಮೇತ್ಯತ ಆಹ – **ದೋಷಾದೀತಿ** ॥ ಆದಿಪದೇನ ಅಪ್ರಾಮಾಣ್ಯನಿಶ್ಚಯಗ್ರಹಣಮ್ । ದೋಷಾದ್ಯಪ್ರತಿರುದ್ಧೇನ ಜ್ಞಾನಗ್ರಾಹಕಸಾಕ್ಷಿಣಾ ಜ್ಞಾನಮಾನತ್ವನಿರ್ಣೀತಿನಿಯಮೋ ನೋಽಸ್ಮಾಕಂ ಮತೇ ಸ್ವತಸ್ತ್ವಮಿತಿ ಸಂಬಂಧಃ । ಅತಿದೂರತ್ವಾದಿದೋಷದಶಾಯಾಂ ಜ್ಞಾನಸ್ಯೈವಾಗ್ರಹಣದಶಾಯಾಂ ಜ್ಞಾನಗ್ರಾಹಕಜ್ಞಾನಪದಾದಿನಾ ಚ ಪ್ರಾಮಾಣ್ಯಾಗ್ರಹಣಾದ್ಬಾಧಃ ಸ್ಯಾದಿತ್ಯತ ಆದ್ಯಂ ವಿಶೇಷಣದ್ವಯಂ ಸಾಕ್ಷಿಪದಂ ಚ । ಅನುವ್ಯವಸಾಯಮಾತ್ರೇಣಾಪಿ ಪ್ರಾಮಾಣ್ಯಗ್ರಹಣಮಾತ್ರಸ್ಯ ದ್ವಿತೀಯಾನುವ್ಯವಸಾಯೇನ ಪ್ರಾಮಾಣ್ಯನಿರ್ಣಯಸ್ಯ ಚ ಪರೇಣಾಪ್ಯಂಗೀಕಾರಾತ್ ಸಿದ್ಧಸಾಧನತಾ ಸ್ಯಾದಿತ್ಯತೋ ನಿರ್ಣೀತಿಪದಂ ನಿಯಮಪದಂ ಚ ॥ ೩೧೧ ॥

**ವಿವರಣೆ–** ಅಂತಃಕರಣದಲ್ಲಿ ಹುಟ್ಟಿದ ಜ್ಞಾನವನ್ನು ಸಾಕ್ಷೀಂದ್ರಿಯವು ಗ್ರಹಿಸುತ್ತದೆ. ಸಾಕ್ಷಿಯು ಜ್ಞಾನವನ್ನು ಮಾತ್ರವಲ್ಲದೇ ಆ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ ಎಂದರೆ, ನನಗೆ ಇಂತಹ ವಸ್ತುವಿನ ಜ್ಞಾನ ಇದೆ ಎಂದು ಸಾಕ್ಷಿಯು ತಿಳಿಯುವಾಗ ಈ ಜ್ಞಾನವು ಯಥಾರ್ಥವಾಗಿದೆ (ಸರಿಯಾಗಿದೆ) ಎಂದೂ ತಿಳಿಯುತ್ತದೆ. ಆದರೆ ಹೀಗೆ ತಿಳಿಸಬೇಕಾದರೆ ಸಾಕ್ಷಿಗೆ ಪ್ರತಿಬಂಧಕಗಳು ಇರಬಾರದು. ಪ್ರತಿಬಂಧಕಗಳಿದ್ದಲ್ಲಿ ಸಾಕ್ಷಿಯು ಜ್ಞಾನವನ್ನಷ್ಟೇ ಗ್ರಹಿಸಿ, ಅದು ಪ್ರಮಾಣವೋ, ಅಪ್ರಮಾಣವೋ ಎಂಬ ವಿಷಯದಲ್ಲಿ ತಟಸ್ಥವಾಗಿರುತ್ತದೆ. ನೀರು ಸಹಜವಾಗಿ ತಗ್ಗಿಗೆ ಹರಿಯುತ್ತದೆ. ಆದರೆ ಅಡ್ಡವಾಗಿ ಗೋಡೆಯನ್ನು ಕಟ್ಟಿದರೆ ಹರಿಯದೆ ನಿಲ್ಲುತ್ತದೆ. ಆದರಂತೆ ಸಾಕ್ಷಿ.

ಸಾಕ್ಷಿಗೆ ಪ್ರತಿಬಂಧಕ ಯಾವುದು? ದೋಷಾದಿ ಎಂದಿರುತ್ತಾರೆ ರಾಜರು. ಆದಿಪದದಿಂದ ಅಪ್ರಾಮಾಣ್ಯನಿಶ್ಚಯವನ್ನು ತೆಗೆದುಕೊಳ್ಳಬೇಕೆಂದು ಸುರೋತ್ತಮತೀರ್ಥರು ತಿಳಿಸಿದ್ದಾರೆ. ದೂರಸ್ಥತ್ವಾದಿ ದೋಷಗಳು ಮತ್ತು ಅಪ್ರಾಮಾಣ್ಯನಿಶ್ಚಯ ಇವು ಸಾಕ್ಷಿಗೆ ಪ್ರತಿಬಂಧಕಗಳು. ಇವುಗಳಿದ್ದಾಗ ಸಾಕ್ಷಿಯು ಜ್ಞಾನವನ್ನಷ್ಟೇ ಗ್ರಹಿಸುತ್ತದೆ. ಅದರಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಇದಕ್ಕೆ ದೃಷ್ಟಾಂತವನ್ನು ರಾಜರು ಮುಂದಿನ ಪದ್ಯದಲ್ಲಿ ಕೊಡುತ್ತಾರೆ.

ದೋಷಾದ್ಯಪ್ರತಿಬದ್ಧೇನ ಜ್ಞಾನಗ್ರಾಹಕಸಾಕ್ಷಿಣಾ ಜ್ಞಾನಮಾನತ್ವನಿರ್ಣೀತಿನಿಯಮಃ ... ಇತಿದೂರತ್ವಾದಿ ದೋಷದಶಾಯಾಂ, ಜ್ಞಾನಸ್ಯೈವಾಗ್ರಹಣದಶಾಯಾಂ, ಜ್ಞಾನಗ್ರಾಹಕ ಜ್ಞಾನಪದಾದಿನಾ ಚ ಪ್ರಾಮಾಣ್ಯಗ್ರಹಣಾತ್ ಬಾಧಃ ಸ್ಯಾತ್ ಇತ್ಯತ ಆದ್ಯಂ ವಿಶೇಷಣದ್ವಯಂ, ಸಾಕ್ಷಿಪದಂ ಚ.

**ಅ. ದೋಷಾದಿಪ್ರತಿಬಂಧಕಗಳಿಲ್ಲದ,**

**ಆ. ಜ್ಞಾನವನ್ನು ಗ್ರಹಿಸುವ**

**ಇ. ಸಾಕ್ಷಿಯಿಂದ**

ಅ. ಜ್ಞಾನಪ್ರಾಮಾಣ್ಯದ ನಿಶ್ಚಯವು ಆಗಿಯೇ ತೀರುತ್ತದೆ ಎನ್ನುವ ನಿಯಮವೇ ಪ್ರಾಮಾಣ್ಯದ ಸ್ವತಸ್ತ್ವ. ಇಲ್ಲಿ ಸಾಕ್ಷಿಗೆ ಎರಡು ವಿಶೇಷಣಗಳನ್ನು (ಅ+ಆ) ಕೊಡಲಾಗಿದೆ. ಮೊದಲನೆಯ ವಿಶೇಷಣದಿಂದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಬೇಕಾದರೆ ದೋಷಾದಿಪ್ರತಿಬಂಧಕಗಳು ಇರಬಾರದು, ಎನ್ನುವ ನಿಬಂಧನೆಯನ್ನು ಸೂಚಿಸಲಾಗಿದೆ. ಇದರಿಂದ, ದೋಷಾದಿಗಳಿದ್ದಾಗ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ತಿಳಿಸಿದಂತಾಗಿದೆ.

ಆ. ಜ್ಞಾನಗ್ರಾಹಿಣಾ ಎನ್ನುವುದು ಎರಡನೆಯ ವಿಶೇಷಣ. ಸಾಕ್ಷಿಯು ಜ್ಞಾನವನ್ನು ಗ್ರಹಿಸುತ್ತಿರಬೇಕು, ಎನ್ನುವುದು ಎರಡನೆಯ ನಿಬಂಧನೆ, ಇದರಿಂದ, ಸಾಕ್ಷಿಯು ಜ್ಞಾನವನ್ನೇ ಗ್ರಹಿಸದಿದ್ದಾಗ ಪ್ರಮಾಣ್ಯವನ್ನು ಗ್ರಹಿಸದಿದ್ದರೂ ನಮ್ಮ ನಿಯಮಕ್ಕೆ ಚ್ಯುತಿ ಇಲ್ಲ ಎಂದು ಈ ನಿಬಂಧನೆಯಿಂದ ತಿಳಿಯುತ್ತದೆ.

ಇ. ಸಾಕ್ಷಿ ಎಂಬ ಪದದಿಂದಾಗಿ ಈ ನಿಯಮವು ಸಾಕ್ಷೀಂದ್ರಿಯಕ್ಕೆ ಮಾತ್ರ ಸಂಬಂಧಪಟ್ಟಿದೆ, ಇತರ ಸಾಧನಗಳಿಗಲ್ಲ ಎಂದು ತಿಳಿಸಲಾಗಿದೆ. ಜ್ಞಾನವನ್ನು ಗ್ರಹಿಸುವ ಎಲ್ಲ ಸಾಧನಗಳೂ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ, ಉದಾರಹರಣೆಗಾಗಿ ಜ್ಞಾನ ಎಂಬ ಪದವು ಜ್ಞಾನದ ಜ್ಞಾನವನ್ನು ಉಂಟುಮಾಡುತ್ತದೆ. ಆದರೆ ಪ್ರಾಮಾಣ್ಯದ ಜ್ಞಾನವನ್ನು ಉಂಟುಮಾಡುವುದಿಲ್ಲ. ಆದರೆ ಸಾಕ್ಷೀಂದ್ರಿಯವು ಹೀಗೆ ಮಾಡುವುದಿಲ್ಲ. ಅದು ಜ್ಞಾನದ ತಿಳುವಳಿಕೆಯನ್ನು ಮಾಡುವಾಗಲೇ ಪ್ರಾಮಾಣ್ಯದ ತಿಳುವಳಿಕೆಯನ್ನೂ ಉಂಟುಮಾಡುತ್ತದೆ. ಹೀಗೆ ಜ್ಞಾನಗ್ರಾಹಕೇಣೈವ ಪ್ರಾಮಾಣ್ಯಂ ಗೃಹ್ಯತೇ ಎಂಬ ನಿಯಮವು ಸಾಕ್ಷಿಗೆ ಮಾತ್ರ ಅನ್ವಯಿಸುತ್ತದೆ.

**ಹೀಗೆ ರಾಜರು ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವದ ಪರಿಚಯವನ್ನು ಮೊದಲ ಶ್ಲೋಕದಿಂದ ಮಾಡಿ ಮುಂದಿನ ಶ್ಲೋಕಗಳಲ್ಲಿ ದೋಷಾದಿ ಅಪ್ರತಿರುದ್ಧೇನ ಎಂಬ ವಿಶೇಷಣದ ಆವಶ್ಯಕತೆಯನ್ನು ತೋರಿಸುತ್ತಾರೆ–**

**ಅತೋ ದೂರಸ್ಥವೃಕ್ಷಾದಿಜ್ಞಾನೇ ಜ್ಞಾತೇಽಪಿ ಯತ್ಪುನಃ ।**
**ಪ್ರಾಮಾಣ್ಯಸಂಶಯಸ್ತತ್ರ ತದಸ್ಮಾಕಂ ಮತೇ ಭವೇತ್ ॥ ೩೧೨ ॥**

**ಅರ್ಥ–** ಅತಃ = ಆದ್ದರಿಂದ, ದೂರಸ್ಥವೃಕ್ಷಾದಿಜ್ಞಾನೇ = ದೂರದಲ್ಲಿರುವ ಮರ ಮುಂತಾದ ವಸ್ತುಗಳ ಜ್ಞಾನವು, ಜ್ಞಾತೇ ಅಪಿ = ಸಾಕ್ಷಿಯಿಂದ ತಿಳಿಯಲ್ಪಟ್ಟರೂ, ಪುನಃ = ಮತ್ತೆ, ಯತ್ = ಯಾವ, ಪ್ರಾಮಾಣ್ಯಸಂಶಯಃ = ಪ್ರಾಮಾಣ್ಯದ ಬಗ್ಗೆ ಸಂದೇಹ ಬರುವುದೋ, ತತ್ = ಆ ಸಂದೇಹವು, ಅಸ್ಮಾಕಂ ಮತೇ = ಸ್ವತಸ್ತ್ವವಾದಿಗಳಾದ ನಮ್ಮ ಮತದಲ್ಲಿ ಭವೇತ್ = ಕೂಡುತ್ತದೆ.

**ಅನುವಾದ– ದೋಷಾದಿ ಅಪ್ರತಿರುದ್ಧೇನ ಎಂಬ ವಿಶೇಷಣವನ್ನು ಸಾಕ್ಷಿಗೆ ಕೊಟ್ಟಿರುವುದರಿಂದ ದೂರದಲ್ಲಿರುವ ಮರಮುಂತಾದ ವಸ್ತುಗಳ ಜ್ಞಾನವು ಹುಟ್ಟಿದರೂ ಆ ಜ್ಞಾನದಲ್ಲಿ ಏನು ಪ್ರಾಮಾಣ್ಯದ ಸಂಶಯವು ಬರುವುದೋ ಅದು ನಮ್ಮ ಮತದಲ್ಲಿ ಯುಕ್ತವಾಗಿದೆ.**

**ಭಾವವಿಲಾಸಿನೀ– ದೋಷಾದ್ಯಪ್ರತಿರುದ್ಧೇನೇತಿ ವಿಶೇಷಣಗ್ರಹಣಾದಿದಂ ಸಿದ್ಧಮಿತ್ಯಾಹ – ಅತ ಇತಿ ॥ ತತ್ರ ವೃಕ್ಷಾದಿಜ್ಞಾನೇ । ತತ್ಪ್ರಾಮಾಣ್ಯಸಂಶಯರೂಪಜ್ಞಾನಮ್ ॥ ೩೧೨ ॥**

**ವಿವರಣೆ–** ಪ್ರಾಮಾಣ್ಯಂ ಸ್ವತಃ ಎಂದು ಹೇಳಿದರೆ ಜ್ಞಾನದಲ್ಲಿ ಎಂದೂ ಪ್ರಾಮಾಣ್ಯಸಂಶಯವು ಬರಬಾರದು. ಏಕೆಂದರೆ, ಜ್ಞಾನವು ತಿಳಿಯಲ್ಪಟ್ಟಾಗ ಅದರಲ್ಲಿರುವ ಪ್ರಾಮಾಣ್ಯವೂ ಸಾಕ್ಷಿಯಿಂದ ತಿಳಿದಿದೆ. ಪ್ರಾಮಾಣ್ಯವು ತಿಳಿದ ಮೇಲೆ ಅದರ ಬಗ್ಗೆ ಸಂಶಯಬರಲು ಸಾಧ್ಯವಿಲ್ಲ. ಆದರೆ ದೂರದಲ್ಲಿದ್ದ ವಸ್ತುವನ್ನು ನೋಡಿ ಜ್ಞಾನಬಂದಾಗ ಈ ಜ್ಞಾನವು ಸರಿಯೋ ತಪ್ಪೋ ಎಂಬ ಸಂಶಯವು ಬರುತ್ತದೆ. ಇಂತಹ ಸಂಶಯವು ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿದಾಗ ಬರುವುದು ಹೇಗೆ? ಇದು ನೈಯಾಯಿಕರು ಮಾಡುವ ಆಕ್ಷೇಪ.

ಇದಕ್ಕೆ ರಾಜರು ಈ ಶ್ಲೋಕದಲ್ಲಿ ಸಮಾಧಾನ ನೀಡಿದ್ದಾರೆ. ದೋಷಾದಿಪ್ರತಿಬಂಧಕಗಳಿಲ್ಲದಿದ್ದಲ್ಲಿ ಮಾತ್ರ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ದೋಷಾದಿಗಳಿದ್ದಲ್ಲಿ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ. ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ದೂರದ ವಸ್ತುವಿನ ಜ್ಞಾನ ಬಂದಾಗ ದೂರಸ್ಥತ್ವ ಎಂಬ ದೋಷವಿರುವ ಕಾರಣದಿಂದ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸಿ ಅದರ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆಗ ಮನಸ್ಸಿನಲ್ಲಿ ಪ್ರಾಮಾಣ್ಯದ ಬಗ್ಗೆ ಸಂಶಯ ಉಂಟಾಗುತ್ತದೆ. ಹೀಗೆ ಪ್ರಾಮಾಣ್ಯಸ್ವತಸ್ತ್ವಪಕ್ಷದಲ್ಲಿ ಸಂಶಯವು ಬರಬಹುದು.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ತತ್ ಅಸ್ಮಾಕಂ ಎಂದು ವಾದಿರಾಜರ ಪ್ರಯೋಗ. ಇಲ್ಲಿ ತತ್ ಪದದಿಂದ ಪೂರ್ವಪ್ರಸ್ತುತವಾದ ಸಂಶಯವನ್ನು ಪರಾಮರ್ಶಮಾಡಬೇಕು. ಆದರೆ ಸಂಶಯಃ ಎಂದು ಪುಲ್ಲಿಂಗಪದದಿಂದ ಸಂಶಯವನ್ನು ಉಲ್ಲೇಖಿಸಲಾಗಿದೆ. ಆದ್ದರಿಂದ ಸಃ ಎಂದು ಪುಂಲಿಂಗಪದದಿಂದಲೇ ಅದನ್ನು

ದೋಷಾದ್ಯಪ್ರತಿಬದ್ಧೇನ ಜ್ಞಾನಗ್ರಾಹಕಸಾಕ್ಷಿಣಾ ಜ್ಞಾನಮಾನತ್ವನಿರ್ಣೀತಿನಿಯಮಃ ... ಇತಿದೂರತ್ವಾದಿ ದೋಷದಶಾಯಾಂ, ಜ್ಞಾನಸ್ಯೈವಾಗ್ರಹಣದಶಾಯಾಂ, ಜ್ಞಾನಗ್ರಾಹಕ ಜ್ಞಾನಪದಾದಿನಾ ಚ ಪ್ರಾಮಾಣ್ಯಗ್ರಹಣಾತ್ ಬಾಧಃ ಸ್ಯಾತ್ ಇತ್ಯತ ಆದ್ಯಂ ವಿಶೇಷಣದ್ವಯಂ, ಸಾಕ್ಷಿಪದಂ ಚ.

ಅ. ದೋಷಾದಿಪ್ರತಿಬಂಧಕಗಳಿಲ್ಲದ,

ಆ. ಜ್ಞಾನವನ್ನು ಗ್ರಹಿಸುವ

ಇ. ಸಾಕ್ಷಿಯಿಂದ

ಅ. ಜ್ಞಾನಪ್ರಾಮಾಣ್ಯದ ನಿಶ್ಚಯವು ಆಗಿಯೇ ತೀರುತ್ತದೆ ಎನ್ನುವ ನಿಯಮವೇ ಪ್ರಾಮಾಣ್ಯದ ಸ್ವತಸ್ತ್ವ. ಇಲ್ಲಿ ಸಾಕ್ಷಿಗೆ ಎರಡು ವಿಶೇಷಣಗಳನ್ನು (ಅ+ಆ) ಕೊಡಲಾಗಿದೆ. ಮೊದಲನೆಯ ವಿಶೇಷಣದಿಂದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಬೇಕಾದರೆ ದೋಷಾದಿಪ್ರತಿಬಂಧಕಗಳು ಇರಬಾರದು, ಎನ್ನುವ ನಿಬಂಧನೆಯನ್ನು ಸೂಚಿಸಲಾಗಿದೆ. ಇದರಿಂದ, ದೋಷಾದಿಗಳಿದ್ದಾಗ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ತಿಳಿಸಿದಂತಾಗಿದೆ.

ಆ. ಜ್ಞಾನಗ್ರಾಹಿಣಾ ಎನ್ನುವುದು ಎರಡನೆಯ ವಿಶೇಷಣ. ಸಾಕ್ಷಿಯು ಜ್ಞಾನವನ್ನು ಗ್ರಹಿಸುತ್ತಿರಬೇಕು, ಎನ್ನುವುದು ಎರಡನೆಯ ನಿಬಂಧನೆ, ಇದರಿಂದ, ಸಾಕ್ಷಿಯು ಜ್ಞಾನವನ್ನೇ ಗ್ರಹಿಸದಿದ್ದಾಗ ಪ್ರಮಾಣ್ಯವನ್ನು ಗ್ರಹಿಸದಿದ್ದರೂ ನಮ್ಮ ನಿಯಮಕ್ಕೆ ಚ್ಯುತಿ ಇಲ್ಲ ಎಂದು ಈ ನಿಬಂಧನೆಯಿಂದ ತಿಳಿಯುತ್ತದೆ.

ಇ. ಸಾಕ್ಷಿ ಎಂಬ ಪದದಿಂದಾಗಿ ಈ ನಿಯಮವು ಸಾಕ್ಷೀಂದ್ರಿಯಕ್ಕೆ ಮಾತ್ರ ಸಂಬಂಧಪಟ್ಟಿದೆ, ಇತರ ಸಾಧನಗಳಿಗಲ್ಲ ಎಂದು ತಿಳಿಸಲಾಗಿದೆ. ಜ್ಞಾನವನ್ನು ಗ್ರಹಿಸುವ ಎಲ್ಲ ಸಾಧನಗಳೂ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಉದಾರಹರಣೆಗಾಗಿ ಜ್ಞಾನ ಎಂಬ ಪದವು ಜ್ಞಾನದ ಜ್ಞಾನವನ್ನು ಉಂಟುಮಾಡುತ್ತದೆ. ಆದರೆ ಪ್ರಾಮಾಣ್ಯದ ಜ್ಞಾನವನ್ನು ಉಂಟುಮಾಡುವುದಿಲ್ಲ. ಆದರೆ ಸಾಕ್ಷೀಂದ್ರಿಯವು ಹೀಗೆ ಮಾಡುವುದಿಲ್ಲ. ಅದು ಜ್ಞಾನದ ತಿಳುವಳಿಕೆಯನ್ನು ಮಾಡುವಾಗಲೇ ಪ್ರಾಮಾಣ್ಯದ ತಿಳುವಳಿಕೆಯನ್ನೂ ಉಂಟುಮಾಡುತ್ತದೆ. ಹೀಗೆ ಜ್ಞಾನಗ್ರಾಹಕೇಣೈವ ಪ್ರಾಮಾಣ್ಯಂ ಗೃಹ್ಯತೇ ಎಂಬ ನಿಯಮವು ಸಾಕ್ಷಿಗೆ ಮಾತ್ರ ಅನ್ವಯಿಸುತ್ತದೆ.

**ಹೀಗೆ ರಾಜರು ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವದ ಪರಿಚಯವನ್ನು ಮೊದಲ ಶ್ಲೋಕದಿಂದ ಮಾಡಿ ಮುಂದಿನ ಶ್ಲೋಕಗಳಲ್ಲಿ ದೋಷಾದಿ ಅಪ್ರತಿರುದ್ಧೇನ ಎಂಬ ವಿಶೇಷಣದ ಆವಶ್ಯಕತೆಯನ್ನು ತೋರಿಸುತ್ತಾರೆ–**

**ಅತೋ ದೂರಸ್ಥವೃಕ್ಷಾದಿಜ್ಞಾನೇ ಜ್ಞಾತೇಽಪಿ ಯತ್ತ್ವನಃ ।**
**ಪ್ರಾಮಾಣ್ಯಸಂಶಯಸ್ತತ್ರ ತದಸ್ಮಾಕಂ ಮತೇ ಭವೇತ್ ॥ ೩೧೨ ॥**

**ಅರ್ಥ–** ಅತಃ = ಆದ್ದರಿಂದ, ದೂರಸ್ಥವೃಕ್ಷಾದಿಜ್ಞಾನೇ = ದೂರದಲ್ಲಿರುವ ಮರ ಮುಂತಾದ ವಸ್ತುಗಳ ಜ್ಞಾನವು, ಜ್ಞಾತೇ ಅಪಿ = ಸಾಕ್ಷಿಯಿಂದ ತಿಳಿಯಲ್ಪಟ್ಟರೂ, ಪುನಃ = ಮತ್ತೆ, ಯತ್ = ಯಾವ, ಪ್ರಾಮಾಣ್ಯಸಂಶಯಃ = ಪ್ರಾಮಾಣ್ಯದ ಬಗ್ಗೆ ಸಂದೇಹ ಬರುವುದೋ, ತತ್ = ಆ ಸಂದೇಹವು, ಅಸ್ಮಾಕಂ ಮತೇ = ಸ್ವತಸ್ತ್ವವಾದಿಗಳಾದ ನಮ್ಮ ಮತದಲ್ಲಿ ಭವೇತ್ = ಕೂಡುತ್ತದೆ.

**ಅನುವಾದ– ದೋಷಾದಿ ಅಪ್ರತಿರುದ್ಧೇನ ಎಂಬ ವಿಶೇಷಣವನ್ನು ಸಾಕ್ಷಿಗೆ ಕೊಟ್ಟಿರುವುದರಿಂದ ದೂರದಲ್ಲಿರುವ ಮರಮುಂತಾದ ವಸ್ತುಗಳ ಜ್ಞಾನವು ಹುಟ್ಟಿದರೂ ಆ ಜ್ಞಾನದಲ್ಲಿ ಏನು ಪ್ರಾಮಾಣ್ಯದ ಸಂಶಯವು ಬರುವುದೋ ಅದು ನಮ್ಮ ಮತದಲ್ಲಿ ಯುಕ್ತವಾಗಿದೆ.**

**ಭಾವವಿಲಾಸಿನೀ– ದೋಷಾದ್ಯಪ್ರತಿರುದ್ಧೇನೇತಿ ವಿಶೇಷಣಗ್ರಹಣಾದಿದಂ ಸಿದ್ಧಮಿತ್ಯಾಹ – ಅತ ಇತಿ ॥ ತತ್ರ ವೃಕ್ಷಾದಿಜ್ಞಾನೇ । ತತ್ಪ್ರಾಮಾಣ್ಯಸಂಶಯರೂಪಜ್ಞಾನಮ್ ॥ ೩೧೨ ॥**

**ವಿವರಣೆ–** ಪ್ರಾಮಾಣ್ಯಂ ಸ್ವತಃ ಎಂದು ಹೇಳಿದರೆ ಜ್ಞಾನದಲ್ಲಿ ಎಂದೂ ಪ್ರಾಮಾಣ್ಯಸಂಶಯವು ಬರಬಾರದು. ಏಕೆಂದರೆ, ಜ್ಞಾನವು ತಿಳಿಯಲ್ಪಟ್ಟಾಗ ಅದರಲ್ಲಿರುವ ಪ್ರಾಮಾಣ್ಯವೂ ಸಾಕ್ಷಿಯಿಂದ ತಿಳಿದಿದೆ. ಪ್ರಾಮಾಣ್ಯವು ತಿಳಿದ ಮೇಲೆ ಅದರ ಬಗ್ಗೆ ಸಂಶಯಬರಲು ಸಾಧ್ಯವಿಲ್ಲ. ಆದರೆ ದೂರದಲ್ಲಿದ್ದ ವಸ್ತುವನ್ನು ನೋಡಿ ಜ್ಞಾನಬಂದಾಗ ಈ ಜ್ಞಾನವು ಸರಿಯೋ ತಪ್ಪೋ ಎಂಬ ಸಂಶಯವು ಬರುತ್ತದೆ. ಇಂತಹ ಸಂಶಯವು ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿದಾಗ ಬರುವುದು ಹೇಗೆ? ಇದು ನೈಯಾಯಿಕರು ಮಾಡುವ ಆಕ್ಷೇಪ.

ಇದಕ್ಕೆ ರಾಜರು ಈ ಶ್ಲೋಕದಲ್ಲಿ ಸಮಾಧಾನ ನೀಡಿದ್ದಾರೆ. ದೋಷಾದಿಪ್ರತಿಬಂಧಕಗಳಿಲ್ಲದಿದ್ದಲ್ಲಿ ಮಾತ್ರ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ದೋಷಾದಿಗಳಿದ್ದಲ್ಲಿ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ. ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ದೂರದ ವಸ್ತುವಿನ ಜ್ಞಾನ ಬಂದಾಗ ದೂರಸ್ಥತ್ವ ಎಂಬ ದೋಷವಿರುವ ಕಾರಣದಿಂದ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸಿ ಅದರ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆಗ ಮನಸ್ಸಿನಲ್ಲಿ ಪ್ರಾಮಾಣ್ಯದ ಬಗ್ಗೆ ಸಂಶಯ ಉಂಟಾಗುತ್ತದೆ. ಹೀಗೆ ಪ್ರಾಮಾಣ್ಯಸ್ವತಸ್ತ್ವಪಕ್ಷದಲ್ಲಿ ಸಂಶಯವು ಬರಬಹುದು.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ತತ್ ಅಸ್ಮಾಕಂ ಎಂದು ವಾದಿರಾಜರ ಪ್ರಯೋಗ. ಇಲ್ಲಿ ತತ್ ಪದದಿಂದ ಪೂರ್ವಪ್ರಸ್ತುತವಾದ ಸಂಶಯವನ್ನು ಪರಾಮರ್ಶಮಾಡಬೇಕು. ಆದರೆ ಸಂಶಯಃ ಎಂದು ಪುಲ್ಲಿಂಗಪದದಿಂದ ಸಂಶಯವನ್ನು ಉಲ್ಲೇಖಿಸಲಾಗಿದೆ. ಆದ್ದರಿಂದ ಸಃ ಎಂದು ಪುಂಲಿಂಗಪದದಿಂದಲೇ ಅದನ್ನು

ದೋಷಾದ್ಯಪ್ರತಿಬದ್ಧೇನ ಜ್ಞಾನಗ್ರಾಹಕಸಾಕ್ಷಿಣಾ ಜ್ಞಾನಮಾನತ್ವನಿರ್ಣೀತಿನಿಯಮಃ ... ಇತಿದೂರತ್ವಾದಿ ದೋಷದಶಾಯಾಂ, ಜ್ಞಾನಸ್ಯೈವಾಗ್ರಹಣದಶಾಯಾಂ, ಜ್ಞಾನಗ್ರಾಹಕ ಜ್ಞಾನಪದಾದಿನಾ ಚ ಪ್ರಾಮಾಣ್ಯಗ್ರಹಣಾತ್ ಬಾಧಃ ಸ್ಯಾತ್ ಇತ್ಯತ ಆದ್ಯಂ ವಿಶೇಷಣದ್ವಯಂ, ಸಾಕ್ಷಿಪದಂ ಚ.

**ಅ. ದೋಷಾದಿಪ್ರತಿಬಂಧಕಗಳಿಲ್ಲದ,**

**ಆ. ಜ್ಞಾನವನ್ನು ಗ್ರಹಿಸುವ**

**ಇ. ಸಾಕ್ಷಿಯಿಂದ**

ಅ. ಜ್ಞಾನಪ್ರಾಮಾಣ್ಯದ ನಿಶ್ಚಯವು ಆಗಿಯೇ ತೀರುತ್ತದೆ ಎನ್ನುವ ನಿಯಮವೇ ಪ್ರಾಮಾಣ್ಯದ ಸ್ವತಸ್ತ್ವ. ಇಲ್ಲಿ ಸಾಕ್ಷಿಗೆ ಎರಡು ವಿಶೇಷಣಗಳನ್ನು (ಅ+ಆ) ಕೊಡಲಾಗಿದೆ. ಮೊದಲನೆಯ ವಿಶೇಷಣದಿಂದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಬೇಕಾದರೆ ದೋಷಾದಿಪ್ರತಿಬಂಧಕಗಳು ಇರಬಾರದು, ಎನ್ನುವ ನಿಬಂಧನೆಯನ್ನು ಸೂಚಿಸಲಾಗಿದೆ. ಇದರಿಂದ, ದೋಷಾದಿಗಳಿದ್ದಾಗ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ತಿಳಿಸಿದಂತಾಗಿದೆ.

ಆ. ಜ್ಞಾನಗ್ರಾಹಿಣಾ ಎನ್ನುವುದು ಎರಡನೆಯ ವಿಶೇಷಣ. ಸಾಕ್ಷಿಯು ಜ್ಞಾನವನ್ನು ಗ್ರಹಿಸುತ್ತಿರಬೇಕು, ಎನ್ನುವುದು ಎರಡನೆಯ ನಿಬಂಧನೆ, ಇದರಿಂದ, ಸಾಕ್ಷಿಯು ಜ್ಞಾನವನ್ನೇ ಗ್ರಹಿಸದಿದ್ದಾಗ ಪ್ರಮಾಣ್ಯವನ್ನು ಗ್ರಹಿಸದಿದ್ದರೂ ನಮ್ಮ ನಿಯಮಕ್ಕೆ ಚ್ಯುತಿ ಇಲ್ಲ ಎಂದು ಈ ನಿಬಂಧನೆಯಿಂದ ತಿಳಿಯುತ್ತದೆ.

ಇ. ಸಾಕ್ಷಿ ಎಂಬ ಪದದಿಂದಾಗಿ ಈ ನಿಯಮವು ಸಾಕ್ಷೀಂದ್ರಿಯಕ್ಕೆ ಮಾತ್ರ ಸಂಬಂಧಪಟ್ಟಿದೆ, ಇತರ ಸಾಧನಗಳಿಗಲ್ಲ ಎಂದು ತಿಳಿಸಲಾಗಿದೆ. ಜ್ಞಾನವನ್ನು ಗ್ರಹಿಸುವ ಎಲ್ಲ ಸಾಧನಗಳೂ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಉದಾರಹರಣೆಗಾಗಿ ಜ್ಞಾನ ಎಂಬ ಪದವು ಜ್ಞಾನದ ಜ್ಞಾನವನ್ನು ಉಂಟುಮಾಡುತ್ತದೆ. ಆದರೆ ಪ್ರಾಮಾಣ್ಯದ ಜ್ಞಾನವನ್ನು ಉಂಟುಮಾಡುವುದಿಲ್ಲ. ಆದರೆ ಸಾಕ್ಷೀಂದ್ರಿಯವು ಹೀಗೆ ಮಾಡುವುದಿಲ್ಲ. ಅದು ಜ್ಞಾನದ ತಿಳುವಳಿಕೆಯನ್ನು ಮಾಡುವಾಗಲೇ ಪ್ರಾಮಾಣ್ಯದ ತಿಳುವಳಿಕೆಯನ್ನೂ ಉಂಟುಮಾಡುತ್ತದೆ. ಹೀಗೆ ಜ್ಞಾನಗ್ರಾಹಕೇಣೈವ ಪ್ರಾಮಾಣ್ಯಂ ಗೃಹ್ಯತೇ ಎಂಬ ನಿಯಮವು ಸಾಕ್ಷಿಗೆ ಮಾತ್ರ ಅನ್ವಯಿಸುತ್ತದೆ.

**ಹೀಗೆ ರಾಜರು ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವದ ಪರಿಚಯವನ್ನು ಮೊದಲ ಶ್ಲೋಕದಿಂದ ಮಾಡಿ ಮುಂದಿನ ಶ್ಲೋಕಗಳಲ್ಲಿ ದೋಷಾದಿ ಅಪ್ರತಿರುದ್ಧೇನ ಎಂಬ ವಿಶೇಷಣದ ಆವಶ್ಯಕತೆಯನ್ನು ತೋರಿಸುತ್ತಾರೆ-**

**ಅತೋ ದೂರಸ್ಥವೃಕ್ಷಾದಿಜ್ಞಾನೇ ಜ್ಞಾತೇऽಪಿ ಯತ್ನುನಃ ।**
**ಪ್ರಾಮಾಣ್ಯಸಂಶಯಸ್ತತ್ರ ತದಸ್ಮಾಕಂ ಮತೇ ಭವೇತ್ ॥ ೩೧೨ ॥**

**ಅರ್ಥ–** ಅತಃ = ಆದ್ದರಿಂದ, ದೂರಸ್ಥವೃಕ್ಷಾದಿಜ್ಞಾನೇ = ದೂರದಲ್ಲಿರುವ ಮರ ಮುಂತಾದ ವಸ್ತುಗಳ ಜ್ಞಾನವು, ಜ್ಞಾತೇ ಅಪಿ = ಸಾಕ್ಷಿಯಿಂದ ತಿಳಿಯಲ್ಪಟ್ಟರೂ, ಪುನಃ = ಮತ್ತೆ, ಯತ್ = ಯಾವ, ಪ್ರಾಮಾಣ್ಯಸಂಶಯಃ = ಪ್ರಾಮಾಣ್ಯದ ಬಗ್ಗೆ ಸಂದೇಹ ಬರುವುದೋ, ತತ್ = ಆ ಸಂದೇಹವು, ಅಸ್ಮಾಕಂ ಮತೇ = ಸ್ವತಸ್ತ್ವವಾದಿಗಳಾದ ನಮ್ಮ ಮತದಲ್ಲಿ ಭವೇತ್ = ಕೂಡುತ್ತದೆ.

**ಅನುವಾದ– ದೋಷಾದಿ ಅಪ್ರತಿರುದ್ಧೇನ ಎಂಬ ವಿಶೇಷಣವನ್ನು ಸಾಕ್ಷಿಗೆ ಕೊಟ್ಟಿರುವುದರಿಂದ ದೂರದಲ್ಲಿರುವ ಮರಮುಂತಾದ ವಸ್ತುಗಳ ಜ್ಞಾನವು ಹುಟ್ಟಿದರೂ ಆ ಜ್ಞಾನದಲ್ಲಿ ಏನು ಪ್ರಾಮಾಣ್ಯದ ಸಂಶಯವು ಬರುವುದೋ ಅದು ನಮ್ಮ ಮತದಲ್ಲಿ ಯುಕ್ತವಾಗಿದೆ.**

**ಭಾವವಿಲಾಸಿನೀ– ದೋಷಾದ್ಯಪ್ರತಿರುದ್ಧೇನೇತಿ ವಿಶೇಷಣಗ್ರಹಣಾದಿದಂ ಸಿದ್ಧಮಿತ್ಯಾಹ – ಅತ ಇತಿ ॥ ತತ್ರ ವೃಕ್ಷಾದಿಜ್ಞಾನೇ । ತತ್ಪ್ರಾಮಾಣ್ಯಸಂಶಯರೂಪಜ್ಞಾನಮ್ ॥ ೩೧೨ ॥**

**ವಿವರಣೆ–** ಪ್ರಾಮಾಣ್ಯಂ ಸ್ವತಃ ಎಂದು ಹೇಳಿದರೆ ಜ್ಞಾನದಲ್ಲಿ ಎಂದೂ ಪ್ರಾಮಾಣ್ಯಸಂಶಯವು ಬರಬಾರದು. ಏಕೆಂದರೆ, ಜ್ಞಾನವು ತಿಳಿಯಲ್ಪಟ್ಟಾಗ ಅದರಲ್ಲಿರುವ ಪ್ರಾಮಾಣ್ಯವೂ ಸಾಕ್ಷಿಯಿಂದ ತಿಳಿದಿದೆ. ಪ್ರಾಮಾಣ್ಯವು ತಿಳಿದ ಮೇಲೆ ಅದರ ಬಗ್ಗೆ ಸಂಶಯಬರಲು ಸಾಧ್ಯವಿಲ್ಲ. ಆದರೆ ದೂರದಲ್ಲಿದ್ದ ವಸ್ತುವನ್ನು ನೋಡಿ ಜ್ಞಾನಬಂದಾಗ ಈ ಜ್ಞಾನವು ಸರಿಯೋ ತಪ್ಪೋ ಎಂಬ ಸಂಶಯವು ಬರುತ್ತದೆ. ಇಂತಹ ಸಂಶಯವು ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಿದಾಗ ಬರುವುದು ಹೇಗೆ? ಇದು ನೈಯಾಯಿಕರು ಮಾಡುವ ಆಕ್ಷೇಪ.

ಇದಕ್ಕೆ ರಾಜರು ಈ ಶ್ಲೋಕದಲ್ಲಿ ಸಮಾಧಾನ ನೀಡಿದ್ದಾರೆ. ದೋಷಾದಿಪ್ರತಿಬಂಧಕಗಳಿಲ್ಲದಿದ್ದಲ್ಲಿ ಮಾತ್ರ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ದೋಷಾದಿಗಳಿದ್ದಲ್ಲಿ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ. ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ದೂರದ ವಸ್ತುವಿನ ಜ್ಞಾನ ಬಂದಾಗ ದೂರಸ್ಥತ್ವ ಎಂಬ ದೋಷವಿರುವ ಕಾರಣದಿಂದ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸಿ ಅದರ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆಗ ಮನಸ್ಸಿನಲ್ಲಿ ಪ್ರಾಮಾಣ್ಯದ ಬಗ್ಗೆ ಸಂಶಯ ಉಂಟಾಗುತ್ತದೆ. ಹೀಗೆ ಪ್ರಾಮಾಣ್ಯಸ್ವತಸ್ತ್ವಪಕ್ಷದಲ್ಲಿ ಸಂಶಯವು ಬರಬಹುದು.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ತತ್ ಅಸ್ಮಾಕಂ ಎಂದು ವಾದಿರಾಜರ ಪ್ರಯೋಗ. ಇಲ್ಲಿ ತತ್ ಪದದಿಂದ ಪೂರ್ವಪ್ರಸ್ತುತವಾದ ಸಂಶಯವನ್ನು ಪರಾಮರ್ಶೆಮಾಡಬೇಕು. ಆದರೆ ಸಂಶಯಃ ಎಂದು ಪುಲ್ಲಿಂಗಪದದಿಂದ ಸಂಶಯವನ್ನು ಉಲ್ಲೇಖಿಸಲಾಗಿದೆ. ಆದ್ದರಿಂದ ಸಃ ಎಂದು ಪುಂಲಿಂಗಪದದಿಂದಲೇ ಅದನ್ನು

ಉಲ್ಲೇಖಿಸಬೇಕು. ತತ್ ಎಂಬ ನಪುಂಸಕಲಿಂಗ ಪದ ಹೇಗೆ ಸರಿ? ಇದಕ್ಕೆ ಸುರೋತ್ತಮತೀರ್ಥರು ತತ್ - ಪ್ರಾಮಾಣ್ಯಸಂಶಯರೂಪಜ್ಞಾನಂ ಎಂದು ವಿವರಣೆ ನೀಡಿದ್ದಾರೆ. ಸಂಶಯಃ ಎಂಬ ಪದದ ಅರ್ಥ ಸಂಶಯರೂಪವಾದ ಜ್ಞಾನ ಎಂದು. ಜ್ಞಾನಶಬ್ದವು ನಪುಂಸಕವಾದ ಕಾರಣ ಅದಕ್ಕನುಗುಣವಾಗಿ ತತ್ ಎಂಬ ನಪುಂಸಕಪದವಿದೆ.

ಹಿಂದಿನ ಶ್ಲೋಕದಲ್ಲಿ ದೂರಸ್ಥವಸ್ತುವಿನ ಜ್ಞಾನಪ್ರಾಮಾಣ್ಯದಲ್ಲಿ ಸಂಶಯವು ಬರಬಹುದು ಎಂದು ಹೇಳಲಾಯಿತು. ಅದನ್ನು ಮುಂದಿನ ಈ ಶ್ಲೋಕದಲ್ಲಿ ವಿವರಿಸುತ್ತಾರೆ.

**ಯತೋ ದೂರತ್ವದೋಷೇಣ ಸ್ವಗೃಹೀತೇನ ಕುಂಠಿತಃ ।**
**ನ ನಿಶ್ಚಿನೋತಿ ಪ್ರಾಮಾಣ್ಯಂ ತತ್ರ ಜ್ಞಾನಗ್ರಹೇऽಪಿ ಸಃ ॥ ೩೧೩ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಸ್ವಗೃಹೀತೇನ = ತನ್ನಿಂದ (ಸಾಕ್ಷಿಯಿಂದ) ಗ್ರಹಿಸಲ್ಪಟ್ಟ, ದೂರತ್ವದೋಷೇಣ = ವಸ್ತುವು ಕಣ್ಣಿಗಿಂತ ದೂರದಲ್ಲಿರುವ ದೋಷದಿಂದ, ಕುಂಠಿತಃ = ಅಸಮರ್ಥವಾದ, ಸಃ = ಆ ಸಾಕ್ಷಿಯು, ತತ್ರ = ದೂರಸ್ಥವಸ್ತುವಿನ ಜ್ಞಾನಬರುವ ಸಂದರ್ಭದಲ್ಲಿ, ಜ್ಞಾನಗ್ರಹೇ ಅಪಿ = ಜ್ಞಾನವನ್ನು ಗ್ರಹಿಸಿದರೂ, ಪ್ರಾಮಾಣ್ಯಂ = ಪ್ರಾಮಾಣ್ಯವನ್ನು, ನ ನಿಶ್ಚಿನೋತಿ = ನಿರ್ಧಾರಮಾಡುವುದಿಲ್ಲ.

**ಅನುವಾದ–** ದೂರದ ವಸ್ತುವಿನ ಜ್ಞಾನಬಂದಾಗ, ಸಾಕ್ಷಿಯು ತಾನು ಈ ಜ್ಞಾನವು ದೂರದ ವಸ್ತುವನ್ನು ವಿಷಯೀಕರಿಸುತ್ತಿದೆ ಎಂದು ದೋಷವನ್ನು ಪರಾಮರ್ಶಿಸುವುದರಿಂದ ಪ್ರಾಮಾಣ್ಯಗ್ರಹಣಶಕ್ತಿಯು ಕುಂಠಿತವಾಗಿ ಅಂತಹ ಸಂದರ್ಭದಲ್ಲಿ ಜ್ಞಾನವನ್ನು ಗ್ರಹಿಸಿದರೂ ಪ್ರಾಮಾಣ್ಯವನ್ನು ನಿಶ್ಚಯಿಸುವುದಿಲ್ಲ.

**ಭಾವವಿಲಾಸಿನೀ–** ಕುತೋ ಭವೇದಿತ್ಯತ ಆಹ – ಯತ ಇತಿ ॥ ದೂರತ್ವದೋಷೇಣ ದೂರಸ್ಥವಸ್ತುವಿಷಯತ್ವರೂಪದೋಷೇಣೇತ್ಯರ್ಥಃ । ಸ್ವೇನ ಸಾಕ್ಷಿಣಾ ಗೃಹೀತೇನ । ತತ್ರ ದೂರಸ್ಥವೃಕ್ಷಾದಿಜ್ಞಾನೇ । ಸಃ ಸಾಕ್ಷೀ ॥ ೩೧೩ ॥

**ವಿವರಣೆ–** ದೂರದಲ್ಲಿರುವ ಮರವನ್ನು ನೋಡಿ ಗೇಣುದ್ದದ ಮರ ಇದು ಎಂಬ ಜ್ಞಾನಬರುತ್ತದೆ. ಈ ಜ್ಞಾನವನ್ನು ಸಾಕ್ಷಿಯು ಗ್ರಹಿಸುವಾಗ ಈ ಜ್ಞಾನವು ತಿಳಿಸುತ್ತಿರುವ ವಿಷಯವು ದೂರದಲ್ಲಿದೆ ಎಂದೂ ಗ್ರಹಿಸುತ್ತದೆ. ವಿಷಯವು ದೂರದಲ್ಲಿದ್ದಾಗ ಜ್ಞಾನವು ತಪ್ಪಾಗಿರುತ್ತದೆ ಎನ್ನುವ ಎಚ್ಚರವೂ ಸಾಕ್ಷಿಗೆ ಇದೆ. ಹೀಗಾಗಿ ಇಂತಹ ಸಂದರ್ಭದಲ್ಲಿ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ. ಆ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆಗ ಮನಸ್ಸಿನಲ್ಲಿ ಪ್ರಾಮಾಣ್ಯಸಂಶಯವು ಉಂಟಾಗುತ್ತದೆ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಶ್ಲೋಕದಲ್ಲಿ ದೂರತ್ವ ದೋಷೇಣ ಎಂದಿದೆ. ಈ ದೋಷವು ಜ್ಞಾನದಲ್ಲಿ ಇಲ್ಲ, ಆದಕ್ಕಾಗಿ ಅದನ್ನು ಜ್ಞಾನದಲ್ಲಿ ಬರುವ ದೋಷವನ್ನಾಗಿ ಸುರೋತ್ತಮತೀರ್ಥರು ವ್ಯಾಖ್ಯಾನಿಸಿದ್ದಾರೆ. ದೂರಸ್ಥವಸ್ತು ವಿಷಯತ್ವರೂಪದೋಷೇಣ ಇತ್ಯರ್ಥಃ.

೨. ತತ್ರ ಎಂಬ ಶಬ್ದಕ್ಕೆ ದೂರದಲ್ಲಿರುವ ಮರದ ಜ್ಞಾನದಲ್ಲಿ ಎಂದು ಅರ್ಥ.

೩. ಸಃ ಎಂದರೆ ಸಾಕ್ಷಿ.

ಸಾಕ್ಷಿಯು ಈ ವಸ್ತುವು ದೂರದಲ್ಲಿದೆ ಎಂದು ಗ್ರಹಿಸುತ್ತದೆ, ಎಂದು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ಆದರೆ ಸಾಕ್ಷಿಗೆ ಈ ಸಾಮರ್ಥ್ಯ ಹೇಗೆ? ಅದು ಆಂತರಿಕವಸ್ತುಗಳನ್ನು ಗ್ರಹಿಸಬಹುದು. ದೂರ, ಸಮೀಪ ಮುಂತಾದ ಬಾಹ್ಯವಿಷಯಗಳನ್ನು ಗ್ರಹಿಸುವ ಸಾಮರ್ಥ್ಯ ಅದಕ್ಕಿಲ್ಲ. ಅದನ್ನು ಕಣ್ಣು ತಿಳಿಯಬಹುದು. ಸಾಕ್ಷಿ ತಿಳಿಸುವುದು ಹೇಗೆ? ಇದಕ್ಕೆ ಉತ್ತರ ಮುಂದಿನ ಶ್ಲೋಕದಲ್ಲಿದೆ.

**ದೇಶಸ್ಯ ವಿಪ್ರಕರ್ಷೋ ಹಿ ದೂರತ್ವಂ ಸ ಚ ಸಾಕ್ಷಿಣಾ ।**
**ಗೃಹೀತುಂ ಶಕ್ಯತೇ ಯಸ್ಮಾದಾಕಾಶೋಽವ್ಯಾಕೃತೋ ಹ್ಯಸೌ ॥ ೩೧೪ ॥**

**ಅರ್ಥ–** ದೇಶಸ್ಯ = ದೇಶದ, ವಿಪ್ರಕರ್ಷಃ = ಹೆಚ್ಚಿನ ಅಂತರವೇ, ದೂರತ್ವಂ ಹಿ = ದೂರತ್ವವೆಂದು ಕರೆಯಲ್ಪಡುತ್ತದೆ. ಯಸ್ಮಾತ್ = ಯಾವ ಕಾರಣದಿಂದ, ಅಸೌ = ಈ ರೀತಿಯ ದೂರತ್ವವು, ಅವ್ಯಾಕೃತಃ ಆಕಾಶಃ = ಅವ್ಯಾಕೃತಾಕಾಶರೂಪವಾದುದೋ, ಅತಃ = ಆದ್ದರಿಂದ, ಸ ಚ = ಆ ದೂರತ್ವದೋಷವೂ, ಸಾಕ್ಷಿಣಾ = ಸಾಕ್ಷೀಂದ್ರಿಯದಿಂದ, ಗೃಹೀತುಂ = ಗ್ರಹಿಸಲು, ಶಕ್ಯತೇ ಹಿ = ಸಾಧ್ಯವಾಗುತ್ತದೆ.

**ಅನುವಾದ–** ದೂರತ್ವ ಎಂದರೆ ದೇಶವಿಪ್ರಕರ್ಷ. ದೇಶವು ಅವ್ಯಾಕೃತಾಕಾಶ-ರೂಪವಾಗಿರುವುದುದಿರಂದ ಅದನ್ನೂ ಸಾಕ್ಷಿಯು ಗ್ರಹಿಸಲು ಸಮರ್ಥವಾಗಿದೆ.

**ಭಾವವಿಲಾಸಿನೀ–** ನನು ವಸ್ತುನೋ ದೂರಸ್ಥತ್ವಂ ಕಥಂ ಸಾಕ್ಷಿವೇದ್ಯಮಿತ್ಯತ ಆಹ – **ದೇಶಸ್ಯೇತಿ** ॥ ವಿಪ್ರಕರ್ಷಃ ಸಾಮೀಪ್ಯಾಭಾವಃ । ಸಃ ದೇಶವಿಪ್ರಕರ್ಷಃ । ಅಸೌ ವಿಪ್ರಕೃಷ್ಟದೇಶಃ ಅವ್ಯಾಕೃತಾಕಾಶೋ ಹೀತಿ ಸಂಬಂಧಃ । ಆಕಾಶಸ್ಯ ಸಾಕ್ಷಿವೇದ್ಯತ್ವಮಂಧಕಾರೇಽಪಿ ಹಸ್ತ-ಪ್ರಸಾರಣಾದಿನಾ ಉಪಪಾದಿತಮನ್ಯತ್ರ ॥ ೩೧೪ ॥

**ವಿವರಣೆ–** ವಸ್ತುವು ದೂರದಲ್ಲಿದೆ ಎಂದರೆ ನಮಗೂ ಆ ವಸ್ತುವಿಗೂ ಅಂತರವಿದೆ ಎಂದರ್ಥ. ಅಂತರ ಎಂದರೆ ಅವ್ಯಾಕೃತಾಕಾಶ. ದ್ವೈತದರ್ಶದಲ್ಲಿ ದೇಶವೆಂದರೆ ಅವ್ಯಾಕೃತಾಕಾಶ. ಅವ್ಯಾಕೃತಾಕಾಶವು ಸಾಕ್ಷಿಗೋಚರವಾಗುತ್ತದೆ. ಆದ್ದರಿಂದ ದೂರ, ಸಮೀಪ ಎಂಬ ಜ್ಞಾನವು ಸಾಕ್ಷೀಂದ್ರಿಯದಿಂದ ಬರಬಹುದು.

ವಿಪ್ರಕರ್ಷ ಎಂದರೆ ಸಮೀಪವಾಗಿಲ್ಲದಿರುವುದು, ಎಂದರ್ಥ. ಅಸೌ ಎಂದರೆ ಸಮೀಪವಲ್ಲದ ದೇಶವು, ಸಾಕ್ಷಿಗೆ ವಿಷಯವಾಗಿ ಎಂದರ್ಥ.

ದೂರದವಸ್ತುವಿನ ಜ್ಞಾನದಂತೆ ಇನ್ನೂ ಕೆಲವು ಜ್ಞಾನಗಳಲ್ಲೂ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ಮುಂದಿನ ಶ್ಲೋಕದಲ್ಲಿ ಹೇಳಿದ್ದಾರೆ.

**ಕಾಚಾದಿದೋಷಂ ಚೈಕತ್ರ ತತ್ಕಾರ್ಯಾನುಮಿತಂ ಪುನಃ ।**
**ಯದಾನ್ಯತ್ರಾನುಸಂಧತ್ತೇ ಜ್ಞಾನಮಾತ್ರಗ್ರಹೀ ತದಾ ॥ ೩೧೫ ॥**

**ಅರ್ಥ–** ಏಕತ್ರ = ಒಂದು ಕಡೆ, ತತ್ಕಾರ್ಯಾನುಮಿತಂ = ಕಾಚಾದಿದೋಷಗಳ ಕಾರ್ಯವಾದ ಅಯಥಾರ್ಥಜ್ಞಾನದಿಂದ ಅನುಮಾನಮಾಡಲ್ಪಟ್ಟ, ಕಾಚಾದಿದೋಷಂ = ಕಣ್ಣಿನ ಪೊರೆ ಮೊದಲಾದ ದೋಷಗಳನ್ನು, ಯದಾ = ಯಾವಾಗ, ಪುನಃ = ಮತ್ತೆ, ಅನ್ಯತ್ರ = ಬೇರೆ ಕಡೆಗಳಲ್ಲೂ (ಸಾಕ್ಷಿಯು), ಅನುಸಂಧತ್ತೇ = ತಿಳಿದುಕೊಳ್ಳುತ್ತದೆಯೋ, ತದಾ = ಅಂತಹ ಸಂದರ್ಭದಲ್ಲಿ, ಜ್ಞಾನಮಾತ್ರಗ್ರಹೀ = ಕೇವಲ ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ, ಅದರ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ.

**ಅನುವಾದ–** ನಮ್ಮ ಸನಿಹದ ವಸ್ತುಗಳ ಜ್ಞಾನವು ಕೆಲವೊಮ್ಮೆ ತಪ್ಪಾಗಿ ಬಂದಾಗ ಅದಕ್ಕೆ ಕಾರಣವಾಗಿ ಕಾಚಾದಿದೋಷಗಳನ್ನು ಕಲ್ಪನೆಮಾಡಿಕೊಳ್ಳುತ್ತೇವೆ. ಇಂತಹ ದೋಷಗಳನ್ನು ಇತರ ವಸ್ತುಗಳ ಜ್ಞಾನದಲ್ಲೂ ಸಾಕ್ಷಿಯು ಅನುಸಂಧಾನ ಮಾಡಿಕೊಂಡಾಗಲೂ ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ, ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ.

**ಭಾವವಿಲಾಸಿನೀ–** ದೋಷಶಂಕಾಕಲಙ್ಕೇ ಸಾಕ್ಷೀ ಅನ್ಯತ್ರಾಪಿ ಪ್ರಾಮಾಣ್ಯಂ ನ ಗೃಹ್ಣಾತೀತ್ಯಾಹ – **ಕಾಚಾದೀತಿ** ॥ ಏಕತ್ರ ಸ್ವಕರತಲರೇಖಾದಿಜ್ಞಾನೇ । ತತ್ಕಾರ್ಯಾನುಮಿತಂ ದೋಷ-ಕಾರ್ಯೇಣಾಸ್ಪಷ್ಟತಯೋಲ್ಲೇಖೇನಾನುಮಿತಮ್ । ಅನ್ಯತ್ರ ಘಟಪಟಾದಿಜ್ಞಾನಾಂತರೇ । ಜ್ಞಾನಮಾತ್ರಗ್ರಹೀ ಜ್ಞಾನಮಾತ್ರಸ್ಯ ಗ್ರಹೋಽಸ್ಯಾಸ್ತೀತಿ ಜ್ಞಾನಮಾತ್ರಗ್ರಹೀ । ನ ಪ್ರಾಮಾಣ್ಯಗ್ರಹೀತಿ ಭಾವಃ ॥ ೩೧೫ ॥

**ವಿವರಣೆ–** ನಮಗೆ ಬರುವ ಎಲ್ಲ ಜ್ಞಾನಗಳೂ ಯಥಾರ್ಥವಾಗಿರುವುದಿಲ್ಲ, ಕೆಲವೊಮ್ಮೆ ಅಯಥಾರ್ಥಜ್ಞಾನಗಳೂ ಹುಟ್ಟುತ್ತವೆ. ಅಂತಹ ಸಂದರ್ಭಗಳಲ್ಲಿ ಕಣ್ಣಿನ ಪೊರೆಯೋ, ಕಾಮಾಲೆ ಮುಂತಾದ ದೋಷಗಳೋ ಕಣ್ಣಿನಲ್ಲಿ ಇರುತ್ತವೆ. ಇಂತಹ ದೋಷಗಳನ್ನು ಸಾಕ್ಷಿಯು ತಿಳಿದುಕೊಂಡರೆ ಜ್ಞಾನವನ್ನು ಮಾತ್ರವೇ ಗ್ರಹಿಸಿ ಸುಮ್ಮನಾಗುತ್ತದೆ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಹೀಗೆ ಸಾಕ್ಷಿಯು ಎಲ್ಲ ಸಂದರ್ಭಗಳಲ್ಲೂ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಏಕತ್ರ ಎಂಬ ಪದಕ್ಕೆ ವ್ಯಾಖ್ಯಾನದಲ್ಲಿ ಸ್ವಕರತಲರೇಖಾದಿಜ್ಞಾನೇ ಎಂದು ಅರ್ಥವನ್ನು ಮಾಡಲಾಗಿದೆ. ನಮ್ಮ ಅಂಗೈರೇಖೆ ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಅದೂ ಒಂದೊಮ್ಮೆ ತಪ್ಪಾಗಿ ತಿಳಿದುಬಂದರೆ ಕಣ್ಣಿನಲ್ಲಿ ದೋಷವಿದೆ ಎಂದೇ ಅರ್ಥ.

2. ತತ್ಕಾರ್ಯಾನುಮಿತಂ ಅಂದರೆ ದೋಷದ ಕಾರ್ಯದಿಂದ ದೋಷವನ್ನು ಅನುಮಾನ ಮಾಡಬೇಕು ಎಂದರ್ಥ. ದೋಷದ ಕಾರ್ಯ ಅಸ್ಪಷ್ಟಜ್ಞಾನ. ನಮಗೆ ಅಂಗೈರೇಖೆಯೇ ಅಸ್ಪಷ್ಟವಾಗಿ ತೋರುತ್ತದೆ ಎಂದಾದರೆ ಕಣ್ಣಿನಲ್ಲಿ ದೋಷವಿದೆ ಎಂದು ಊಹಿಸಬೇಕು.

ಸಾಕ್ಷಿಯೇ ಜ್ಞಾನಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದು ಒಪ್ಪೋಣ, ಕೆಲವೊಮ್ಮೆ ಅಯಥಾರ್ಥಜ್ಞಾನವೂ ಯಥಾರ್ಥವೆಂದೇ ತಪ್ಪಾಗಿ ತಿಳಿದುಬರುತ್ತದೆ. ಅಂತಹ ಸಂದರ್ಭದಲ್ಲೂ ಸಾಕ್ಷಿಯೇ ಪ್ರಾಮಾಣ್ಯವನ್ನು ಗ್ರಹಿಸುತ್ತದೆಯೋ ಹೇಗೆ? ಈ ಪ್ರಶ್ನೆಗೆ ಮುಂದಿನ ಶ್ಲೋಕವು ಉತ್ತರ.

**ವಿಪರ್ಯಯೇಽಪಿ ದೂರತ್ವಪೂರ್ವದೋಷಾನುದರ್ಶನಾತ್ ।**
**ಉದಾಸ್ತೇ ಚತುರಃ ಸಾಕ್ಷೀ ಪ್ರಾಮಾಣ್ಯಗ್ರಹಣೇ ಕಿಲ ॥ ೩೧೬ ॥**

**ಅರ್ಥ–** ವಿಪರ್ಯಯೇ ಅಪಿ = ಭ್ರಮೆಯ ಸಂದರ್ಭದಲ್ಲೂ, ದೂರತ್ವಪೂರ್ವದೋಷಾನುದರ್ಶನಾತ್ = ದೂರಸ್ಥತ್ವಾದಿ ದೋಷಗಳ ಜ್ಞಾನದಿಂದ, ಚತುರಃ= ಚುರುಕಾದ, ಸಾಕ್ಷೀ = ಸಾಕ್ಷೀಂದ್ರಿಯವು, ಪ್ರಾಮಾಣ್ಯಗ್ರಹಣೇ = ಜ್ಞಾನಗಳ ಪ್ರಾಮಾಣ್ಯವನ್ನು ಗ್ರಹಿಸುವಲ್ಲಿ, ಉದಾಸ್ತೇ = ತಟಸ್ಥವಾಗುತ್ತದೆ.

**ಅನುವಾದ–** ಅಪ್ರಮಾಣವಾದ ಜ್ಞಾನವನ್ನು ಪ್ರಮಾಣ ಎಂದು ಗ್ರಹಿಸುವ ಸಂದರ್ಭದಲ್ಲಿ ದೂರಸ್ಥತ್ವವೇ ಮೊದಲಾದ ದೋಷಗಳನ್ನು ತಿಳಿದುಕೊಂಡಿರುವ ಕಾರಣದಿಂದಾಗಿ ಚಾಣಾಕ್ಷವಾದ ಸಾಕ್ಷೀಂದ್ರಿಯವು ಪ್ರಾಮಾಣ್ಯವನ್ನು ಗ್ರಹಿಸುವ ವಿಷಯದಲ್ಲಿ ತಟಸ್ಥವಾಗಿರುತ್ತದೆ. ಅರ್ಥಾತ್ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ.

**ಭಾವವಿಲಾಸಿನೀ–** ನನು ಸರ್ವತ್ರ ಸಾಕ್ಷಿಣೈವ ಪ್ರಾಮಾಣ್ಯಗ್ರಹೇ ಯದಾ ವಸ್ತುಗತ್ಯಾ ಪ್ರಾಮಾಣ್ಯಾಭಾವವತಿ ಕ್ವಚಿದ್ ಜ್ಞಾನೇ ಪ್ರಾಮಾಣ್ಯನಿಶ್ಚಯೋ ಜಾಯತೇ, ಸೋಽಪಿ ಕಿಂ ಸಾಕ್ಷಿಣೈವ ನೇತ್ಯಾಹ – **ವಿಪರ್ಯಯೇಽಪೀತಿ** ॥ ವಿಪರ್ಯಯೇ ಪ್ರಾಮಾಣ್ಯಾಭಾವವತಿ ಪ್ರಾಮಾಣ್ಯನಿಶ್ಚಯಸ್ಥಾನ ಇತಿ ಯಾವತ್ । ದೂರತ್ವಪೂರ್ವದೋಷಾನುದರ್ಶನಾದ್ ದೂರತ್ವಪೂರ್ವದೋಷ ಪ್ರತಿರೋಧೇನೇತಿ ಯಾವತ್ । ಚತುರಃ ಚೇತನತ್ವೇನ ವಿವೇಕೀ ಅಪ್ರಮಾಯಾಂ ಪ್ರಾಮಾಣ್ಯಗ್ರಹಣೇ ಮಮಾಯಾಥಾರ್ಥ್ಯಂ ಸ್ಯಾದಿತಿ ವಿವೇಕವಾನಿತ್ಯರ್ಥಃ । ಪ್ರಾಮಾಣ್ಯಗ್ರಹಣೇ ಉದಾಸ್ತೇ ಕಿಲೇತಿ ಸಂಬಂಧಃ । ಅಪ್ರತಿಬದ್ಧಸಾಕ್ಷಿಗ್ರಾಹ್ಯತ್ವನಿಯಮಸ್ಯೈವ

ಸ್ವತಸ್ತ್ವೇನೋಕ್ತತ್ವಾದ್ ಅತ್ರತು ಪ್ರತಿಬಂಧಕದೋಷಸದ್ಭಾವಾತ್ ಸಾಕ್ಷಿಣಾ ಪ್ರಮಾಣ್ಯಾಗ್ರಹೇಽಪಿ ನ ಸ್ವತಸ್ತ್ವಹಾನಿರಿತಿ ಭಾವಃ ॥ ೩೧೬ ॥

**ವಿವರಣೆ–** ತಪ್ಪಾದ ಜ್ಞಾನವೂ ಸರಿ ಎಂದು ತಿಳಿದ ಸಂದರ್ಭದಲ್ಲಿ ಸಾಕ್ಷಿಯು ತಟಸ್ಥವಾಗುತ್ತದೆ. ಅದು ಅಂತಹ ಜ್ಞಾನವು ಪ್ರಮಾಣ ಎಂದು ಗ್ರಹಿಸುವುದಿಲ್ಲ. ಅದಕ್ಕೆ ದೋಷಗಳ ಪರಿಜ್ಞಾನವಿರುವ ಕಾರಣ ಜ್ಞಾನಸ್ವರೂಪವನ್ನು ಮಾತ್ರವೇ ಗ್ರಹಿಸುತ್ತದೆ. ಜ್ಞಾನವು ಪ್ರಮಾಣವೆಂದಾಗಲೀ, ಅಪ್ರಮಾಣವೆಂದಾಗಲೀ ಅದು ಗ್ರಹಿಸುವುದಿಲ್ಲ. ಆದ್ದರಿಂದ ಸಾಕ್ಷಿಯು ಚತುರ - ತುಂಬಾ ಚುರುಕು ಎಂದಿದ್ದಾರೆ ರಾಜರು. ತಪ್ಪಾದ ಈ ಜ್ಞಾನವನ್ನು ಸರಿ ಎಂದು ತಿಳಿಸಿಕೊಟ್ಟರೆ ನಾನು ಸುಳ್ಳು ಹೇಳಿದಂತಾಗುತ್ತದೆ, ಎಂದು ತಿಳಿಯುವ ಜಾಣ್ಮೆ ಸಾಕ್ಷಿಗಿದೆ. ಆದ್ದರಿಂದ ಅದು ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ವಿಪರ್ಯಯೇ ಪ್ರಾಮಾಣ್ಯಾಭಾವವತಿ ಪ್ರಾಮಾಣ್ಯನಿಶ್ಚಯಜ್ಞಾನೇ ಸತಿ ಇತಿ ಯಾವತ್, ವಿಪರ್ಯಯೇ ಎಂದರೆ ತಪ್ಪಾಗುವ ಸ್ಥಳದಲ್ಲಿ ಅಂದರೆ ತಪ್ಪಾದ ಜ್ಞಾನವನ್ನು ಸರಿ ಎಂದು ತಿಳಿಯುವ ಸಂದರ್ಭದಲ್ಲಿ ಎಂದು ಅರ್ಥ.

2. ಚತುರಃ - ಚೇತನತ್ವೇನ ವಿವೇಕೀ, ಅಪ್ರಮಾಯಾ ಪ್ರಾಮಾಣ್ಯಗ್ರಹಣೇ ಮಮ ಅಯಾಥಾರ್ಥ್ಯಂ ಸ್ಯಾದಿತಿ ವಿವೇಕವಾನ್ ಇತ್ಯರ್ಥಃ.

ಚತುರಃ ಎಂದರೆ ಚೇತನವಾದುದರಿಂದ ವಿವೇಕವಿರುವ ಎಂದರ್ಥ. ಸಾಕ್ಷೀ ಎಂದರೆ ಆತ್ಮ, ಅವನು ಚೇತನ ಆದ್ದರಿಂದ ವಿವೇಚನಾ ಶಕ್ತಿ ಅವನಿಗಿದೆ. ನಾನು ತಪ್ಪನ್ನು ಸರಿ ಎಂದು ತಿಳಿಸಬಾರದು, ಎನ್ನುವ ವಿವೇಕ ಸಾಕ್ಷಿಗೆ ಇದೆ ಎಂದರ್ಥ.

ಪ್ರತಿಬಂಧವಿಲ್ಲದಾಗ ಮಾತ್ರ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದೇ ಪ್ರಾಮಾಣ್ಯಸ್ವತಸ್ತ್ವದ ನಿಯಮ. ಇಂತಹ ಸಂದರ್ಭಗಳಲಿ ದೋಷರೂಪವಾದ ಪ್ರತಿಬಂಧಕವು ಇರುವ ಕಾರಣ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಇದರಿಂದ ಸ್ವತಸ್ತ್ವನಿಯಮಕ್ಕೇನೂ ಚ್ಯುತಿ ಇಲ್ಲ.

ಹಾಗಾದರೆ ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯವಿದೆ ಎಂದು ಸುಳ್ಳು ಹೇಳುವ ಇಂದ್ರಿಯ ಯಾವುದು? ಅದಕ್ಕುತ್ತರ ಮುಂದಿನ ಶ್ಲೋಕದಲ್ಲಿದೆ-

**ತದಾ ರಾಗಾದಿದೋಷೇಣ ಕಲುಷಂ ಚ ಚಲಂ ಮನಃ ।**
**ಗೃಹ್ಣಾತಿ ತತ್ರ ಪ್ರಾಮಾಣ್ಯಮರ್ಥಗ್ರಹಣಕಾತರಂ ॥ ೩೧೭ ॥**

**ಅರ್ಥ–** ತದಾ = ಸಾಕ್ಷಿಯು ಉದಾಸೀನವಾದಾಗ, ರಾಗಾದಿದೋಷೇಣ ಕಲುಷಂ = ರಾಗವೇ ಮೊದಲಾದ ದೋಷಗಳಿಂದ ಕೂಡಿದ, ಅರ್ಥಗ್ರಹಣಕಾತರಂ = ವಸ್ತುವನ್ನು

ವಿಷಯಾಕರಿಸುವ ತವಕವುಳ್ಳ, ಚಲಂ = ಚಂಚಲವಾದ, ಮನಃ = ಮನಸ್ಸು ತತ್ರ = ಜ್ಞಾನದಲ್ಲಿ ಪ್ರಾಮಾಣ್ಯಂ = ಪ್ರಾಮಾಣ್ಯವನ್ನು ಗೃಹ್ಣಾತಿ = ಗ್ರಹಿಸುತ್ತದೆ.

**ಅನುವಾದ– ಅಂತಹ ಸಂದರ್ಭದಲ್ಲಿ ರಾಗದ್ವೇಷಾದಿದೋಷಗಳಿಂದ ಕೂಡಿದ, ವಿಷಯವನ್ನು ಪಡೆವ ಆತುರದಲ್ಲಿರುವ, ಚಂಚಲವಾದ ಮನಸ್ಸೇ ಆ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ.**

**ಭಾವವಿಲಾಸಿನೀ–** ಕೇನ ತರ್ಹಿ ತತ್ರ ಪ್ರಾಮಾಣ್ಯಭ್ರಮ ಇತ್ಯತ ಆಹ – **ತದೇತಿ** ॥ ತದಾ ಸಾಕ್ಷಿಣ ಔದಾಸೀನ್ಯಸಮಯೇ । ರಾಗಾದಿದೋಷೇಣ ಕಲುಷಂ ಚಂಚಲಮ್ ಅರ್ಥಗ್ರಹಣಕಾತರಮಿತಿ ಚ ಮನಸೋ ಹೇತುಗರ್ಭಂ ವಿಶೇಷಣತ್ರಯಮ್। ವಸ್ತುಗತ್ಯಾ ರಜತಾಭಾವೇ ರಜತೇ ರಾಗವಶಾತ್ತಜ್ಞಾನೇ ಪ್ರಾಮಾಣ್ಯಂ ನಿಶ್ಚಿನೋತೀತಿ ಹೇತೋಃ ಚಂಚಲಮಿತಿ ಚ ವಿಕಲ್ಪಾತ್ಮಕತ್ವೇನ ಭ್ರಮಶೀಲತ್ವಹೇತೋಃ ಸುಖದುಃಖಾದೀನಾಂ ಸರ್ವೇಷಾಂ ಪ್ರತ್ಯಕ್ಷಾಯೋಗ್ಯಾಂತರ-ಪದಾರ್ಥಾನಾಂ ಸಾಕ್ಷಿಣೈವ ಗ್ರಹಣಾತ್ ಮಮ ಕದಾ ಕೋ ವಾ ಅರ್ಥಃ ಸ್ಯಾದಿತ್ಯರ್ಥಗ್ರಹಣೇ ಅತ್ಯನ್ತೋತ್ಕಣ್ಠಾ ಯುಕ್ತತ್ವಸ್ಯ ಚ ಹೇತೋಃ ಸೂಚನಾತ್ । ತವ ವಸ್ತುಗತ್ಯಾ ಅಪ್ರಮಾಭೂತೇ ಜ್ಞಾನೇ । ಅತಿಕ್ಷುಧಿತಃ ಪುರುಷಃ ಸದನ್ನಾಲಾಭೇ ಕದನ್ನಮಿವ ವಿವೇಕಿನಾ ಸ್ವರಮಣಭಿಯಾ ತ್ಯಕ್ತಂ ಸರ್ಪಂ ಮರಣಶಂಕಾಶೂನ್ಯೋ ಮೌಢ್ಯಾತ್ ಸ್ಪೃಶನ್ ಬಾಲಕ ಇವ ಚ ವಿಪರೀತಮಪೀಮಮರ್ಥಂ ಗೃಹ್ಣಾತೀತಿ ಭಾವಃ। ನನು ಕುತ ಏತತ್ಕಲ್ಪ್ಯತ ಇತಿ ಚೇತ್ ಸಾಕ್ಷಿಣೋ ಯಾಥಾರ್ಥ್ಯನಿಯಮಾಭಾವೇ ಕ್ವಚಿದ್ವ್ಯಭಿಚರಿತಾರ್ಥವಿಷಯತ್ವೇ ಚ ತದ್ಗೃಹೀತಸುಖ-ದುಃಖಾದೌ ಕದಾಚಿದ್ವೈಪರೀತ್ಯಮಪಿ ಸ್ಯಾತ್। ಅತಃ ಸಾಕ್ಷಿಣೋ ಯಾಥಾರ್ಥ್ಯನಿಯಮಸ್ಯಾ-ವಶ್ಯಮ್ಭಾವಾದ್ ವ್ಯಭಿಚರಿತಸ್ಯಾಸ್ಯ ಪ್ರಾಮಾಣ್ಯನಿಶ್ಚಯಸ್ಯಾಗತ್ಯಾ ಮಾನಸತ್ವಸ್ಯೈವ ವಕ್ತವ್ಯತ್ವಾತ್ ॥ ೩೧೭ ॥

**ವಿವರಣೆ–** ತಪ್ಪಾದ ಜ್ಞಾನವನ್ನು ಸರಿ ಎಂದು ತಿಳಿಯುವುದು ಮನಸ್ಸು. ಅದು ವಿವೇಕಿಯಲ್ಲ. ರಾಗದ್ವೇಷಗಳು ಅದರಲ್ಲಿ ತುಂಬಿವೆ. ತನಗೆ ಇಷ್ಟವಾದ ವಿಷಯವನ್ನು ಪಡೆದುಕೊಳ್ಳುವ, ಬೇಡವಾದುದನ್ನು ಬಿಡುವ ಕಾತರತೆ ಮನಸ್ಸಿಗೆ ಇದೆ. ಹೀಗಾಗಿ ಅವಸರದಲ್ಲಿ ಮನಸ್ಸು ಸಾಕ್ಷಿಯಂತೆ ವಿವೇಚನೆ ಮಾಡದೆ, ಸುಳ್ಳು ಹೇಳಿ ಬಿಡುತ್ತದೆ. ಜ್ಞಾನವು ತಪ್ಪಾದರೂ ಅದು ಸರಿಯಾಗಿದೆ ಎಂದು ಮುದ್ರೆ ಒತ್ತುತ್ತದೆ. ಇದನ್ನು ಆಚಾರ್ಯರು - ಯತ್ ಕ್ವಚಿದ್ ವ್ಯಭಿಚಾರಿ ಸ್ಯಾತ್ ದರ್ಶನಂ ಮಾನಸಂ ಹಿ ತತ್ ಎಂದಿರುತ್ತಾರೆ.

ಮನಸ್ಸಿನ ಕಾತರತೆಯನ್ನು ಸುರೋತ್ತಮತೀರ್ಥರು ದೃಷ್ಟಾಂತ ಕೊಟ್ಟು ಚಮತ್ಕಾರಪೂರ್ವಕ ವಿವರಿಸಿದ್ದಾರೆ.

ಅತಿಕ್ಷುಧಿತಃ ಪುರುಷಃ ಸದನ್ನಾಲಾಭೇ ಕದನ್ನಮಿವ - ತುಂಬಾ ಹಸಿದವನು ಒಳ್ಳೆಯ ಆಹಾರ ಸಿಗದಿದ್ದಾಗ ಕೆಟ್ಟ ಆಹಾರ ಸೇವಿಸುವಂತೆ ಮನಸ್ಸು ತಪ್ಪಾದ ಜ್ಞಾನವನ್ನು ಸರಿ

ಎಂದು ತಿಳಿಸಿ ವಿಷಯಗಳ ಕಡೆಗೆ ಆಸೆಯಿಂದ ಓಡುವಂತೆ ಮಾಡುತ್ತದೆ. ವಸ್ತುತಃ ಚಿಪ್ಪನ್ನು ನೋಡಿ ಇದು ಬೆಳ್ಳಿ ಎಂಬ ಜ್ಞಾನ ಬಂದಿದೆ. ಜ್ಞಾನ ತಪ್ಪು. ಆದರೂ ಬೆಳ್ಳಿಯ ಬಗ್ಗೆ ಆಸೆಯಿಂದ ಮನಸ್ಸು ಈ ಜ್ಞಾನ ಸರಿಯಾಗಿದೆ ಎನ್ನುತ್ತದೆ.

೨. ವಿವೇಕಿನಾ ಸ್ವಮರಣಭಿಯಾ ತ್ಯಕ್ತಂ ಸರ್ಪಂ ಮರಣಶಂಕಾಶೂನ್ಯಃ
ಮೌಢ್ಯಾತ್ ಸ್ಪೃಶನ್ ಬಾಲಕ ಇವ ಚ.

ತಿಳುವಳಿಕೆಯುಳ್ಳವನು ಸಾವಿನ ಅಂಜಿಕೆಯಿಂದ ಹಾವಿನಿಂದ ದೂರ ಸರಿಯುತ್ತಾನೆ. ಆದರೆ ಸಾವಿನ ಸಂಶಯವೇ ಇಲ್ಲದ ಮಗು ಹಾವನ್ನು ಮುಟ್ಟಿ ಆಟವಾಡುತ್ತದೆ.

ಸಾಕ್ಷಿಯು ವಿವೇಕಿ. ಅದು ತಪ್ಪನ್ನು ಸರಿ ಎಂದು ತಿಳಿಸುವುದಿಲ್ಲ. ಆದರೆ ಮನಸ್ಸಿಗೆ ವಿವೇಕವಿಲ್ಲ. ಅದು ತಪ್ಪಾದ ಜ್ಞಾನವನ್ನೂ ಸರಿ ಎನ್ನುತ್ತದೆ.

೩. ರಾಜರು ಮನಸ್ಸಿಗೆ ಮೂರು ವಿಶೇಷಣಗಳನ್ನು ಹೇಳಿದ್ದಾರೆ -

ಅ. ರಾಗಾದಿದೋಷಕಲುಷಂ

ಆ. ಚಂಚಲಂ

ಇ. ಅರ್ಥಗ್ರಹಣಕಾತರಂ

ಈ ಮೂರೂ ಮನಸ್ಸು ಸುಳ್ಳು ಹೇಳುವುದಕ್ಕೆ ಕಾರಣವನ್ನು ಸೂಚಿಸುತ್ತವೆ.

ಅ. ಮನಸ್ಸಿಗೆ ಆಸೆ ಅಧಿಕ. ಹೀಗಾಗಿ ಚಿಪ್ಪನ್ನು ಬೆಳ್ಳಿ ಎಂದು ತಿಳಿದಾಗ ಬೆಳ್ಳಿಯ ಮೇಲಿನ ಆಸೆಯಿಂದ ತಪ್ಪಾದ ಜ್ಞಾನವನ್ನು ಸರಿ ಎಂದು ಹೇಳುತ್ತದೆ.

ಆ. ಅದರ ಸ್ವಭಾವವೇ ಚಂಚಲತೆ. ಸಂಕಲ್ಪ ವಿಕಲ್ಪಾತ್ಮಕಂ ಮನಃ. ಅದು ಭ್ರಮಸ್ವಭಾವದ್ದು. ತನ್ನ ಸ್ವಭಾವಕ್ಕೆ ಅನುಗುಣವಾಗಿ ತಪ್ಪನ್ನೂ ಸರಿ ಎನ್ನುತ್ತದೆ.

ಇ. ಹೊರಗಿನ ವಸ್ತುಗಳನ್ನು ಬಾಹ್ಯೇಂದ್ರಿಯಗಳು ಗ್ರಹಿಸುತ್ತವೆ. ಒಳಗಿನ ವಿಷಯಗಳನ್ನು ಸಾಕ್ಷೀಂದ್ರಿಯವು ಗ್ರಹಿಸುತ್ತದೆ. ಹೀಗಿದ್ದಾಗ, ನನಗೇನು ಕೆಲಸ ಎಂಬ ಈ ಕಾತರತೆಯಿಂದ ಮನಸ್ಸು ಸಾಕ್ಷಿಯು ತಟಸ್ಥವಾದ ಕೂಡಲೇ ಅವಸರವಾಗಿ ಜ್ಞಾನದ ಬಗ್ಗೆ ತಪ್ಪು ನಿರ್ಧಾರವನ್ನು ಕೈಗೊಳ್ಳುತ್ತದೆ.

ಒಟ್ಟಿನಲ್ಲಿ ಭ್ರಮೆಯನ್ನು ಪ್ರಮಾ ಎಂದು ತಿಳಿಸುವುದು ಸಾಕ್ಷಿಯಲ್ಲ, ಮನಸ್ಸು.

ಹಾಗಾದರೆ ಸಾಕ್ಷಿಯು ಯಾವಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂಬುದನ್ನು ತಿಳಿಸುತ್ತಾರೆ-

ಸಮೀಪಸ್ಥಪದಾರ್ಥಾನಾಂ ಚಕ್ಷುರಾದೀಂದ್ರಿಯೈಃ ಶುಭೈಃ ।
ಗ್ರಹಣೇ ಜ್ಞಾನಯಾಥಾರ್ಥ್ಯಗ್ರಹೇ ತಸ್ಯಾಗ್ರಹೋ ಮಹಾನ್ ॥ ೩೧೮ ॥

**ಅರ್ಥ–** ಶುಭ್ರೈಃ = ದೋಷಗಳಿಲ್ಲದ, ಚಕ್ಷುರಾದೀಂದ್ರಿಯೈಃ = ಕಣ್ಣು ಮೊದಲಾದ ಇಂದ್ರಿಯಗಳಿಂದ, ಸಮೀಪಸ್ಥಪದಾರ್ಥಾನಾಂ = ಹತ್ತಿರದಲ್ಲಿರುವ ವಸ್ತುಗಳ, ಗ್ರಹಣೇ = ಜ್ಞಾನವು ಬಂದಾಗ, ಜ್ಞಾನಯಾಥಾರ್ಥ್ಯಗ್ರಹೇ = ಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ತಿಳಿಯುವಲ್ಲಿ, ತಸ್ಯ = ಆ ಸಾಕ್ಷಿಗೆ, ಮಹಾನ್ = ಹೆಚ್ಚಿನ, ಗ್ರಹಃ = ಹಠವಿದೆ.

**ಅನುವಾದ–** ದೋಷವಿಲ್ಲದ ಕಣ್ಣು ಮೊದಲಾದ ಇಂದ್ರಿಯಗಳಿಂದ ಸಮೀಪದಲ್ಲಿರುವ ವಸ್ತುಗಳ ಜ್ಞಾನವು ಹುಟ್ಟಿದಾಗ ಅಂತಹ ಜ್ಞಾನದ ಪ್ರಾಮಾಣ್ಯವನ್ನು ಗ್ರಹಿಸುವಲ್ಲಿ ಸಾಕ್ಷೀಂದ್ರಿಯಕ್ಕೆ ಹೆಚ್ಚಿನ ಆಗ್ರಹವಿದೆ.

**ಭಾವವಿಲಾಸಿನೀ–** ತರ್ಹಿ ಕ್ವಸಾಕ್ಷೀ ಪ್ರಾಮಾಣ್ಯಂ ಗೃಹ್ಣಾತೀತ್ಯತ ಆಹ – **ಸಮೀಪಸ್ಥೇತಿ** ॥ ಗ್ರಹಣೇ ಜ್ಞಾತೇ ಸತೀತಿ ಶೇಷಃ । ತದಾ ತಜ್ಜ್ಞಾನಂ ಗೃಹ್ಣತಃ ಸಾಕ್ಷಿಣಃ ಜಾತೇ ಜ್ಞಾನಯಾಥಾರ್ಥ್ಯಗ್ರಹೇ ತದ್‌ಜ್ಞಾನಯಥಾರ್ಥ್ಯಗ್ರಹೇ ಮಹಾನಾಗ್ರಹೋ ನಿಯಮ ಇತ್ಯರ್ಥಃ । ಪ್ರತಿಬಂಧಕದೂರತ್ವಾದಿದೋಷಾಭಾವಾದಿತಿ ಭಾವಃ ॥ ೩೧೮ ॥

**ವಿವರಣೆ–** ಇಂದ್ರಿಯಗಳಲ್ಲಿ ಯಾವದೋಷಗಳೂ ಇರಬಾರದು, ವಸ್ತುವೂ ಸಮೀಪದಲ್ಲಿರಬೇಕು. ಅಂತಹ ಸಂದರ್ಭದಲ್ಲಿ ಜ್ಞಾನವು ಬಂದರೆ ಆ ಜ್ಞಾನವನ್ನೂ ಅದರಲ್ಲಿರುವ ಪ್ರಾಮಾಣ್ಯವನ್ನೂ ಸಾಕ್ಷಿಯು ಗ್ರಹಿಸದೆ ಬಿಡುವುದಿಲ್ಲ. ಈ ನಿಯತಿಯೇ ಪ್ರಾಮಾಣ್ಯಸ್ವತಸ್ತ್ವ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಮಹಾನಾಗ್ರಹಃ - ನಿಯಮಃ ಇತ್ಯರ್ಥ. ಅಂತಹ ಸಂದರ್ಭದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವ ನಿಯಮ ಸಾಕ್ಷಿಯದು ಎಂದರ್ಥ.

ಗ್ರಹಣೇ ಎಂಬ ಪದ ಸತಿಸಪ್ತಮ್ಯಂತ. ಗ್ರಹಣೇ ಜಾತೇ ಸತಿ - ಜ್ಞಾನವು ಬರುತ್ತಿರಲು ಎಂದು ಅರ್ಥ.

**ಸ್ವತಃ ಪ್ರಾಮಾಣ್ಯವಾದೇ ತನ್ನ ಕಾಪ್ಯನುಪಪನ್ನತಾ ।**
**ಯಥಾನುಭೂತಸರ್ವಾರ್ಥವಾದಿನಾಂ ತತ್ತ್ವವಾದಿನಾಂ ॥ ೩೧೯ ॥**

**ಅರ್ಥ–** ತತ್ = ಆದ್ದರಿಂದ, ಯಥಾನುಭೂತಸರ್ವಾರ್ಥವಾದಿನಾಂ = ಅನುಭವಕ್ಕೆ ಅನುಸಾರವಾಗಿ ಎಲ್ಲ ವಿಷಯಗಳನ್ನು ನಿರೂಪಿಸುವ, ತತ್ವವಾದಿನಾಂ = ತತ್ತ್ವವಾದಿಗಳೆನಿಸಿರುವ ಮಧ್ವಮತಾನುಯಾಯಿಗಳಿಗೆ, ಸ್ವತಃ ಪ್ರಾಮಾಣ್ಯವಾದೇ = ಪ್ರಾಮಾಣ್ಯಂ ಸ್ವತಃ ಎಂಬ ವಿಷಯದಲ್ಲಿ, ಕಾಪಿ = ಯಾವುದೇ ವಿಧವಾದ, ಅನುಪಪನ್ನತಾ = ಅನುಪಪತ್ತಿಯು, ನ = ಇಲ್ಲ.

**ಅನುವಾದ–** ದೋಷವಿಲ್ಲದಿದ್ದಾಗ ಮಾತ್ರ ಜ್ಞಾನದಲ್ಲಿ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂಬ ನಿಯಮವನ್ನು ಒಪ್ಪಿರುವ ಕಾರಣದಿಂದಾಗಿ ಅನುಭವಾನುಸಾರವಾಗಿ ಎಲ್ಲವನ್ನೂ ಒಪ್ಪಿರುವ, ಅದರಿಂದಲಾಗಿಯೇ ತತ್ತ್ವವಾದಿಗಳಾದ ನಮ್ಮ ಪ್ರಾಮಾಣ್ಯಸ್ವತಸ್ತ್ವವಾದದಲ್ಲಿ ಯಾವ ಅನುಪಪತ್ತಿಯೂ ಇಲ್ಲ.

**ಭಾವವಿಲಾಸಿನೀ–** ತತ್ತಸ್ಮಾತ್ಸಮೀಪಸ್ಥಾರ್ಥವಿಷಯಕಜ್ಞಾನೇಷ್ವೇವ ಪ್ರಮಾಣ್ಯನಿಶ್ಚಯ-ನಿಯಮಾಂಗೀಕಾರಾದ್ ಯತಾನುಭೂತಸರ್ವಾರ್ಥವಾದಿನಾಂ ತತ್ತ್ವವಾದಿನಾಂ ಸ್ವತಃ-ಪ್ರಾಮಾಣ್ಯವಾದ ಇತಿ ಸಂಬಂಧಃ । ಯಥಾನುಭೂತೇತ್ಯುಕ್ತ್ಯಾ ದೂರಸ್ಥಜ್ಞಾನೇ ಪ್ರಾಮಾಣ್ಯ-ಸಂಶಯಸ್ಯ ಸಮೀಪಸ್ಥಪದಾರ್ಥಜ್ಞಾನೇ ತದಭಾವಸ್ಯ ಚ ಸರ್ವಾನುಭವಸಿದ್ಧತ್ವಂ ಸ್ಫೋರಯತಿ । ಕಾಪ್ಯನುಪಪನ್ನತಾ ನೇತಿ ಸಂಬಂಧಃ । ಸರ್ವತ್ರ ಪ್ರಾಮಾಣ್ಯನಿಶ್ಚಯಂ ವದತಾಂ ಮೀಮಾಂಸಕಾನಾಮಿವ ನಾಸ್ಮಾಕಂ ಪ್ರಾಮಾಣ್ಯಸಂಶಯಾದ್ಯನುಪಪತ್ತಿರಿತಿ ಭಾವಃ ॥ ೩೧೯ ॥

**ವಿವರಣೆ–** ದ್ವೈತದರ್ಶನದಲ್ಲಿ ಅನುಭವಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಡಲಾಗಿದೆ.

ಶಾಸ್ತ್ರಾರ್ಥಯುಕ್ತೋಽನುಭವಃ ಪ್ರಮಾಣಂ ತೂತ್ತಮಂ ಮತಂ ಎಂದೇ ಆಚಾರ್ಯರು ಹೇಳಿದ್ದಾರೆ. ಆದ್ದರಿಂದಲೇ ಪ್ರತ್ಯಕ್ಷಸಿದ್ಧವಾದ ಪ್ರಪಂಚವನ್ನು ಸತ್ಯವೆಂದೇ ಒಪ್ಪಲಾಗಿದೆ. ತತ್ತ್ವಮಸಿ ಎಂಬ ಶ್ರುತಿಯು ಜೀವೇಶರಿಗೆ ಅಭೇದವನ್ನು ಹೇಳುವಂತೆ ಕಂಡರೂ ಅದು ಅನುಭವಕ್ಕೆ ವಿರುದ್ಧವಾಗುವ ಕಾರಣ ಆ ಶ್ರುತಿಗೆ ಅರ್ಥಾಂತರವನ್ನು ಮಾಡಲಾಗಿದೆ. ಆದ್ದರಿಂದಲೇ ರಾಜರು ಆಚಾರ್ಯಮತಾನುಯಾಯಿಗಳನ್ನು ಯಥಾನುಭೂತ ಸರ್ವಾರ್ಥವಾದಿನಾಂ ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಪ್ರಾಮಾಣ್ಯಸ್ವತಸ್ತ್ವವೂ ಅನುಭವಸಿದ್ಧವಾದ ಪ್ರಮೇಯ. ಆ ಪ್ರಮೇಯದಲ್ಲಿ ಯಾವ ಬಾಧಕಗಳೂ ಇಲ್ಲ. ಆದ್ದರಿಂದ ಅದನ್ನು ಒಪ್ಪಿಕೊಳ್ಳಬೇಕು.

ಇಲ್ಲಿ ಆಚಾರ್ಯರ ಮತಾನುಯಾಯಿಗಳನ್ನು ರಾಜರು ದ್ವೈತವಾದಿಗಳು ಎಂದು ಕರೆಯದೆ ತತ್ತ್ವವಾದಿನಾಂ ಎಂದು ಉಲ್ಲೇಖಿಸಿದ್ದಾರೆ. ಆದ್ದರಿಂದ ದ್ವೈತದರ್ಶನಕ್ಕೆ ತತ್ತ್ವವಾದ ಎಂದೇ ಹೆಸರು.

ಸಮೀಪಸ್ಥವಸ್ತುಗಳ ಜ್ಞಾನದ ಪ್ರಾಮಾಣ್ಯದಲ್ಲಿ ಸ್ವತಸ್ತ್ವವನ್ನು ಒಪ್ಪದಿದ್ದಲ್ಲಿ ಬಾಧಕವನ್ನು ಮುಂದೆ ಹೇಳಿದ್ದಾರೆ-

**ನ ಚೇತ್ತಂಡುಲಪಾನೀಯವಸ್ತ್ರಭಾರ್ಯಾಸುತಾದಿಷು ।**
**ಗೃಹಸ್ಥಿತೇಷು ಗೃಹಿಣೋ ನವೇಷು ಸ್ಯಾನ್ನ ನಿರ್ಣಯಃ ॥ ೩೨೦ ॥**

**ಅರ್ಥ–** ನ ಚೇತ್ = ಸಮೀಪದ ವಸ್ತುಗಳ ಜ್ಞಾನಬಂದಾಗಲೂ ಪ್ರಾಮಾಣ್ಯವು ತಿಳಿಯದೇ ಹೋದಲ್ಲಿ, ಗೃಹಿಣಃ = ಗೃಹಸ್ಥನಿಗೆ, ಗೃಹಸ್ಥಿತೇಷು = ಮನೆಯಲ್ಲಿರುವ,

ನವೇಷು = ಹೊಸದಾಗಿ ಬಂದ, ತಂಡುಲ = ಅಕ್ಕಿ, ಪಾನೀಯ = ನೀರು, ವಸ್ತ್ರ= ಬಟ್ಟೆ, ಭಾರ್ಯಾ = ಪತ್ನಿ, ಸುತಾದಿಷು = ಮಕ್ಕಳೇ ಮೊದಲಾದ ವಿಷಯದಲ್ಲಿ, ನಿರ್ಣಯಃ = ನಿರ್ಧಾರವು, ನ ಸ್ಯಾತ್ = ಆಗಲಿಕ್ಕಿಲ್ಲ

**ಅನುವಾದ–** ಸಮೀಪದಲ್ಲಿರುವ ವಸ್ತುಗಳ ಜ್ಞಾನ ಬಂದಾಗಲೂ ಪ್ರಾಮಾಣ್ಯವು ತಿಳಿಯದೇ ಹೋದಲ್ಲಿ ಗೃಹಸ್ಥನಿಗೆ ಮನೆಯಲ್ಲಿರುವ ಹೊಸದಾದ (ಇದುವರೆಗೆ ನೋಡದ) ಅಕ್ಕಿ, ನೀರು, ಬಟ್ಟೆ, ಪತ್ನಿ, ಮಕ್ಕಳ ಬಗ್ಗೆಯೂ ನಿರ್ಧಾರ ಇಲ್ಲದೇ ಹೋದೀತು.

**ಭಾವವಿಲಾಸಿನೀ–**ಸಮೀಪಸ್ಥಪದಾರ್ಥಜ್ಞಾನೇಷ್ವಪಿ ಸಾಕ್ಷಿಣಾ ಪ್ರಾಮಾಣ್ಯ ನಿಶ್ಚಯಾನಂಗೀಕಾರೇ ಬಾಧಕಮಾಹ – **ನಚೇದಿತಿ** ॥ ಸಮೀಪಸ್ಥಾರ್ಥಜ್ಞಾನೇಷ್ವಪಿ ಪ್ರಾಮಾಣ್ಯನಿಶ್ಚಯೋ ನ ಚೇತ್ ನವೇಷು ನೂತನತಯಾ ದೃಷ್ಟೇಷ್ವಿತ್ಯನೇನ ತಜ್ಜ್ಞಾನೇ ಗೃಹೀತಪ್ರಾಮಾಣ್ಯ- ಜ್ಞಾನಜಾತೀಯತ್ವ-ರೂಪಸ್ಯ ಪರಾಭಿಮತಸ್ಯ ಪ್ರಾಮಾಣ್ಯಾನುಮಾಪಕ ಸ್ಯಾಭಾವಂ ಸೂಚಯತಿ । ಗೃಹೇ ಸ್ಥಿತೇಷ್ವೇವ ನತು ಭುಕ್ತೇಷ್ವಿತ್ಯನೇನ ಸಮರ್ಥಪ್ರವೃತ್ತಿಜನಕತ್ವರೂಪಲಿಂಗಾಭಾವಂ ಸೂಚಯತಿ । ನಿರ್ಣಯೋ ನ ಸ್ಯಾದಿತಿ ಸಂಬಂಧಃ । ಉಕ್ತರೀತ್ಯಾ ಪ್ರಾಮಾಣ್ಯಾನುಮಾಪಕಲಿಂಗದ್ವಯಸ್ಯಾತ್ರಾಭಾವೇನ ಸಾಕ್ಷಿಣಾಪ್ಯೇತಜ್ಜ್ಞಾನಪ್ರಾಮಾಣ್ಯಾನಿಶ್ಚಯೇಪ್ರಮಾಣ್ಯಸಂಶಯಾಹಿತಾರ್ಥಸಂಶಯಸ್ಯಾಪ್ಯ-ವಶ್ಯಂಭಾವೇನೋಕ್ತೋಽಯಮರ್ಥ ನಿರ್ಣಯೋ ನ ಸ್ಯಾತ್ । ಅಸ್ತಿ ಚಾತ್ರಾರ್ಥನಿರ್ಣಯಃ । ಅತಃ ಸಾಕ್ಷಿಣಾ ಜ್ಞಾನಪ್ರಾಮಾಣ್ಯಂ ನಿರ್ಣೇಯಮಿತಿ ಭಾವಃ ॥ ೩.೨೦ ॥

**ವಿವರಣೆ–** ಸಮೀಪದ ವಸ್ತುಗಳ ಜ್ಞಾನಬಂದಾಗ ಆ ಜ್ಞಾನದ ಪ್ರಾಮಾಣ್ಯವು ತಿಳಿಯಲ್ಪಡುತ್ತದೆ ಎಂದು ಹಿಂದೆ ಹೇಳಲಾಗಿದೆ. ಇದನ್ನು ಒಪ್ಪದಿದ್ದಲ್ಲಿ ನಾವು ನಮ್ಮ ಮನೆಯಲ್ಲಿ ಹೊಸದಾಗಿ ಒಂದು ವಸ್ತುವನ್ನು ನೋಡಿದಾಗ ಅದರ ಬಗ್ಗೆ ಸಂಶಯ ಬರಬೇಕಾದೀತು. ಉದಾಹರಣೆಗೆ ಮದುವೆಯಾದವನಿಗೆ ಮೊದಲ ಸಲ ಪತ್ನಿಯನ್ನು ನೋಡಿದಾಗ ಇವಳು ನನ್ನ ಪತ್ನಿಯೋ ಅಲ್ಲವೋ ಎಂಬ ಸಂಶಯ ಬಂದೀತು. ಆ ಜ್ಞಾನವನ್ನು ಸಾಕ್ಷಿಯು ಗ್ರಹಿಸುವಾಗ ಅದರ ಪ್ರಾಮಾಣ್ಯವನ್ನೂ ಸಾಕ್ಷಿಯು ಗ್ರಹಿಸುತ್ತದೆ. ಆದ್ದರಿಂದ ಸಂಶಯ ಉಂಟಾಗುವುದಿಲ್ಲ. ಹೀಗೆ ಬಾಧಕವಿಲ್ಲದಾಗ ಜ್ಞಾನಪ್ರಾಮಾಣ್ಯವು ಸಾಕ್ಷಿಯಿಂದಲೇ ಗ್ರಹಿಸಲ್ಪಡುತ್ತದೆ. ಇದು ನಮ್ಮೆಲ್ಲರ ಅನುಭವಕ್ಕೆ ಬಂದಿರುವ ವಿಷಯ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ನವೇಷು - ನೂತನತಯಾ ದೃಷ್ಟೇಷು ಇತ್ಯನೇನ ತತ್‌ಜ್ಞಾನೇ ಗೃಹೀತಪ್ರಾಮಾಣ್ಯಜಾತೀಯತ್ವರೂಪ ಪರಾಭಿಮತಸ್ಯ ಪ್ರಾಮಾಣ್ಯಾನುಮಾಪಕಸ್ಯ ಅಭಾವಂ ಸೂಚಯತಿ.

ರಾಜರು ಮನೆಯಲ್ಲಿ ಸಮೀಪದಿಂದ ನೋಡುವ ವಸ್ತುಗಳಿಗೆ ನವೇಷು ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಹೊಸದಾಗಿ ನೋಡಿದ ಎಂದು ಅರ್ಥ. ತಾರ್ಕಿಕರು ಹೇಳಬಹುದಾದ ಸಮಾಧಾನಕ್ಕೆ ಉತ್ತರಕ್ಕಾಗಿ ಈ ಪದವನ್ನು ಪ್ರಯೋಗಿಸಲಾಗಿದೆ.

ತಾರ್ಕಿಕರು ಹೀಗೆ ಸಮಾಧಾನ ಹೇಳಬಹುದು - ನಾವು ಮನೆಯಲ್ಲಿ ಅನೇಕ ವಸ್ತುಗಳನ್ನು ಪ್ರತಿನಿತ್ಯನೋಡುತ್ತೇವೆ. ಆದರೆ ಅವುಗಳ ಬಗ್ಗೆ ಸಂದೇಹ ಬರುವುದಿಲ್ಲ. ಏಕೆ? ನೀವು ಹೇಳಿದಂತೆ ಪ್ರಾಮಾಣ್ಯಸ್ವತಸ್ತ್ವವು ಅದಕ್ಕೆ ಕಾರಣವಲ್ಲ. ಆ ವಸ್ತುವನ್ನು ಮೊದಲು ನೋಡಿದಾಗ ಅದರ ಜ್ಞಾನದಲ್ಲಿ ಅನುಮಾನದಿಂದ ಪ್ರಾಮಾಣ್ಯವು ತಿಳಿಯಲ್ಪಟ್ಟಿತ್ತು. ಮತ್ತೊಮ್ಮೆ ಅದೇ ವಸ್ತುವಿನ ಜ್ಞಾನಬಂದಾಗ ಮತ್ತೆ ಪ್ರಾಮಾಣ್ಯವನ್ನು ಅನುಮಾನಮಾಡುವ ಅಗತ್ಯವಿಲ್ಲ. ನಿನ್ನೆ ಬಂದಿರುವ ಜ್ಞಾನದಂತೆಯೇ ಈ ಜ್ಞಾನವೂ ಇರುವುದರಿಂದ ಇದೂ ಪ್ರಮಾಣವಾಗಿದೆ ಎಂದು ಕೂಡಲೇ ತಿಳಿಯುತ್ತದೆ. ಆದ್ದರಿಂದ ಪ್ರತಿದಿನ ನೋಡುವ ವಸ್ತುವಿನ ಬಗ್ಗೆ ಸಂದೇಹವು ಬರುವುದಿಲ್ಲ. ಇದು ತಾರ್ಕಿಕರು ಕೊಡುವ ಸಮಾಧಾನ. ಈ ಸಮಾಧಾನ ಸರಿಯಲ್ಲವೆಂದು ರಾಜರು ನವೇಷು ಎಂಬ ಪದದಿಂದ ತಿಳಿಸಿದ್ದಾರೆ - ಒಂದೇ ವಸ್ತುವನ್ನು ಎರಡನೆಯ ಸಲ ನೋಡಿದಾಗ ನೀವು ಹೇಳಿದಂತೆ ಸಂಶಯಬರದಿರಬಹುದು. ಆದರೆ ಅಂತಹ ವಸ್ತುಗಳನ್ನು ಮೊದಲ ಸಲ ನೋಡಿದಾಗಲೂ ಸಂಶಯಬರುವುದಿಲ್ಲ. ಏಕೆ? ತಾರ್ಕಿಕರು ಹಿಂದೆ ಹೇಳಿದ ಕಾರಣವನ್ನು ಇಲ್ಲಿ ಹೇಳಲು ಬರುವುದಿಲ್ಲ. ಏಕೆಂದರೆ ಇದು ಮೊದಲು ಬಂದ ಜ್ಞಾನ. ಹಿಂದಿನ ಜ್ಞಾನದಂತೆಯೇ ಇದು ಎಂದು ಇದನ್ನು ಹೇಳುವಂತಿಲ್ಲ. ಆದರೂ ಈ ಜ್ಞಾನವು ಪ್ರಮಾಣವೆಂದು ನಿಶ್ಚಯವಾಗಿದೆ. ಹೇಗೆ? ಅದಕ್ಕಾಗಿ ಸಾಕ್ಷಿಯೇ ಪ್ರಾಮಾಣ್ಯವನ್ನು ಗ್ರಹಿಸಿದೆ ಎಂದು ಹೇಳಬೇಕಾಗುತ್ತದೆ. ಈ ವಿಷಯವನ್ನು ಸುರೋತ್ತಮತೀರ್ಥರು ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ.

2. ಗೃಹಸ್ಥಿತೇಷ್ವೇವ ನ ತು ಭುಕ್ತೇಷು ಇತ್ಯನೇನ ಸಮರ್ಥಪ್ರವೃತ್ತಿಜನಕತ್ವರೂಪ - ಲಿಂಗಾಭಾವಂ ಸೂಚಯತಿ.

ಪ್ರಾಮಾಣ್ಯವು ಸಮರ್ಥಪ್ರವೃತ್ತಿಜನಕತ್ವಹೇತುವಿನಿಂದ ಅನುಮೇಯ ಎಂದು ತಾರ್ಕಿಕರ ಸಿದ್ಧಾಂತ. ಉದಾಹರಣೆಗೆ - ದೂರದಲ್ಲಿ ಅಲ್ಲಿ ನೀರಿದೆ. ಎಂಬ ಜ್ಞಾನಬರುತ್ತದೆ. ಹತ್ತಿರಹೋಗಿ, ನೀರನ್ನು ಕುಡಿದ ಮೇಲೆ ನಮಗೆ ಮೊದಲು ಬಂದ ಅಲ್ಲಿ ನೀರಿದೆ ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಆ ಜ್ಞಾನದಿಂದ ನೀರು ತೋರಿದ ಇನ್ನೊಂದು ಕಡೆ ನಾವು ಪ್ರವೃತ್ತಿಮಾಡಿದೆವು. ಅಲ್ಲಿ ನೀರೂ ದೊರಕಿತು. ಇದೇ ಸಮರ್ಥಪ್ರವೃತ್ತಿ - ಸಾರ್ಥಕಪ್ರವೃತ್ತಿ. ಹೀಗೆ ಪ್ರವೃತ್ತಿಯು ಸಫಲವಾದ ಮೇಲೆ ಆ ಪ್ರವೃತ್ತಿಗೆ ಕಾರಣವಾದ ಜ್ಞಾನದಲ್ಲಿ ಪ್ರಾಮಾಣ್ಯವು ನಿರ್ಧಾರಿತವಾಗುತ್ತದೆ ಎಂದು ತಾರ್ಕಿಕರ ಸಿದ್ಧಾಂತ. ಆದರೆ ರಾಜರು ತಿಳಿಸಿದ ಇದು ಅಕ್ಕಿ ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ತಾರ್ಕಿಕರು ಹೇಳಿದ ರೀತಿಯಿಂದ ನಿರ್ಧರಿಸಲಾಗದು. ಜ್ಞಾನಬಂದ ಮೇಲೆ ಅಕ್ಕಿಯನ್ನು ತೆಗೆದು ಅಡಿಗೆ ಮಾಡಿ ಉಂಡಮೇಲಷ್ಟೇ ಸಫಲಪ್ರವೃತ್ತಿಜನಕತ್ವವು ನಿರ್ಧಾರವಾಗುತ್ತದೆ. ಆದರೆ ಇಷ್ಟೆಲ್ಲ ನಡೆಯುವ ಮೊದಲೇ ಇದು ಅಕ್ಕಿ ಎಂಬ ಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಆದ್ದರಿಂದ ಆ ನಿಶ್ಚಯವನ್ನು ಸಾಕ್ಷಿಯೇ ಉಂಟುಮಾಡಿದೆ.

ಈ ಅಂಶವನ್ನು ಸೂಚಿಸುವುದಕ್ಕಾಗಿಯೇ, ರಾಜರು ಶ್ಲೋಕದಲ್ಲಿ ಗೃಹಸ್ಥಿತೇಷು ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಇದು ಸುರೋತ್ತಮತೀರ್ಥರು ಮಾಡಿದ ವಿವರಣೆ.

3. ಸಾಕ್ಷಿಯಿಂದ ಪ್ರಾಮಾಣ್ಯನಿಶ್ಚಯವು ಆಗದಿದ್ದರೆ ಅರ್ಥನಿಶ್ಚಯವೂ ಆಗುವುದಿಲ್ಲ. ಅರ್ಥನಿಶ್ಚಯವೆಂದರೆ ತಿಳಿದ ವಿಷಯವು ಇದೆ ಎನ್ನುವ ನಿಶ್ಚಯ. ಇದು ಅಕ್ಕಿ ಎಂಬ ಜ್ಞಾನ ಬಂದ ಮೇಲೆ ನಾನು ತಿಳಿದಿರುವ ಅಕ್ಕಿ ಅಲ್ಲಿ ಇದ್ದೇ ಇದೆ ಎನ್ನುವ ನಿರ್ಧಾರ. ಈ ನಿರ್ಧಾರವಾಗಬೇಕಾದರೆ, ಇದು ಅಕ್ಕಿ ಎನ್ನುವ ಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗಬೇಕು. ನಮಗೆ ಅರ್ಥನಿಶ್ಚಯವಿದೆ ಎಂದಾದಲ್ಲಿ ಅದಕ್ಕೆ ಕಾರಣವಾದ ಪ್ರಾಮಾಣ್ಯನಿಶ್ಚಯವೂ ಇರಲೇಬೇಕು. ಅಂತಹ ಪ್ರಾಮಾಣ್ಯನಿಶ್ಚಯ ಸಾಕ್ಷಿಯಿಂದಲೇ ಆಗಿದೆ. ಬೇರೆ ಕಾರಣಗಳಿಲ್ಲ. ಆದ್ದರಿಂದ ಜ್ಞಾನವನ್ನು ಗ್ರಹಿಸಿದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಿದೆ.

ಪ್ರಾಮಾಣ್ಯನಿಶ್ಚಯವು ಬರುವವರೆಗೂ ಅರ್ಥನಿಶ್ಚಯವೇ ಬರುವುದಿಲ್ಲವೆಂದು ಹೇಳೋಣ. ಇದಕ್ಕೆ ಏನು ತೊಂದರೆ ಎಂದರೆ ಅದಕ್ಕೆ ಮುಂದಿನ ಶ್ಲೋಕದಲ್ಲಿ ಉತ್ತರವನ್ನು ಕೊಡುತ್ತಾರೆ-

**ಶಿಶುಃ ಕಿಂ ಜಾತಮಾತ್ರೋಂಬಾಸ್ತನಂ ಸಂದಿಹ್ಯ ಚುಂಬತಿ ।**
**ಪಶುಶ್ಚ ನವಘಾಸಾದೌ ನ ವಿಶ್ವಸಿತಿ ಕಿಂ ವನೇ ॥ ೩೨೧ ॥**

**ಅರ್ಥ–** ಜಾತಮಾತ್ರಃ = ಆಗ ತಾನೇ ಹುಟ್ಟಿದ, ಶಿಶುಃ = ಮಗುವು, ಅಂಬಾಸ್ತನಂ = ತಾಯಿಯ ಸ್ತನವನ್ನು, ಸಂದಿಹ್ಯ = ಇದು ಸ್ತನ ಹೌದೋ ಅಲ್ಲವೋ ಎಂಬ ಸಂದೇಹದಿಂದ, ಚುಂಬತಿ ಕಿಂ? = ಚೀಪುತ್ತದೇನು? ಪಶುಶ್ಚ = ಜಿಂಕೆ ಮೊದಲಾದ ಪ್ರಾಣಿಗಳು, ವನೇ = ಕಾಡಿನಲ್ಲಿ, ನವಘಾಸಾದೌ = ಹೊಸದಾಗಿ ಹುಟ್ಟಿದ ಹುಲ್ಲಿನಲ್ಲಿ, ನ ವಿಶ್ವಸಿತಿ ಕಿಂ? = ವಿಶ್ವಾಸತಾಳುವುದಿಲ್ಲವೇನು?

**ಅನುವಾದ–** ಆಗ ತಾನೇ ಹುಟ್ಟಿದ ಮಗುವು ತನ್ನ ತಾಯಿಯ ಸ್ತನವನ್ನು ಸಂದೇಹದಿಂದ ಚೀಪುವುದೇನು? ಕಾಡಿನಲ್ಲಿ ಪ್ರಾಣಿಗಳು ಹೊಸದಾದ ಹುಲ್ಲಿನಲ್ಲಿ ವಿಶ್ವಾಸವಿಡುವುದಿಲ್ಲವೇನು?

**ಭಾವವಿಲಾಸಿನೀ–** ನನು ಪ್ರಾಮಾಣ್ಯಾನುಮಾನಾತ್ ಪ್ರಾಕ್ ಸರ್ವತ್ರಾರ್ಥಾನಿರ್ಣಯ ಏವಾಸ್ತು ಕೋ ದೋಷ ಇತ್ಯತ ಆಹ – **ಶಿಶುರಿತಿ** ॥ ಜಾತಮಾತ್ರ ಇತ್ಯನೇನ ಸಮರ್ಥಪ್ರವೃತ್ತಿಜನಕತ್ವಾದಿ-ಲಿಂಗಾಭಾವಂ ಸೂಚಯತಿ ॥ ೩೨೧ ॥

**ವಿವರಣೆ–** ಆಗ ತಾನೇ ಹುಟ್ಟಿದ ಮಗು ಕೂಡಲೇ ತಾಯಿಯ ಸ್ತನವನ್ನು ನೋಡಿ ಚೀಪಲು ಪ್ರಾರಂಭಿಸುತ್ತದೆ. ಅದಕ್ಕೆ ತಾಯಿಯ ಸ್ತನದ ಜ್ಞಾನಮೊದಲು ಬರುತ್ತದೆ. ಆಗ ಮಗುವಿಗೆ ಸ್ತನದ ಬಗ್ಗೆ ಸಂದೇಹವೇನಾದರೂ ಬರುವುದೇ? ಇಲ್ಲ. ಅದಕ್ಕೆ ನಿಶ್ಚಯವಿದೆ.

ಈ ನಿಶ್ಚಯ ಹೇಗೆ ಬರಬೇಕು? ಸಫಲಪ್ರವೃತ್ತಿಜನಕತ್ವಹೇತುವಿನಿಂದಂತೂ ಸಾಧ್ಯವಿಲ್ಲ. ಪ್ರಾಮಾಣ್ಯನಿಶ್ಚಯದಿಂದಲೇ ಬರಬೇಕು. ಆದ್ದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಲೇಬೇಕು.

ಆದರಂತೆ ಕಾಡಿನಲ್ಲಿರುವ ಜಿಂಕೆ ಮೊದಲಾದ ಪ್ರಾಣಿಗಳು ಮೊದಲು ಹುಲ್ಲನ್ನು ಕಂಡಾಗ ಇದು ಹುಲ್ಲು ಹೌದೋ ಅಲ್ಲವೋ? ಎಂಬ ಸಂದೇಹವನ್ನು ತಾಳುವುದಿಲ್ಲ. ಅವುಗಳಿಗೆ ಹುಲ್ಲಿನ ಬಗ್ಗೆ ನಿಶ್ಚಯವಿರುತ್ತದೆ. ಅಲ್ಲೂ ಅರ್ಥನಿಶ್ಚಯವು ಪ್ರಾಮಾಣ್ಯ ನಿಶ್ಚಯದಿಂದಲೇ ಆಗಬೇಕು. ಆದ್ದರಿಂದ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಬೇಕು.

ವಾದಿರಾಜರು ಜಾತಮಾತ್ರಃ ಎಂಬ ಪದದಿಂದ ಮೇಲಿನ ಈ ವಿಷಯಗಳನ್ನು ಸೂಚಿಸಿದ್ದಾರೆ. ಹೀಗೆಂದು ಸುರೋತ್ತಮತೀರ್ಥರು ವ್ಯಾಖ್ಯಾನಿಸಿದ್ದಾರೆ.

ಜ್ಞಾನ ಬಂದಾಗಲೆಲ್ಲ ಸಂದೇಹ ಬರುವುದು ಅನಾನುಭವಿಕ ಎಂದು ತಿಳಿಸುತ್ತಾರೆ.

**ಅನಾನುಭವಿಕೀ ಸರ್ವತ್ರಾಪಿ ಸಂದಿಗ್ಧತಾ ನೃಣಾಂ ।**
**ವಿನೋನ್ಮತ್ತಶಿರಃಪಿತ್ತಿಪಿಶಾಚಗ್ರಸ್ತಚೇತನಾನ್ ॥ ೩೨೨ ॥**

**ಅರ್ಥ–** ಉನ್ಮತ್ತ = ಹುಚ್ಚ, ಶಿರಃಪಿತ್ತಿ = ಪಿತ್ತನೆತ್ತಿಗೇರಿದವನು, ಪಿಶಾಚಗ್ರಸ್ತ-ಚೇತನಾನ್ = ಪಿಶಾಚಿಹಿಡಿದ ವ್ಯಕ್ತಿಗಳನ್ನು, ವಿನಾ = ಹೊರತಾಗಿ, ನೃಣಾಂ = ಎಲ್ಲ ಮನುಷ್ಯರಿಗೂ, ಸರ್ವತ್ರಾಪಿ = ಎಲ್ಲ ವಿಷಯದಲ್ಲೂ, ಸಂದಿಗ್ಧತಾ = ಸಂದೇಹವು, ಅನಾನು ಭವಿಕೀ = ಅನುಭವಸಿದ್ಧವಲ್ಲ.

**ಅನುವಾದ–** ಹುಚ್ಚರು, ಪಿತ್ತನೆತ್ತಿಗೇರಿದವರು, ಪಿಶಾಚಬಾಧೆಗೆ ಒಳಗಾದವರು ಇಂತಹವರನ್ನು ಬಿಟ್ಟು ಉಳಿದ ಯಾರಿಗೂಜ್ಞಾನಬಂದಾಗಲೆಲ್ಲಾ ಸಂದೇಹ ಪಡುವುದು ಅನುಭವಸಿದ್ಧವಲ್ಲ.

**ಭಾವವಿಲಾಸಿನೀ–** ಉನ್ಮತ್ತಶ್ಚ ಶಿರಃಪಿತ್ತೀಚ ಪಿಶಾಚಗ್ರಸ್ತಚೇತನಶ್ಚ ತಾನ್ ವಿನಾ ಸರ್ವತ್ರಾರ್ಥೇ ಜ್ಞಾನೇ ಚ ಸಂದಿಗ್ಧತಾ ಸಂದೇಹವಿಷಯತಾ ಅನಾನುಭವಿಕೀತಿ ಸಂಬಂಧಃ ॥ ೩೨೨ ॥

**ವಿವರಣೆ–** ಯಾವುದೇ ವಸ್ತುವಿನ ಜ್ಞಾನಬಂದಾಗಲೆಲ್ಲ ಈ ಜ್ಞಾನವು ಸರಿಯೋ ತಪ್ಪೋ? ನಾನು ತಿಳಿದ ವಸ್ತು ಅಲ್ಲಿ ಇದೆಯೋ ಇಲ್ಲವೋ? ಎಂಬ ಸಂದೇಹ ಯಾರಿಗೂ ಬರುವುದಿಲ್ಲ. ವಸ್ತುವನ್ನು ನೋಡಿದ ಕೂಡಲೇ ಅದು ಅಲ್ಲಿ ಇದೆ ಎಂದೇ ಎಲ್ಲರಿಗೂ ಖಾತರಿ. ಕೆಲವೊಮ್ಮೆ ಮಾತ್ರ ಇಂತಹ ಸಂದೇಹ ಬರುತ್ತದೆ. ಎಲ್ಲ ಕಡೆಯಲ್ಲಿಯೂ ಸಂದೇಹಪಡುವವನು ಮನೋವಿಭ್ರಮೆಗೆ ಒಳಗಾಗಿರಬೇಕಷ್ಟೇ. ಇದು ವಾದಿರಾಜರ ನಿರ್ಣಯ.

ಆದ್ದರಿಂದ ಜ್ಞಾನದ ಬಗ್ಗೆಯಾಗಲೀ, ವಿಷಯದ ಬಗ್ಗೆಯಾಗಲೀ, ಸಂದೇಹವಿಲ್ಲವೆಂದಾದಲ್ಲಿ ನಿಶ್ಚಯವಿದೆ ಎಂದೇ ಅರ್ಥ. ಆ ನಿಶ್ಚಯವು ಸಾಕ್ಷೀಂದ್ರಿಯದಿಂದಲೇ ಆಗಬೇಕು. ಆದ್ದರಿಂದ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಲೇಬೇಕು.

**ಅನಭ್ಯಾಸದಶಾಪನ್ನಸಮೀಪಸ್ಥೇ ನ ಸಂಶಯಃ ।**
**ನ ತತ್ರ ತದ್ಧೀಮಾನತ್ವೇಽಪ್ಯಸ್ತಿ ಕಸ್ಯಾಪಿ ಸಂಶಯಃ ॥ ೩೨೩ ॥**

**ಅರ್ಥ–** ಅನಭ್ಯಾಸದಶಾಪನ್ನಸಮೀಪಸ್ಥೇ = ಅನೇಕ ಸಲ ನೋಡಿ ಅಭ್ಯಾಸವಿಲ್ಲದಿದ್ದರೂ ಸಮೀಪದಲ್ಲೇ ಇರುವ ವಸ್ತುವಿನ ಬಗ್ಗೆ ನ ಸಂಶಯಃ = ಸಂದೇಹವು ಇರುವುದಿಲ್ಲ. ತತ್ರ = ಅಂತಹ ಸಂದರ್ಭದಲ್ಲಿ, ತದ್ಧೀಮಾನತ್ವೇ ಅಪಿ = ಆ ವಸ್ತುವಿನ ಜ್ಞಾನವು ಪ್ರಮಾಣವೆನ್ನುವಲ್ಲಿ, ಕಸ್ಯಾಪಿ = ಯಾರಿಗೂ, ನ ಸಂಶಯಃ = ಸಂದೇಹವಿಲ್ಲ.

**ಅನುವಾದ–** ಹೊಸದಾಗಿ ಕಂಡ, ಸಮೀಪದಲ್ಲಿರುವ ವಸ್ತುವಿನ ಬಗ್ಗೆ ಯಾರಿಗೂ ಸಂಶಯ ಬರುವುದಿಲ್ಲ. ಅಂತಹ ಸಂದರ್ಭದಲ್ಲಿ ಆ ವಸ್ತುವಿನ ಜ್ಞಾನದ ಪ್ರಾಮಾಣ್ಯದಲ್ಲೂ ಯಾರಿಗೂ ಸಂಶಯವಿಲ್ಲ.

**ಭಾವವಿಲಾಸಿನೀ–** ತದೇವ ವಿಶದಯತಿ – **ಅನಾಭ್ಯಾಸೇತಿ** ॥ ಅರ್ಥ ಇತಿ ಶೇಷಃ । ತದ್ಧೀಮಾನತ್ವೇ ತಸ್ಯಾಸಂದಿಗ್ಧಾರ್ಥಸ್ಯ ಯಾ ಧೀಸ್ತನ್ಮಾನತ್ವೇ ॥ ೩೨೩ ॥

**ವಿವರಣೆ–** ಇದುವರೆಗೆ ನೋಡಿರದ ವಸ್ತುವನ್ನು ನಮ್ಮ ಸಮೀಪದಲ್ಲೇ ಕಂಡಾಗ ಆ ವಸ್ತು ಇದೆಯೋ ಇಲ್ಲವೋ ಎನ್ನುವ ಸಂಶಯವು ಯಾರಿಗೂ ಬರುವುದಿಲ್ಲ. ತಾರ್ಕಿಕರು ''ನೋಡಿದ ವಸ್ತುವನ್ನೇ ಮತ್ತೆ ಮತ್ತೆ ನೋಡಿದಾಗ ಸಂದೇಹ ಬರದೇ ಹೋದರೂ ಹೊಸದಾಗಿ ಒಂದು ವಸ್ತುವನ್ನು ನೋಡಿದಾಗ ಅದರ ಬಗ್ಗೆ ಸಂದೇಹ ಬರುತ್ತದೆ. ಆದ್ದರಿಂದ ಪ್ರಾಮಾಣ್ಯಂ ಪರತಃ'' ಎನ್ನುತ್ತಾರೆ. ಅವರು ಮಾಡುವ ಅನುಮಾನದ ಪ್ರಯೋಗ ಹೀಗಿದೆ - ಪ್ರಾಮಾಣ್ಯಂ ಪರತಃ ಜ್ಞಾಯತೇ, ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂದು. ಆದರೆ, ಇದು ಅನುಭವವಿರುದ್ಧವೆಂದು ವಾದಿರಾಜರು ಹೇಳಿದ್ದಾರೆ. ದೂರದ ವಸ್ತುವನ್ನು ಹೊಸದಾಗಿ ನೋಡಿದಾಗ ಸಂದೇಹ ಬರಬಹುದಾದರೂ, ಸಮೀಪದಲ್ಲಿ ನೋಡಿದಾಗ ಸಂಶಯವು ಬರುವುದಿಲ್ಲ. ಆದ್ದರಿಂದ ನೈಯಾಯಿಕರ ಅನುಮಾನದಲ್ಲಿ ಹೇತ್ವಸಿದ್ಧಿದೋಷವಿದೆ.

ಇದುವರೆಗೆ ವಿಷಯದ ಬಗ್ಗೆ ಸಂದೇಹವಿಲ್ಲ ಎಂದು ಹೇಳಲಾಯಿತು. ಶ್ಲೋಕದ ಉತ್ತರಾರ್ಧದಲ್ಲಿ ಅದರಿಂದಾಗಿಯೇ ಜ್ಞಾನದ ಪ್ರಾಮಾಣ್ಯದ ಬಗ್ಗೆಯೂ ಸಂದೇಹವಿಲ್ಲ ಎಂದು ಹೇಳಿದ್ದಾರೆ. ಒಟ್ಟಿನಲ್ಲಿ ವಿಷಯ ಇದೆಯೋ, ಇಲ್ಲವೋ ಎಂಬ ಸಂದೇಹವೂ

ಇಲ್ಲ, ಜ್ಞಾನ ಸರಿಯೋ, ತಪ್ಪೋ ಎಂಬ ಸಂದೇಹವೂ ಇಲ್ಲ. ಆದ್ದರಿಂದ ಪ್ರಾಮಾಣ್ಯಂ ಸ್ವತಃ

**ಅರ್ಥಸಂದೇಹವಿಲ್ಲದಿದ್ದರೆ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಯಾಕೆ ಇರಬಾರದು? ಅದಕ್ಕೆ ಉತ್ತರ ಮುಂದಿನ ಶ್ಲೋಕದಲ್ಲಿದೆ.**

**ಏವಂ ಚಾರ್ಥೇಷ್ವಸಂದೇಹಾತ್ ಮಾನತ್ವೇಽಪಿ ನ ಸಂಶಯಃ ।**
**ಯತಃ ತತ್ಸಂಶಯೋಽಪ್ಯರ್ಥಸಂಶಯೇ ಪರ್ಯವಸ್ಯತಿ ॥ ೩೨೪ ॥**

**ಅರ್ಥ–** ಏವಂ ಚ = ಹೀಗೆ, ಯತಃ = ಯಾವ ಕಾರಣದಿಂದ, ತತ್ಸಂಶಯಃ ಅಪಿ = ಪ್ರಾಮಾಣ್ಯಸಂದೇಹವೂ, ಅರ್ಥಸಂಶಯೇ = ವಸ್ತುವಿನ ಸಂದೇಹದಲ್ಲಿ, ಪರ್ಯವಸ್ಯತಿ = ಪರ್ಯವಸಾನ ಹೊಂದುತ್ತದೋ, ಅತಃ = ಆದ್ದರಿಂದ, ಅರ್ಥೇಷು = ಸಮೀಪಸ್ಥ ವಸ್ತುಗಳಲ್ಲಿ, ಅಸಂದೇಹಾತ್ = ಸಂದೇಹವಿಲ್ಲದಿರುವ ಕಾರಣ, ಮಾನತ್ವೇ ಅಪಿ = ಜ್ಞಾನಪ್ರಾಮಾಣ್ಯದ ವಿಷಯದಲ್ಲೂ, ನ ಸಂಶಯಃ = ಸಂದೇಹವಿಲ್ಲ.

**ಅನುವಾದ–** ಹಿಂದೆ ಹೇಳಿದಂತೆ ಎಲ್ಲ ವಿಷಯಗಳಲ್ಲೂ ಸಂದೇಹವು ಅಪ್ರಾಮಾಣಿಕವಾಗಿದೆ. ಜ್ಞಾನಪ್ರಾಮಾಣ್ಯಸಂಶಯವು ಅರ್ಥಸಂಶಯದಲ್ಲೇ ಪರ್ಯವಸಾನವಾಗುತ್ತದೆ. ಅರ್ಥಸಂಶಯವು ಇಲ್ಲವೆಂದಾದ ಮೇಲೆ ಪ್ರಾಮಾಣ್ಯಸಂದೇಹವೂ ಇಲ್ಲ.

**ಭಾವವಿಲಾಸಿನೀ–** ಅರ್ಥಸಂಶಯಾಭಾವೇಽಪಿ ಜ್ಞಾನಪ್ರಾಮಾಣ್ಯಸಂದೇಹಃ ಕುತೋ ನ ಸ್ಯಾದಿತ್ಯತ ಆಹ – **ಏವಂಚೇತಿ** ॥ ಏವಮುಕ್ತರೀತ್ಯಾ ಸರ್ವಾರ್ಥಸಂದೇಹಸ್ಯಾನಾನುಭವಿಕತ್ವೇನೇತ್ಯರ್ಥಃ । ನನ್ವರ್ಥಸಂದೇಹಾಭಾವೇಽಪಿ ಜ್ಞಾನಮಾನತ್ವಸಂಶಯೋಽಸ್ತು ಕಿಂ ಬಾಧಕಮಿತ್ಯತ ಆಹ – **ಯತ ಇತಿ** ॥ ಯತಸ್ತತ್ಸಂಶಯೋಽಪಿ ಜ್ಞಾನಪ್ರಾಮಾಣ್ಯಸಂಶಯೋಽಪಿ ಅರ್ಥಸಂಶಯೇ ಪರ್ಯವಸ್ಯತಿ ಅತ ಇತಿ ಸಂಬಂಧಃ । ಅತಃ ಪ್ರಾಮಾಣ್ಯಸಂಶಯಸ್ಯಾರ್ಥಸಂಶಯಸ್ಯ ಚ ಅಂತತ ಏಕವಿಷಯತ್ವಾದರ್ಥನಿಶ್ಚಯೇ ಪ್ರಾಮಾಣ್ಯನಿಶ್ಚಯೋಽಪ್ಯವರ್ಜನೀಯ ಏವೇತಿ ಭಾವಃ । ತಥಾಹಿ ಪ್ರಾಮಾಣ್ಯಂ ನಾಮ ತದ್ವತಿ ತತ್ಪ್ರಕಾರಕಜ್ಞಾನತ್ವಮ್, ತತ್ರ ತತ್ಪ್ರಕಾರಕತ್ವಾಂಶೇ ನ ಕಸ್ಯಾಪಿ ಮತೇ ಸಂಶಯಃ । ಕಿಂತು ತದ್ವದ್ವಿಶೇಷ್ಯಕತ್ವ ಏವ ಸಂಶಯೋ ವಾಚ್ಯಃ । ಸೋಽಪಿ ತದ್ವತ್ತ್ವ ಏವ ಪರ್ಯವಸ್ಯತಿ । ತದ್ವತ್ತಾಸಂಶಯೋಽರ್ಥಸಂಶಯ ಇತ್ಯನರ್ಥಾಂತರಮ್ । ತಥಾಚ ಸಮೀಪಸ್ಥತಂಡುಲಪಾನೀಯಾದಿಷು ಅರ್ಥನಿಶ್ಚಯನಿಯಮಾತ್ ನಿಯಮೇನ ಜ್ಞಾನಪ್ರಾಮಾಣ್ಯನಿಶ್ಚಯೋಽಪ್ಯಾವಶ್ಯಕ ಏವ । ಸಚ ಸಮರ್ಥಪ್ರವೃತ್ತಿಜನಕತ್ವಗೃಹೀತಪ್ರಾಮಾಣ್ಯಜ್ಞಾನಜಾತೀಯತ್ವಯೋಃ ಪರಾಭಿಮತಲಿಂಗಯೋರಭಾವೇನ ಸಾಕ್ಷಿಣೈವ ವಾಚ್ಯ ಇತಿ ಕಥಂ ನಾಸ್ಮದುಕ್ತಪ್ರಾಮಾಣ್ಯಸ್ವತಸ್ತ್ವಮ್ ॥ ೩೨೪ ॥

**ವಿವರಣೆ–** ಇದು ನೀರು ಎಂಬ ಜ್ಞಾನವು ಪ್ರಮಾಣವೋ, ಅಪ್ರಮಾಣವೋ ಎಂಬ ಸಂದೇಹ ಬಂದಾಗ, ಇದು ನೀರು ಹೌದೋ ಅಲ್ಲವೋ ಎನ್ನುವ ಸಂದೇಹವೂ ಬಂದೇ ಬರುತ್ತದೆ. ಇದನ್ನೇ ಶಾಸ್ತ್ರೀಯವಾಗಿ ಹೇಳುವುದಾದಲ್ಲಿ, ಪ್ರಾಮಾಣ್ಯಸಂದೇಹವಿದ್ದರೆ ಅರ್ಥಸಂಶಯವೂ ಇರುತ್ತದೆ. ಇದನ್ನೇ ನಿಷೇಧಮುಖವಾಗಿ ಹೇಳುವುದಾದಲ್ಲಿ, ಅರ್ಥಸಂದೇಹ ಇಲ್ಲದಿದ್ದರೆ ಪ್ರಾಮಾಣ್ಯಸಂದೇಹವೂ ಬರುವುದಿಲ್ಲ. ಹಿಂದಿನ ಶ್ಲೋಕದಲ್ಲಿ ಹತ್ತಿರದಲ್ಲಿವ ವಸ್ತುಗಳ ಜ್ಞಾನಬಂದಾಗ ಅರ್ಥಸಂದೇಹ ಬರುವುದಿಲ್ಲ ಎಂದು ಹೇಳಲಾಗಿದೆ. ಅರ್ಥಸಂದೇಹ ಇಲ್ಲವಾದುದರಿಂದಲೇ ಪ್ರಾಮಾಣ್ಯಸಂದೇಹವೂ ಇಲ್ಲ ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ. ಪ್ರಾಮಾಣ್ಯಸಂದೇಹವಿಲ್ಲದುದರಿಂದ ಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗಿದೆ ಎಂದೇ ಅರ್ಥ. ಪ್ರಾಮಾಣ್ಯನಿಶ್ಚಯಕ್ಕೆ ಬೇರೆ ಯಾವ ಕಾರಣಗಳೂ ಇಲ್ಲವಾದುದರಿಂದ ಸಾಕ್ಷಿಯಿಂದಲೇ ಆಗಬೇಕು ಎಂದ ಮೇಲೆ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗುತ್ತದೆ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಪ್ರಾಮಾಣ್ಯಸಂಶಯವು ಅರ್ಥಸಂಶಯದಲ್ಲೇ ಪರ್ಯವಸಾನವಾಗುತ್ತದೆ ಎನ್ನುವುದನ್ನು ವ್ಯಾಖ್ಯಾನದಲ್ಲಿ ಹೀಗೆ ಸಮರ್ಥಿಸಿದ್ದಾರೆ. ಪ್ರಾಮಾಣ್ಯವೆಂದರೆ ತದ್ವತಿ ತತ್ಪ್ರಕಾರಕಜ್ಞಾನತ್ವಂ. ಇಲ್ಲಿ ಎರಡಂಶಗಳಿವೆ. ತದ್ವತ್ತ್ವಾಂಶ, ತತ್ಪ್ರಕಾರಕತ್ವಾಂಶ. ಇವೆರಡರಲ್ಲಿ ತತ್ಪ್ರಕಾರಕತ್ವಾಂಶದಲ್ಲಿ ಸಂದೇಹವಿದೆ ಎಂದು ಯಾರೂ ಹೇಳುವುದಿಲ್ಲ. ಏಕೆಂದರೆ ಅಯಂ ಘಟಃ ಎಂಬ ಜ್ಞಾನವು ಘಟತ್ವಪ್ರಕಾರಕವಾಗಿದೆ ಎನ್ನುವುದು ಅನುಭವಸಿದ್ಧವಾದ ವಿಷಯ. ಇನ್ನು ತದ್ವತ್ತ್ವಾಂಶದಲ್ಲಿ ಸಂದೇಹಕ್ಕೆ ಅವಕಾಶವಿದೆ. ಅಂದರೆ ಮುಂದಿರುವ ವಸ್ತುವಿನಲ್ಲಿ ಘಟತ್ವವು ಇದೆಯೋ ಇಲ್ಲವೋ ಎನ್ನುವ ಬಗ್ಗೆ ಸಂದೇಹಕ್ಕೆ ಆಸ್ಪದವಿದೆ. ಈ ಸಂಶಯವು ಇಲ್ಲಿ ಘಟ ಇದೆಯೋ ಇಲ್ಲವೋ ಎನ್ನುವ ಸಂಶಯದಲ್ಲೇ ಪರ್ಯವಸಾನವಾಗುತ್ತದೆ. ಇದು ಘಟವೋ ಅಲ್ಲವೋ ಎನ್ನುವ ಸಂದೇಹಕ್ಕೂ ಇಲ್ಲಿ ಘಟ ಇದೆಯೋ ಇಲ್ಲವೋ ಎನ್ನುವ ಸಂದೇಹಕ್ಕೂ ವ್ಯತ್ಯಾಸವೇ ಇಲ್ಲ, ಆದ್ದರಿಂದ ಪ್ರಾಮಾಣ್ಯಸಂದೇಹವು ಅರ್ಥಸಂದೇಹದಲ್ಲಿಯೇ ಪರ್ಯವಸಾನವಾಗುತ್ತದೆ ಎನ್ನುತ್ತಾರೆ ಸುರೋತ್ತಮತೀರ್ಥರು.

ಸಾಕ್ಷಿ ಮತ್ತು ಮನಸ್ಸು ಇವೆರಡು ದೇಹದ ಒಳಗಿರುವ ವಿಷಯಗಳನ್ನು ಅರಿಯುವ ಇಂದ್ರಿಯಗಳು. ಆದ್ದರಿಂದ ಅವೆರಡೂ ಅಂತರಿಂದ್ರಿಯಗಳು. ಮನಸ್ಸು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಹಾಗಿದ್ದ ಮೇಲೆ ಸಾಕ್ಷಿಯೂ ಪ್ರಾಮಾಣ್ಯವನ್ನು ಏಕೆ ಗ್ರಹಿಸಬಾರದು? ಈ ಯುಕ್ತಿಯನ್ನು ಹೇಳುವ ಉದ್ದೇಶದಿಂದ ವಾದಿರಾಜರು ಮನಸ್ಸು ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎನ್ನುವುದನ್ನು ಮುಂದಿನ ಶ್ಲೋಕದಲ್ಲಿ ಸಮರ್ಥಿಸುತ್ತಿದ್ದಾರೆ.

**ಅಯೋಗ್ಯಂ ಮನಸೋ ಮಾನತ್ವಂ ಚೇತ್ ತತ್ಸಂಶಯಃ ಕುತಃ ।**
**ಸ್ವಾಯೋಗ್ಯಗಂಧೇ ಸಂದೇಹಶ್ಚಕ್ಷುಷಾ ಕಸ್ಯ ಜಾಯತೇ ॥ ೩೨೫ ॥**

**ಅರ್ಥ–** ಮಾನತ್ವಂ = ಪ್ರಾಮಾಣ್ಯವು, ಮನಸಃ = ಮನಸ್ಸಿಗೆ, ಅಯೋಗ್ಯಂ ಚೇತ್ = ಯೋಗ್ಯವಾಗದೇ ಇದ್ದಲ್ಲಿ, ತತ್ಸಂಶಯಃ = ಪ್ರಾಮಾಣ್ಯದ ಸಂದೇಹವು, ಕುತಃ? = ಮನಸ್ಸಿನಿಂದ ಬರುವುದು ಹೇಗೆ? ಚಕ್ಷುಷಾ = ಕಣ್ಣಿನಿಂದ, ಸ್ವಾಯೋಗ್ಯಗಂಧೇ = ತಾನು ಗ್ರಹಿಸದಿರುವ ಪರಿಮಳದ ಬಗ್ಗೆ, ಸಂದೇಹಃ = ಸಂಶಯವು, ಕಸ್ಯ = ಯಾರಿಗೆ, ಜಾಯತೇ = ಹುಟ್ಟುತ್ತದೆ?

**ಅನುವಾದ–** ಪ್ರಾಮಾಣ್ಯವು ಮನಸ್ಸಿಗೆ ಗ್ರಹಿಸಲು ಅಯೋಗ್ಯವಾಗಿದ್ದಲ್ಲಿ ಪ್ರಾಮಾಣ್ಯಸಂದೇಹವಾದರೂ ಹೇಗೆ ಬರಲು ಸಾಧ್ಯ? ಕಣ್ಣಿನಿಂದ, ಕಣ್ಣಿಗೆ ಅಯೋಗ್ಯವಾದ ಗಂಧದ ಬಗ್ಗೆ ಯಾರಿಗಾದರೂ ಸಂದೇಹ ಬರುವುದುಂಟೇ?

**ಭಾವವಿಲಾಸಿನೀ–** ಸಾಕ್ಷಿಮನಸೋರಂತರಿಂದ್ರಿಯತ್ವೇನ ಪ್ರಾಮಾಣ್ಯಸ್ಯ ಮನೋಯೋಗ್ಯತ್ವೇ ಸಾಕ್ಷಿಯೋಗ್ಯತ್ವಮಪಿ ಸೇತ್ಸ್ಯತೀತ್ಯಾಶಯೇನ ಮನೋವೇದ್ಯತ್ವಂ ತಾವತ್ ಸಮರ್ಥಯತೇ – **ಅಯೋಗ್ಯಮಿತಿ ॥** ಜ್ಞಾನಪ್ರಾಮಾಣ್ಯಂ ಮನಸಃ ಅಯೋಗ್ಯಂ ಚೇದಿತಿ ಸಂಬಂಧಃ । ತರ್ಹಿ ತತ್ಸಂಶಯಃ ಪ್ರಾಮಾಣ್ಯಸಂಶಯಃ ಕುತಃ ಸ್ಯಾತ್? ನ ಕುತಶ್ಚಿತ್ । ಮನೋವ್ಯತಿರೇಕೇಣ ಪ್ರಾಮಾಣ್ಯಸಂಶಯಜನಕಕರಣಾಭಾವಾತ್ । ಸಾಕ್ಷಿಣಃ ಯಾಥಾರ್ಥ್ಯನಿಯಮೇನ ಸಂಶಯಕರಣತ್ವಾಯೋಗಾತ್ । ನನು ಮನಸಾ ಗೃಹೀತುಮಯೋಗ್ಯೇಽಪಿ ಪ್ರಾಮಾಣ್ಯೇ ಸಂದೇಹಸ್ತೇನ ಜಾಯತಾಂ ಕೋ ದೋಷ ಇತ್ಯತ ಆಹ – **ಸ್ವಾಯೋಗ್ಯೇತಿ ॥** ಸ್ವಾಯೋಗ್ಯೇ ಗಂಧೇ ಚಕ್ಷುಷಾ ಗೃಹೀತುಮಯೋಗ್ಯೇ ಗಂಧೇ । ಏವಂಚ ಪ್ರಾಮಾಣ್ಯಸ್ಯ ಮನೋಯೋಗ್ಯತ್ವೇ ಸಾಕ್ಷಿಯೋಗ್ಯತ್ವಂ ಸುತರಾಂ ಸೇತ್ಸ್ಯತೀತಿ ಭಾವಃ । ಏತೇನ ಕ್ವಚಿತ್ ಪ್ರಾಮಾಣ್ಯಭ್ರಮೋ ಮನಸಾ ಜಾಯತ ಇತ್ಯೇತದಪಿ ಸಮರ್ಥಿತಮ್ । ನನ್ವೇವಂ ಸತಿ ಸರ್ವತ್ರ ಮನಸೈವ ಪ್ರಾಮಾಣ್ಯಸ್ಯ ಗ್ರಹೋಽಸ್ತು, ಕಿಂ ಸಾಕ್ಷಿವೇದ್ಯತ್ವಾಂಗೀಕಾರೇಣೇತಿ ಚೇನ್ನ । ಮನಸಾ ಕ್ವಚಿದಪ್ರಮಾಯಾಮಪಿ ಪ್ರಾಮಾಣ್ಯಗ್ರಹೇಣ ಸರ್ವತ್ರ ತೇನೈವ ಪ್ರಾಮಾಣ್ಯಗ್ರಹಣೇಽನಾಶ್ವಾಸಪ್ರಸಂಗೇನ ಪ್ರಮಾರೂಪಜ್ಞಾನೇಷು ಗೃಹೀತತತ್ತತ್ಪ್ರಾಮಾಣ್ಯೇ ಆಶ್ವಾಸಾಯ ನಿಯಮೇನ ಯಥಾರ್ಥಸ್ಯ ಪ್ರಾಮಾಣ್ಯಗ್ರಾಹಕಸ್ಯ ಸಾಕ್ಷಿಣೋಽವಶ್ಯಮಪೇಕ್ಷಿತತ್ವಾತ್ । ಸುಪ್ತಿದಶಾಯಾಮಂಗನಾಲಿಂಗನ-ಸರ್ಪಾಪಸರ್ಪಣಯೋಃ ಫಲತ್ವಾದರ್ಶನೇನ ಉಪರತಮನಸ್ಕಸ್ಯ ಪುಂಸಃ ಸೌಷುಪ್ತಿಕ ಸುಖದುಃಖಾಭಾವಯೋಃ ಅನುಭವಾಯ ಸಾಕ್ಷಿಣ ಏವಾವಶ್ಯಕತ್ವಾಚ್ಚ । ದೋಷೇಣ ಕುಂಠಿತಗತಿಃ ಸಾಕ್ಷೀ, ತದಭಾವೇ ಚೇತನತ್ವೇನ ತೀವ್ರಗತಿಃ ಸ್ವವಿಷಯಂ ಜ್ಞಾನಪ್ರಾಮಾಣ್ಯಂ ಸುಖಮಿವ ಸ್ವಯಮೇವಾದೌ ಗೃಹ್ಣಾತೀತಿ ಪುನರ್ಮನಸಸ್ತತ್ರಾನವಕಾಶಾಚ್ಚ । ನನು ತದ್ವತಿ ತತ್ಪ್ರಕಾರಕತ್ವಲಕ್ಷಣಜ್ಞಾನಪ್ರಾಮಾಣ್ಯಸ್ಯ ತದ್ವತ್ತಾರೂಪಬಾಹ್ಯಾರ್ಥಘಟಿತತ್ವೇನ ಸಾಕ್ಷಿಮನಸೋರ್ಬಹಿರಸ್ವಾತಂತ್ರ್ಯಾದ್ ಭವದ್ಭಿರಪಿ ಜ್ಞಾನದ್ವಾರೈವ ತದ್ವಿಷಯೀಕರಣಂ ವಕ್ತವ್ಯಮ್, ನತು ಸಾಕ್ಷಾತ್ । ತಥಾಚ ಕಥಂ ಪ್ರಾಮಾಣ್ಯಸ್ಯ ಮನಸ್ಸಾಕ್ಷಿಯೋಗ್ಯತ್ವಮಿತಿ ಚೇತ್ ತರ್ಹಿ ಸಾಕ್ಷಾದ್ವಿಷಯ ಏವ ಯೋಗ್ಯೋ ನ ಪರಂಪರಾವಿಷಯ ಇತ್ಯುಕ್ತಂ ಸ್ಯಾತ್ । ತಥಾ ಸತಿ

ಯೋಗಜಧರ್ಮಪ್ರತ್ಯಾಸತ್ತ್ಯಾ ಮುನಿಭಿರ್ಜ್ಞಾತಸಕಲಪದಾರ್ಥಾನಾಂ ತದಿಂದ್ರಿಯಾ-ಯೋಗ್ಯತ್ವಪ್ರಸಂಗೇ ತೇಷಾಮಸರ್ವಜ್ಞತ್ವಾಪ್ರಸಂಗಾತ್ । ಅಶ್ವದ್ವಾರಾ ಗ್ರಾಮಂ ಗತಸ್ಯ ರಾಜ್ಞೋ ಗ್ರಾಮಗಾಮಿತ್ವಂ ಚ ನ ಸ್ಯಾತ್ । ಅತಸ್ಸಾಕ್ಷಾತ್ಪರಂಪರಯಾ ವಾ ತದುಲ್ಲೇಖ್ಯಂ ವಸ್ತು ತದ್ಯೋಗ್ಯಮೇವೇತಿ ವಕ್ತವ್ಯಮ್ । ಅಸ್ತು ತರ್ಹಿ ಪರಮ್ಪರಯಾ ಜ್ಞಾತಬಾಹ್ಯಪದಾರ್ಥಾನಾಮಪಿ ಮನಸಾಕ್ಷಿಯೋಗ್ಯತಾ । ಅನ್ಯದ್ವಾರಾ ಜ್ಞಾತೇಷು ತೇಷು ಸಾಕ್ಷೀ ಕಥಮರ್ಥಸತ್ತಾನಿಶ್ಚಯರೂಪ ಇತಿ ಚೇತ್, ನ । ಯೋಗಜಧರ್ಮದ್ವಾರಾ ಸರ್ವಾರ್ಥನಿಶ್ಚಾಯಕಯೋಗೀಂದ್ರಿಯ-ವದೇವೋಪಪತ್ತೇಃ ॥ ೩೨೫ ॥

**ವಿವರಣೆ–** ಕೆಲವೊಮ್ಮೆ ದೂರದ ವಸ್ತುಗಳ ಜ್ಞಾನಬಂದಾಗ ಈ ಜ್ಞಾನವು ಪ್ರಮಾಣ ಹೌದೋ ಅಲ್ಲವೋ ಎನ್ನುವ ಸಂದೇಹ ಉಂಟಾಗುತ್ತದೆ. ಈ ಸಂದೇಹ ಸಾಕ್ಷಿಯಿಂದ ಬರಲು ಸಾಧ್ಯವಿಲ್ಲ. ಸಂದೇಹವು ಅಯಥಾರ್ಥಜ್ಞಾನ. ಸಾಕ್ಷಿಯಿಂದ ಎಂದೂ ಅಯಥಾರ್ಥಜ್ಞಾನವು ಹುಟ್ಟುವುದಿಲ್ಲ. ಅದು ನಿಯತಯಥಾರ್ಥ. ಹೀಗಾಗಿ ಪ್ರಾಮಾಣ್ಯಸಂದೇಹ ಮನಸ್ಸಿನಿಂದಲೇ ಬರಬೇಕು. ಮನಸ್ಸಿಗೆ ಪ್ರಾಮಾಣ್ಯವನ್ನು ಗ್ರಹಿಸುವ ಸಾಮರ್ಥ್ಯವಿಲ್ಲದಿದ್ದಲ್ಲಿ ಪ್ರಾಮಾಣ್ಯಸಂದೇಹವೂ ಬರಲಾರದು. ಯಾವ ವಸ್ತು ಯಾವ ಇಂದ್ರಿಯಕ್ಕೆ ಅಯೋಗ್ಯವೋ ಆ ಇಂದ್ರಿಯದಿಂದ ಆ ವಸ್ತುವಿನ ಸಂದೇಹವೂ ಬರುವುದಿಲ್ಲ. ಉದಾಹರಣೆಗೆ - ಗಂಧವು ಕಣ್ಣಿಗೆ ಅಯೋಗ್ಯ. ಆದ್ದರಿಂದ ಹೂವಿನಲ್ಲಿ ಗಂಧ ಇದೆಯೋ ಇಲ್ಲವೋ ಎನ್ನುವ ಸಂದೇಹವೂ ಕಣ್ಣಿನಿಂದ ಬರುವುದಿಲ್ಲ. ಆ ಸಂದೇಹ ಮೂಗಿದ್ದವನಿಗೇ ಬರಬೇಕು. ಆದ್ದರಿಂದ ಮನಸ್ಸಿಗೆ ಪ್ರಾಮಾಣ್ಯಸಂದೇಹ ಬರುವ ಕಾರಣ ಪ್ರಾಮಾಣ್ಯವು ಮನೋಯೋಗ್ಯವೆಂದು ಹೇಳಬೇಕಾಗುವುದು.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಇಲ್ಲಿನ ವ್ಯಾಖ್ಯಾನದಲ್ಲಿ ಮುಖ್ಯವಾದ ಎರಡು ಅಂಶಗಳನ್ನು ಸುರೋತ್ತಮತೀರ್ಥರು ಚರ್ಚಿಸಿದ್ದಾರೆ.

1. ಜ್ಞಾನದಲ್ಲಿ ಪ್ರಾಮಾಣ್ಯಸಂಶಯವು ಮನಸ್ಸಿನಿಂದ ಬರುತ್ತದೆ ಎನ್ನುವುದಾದಲ್ಲಿ ಮನಸ್ಸೂ ಕೆಲವೊಮ್ಮೆ ಜ್ಞಾನವನ್ನೂ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ ಎಂದಂತಾಯಿತು. ಹೀಗಿದ್ದ ಮೇಲೆ ಸಾಕ್ಷಿಂದ್ರಿಯದ ಅಗತ್ಯವಾದರೂ ಏನು? ಪ್ರಾಮಾಣ್ಯ ನಿಶ್ಚಯವೂ ಮನಸ್ಸಿನಿಂದಲೇ ಆಗುತ್ತದೆ ಎನ್ನಲಾಗದೆ?

ಇದಕ್ಕೆ ಉತ್ತರ : ಮನಸ್ಸು ಕೆಲವೊಮ್ಮೆ ಅಪ್ರಮಾಣ ಜ್ಞಾನಗಳನ್ನೂ ಪ್ರಮಾಣಗಳೆಂದು ಗ್ರಹಿಸುವುದರಿಂದ ಎಲ್ಲ ಕಡೆಯೂ ಆ ಮನಸ್ಸೇ ಪ್ರಾಮಾಣ್ಯವನ್ನು ಗ್ರಹಿಸುವುದಾದರೆ ಆ ಎಲ್ಲ ಪ್ರಾಮಾಣ್ಯಜ್ಞಾನಗಳಲ್ಲಿಯೂ ಅವಿಶ್ವಾಸ ಮೂಡೀತು. ಆದ್ದರಿಂದ ಯಥಾರ್ಥಜ್ಞಾನಗಳಲ್ಲಿ ಪ್ರಾಮಾಣ್ಯವು ತಿಳಿದಾಗ ಅಲ್ಲಿ ವಿಶ್ವಾಸವು ಮೂಡುವುದಕ್ಕಾಗಿ ಯಾವಾಗಲೂ ಯಥಾರ್ಥವಾದ ಪ್ರಾಮಾಣ್ಯಗ್ರಾಹಕವಾದ ಸಾಕ್ಷಿಯ ಅವಶ್ಯಕತೆ ಇದ್ದೇ ಇದೆ.

ಅದಲ್ಲದೇ, ಮಲಗಿರುವಾಗ ಅಂಗನಾಲಿಂಗನಾದಿ ಸುಖಸಾಧನಗಳಿದ್ದರೂ ಅದರ ಅನುಭವ ಮನಸ್ಸಿಗೆ ಆಗುವುದಿಲ್ಲ. ಅದರಿಂದ ಸುಖವೂ ಆಗುವುದಿಲ್ಲ. ಸರ್ಪವೂ ಪಕ್ಕದಲ್ಲೇ ಹಾದುಹೋದರೂ ಅದರ ಅನುಭವವೂ ಅದರಿಂದ ಭಯವೂ ಆಗುವುದಿಲ್ಲ. ಇದರಿಂದ ಮನಸ್ಸು ಆ ಸಂದರ್ಭದಲ್ಲಿ ನಿಷ್ಕ್ರಿಯವಾಗಿದೆ ಎಂದು ಹೇಳಬೇಕಾಗುತ್ತದೆ. ಆದರೂ ಆಗ ಸುಖದ ಅನುಭವ ಇದೆ. ದುಃಖಾಭಾವದ ಅನುಭವ ಇದೆ. ಇದು ಯಾವ ಇಂದ್ರಿಯದಿಂದ ಆಗಬೇಕು? ಸಾಕ್ಷೀಂದ್ರಿಯದ ಹೊರತು ಇನ್ನಾವ ಇಂದ್ರಿಯಕ್ಕೂ ಸುಪ್ತಿಯಲ್ಲಿ ಆಸ್ಪದವಿಲ್ಲ. ಆದ್ದರಿಂದ ಸಾಕ್ಷೀಂದ್ರಿಯವನ್ನು ಅಂಗೀಕರಿಸಲೇಬೇಕು. ಅಂತಹ ಸಾಕ್ಷಿಯು ತನಗೆ ಪ್ರತಿಬಂಧಕಗಳು ಇಲ್ಲದಿದ್ದಾಗ ತನ್ನ ಮುಂದಿರುವ ಸುಖವನ್ನು ಗ್ರಹಿಸುವಂತೆ ಜ್ಞಾನಪ್ರಾಮಾಣ್ಯವನ್ನೂ ಕೂಡಲೇ ಗ್ರಹಿಸಿಬಿಡುತ್ತದೆ. ಆದ್ದರಿಂದ ಸಾಕ್ಷಿಯೇ ಪ್ರಾಮಾಣ್ಯವನ್ನೂ ತಿಳಿಯುತ್ತದೆ ಎನ್ನುವುದು ಸಮುಚಿತ.

2. ಸಾಕ್ಷಿಯು ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವನ್ನು ಮಾಡಲು ಸಾಧ್ಯವಿಲ್ಲ. ಪ್ರಾಮಾಣ್ಯವೆಂದರೆ ಇದ್ದದ್ದನ್ನು ಇದ್ದಂತೆಯೇ ವಿಷಯೀಕರಿಸುವುದು ಸಾಕ್ಷಿಯು (ತನ್ನ) ಮುಂದೆ ಜ್ಞಾನ ಇದೆ ಆ ಜ್ಞಾನವು ಇಂತಹ ವಸ್ತುವನ್ನು ವಿಷಯೀಕರಿಸುತ್ತದೆ ಎಂಬ ಮಾಹಿತಿಯನ್ನು ಕೊಡಬಹುದು. ಆದರೆ ಜ್ಞಾನತಿಳಿಸಿದ ವಸ್ತು ಹೊರಜಗತ್ತಿನಲ್ಲಿ ಇದೆ ಎನ್ನುವುದನ್ನು ಸಾಕ್ಷಿಯು ನಿರ್ಧರಿಸಲಾರದು. ಏಕೆಂದರೆ, ಸಾಕ್ಷಿ ಮತ್ತು ಮನಸ್ಸುಗಳು ಅಂತರಿಂದ್ರಿಯಗಳು. ಅವುಗಳು ದೇಹದೊಳಗಿನ ವಿಷಯಗಳನ್ನಷ್ಟೇ ಗ್ರಹಿಸುತ್ತವೆ. ಹೊರಗಿನ ವಿಷಯಗಳನ್ನು ಗ್ರಹಿಸುವ ಸಾಮರ್ಥ್ಯ ಅವುಗಳಿಗಿಲ್ಲ. ಹೀಗಿರುವಾಗ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದು ಹೇಗೆ?

ಪ್ರಾಮಾಣ್ಯಸ್ವತಸ್ತ್ವದಲ್ಲಿ ಮುಖ್ಯವಾದ ಒಂದು ಪ್ರಶ್ನೆಯನ್ನು ಇಲ್ಲಿ ಮಾಡಲಾಗಿದೆ. ಇದಕ್ಕೆ ಪ್ರತಿಬಂದಿಯ ಮೂಲಕ ಉತ್ತರವನ್ನು ಕೊಡಲಾಗಿದೆ. ಸಾಕ್ಷಿಯು ನೇರವಾಗಿ ಬಾಹ್ಯವಸ್ತುಗಳನ್ನು ಗ್ರಹಿಸದಿದ್ದರೂ ಜ್ಞಾನದ ಮೂಲಕ ಬಾಹ್ಯವಸ್ತುಗಳನ್ನು ಗ್ರಹಿಸುತ್ತದೆ. ಮತ್ತೊಂದರ ಮೂಲಕ ವಸ್ತುಗಳನ್ನು ಗ್ರಹಿಸಿದರೆ ಅದು ಗ್ರಹಿಸಿದಂತೆಯೇ ಅಲ್ಲ ಎಂದು ವಾದ ಮಾಡಬಾರದು. ಮುನಿಗಳು ತಮ್ಮ ಯೋಗಸಾಮರ್ಥ್ಯದಿಂದ ದೇಶಾಂತರ ಕಾಲಾಂತರಗಳಲ್ಲಿ ಇರುವ ಸಂಗತಿಗಳನ್ನೂ ಪ್ರತ್ಯಕ್ಷವಾಗಿ ನೋಡಬಲ್ಲರು. ಆ ಸಂಗತಿಗಳು ನೇರವಾಗಿ ಅವರ ಕಣ್ಣಮುಂದೆ ಇಲ್ಲ ಎಂದಮಾತ್ರಕ್ಕೆ ಅವರು ನೋಡಿದ್ದು ಸುಳ್ಳೇ?

ಇನ್ನೊಂದು ಪ್ರತಿಬಂದಿ - ರಾಜನು ಕಾಲ್ನಡಿಗೆಯಿಂದ ಊರಿಂದೂರಿಗೆ ಹೋಗುವುದಿಲ್ಲ. ಕುದುರೆ ಏರಿ ಕುದುರೆಯ ಮೂಲಕ ಊರನ್ನು ತಲಪುತ್ತಾನೆ ಎಂದ ಮಾತ್ರಕ್ಕೆ ರಾಜ ಆ ಊರಿಗೆ ಹೋಗಲಿಲ್ಲ ಎನ್ನಲಾದೀತೇ? (ವಾದಿರಾಜರರಂತೆ ಸುರೋತ್ತಮತೀರ್ಥರೂ ಚಮತ್ಕಾರದ ದೃಷ್ಟಾಂತಚತುರರು ಎನ್ನಲು ಇದೊಂದು ಉದಾಹರಣೆ.)

ಆದ್ದರಿಂದ ಯೋಗಿಗಳು ಯೋಗಜಧರ್ಮದ ಸಹಾಯದಿಂದ ಅತೀತವಸ್ತುಗಳನ್ನು ನೋಡುವಂತೆ ಸಾಕ್ಷಿಯೂ ಬಾಹ್ಯೇಂದ್ರಿಯಗಳ ಸಹಕಾರದಿಂದ ಪ್ರಾಮಾಣ್ಯನಿಶ್ಚಯವನ್ನು ಮಾಡುತ್ತದೆ.

ಯೋಗಜಧರ್ಮದ್ವಾರಾ ಸರ್ವಾರ್ಥನಿಶ್ಚಾಯಕಯೋಗೀಂದ್ರಿಯವತ್ ಉಪಪತ್ತೇಃ.

ಜ್ಞಾನಮೂಲಕ ಪ್ರಾಪಂಚಿಕವಸ್ತುಗಳನ್ನು ಗ್ರಹಿಸುವ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸುವ ಕ್ರಮವನ್ನು ಮುಂದಿನ ಶ್ಲೋಕದಲ್ಲಿ ಶ್ಲೇಷಾಲಂಕಾರದ ಮೂಲಕ ತಿಳಿಸುತ್ತಾರೆ.

**ಉಪನೀತಂ ಚ ನಿರ್ಣೇತಿಕನ್ಯಾಧನ್ಯಾನ್ವಮನ್ಯತ ।**
**ದೋಷಾಭಾವಾದ್ವಿರುದ್ಧಾರ್ಥಕೋಟೇರಾಟೋಪಮೋಟನಾತ್ ॥ ೩೨೬ ॥**

**ಅರ್ಥ–** ದೋಷಾಭಾವಾತ್ = ದೂರಸ್ಥತ್ವಾದಿದೋಷಗಳು ಇಲ್ಲದಿರುವುದರಿಂದ, ವಿರುದ್ಧಾರ್ಥಕೋಟೇಃ = ಪ್ರಾಮಾಣ್ಯಕ್ಕೆ ವಿರುದ್ಧವಾದ ಅಪ್ರಾಮಾಣ್ಯವೆಂಬ ಸಂದೇಹ ಕೋಟಿಯ, ಆಟೋಪಮೋಟನಾತ್ = ಪ್ರಭಾವವು ತಗ್ಗಿರುವುದರಿಂದ, ಉಪನೀತಂ = ಉಪನಯಮರ್ಯಾದೆಯಿಂದ ದೊರಕಿದ ಘಟತ್ವಾದಿ ಘಟಿತವಾದ ಪ್ರಾಮಾಣ್ಯವನ್ನು (ಉಪನಯನವಾಗಿರುವ ವರನನ್ನು), ಧನ್ಯಾ= ಧನ್ಯಳಾದ, ನಿರ್ಣೇತಿಕನ್ಯಾ= ನಿಶ್ಚಯವೆಂಬ ಕನ್ಯೆಯು, ಅನ್ವಮನ್ಯತ= ವರಿಸಿದಳು.

**ಅನುವಾದ–** ದೂರಸ್ಥತ್ವಾದಿ ದೋಷಗಳು ಇಲ್ಲದಿರುವುದರಿಂದ ಪ್ರಾಮಾಣ್ಯಕ್ಕೆ ವಿರುದ್ಧವಾದ ಅಪ್ರಾಮಾಣ್ಯಕೋಟಿಯ ಪ್ರಭಾವವು ನಾಶವಾಗಿದೆ. ಆದುದರಿಂದ ಪ್ರಾಮಾಣ್ಯನಿಶ್ಚಯವೆಂಬ ಕನ್ಯೆಯು ವ್ಯವಸಾಯದಿಂದ ಉಪನೀತವಾದ ಪ್ರಾಮಾಣ್ಯ ಎಂಬ ವರನನ್ನು ವರಿಸಿ ತನ್ನನ್ನು ಧನ್ಯಳೆಂದು ತಿಳಿಯುತ್ತಾಳೆ.

**ಭಾವವಿಲಾಸಿನೀ–** ಕಿಂಚ ಸಾಕ್ಷಿಣಾ ಘಟತ್ವಪ್ರಕಾರಕತ್ವೋಲ್ಲೇಖೇ ಕ್ರಿಯಮಾಣೇ ಪ್ರಕಾರಿತ್ವಮಾತ್ರಸ್ಯ ಸಾಕ್ಷಾದುಲ್ಲೇಖೇಽಪಿ ಪ್ರತಿಸಂಬಂಧಿಭೂತಘಟತ್ವಂ ಬಾಹ್ಯಪದಾರ್ಥತ್ವಾದ್ ವ್ಯವಸಾಯದ್ವಾರೈ-ವೋಲ್ಲಿಖ್ಯತೇ । ತಥಾಚ ವ್ಯವಸಾಯದ್ವಾರೋಪನೀತೇ ಪ್ರತಿಸಂಬಂಧಿಭೂತಘಟತ್ವೇ ಘಟತ್ವಂ ಪಟತ್ವಂ ವೇತಿ ಕುತೋ ನ ಸಂಶಯಃ । ಘಟಾದೇಸ್ಸ್ಥೈರ್ಯಸಾಧಕಪ್ರತ್ಯಭಿಜ್ಞಾಪ್ರತ್ಯಕ್ಷಸ್ಯ ಚ ಉಪನೀತತತ್ತಾಂಶೇ ಕಥಮರ್ಥಸತ್ತಾನಿಶ್ಚಯರೂಪತ್ವಮ್ । ಸಂಶಯಕಾರಣಾಭಾವಾದಿತಿ ಚೇತ್ ತರ್ಹಿ ತದ್ವದೇವ ಸಂಶಯಕಾರಣಾಭಾವೇ ಘಟತ್ವವೈಶಿಷ್ಟ್ಯಾಂಶಮಪಿ ಸಾಕ್ಷೀ ನಿಶ್ಚಿನುಯಾದೇವೇತಿ ಸಾಹಿತ್ಯಮುದ್ರಯಾಹ – **ಉಪನೀತಮಿತಿ** ॥ ನಿರ್ಣೇತಿಕನ್ಯಾ ಪ್ರಾಮಾಣ್ಯ-ನಿರ್ಣಯರೂಪಕನ್ಯಾ ನಿರ್ಣಯರೂಪಸಾಕ್ಷೀತಿ ಯಾವತ್ । ನಿರ್ಣೇತಿಶಬ್ದಸ್ಯ ಸ್ತ್ರೀಲಿಂಗತ್ವಾತ್ ಕನ್ಯೇತ್ಯುಕ್ತವಮ್ । ನಿರ್ದೋಷಸಾಕ್ಷಿರೂಪತ್ವಾದ್ಧನ್ಯೇತ್ಯುಕ್ತವಮ್ । ಉಪನೀತಂ

ವ್ಯವಸಾಯೋಪನೀತಮ್ । ಪ್ರಾಮಾಣ್ಯಮಿತಿ ಶೇಷಃ । ಉಪನಯನವಂತಮಿತಿ ಧ್ವನಿಃ । ಜ್ಞಾನಪ್ರಾಮಾಣ್ಯಮನ್ವಮನ್ಯತ । ವಿಷಯತಯಾ ಮತ್ಸಂಬಂಧಿ ಕರೋಮೀತ್ಯಂಗೀಚಕಾರ । ಅನ್ಯತ್ರ ಉದೂಢಂ ಕರೋಮೀತ್ಯಂಗೀಕಾರೋ ಧ್ವನಿತಃ । ಕಿಮರ್ಥಮನ್ವಮನ್ಯತೇತ್ಯತ ಆಹ – **ದೋಷಾಭಾವಾದಿತಿ** ॥ ವ್ಯವಸಾಯಗೃಹೀತೇಷು ಪ್ರಾಗುಕ್ತಸಮೀಪಸ್ಥಾರ್ಥೇಷು ದೂರತ್ವಾದಿ-ದೋಷಾಭಾವಾತ್ । ಅನ್ಯತ್ರಾಕುಲೀನತ್ವಾದಿದೋಷಾಭಾವೋ ಧ್ವನಿತಃ । ವಿರುದ್ಧಾರ್ಥ-ಕೋಟೇಃ ಪ್ರಾಮಾಣ್ಯವಿರುದ್ಧಾರ್ಥಃ ಅಪ್ರಾಮಾಣ್ಯಂ ತತ್ಕೋಟೇಃ ಆಟೋಪಮೋಟನಾತ್ ಆಟೋಪಃ ಸಂಭ್ರಮಃ । ತನ್ಮೋಟನಾಚ್ಛೇದಾದಭಾವಾದಿತ್ಯರ್ಥಃ। ಅನ್ಯತ್ರ ವಿವಾಹವಿರೋಧಿನಾಂ ಪುಂಸಾಂ ದ್ರವ್ಯಕೋಟೇರಾಟೋಪಮೋಟನಾದಿತಿ ಧ್ವನಿಃ। ಯಥಾ ಕನ್ಯಾ ಅಕುಲೀನತ್ವಾದಿ-ದೋಷರಹಿತಪುರುಷಲಾಭೇ ವಿವಾಹವಿಘ್ನಕಾರಿಭಿರ್ದತ್ತದ್ರವ್ಯಕೋಟಿಮಪ್ಯುಪೇಕ್ಷ್ಯ ತಂ ವರಯೇದೇವ । ಏವಂ ಸಾಕ್ಷೀ ದೂರಸ್ಥತ್ವಾದಿದೋಷರಹಿತವಸ್ತುವಿಷಯವ್ಯವಸಾಯೇ-ನೋಪನೀತಮೇವ ಪ್ರಾಮಾಣ್ಯಂ ದೋಷಜನ್ಯಾಯಾಃ ಘಟತ್ವಾಭಾವವತಿ ಘಟತ್ವಪ್ರಕಾರಕತ್ವ-ರೂಪಾಪ್ರಾಮಾಣ್ಯಕೋಟೇರತ್ರಾಸಂಭವಾತ್ ತಾಂ ತಿರಸ್ಕೃತ್ಯ ಘಟತ್ವವತ್ಯೇವ ಘಟತ್ವಪ್ರಕಾರಕ-ಜ್ಞಾನವಾನಹಮಿತಿ ನಿಶ್ಚಿನುಯಾದಿತಿ ಭಾವಃ। ತಥಾಚಾಯಂ ಪ್ರಯೋಗಃ। ಅನಭ್ಯಾಸದಶಾಪನ್ನ-ಸಮೀಪಸ್ಥಾರ್ಥವಿಷಯಕಜ್ಞಾನಪ್ರಾಮಾಣ್ಯಂ ಸಾಕ್ಷಿಣೈವ ಪ್ರಮೀಯತೇ ಸಾಕ್ಷೀತರನಿರ್ಣಾಯ-ಕಾಭಾವೇ ಸತಿ ನಿರ್ಣೀಯಮಾನತ್ವಾದ್ ಘಟತ್ವಪ್ರಕಾರಕತ್ವವದಿತಿ ॥ ೩೨೬ ॥

**ವಿವರಣೆ–** ಕನ್ಯೆಯು ಹಿರಿಯರು ಗೊತ್ತು ಮಾಡಿದ ಉಪನೀತವರನನ್ನು ಮನಸಾರೆ ಒಪ್ಪಿಕೊಂಡಿದ್ದಾಳೆ. ಆದರೆ ಕೆಲವರು ದುಡ್ಡಿನ ಆಮಿಷ ಅಥವಾ ಬೆದರಿಕೆಯನ್ನು ಒಡ್ಡಿ ಸಂಬಂಧವನ್ನು ಮುರಿಯಲು ಯತ್ನಿಸುತ್ತಾರೆ. ಆದರೆ, ಕನ್ಯೆ ತನ್ನ ದೃಢನಿರ್ಧಾರದಿಂದ ಆ ಪ್ರತಿಬಂಧಕಗಳನ್ನೆಲ್ಲ ಮೆಟ್ಟಿ ನಿಂತು ತನಗಿಷ್ಟವಾದ ವರನನ್ನು ವರಿಸಿ ಧನ್ಯತಾಭಾವವನ್ನು ತಾಳುತ್ತಾಳೆ. ಅದರಂತೆ, ಪ್ರಕೃತದಲ್ಲಿ ಪ್ರಾಮಾಣ್ಯನಿಶ್ಚಯವೇ (ನಿರ್ಣೀತಿ) ಕನ್ಯೆಯ ಸ್ಥಾನದಲ್ಲಿ ಇದೆ. ಉಪನೀತವರ - ವ್ಯವಸಾಯೋಪನೀತವಾದ ಪ್ರಾಮಾಣ್ಯ. ಇಲ್ಲಿ ಉಪನೀತ ಎಂಬ ಪದವನ್ನು ಶ್ಲೇಷಾರ್ಥದಲ್ಲಿ ಬಳಸಲಾಗಿದೆ. ಲೌಕಿಕ ವ್ಯವಹಾರದಲ್ಲಿ ಉಪನೀತನೆಂದರೆ ಉಪನಯನಸಂಸ್ಕಾರವಗಿರುವ ವರ ಎಂದರ್ಥ. ಶಾಸ್ತ್ರೀಯವಾಗಿ ಉಪನಯಮರ್ಯಾದಯಾ ಎಂದರೆ ಅಲೌಕಿಕಸನ್ನಿಕರ್ಷವಾದ ಜ್ಞಾನಲಕ್ಷಣಾ-ಸನ್ನಿಕರ್ಷದಿಂದ ತಿಳಿದ ಪ್ರಾಮಾಣ್ಯವೆಂದು ಅರ್ಥ. ಪ್ರಾಮಾಣ್ಯವೆಂದರೆ ತದ್ವತಿ ತತ್ಪ್ರಕಾರಕತ್ವ. ಅದರಲ್ಲಿ ತದ್ವತ್ತ್ವಾಂಶವು ವ್ಯವಸಾಯದಿಂದ ಉಪನೀತವಾದುದು. ವ್ಯವಸಾಯವು ಅಂದರೆ ಅಯಂ ಘಟಃ ಎಂಬ ಜ್ಞಾನವು ಘಟದಲ್ಲಿ ಘಟತ್ವವು ಇದೆ ಎಂದು ತಿಳಿಸುತ್ತದೆ. ಅದೇ ತದ್ವತ್ತ್ವಾಂಶ. ಈ ಅಂಶವನ್ನು ಸಾಕ್ಷಿಯು ವ್ಯವಸಾಯದ ಮೂಲಕ ತಿಳಿದುಕೊಂಡು ಈ ಜ್ಞಾನವು ತದ್ವತಿ ತತ್ಪ್ರಕಾರಕವಾಗಿದೆ ಎಂದು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಇದನ್ನು ರಾಜರು ಆಲಂಕಾರಿಕವಾಗಿ ನಿರ್ಣಯವೆಂಬ ಕನ್ಯೆಯು ಪ್ರಾಮಾಣ್ಯವೆಂಬ ವರನನ್ನು ವರಿಸುತ್ತಾಳೆ ಎಂದಿರುತ್ತಾರೆ. ಹೀಗೆ

ವರಿಸಬೇಕಾದರೆ ಪ್ರತಿಬಂಧಕವಾದ ದೋಷಗಳು ಇರಬಾರದು. ದೋಷಗಳಿದ್ದಲ್ಲಿ ಪ್ರಾಮಾಣ್ಯಕ್ಕೆ ವಿರುದ್ಧವಾದ ಅಪ್ರಾಮಾಣ್ಯ ಎಂಬ ಕೋಟಿಯು ತಲೆ ಎತ್ತುತ್ತದೆ. ದೋಷಗಳಿಲ್ಲದಿದ್ದಾಗ ಅರ್ಥಾತ್ ಸಮೀಪದ ವಸ್ತುಗಳ ಸ್ಪಷ್ಟಜ್ಞಾನಬಂದಾಗ ಈ ವಿರುದ್ಧಕೋಟಿಯ ಆಟೋಪವಿರುವುದಿಲ್ಲ. ಆದ್ದರಿಂದ ಪ್ರಾಮಾಣ್ಯವು ನಿರ್ಧರಿಸಲ್ಪಡುತ್ತದೆ.

ಇಲ್ಲಿ ನೀರು ಇದೆಯೋ ಇಲ್ಲವೋ? ಎಂಬ ಸಂದೇಹ ಬಂದಾಗ ಈ ಸಂದೇಹದಲ್ಲಿ ಎರಡು ಅಂಶಗಳು ತೋರುತ್ತವೆ. ಇದೆ ಮತ್ತು ಇಲ್ಲ ಎಂದು. ಇವುಗಳನ್ನು ಕೋಟಿ ಎಂದು ಕರೆಯಲಾಗುವುದು. ಪ್ರಕೃತದಲ್ಲಿ ಈ ಜ್ಞಾನವು ಪ್ರಮಾಣವೋ ಅಲ್ಲವೋ ಎಂಬ ಸಂದೇಹ ಬಂದಾಗ ಪ್ರಾಮಾಣ್ಯ ಮತ್ತು ಪ್ರಾಮಾಣ್ಯಾಭಾವ ಎರಡು ಕೋಟಿಗಳು. ಇವುಗಳಲ್ಲಿ ಅಪ್ರಾಮಾಣ್ಯಕೋಟಿಯು ಜ್ಞಾನದಲ್ಲಿ ಇರಲು ದೋಷಗಳು ಕಾರಣ. ದೋಷವಿಲ್ಲವೆಂದು ನಿರ್ಧಾರವಾದಾಗ ಈ ಕೋಟಿಗೆ ಅವಕಾಶವಿರುವುದಿಲ್ಲ. ಆದ್ದರಿಂದ ಜ್ಞಾನವು ಪ್ರಮಾಣ ಎಂಬ ಒಂದೇ ಕೋಟಿಯನ್ನು ಸಾಕ್ಷಿಯು ನಿರ್ಣಯಿಸುತ್ತದೆ.

ಮೇಲಿನ ಶ್ಲೋಕದ ಒಟ್ಟು ನಿರ್ಧಾರವನ್ನು ಅನುಮಾನದ ಮೂಲಕ ವ್ಯಾಖ್ಯಾನದಲ್ಲಿ ಸಂಗ್ರಹಿಸಲಾಗಿದೆ.

ಅನಭ್ಯಾಸದಶಾಪನ್ನ ಸಮೀಪಸ್ಥಾರ್ಥವಿಷಯಕಜ್ಞಾನಪ್ರಾಮಾಣ್ಯಂ (ಪಕ್ಷ) ಸಾಕ್ಷಿಣೈವ ಪ್ರತೀಯತೇ (ಸಾಧ್ಯ) ಸಾಕ್ಷೀತರನಿರ್ಣಾಯಕಾಭಾವೇ ಸತಿ ನಿರ್ಣೀಯಮಾನತ್ವಾತ್ (ಹೇತು) ಘಟತ್ವಪ್ರಕಾರಕತ್ವವತ್ (ದೃಷ್ಟಾಂತ)

ಅಯಂ ಘಟಃ ಎಂಬ ಜ್ಞಾನವು ಘಟತ್ವಪ್ರಕಾರಕ. ಆ ಜ್ಞಾನದಲ್ಲಿ ಘಟತ್ವಪ್ರಕಾರಕತ್ವ ಇದೆ. ಅದನ್ನು ಜ್ಞಾನಗ್ರಾಹಕವಾದ ಸಾಕ್ಷಿಯು ನಿರ್ಣಯಿಸುತ್ತದೆ. ಅದರಂತೆ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ಕೂಡಾ ಸಾಕ್ಷಿಯೇ ನಿರ್ಣಯಿಸುತ್ತದೆ. ಏಕೆಂದರೆ ಪ್ರಾಮಾಣ್ಯಯನಿಶ್ಚಯವಾಗುವುದು ಅನುಭವಸಿದ್ಧ. ಆದರೆ ಅದನ್ನು ನಿರ್ಣಯಿಸಲು ಸಾಕ್ಷಿಯನ್ನು ಬಿಟ್ಟರೆ ಬೇರೆ ಯಾವ ಆಧಾರಗಳೂ ಇಲ್ಲ. ಆದ್ದರಿಂದ ಸಾಕ್ಷಿಯೇ ಅದನ್ನು ನಿರ್ಧರಿಸಬೇಕು.

ಈ ಅನುಮಾನದಲ್ಲಿ ಜ್ಞಾನಕ್ಕೆ ಎರಡು ವಿಶೇಷಣಗಳನ್ನು ಕೊಡಲಾಗಿದೆ.

೧. ಅನಭ್ಯಾಸದಶಾಪನ್ನ

೨. ಸಮೀಪಸ್ಥ ಅರ್ಥವಿಷಯಕಂ

ಒಂದೇ ವಸ್ತುವಿನ ಜ್ಞಾನವು ಅನೇಕಬಾರಿ ಬಂದಾಗ ಎರಡನೆಯ ಬಾರಿ ಬಂದಿರುವ ಜ್ಞಾನದಲ್ಲಿ ಪ್ರಾಮಾಣ್ಯವನ್ನು ನಿರ್ಧರಿಸಲು ಸಾಕ್ಷಿಯಲ್ಲದ ಆಧಾರವನ್ನು ಹೇಳಬಹುದು.

ಮೊದಲನೆಯ ಜ್ಞಾನವು ಪ್ರಮಾಣ ಎಂದು ನಿರ್ಧಾರವಾಗಿರುವುದರಿಂದ ಅದರಂತಿರುವ ಎರಡನೆಯ ಜ್ಞಾನವೂ ಪ್ರಮಾಣ ಎಂದು ಅಲ್ಲಿ ನಿರ್ಧರಿಸಬಹುದು. ಆದರೆ ಮೊದಲನೆಯ ಜ್ಞಾನದಲ್ಲಿ ಪ್ರಾಮಾಣ್ಯವನ್ನು ನಿರ್ಧರಿಸುವುದು ಹೇಗೆ ? ಅದು ಸಾಕ್ಷಿಯಿಂದಲೇ ಆಗಬೇಕು. ಈ ಅಂಶವನ್ನು ತಿಳಿಸುವುದಕ್ಕಾಗಿ ಮೊದಲ ವಿಶೇಷಣ.

2. ದೂರದಲ್ಲಿ ವಸ್ತು ಇದ್ದರೆ ಅದರ ಜ್ಞಾನ ದೋಷಜನ್ಯವಾದ ಕಾರಣ ಸಾಕ್ಷಿಯು ಪ್ರತಿಬದ್ಧವಾಗಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅದಕ್ಕಾಗಿ, ಸಮೀಪದ ಅರ್ಥವನ್ನು ವಿಷಯೀಕರಿಸುವ, ಎಂಬ ವಿಶೇಷಣವನ್ನು ಕೊಡಲಾಗಿದೆ.

ಅನಭ್ಯಾಸದಶಾದಲ್ಲಿ (ಹೊಸದಾಗಿ ವಸ್ತುವನ್ನು ನೋಡಿದಾಗ) ಜ್ಞಾನ ಪ್ರಾಮಾಣ್ಯವು ಪರತಃ ತಿಳಿಯಲ್ಪಡುತ್ತದೆ. ಏಕೆಂದರೆ, ಅಂತಹ ಜ್ಞಾನಪ್ರಾಮಾಣ್ಯದಲ್ಲಿ ಸಂದೇಹವಿರುವುದರಿಂದ ಅದು ಸಾಕ್ಷಿಗ್ರಾಹ್ಯವಲ್ಲ ಎಂಬ ತಾರ್ಕಿಕರ ಈ ಆಕ್ಷೇಪಕ್ಕೆ ಮುಂದಿನ ಶ್ಲೋಕದಲ್ಲಿ ಉತ್ತರವಿದೆ.

ಅತಃ ಸಾಂಶಯಿಕತ್ವಾಖ್ಯಹೇತೋರೇತಾದೃಶಸ್ಥಲೇ ।
ಅಸಿದ್ಧತ್ವಾನ್ನ ಮಾನತ್ವಪರತಸ್ತ್ವಪ್ರಸಾಧಕಃ ॥ ೩೨೭ ॥

**ಅರ್ಥ–** ಅತಃ = ಆದ್ದರಿಂದ, ಏತಾದೃಶಸ್ಥಲೇ = ಸಮೀಪಸ್ಥವಸ್ತುದರ್ಶನಸ್ಥಳದಲ್ಲಿ, ಸಾಂಶಯಿಕತ್ವಾಖ್ಯಹೇತೋಃ = ತಾರ್ಕಿಕರ ಅನುಮಾನದ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂಬ ಹೇತುವಿಗೆ, ಅಸಿದ್ಧತ್ವಾತ್= ಅಸಿದ್ಧಿ ಎಂಬ ದೋಷ ಇರುವ ಕಾರಣ (ಸಃ) ಆ ಹೇತುವು, ಮಾನತ್ವಪರತಸ್ತ್ವಪ್ರಸಾಧಕಃ ನ = ಪ್ರಾಮಾಣ್ಯಪರತಸ್ತ್ವಸಾಧಕವಲ್ಲ.

**ಅನುವಾದ–** ಇದುವರೆಗೆ ಹೇಳಿದಂತೆ ಸಮೀಪದಲ್ಲಿ ಹೊಸದಾಗಿ ವಸ್ತುವನ್ನು ನೋಡಿದಾಗಲೂ ಜ್ಞಾನಪ್ರಾಮಾಣ್ಯದ ಬಗ್ಗೆ ಸಂದೇಹವಿಲ್ಲದಿರುವ ಕಾರಣ ತಾರ್ಕಿಕರು ಹೇಳುವ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂಬ ಹೇತುವು ಅಸಿದ್ಧವಾಗಿದೆ. ಆದ್ದರಿಂದ ದುಷ್ಟವಾದ ಆ ಹೇತುವು ಪ್ರಾಮಾಣ್ಯ ಪರತಸ್ತ್ವಸಾಧಕವಾಗುವುದಿಲ್ಲ.

**ಭಾವವಿಲಾಸಿನೀ–** ನನ್ವಸ್ತೂಕ್ತಸ್ಥಲೇ ಸಾಕ್ಷಿಣೈವ ಪ್ರಾಮಾಣ್ಯಾವಧಾರಣಮ್ । ತಥಾಪಿ ಅನಭ್ಯಾಸದಶಾಪನ್ನಜ್ಞಾನಪ್ರಾಮಾಣ್ಯಂ ಪರತೋ ಜ್ಞಾಯತೇ ಸಾಂಶಯಿಕತ್ವಾದಪ್ರಾಮಾಣ್ಯವದಿತಿ ಪರೋಕ್ತಪ್ರತಿಪಕ್ಷಾನುಮಾನಸ್ಯ ಕಿಂ ದೂಷಣಮಿತ್ಯತ ಆಹ – ಅತ ಇತಿ ॥ ಅತೋಽಸ್ಮದುಕ್ತೇಷು ಸಾಕ್ಷಿಣಾ ನಿರ್ಣೀತೇಷು ಸಮೀಪಸ್ಥಪದಾರ್ಥವಿಷಯಕಾನಭ್ಯಾಸದಶಾಪನ್ನಜ್ಞಾನಪ್ರಾಮಾಣ್ಯೇಷು ಸಂಶಯಾಭಾವಾದ್ ಏತಾದೃಶಸ್ಥಲೇ ಸಾಂಶಯಿಕತ್ವಹೇತೋರಸಿದ್ಧೇಸ್ತಜ್ಜ್ಞಾನಪ್ರಾಮಾಣ್ಯಪರತಸ್ತ್ವಸಾಧಕೋ ನೇತಿ ಸಂಬಂಧಃ ॥ ೩೨೭ ॥

**ವಿವರಣೆ—** ತಾರ್ಕಿಕರು ಪ್ರಾಮಾಣ್ಯಂ ಪರತಃ ಎನ್ನುತ್ತಾರೆ. ಜ್ಞಾನವು ಮನಸ್ಸಿನಿಂದ ಗ್ರಾಹ್ಯ. ಪ್ರಾಮಾಣ್ಯವು ಸಫಲಪ್ರವೃತ್ತಿಜನಕತ್ವಲಿಂಗದಿಂದ ತಿಳಿಯಲ್ಪಡುತ್ತದೆ ಎಂದು ಅವರ ವಾದ. ಇದಕ್ಕೆ ಅವರು ಕೊಡುವ ಕಾರಣ - ಪ್ರತಿದಿನ ನಾವು ನೋಡುವ ವಸ್ತುಗಳ ಬಗ್ಗೆ ಸಂದೇಹ ಬಾರದಿದ್ದರೂ ಹೊಸದಾಗಿ ಒಂದು ವಸ್ತುವನ್ನು ನೋಡಿದಾಗ ಸಂದೇಹ ಬರುತ್ತದೆ. ಪ್ರಮಾಣ್ಯನಿಶ್ಚಿತವಾದರೆ ಸಂದೇಹ ಬರಲು ಸಾಧ್ಯವಿಲ್ಲ. ಸಂದೇಹ ಬರುವುದರಿಂದ ಪ್ರಾಮಾಣ್ಯವು ತಿಳಿದಿಲ್ಲ ಎಂದೇ ಅರ್ಥ. ಆದ್ದರಿಂದ ಪ್ರಾಮಾಣ್ಯಂ ಸ್ವತಃ ಎಂದು ಹೇಳುವುದು ಸರಿಯಲ್ಲ. ಅವರು ಮಾಡುವ ಅನುಮಾನಪ್ರಯೋಗ ಹೀಗೆ - ಪ್ರಾಮಾಣ್ಯಂ ಪರತೋ ಜ್ಞಾಯತೇ, ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್.

ಇದಕ್ಕೆ ನಮ್ಮ ಉತ್ತರ. ಇದು ಸರಿಯಲ್ಲ. ಇದುವರೆಗೆ ಹೇಳಿದಂತೆ ಹೊಸದಾದ ವಸ್ತುವನ್ನು ಸಮೀಪದಿಂದ ನೋಡಿದಾಗ ಸಂದೇಹ ಬರುವುದಿಲ್ಲ. ಅಂತಹ ಜ್ಞಾನದ ಪ್ರಾಮಾಣ್ಯದಲ್ಲಿ ಸಾಂಶಯಿಕತ್ವರೂಪವಾದ ಹೇತು ಇಲ್ಲ. ಆದ್ದರಿಂದ ಅನುಮಾನಕ್ಕೆ ಅಸಿದ್ಧಿರೂಪವಾದ ದೋಷವಿರುವುದರಿಂದ ಅವರ ಅನುಮಾನ ದುಷ್ಟವಾಗಿದೆ.

ಹಾಗಾದರೆ ದೂರದಲ್ಲಿ ನೀರನ್ನು ಕಂಡಾಗ ನೀರಿದೆಯೋ ಇಲ್ಲವೋ, ಎಂಬ ಸಂದೇಹ ಏಕೆ ಬರುತ್ತದೆ ಎಂಬ ಪ್ರಶ್ನೆಗೆ ಮುಂದಿನ ಶ್ಲೋಕದಲ್ಲಿ ಉತ್ತರವನ್ನು ಹೇಳುತ್ತಾರೆ.

**ದೂರಸ್ಥೇ ಸಂಶಯೋಽಪ್ಯಸ್ತಿ ದೋಷಶ್ಚ ಭ್ರಮಕಾರಣಮ್ ।**
**ಯತೋಽಣುತ್ವಭ್ರಮೋ ನೃಣಾಂ ಮಹತ್ಯರ್ಥೇಽಪಿ ಜಾಯತೇ ॥ ೩.೨೮ ॥**

**ಅರ್ಥ—** ದೂರಸ್ಥೇ = ದೂರದಲ್ಲಿರುವ ವಸ್ತುವಿನ ಬಗ್ಗೆ, ಸಂಶಯಃ = ಸಂದೇಹವು, ಅಸ್ತಿ = ಇದೆ, ಭ್ರಮಕಾರಣಂ = ಭ್ರಮೆಗೆ ಕಾರಣವಾದ, ದೋಷಶ್ಚ = ದೋಷವೂ ಕೂಡ, ಅಸ್ತಿ = ಇದೆ. ಯತಃ = ದೂರಸ್ಥತ್ವವು ಏಕೆ ದೋಷವೆಂದರೆ, ನೃಣಾಂ = ಮನುಷ್ಯರಿಗೆ, ಮಹತ್ಯರ್ಥೇ ಅಪಿ = (ದೂರದಲ್ಲಿರುವ) ದೊಡ್ಡಗಾತ್ರದ ವಸ್ತುವಿನಲ್ಲೂ, ಅಣುತ್ವಭ್ರಮಃ = ಇದು ಚಿಕ್ಕದಾಗಿದೆ ಎಂಬ ಭ್ರಾಂತಿಯು, ಜಾಯತೇ = ಹುಟ್ಟುತ್ತದೆ. ಅತಃ = ಆದ್ದರಿಂದ, ದೂರಸ್ಥತ್ವಂ = ದೂರದಲ್ಲಿರುವಿಕೆಯು, ದೋಷಃ= ದೋಷವು.

**ಅನುವಾದ— ದೂರದಲ್ಲಿರುವ ವಸ್ತುವಿನ ಬಗ್ಗೆ ಸಂದೇಹವೂ, ಅದಕ್ಕೆ ಕಾರಣವಾದ ದೋಷವೂ ಇದೆ. ದೂರಸ್ಥತ್ವವು ಏಕೆ ದೋಷವೆಂದರೆ, ಮನುಷ್ಯರಿಗೆ ದೂರದಲ್ಲಿರುವ ದೊಡ್ಡವಸ್ತುವೂ ಚಿಕ್ಕದಾಗಿ ಕಾಣುತ್ತದೆ.**

**ಭಾವವಿಲಾಸಿನೀ—** ಕಥಂ ತರ್ಹಿ ದೂರಸ್ಥಜಲಾದಿಜ್ಞಾನಪ್ರಾಮಾಣ್ಯೇ ಸಂಶಯ ಇತ್ಯತಸ್ತದು-ಪಪಾದಯತಿ – **ದೂರಸ್ಥ ಇತಿ** ॥ ದೂರಸ್ಥವಸ್ತುವಿಷಯಕಾನಭ್ಯಾಸದಶಾ- ಪನ್ನಜ್ಞಾನಪ್ರಾಮಾಣ್ಯೇ ಯತಃ ಭ್ರಮಕಾರಣದೂರಸ್ಥತ್ವಲಕ್ಷಣದೋಷೋಽಸ್ತಿ । ಚಶಬ್ದೇನ ದೋಷಪ್ರತಿರೋಧ-

ಮೊದಲನೆಯ ಜ್ಞಾನವು ಪ್ರಮಾಣ ಎಂದು ನಿರ್ಧಾರವಾಗಿರುವುದರಿಂದ ಅದರಂತಿರುವ ಎರಡನೆಯ ಜ್ಞಾನವೂ ಪ್ರಮಾಣ ಎಂದು ಅಲ್ಲಿ ನಿರ್ಧರಿಸಬಹುದು. ಆದರೆ ಮೊದಲನೆಯ ಜ್ಞಾನದಲ್ಲಿ ಪ್ರಾಮಾಣ್ಯವನ್ನು ನಿರ್ಧರಿಸುವುದು ಹೇಗೆ ? ಅದು ಸಾಕ್ಷಿಯಿಂದಲೇ ಆಗಬೇಕು. ಈ ಅಂಶವನ್ನು ತಿಳಿಸುವುದಕ್ಕಾಗಿ ಮೊದಲ ವಿಶೇಷಣ.

2. ದೂರದಲ್ಲಿ ವಸ್ತು ಇದ್ದರೆ ಅದರ ಜ್ಞಾನ ದೋಷಜನ್ಯವಾದ ಕಾರಣ ಸಾಕ್ಷಿಯು ಪ್ರತಿಬದ್ಧವಾಗಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಆದಕ್ಕಾಗಿ, ಸಮೀಪದ ಅರ್ಥವನ್ನು ವಿಷಯೀಕರಿಸುವ, ಎಂಬ ವಿಶೇಷಣವನ್ನು ಕೊಡಲಾಗಿದೆ.

ಅನಭ್ಯಾಸದಶಾದಲ್ಲಿ (ಹೊಸದಾಗಿ ವಸ್ತುವನ್ನು ನೋಡಿದಾಗ) ಜ್ಞಾನ ಪ್ರಾಮಾಣ್ಯವು ಪರತಃ ತಿಳಿಯಲ್ಪಡುತ್ತದೆ. ಏಕೆಂದರೆ, ಅಂತಹ ಜ್ಞಾನಪ್ರಾಮಾಣ್ಯದಲ್ಲಿ ಸಂದೇಹವಿರುವುದರಿಂದ ಅದು ಸಾಕ್ಷಿಗ್ರಾಹ್ಯವಲ್ಲ ಎಂಬ ತಾರ್ಕಿಕರ ಈ ಆಕ್ಷೇಪಕ್ಕೆ ಮುಂದಿನ ಶ್ಲೋಕದಲ್ಲಿ ಉತ್ತರವಿದೆ.

**ಅತಃ ಸಾಂಶಯಿಕತ್ವಾಖ್ಯಹೇತೋರೇತಾದೃಶಸ್ಥಲೇ ।**
**ಅಸಿದ್ಧತ್ವಾನ್ನ ಮಾನತ್ವಪರತಸ್ತ್ವಪ್ರಸಾಧಕಃ ॥ ೩೨೮ ॥**

**ಅರ್ಥ–** ಅತಃ = ಆದ್ದರಿಂದ, ಏತಾದೃಶಸ್ಥಲೇ = ಸಮೀಪಸ್ಥವಸ್ತುದರ್ಶನಸ್ಥಳದಲ್ಲಿ, ಸಾಂಶಯಿಕತ್ವಾಖ್ಯಹೇತೋಃ = ತಾರ್ಕಿಕರ ಅನುಮಾನದ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂಬ ಹೇತುವಿಗೆ, ಅಸಿದ್ಧತ್ವಾತ್= ಅಸಿದ್ಧಿ ಎಂಬ ದೋಷ ಇರುವ ಕಾರಣ (ಸಃ) ಆ ಹೇತುವು, ಮಾನತ್ವಪರತಸ್ತ್ವಪ್ರಸಾಧಕಃ ನ = ಪ್ರಾಮಾಣ್ಯಪರತಸ್ತ್ವಸಾಧಕವಲ್ಲ.

**ಅನುವಾದ–** ಇದುವರೆಗೆ ಹೇಳಿದಂತೆ ಸಮೀಪದಲ್ಲಿ ಹೊಸದಾಗಿ ವಸ್ತುವನ್ನು ನೋಡಿದಾಗಲೂ ಜ್ಞಾನಪ್ರಾಮಾಣ್ಯದ ಬಗ್ಗೆ ಸಂದೇಹವಿಲ್ಲದಿರುವ ಕಾರಣ ತಾರ್ಕಿಕರು ಹೇಳುವ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂಬ ಹೇತುವು ಅಸಿದ್ಧವಾಗಿದೆ. ಆದ್ದರಿಂದ ದುಷ್ಟವಾದ ಆ ಹೇತುವು ಪ್ರಾಮಾಣ್ಯ ಪರತಸ್ತ್ವಸಾಧಕವಾಗುವುದಿಲ್ಲ.

**ಭಾವವಿಲಾಸಿನೀ–** ನನ್ವಸ್ಮೂಕ್ತಸ್ಥಲೇ ಸಾಕ್ಷಿಣೈವ ಪ್ರಾಮಾಣ್ಯಾವಧಾರಣಮ್ । ತಥಾಪಿ ಅನಭ್ಯಾಸದಶಾಪನ್ನಜ್ಞಾನಪ್ರಾಮಾಣ್ಯಂ ಪರತೋ ಜ್ಞಾಯತೇ ಸಾಂಶಯಿಕತ್ವಾದಪ್ರಾಮಾಣ್ಯವದಿತಿ ಪರೋಕ್ತಪ್ರತಿಪಕ್ಷಾನುಮಾನಸ್ಯ ಕಿಂ ದೂಷಣಮಿತ್ಯತ ಆಹ – ಅತ ಇತಿ ॥ ಅತೋಽಸ್ಮದುಕ್ತೇಷು ಸಾಕ್ಷಿಣಾ ನಿರ್ಣೀತೇಷು ಸಮೀಪಸ್ಥಪದಾರ್ಥವಿಷಯಕಾನಭ್ಯಾಸದಶಾಪನ್ನಜ್ಞಾನಪ್ರಾಮಾಣ್ಯೇಷು ಸಂಶಯಾಭಾವಾದ್ ಏತಾದೃಶಸ್ಥಲೇ ಸಾಂಶಯಿಕತ್ವಹೇತೋರಸಿದ್ಧೇಸ್ತಜ್ಜ್ಞಾನಪ್ರಾಮಾಣ್ಯಪರತಸ್ತ್ವಸಾಧಕೋ ನೇತಿ ಸಂಬಂಧಃ ॥ ೩೨೮ ॥

**ವಿವರಣೆ–** ತಾರ್ಕಿಕರು ಪ್ರಾಮಾಣ್ಯಂ ಪರತಃ ಎನ್ನುತ್ತಾರೆ. ಜ್ಞಾನವು ಮನಸ್ಸಿನಿಂದ ಗ್ರಾಹ್ಯ. ಪ್ರಾಮಾಣ್ಯವು ಸಫಲಪ್ರವೃತ್ತಿಜನಕತ್ವಲಿಂಗದಿಂದ ತಿಳಿಯಲ್ಪಡುತ್ತದೆ ಎಂದು ಅವರ ವಾದ. ಇದಕ್ಕೆ ಅವರು ಕೊಡುವ ಕಾರಣ - ಪ್ರತಿದಿನ ನಾವು ನೋಡುವ ವಸ್ತುಗಳ ಬಗ್ಗೆ ಸಂದೇಹ ಬಾರದಿದ್ದರೂ ಹೊಸದಾಗಿ ಒಂದು ವಸ್ತುವನ್ನು ನೋಡಿದಾಗ ಸಂದೇಹ ಬರುತ್ತದೆ. ಪ್ರಮಾಣ್ಯನಿಶ್ಚಿತವಾದರೆ ಸಂದೇಹ ಬರಲು ಸಾಧ್ಯವಿಲ್ಲ. ಸಂದೇಹ ಬರುವುದರಿಂದ ಪ್ರಾಮಾಣ್ಯವು ತಿಳಿದಿಲ್ಲ ಎಂದೇ ಅರ್ಥ. ಆದ್ದರಿಂದ ಪ್ರಾಮಾಣ್ಯಂ ಸ್ವತಃ ಎಂದು ಹೇಳುವುದು ಸರಿಯಲ್ಲ. ಅವರು ಮಾಡುವ ಅನುಮಾನಪ್ರಯೋಗ ಹೀಗೆ - ಪ್ರಾಮಾಣ್ಯಂ ಪರತೋ ಜ್ಞಾಯತೇ, ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್.

ಇದಕ್ಕೆ ನಮ್ಮ ಉತ್ತರ. ಇದು ಸರಿಯಲ್ಲ. ಇದುವರೆಗೆ ಹೇಳಿದಂತೆ ಹೊಸದಾದ ವಸ್ತುವನ್ನು ಸಮೀಪದಿಂದ ನೋಡಿದಾಗ ಸಂದೇಹ ಬರುವುದಿಲ್ಲ. ಅಂತಹ ಜ್ಞಾನದ ಪ್ರಾಮಾಣ್ಯದಲ್ಲಿ ಸಾಂಶಯಿಕತ್ವರೂಪವಾದ ಹೇತು ಇಲ್ಲ. ಆದ್ದರಿಂದ ಅನುಮಾನಕ್ಕೆ ಅಸಿದ್ಧಿರೂಪವಾದ ದೋಷವಿರುವುದರಿಂದ ಅವರ ಅನುಮಾನ ದುಷ್ಟವಾಗಿದೆ.

ಹಾಗಾದರೆ ದೂರದಲ್ಲಿ ನೀರನ್ನು ಕಂಡಾಗ ನೀರಿದೆಯೋ ಇಲ್ಲವೋ, ಎಂಬ ಸಂದೇಹ ಏಕೆ ಬರುತ್ತದೆ ಎಂಬ ಪ್ರಶ್ನೆಗೆ ಮುಂದಿನ ಶ್ಲೋಕದಲ್ಲಿ ಉತ್ತರವನ್ನು ಹೇಳುತ್ತಾರೆ.

**ದೂರಸ್ಥೇ ಸಂಶಯೋಽಪ್ಯಸ್ತಿ ದೋಷಶ್ಚ ಭ್ರಮಕಾರಣಮ್ ।**
**ಯತೋಽಣುತ್ವಭ್ರಮೋ ನೃಣಾಂ ಮಹತ್ಯರ್ಥೇಽಪಿ ಜಾಯತೇ ॥ ೩.೨೮ ॥**

**ಅರ್ಥ–** ದೂರಸ್ಥೇ = ದೂರದಲ್ಲಿರುವ ವಸ್ತುವಿನ ಬಗ್ಗೆ, ಸಂಶಯಃ = ಸಂದೇಹವು, ಅಸ್ತಿ = ಇದೆ, ಭ್ರಮಕಾರಣಂ = ಭ್ರಮೆಗೆ ಕಾರಣವಾದ, ದೋಷಶ್ಚ = ದೋಷವೂ ಕೂಡ, ಅಸ್ತಿ = ಇದೆ. ಯತಃ = ದೂರಸ್ಥತ್ವವು ಏಕೆ ದೋಷವೆಂದರೆ, ನೃಣಾಂ = ಮನುಷ್ಯರಿಗೆ, ಮಹತ್ಯರ್ಥೇ ಅಪಿ = (ದೂರದಲ್ಲಿರುವ) ದೊಡ್ಡಗಾತ್ರದ ವಸ್ತುವಿನಲ್ಲೂ, ಅಣುತ್ವಭ್ರಮಃ = ಇದು ಚಿಕ್ಕದಾಗಿದೆ ಎಂಬ ಭ್ರಾಂತಿಯು, ಜಾಯತೇ = ಹುಟ್ಟುತ್ತದೆ. ಅತಃ = ಆದ್ದರಿಂದ, ದೂರಸ್ಥತ್ವಂ = ದೂರದಲ್ಲಿರುವಿಕೆಯು, ದೋಷಃ= ದೋಷವು.

**ಅನುವಾದ–** ದೂರದಲ್ಲಿರುವ ವಸ್ತುವಿನ ಬಗ್ಗೆ ಸಂದೇಹವೂ, ಅದಕ್ಕೆ ಕಾರಣವಾದ ದೋಷವೂ ಇದೆ. ದೂರಸ್ಥತ್ವವು ಏಕೆ ದೋಷವೆಂದರೆ, ಮನುಷ್ಯರಿಗೆ ದೂರದಲ್ಲಿರುವ ದೊಡ್ಡವಸ್ತುವೂ ಚಿಕ್ಕದಾಗಿ ಕಾಣುತ್ತದೆ.

**ಭಾವವಿಲಾಸಿನೀ–** ಕಥಂ ತರ್ಹಿ ದೂರಸ್ಥಜಲಾದಿಜ್ಞಾನಪ್ರಾಮಾಣ್ಯೇ ಸಂಶಯ ಇತ್ಯತಸ್ತದು- ಪಪಾದಯತಿ – **ದೂರಸ್ಥ ಇತಿ** ॥ ದೂರಸ್ಥವಸ್ತುವಿಷಯಕಾನಭ್ಯಾಸದಶಾ- ಪನ್ನಜ್ಞಾನಪ್ರಾಮಾಣ್ಯೇ ಯತಃ ಭ್ರಮಕಾರಣದೂರಸ್ಥತ್ವಲಕ್ಷಣದೋಷೋಽಸ್ತಿ । ಚಶಬ್ದೇನ ದೋಷಪ್ರತಿರೋಧ-

**ನಿರ್ಣಾಯಕ ಸಾಕ್ಷ್ಯಭಾವಂ ಸಮುಚ್ಚಿನೋತಿ । ಅತಃ ಸಂಶಯೋऽಪ್ಯಸ್ತೀತಿಸಂಬಂಧಃ । ದೂರಸ್ಥತ್ವಸ್ಯ ದೋಷತಾಮುಪಪಾದಯತಿ – ಯತ ಇತಿ ॥ ಯತೋ ದೂರಸ್ಥೇ ಮಹತ್ಯ-ಪ್ಯರ್ಥೇऽಣುತ್ವಭ್ರಮೋ ಜಾಯತೇ । ಅತೋ ಭ್ರಮಕಾರಣತ್ವಾದ್ದೂರತ್ವಂ ದೋಷ ಇತಿ ದೋಷಪದಸ್ಯಾವೃತ್ತ್ಯಾऽನ್ವಯಃ ॥ ೩೨೮ ॥**

**ವಿವರಣೆ–** ಪ್ರಾಮಾಣ್ಯವು ಸಾಕ್ಷಿಯಿಂದಲೇ ಗ್ರಹಿಸಲ್ಪಡುತ್ತದೆ ಎಂದು ನಾವು ಹೇಳಿದರೂ ಅದು ಎಲ್ಲ ಸಂದರ್ಭದಲ್ಲೂ ಸಾಕ್ಷಿಗ್ರಾಹ್ಯ ಎಂದೇನೂ ನಾವು ಹೇಳುವುದಿಲ್ಲ. ದೋಷವಿದ್ದಾಗ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸುತ್ತದೆ. ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ಹಿಂದೆಯೇ ಹೇಳಲಾಗಿದೆ. ವಸ್ತುವು ದೂರದಲ್ಲಿರುವುದು ಒಂದು ದೋಷ. ಏಕೆಂದರೆ, ದೂರದಲ್ಲಿದ್ದಾಗ ದೊಡ್ಡದಾಗಿರುವ ವಸ್ತುವೂ ಚಿಕ್ಕದಾಗಿ ಕಾಣುತ್ತದೆ. ಹೀಗೆ, ಭ್ರಾಂತಿಗೆ ಕಾರಣವಾದುದರಿಂದ ದೂರಸ್ಥತ್ವವು ದೋಷವಾಗಿದೆ. ಅಂತಹ ದೋಷವಿರುವ ಕಾರಣ ಸಾಕ್ಷಿಯು ಜ್ಞಾನವನ್ನು ಮಾತ್ರ ಗ್ರಹಿಸಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಹೀಗಾಗಿ ಸಂದೇಹ ಬರುತ್ತದೆ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಶ್ಲೋಕದಲ್ಲಿ ದೋಷ ಶಬ್ದವು ಒಂದೇ ಬಾರಿ ಪಠಿತವಾಗಿದೆ. ಅದನ್ನು ಆವೃತ್ತಿಮಾಡಿಕೊಳ್ಳಬೇಕು. ಅದನ್ನು ಉತ್ತರಾರ್ಧದಲ್ಲಿ ಸೇರಿಸಿಕೊಂಡು ಅತಃ ದೂರಸ್ಥತ್ವಂ ದೋಷಃ ಎಂದು ವಾಕ್ಯವನ್ನು ಪೂರ್ಣಗೊಳಿಸಬೇಕು.

ದೋಷವಿರುವುದರಿಂದ ಏನಾಗುತ್ತದೆ ಎಂಬುದನ್ನು ಮುಂದಿನ ಶ್ಲೋಕದಲ್ಲಿ ತಿಳಿಸಲಾಗಿದೆ.

**ತತ್ರ ತದ್ದೋಷರೋಧೇನ ಪ್ರಾಮಾಣ್ಯಂ ಪ್ರಾಙ್ನ ಗೃಹ್ಯತೇ ॥ ೩೨೯ ॥**

**ಅರ್ಥ–** ತತ್ರ = ದೂರಸ್ಥವಸ್ತುವಿನ ಜ್ಞಾನದಲ್ಲಿ, ತದ್ದೋಷರೋಧೇನ = ದೂರಸ್ಥತ್ವ ಎಂಬ ದೋಷದ ಪ್ರತಿಬಂಧವಿರುವ ಕಾರಣದಿಂದಾಗಿ, ಪ್ರಾಕ್ = ಮೊದಲು (ಜ್ಞಾನಬಂದಕೂಡಲೇ), ಪ್ರಾಮಾಣ್ಯಂ = ಪ್ರಾಮಾಣ್ಯವು, ನ ಗೃಹ್ಯತೇ = ಸಾಕ್ಷಿಯಿಂದ ಗ್ರಹಿಸಲ್ಪಡುವುದಿಲ್ಲ.

**ಅನುವಾದ–** ದೂರಸ್ಥವಸ್ತುವಿನ ಜ್ಞಾನದಲ್ಲಿ ದೋಷದ ತಡೆಯಿಂದಾಗಿ ಜ್ಞಾನಬಂದಕೂಡಲೇ ಅದರ ಪ್ರಾಮಾಣ್ಯವು ಗ್ರಹಿಸಲ್ಪಡುವುದಿಲ್ಲ.

**ಭಾವವಿಲಾಸಿನೀ– ದೋಷಸತ್ತ್ವೇऽಪಿ ಕುತೋ ನ ನಿರ್ಣಯ ಇತ್ಯತ ಆಹ – ತತ್ರೇತಿ ॥ ತತ್ರ ದೂರಸ್ಥಜಲಜ್ಞಾನೇ ತದ್ದೋಷರೋಧೇನ ದೂರತ್ವಾಖ್ಯದೋಷರೋಧೇನ ಪ್ರಾಕ್ಪ್ರವೃತ್ತೇಃ ಪೂರ್ವಂ ಪ್ರಾಮಾಣ್ಯಂ ನ ಗೃಹ್ಯತೇ । ಸಾಕ್ಷಿಣಾ ನ ನಿಶ್ಚೀಯತ ಇತ್ಯರ್ಥಃ ॥ ೩೨೯ ॥**

**ವಿವರಣೆ–** ದೂರದಲ್ಲಿ ಹೊಸದಾಗಿ ಒಂದು ವಸ್ತುವನ್ನು ನೋಡಿದಾಗ ದೋಷದ ತಡೆಯಿಂದಾಗಿ ಸಾಕ್ಷಿಯು ಪ್ರಾಮಾಣ್ಯವನ್ನು ಮೊದಲು ಗ್ರಹಿಸುವುದಿಲ್ಲ. ಹೀಗೆ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಣಯಿಸುವುದಿಲ್ಲವಾದ ಕಾರಣ ಸಂದೇಹವು ಬರುತ್ತದೆ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ತತ್ರ ಎಂದರೆ ದೂರದಲ್ಲಿರುವ ಜಲಜ್ಞಾನದಲ್ಲಿ ಎಂದು ಅರ್ಥ. ಪ್ರಾಕ್ ಎಂದರೆ ಪ್ರವೃತ್ತಿ ಆಗುವ ಮೊದಲು ಎಂದರ್ಥ. ಅಂತಹ ಸಂದರ್ಭದಲ್ಲಿ ಪ್ರವೃತ್ತಿ ಮಾಡಿ ನೀರು ದೊರಕಿದ ಅನಂತರವೇ ಪ್ರಾಮಾಣ್ಯವು ನಿರ್ಣಯಿಸಲ್ಪಡುತ್ತದೆ. ಅದಕ್ಕಿಂತ ಮೊದಲು ಪ್ರಾಮಾಣ್ಯನಿರ್ಧಾರವಾಗುವುದಿಲ್ಲ.

ದೂರಸ್ಥವಸ್ತುವಿನ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹವನ್ನು ಉತ್ತರ ಶ್ಲೋಕದಲ್ಲಿ ಸಮರ್ಥನೆ ಮಾಡುತ್ತಾರೆ-

**ವಿಶೇಷದರ್ಶನಾಭಾವಾದ್ ದ್ವಿಕೋಟಿಸ್ಮೃತಿಮಾನ್ ಜನಃ ।**
**ತದರ್ಥೀ ತತ್ರ ಸಂದಿಗ್ಧೇ ಮನಸಾ ನ ತು ಸಾಕ್ಷಿಣಾ ॥ ೩೩೦ ॥**

**ಅರ್ಥ–** ದ್ವಿಕೋಟಿಸ್ಮೃತಿಮಾನ್ = ಪ್ರಾಮಾಣ್ಯ-ಅಪ್ರಾಮಾಣ್ಯರೂಪವಾದ ಎರಡು ಕೋಟಿಗಳ ಸ್ಮರಣೆಯುಳ್ಳ, ಜನಃ = ವ್ಯಕ್ತಿಯು, ವಿಶೇಷದರ್ಶನಾಭಾವಾತ್ = ಅನ್ಯತರಕೋಟಿವ್ಯಾಪ್ಯವಾದ ಧರ್ಮದ ಜ್ಞಾನವು ಇಲ್ಲದಿರುವ ಕಾರಣ, ತದರ್ಥೀ ಸನ್ = ತನ್ನ ಮುಂದಿರುವ ವಸ್ತುವನ್ನು ಬಯಸಿದವನಾಗಿ, ತತ್ರ = ಆ ವಸ್ತುವಿನ ಬಗ್ಗೆ ಮನಸಾ = ಮನಸ್ಸಿನಿಂದ, ಸಂದಿಗ್ಧೇ = ಸಂದೇಹಪಡುತ್ತಾನೆ. ನ ತು ಸಾಕ್ಷಿಣಾ = ಸಾಕ್ಷಿಯಿಂದ ಈ ಸಂದೇಹವಿಲ್ಲ.

**ಅನುವಾದ–** ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಎಂಬ ಎರಡು ಕೋಟಿಗಳ ಸ್ಮರಣೆಯುಳ್ಳ ವ್ಯಕ್ತಿಯು ಒಂದು ಕೋಟಿಯ ನಿರ್ಣಾಯಕವಾದ ಪ್ರಮಾಣವಿಲ್ಲದಿರುವ ಕಾರಣದಿಂದಾಗಿ ನೀರುಬೇಕೆಂದು ಬಯಸಿ ತನಗೆ ಬಂದಿರುವ ನೀರಿನಜ್ಞಾನದಲ್ಲಿ ಸಂದೇಹಕ್ಕೊಳಗಾಗುತ್ತಾನೆ. ಈ ಜ್ಞಾನವು ಪ್ರಮಾಣವೋ ಅಪ್ರಮಾಣವೋ ಎಂದು ಸಂದೇಹವು ಬರುವುದು,ಮನಸ್ಸಿನಿಂದ ಸಾಕ್ಷಿಯಿಂದಲ್ಲ.

**ಭಾವವಿಲಾಸಿನೀ–** ತತ್ರ ಪ್ರಾಮಾಣ್ಯಸಂಶಯಮುಪಪಾದಯತಿ – **ವಿಶೇಷೇತಿ** ॥ ದ್ವಿಕೋಟೀ ಪ್ರಮಾತ್ವಾಪ್ರಮಾತ್ವೇ । ಏಕೈಕಕೋಟಿನಿರ್ಣಾಯಕವಿಶೇಷದರ್ಶನಾಭಾವಾದ್ ದ್ವಿಕೋಟಿಸ್ಮೃತಿಮಾನ್। ತದರ್ಥೀ ಜಲಾರ್ಥೀ ತತ್ರ ತಜ್ಜ್ಞಾನಪ್ರಾಮಾಣ್ಯೇ ಮನಸಾ ಕರಣೇನ ಸಂದಿಗ್ಧೇ ಇದಂ ಜ್ಞಾನಂ ಪ್ರಮಾ ನ ವೇತಿ ಸಂದೇಹಂ ಕುರುತೇ ॥ ೩೩೦ ॥

**ವಿವರಣೆ–** ಸಂದೇಹ ಬರುವ ಕ್ರಮ - ಮೊದಲು ಮುಂದೆ ಇರುವ ವಸ್ತುವಿನಲ್ಲಿ ಸಾಧಾರಣಧರ್ಮಜ್ಞಾನ. ಆಮೇಲೆ ಆದರಿಂದ ಕೋಟಿದ್ವಯ ಸ್ಮರಣೆ. ಅನಂತಹ

ಸಂದೇಹ. ಉದಾಹರಣೆಗೆ - ಕತ್ತಲಲ್ಲಿ ಕಂಬವನ್ನು ಕಂಡಾಗ ಅದರಲ್ಲಿ ಊರ್ಧ್ವತ್ವ ಎಂಬ ಸಾಮಾನ್ಯಧರ್ಮಜ್ಞಾನಬರುತ್ತದೆ. ಮನುಷ್ಯನಲ್ಲೂ, ಕಂಬದಲ್ಲೂ ಊರ್ಧ್ವತ್ವವು ಸಮಾನ ಧರ್ಮವಾದುದರಿಂದ, ಅಂತಹ ಧರ್ಮವನ್ನು ನೋಡಿದಾಗ ಎರಡೂ ಕೋಟಿಗಳ ಸ್ಮರಣೆ ಬರುತ್ತದೆ. ಎರಡರಲ್ಲಿ ಒಂದನ್ನು ನಿರ್ಣಯಿಸಲು ಬೇಕಾದ ಆಧಾರವನ್ನು ಕಾಣದಾದಾಗ ಇದು ಕಂಬವೋ, ಮನುಷ್ಯನೋ ಎಂಬ ಸಂದೇಹವುಂಟಾಗುತ್ತದೆ.

ಇದರಂತೆ ಪ್ರಕೃತದಲ್ಲಿ ಇದು ನೀರು ಎಂಬ ಜ್ಞಾನದ ಜ್ಞಾನ ಬಂದಾಗ ಆ ಜ್ಞಾನದಲ್ಲಿ ಜ್ಞಾನತ್ವ ಎಂಬ ಸಾಧಾರಣಧರ್ಮವು ಗ್ರಹಿಸಲ್ಪಡುತ್ತದೆ. ಆ ಜ್ಞಾನತ್ವವು ಪ್ರಮಾಣವಾದ ಜ್ಞಾನದಲ್ಲೂ, ಪ್ರಮಾಣವಲ್ಲದ ಜ್ಞಾನದಲ್ಲೂ ಸಮಾನವಾಗಿದೆ. ಅಂತಹ ಜ್ಞಾನತ್ವವು ಪ್ರಕೃತ ಜಲಜ್ಞಾನದಲ್ಲಿ ಗ್ರಹಿಸಲ್ಪಟ್ಟಾಗ ಜಲಜ್ಞಾನವು ಪ್ರಮಾಣವೋ, ಅಪ್ರಮಾಣವೋ ಎಂಬ ಸಂದೇಹ ಬರುತ್ತದೆ.

**ವಿಶೇಷ ವಿಚಾರ-** ವಿಶೇಷದರ್ಶನಾಭಾವಾತ್ - ವಿಶೇಷದರ್ಶನವೆಂದರೆ ಏಕಕೋಟಿಯನಿರ್ಣಯ. ಮನುಷ್ಯನೋ, ಕಂಬವೋ ಎಂಬ ಸಂದೇಹದಲ್ಲಿ ಎರಡು ಕೋಟಿಗಳಿವೆ. ಅವೆರಡರಲ್ಲಿ ಒಂದು ಕೋಟಿಯ ನಿರ್ಧಾರವಾದರೆ ಸಂದೇಹ ಬರುವುದಿಲ್ಲ. ಒಂದು ಕೋಟಿಯ ನಿರ್ಧಾರವೇ ವಿಶೇಷದರ್ಶನ.

2. ತದರ್ಥೀ - ನೀರನ್ನು ಬಯಸುವವನು

3. ತತ್ರ - ತಜ್ಞಾನಪ್ರಾಮಾಣ್ಯೇ - ತತ್ರ ಎಂದರೆ ದೂರದ ನೀರಿನ ಜ್ಞಾನದಲ್ಲಿರುವ ಪ್ರಾಮಾಣ್ಯದ ಬಗ್ಗೆ

**ಮನಸ್ಸು ಸಂದೇಹವನ್ನು ಹುಟ್ಟಿಸುತ್ತದೆ ಎನ್ನುವುದನ್ನು ಪ್ರಾಚೀನಪ್ರವಾದದಿಂದ ಮುಂದಿನ ಶ್ಲೋಕದಲ್ಲಿ ದೃಢೀಕರಿಸುತ್ತಾರೆ-**

**ವಿಕಲ್ಪರೂಪಂ ಹಿ ಮನೋ ಯತ ಆಹುಃ ಪುರಾತನಾಃ ।**
**ಯತಶ್ಚ ಸಂಶಯಃ ಸಾಕ್ಷಿವೇದ್ಯದುಃಖಸುಖೇಷು ನ ॥ ೩೩೧ ॥**

**ಅರ್ಥ—** ಯತಃ = ಯಾವ ಕಾರಣದಿಂದ, ಪುರಾತನಾಃ = ಪ್ರಾಚೀನರು, ಮನಃ = ಮನಸ್ಸನ್ನು, ವಿಕಲ್ಪರೂಪಂ = ಸಂದೇಹರೂಪವನ್ನಾಗಿ, ಆಹುಃ = ಹೇಳುತ್ತಾರೆಯೋ, ಯತಶ್ಚ = ಮತ್ತು ಯಾವಕಾರಣದಿಂದಾಗಿಯೇ, ಸಾಕ್ಷಿವೇದ್ಯದುಃಖಸುಖೇಷು = ಸಾಕ್ಷಿಯಿಂದ ತಿಳಿಯಲ್ಪಡುವ ಸುಖದುಃಖಗಳ ವಿಷಯದಲ್ಲಿ, ಸಂಶಯಃ = ಸಂದೇಹವು, ನ = ಇಲ್ಲವೋ ಅತಃ= ಆದ್ದರಿಂದ, ಪುರುಷಃ= ವ್ಯಕ್ತಿಯು, ಸಾಕ್ಷಿಣಾ= ಸಾಕ್ಷಿಯ ಮೂಲಕ, ನ ಸಂದಿಗ್ಧೇ= ಸಂದೇಹಪಡುವುದಿಲ್ಲ.

**ಅನುವಾದ–** ಯಾವ ಕಾರಣದಿಂದ ಪ್ರಾಚೀನರು ಮನಸ್ಸು ಸಂಶಯಾತ್ಮಕ ಎಂದಿರುವರೋ ಮತ್ತು, ಯಾವ ಕಾರಣದಿಂದ ನಮಗೆ ಸಾಕ್ಷಿಯಿಂದ ತಿಳಿಯಲ್ಪಡುವ ಸುಖ ಅಥವಾ ದುಃಖದಲ್ಲಿ ಎಂದೂ ಸಂದೇಹ ಬರುವುದಿಲ್ಲವೋ, ಆ ಕಾರಣದಿಂದ ಪ್ರಾಮಾಣ್ಯದ ಸಂದೇಹವು ಸಾಕ್ಷಿಯಿಂದ ಬರುವುದಿಲ್ಲ.

**ಭಾವವಿಲಾಸಿನೀ–** ಮನಸಃ ಸಂಶಯಹೇತುತ್ವಂ ಪುರಾಣಪ್ರಕ್ರಿಯಯೋಪಪಾದಯತಿ – **ವಿಕಲ್ಪರೂಪಮಿತಿ** ॥ ಹೀತ್ಯನೇನ ಸಂಕಲ್ಪವಿಕಲ್ಪಾತ್ಮಕಂ ಮನ ಇತಿ ಪ್ರಸಿದ್ಧಿಂ ಸೂಚಯತಿ । ನನು ಸಾಕ್ಷಿಣೈವ ಸಂಶಯಃ ಕುತೋ ನೇತ್ಯತ ಆಹ – **ಯತಶ್ಚೇತಿ** ॥ ಸಾಕ್ಷಿವೇದ್ಯಸುಖದುಃಖೇಷು ಯತಃ ಸಂಶಯೋ ನಾಸ್ತಿ ಅತೋ ನ ಸಾಕ್ಷಿಣಾ ಸಂದಿಗ್ಧ ಇತಿ ಪೂರ್ವೇಣಾನ್ವಯಃ ॥ ೩೩೧ ॥

**ವಿವರಣೆ–** ಹಿಂದೆ ಪ್ರಾಮಾಣ್ಯದ ಬಗ್ಗೆ ಸಂದೇಹಬಂದರೆ ಅದು ಮನಸ್ಸಿನಿಂದ ಬಂದುದಾಗಿದೆ. ಸಾಕ್ಷಿಯಿಂದಲ್ಲ ಎಂದು ಹೇಳಲಾಗಿದೆ. ಅದನ್ನು ಈ ಶ್ಲೋಕದಲ್ಲಿ ಸಮರ್ಥಿಸಲಾಗಿದೆ. ಸಂಕಲ್ಪವಿಕಲ್ಪಾತ್ಮಕಂ ಮನಃ ಎಂದು ಯೋಗಸೂತ್ರಕಾರರು ಸಂದೇಹವು ಮನಸ್ಸಿನ ಕಾರ್ಯ ಎಂದಿರುತ್ತಾರೆ. ಇದರಿಂದ ಸಂದೇಹಕ್ಕೆ ಕಾರಣವಾದುದು ಮನಸ್ಸು ಎಂದು ತಿಳಿಯಬಹುದು. ಅಷ್ಟುಮಾತ್ರವಲ್ಲದೆ, ಸಾಕ್ಷಿಯಿಂದ ಸುಖದುಃಖಗಳ ಸಂವೇದನೆ ಉಂಟಾಗುತ್ತದೆ. ಈ ಸುಖಾದಿಸಂವೇದನೆಯು ಎಂದೂ ಭ್ರಾಂತಿಯಾಗುವುದಿಲ್ಲ ಎಂದರೆ ಸುಖವೇ ಇಲ್ಲದಿದ್ದಾಗ ನನಗೆ ಸುಖವಾಗಿದೆ ಎಂದು ಯಾರೂ ಭ್ರಮಿಸುವುದಿಲ್ಲ. ಹೀಗೆ ಇತರ ಇಂದ್ರಿಯಗಳಂತೆ ಸಾಕ್ಷಿಯು ಎಂದೂ ಭ್ರಮೆಯನ್ನು ಹುಟ್ಟಿಸುವುದಿಲ್ಲ. ಈ ಎರಡು ಕಾರಣಗಳಿಂದ ಜ್ಞಾನದಲ್ಲಿ ಪ್ರಾಮಾಣ್ಯಭ್ರಮೆಯು ಬಂದರೆ ಅದು ಸಾಕ್ಷಿಯಿಂದ ಉಂಟಾದ ಭ್ರಮೆಯಲ್ಲ, ಮಾನಸ ಭ್ರಮೆ ಎಂದೇ ತಿಳಿಯಬೇಕು.

ಪ್ರಾಮಾಣ್ಯಸಂಶಯದಲ್ಲಿ ಧರ್ಮಿಯು ವ್ಯವಸಾಯ ಎಂದರೆ ಘಟಾದಿಜ್ಞಾನ. ಜ್ಞಾನವು ಮನೋವಿಕಾರ. ಅದನ್ನು ಮನಸ್ಸೇ ಗ್ರಹಿಸುವುದು ಹೇಗೆ ಸಾಧ್ಯ? ಈ ಪ್ರಶ್ನೆಗೆ ಮುಂದಿನ ಶ್ಲೋಕ ಉತ್ತರವನ್ನು ಕೊಡುತ್ತದೆ.

**ಜ್ಞಾನಂ ಗೃಹ್ಣನ್ ತದಾ ಸಾಕ್ಷೀ ನಿರ್ದೋಷಂ ಚೇದಿಯಂ ಪ್ರಮಾ ।**
**ಇತಿ ಸಾಮಾನ್ಯತಃ ಪ್ರಾಮಾಣ್ಯಂ ಚ ಗೃಹ್ಣನ್ ನಿವರ್ತತೇ ।**
**ಅತ್ರ ಸಾಂಶಯಿಕತ್ವಾಖ್ಯಹೇತುಃ ಸ್ಯಾತ್ ಸಿದ್ಧಸಾಧನಃ ॥ ೩೩೨ ॥**

**ಅರ್ಥ–** ಸಾಕ್ಷೀ = ಸಾಕ್ಷಿಯು, ತದಾ = ಆಗ, ಜ್ಞಾನಂ = ಜ್ಞಾನವನ್ನು, ಗೃಹ್ಣನ್ = ಗ್ರಹಿಸುತ್ತಾ, ನಿರ್ದೋಷಂ ಚೇತ್ ಇಯಂ ಪ್ರಮಾ = ದೋಷವಿಲ್ಲದಾದಾಗ ಮಾತ್ರ ಇದು ಪ್ರಮಾ, ಇತಿ = ಹೀಗೆ, ಸಾಮಾನ್ಯತಃ = ಸಾಮಾನ್ಯವಾಗಿ, ಪ್ರಾಮಾಣ್ಯಂ ಚ = ಪ್ರಾಮಾಣ್ಯವನ್ನೂ, ಗೃಹ್ಣನ್ = ಗ್ರಹಿಸಿ, ನಿವರ್ತತೇ = ಸುಮ್ಮನಾಗುತ್ತದೆ. ಅತ್ರ = ಇಂತಹ

ಜ್ಞಾನದಲ್ಲಿ, ಸಾಂಶಯಿಕತ್ವಾಖ್ಯ-ಹೇತುಃ = ಸಾಂಶಯಿಕತ್ವಾತ್ ಎಂಬ ತಾರ್ಕಿಕರು ಹೇಳುವ ಹೇತುವು, ಸಿದ್ಧಸಾಧನಃ = ಸಿದ್ಧಸಾಧನ ಎಂಬ ದೋಷವುಳ್ಳದ್ದು ಸ್ಯಾತ್ = ಆಗುತ್ತದೆ.

**ಅನುವಾದ–** ಸಾಕ್ಷಿಯು ಕೆಲವೊಮ್ಮೆ (ದೂರದ ವಸ್ತುಗಳ ಜ್ಞಾನವು ಹೊಸದಾಗಿ ಬಂದಾಗ) ಜ್ಞಾನವನ್ನು ಗ್ರಹಿಸುತ್ತಾ, ಈ ಜ್ಞಾನವು ನಿರ್ದುಷ್ಟವಾಗಿದ್ದರೆ ಮಾತ್ರ ಪ್ರಮಾ ಎಂದು ಅನಿರ್ಧಾರಿತವಾಗಿ ಪ್ರಾಮಾಣ್ಯವನ್ನು ಗ್ರಹಿಸಿ ಸುಮ್ಮನಾಗುತ್ತದೆ. ಇಂತಹ ಜ್ಞಾನದಲ್ಲಿ ತಾರ್ಕಿಕರು ಪ್ರಾಮಾಣ್ಯಪರಸ್ತ್ವವನ್ನು ಸಾಧಿಸಲು ಹೇಳಿರುವ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂಬ ಹೇತುವು ಸಿದ್ಧಸಾಧನತಾ ದೋಷವುಳ್ಳದ್ದಾಗಿದೆ.

**ಭಾವವಿಲಾಸಿನೀ–** ನನು ಸಂಶಯಧರ್ಮಿಭೂತಂ ತಜ್ಜ್ಞಾನಂ ಕಥಂ ಸಾಕ್ಷಿಣಾ ಗೃಹ್ಯತ ಇತ್ಯತ ಆಹ – **ಜ್ಞಾನಮಿತಿ** ॥ ಜ್ಞಾನಂ ಪ್ರಾಮಾಣ್ಯಸಂಶಯಧರ್ಮಿಭೂತಮ್ । ಇದಂ ಜ್ಞಾನಂ ನಿರ್ದೋಷಂ ಚೇತ್ ತರ್ಹಿ ಇಯಂ ಪ್ರಮಾ ಪ್ರಮಿತಿರಿತಿ ಸಾಮಾನ್ಯತ ಏವ ಪ್ರಾಮಾಣ್ಯಂ ಗೃಹ್ಣನ್ನಿವರ್ತತೇ । ಸಾಮಾನ್ಯತೋ ಗೃಹ್ಣನ್ನಿತ್ಯನೇನ ಪ್ರಾಮಾಣ್ಯಸ್ಯ ಸಾಮಾನ್ಯತಃ ಕಥಂಚಿದ್ ಯಾವಜ್ಜ್ಞಾನಗ್ರಾಹಕಸಾಕ್ಷಿವೇದ್ಯತ್ವಂ ವಕ್ತುಂ ಶಕ್ಯತ ಇತಿ ಸೂಚಿತಮ್ । ತತ್ರ ತನ್ನಿಶ್ಚಯರೂಪೋ ನ ಭವತೀತಿ ಭಾವಃ । ಅತ್ರ ದೂರಸ್ಥವಸ್ತುವಿಷಯಕಾನಭ್ಯಾಸದಶಾಪನ್ನಜ್ಞಾನಪ್ರಾಮಾಣ್ಯೇ । ಸಾಂಶಯಿಕತ್ವಹೇತುಃ ಸಿದ್ಧಸಾಧನಃ ಸ್ಯಾತ್ । ತತ್ರ ಮಯಾಪಿ ಸ್ವತಸ್ತ್ವಾನಂಗೀಕಾರಾದಿತಿ ಭಾವಃ ॥ ೩೩೨ ॥

**ವಿವರಣೆ–** ಈ ಶ್ಲೋಕದಲ್ಲಿ ಮೂರು ಅಂಶಗಳನ್ನು ಸಮರ್ಥಿಸಲಾಗಿದೆ

೧. ಸಾಕ್ಷಿಯು ಜ್ಞಾನವನ್ನು ಗ್ರಹಿಸಿದಾಗಲೆಲ್ಲ ಪ್ರಾಮಾಣ್ಯವನ್ನು ಗ್ರಹಿಸುತ್ತದೆ.

೨. ಜ್ಞಾನವನ್ನು ಸಾಕ್ಷಿಯೇ ಗ್ರಹಿಸುವುದು, ಮನಸ್ಸಲ್ಲ.

೩. ತಾರ್ಕಿಕರ ಪರತಸ್ತ್ವಸಾಧಕಾನುಮಾನಕ್ಕೆ ಸಿದ್ಧಸಾಧನತಾ.

1. ಸಾಕ್ಷಿಯು ಜ್ಞಾನವನ್ನಷ್ಟೇ ಎಂದೂ ಗ್ರಹಿಸುವುದಿಲ್ಲ. ಜ್ಞಾನದ ಜೊತೆಗೆ ಆ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಆದರೆ, ಪ್ರಾಮಾಣ್ಯಜ್ಞಾನವು ದೋಷವಿರುವಾಗ ನಿಶ್ಚಯಾತ್ಮಕವಾಗಿರುವುದಿಲ್ಲ. ಸಾಕ್ಷಿಯು ಈ ಒಂದು ನಿಬಂಧನೆಗೆ ಒಳಪಟ್ಟು ಪ್ರಮಾಣ್ಯವನ್ನು ಗ್ರಹಿಸುತ್ತದೆ. ದೋಷವಿಲ್ಲದಿದ್ದಲ್ಲಿ ಈ ಜ್ಞಾನವು ಪ್ರಮಾಣವಾಗಿರುತ್ತದೆ. ಇದು ಸಾಕ್ಷಿಯು ದೋಷವಿದ್ದಾಗ ಪ್ರಾಮಾಣ್ಯವನ್ನು ಗ್ರಹಿಸುವ ಕ್ರಮ. ಇದನ್ನು ಸುರೋತ್ತಮತೀರ್ಥರು ವ್ಯಾಖ್ಯಾನದಲ್ಲಿ ಹೀಗೆ ಸ್ಪಷ್ಟಪಡಿಸುತ್ತಾರೆ - ಸಾಮಾನ್ಯತೋ ಗೃಹ್ಣಾತಿ ಇತ್ಯನೇನ ಪ್ರಾಮಾಣ್ಯಸ್ಯ ಸಾಮಾನ್ಯತಃ ಕಥಂಚಿತ್ ಯಾವದ್‌ಜ್ಞಾನಗ್ರಾಹಕಸಾಕ್ಷಿವೇದ್ಯತ್ವಂ ವಕ್ತುಂ ಶಕ್ಯತೇ ಇತಿ ಸೂಚಿತಂ - ಸಾಕ್ಷಿಯು ದೋಷವಿದ್ದಾಗ ಜ್ಞಾನದಲ್ಲಿ ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ. ದೋಷಗಳಿಲ್ಲದಿದ್ದಾಗ

ಪ್ರಾಮಾಣ್ಯವನ್ನು ಎರಡು ರೀತಿಯಾಗಿ ಗ್ರಹಿಸುತ್ತದೆ. - ಹತ್ತಿರದ ವಸ್ತುಗಳ ಜ್ಞಾನಬಂದಾಗ ಈ ಜ್ಞಾನವು ಪ್ರಮಾಣವಾಗಿದೆ ಎಂದು ನಿರ್ಧಾರಾತ್ಮಕವಾಗಿ ಗ್ರಹಿಸುತ್ತದೆ. ಹೊಸದಾಗಿ ದೂರದಲ್ಲಿ ಒಂದು ವಸ್ತುವಿನ ಜ್ಞಾನಬಂದಾಗ ಸಾಮಾನ್ಯವಾಗಿ ಅಂದರೆ ದೋಷವಿಲ್ಲದಿದ್ದಲ್ಲಿ ಈ ಜ್ಞಾನ ಸರಿ ಎಂದು ಪ್ರಾಮಾಣ್ಯವನ್ನು ಗ್ರಹಿಸುತ್ತದೆ.

2. ಈ ಜ್ಞಾನವು ಪ್ರಮಾಣವೋ ಅಪ್ರಮಾಣವೋ ಎಂಬ ಸಂದೇಹ ಮನಸ್ಸಿನಿಂದ ಬರುತ್ತದೆ. ಈ ಸಂದೇಹದಲ್ಲಿ ಧರ್ಮಿಯು ಜ್ಞಾನ. ಸಂದೇಹಕ್ಕೆ ಧರ್ಮಿಜ್ಞಾನವು ಕಾರಣ. ಅಂದರೆ ಪ್ರಕೃತದಲ್ಲಿ ಜ್ಞಾನದ ಜ್ಞಾನ. ಆದರೆ ಜ್ಞಾನವು ಮನಸ್ಸಿನ ಪರಿಣಾಮವಾದ ಕಾರಣ ಜ್ಞಾನದ ಜ್ಞಾನ ಮನಸ್ಸಿನಿಂದ ಬಂದುದಲ್ಲ. ಅದು ಸಾಕ್ಷಿಯಿಂದ ಉಪನೀತವಾದುದು. ಜ್ಞಾನಲಕ್ಷಣಾ ಸನ್ನಿಕರ್ಷದಿಂದ ಮನಸ್ಸು ಜ್ಞಾನವನ್ನು ಗ್ರಹಿಸಿ ಆ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹವನ್ನು ಉಂಟುಮಾಡುತ್ತದೆ. ಈ ವಿಷಯವನ್ನು ರಾಜರು ಹಿಂದಿನ ಶ್ಲೋಕದಲ್ಲಿ ಸ್ಪಷ್ಟಡಿಸಿದ್ದಾರೆ.

3. ಪ್ರಾಮಾಣ್ಯಸ್ವತಸ್ತ್ವಪಕ್ಷಕ್ಕೆ ವಿರುದ್ಧವಾಗಿ ನೈಯಾಯಿಕರು ಅನುಮಾನದಿಂದ ಪರತಸ್ತ್ವವನ್ನು ಸಾಧಿಸುತ್ತಾದರೆ - ಪ್ರಾಮಾಣ್ಯಂ ಪರತೋ ಗೃಹ್ಯತೇ, ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂದು. ಇದಕ್ಕೆ ಹಿಂದೆ ಅಸಿದ್ಧಿದೋಷವನ್ನು ಹೇಳಲಾಗಿತ್ತು. ಅನಭ್ಯಾಸದಶಾದಲ್ಲೂ ಸಮೀಪದ ವಸ್ತುವನ್ನು ನೋಡಿದಾಗ ಸಂದೇಹ ಬರುವುದಿಲ್ಲ. ಆದ್ದರಿಂದ ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್ ಎಂಬ ಹೇತುವು ಆ ಜ್ಞಾನದಲ್ಲಿ ಇಲ್ಲ. ಅನುಮಾನಕ್ಕೆ ಅಸಿದ್ಧಿದೋಷ ಎಂದು. ಇಲ್ಲಿ ಸಿದ್ಧಸಾಧನತಾದೋಷವನ್ನು ಹೇಳಲಾಗಿದೆ. ದೂರದಲ್ಲಿ ಹೊಸದಾಗಿ ಒಂದು ವಸ್ತುವನ್ನು ನೋಡಿದಾಗ ಜ್ಞಾನವು ಸರಿಯೋ ತಪ್ಪೋ ಎಂಬ ಸಂದೇಹವು ಬರುತ್ತದೆ. ಹೀಗೆ ಅಂತಹ ಜ್ಞಾನಪ್ರಾಮಾಣ್ಯದಲ್ಲಿ ಅನಭ್ಯಾಸದಶಾಯಾಂ ಸಾಂಶಯಿಕತ್ವಹೇತುವಿದೆ. ಅಲ್ಲಿ ಸಾಧ್ಯವೂ ಇದೆ. ಏಕೆಂದರೆ ಅಲ್ಲಿ ಜ್ಞಾನದ ಪ್ರಾಮಾಣ್ಯವು ಸಫಲಪ್ರವೃತ್ತಿಜನಕತ್ವರೂಪ ಅನುಮಾನದಿಂದ (ಪರತಃ) ವೇದ್ಯವಾಗಿದೆ. ಆದ್ದರಿಂದ ಪ್ರಾಮಾಣ್ಯಂ ಪರತೋ ಗೃಹ್ಯತೇ ಎಂಬ ಸಾಧ್ಯವೂ ನಮಗೆ ಸಮ್ಮತವಾಗಿದೆ. ಹೀಗೆ ಸಿದ್ಧಸಾಧನತಾದೋಷ. ತತ್ರ ಮಯಾಪಿ ಸ್ವತಸ್ತ್ವಾನಂಗೀಕಾರಾತ್ ಇತಿ ಭಾವಃ (ಸುರೋತ್ತಮತೀರ್ಥರು)

ದೂರದ ವಸ್ತುವಿನ ಅನಭ್ಯಾಸದಶಾಪನ್ನವಾದ ಜ್ಞಾನಪ್ರಾಮಾಣ್ಯದ ಸಂದೇಹ ಬಂದಂತೆ ಸಮೀಪದ ವಸ್ತುವಿನ ಜ್ಞಾನಪ್ರಾಮಾಣ್ಯದಲ್ಲೂ ಸಂದೇಹ ಏಕೆ ಬರುವುದಿಲ್ಲ? ಇದಕ್ಕುತ್ತರ -

**ತತ್ರ ಸಾಂಶಯಿಕತ್ವೇऽಪಿ ಕುತೋऽನ್ಯತ್ರ ತದಗ್ರಹಃ ।**
**ದೂರಸ್ಥೇ ಚಂಚಲಂ ಚಕ್ಷುಃ ನಹಿ ಪಾತ್ರಸ್ಥಿತೋದನೇ ॥ ೩೩೩ ॥**

**ಅರ್ಥ–** ತತ್ರ = ದೂರಸ್ಥವಸ್ತುವಿನ ಪ್ರಾಮಾಣ್ಯದಲ್ಲಿ, ಸಾಂಶಯಿಕತ್ವೇ ಅಪಿ = ಸಂದೇಹವಿದ್ದರೂ, ಅನ್ಯತ್ರ = ಸಮೀಪಸ್ಥವಸ್ತುವಿನಲ್ಲಿ, ತದಗ್ರಹಃ = ಪ್ರಾಮಾಣ್ಯ-

ಜ್ಞಾನಬರದಿರುವುದು, ಕುತಃ = ಏಕೆ? ಚಕ್ಷುಃ = ಕಣ್ಣು ದೂರಸ್ಥೇ = ದೂರದ ವಸ್ತುವಿನ ಬಗ್ಗೆ ಚಂಚಲಂ = ಹೀಗೋ ಹಾಗೋ ಎಂಬ ಚಾಂಚಲ್ಯವನ್ನು ಹೊಂದಿದ್ದರೂ, ಪಾತ್ರಸ್ಥಿತೋದನೇ = ಸಮೀಪದ ಪಾತ್ರೆಯಲ್ಲಿ ಹಾಕಿರುವ ಅನ್ನದ ಬಗ್ಗೆ ಚಂಚಲಂ ನ ಹಿ = ಚಂಚಲವಲ್ಲವಷ್ಟೇ!

**ಅನುವಾದ–** ದೂರದ ನೀರಿನ ಜ್ಞಾನಪ್ರಾಮಾಣ್ಯದಲ್ಲಿ (ತತ್ರ) ಸಂಶಯ ಬಂದ ಮಾತ್ರಕ್ಕೆ ಸಮೀಪದ ವಸ್ತುವಿನ ಜ್ಞಾನದಲ್ಲೂ (ಅನ್ಯತ್ರ) ಪ್ರಾಮಾಣ್ಯವು ನಿಶ್ಚಿತವಾಗಬಾರದು ಎಂದೇನಿಲ್ಲ. ದೂರದ ವಸ್ತುವಿನ ಬಗ್ಗೆ ಕಣ್ಣು ಚಾಂಚಲ್ಯವನ್ನು ಹೊಂದಿದರೂ, ಸಮೀಪದಲ್ಲೇ ಇರುವ ವಸ್ತುವಿನ ಬಗ್ಗೆ ನಿಶ್ಚಲವಾಗಿರುವುದಿಲ್ಲವೇನು?

**ಭಾವವಿಲಾಸಿನೀ–** ನನು ದೂರಸ್ಥಜಲಾದಿಜ್ಞಾನಪ್ರಾಮಾಣ್ಯೇ ಸಂಶಯೇ ಪ್ರಾಮಾಣ್ಯತ್ವಾವಿಶೇಷಾತ್ ಸಮೀಪಸ್ಥಜ್ಞಾನಪ್ರಾಮಾಣ್ಯೇಽಪಿ ಸಂದೇಹಃ ಸ್ಯಾದಿತ್ಯತ ಆಹ – **ತತ್ರೇತಿ** ॥ ತತ್ರ ದೂರಸ್ಥಜಲಜ್ಞಾನಪ್ರಾಮಾಣ್ಯೇ । ಅನ್ಯತ್ರ ಸಮೀಪಸ್ಥವಸ್ತುವಿಷಯಕಜ್ಞಾನೇ ತದಗ್ರಹಃ ಪ್ರಾಮಾಣ್ಯಾನಿಶ್ಚಯಃ ಕುತಃ? ಇತಿ ಸಂಬಂಧಃ । ಅತ್ರಾರ್ಥಾಂತರನ್ಯಾಸಂ ಕರೋತಿ – **ದೂರಸ್ಥ ಇತಿ** ॥ ದೂರಸ್ಥೇ ಚಂಚಲಂ ಚಕ್ಷುಃ ಪಾತ್ರಸ್ಥಿತೋದನೇ ಚಂಚಲಂ ನಹೀತಿ ಚಂಚಲಪದಾವೃತ್ತ್ಯಾ ಯೋಜನಾ । ತದ್ವತ್ಸಮೀಪಸ್ಥಜ್ಞಾನಪ್ರಾಮಾಣ್ಯಮಪಿ ಸಾಕ್ಷೀ ನಿರ್ಣಯೇದೇವೇತಿ ಭಾವಃ ॥ ೩೩೩ ॥

**ವಿವರಣೆ–** ದೂರದಿಂದ ಹೊಸವಸ್ತುವಿನ ಜ್ಞಾನಬಂದಾಗ ಸಾಕ್ಷಿಯು ಆ ಜ್ಞಾನದ ಪ್ರಾಮಾಣ್ಯವನ್ನು ನಿಶ್ಚಯಿಸುವುದಿಲ್ಲ. ಆದರೆ, ಅದೇ ಸಾಕ್ಷಿಯು ಸಮೀಪದ ವಸ್ತುವಿನ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವನ್ನು ಮಾಡುತ್ತದೆ. ಒಂದು ಕಡೆ ಒಂದು ರೀತಿಯಾದರೆ ಮತ್ತೊಂದು ಕಡೆಯಲ್ಲಿ ಅದೇ ರೀತಿಯಾಗಿರಬೇಕೆಂದೇನೂ ಇಲ್ಲವಲ್ಲಷ್ಟೆ ಕಣ್ಣು ದೂರದ ವಸ್ತುವನ್ನು ಸಂದೇಹಾಸ್ಪದವಾಗಿ ಗುರುತಿಸಿದ ಮಾತ್ರಕ್ಕೆ ಸಮೀಪದ ವಸ್ತುವನ್ನೂ ಹಾಗೆಯೇ ತಿಳಿಸುವುದಿಲ್ಲ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - 1. ತತ್ರ - ದೂರಸ್ಥ ಜಲಜ್ಞಾನಪ್ರಾಮಾಣ್ಯೇ. ಶ್ಲೋಕದಲ್ಲಿರುವ ತತ್ರ ಎಂಬ ಶಬ್ದಕ್ಕೆ ದೂರದ ಜಲಜ್ಞಾನಪ್ರಾಮಾಣ್ಯದಲ್ಲಿ ಎಂದು ಅರ್ಥ.

2. ಅನ್ಯತ್ರ - ಸಮೀಪಸ್ಥವಸ್ತುವಿಷಯಕಜ್ಞಾನೇ - ಅನ್ಯತ್ರ - ಸಮೀಪದ ವಸ್ತುವಿನ ಜ್ಞಾನದಲ್ಲಿ.

3. ತದಗ್ರಹಃ - ಪ್ರಾಮಾಣ್ಯಾನಿಶ್ಚಯಃ - ಪ್ರಾಮಾಣ್ಯದ ಅನಿಶ್ಚಯವು.

ದೋಷಜನ್ಯವಾದ ಜ್ಞಾನಬಂದಂತೆ ವಸ್ತುಸ್ಥಿತಿ ಇರುವುದಿಲ್ಲ. ಅದಕ್ಕೆ ವಿರುದ್ಧವಾಗಿ ವಸ್ತು ಇರುತ್ತದೆ. ಅದರಂತೆ ಎಲ್ಲಿ ಜ್ಞಾನ ಬಂದಾಗಲೂ ಜ್ಞಾನಕ್ಕೆ ಸರಿಯಾಗಿ ವಸ್ತು ಇದೆಯೋ, ಇಲ್ಲವೋ ಎಂಬ ಸಂದೇಹ ಏಕೆ ಬರಬಾರದು? ಈ ಪ್ರಶ್ನೆಗೆ ಉತ್ತರ-

**ಕ್ವಚಿತ್ ಭಾನತ್ವಜಾತೀಯೇ ದೋಷಜೇ ವ್ಯಭಿಚಾರಿಣಿ ।**
**ಸರ್ವತ್ರ ವ್ಯಭಿಚಾರಿತ್ವಶಂಕಾಪಂಕೋಽಪಿ ನೋಚಿತಃ ॥ ೩೩೪ ॥**

**ಅರ್ಥ**– ದೋಷಜೇ = ದೋಷಜನ್ಯವಾದ, ಭಾನತ್ವಜಾತೀಯೇ = ಜ್ಞಾನದ ಗುಂಪಿನಲ್ಲಿ ಸೇರಿದ, ಕ್ವಚಿತ್ = ಕೆಲವೊಂದು ಜ್ಞಾನಗಳು, ವ್ಯಭಿಚಾರಿಣಿ (ಸತಿ) = ಅರ್ಥ ವ್ಯಭಿಚಾರಿಗಳಾಗಿರಲು, ಸರ್ವತ್ರ = ಎಲ್ಲ ಜ್ಞಾನಗಳಲ್ಲೂ, ವ್ಯಭಿಚಾರಿತ್ವಶಂಕಾಪಂಕಃ ಅಪಿ = ಅರ್ಥವ್ಯಭಿಚಾರವಿದೆಯೋ ಏನೋ ಎಂಬ ಸಂದೇಹದ ಕೆಸರು, ನ ಉಚಿತಃ = ಯುಕ್ತವಲ್ಲ.

**ಅನುವಾದ**– ದೋಷದಿಂದ ಹುಟ್ಟಿದ ಒಂದು ಜ್ಞಾನದಲ್ಲಿ ಎಂದೋ ಒಮ್ಮೆ ಅರ್ಥವ್ಯಭಿಚಾರವಿದ್ದಮಾತ್ರಕ್ಕೆ ಎಲ್ಲಾ ಜ್ಞಾನದದಲ್ಲೂ ಅರ್ಥವ್ಯಭಿಚಾರ ಶಂಕಾ ಎಂಬ ಕೆಸರನ್ನು ಎರಚುವುದು ಉಚಿತವಲ್ಲ.

**ಭಾವವಿಲಾಸಿನೀ**– ನನು ದೋಷಜೇ ಜ್ಞಾನೇ ಅರ್ಥವ್ಯಭಿಚಾರದರ್ಶನಾತ್ ಸರ್ವತ್ರಾಪಿ ಜ್ಞಾನೇ ಅರ್ಥವ್ಯಭಿಚಾರಶಂಕಾ ಸ್ಯಾದೇವ । ಅತಃ ಕಥಂ ಸಮೀಪಸ್ಥವಸ್ತುಜ್ಞಾನೇ ಪ್ರಾಮಾಣ್ಯ-ನಿಶ್ಚಯ ಇತ್ಯತ ಆಹ – **ಕ್ವಚಿದಿತಿ** ॥ ಸರ್ವತ್ರ ದೋಷಾಜನ್ಯೇ ಅತ ಏವಾವ್ಯಭಿಚಾರಿಣಿ ಚ ಜ್ಞಾನೇ ॥ ೩೩೪ ॥

**ವಿವರಣೆ**– ದೂರಸ್ಥತ್ವದೋಷವಿದ್ದಾಗ ಕೆಲವೊಮ್ಮೆ ಜ್ಞಾನವು ಅರ್ಥವ್ಯಭಿಚಾರಿಯಾಗುತ್ತದೆ ಎಂದರೆ ಜ್ಞಾನತಿಳಿಸಿದಂತೆ ವಿಷಯವು ಇರುವುದಿಲ್ಲ ಎಂದಮಾತ್ರಕ್ಕೆ ಸಮೀಪದಲ್ಲಿ ಪ್ರತಿನಿತ್ಯ ನೋಡಿ ಬರುವ ಜ್ಞಾನದಲ್ಲೂ ಸಂದೇಹಪಡಬಾರದು. ಏಕೆಂದರೆ ಸಮೀಪದ ವಸ್ತುವಿನ ಜ್ಞಾನವು ದೋಷದಿಂದ ಹುಟ್ಟಿದ್ದಲ್ಲ.

ದೋಷವಿಲ್ಲದಿದ್ದಾಗ ಏಕೆ ಸಂದೇಹಪಡಬಾರದು ಎಂಬುದನ್ನು ಮುಂದಿನ ಶ್ಲೋಕದಿಂದ ಸಮರ್ಥಿಸುತ್ತಾರೆ-

**ಅನುಮಾನತ್ವಜಾತೀಯೇ ದೋಷಜೇ ವ್ಯಭಿಚಾರಿಣಿ ।**
**ಕಿಂ ಪ್ರಾಮಾಣ್ಯಾನುಮಾನಾಚ್ಚ ತಚ್ಛಂಕೀ ತ್ವಂ ನಿವರ್ತಸೇ ॥ ೩೩೫ ॥**

**ಅರ್ಥ**– ದೋಷಜೇ = ದೋಷದಿಂದ ಹುಟ್ಟಿದ, ಅನುಮಾನತ್ವಜಾತೀಯೇ = ಕೆಲವು ಅನುಮಾನಗಳು, ವ್ಯಭಿಚಾರಿಣಿ (ಸತಿ) = ಅರ್ಥವ್ಯಭಿಚಾರಿಗಳಾಗಿರಲು, ತಚ್ಛಂಕೀ = ಎಲ್ಲಾ ಅನುಮಾನಗಳಲ್ಲೂ ವ್ಯಭಿಚಾರವನ್ನು ಶಂಕಿಸುವ, ತ್ವಂ = ನೀನು, ಪ್ರಾಮಾಣ್ಯಾನುಮಾನಾ

ಚ್ಚ= ಜ್ಞಾನಪ್ರಾಮಾಣ್ಯಸಾಧಕವಾದ ಅನುಮಾನದಿಂದಲೂ, ನಿವರ್ತಸೇ ಕಿಂ?= ಹಿಂಜರಿಯುತ್ತಿಯೇನು?

**ಅನುವಾದ–** ಅನುಮಾನಸಜಾತೀಯವಾದ ದೋಷಜನ್ಯವಾದ ಒಂದು ಅನುಮಾನವು ಅರ್ಥವ್ಯಭಿಚಾರಿಯಾದ ಮಾತ್ರಕ್ಕೆ ಸಫಲಪ್ರವೃತ್ತಿಜನಕತ್ವ ಹೇತುವಿನಿಂದ ಜ್ಞಾನಪ್ರಾಮಾಣ್ಯವನ್ನು ಸಾಧಿಸುವ ಅನುಮಾನವೂ ಅರ್ಥವ್ಯಭಿಚಾರಿ ಎಂದು ಸಂದೇಹಿಸಿ ಆ ಅನುಮಾನವನ್ನೂ ನೀನು ಉಪೇಕ್ಷೆ ಮಾಡುವಿಯೇನು?

**ಭಾವವಿಲಾಸಿನೀ–** ಕುತೋ ನೋಚಿತ ಇತ್ಯತ ಆಹ –**ಅನುಮಾನತ್ವೇತಿ** ॥ ತಚ್ಛಂಕೀ ಅರ್ಥವ್ಯಭಿಚಾರಶಂಕೀ ಗೃಹೀತಜ್ಞಾನಪ್ರಾಮಾಣ್ಯನಿಶ್ಚಯಾಭಾವವಾನಿತಿ ವಾ । ನಿವರ್ತಸೇ ಕಿಮ್ । ಅನುಮಾನೇನಾಪಿ ಪ್ರಾಮಾಣ್ಯನಿಶ್ಚಯಂ ನ ಕರೋಷಿ ಕಿಮ್ ॥ ೩೩೫ ॥

**ವಿವರಣೆ–** ಒಂದು ಜ್ಞಾನವು ಅಯಥಾರ್ಥವಾದ ಮಾತ್ರಕ್ಕೆ ಎಲ್ಲ ಜ್ಞಾನದ ಬಗ್ಗೆಯೂ ಸಂದೇಹಪಡುವ ನೈಯಾಯಿಕರಿಗೆ ಪ್ರತಿಬಂದಿಯನ್ನು ಈ ಶ್ಲೋಕದಲ್ಲಿ ಕೊಡಲಾಗಿದೆ. ಕೆಲವೆಡೆ ದೋಷಗಳಿಂದಾಗಿ ಅನುಮಾನವು ದುಷ್ಟವಾಗುತ್ತದೆ ಎಂದಮಾತ್ರಕ್ಕೆ ಎಲ್ಲ ಅನುಮಾನಗಳಲ್ಲೂ ಸಂದೇಹಬರುವುದೇ? ಹಾಗೆ ಬರುವುದಾದಲ್ಲಿ ಪ್ರಾಮಾಣ್ಯವು ಅನುಮಾನವೇದ್ಯ ಎನ್ನುವ ನೈಯಾಯಿಕರು ಜ್ಞಾನಪ್ರಾಮಾಣ್ಯವನ್ನು ಅನುಮಾನ ಪ್ರಮಾಣದಿಂದ ಸಾಧಿಸಿದಾಗ ಆ ಅನುಮಾನವೂ ತಪ್ಪೋ, ಸರಿಯೋ ಎಂದು ಸಂದೇಹಿಸಬೇಕಾದೀತು.

**ಯದಿ ವ್ಯಾಪ್ತ್ಯಾದಿದಾರ್ಢ್ಯೇನ ಶಂಕಾಂ ಧಿಕ್ಕುರುತೇ ಭವಾನ್ ।**
**ತರ್ಹಿ ನಿರ್ದೋಷತಾದಾರ್ಢ್ಯಾತ್ ಸಾಕ್ಷೀಹ ಕ್ಷೋಭಯೇದ್ಧಿ ತಾಮ್**
**॥ ೩೩೬ ॥**

**ಅರ್ಥ–** ಭವಾನ್ = ನೀನು, ಯದಿ = ಒಂದು ಪಕ್ಷ, ವ್ಯಾಪ್ತ್ಯಾದಿದಾರ್ಢ್ಯೇನ = ವ್ಯಾಪ್ತಿ-ಪಕ್ಷಧರ್ಮತಾಗಳ ನಿರ್ಧಾರದಿಂದ, ಶಂಕಾಂ = ಅನುಮಾನಪ್ರಾಮಾಣ್ಯ ಸಂಶಯವನ್ನು ಧಿಕ್ಕುರುತೇ = ನಿರಾಕರಿಸುವಿಯಾದಲ್ಲಿ, ತರ್ಹಿ = ಆಗ, ಇಹ = ಪ್ರತ್ಯಕ್ಷದಲ್ಲೂ, ನಿರ್ದೋಷತಾದಾರ್ಢ್ಯಾತ್ = ದೋಷಾಭಾವನಿಶ್ಚಯದಿಂದಾಗಿ, ಸಾಕ್ಷೀ = ಸಾಕ್ಷೀಂದ್ರಿಯವು, ತಾಂ = ಆ ಸಂದೇಹವನ್ನು ಕ್ಷೋಭಯೇತ್ ಹಿ = ನಾಶಪಡಿಸೀತು.

**ಅನುವಾದ–** ನೀನು ಒಂದುವೇಳೆ ವ್ಯಾಪ್ತಿಯನಿಶ್ಚಯವಿರುವುದರಿಂದ ಅನುಮಾನಪ್ರಾಮಾಣ್ಯ- ಸಂದೇಹವನ್ನು ತಿರಸ್ಕರಿಸುವುದಾದಲ್ಲಿ ಸಮೀಪಸ್ಥಜ್ಞಾನ ಪ್ರಾಮಾಣ್ಯವಿಷಯದಲ್ಲೂ ನಿರ್ದೋಷತ್ವನಿಶ್ಚಯದಿಂದ ಆ ಸಂದೇಹವನ್ನು ಸಾಕ್ಷಿಯು ನಾಶಮಾಡಬಲ್ಲದು.

**ಭಾವವಿಲಾಸಿನೀ–** ನನು ವ್ಯಾಪ್ತ್ಯಾದಿದಾರ್ಢ್ಯಾದನುಮಾನಗೃಹೀತಪ್ರಾಮಾಣ್ಯೇ ಸಮಾಶ್ವಾಸಃ ಸ್ಯಾದಿತ್ಯತ ಆಹ – **ಯದೀತಿ** ॥ ಭವಾನ್ ಶಂಕಾಂ ಧಿಕ್ಕುರುತೇ ಶಂಕಾಂ ತಿರಸ್ಕೃತ್ಯ ಮನಸ್ಸಮಾಧಾನಂ ಕರೋತೀತಿ ಭಾವಃ । ತರ್ಹಿ ಮಮಾಪಿ ಸಮಸ್ಸಮಾಧಾನಮಿತ್ಯಾಹ – **ತರ್ಹೀತಿ** ॥ ಇಹ ಸಮೀಪಸ್ಥವಸ್ತುಜ್ಞಾನೇ ತಾಂ ಶಂಕಾಮ್ ॥ ೩೩೬ ॥

**ವಿವರಣೆ–** ಸಮರ್ಥಪ್ರವೃತ್ತಿಜನಕತ್ವಹೇತುವಿನಿಂದ ಬಂದ ಅನುಮಿತಿಯಲ್ಲೂ ಸಂದೇಹ ಬರಲಿ, ಎಂದು ಹಿಂದೆ ಮಾಡಿದ ಆಕ್ಷೇಪಕ್ಕೆ ನೈಯಾಯಿಕರು ಹೀಗೆ ಉತ್ತರ ಕೊಡುತ್ತಾರೆ - ಹೇತು ಮತ್ತು ಸಾಧ್ಯಗಳಿಗೆ ವ್ಯಾಪ್ತಿಯು ದೃಢವಾಗಿ ನಿರ್ಧಾರವಾಗಿರದಿದ್ದರೆ ಅನುಮಿತಿಯಲ್ಲಿ ಸರಿಯೋ ತಪ್ಪೋ ಎಂಬ ಸಂದೇಹ ಬರಬಹುದು. ಆದರೆ ವ್ಯಾಪ್ತಿಯು ದೃಢವಾಗಿ ನಿರ್ಧಾರಿತವಾದರೆ ಸಂದೇಹಕ್ಕೆ ಆಸ್ಪದವಿಲ್ಲ. ಪ್ರಕೃತ, ಜ್ಞಾನಬಂದಮೇಲೆ ನಾವು ಮಾಡಿದ ಪ್ರವೃತ್ತಿಯು ಸಫಲವಾದರೆ ಬಂದಿರುವ ಜ್ಞಾನವು ಪ್ರಮಾಣವಾಗಿರಲೇಬೇಕು. ಉದಾಹರಣೆಗೆ ದೂರದಲ್ಲಿ ನೀರಿನ ಜ್ಞಾನ ಬಂದ ಮೇಲೆ ನೀರಿದ್ದ ಕಡೆಗೆ ಹೋಗಿ ಕೈಗೆ ನೀರು ಸಿಕ್ಕಿದಾಗ ನಮ್ಮ ಪ್ರಯತ್ನವು ಸಫಲವಾಯಿತು. ಆದ್ದರಿಂದ ನಮಗೆ ಬಂದಿರುವ ನೀರಿನ ಜ್ಞಾನವು ಪ್ರಮಾಣ. ಶುಕ್ತಿಯನ್ನು ನೋಡಿ ರಜತ ಇದೆ ಎಂದು ತಿಳಿದು ತೆಗೆದುಕೊಳ್ಳಲು ಹೋದಾಗ ಅಲ್ಲಿ ರಜತವಿರುವ ಬದಲು ಶುಕ್ತಿ ಇರುತ್ತದೆ. ಅಲ್ಲಿ ನಮ್ಮ ಪ್ರಯತ್ನ ವಿಫಲವಾಯಿತು. ಆದ್ದರಿಂದ ನಮಗೆ ಬಂದ ಬೆಳ್ಳಿಯ ಜ್ಞಾನವು ಅಪ್ರಮಾಣ. ಹೀಗೆ ಸಫಲಪ್ರವೃತ್ತಿಗೆ ಕಾರಣವಾದ ಜ್ಞಾನವು ಪ್ರಮಾಣವೇ ಆಗಿರುತ್ತದೆ. ಎಂದು ವ್ಯಾಪ್ತಿಯು ನಿಶ್ಚಿತವಾದುದರಿಂದ ಅಂತಹ ವ್ಯಾಪ್ತಿಯ ಆಧಾರದಲ್ಲಿ ಬಂದ ಪ್ರಾಮಾಣ್ಯಾನುಮಿತಿಯು ಸರಿಯೋ ತಪ್ಪೋ ಎಂಬ ಅನುಮಾನವೇ ಹುಟ್ಟುವುದಿಲ್ಲ. ಹೀಗೆ ನೈಯಾಯಿಕರು ಸಮಾಧಾನ ಕೊಡುತ್ತಾರೆ. ಅದಕ್ಕೆ ಪ್ರತಿಯಾಗಿ ನಾವೂ ಹೀಗೆ ಹೇಳಬಹುದು. ದೂರದಿಂದ ವಸ್ತುವಿನ ಜ್ಞಾನ ಬಂದಾಗ ದೂರಸ್ಥತ್ವದೋಷವಿರುವುದರಿಂದ ಜ್ಞಾನವು ಅಪ್ರಮಾಣವಾಗಬಹುದು. ಆದರೆ, ಸಮೀಪದ ವಸ್ತುವಿನ ಜ್ಞಾನಬಂದಾಗ ಯಾವ ದೋಷಗಳೂ ಇಲ್ಲ ಎಂಬ ನಿರ್ಧಾರವಿರುವುದರಿಂದ ಸಾಕ್ಷಿಯೂ ನಿರ್ಧಾರಾತ್ಮಕವಾಗಿ ಈ ಜ್ಞಾನವು ಪ್ರಮಾಣವಾಗಿದೆ ಎಂದು ಗ್ರಹಿಸುತ್ತದೆಯಾದ್ದರಿಂದ ದೋಷವಿಲ್ಲ.

ಸುರೋತ್ತಮತೀರ್ಥರ ವ್ಯಾಖ್ಯಾನದಲ್ಲಿರುವ ವಿಶೇಷಾಂಶ - ಭವಾನ್ ಶಂಕಾಂ ಧಿಕ್ಕರುತೇ - ಶಂಕಾಂ ತಿರಸ್ಕೃತ್ಯ ಮನಃ ಸಮಾಧಾನಂ ಕರೋತೀತಿ ಭಾವಃ - ನೀನು ಶಂಕೆಯನ್ನು ತಿರಸ್ಕರಿಸಿ ಮನಸ್ಸಿನ ಗೊಂದಲವನ್ನು ಪರಿಹರಿಸಿಕೊಳ್ಳುವಿ ಎಂದರ್ಥ.

೨. ಇಹ - ಸಮೀಪಸ್ಥವಸ್ತುಜ್ಞಾನೇ.

೩. ತಾಂ - ಶಂಕಾಂ

**ತತ್ಸನ್ನಿಕೃಷ್ಟದೃಷ್ಟೇಷು ನ ಪ್ರಾಮಾಣ್ಯಗ್ರಹೇ ಭಯಮ್ ।**
**ಪ್ರಾಮಾಣ್ಯಗ್ರಹಣೇ ಶಕ್ತಿಃ ಸಾಕ್ಷಿಣಃ ಸ್ವೇನ ತೇಜಸಾ ॥ ೩೩೭ ॥**

**ಅರ್ಥ–** ತತ್ = ಆದ್ದರಿಂದ, ಸನ್ನಿಕೃಷ್ಟದೃಷ್ಟೇಷು = ಸಮೀಪದ ಪದಾರ್ಥಗಳು ಕಂಡಲ್ಲಿ ಪ್ರಾಮಾಣ್ಯಗ್ರಹಣೇ = ಅವುಗಳ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವಲ್ಲಿ, ಭಯಂ ನ = ಹೆದರಿಕೆ ಇಲ್ಲ, ಸಾಕ್ಷಿಣಃ = ಸಾಕ್ಷಿಗೆ, ಪ್ರಾಮಾಣ್ಯಗ್ರಹಣೇ = ಜ್ಞಾನಪ್ರಾಮಾಣ್ಯವನ್ನು ಗ್ರಹಿಸುವಲ್ಲಿ, ಸ್ವೇನ ತೇಜಸಾ = ತನ್ನ ಸಹಜಸಾಮರ್ಥ್ಯದಿಂದಲೇ, ಶಕ್ತಿಃ = ಶಕ್ತಿ ಇದೆ.

**ಅನುವಾದ–** ಆದ್ದರಿಂದ ಹತ್ತಿರದಲ್ಲಿ ಕಂಡವಸ್ತುಗಳ ಜ್ಞಾನದಲ್ಲಿ ಸಾಕ್ಷಿಗೆ ಪ್ರಾಮಾಣ್ಯವನ್ನು ಗ್ರಹಿಸಲು ಯಾವ ಅಡ್ಡಿಯೂ ಇಲ್ಲ. ಸಾಕ್ಷಿಗೆ ಪ್ರಾಮಾಣ್ಯವನ್ನು ಗ್ರಹಿಸಲು ಇರುವ ಶಕ್ತಿಯು ಸಹಜವಾದುದು. ಅದಕ್ಕೆ ಯಾವ ಸಹಾಯದ ಅಪೇಕ್ಷೆಯೂ ಇಲ್ಲ.

**ಭಾವವಿಲಾಸಿನೀ–** ತತ್ರೇತ್ಯಾದಿನೋಕ್ತಮುಪಸಂಹರತಿ – **ತದಿತಿ** ॥ ತತ್ ತಸ್ಮಾತ್ ಶಂಕಾಕಾರಣಾಭಾವಾತ್ । ಸನ್ನಿಕೃಷ್ಟಾನಿ ಚ ತಾನಿ ದೃಷ್ಟಾನೀತಿ ವಿಗ್ರಹಃ । ಪ್ರಾಮಾಣ್ಯಗ್ರಹೇ ಪ್ರಾಮಾಣ್ಯನಿಶ್ಚಯೇ । ತರ್ಹಿ ಕ್ವಚಿತ್ಪರೀಕ್ಷಾಪೇಕ್ಷಾ ಕುತ ಇತ್ಯತ ಆಹ – **ಪ್ರಾಮಾಣ್ಯಗ್ರಹಣ ಇತಿ** ॥ ಸ್ವೇನ ತೇಜಸಾ ಸ್ವಸಾಮರ್ಥ್ಯೇನ ॥ ೩೩೭ ॥

**ವಿವರಣೆ–** ಇದುರವರೆಗೆ ಹೇಳಿದ ವಿಷಯವನ್ನು ಈ ಶ್ಲೋಕದಲ್ಲಿ ಉಪಸಂಹಾರ ಮಾಡಲಾಗಿದೆ.

ಸನ್ನಿಕೃಷ್ಟಾನಿ ಚ ತಾನಿ ದೃಷ್ಟಾನಿ ಚ ಇತಿ ವಿಗ್ರಹಃ. ಸನ್ನಿಕೃಷ್ಟ ಎಂದರೆ ಸಮೀಪದಲ್ಲಿರುವ ವಸ್ತು ದೃಷ್ಟ ಎಂದರೆ ಕಾಣಲ್ಪಟ್ಟದ್ದು.

2. ತತ್ - ತಸ್ಮಾತ್ - ಶಂಕಾಕಾರಣಾಭಾವಾತ್ ಎಂದರೆ ಸಂದೇಹಕ್ಕೆ ಕಾರಣವಿಲ್ಲದಿರುವುದರಿಂದ ಎಂದರ್ಥ.

ಸಾಕ್ಷಿ ತನ್ನ ಸಾಮರ್ಥ್ಯದಿಂದಲೇ ಪ್ರಾಮಾಣ್ಯವನ್ನು ಗ್ರಹಿಸುವುದಾದಲ್ಲಿ ಕೆಲವೊಮ್ಮೆ ವಿಮರ್ಶೆಯನ್ನು ಏಕೆ ಅಪೇಕ್ಷಿಸುತ್ತದೆ? ಇದಕ್ಕೆ ಉತ್ತರ -

**ನಿರೋಧಮಾತ್ರನಾಶಾಯ ನದೀರುದ್ಧೇನ ನೌರಿವ ।**
**ಪರೀಕ್ಷಾಪೇಕ್ಷ್ಯತೇ ಕ್ವಾಪಿ ತದಭಾವೇ ಸ್ವಯಂ ಪಟುಃ ।**
**ನಹಿ ರಾಜಪಥೇ ಗಂತ್ರಾ ಗಮನೇ ನೌರಪೇಕ್ಷ್ಯತೇ ॥ ೩೩೮ ॥**

**ಅರ್ಥ–** ನದೀರುದ್ಧೇನ = ನಡೆಯುವಾಗ ಅಡ್ಡವಾಗಿ ಬಂದ ನದಿಯಿಂದ ತಡೆಯಲ್ಪಟ್ಟವನಿಂದ, ನೌರಿವ = ನೌಕೆಯಂತೆ, ಕ್ವಾಪಿ= ಕೆಲವೊಮ್ಮೆ ನಿರೋಧಮಾತ್ರನಾಶಾಯ = ಕೇವಲ ಪ್ರತಿಬಂಧಕದ ನಾಶಕ್ಕಾಗಿ, ಪರೀಕ್ಷಾ = ವಿಮರ್ಶೆಯು, ಸಾಕ್ಷಿಣಾ=

ಸಾಕ್ಷಿಯಿಂದ, ಅಪೇಕ್ಷ್ಯತೇ = ಸಾಕ್ಷಿಯಿಂದ ಅಪೇಕ್ಷಿಸಲ್ಪಡುತ್ತದೆ. ತದಭಾವೇ = ಪ್ರತಿಬಂಧಕಗಳು ಇಲ್ಲದಾದಾಗ, ಸಾಕ್ಷೀ= ಸಾಕ್ಷಿಯು, ಸ್ವಯಂ = ತಾನಾಗಿಯೇ, ಪಟುಃ = ಸಮರ್ಥವು, ರಾಜಪಥೇ = ರಾಜಮಾರ್ಗದಲ್ಲಿ, ಗಂತ್ರಾ = ಹೋಗವವನಿಂದ, ಗಮನೇ = ತಾನು ಹೋಗಬೇಕಾದಲ್ಲಿ, ನೌಃ = ನೌಕೆಯು, ನಹಿ ಅಪೇಕ್ಷ್ಯತೇ = ಅರಸಲ್ಪಡುವುದಿಲ್ಲ.

**ಅನುವಾದ–** ದಾರಿಹೋಕನಿಗೆ ನದಿಯು ಅಡ್ಡಬಂದಾಗ ನೌಕೆಯಂತೆ ಕೆಲವೊಮ್ಮೆ ಸಾಕ್ಷಿಯಿಂದಲೂ ಪ್ರತಿಬಂಧಕದ ನಾಶಕ್ಕಾಗಿಯಷ್ಟೇ ವಿಮರ್ಶೆಯು ಅಪೇಕ್ಷಿಸಲ್ಪಡುತ್ತದೆ. ಪ್ರತಿಬಂಧಕಗಳಿಲ್ಲದಿದ್ದಾಗ ಸಾಕ್ಷಿಯು ತಾನೇ ತಾನಾಗಿ ಪ್ರಾಮಾಣ್ಯಗ್ರಹಣಮಾಡಲು ಸಮರ್ಥವಾಗಿದೆ. ರಾಜಮಾರ್ಗದಲ್ಲಿ ಹೋಗವುವನೆಂದೂ ನೌಕೆಯನ್ನು ಅಪೇಕ್ಷಿಸುವುದಿಲ್ಲ ತಾನೆ.

**ಭಾವವಿಲಾಸಿನೀ–** ನಿರೋಧನಾಶಮಾತ್ರಾಯ ನಿರೋಧಕದೋಷಶಂಕಾನಿರಾಸಮಾತ್ರಾಯ ನತು ಪ್ರಾಮಾಣ್ಯನಿಶ್ಚಯಾಯೇತ್ಯರ್ಥಃ । ಕ್ವಾಪಿ ಕ್ವಚಿತ್ಪರೀಕ್ಷಾ ತದ್ಯೋಗಜನ್ಯಸುಖಾನುಭವಾಖ್ಯ ಪ್ರವೃತ್ತಿಸಾಮರ್ಥ್ಯವಿಚಾರಃ ಅಪೇಕ್ಷ್ಯತ ಇತಿ ಸಂಬಂಧಃ । ತತ್ರ ದೃಷ್ಟಾಂತಃ – **ನದೀರುದ್ಧೇನೇತಿ** ॥ ನದೀರುದ್ಧೇನ ಗ್ರಾಮಂ ಜಿಗಮಿಷತಾ ಪುರುಷೇಣ ನೌರಿವೇತಿ । ತದಭಾವೇ ದೋಷಾದಿಪ್ರತಿಬಂಧಕಾಭಾವೇ । ತದಭಾವೇ ಸ್ವಯಂ ಪಟುರಿತ್ಯತ್ರಾರ್ಥಾಂತರನ್ಯಾಸಃ ॥ **ನಹೀತಿ** ॥ ರಾಜಪಥ ಇತ್ಯನೇನ ನದ್ಯಾದಿಪ್ರತಿಬಂಧಕಾಭಾವಂ ಸೂಚಯತಿ । ಗಂತ್ರಾ ಪುರುಷೇಣ ॥ ೩೩೮ ॥

**ವಿವರಣೆ–** ಕೆಲವೊಮ್ಮೆ ದೂರದಲ್ಲಿ ವಸ್ತುವನ್ನು ಕಂಡಾಗ ಈ ಜ್ಞಾನವು ಸರಿಯೋ ತಪ್ಪೋ ಎಂಬ ಮಾನಸಿಕ ಸಂದೇಹಬರುತ್ತದೆ. ಆಗ ಸಾಕ್ಷಿಯು ಈ ಸಂದೇಹದಿಂದ ಪ್ರತಿಬದ್ಧವಾಗಿ ಜ್ಞಾನಪ್ರಾಮಾಣ್ಯವನ್ನು ನಿರ್ಧರಿಸುವುದಿಲ್ಲ. ಅಂತಹ ಸಂದರ್ಭದಲ್ಲಿ ಹತ್ತಿರಹೋಗಿ ಸರಿಯೋ ತಪ್ಪೋ ಎಂದು ವಿಮರ್ಶೆ ನಡೆಸಬೇಕಾಗುತ್ತದೆ. ಈ ವಿಮರ್ಶೆಯನ್ನೇ ಪರೀಕ್ಷಾ ಎನ್ನಲಾಗುತ್ತದೆ. ಈ ಪರೀಕ್ಷೆಯಿಂದ ಸಂದೇಹವು ನಿವಾರಣೆಯಾದಾಗ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸುತ್ತದೆ. ಇಷ್ಟುಮಾತ್ರದಿಂದ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸಲು ಪರೀಕ್ಷೆಯ ಸಹಕಾರಬೇಕು ಎನ್ನಬಾರದು. ಇದಕ್ಕೆ ತತ್ತ್ವನಿರ್ಣಯಪ್ರಕರಣದಲ್ಲಿ ಆನೆಯ ನಡಿಗೆಗೆ ಗೋಕ್ಷುರಕಪ್ರತಿಬಂಧಕವಾದಂತೆ ಎಂದು ದೃಷ್ಟಾಂತವನ್ನು ಕೊಡಲಾಗಿದೆ. ವಾದಿರಾಜರು ನಡೆಯುವ ವ್ಯಕ್ತಿಗೆ ನದಿ ಅಡ್ಡ ಬಂದಂತೆ, ಎಂಬ ದೃಷ್ಟಾಂತವನ್ನು ಕೊಟ್ಟಿದ್ದಾರೆ. ನಡಿಗೆ ನಮ್ಮ ಸಹಜಶಕ್ತಿ, ಆದರೆ ದಾರಿಗೆ ಅಡ್ಡವಾಗಿ ನದಿ ಬಂದರೆ ನೌಕೆ ಬೇಕಾಗುತ್ತದೆ ಎಂದಮಾತ್ರಕ್ಕೆ ನಮ್ಮ ನಡಿಗೆಗೆ ನೌಕೆಯು ಕಾರಣ ಎನ್ನಲಾಗದು. ಏಕೆಂದರೆ ಯಾವ ತಡೆಯೂ ಇಲ್ಲದ ರಾಜಮಾರ್ಗದಲ್ಲಿ ನಡೆಯಬೇಕಾದರೆ ನೌಕೆಯ ಅಗತ್ಯವೇ ಇಲ್ಲ. ಅದರಂತೆ ಮಾನಸಿಕ ಸಂದೇಹನಿರಾಸಕ್ಕೆ ಮಾತ್ರ ಪರೀಕ್ಷೆಯ ಸಹಾಯಬೇಕಾಗುತ್ತದೆ. ಪ್ರಾಮಾಣ್ಯವನ್ನು ನಿರ್ಧರಿಸಲು ಸಾಕ್ಷಿಗೆ

ಆದರ ಅಗತ್ಯವಿಲ್ಲ. ಇದನ್ನೇ ಶಾಸ್ತ್ರೀಯ ಭಾಷೆಯಲ್ಲಿ ಪರೀಕ್ಷೆಯು ಪ್ರತಿಬಂಧನಿರಾಸಕಾರಣ, ಪ್ರಾಮಾಣ್ಯಗ್ರಹಣಕ್ಕೆ ಕಾರಣವಲ್ಲ ಎನ್ನಲಾಗುತ್ತದೆ. ಇದನ್ನು ಆಚಾರ್ಯರು ವಿಷ್ಣುತತ್ತ್ವನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ.

ಬುದ್ಧಿದೋಷನಿರಾಸಮಾತ್ರಕಾರಣತ್ವಾದ್ ಯುಕ್ತೀನಾಂ.

ಪರೀಕ್ಷಾ - ತದ್ಯೋಗಜನ್ಯಸುಖಾನುಭವಾಖ್ಯಪ್ರವೃತ್ತಿಸಾಮರ್ಥ್ಯವಿಚಾರಃ - ಪರೀಕ್ಷಾ ಎಂದರೆ ಪ್ರವೃತ್ತಿಸಾಮರ್ಥ್ಯವಿಚಾರ. ಅಂದರೆ ನೀರನ್ನು ದೂರದಿಂದ ಕಂಡು ಹತ್ತಿರಹೋಗಿ ಕುಡಿದು ಸುಖವನ್ನು ನುಭವಿಸುವುದು. ಇಂತಹ ಸುಖಾನುಭವವಾದರೆ ಮಾತ್ರ ನೀರಿನ ಜ್ಞಾನವು ಪ್ರಮಾಣವೆಂದು ನಿರ್ಧಾರವಾಗುತ್ತದೆ.

ಹಾಗಾದರೆ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸಬೇಕಾದರೆ ಪ್ರತಿಬಂಧಕಗಳು ಇರಬಾರದು ಎಂದಾಯಿತು. ಅಲ್ಲಿಗೆ ಪ್ರತಿಬಂಧಕಾಭಾವವು ಸಾಕ್ಷಿಗೆ ಸಹಾಯಮಾಡುತ್ತದೆ. ಇಲ್ಲದಿದ್ದರೆ ಅಸಹಾಯಕವಾಗಿ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅದಕ್ಕೂ ಮತ್ತೊಂದರ ಸಹಾಯ ಬೇಕು ಎಂದಂತಾಯಿತು. ಆಗ ಅಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಬಿಟ್ಟಂತೆ. ಅದಕ್ಕೆ ಉತ್ತರ –

ನಿರೋಧಕೋಽಪಿ ಕಾರ್ಯಸ್ಯಾಭಾವಂ ಸಂಪಾದಯೇತ್ಪರಂ ।
ತದಭಾವಸ್ಯಾಪಿ ಕಾರ್ಯೇ ಕಾರಣತ್ವಂ ನ ಶೋಭತೇ ॥ ೩೩೯ ॥

**ಅರ್ಥ–** ನಿರೋಧಕಃ ಅಪಿ = ಪ್ರತಿಬಂಧಕವೂ ಕೂಡ, ಪರಂ = ಹೆಚ್ಚೆಂದರೆ, ಕಾರ್ಯಸ್ಯ = ಕಾರ್ಯದ, ಅಭಾವಂ = ಅಭಾವವನ್ನು, ಸಂಪಾದಯೇತ್ = ಮಾಡೀತು. ತದಭಾವಸ್ಯಾಪಿ = ಪ್ರತಿಬಂಧಕಾಭಾವಕ್ಕೆ, ಕಾರ್ಯೇ ಕಾರಣತ್ವಂ = ಕಾರ್ಯವನ್ನು ಕುರಿತು ಕಾರಣತ್ವವು, ನ ಶೋಭತೇ = ಶೋಭಿಸುವುದಿಲ್ಲ.

**ಅನುವಾದ–** ಪ್ರತಿಬಂಧಕವೂ ಕೂಡ ಕಾರ್ಯದ ಅಭಾವವನ್ನು ಉಂಟುಮಾಡುತ್ತದೆ. ಅಷ್ಟುಮಾತ್ರಕ್ಕೆ ಪ್ರತಿಬಂಧಕಾಭಾವವನ್ನು ಕಾರ್ಯಕ್ಕೆ ಕಾರಣ ಎಂದು ಹೇಳುವುದು ಉಚಿತವಲ್ಲ.

**ಭಾವವಿಲಾಸಿನೀ–** ಮಾಸ್ತು ತರ್ಹಿ ಪ್ರಾಮಾಣ್ಯನಿಶ್ಚಯಂ ಪ್ರತಿ ಪರೀಕ್ಷಾಪೇಕ್ಷಾ । ದೋಷಾಖ್ಯ-ಪ್ರತಿಬಂಧಕಾಭಾವಸ್ಯ ತು ಕಾರಣತಾ ಸ್ಯಾತ್ । ದೋಷಾದ್ಯಪ್ರತಿರುದ್ಧತ್ವಸ್ಯ ಭವದ್ಭಿರಪ್ಯಂಗೀ-ಕಾರಾದಿತ್ಯತ ಆಹ – **ನಿರೋಧಕೋಽಪೀತಿ** ॥ ಕಾರ್ಯಸ್ಯ ಪ್ರಾಮಾಣ್ಯನಿಶ್ಚಯರೂಪಸ್ಯ । ತದಭಾವಸ್ಯಾಪಿ ಪ್ರತಿಬಂಧಕಾಭಾವಸ್ಯಾಪಿ ॥ ೩೩೯ ॥

**ವಿವರಣೆ–** ವಸ್ತುಗಳು ಕಾಣಿಸಲು ಕತ್ತಲೆಯು ಪ್ರತಿಬಂಧಕ. ಆದರೆ ವಸ್ತು ಕಾಣಿಸಲು ಕತ್ತಲೆಯ ಅಭಾವವು ಕಾರಣವಲ್ಲ. ಬೆಳಕು ಕಾರಣ. ಪ್ರತಿಬಂಧಕಾಭಾವವು ಕಾರ್ಯಕ್ಕೆ ಹೇತುವಲ್ಲ.

ಕಾರ್ಯ ಆಗದಿರಲು ಕಾರಣದ ಅಭಾವವೂ ಕಾರಣ. ಪ್ರತಿಬಂಧಕ ಇರುವುದೂ ಕಾರಣ. ಉದಾಹಣೆಗೆ ಕಣ್ಣೇ ಇಲ್ಲದಿದ್ದರೂ ಕಾಣಿಸುವುದಿಲ್ಲ, ಕಣ್ಣಿದ್ದರೂ ಕತ್ತಲೆ ಇದ್ದಾಗ ವಸ್ತುಗಳು ಕಾಣುವುದಿಲ್ಲ. ಹೀಗೆ ಕಾರ್ಯವಾಗದಿರಲು ಕಾರಣಾಭಾವ ಮತ್ತು ಪ್ರತಿಬಂಧಕಸದ್ಭಾವ ಎರಡೂ ಹೇತುವಾಗುತ್ತದೆ. ಇದು ಶ್ಲೋಕದಲ್ಲಿರುವ ನಿರೋಧಕೋऽಪಿ ಎಂಬ ಅಪಿ ಶಬ್ದದ ಅರ್ಥ.

ಪ್ರತಿಬಂಧಕಾಭಾವವು ಕಾರಣವೆಂದರೆ ಮುಂದಿನ ಶ್ಲೋಕಗಳಲ್ಲಿ ಬಾಧಕವನ್ನು ಹೇಳುತ್ತಾರೆ-

**ರುಣದ್ಧಿ ಯದ್ಧಿ ಸಾಮಗ್ರೀಸತ್ವೇऽಪ್ಯಭಿಮತಂ ಫಲಂ ।**
**ಬುಧೈಸ್ತದೇವ ಸರ್ವತ್ರ ಪ್ರತಿಬಂಧಕಮುಚ್ಯತೇ ॥ ೩೪೦ ॥**

**ಅರ್ಥ–** ಬುಧೈಃ = ತಿಳಿದವರಿಂದ, ಯದ್ಧಿ = ಯಾವುದು ಸಾಮಗ್ರೀಸತ್ವೇ ಅಪಿ = ಕಾರ್ಯಕ್ಕೆ ಬೇಕಾಗಿರುವ ಎಲ್ಲ ಸಲಕರಣೆಗಳೂ ಇದ್ದಾಗ, ಅಭಿಮತಂ ಫಲಂ = ಇಷ್ಟವಾದ ಕಾರ್ಯವನ್ನು, ರುಣದ್ಧಿ = ತಡೆಯುವುದೋ, ತದೇವ = ಅದು ಮಾತ್ರ, ಸರ್ವತ್ರ = ಎಲ್ಲ ಕಡೆಗಳಲ್ಲೂ, ಪ್ರತಿಬಂಧಕಂ = ಪ್ರತಿಬಂಧಕವೆಂದು, ಉಚ್ಯತೇ = ಹೇಳಲ್ಪಡುತ್ತದೆ.

**ಅನುವಾದ–** ಯಾವುದು ಕಾರ್ಯಕ್ಕೆ ಬೇಕಾದ ಎಲ್ಲಾ ಸಲಕರಣೆಗಳು ಇದ್ದರೂ ಅಭಿಮತವಾದ ಕಾರ್ಯವನ್ನು ಹುಟ್ಟದಂತೆ ತಡೆಯುತ್ತದೆಯೋ ಅದನ್ನೇ ಜ್ಞಾನಿಗಳು ಎಲ್ಲ ಕಡೆಯೂ ಪ್ರತಿಬಂಧಕವೆಂದು ಕರೆಯುತ್ತಾರೆ.

**ಭಾವವಿಲಾಸಿನೀ–** ಕುತೋ ನ ಶೋಭತ ಇತ್ಯತ ಆಹ – **ರುಣದ್ಧೀತಿ ॥** ಯದ್ವಸ್ತು ಸಾಮಗ್ರೀಸತ್ತ್ವೇऽಪಿ ಕಾರಣಕಲಾಪಸತ್ತ್ವೇऽಪಿ । ಅಭಿಮತಂ ಫಲಂ ದಾಹಾದಿಕಮ್ । ತದೇವ ರೋಧಕಮಣ್ಯಾದಿವಸ್ತ್ವೇವ ಸರ್ವತ್ರ ಸರ್ವಕಾರ್ಯೇಷು । ತಥಾಚ ಪ್ರತಿಬಂಧಕಾಭಾವಸ್ಯ ನ ಕಾರಣಸಾಮಗ್ರ್ಯಾಂ ಪ್ರವೇಶಃ । ತಸ್ಯಾಪಿ ಕಾರಣಸಾಮಗ್ರ್ಯಾಂ ಪ್ರವೇಶೇ ಸಾಮಗ್ರ್ಯಭಾವೇನೈವ ಕಾರ್ಯಾಭಾವಾತ್ ಸಾಮಗ್ರೀಸತ್ತ್ವೇऽಪ್ಯಭಿಮತಫಲರೋಧಕತ್ವಲಕ್ಷಣಂ ಪ್ರತಿಬಂಧಕಂ ಪ್ರತಿಬಂಧಕಾಭಿಮತಸ್ಯ ನ ಸ್ಯಾದಿತಿ ಭಾವಃ ॥ ೩೪೦ ॥

**ವಿವರಣೆ–** ಒಂದು ವಸ್ತುವು ಹುಟ್ಟಲು ಬೇಕಾದ ಎಲ್ಲ ಸಾಮಗ್ರಿಗಳೂ ಇದ್ದರೂ ಯಾವುದರಿಂದಾಗಿ ಆ ವಸ್ತುವು ಹುಟ್ಟುವುದಿಲ್ಲವೋ ಅದು ಪ್ರತಿಬಂಧಕ. ಉದಾಹರಣೆ - ನೀರಿದೆ, ತಗ್ಗು ಇದೆ. ಆದರೂ ನೀರು ಹರಿಯುತ್ತಿಲ್ಲ, ಏಕೆಂದರೆ ಗೋಡೆ ಅಡ್ಡವಾಗಿದೆ. ಆದ್ದರಿಂದ ನೀರು ಹರಿಯಲು ಗೋಡೆಯು ಪ್ರತಿಬಂಧಕವಾಗಿದೆ. ನೀರಿದೆ, ತಗ್ಗಾದ ಜಾಗ ಇಲ್ಲ, ನೀರು ಏಕೆ ಹರಿಯುತ್ತಿಲ್ಲ? ಇದಕ್ಕೆ ಉತ್ತರ - ಪ್ರತಿಬಂಧಕವಿರುವುದರಿಂದ ನೀರು ಹರಿಯುತ್ತಿಲ್ಲ, ಎಂದಲ್ಲ, ಹರಿಯಲು ಬೇಕಾದ ಕಾರಣವಿಲ್ಲವಾದುದರಿಂದ ಹರಿಯುತ್ತಿಲ್ಲ ಎಂದೇ ಸರಿಯಾದ ಉತ್ತರ.

ಹೀಗೆ ಈ ಶ್ಲೋಕದಲ್ಲಿ ಪ್ರತಿಬಂಧಕದ ಲಕ್ಷಣವನ್ನು ನಿರೂಪಿಸಲಾಗಿದೆ. ಇದರ ಪ್ರಕೃತೋಪಯೋಗವನ್ನು ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ. ದಾಹಕ್ಕೆ ಮಣಿಯು ಪ್ರತಿಬಂಧಕ. ಮಣಿಯ ಅಭಾವವು ದಾಹಕ್ಕೆ ಕಾರಣ ಎನ್ನಬಾರದು. ಹಾಗೆ ಹೇಳಿದರೆ ಮಣಿಯಲ್ಲಿ ಪ್ರತಿಬಂಧಕದ ಲಕ್ಷಣವೇ ಬರಲಿಕ್ಕಿಲ್ಲ. ಏಕೆಂದರೆ, ಇಲ್ಲಿ ಕಾರ್ಯ - ದಾಹ. ನೈಯಾಯಿಕರ ಮತದಂತೆ ದಾಹಕ್ಕೆ ಬೇಕಾದ ಸಕಲಸಾಮಗ್ರಿಗಳು ಎಂದರೆ ಬೆಂಕಿ. ವಸ್ತುವಿಗೆ ಬೆಂಕಿಯೊಂದಿಗೆ ಸಂಪರ್ಕ ಮತ್ತು ಮಣಿಯ ಅಭಾವ ಇವಿಷ್ಟು ಇದ್ದಾಗಲೂ ದಾಹ ಆಗದಿದ್ದಲ್ಲಿ ಮಾತ್ರ ಮಣಿಯು ಪ್ರತಿಬಂಧಕವೆಂದಾಗುತ್ತದೆ. ಆದರೆ ಇವಿಷ್ಟು ಇದ್ದಾಗ ದಾಹ ಆಗಿಯೇ ತೀರುತ್ತದೆ. ಆದ್ದರಿಂದ ಮಣ್ಯಭಾವವನ್ನು ದಾಹಕ್ಕೆ (ಸುಡಲು) ಕಾರಣ ಎನ್ನಬಾರದು. ಈಗ ಪ್ರತಿಬಂಧಕದ ಲಕ್ಷಣವನ್ನು ಮಣಿಯಲ್ಲಿ ತೋರಿಸಬಹುದು. ದಾಹಕ್ಕೆ ಕಾರಣ - ಬೆಂಕಿ. ವಸ್ತು ಮತ್ತು ಆ ವಸ್ತುವಿಗೆ ಬೆಂಕಿಯ ಸಂಪರ್ಕ, ಇವಿಷ್ಟು ಇದ್ದರೂ ಮಣಿ ಇದ್ದರೆ ದಾಹವಾಗುವುದಿಲ್ಲ. ಆದ್ದರಿಂದ ಮಣಿಯು ಪ್ರತಿಬಂಧಕ.

ಪ್ರಕೃತದಲ್ಲಿ, ಸಾಕ್ಷಿಯು ಪ್ರಾಮಾಣ್ಯವನ್ನು ನಿಶ್ಚಯಿಸಲು ದೋಷಗಳು ಪ್ರತಿಬಂಧಕ. ಏಕೆಂದರೆ, ಜ್ಞಾನ, ಸಾಕ್ಷಿ ಇವೆರಡೂ ಇದ್ದಾಗಲೂ ದೋಷವಿದ್ದರೆ ಸಾಕ್ಷಿಯು ಪ್ರಾಮಾಣ್ಯವನ್ನು ನಿರ್ಧರಿಸುವುದಿಲ್ಲ. ಆದ್ದರಿಂದ ದೋಷವು ಪ್ರತಿಬಂಧಕ. ಒಂದು ವೇಳೆ ದೋಷಾಭಾವವೂ ಪ್ರಾಮಾಣ್ಯನಿಶ್ಚಯಕ್ಕೆ ಕಾರಣವಾದರೆ ಪ್ರತಿಬಂಧಕದ ಲಕ್ಷಣವನ್ನು ದೋಷದಲ್ಲಿ ಸಮನ್ವಯಮಾಡಲಾಗದು. ಆದ್ದರಿಂದ ದೋಷಾಭಾವವು ಕಾರಣವಲ್ಲ.

**ಉಷ್ಣಸ್ಪರ್ಶಭರೇಣೋಗ್ರಃ ಶಕ್ತೋ ದಗ್ಧುಂ ಹಿ ಪಾವಕಃ ।**
**ಮಂತ್ರಾದಿಪ್ರತಿಬದ್ಧಸ್ತು ನ ದಹೇದನ್ಯಥಾ ದಹೇತ್ ॥ ೩೪೧ ॥**

**ಅರ್ಥ–** ಉಷ್ಣಸ್ಪರ್ಶಭರೇಣ = ತನ್ನಲ್ಲಿರುವ ಬಿಸಿಯಿಂದಾಗಿ, ಉಗ್ರಃ ಪಾವಕಃ = ಭಯಂಕರವಾದ ಬೆಂಕಿಯು, ದಗ್ಧುಂ = ಸುಡಲು, ಶಕ್ತಃ = ಸಮರ್ಥವಾಗಿದೆ. ಮಂತ್ರಾದಿಪ್ರತಿಬದ್ಧಸ್ತು = ಮಣಿ ಅಥವಾ ಮಂತ್ರಗಳಿಂದ ತಡೆಯಲ್ಪಟ್ಟಾಗ, ನ ದಹೇತ್ = ಸುಡುವುದಿಲ್ಲ. ಅನ್ಯಥಾ = ಇಲ್ಲವಾದರೆ, ದಹೇದ್ಧಿ = ಸುಡುತ್ತದೆಯಷ್ಟೇ.

**ಅನುವಾದ–** ಉಗ್ರವಾದ ಬೆಂಕಿಯು ಉಷ್ಣಸ್ಪರ್ಶವಿರುವ ಕಾರಣದಿಂದಾಗಿ ಸ್ವಾಭಾವಿಕವಾಗಿ ಸುಡುತ್ತದೆ. ಅದೇ ಬೆಂಕಿಯು ಮಣಿ ಮಂತ್ರಾದಿಗಳಿಂದ ಪ್ರತಿಬದ್ಧವಾದರೆ ಸುಡುವುದಿಲ್ಲ. ಅಂತಹ ಪ್ರತಿಬಂಧಕಗಳು ಇಲ್ಲದಿರುವಾಗ ಸುಡುತ್ತದೆಯಷ್ಟೇ!

**ಭಾವವಿಲಾಸಿನೀ–**ತದುಪಪಾದಯತಿ – **ಉಷ್ಣಸ್ಪರ್ಶೇತಿ** ॥ ಉಷ್ಣಸ್ಪರ್ಶಭರೇಣ ಸ್ವಯಮೇವ ದಗ್ಧುಂ **ಶಕ್ತಃ** ಪಾವಕೋ ಮಂತ್ರಾದಿಪ್ರತಿಬದ್ಧಸ್ತು ನ ದಹೇತ್ । ಅನ್ಯಥಾ ಮಂತ್ರಾದಿಪ್ರತಿಬಂಧಕಾಭಾವೇ ಉಷ್ಣಸ್ಪರ್ಶಭರೇಣೈವ ದಹೇದ್ಧೀತಿ ಪೂರ್ವಪದಾವೃತ್ತ್ಯಾ ಯೋಜನಾ ॥ ೩೪೧ ॥

**ವಿವರಣೆ–** ಸುಡುವ ಶಕ್ತಿ ಬೆಂಕಿಗೆ ಸಹಜವಾಗಿಯೇ ಇದೆ, ಆದರೆ ಚಂದ್ರಕಾಂತ ಮಣಿ ಅಥವಾ ಅಗ್ನಿಸ್ತಂಭನವಿದ್ಯೆ ಇವುಗಳಿದ್ದಾಗ ಅದು ಸುಡುವುದಿಲ್ಲ. ಇದರಿಂದ ಅಗ್ನಿಯಿಂದಾಗುವ ದಾಹಕ್ಕೆ ಮಣಿ ಮಂತ್ರಾದಿಗಳು ಪ್ರತಿಬಂಧಕಗಳೆಂದು ತಿಳಿಯುತ್ತದೆ. ಅಷ್ಟುಮಾತ್ರಕ್ಕೆ ಬೆಂಕಿಗೆ ಸುಡುವ ಶಕ್ತಿಯು ಅಸಹಜ, ಪ್ರತಿಬಂಧಕಾಭಾವವು ದಾಹಕ್ಕೆ ಕಾರಣವೆಂದೇನೂ ಆಗುವುದಿಲ್ಲ. ಅದರಂತೆ, ಸಾಕ್ಷಿಗೆ ಪ್ರಾಮಾಣ್ಯಗ್ರಹಣಶಕ್ತಿಯು ಸಹಜವಾದುದು. ದೋಷಾದಿಗಳು ಅದಕ್ಕೆ ಪ್ರತಿಬಂಧಕಗಳು. ದೋಷಾಭಾವವು ಕಾರಣವಲ್ಲ.

ಸುರೋತ್ತಮರು ಶ್ಲೋಕದ ಪದಾವೃತ್ತಿ ಮಾಡಿ ಅನ್ವಯವನ್ನು ತೋರಿಸಿದ್ದಾರೆ. ಅನ್ಯಥಾ - ಮಂತ್ರಾದಿಪ್ರತಿಬಂಧಕಾಭಾವೇ, ಉಷ್ಣಸ್ಪರ್ಶಭರೇಣೈವ ದಹೇದ್ಧಿ ಇತಿ ಪೂರ್ವಪದಾವೃತ್ತ್ಯಾ ಯೋಜನಾ.

ಪ್ರತಿಬಂಧಕದ ಲಕ್ಷಣ - ಕಾರಣೀಭೂತ ಅಭಾವಪ್ರತಿಯೋಗಿತ್ವಂ, ದಾಹಕ್ಕೆ ಮಣಿಯ ಅಭಾವವು ಕಾರಣ. ಅಂತಹ ಅಭಾವಕ್ಕೆ ಪ್ರತಿಯೋಗಿ ಮಣಿ. ಆದ್ದರಿಂದ ಮಣಿಯು ಪ್ರತಿಬಂಧಕ. ಹೀಗೆ ಮಣಿಯು ಪ್ರತಿಬಂಧಕವಾಗಬೇಕಾದರೆ ಮಣಿಯ ಅಭಾವವು ಕಾರಣವಾಗಲೇಬೇಕಾಗುತ್ತದೆ. ಆದ್ದರಿಂದ ಪ್ರತಿಬಂಧಕಾಭಾವವನ್ನು ಕಾರಣವೆಂದು ಹೇಳಲೇಬೇಕು. ಈ ಆಕ್ಷೇಪಕ್ಕೆ ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

**ಯತ್ಪ್ರಾಗಭಾವಾದುದಯನ್ ಘಟೋ ನ ಸ್ವನಿರೋಧಕೃತ್ ।**
**ಯತಸ್ತನ್ತುವಿನಾಶೇನ ಪಟನಾಶೇನ ತನ್ತುಷು ।**
**ತದ್ರೋದ್ಧೃತಾ ಯತಶ್ಚೇಶೋ ನಿತ್ಯಃ ಕ್ಷ್ಮಾಪಾತರೋಧಕೃತ್ ॥ ೩೪೨ ॥**

**ಅರ್ಥ–** ಯತ್ = ಯಾವಕಾರಣದಿಂದ, ಪ್ರಾಗಭಾವಾತ್ = ತನ್ನ ಪ್ರಾಗಭಾವದಿಂದ, ಉದಯನ್ = ಹುಟ್ಟುವ, ಘಟಃ = ಮಡಿಕೆಯು, ಸ್ವನಿರೋಧಕೃತ್ = ತನಗೆ ತಾನೇ ಪ್ರತಿಬಂಧಕವು, ನ = ಅಲ್ಲ. ಯತಃ = ಯಾವ ಕಾರಣದಿಂದ, ತಂತುವಿನಾಶೇನ = ನೂಲಿನ ನಾಶದಿಂದ, ಪಟನಾಶೇ = ಬಟ್ಟೆಯು ನಾಶವಾದಾಗ, ತಂತುಷು = ನೂಲುಗಳಲ್ಲಿ ತದ್‌ರೋದ್ಧೃತಾ = ಪಟಪ್ರತಿಬಂಧಕತ್ವವು, ನ = ಇಲ್ಲ.

ಯತಶ್ಚ = ಯಾವಕಾರಣದಿಂದ, ನಿತ್ಯಃ = ನಿತ್ಯನಾದ, ಈಶಃ = ಪರಮಾತ್ಮನು, ಕ್ಷ್ಮಾಪಾತರೋಧಕೃತ್ = ಭೂಮಿಯ ಪತನಕ್ಕೆ ಪ್ರತಿಬಂಧನಾಗಿದ್ದಾನೆ. ಆದ್ದರಿಂದ ಕಾರಣೀಭೂತಾಭಾವಪ್ರತಿಯೋಗಿತ್ವವು ಪ್ರತಿಬಂಧಕದ ಲಕ್ಷಣವಲ್ಲ.

**ಅನುವಾದ– ಯಾವ ಕಾರಣದಿಂದ ತನ್ನ ಪ್ರಾಗಭಾವದಿಂದ ಹುಟ್ಟಿರುವ ಘಟವು ತನಗೆ ತಾನೇ ಪ್ರತಿಬಂಧಕವಲ್ಲವೋ. ಯಾವ ಕಾರಣದಿಂದ ತಂತುನಾಶದಿಂದ**

ಪಟನಾಶವಾದಾಗ ತಂತುವು ಪಟಕ್ಕೆ ಪ್ರತಿಬಂಧಕವಲ್ಲವೋ, ಯಾವ ಕಾರಣದಿಂದ ನಿತ್ಯನಾದ ಪರಮಾತ್ಮನು ಕೂರ್ಮರೂಪದಿಂದ ಭೂಪತನಕ್ಕೆ ಪ್ರತಿಬಂಧಕನಾಗಿರುವನೋ, ಈ ಕಾರಣಗಳಿಂದಾಗಿ ಕಾರಣೀಭೂತಾಭಾವ ಪ್ರತಿಯೋಗಿತ್ವಂ ಪ್ರತಿಬಂಧಕತ್ವಂ ಎಂದು ಹೇಳಬಾರದು.

**ಭಾವವಿಲಾಸಿನೀ–** ನನು ಸತಿ ಪುಷ್ಕಲಕಾರಣೇ ಕಾರ್ಯಾಭಾವಸಮ್ಪಾದಕಂ ಪ್ರತಿಬಂಧಕತ್ವಮಿತಿ ಪ್ರತಿಬಂಧಕಲಕ್ಷಣಂ ಚೇತ್ ಸ್ಯಾದೇವ ಪ್ರತಿಬಂಧಕಾಭಾವಸ್ಯ ಕಾರಣಕೋಟಾವಪ್ರವೇಶಃ । ಕಾರಣೀಭೂತಾಭಾವಪ್ರತಿಯೋಗಿತ್ವಂ ಪ್ರತಿಬಂಧಕತ್ವಮಿತಿ ಪಕ್ಷೇ ಕಥಮುಕ್ತೋ ದೋಷ ಇತ್ಯತಸ್ತಲ್ಲಕ್ಷಣಂ ದೂಷಯತಿ – **ಯದಿತಿ** ॥ ಯದ್ಯಸ್ಮಾತ್ಕಾರಣಾತ್ ಪ್ರಾಗಭಾವಾತ್ ಸ್ವಪ್ರಾಗಭಾವಾದ್ ಉದಯನುತ್ಪದ್ಯಮಾನಃ ನ ಸ್ವನಿರೋಧಕೃತ್ ಸ್ವಪ್ರತಿಬಂಧಕೋ ನೇತಿ ಸಂಬಂಧಃ । ನಹಿ ಸ್ವಕಾರಣೀಭೂತಸ್ವಪ್ರಾಗಭಾವಪ್ರತಿಯೋಗೀ ಘಟಃ ಪ್ರತಿಬಂಧಕ ಇತ್ಯುಚ್ಯತೇ ಲೋಕೈಃ । ತಥಾಚ ತ್ವದುಕ್ತಲಕ್ಷಣಂ ಘಟೇಽತಿವ್ಯಾಪ್ತಮಿತಿ ಭಾವಃ । ಸ್ಥಲಾಂತರೇಽಪ್ಯತಿವ್ಯಾಪ್ತಿಂ ದರ್ಶಯತಿ – **ಯತ ಇತಿ** ॥ ಯತೋ ಯಸ್ಮಾತ್ಕಾರಣಾತ್ । ತನ್ತುನಾಶೇನ ಪಟನಾಶೇ ಜಾಯಮಾನೇ ಸತಿ ಪಟನಾಶಕಾರಣೀಭೂತಾಭಾವಃ ತನ್ತುನಾಶಸ್ತತ್ಪ್ರತಿಯೋಗಿತ್ವಂ ತನ್ತುಷ್ವಸ್ತೀತಿ ಹೇತೋಃ ತಂತೂನಾಂ ತದ್ರೋದ್ಧೃತಾ ಪಟನಾಶರೋದ್ಧೃತಾ ನೇತಿ ಸಂಬಂಧಃ । ತನ್ತುಷು ಸತ್ಸ್ವೇವ ತನ್ತುಸಂಯೋಗನಾಶಜನ್ಯಪಟನಾಶಸ್ಯ ಜಾಯಮಾನತ್ವೇನ ತನ್ತೂನಾಂ ಪಟನಾಶಂ ಪ್ರತ್ಯಪ್ರತಿಬಂಧಕತ್ವಾತ್ । ತಥಾಚ ಪಟನಾಶಕಾರಣೀಭೂತತನ್ತುಧ್ವಂಸಪ್ರತಿಯೋಗಿಷು ಪಟನಾಶಾಪ್ರತಿಬಂಧಕೇಷು ಚ ತನ್ತುಷ್ವತಿವ್ಯಾಪ್ತಂ ಪರೋಕ್ತಲಕ್ಷಣಮಿತಿ ಭಾವಃ । ಅತಿವ್ಯಾಪ್ತಿಮುಕ್ತ್ವಾಽವ್ಯಾಪ್ತಿಮಪ್ಯಾಹ – **ಯತಶ್ಚೇತಿ** ॥ ನಿತ್ಯ ಇತ್ಯನೇನ ಕಾರಣೀ-ಭೂತಾಭಾವಪ್ರತಿಯೋಗಿತ್ವಮೀಶ್ವರಸ್ಯ ನಾಸ್ತೀತಿ ದ್ಯೋತಯತಿ । ಕ್ಷ್ಮಾಪಾತರೋಧಕೃತ್ ಕೂರ್ಮರೂಪೇಣಾಸುಭೂಪತನಪ್ರತಿಬಂಧಕೃತ್ । ತಥಾಚ ಭೂಪತನಪ್ರತಿಬಂಧಕೇ ಈಶ್ವರೇ ತ್ವದುಕ್ತಲಕ್ಷಣಾಭಾವಾದವ್ಯಾಪ್ತಿರಿತಿ ಭಾವಃ ॥ ೩೪೨ ॥

**ವಿವರಣೆ–** ಹಿಂದೆ ಹೇಳಿದ ಪ್ರತಿಬಂಧಕಲಕ್ಷಣದ ಪ್ರಕಾರ ಪ್ರತಿಬಂಧಕಾಭಾವವು ಕಾರಣಸಾಮಗ್ರಿಯಲ್ಲಿ ಸೇರುವುದಿಲ್ಲ. ಆದರೆ ನೈಯಾಯಿಕರು ಕಾರಣೀ-ಭೂತಾಭಾವಪ್ರತಿಯೋಗಿತ್ವಂ ಎಂದು ಪ್ರತಿಬಂಧಕದ ಲಕ್ಷಣವನ್ನು ಹೇಳುತ್ತಾರೆ. ಯಾವುದು ಇಲ್ಲದಿರುವಾಗ ಮಾತ್ರ ಕಾರ್ಯವು ಹುಟ್ಟುವುದೋ, ಅದು ಪ್ರತಿಬಂಧ. ಮಣಿ ಇಲ್ಲದಿರುವಾಗಲೇ ದಾಹವು ಉಂಟಾಗುತ್ತದೆ. ಆದ್ದರಿಂದ ಮಣಿಯು ಪ್ರತಿಬಂಧಕ. ಈ ಲಕ್ಷಣದಂತೆ ಪ್ರತಿಬಂಧಕಾಭಾವವು ಕಾರ್ಯಕ್ಕೆ ಹೇತು ಎಂದು ಹೇಳಲೇಬೇಕಾಗುತ್ತದೆ. ಇದು ನೈಯಾಯಿಕರ ಆಕ್ಷೇಪ.

ನೈಯಾಯಿಕರು ಹೇಳುವ ಈ ಪ್ರತಿಬಂಧಕ ಲಕ್ಷಣಕ್ಕೆ ಎರಡು ಕಡೆ ಅತಿವ್ಯಾಪ್ತಿಯನ್ನೂ ಒಂದು ಕಡೆ ಅವ್ಯಾಪ್ತಿಯನ್ನೂ ತೋರಿಸಲಾಗಿದೆ.

ಅತಿವ್ಯಾಪ್ತಿ - 1. ಘಟಕ್ಕೆ ಘಟಪ್ರಾಗಭಾವವು ಕಾರಣ. ಅಲ್ಲಿಗೆ ಕಾರಣೀಭೂತವಾದ ಅಭಾವಕ್ಕೆ ಪ್ರತಿಯೋಗಿಯಾಗಿದೆ ಘಟ. ಆದರೆ ಘಟಕ್ಕೆ ಘಟವು ಪ್ರತಿಬಂಧಕವಲ್ಲ.

ಅತಿವ್ಯಾಪ್ತಿ - 2. ಪಟನಾಶಕ್ಕೆ ಕಾರಣವಾದುದು ತಂತುನಾಶ. ಅದಕ್ಕೆ ಪ್ರತಿಯೋಗಿ ತಂತು. ಆದರೆ ತಂತುವು ಪಟನಾಶಕ್ಕೆ ಪ್ರತಿಬಂಧಕವಲ್ಲ.

ಅವ್ಯಾಪ್ತಿ - ಭೂಗೋಳವು ಪ್ರಲಯೋದಕದಲ್ಲಿ ಬೀಳದಂತೆ ಕೂರ್ಮರೂಪದಿಂದ ಪರಮಾತ್ಮನು ತಡೆದಿದ್ದಾನೆ. ಅವನು ಭೂಗೋಳದ ಪತನಕ್ಕೆ ಪ್ರತಿಬಂಧಕ. ಆದರೆ ಅವನಲ್ಲಿ ಕಾರಣೀಭೂತ ಅಭಾವಪ್ರತಿಯೋಗಿತ್ವ ಎಂಬ ತಾರ್ಕಿಕರು ಹೇಳುವ ಪ್ರತಿಬಂಧಕದ ಲಕ್ಷಣವು ಇಲ್ಲ. ಏಕೆಂದರೆ, ಪರಮಾತ್ಮನು ನಿತ್ಯನಾದುದದರಿಂದ ಅವನು ಅಭಾವಕ್ಕೆ ಪ್ರತಿಯೋಗಿಯಲ್ಲ.

ತದ್‌ರೋದ್ಧೃತಾ - ಪಟನಾಶರೋದ್ಧೃತಾ ನೇತಿ ಸಂಬಂಧಃ । ತದ್‌ರೋದ್ಧೃತಾ ಎಂಬುದು ಸಮಸ್ತಪದ. ತಸ್ಯ ರೋದ್ಧೃತಾ ಎಂದು ವಿಗ್ರಹ. ಪಟನಾಶಪ್ರತಿಬಂಧಕತ್ವವು ತಂತುವಿಗೆ ಇಲ್ಲ. ಏಕೆಂದರೆ ತಂತುಸಂಯೋಗನಾಶದಿಂದ ಪಟನಾಶವಾದಾಗ ತಂತುವು ನಾಶವಾಗದೇ ಉಳಿದಿರುತ್ತದೆ. ಆದರೂ ಪಟವು ನಾಶವಾಗುತ್ತದೆ. ಆದ್ದರಿಂದ ತಂತುವು ಪಟನಾಶಕ್ಕೆ ಪ್ರತಿಬಂಧಕವಲ್ಲ.

ಕ್ಷ್ಮಾಪ್ರಾತರೋಧಕೃತ್ - ಕೂರ್ಮರೂಪೇಣ ಅಪ್ಸು ಭೂಪತನಪ್ರತಿಬಂಧಕೃತ್ । ಪರಮಾತ್ಮನು ಕೂರ್ಮರೂಪವನ್ನು ಧರಿಸಿ ಪ್ರಲಯೋದಕದಲ್ಲಿ ಭೂಮಿಯು ಮುಳುಗದಂತೆ ತಡೆಹಿಡಿದಿರುತ್ತಾನೆ.

**ಅತೋ ನ ಕಾರಣೀಭೂತಾಭಾವಸ್ಯ ಪ್ರತಿಯೋಗಿತಾ ।**
**ಪ್ರತಿಬಂಧಕತಾ ಕಿನ್ತು ಪೂರ್ವೋಕ್ತೈವ ಸತಾಂ ಮತಾ ॥ ೩೪೩ ॥**

**ಅರ್ಥ–** ಅತಃ = ಅತಿವ್ಯಾಪ್ತಿ ಮತ್ತು ಅವ್ಯಾಪ್ತಿ ದೋಷಗಳು ಇರುವ ಕಾರಣದಿಂದಾಗಿ, ಕಾರಣೀಭೂತಾಭಾವಪ್ರತಿಯೋಗಿತಾ = ಕಾರಣವಾದ ಅಭಾವಕ್ಕೆ ಪ್ರತಿಯೋಗಿಯಾಗಿರುವುದು, ಪ್ರತಿಬಂಧಕತಾ = ಪ್ರತಿಬಂಧಕತ್ವವು, ನ = ಅಲ್ಲ. ಕಿಂತು = ಹೊರತಾಗಿ, ಪೂರ್ವೋಕ್ತೈವ = ನಾವು ಹಿಂದೆ ಹೇಳಿದ ರೀತಿಯ ಪ್ರತಿಬಂಧಕತ್ವವೇ, ಸತಾಂ = ಸಜ್ಜನರಿಗೆ, ಮತಾ = ಅಭಿಮತವಾಗಿದೆ.

**ಅನುವಾದ–** ಕಾರಣೀಭೂತಾಭಾವಪ್ರತಿಯೋಗಿತ್ವಂ ಪ್ರತಿಬಂಧಕತ್ವಂ ಎಂದು ಹೇಳಿದರೆ ಹಿಂದೆ ಹೇಳಿದ ಅತಿವ್ಯಾಪ್ತಿ ಅವ್ಯಾಪ್ತಿದೋಷಗಳು ಬರುತ್ತವೆ. ಆದ್ದರಿಂದ ಅದು ಪ್ರತಿಬಂಧಕತ್ವದ ಸ್ವರೂಪವಲ್ಲ. ಹಿಂದೆ ನಾವು ಹೇಳಿದುದೇ ಪ್ರತಿಬಂಧಕತ್ವ ಸ್ವರೂಪವೆಂದು ಸಜ್ಜನರಿಗೆ ಅಭಿಮತವಾದುದು.

**ಭಾವವಿಲಾಸಿನೀ–** ಅತಃ ಅವ್ಯಾಪ್ತ್ಯತಿವ್ಯಾಪ್ತ್ಯಾದಿದೋಷಗ್ರಸ್ತತ್ವಾದಿತ್ಯರ್ಥಃ । ಪೂರ್ವೋಕ್ತ್ಯೈವ ರುಣದ್ಧೀತಿ ಪೂರ್ವವಾಕ್ಯೋಕ್ತ್ಯೈವ ॥ ೩೪೩ ॥

**ವಿವರಣೆ–** ನಾವು ಹೇಳಿದಂತೆ ಕಾರ್ಯೋತ್ಪಾದಕ ಸಕಲ ಸಾಮಗ್ರೀಸತ್ವೇ ಯತ್ಸತ್ವೇ ಕಾರ್ಯಂ ನೋತ್ಪದ್ಯತೇ ತತ್ ಪ್ರತಿಬಂಧಕಂ ಎಂದೇ ಪ್ರತಿಬಂಧಕದ ಲಕ್ಷಣವನ್ನು ಹೇಳಬೇಕು. ಆದ್ದರಿಂದ ಪ್ರಾಮಾಣ್ಯಗ್ರಹಣಪ್ರತಿಬಂಧಕವಾದ ದೋಷಾಭಾವವು ಪ್ರಾಮಾಣ್ಯಗ್ರಹಣಕ್ಕೆ ಕಾರಣವಲ್ಲ.

ಪೂರ್ವೋಕ್ತ್ಯೈವ - ಹಿಂದೆ 340ನೇ ಶ್ಲೋಕದಲ್ಲಿ ಹೇಳಿದ ರುಣದ್ಧಿ ಯದ್ಧಿ ಸಾಮರ್ಥ್ಯಂ ಎಂಬುದೇ ಪ್ರತಿಬಂಧಕದ ಲಕ್ಷಣ.

ನೀವು ಹೇಳಿದ ಪ್ರತಿಬಂಧಕಲಕ್ಷಣವೂ ಸರಿಯಲ್ಲ. ಏಕೆಂದರೆ, ಆ ಲಕ್ಷಣವು ಪ್ರತಿಬಂಧಕಾದೃಷ್ಟದಲ್ಲಿ ಇಲ್ಲ. ಪ್ರತಿಬಂಧಕವಾದ ಅದೃಷ್ಟವು ಕಾರ್ಯಕ್ಕೆ ಬೇಕಾದ ಕಾರಣಕಲಾಪಗಳನ್ನು ಇರದಂತೆ ಮಾಡುತ್ತದೆ. ಅಂತಹ ಅದೃಷ್ಟದಲ್ಲಿ ಸತಿ ಪುಷ್ಕಲಕಾರಣೇ ಇತ್ಯಾದಿ ಪ್ರತಿಬಂಧಕಲಕ್ಷಣವು ಬರುವುದಿಲ್ಲ. ಈ ಆಕ್ಷೇಪಕ್ಕೆ ಪರಿಹಾರವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ -

**ಮಣ್ಯಾದಿರ್ಮುಖ್ಯತೋ ರೋದ್ಧಾ ತಸ್ಯೈವಾದರ್ಶಿ ಲಕ್ಷಣಮ್ ।**
**ಹೇತೋರ್ವಿಘಟಕಾದೃಷ್ಟಂ ತ್ವಮುಖ್ಯಂ ತನ್ನ ಲಕ್ಷಿತಮ್ ॥ ೩೪೪ ॥**

**ಅರ್ಥ–** ಮುಖ್ಯತಃ = ಮುಖ್ಯವಾಗಿ, ರೋದ್ಧಾ = ಪ್ರತಿಬಂಧಕವಾದುದು, ಮಣ್ಯಾದಿಃ = ಮಣಿ ಮುಂತಾದವು. ಅತಃ, ತಸ್ಯೈವ = ಅದಕ್ಕೆ ಮಾತ್ರ, ಲಕ್ಷಣಂ = ಲಕ್ಷಣವು, ಆದರ್ಶಿ = ತೋರಿಸಲ್ಪಟ್ಟಿದೆ. ಹೇತೋಃ = ಕಾರಣಗಳಿಗೆ, ವಿಘಟಕಾದೃಷ್ಟಂ ತು = ಪ್ರತಿಬಂಧಕವಾದ ಅದೃಷ್ಟವಾದರೋ, ಅಮುಖ್ಯಂ = ಅಮುಖ್ಯವಾದ ಪ್ರತಿಬಂಧಕ. ಅತಃ ತತ್ = ಅಂತಹ ಪ್ರತಿಬಂಧಕವು, ನ ಲಕ್ಷಿತಂ = ಲಕ್ಷಣವುಳ್ಳದ್ದಾಗಿ ತೋರಿಸಲ್ಪಟ್ಟಿಲ್ಲ.

**ಅನುವಾದ–** ಪ್ರಕೃತದಲ್ಲಿ ವಿವಕ್ಷಿತವಾದ ಪ್ರತಿಬಂಧಕವೆಂದರೆ - ದಾಹಕ್ಕೆ ಪ್ರತಿಬಂಧಕವಾದ ಮಣ್ಯಾದಿಗಳು. ಅವು ಕಾರ್ಯಕ್ಕೆ ಬೇಕಾದ ಎಲ್ಲ ಸಾಮಗ್ರಿಗಳು ಇದ್ದರೂ ಅವುಗಳು ಕಾರ್ಯವಾಗದಂತೆ ತಡೆಯುತ್ತವೆ. ಆದರೆ ಪಾಪಾದಿಗಳು ಹೀಗಲ್ಲ. ಅವುಗಳು ಕಾರ್ಯಕ್ಕೆ ಬೇಕಾದ ಸಾಮಗ್ರಿಗಳೇ ಸಿಗದಂತೆ ಮಾಡುತ್ತವೆ. ಉದಾಹರಣೆಗೆ ಉದ್ಯೋಗಕ್ಕೆ ಬೇಕಾದ ಸಾಮಗ್ರಿ - ಪದವಿ. ಪಾಪವು ನಮಗೆ ಪದವಿಯನ್ನೇ ಸಿಗದಂತೆ ಮಾಡುತ್ತದೆ. ಇಂತಹ ಪ್ರತಿಬಂಧಕದಲ್ಲಿ ಪ್ರಕೃತ ಪ್ರತಿಬಂಧಕದ ಲಕ್ಷಣ ಬರುವುದಿಲ್ಲ. ಆದರೂ ಲಕ್ಷಣಕ್ಕೆ ಅವ್ಯಾಪ್ತಿ ದೋಷವಿಲ್ಲ. ಏಕೆಂದರೆ ಇಂತಹ ಪ್ರತಿಬಂಧಕಗಳು ಅಮುಖ್ಯಪ್ರತಿಬಂಧಕಗಳು. ಆದ್ದರಿಂದ ಅವುಗಳು ಪ್ರಕೃತಲಕ್ಷಣಕ್ಕೆ ಲಕ್ಷ್ಯಗಳೇ ಅಲ್ಲ.

**ಭಾವವಿಲಾಸಿನೀ–** ನನು ಸಾಮಗ್ರೀವಿಘಟಕಮದೃಷ್ಟಂ ಪ್ರತಿಬಂಧಕಮಿತ್ಯುಚ್ಯತೇ । ತತ್ರ ಸತಿ ಪುಷ್ಕಲಕಾರಣೇ ಕಾರ್ಯಾಭಾವಸಮ್ಪಾದಕತ್ವಸ್ಯ ಭವದುಕ್ತಲಕ್ಷಣಸ್ಯಾವ್ಯಾಪ್ತಿರಿತ್ಯತ ಆಹ – **ಮಣ್ಯಾದಿರಿತಿ ॥** ಹೇತೋಃ ಕಾರಣಕಲಾಪಸ್ಯ ವಿಘಟಕಂ ಯದದೃಷ್ಟಂ ತತ್ತ್ವಮುಖ್ಯ-ಪ್ರತಿಬಂಧಕಮ್ । ಕಾರ್ಯಾಜನಕಸಾಮಗ್ರೀಸಂಘಟನಪ್ರತಿಬಂಧದ್ವಾರಾ ಪರಮ್ಪರಯಾ ಕಾರ್ಯಪ್ರತಿಬಂಧನಾತ್। ತತ್ತಸ್ಮಾನ್ಮುಖ್ಯಪ್ರತಿಬಂಧಕತ್ವಾಭಾವಾನ್ನ ಲಕ್ಷಿತಂ ಲಕ್ಷಣವತ್ತಯಾ ನ ಪ್ರದರ್ಶಿತಮ್ । ಮಣ್ಯಾದಿಸ್ತು ಸಾಕ್ಷಾತ್ಕಾರ್ಯಂ ಪ್ರತ್ಯೇವ ಪ್ರತಿಬಂಧಕತ್ವೇನ ಮುಖ್ಯಪ್ರತಿಬಂಧಕತ್ವಾತ್ತಸ್ಯೈವ ಲಕ್ಷಣಮುಕ್ತಮಿತಿ ಭಾವಃ। ನಹಿ ಮುಖ್ಯಗಂಗಾಲಕ್ಷಣಂ ವದನ್ತೋಽಮುಖ್ಯತೀರಮಪಿ ಸಂಗೃಹ್ಣಂತೀತಿ ಭಾವಃ ॥ ೩೪೪ ॥

**ವಿವರಣೆ–** ಕಾರ್ಯವು ಹುಟ್ಟಲು ಅತ್ಯಂತ ಅವಶ್ಯಕವಾಗಿರುವ ಕಾರಣಸಾಮಗ್ರೀಯನ್ನು ಹಾಳುಗೆಡವುವ ಅದೃಷ್ಟವೇ ಪ್ರತಿಬಂಧಕವೆನಿಸುತ್ತದೆ. ಆದರೆ ಈ ಪ್ರತಿಬಂಧಕದಲ್ಲಿ ನೀವು ಹೇಳಿದ ಪ್ರತಿಬಂಧಕ ಲಕ್ಷಣಕ್ಕೆ ಎಲ್ಲ ಕಾರಣಗಳಿದ್ದಾಗಲೂ ಯಾವುದು ಕಾರ್ಯವಾಗದಂತೆ ಮಾಡುತ್ತದೋ ಅದೇ ಪ್ರತಿಬಂಧಕವೆಂಬ ಲಕ್ಷಣಕ್ಕೆ ಅವ್ಯಾಪ್ತಿ ಬರುವುದಿಲ್ಲವೇ ಎಂಬ ಪ್ರಶ್ನೆಗೆ ಹೀಗೆ ಉತ್ತರ ಹೇಳಬೇಕು - ಕಾರಣ ಸಾಮಗ್ರಿಯನ್ನು ನಾಶಮಾಡುವ ಅದೃಷ್ಟವು ಅಮುಖ್ಯಪ್ರತಿಬಂಧಕವಾಗಿದೆ. ಏಕೆಂದರೆ ಅದು ಕಾರ್ಯಕ್ಕೆ ಬೇಕಾಗಿರುವ ಕಾರಣಗಳನ್ನು ತಡೆಹಿಡಿಯುವ ಮೂಲಕ ಪರಂಪರಯಾ ಕಾರ್ಯಕ್ಕೆ ಪ್ರತಿಬಂಧಕವಾಗಿದೆ. ಆದ್ದರಿಂದ ಅದು ಮುಖ್ಯಪ್ರತಿಬಂಧಕವಲ್ಲವಾದ್ದರಿಂದ ನಮ್ಮ ಮುಖ್ಯಪ್ರತಿಬಂಧಕದ ಲಕ್ಷಣಕ್ಕೆ ಲಕ್ಷಣವೇ ಅಲ್ಲ. ಮಣಿ ಮೊದಲಾದವುಗಳು ದಾಹಾದಿಗಳಿಗೇ ನೇರವಾಗಿ ಪ್ರತಿಬಂಧಕಗಳಾದ್ದರಿಂದ ಮುಖ್ಯಪ್ರತಿಬಂಧಕಗಳೆನಿಸಿವೆ. ಆದ್ದರಿಂದ ಅವುಗಳನ್ನು ಉದ್ದೇಶಿಸಿಯೇ ನಾವು ಲಕ್ಷಣವನ್ನು ಹೇಳುತ್ತಿದ್ದೇವೆ. ಗಂಗಾ ಪ್ರವಾಹವು ಗಂಗಾ ಶಬ್ದದ ಮುಖ್ಯಾರ್ಥವಾಗಿದೆ. ಅದರ ಲಕ್ಷಣವನ್ನು ಹೇಳ ಹೊರಟವರು ಗಂಗಾಶಬ್ದದ ಅಮುಖ್ಯಾರ್ಥವಾದ (ಲಕ್ಷ್ಯಾರ್ಥವಾದ) ತೀರಕ್ಕೆ ಅನ್ವಯವಾಗುವಂತೆ ಲಕ್ಷಣವನ್ನು ಹೇಳುವುದಿಲ್ಲವಷ್ಟೇ?

ಪ್ರತಿಬಂಧಕಾಭಾವವು ಕಾರಣವಾದರೆ, ಮಣಿಯಲ್ಲಿ ಪ್ರತಿಬಂಧಕದ ಲಕ್ಷಣವೇ ಬರಲಾರದು ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ-

**ಪ್ರತಿಬಂಧಕಮಣ್ಯಾದೇರಭಾವೋ ಯದಿ ಕಾರಣಮ್ ।**
**ಕಾರಣಾಭಾವತಸ್ತರ್ಹಿ ಕಾರ್ಯಾಭಾವೋ ಭವಿಷ್ಯತಿ ॥ ೩೪೫ ॥**

**ಪ್ರತಿಬಂಧಕತಾಽಪ್ಯತ್ರ ಮಣ್ಯಾದೇರ್ಭಣ್ಯತೇ ಕುತಃ ॥ ೩೪೬ ॥**

**ಅರ್ಥ–** ಪ್ರತಿಬಂಧಕಮಣ್ಯಾದೇಃ = ಪ್ರತಿಬಂಧಕವಾದ ಮಣ್ಯಾದಿಗಳ, ಅಭಾವಃ = ಅಭಾವವು, ಯದಿ = ಒಂದು ವೇಳೆ, ಕಾರಣಂ = ಕಾರಣವಾಗುವುದಾದರೆ, ತರ್ಹಿ = ಆಗ,

ಕಾರಣಾಭಾವತಃ = ಕಾರಣವು ಇಲ್ಲದಿರುವುದರಿಂದಲೇ, ಕಾರ್ಯಾಭಾವಃ = ದಾಹರೂಪವಾದ ಕಾರ್ಯದ ಅಭಾವವು, ಭವಿಷ್ಯತಿ = ಆಗುತ್ತದೆ. ಅತ್ರ = ದಾಹರೂಪವಾದ ಕಾರ್ಯದಲ್ಲಿ, ಮಣ್ಯಾದೇಃ = ಮಣಿಮೊದಲಾದವುಗಳಿಗೆ, ಪ್ರತಿಬಂಧಕತಾಪಿ = ಪ್ರತಿಬಂಧಕತ್ವವಾದರೂ, ಕುತಃ = ಹೇಗೆ, ಭಣ್ಯತೇ = ಹೇಳಲ್ಪಡುತ್ತದೆ?

**ಅನುವಾದ–** ಪ್ರತಿಬಂಧಕದ ಅಭಾವವು ಕಾರ್ಯಕ್ಕೆ ಕಾರಣವೆನ್ನುವುದಾದರೆ, ಮಣಿಯು ದಾಹಕ್ಕೆ ಪ್ರತಿಬಂಧಕವೇ ಆಗಲಾರದು. ಏಕೆಂದರೆ, ಅದರಲ್ಲಿ ಪ್ರತಿಬಂಧಕದ ಲಕ್ಷಣವೇ ಇಲ್ಲ. ಕಾರ್ಯಕ್ಕೆ ಬೇಕಾದ ಸಕಲಸಲಕರಣೆಗಳೂ ಇದ್ದು ಯಾವುದರಿಂದಾಗಿ ಕಾರ್ಯವು ಆಗುವುದಿಲ್ಲವೋ ಅದು ಪ್ರತಿಬಂಧಕ. ಪ್ರಕೃತ ದಾಹವೆಂಬ ಕಾರ್ಯಕ್ಕೆ ಮಣಿಯ ಅಭಾವವೂ ಕಾರಣವಾದಲ್ಲಿ ಮಣಿ ಇದ್ದಾಗ ಮಣಿಯ ಅಭಾವರೂಪವಾದ ಕಾರಣವು ಇಲ್ಲವಾದುದರಿಂದಲೇ ದಾಹವಾಗಿಲ್ಲ, ಹೊರತು ಮಣಿ ಇರುವುದರಿಂದಲ್ಲವಷ್ಟೆ. ಹೀಗೆ ಮಣಿಯಲ್ಲಿ ಪ್ರತಿಬಂಧಕದ ಲಕ್ಷಣ ಬರಲಿಲ್ಲ. ಆದ್ದರಿಂದ ಪ್ರತಿಬಂಧಕಾಭಾವವು ಕಾರಣವಲ್ಲ.

**ಭಾವವಿಲಾಸಿನೀ–** ಮಣ್ಯಭಾವಸ್ಯಾಪಿ ದಾಹಕಾರಣತ್ವೇ ಮಣೇಃ ಪ್ರತಿಬಂಧಕತ್ವಕಥೈವ ವೃಥೇತ್ಯೇತತ್ ಸದೃಷ್ಟಾಂತಮುಪಪಾದಯತಿ – **ಪ್ರತಿಬಂಧಕೇತಿ** ॥ ಪ್ರತಿಬಂಧಕಶ್ಚಾಸೌ ಮಣ್ಯಾದಿರಿತಿ ವಿಗ್ರಹಃ । ಕಾರಣಾಭಾವತಃ ಪ್ರತಿಬಂಧಕಾಭಾವಾಖ್ಯಕಾರಣಾಭಾವತಃ ಕಾರ್ಯಾಭಾವಃ ದಾಹಲಕ್ಷಣ- ಕಾರ್ಯಾಭಾವಃ ॥ ೩೪೫ ॥

ಅತ್ರ ದಾಹಲಕ್ಷಣಕಾರ್ಯೇ । ಪ್ರತಿಬಂಧಕತಾ ನಿರೋಧಕತಾ ॥ ೩೪೬ ॥

**ವಿವರಣೆ–** ಮಣಿಗೆ ಪ್ರತಿಬಂಧಕತ್ವವು ಇಲ್ಲ ಎನ್ನುವುದಕ್ಕೆ ಮುಂದಿನ ಶ್ಲೋಕದಲ್ಲಿ ದೃಷ್ಟಾಂತವನ್ನು ತೋರಿಸುತ್ತಿದ್ದಾರೆ.

**ದಂಡಾಖ್ಯಕಾರಣಾಭಾವಾದ್ಯತ್ರ ಕಾರ್ಯಂ ನ ಜಾಯತೇ ।**
**ಪ್ರತಿಬಂಧೇನ ನಿರ್ಬಂಧಂ ತತ್ರ ಕೋ ವಕ್ತಿ ಮಾನವಃ ॥ ೩೪೭ ॥**

**ಅರ್ಥ–** ದಂಡಾಖ್ಯಕಾರಣಾಭಾವಾತ್ = ದಂಡವೆಂಬ ಕಾರಣವು ಇಲ್ಲದಿರುವುದರಿಂದ, ಯತ್ರ = ಎಲ್ಲಿ, ಕಾರ್ಯಂ = ಘಟರೂಪವಾದ ಕಾರ್ಯವು, ನ ಜಾಯತೇ = ಹುಟ್ಟುವುದಿಲ್ಲವೋ, ತತ್ರ = ಅಂತಹ ಕಡೆಯಲ್ಲಿ, ಕಃ ಮಾನವಃ = ಯಾವ ಮನುಷ್ಯನು ತಾನೇ, ಪ್ರತಿಬಂಧೇನ = ಪ್ರತಿಬಂಧಕದಿಂದ, ನಿರ್ಬಂಧಂ = ಕಾರ್ಯಾಭಾವರೂಪವಾದ ನಿರ್ಬಂಧವನ್ನು, ವಕ್ತಿ = ಹೇಳುತ್ತಾನೆ?

**ಅನುವಾದ–** ಘಟಕ್ಕೆ ದಂಡವು ಕಾರಣ. ಅಂತಹ ದಂಡವು ಇಲ್ಲದಿದ್ದಾಗ ಘಟವು ಹುಟ್ಟುವುದಿಲ್ಲ. ಅಂತಹ ಸಂದರ್ಭದಲ್ಲಿ ಪ್ರತಿಬಂಧಕ ಇರುವ ಕಾರಣದಿಂದಾಗಿ

ಕಾರ್ಯವು ಆಗುವುದಿಲ್ಲ ಎಂದು ಯಾರೂ ಹೇಳುವುದಿಲ್ಲ. ಕಾರಣವು ಇಲ್ಲವಾದುದರಿಂದಲೇ ಅಲ್ಲಿ ಕಾರ್ಯವಾಗುವುದಿಲ್ಲ.

**ಭಾವವಿಲಾಸಿನೀ–** ತತ್ರ ದೃಷ್ಟಾಂತಮಾಹ – **ದಂಡಾಖ್ಯೇತಿ** ॥ ಯತ್ರ ಯಸ್ಮಿನ್ ದೇಶೇ ತತ್ರ ತಸ್ಮಿನ್ ದೇಶೇ ಪ್ರತಿಬಂಧೇನ ಪ್ರತಿಬಂಧಕೇನ ನಿರ್ಬಂಧಂ ಕಾರ್ಯಾಭಾವಲಕ್ಷಣನಿರ್ಬಂಧಂ ಕೋ ಮಾನವೋ ವಕ್ತೀತಿ ಸಂಬಂಧಃ ॥ ೩೪೭ ॥

**ವಿವರಣೆ–** ಮಳೆಗಾಲದಲ್ಲಿ ಮಳೆಯಾಗದಿದ್ದಲ್ಲಿ ಪ್ರತಿಬಂಧಕವನ್ನು ಕಲ್ಪಿಸಬಹುದು. ಬೇಸಿಗೆಯಲ್ಲಿ ಮಳೆಯಾಗದಿರಲು ಮೋಡ ಇಲ್ಲದಿರುವುದೇ ಕಾರಣ.

ಎರಡು ರೀತಿಯ ಪ್ರತಿಬಂಧಕಗಳನ್ನೂ ತೋರಿಸಿ ಪ್ರತಿಬಂಧಕಾಭಾವವು ಕಾರಣವಾದಲ್ಲಿ ಮಣಿಗೆ ಎರಡು ರೀತಿಯ ಪ್ರತಿಬಂಧಕತ್ವವೂ ಇಲ್ಲದಂತಾಗುತ್ತದೆ ಎಂಬುದನ್ನು ಮುಂದಿನ ಶ್ಲೋಕದಲ್ಲಿ ತೋರಿಸಲಾಗಿದೆ-

**ಕಾರಣಾಭಾವಹೇತುಶ್ಚ ಕಶ್ಚಿತ್ಸ್ಯಾತ್ಪ್ರತಿಬಂಧಕಃ ।**
**ಸತ್ಯೇವ ಕಾರಣೇ ಶಕ್ತಿಸ್ತಂಭಕೋಽಪ್ಯಸ್ತಿ ಕಶ್ಚನ ॥ ೩೪೮ ॥**

**ಅರ್ಥ–** ಕಾರಣಾಭಾವಹೇತುಃ ಚ = ಕಾರಣಗಳೇ ಇಲ್ಲದಿರುವಂತೆ ಮಾಡುವ, ಕಶ್ಚಿತ್ = ಕೆಲವೊಂದು, ಪ್ರತಿಬಂಧಕಃ = ಪ್ರತಿಬಂಧಕವು, ಸ್ಯಾತ್ = ಇರುತ್ತದೆ. ಸತ್ಯೇವ ಕಾರಣೇ = ಎಲ್ಲ ಕಾರಣಗಳು ಇದ್ದಾಗಲೇ (ಅಂತಹ ಕಾರಣಗಳಲ್ಲಿ ಇರುವ) ಶಕ್ತಿಸ್ತಂಭಕಃ ಅಪಿ = ಶಕ್ತಿಯನ್ನು ತಡೆಯುವ, ಕಶ್ಚನ = ಮತ್ತೊಂದು ವಿಧವಾದ, ಪ್ರತಿಬಂಧಕಃ ಅಪಿ = ಪ್ರತಿಬಂಧಕವೂ, ಅಸ್ತಿ = ಇದೆ.

**ಅನುವಾದ–** ಪ್ರತಿಬಂಧಕಗಳು ಎರಡು ವಿಧವಾಗಿವೆ.

೧. ಕಾರ್ಯಕ್ಕೆ ಬೇಕಾದ ಕಾರಣಗಳನ್ನೇ ಇಲ್ಲದಂತೆ ಮಾಡುವ ಪ್ರತಿಬಂಧಕಗಳು.

೨. ಎಲ್ಲ ಕಾರಣಗಳು ಇದ್ದರೂ ಆ ಕಾರಣಗಳಲ್ಲಿರುವ ಶಕ್ತಿಯನ್ನು ನಾಶಮಾಡುವ ಪ್ರತಿಬಂಧಕಗಳು.

**ಭಾವವಿಲಾಸಿನೀ–** ಕಾರಣವಿಘಟಕಾದೃಷ್ಟೇ ಸ್ವೋಕ್ತಪ್ರತಿಬಂಧಕಲಕ್ಷಣಾವ್ಯಾಪ್ತಿಪರಿಹಾರಾಯ ಯದುಕ್ತಮದೃಷ್ಟಸ್ಯಾಮುಖ್ಯಪ್ರತಿಬಂಧಕತ್ವಂ ಮಣೇಶ್ಚ ಮುಖ್ಯತಃ ಪ್ರತಿಬಂಧಕತ್ವಂ ತದುಭಯಂ ಸಯುಕ್ತಿಕಂ ವಿವಿಚ್ಯ ದರ್ಶಯನ್ ಪ್ರತಿಬಂಧಕಾಭಾವಸ್ಯಾಪಿ ಕಾರಣತ್ವೇ ಮಣೇರ್ದ್ವೇಧಾಪಿ ಪ್ರತಿಬಂಧಕತ್ವಾಯೋಗಾದಪ್ರತಿಬಂಧಕತ್ವಮೇವ ಸ್ಯಾದಿತ್ಯಾಹ – **ಕಾರಣಾಭಾವಹೇತುಶ್ಚೇತ್ಯಾ-ದಿನಾ** ॥ ಕಾರಣಾಭಾವಹೇತುಃ ಕಾರಣಸಾಮಗ್ರೀವಿಘಟಕ ಇತಿ ಯಾವತ್ । ಕಶ್ಚಿದದೃಷ್ಟಾದಿಃ । ಸತ್ಯೇವ ಕಾರಣೇ ಕಾರಣಕಲಾಪೇ ಸತೀತಿ ಯಾವತ್ । ಶಕ್ತಿಸ್ತಂಭಕಃ ವಹ್ನ್ಯಾದೇರ್ದಾಹಾದಿ-

**ಶಕ್ತಿಪ್ರತಿಬಂಧಕಃ । ಶಕ್ತಿಪ್ರತಿಬಂಧಕತ್ವಂ ನಾಮ ದಾಹಕಶಕ್ತೌ ಸತ್ಯಾಮೇವ ತತೋ ದಾಹಾದಿ-ಕಾರ್ಯಂ ಭವಿತುಂ ನ ಮುಂಚತೀತಿ ಸಾಕ್ಷಾತ್ಕಾರ್ಯಪ್ರತಿಬಂಧಕತ್ವಮೇವೇತ್ಯರ್ಥಃ । ಕಶ್ಚನ ಮಣ್ಯಾದಿಃ ॥ ೩೪೮ ॥**

**ವಿವರಣೆ–** ನಮಗೆ ಸಂತತಿಗೆ ಪ್ರತಿಬಂಧಕಗಳಾದ ಪಾಪಗಳು ಮದುವೆಯೇ ಆಗದಂತೆ ತಡೆಯಬಹುದು. ಅಥವಾ ಮದುವೆಯಾದರೂ ಮಕ್ಕಳಾಗದಂತೆ ಮಾಡಬಹುದು. ಹೀಗೆ ಎರಡು ವಿಧದ ಪ್ರತಿಬಂಧಕಗಳಿವೆ.

**ಪ್ರತಿಬಂಧಕಾಭಾವವು ಕಾರಣವಾದಲ್ಲಿ ಮಣಿಗೆ ಈ ಎರಡೂ ವಿಧದ ಪ್ರತಿಬಂಧಕತ್ವವೂ ಇರಲಾರದು ಎಂದು ಮುಂದಿನ ಶ್ಲೋಕದಲ್ಲಿ ಹೇಳಿದ್ದಾರೆ-**

**ಮಣ್ಯಭಾವಸ್ಯ ಹೇತುತ್ವೇ ತದಭಾವಾತ್ಮಕೋ ಮಣಿಃ ।**
**ನ ಹೇತ್ವಭಾವಹೇತುತ್ವಾತ್ ಪ್ರತಿಬಧ್ನಾತ್ಯದೃಷ್ಟವತ್ ॥ ೩೪೯ ॥**

**ಅರ್ಥ–** ಮಣ್ಯಭಾವಸ್ಯ = ಮಣಿಯ ಅಭಾವಕ್ಕೆ, ಹೇತುತ್ವೇ = ದಾಹಹೇತುತ್ವವನ್ನು ಒಪ್ಪಿದರೆ, ತದಭಾವಾತ್ಮಕಃ = ಮಣಿಯ ಅಭಾವದ ಅಭಾವರೂಪವಾದ, ಮಣಿಃ = ಮಣಿಯು, ಹೇತ್ವಭಾವಹೇತುತ್ವಾತ್ = ಕಾರಣಾಭಾವ- ಸಂಪಾದಕವಾದುದರಿಂದ, ಅದೃಷ್ಟವತ್ = ಪಾಪದಂತೆ, ನ ಪ್ರತಿಬಧ್ನಾತಿ = ದಾಹವನ್ನು ಪ್ರತಿಬಂಧಿಸಲಾರದು.

**ಅನುವಾದ– ಮಣಿಯ ಅಭಾವಕ್ಕೆ ದಾಹಹೇತುತ್ವವನ್ನು ಒಪ್ಪಿದರೆ ಮಣಿಯ ಅಭಾವದ ಅಭಾವರೂಪವಾದ ಮಣಿಯು ಕಾರಣಾಭಾವಸಂಪಾದಕವಾದುದರಿಂದ ಪಾಪದಂತೆ, ದಾಹವನ್ನು ಪ್ರತಿಬಂಧಿಸಲಾರದು.**

**ಭಾವವಿಲಾಸಿನೀ–** ತದಭಾವಾತ್ಮಕ ಇತ್ಯತ್ರ ತತ್ಪದೇನ ದಾಹಕಾರಣತ್ವೇನ ಪರಾಭಿಮತೋ ಮಣ್ಯಭಾವೋ ಗೃಹ್ಯತೇ । ಅಭಾವಪದೇನ ಚ ತಸ್ಯಾಭಾವಸ್ಯಾಭಾವೋ ಗೃಹ್ಯತೇ । ಸಚಾಭಾವಾಭಾವೋ ಭಾವ ಏವೇತಿ ಮಣಿರೇವೇತಿ ಭಾವೇನೋಕ್ತಮ್ – **ತದಭಾವಾತ್ಮಕೋ ಮಣಿರಿತಿ** ॥ **ಹೇತ್ವಭಾವಹೇತುತ್ವಾದ್ ಹೇತ್ವಭಾವಸಮ್ಪಾದಕತ್ವಾದದೃಷ್ಟವನ್ನ ಪ್ರತಿಬಧ್ನಾತೀತಿ ಸಂಬಂಧಃ । ಮಣ್ಯಭಾವಸ್ಯ ಹೇತುತ್ವೇ ಮಣ್ಯಭಾವಾಭಾವರೂಪೋ ಮಣಿಃ ಹೇತ್ವಭಾವಾತ್ಮಕ ಏವ ನತ್ವದೃಷ್ಟವದ್ ಹೇತ್ವಭಾವಸಂಪಾದಕತಯಾ ಪ್ರತಿಬಂಧಕ ಇತಿ ಭಾವಃ ॥ ೩೪೯ ॥**

**ವಿವರಣೆ–** ಪಾಪರೂಪವಾದ ಅದೃಷ್ಟವು ಕಾರಣವನ್ನು ಇಲ್ಲದಂತೆ ಮಾಡಿ ಕಾರ್ಯಕ್ಕೆ ಪ್ರತಿಬಂಧಕವಾಗುತ್ತದೆ. ಪ್ರಕೃತ ಮಣ್ಯಭಾವವು ಕಾರಣವೆಂದು ಒಪ್ಪಿದಲ್ಲಿ ಮಣಿಯು ಈ ಕಾರಣಭಾವ ಸಂಪಾದಕವಾದ ಅದೃಷ್ಟದಂತೆ ಪ್ರತಿಬಂಧಕವೆಂದು ಹೇಳಲು ಬರುವುದಿಲ್ಲ. ಏಕೆಂದರೆ ಮಣಿಯು ಕಾರಣಾಭಾವರೂಪವಾಗುತ್ತದೆ. ಕಾರಣಾಭಾವಸಂಪಾದಕ ವಾಗುವುದಿಲ್ಲ. ಮಣ್ಯಭಾವವುಕಾರಣ, ಮಣ್ಯಭಾವಾಭಾವವು ಮಣಿರೂಪ. ಆದ್ದರಿಂದ

ಮಣಿಯು ಕಾರಣಾಭಾವರೂಪವಾಯಿತು. ಕಾರಣಾಭಾವಸಂಪಾದಕವಲ್ಲ (ಹೇತ್ವಭಾವಾತ್ಮಕ ಏವ, ನ ತು ಅದೃಷ್ಟವತ್ ಹೇತ್ವಭಾವಸಂಪಾದಕತಯಾ ಪ್ರತಿಬಂಧಕಃ ಇತಿ ಭಾವಃ)

**ಕಾರಣಗತಶಕ್ತಿವಿಘಟಕವಾಗಿಯೂ ಮಣಿಯು ಪ್ರತಿಬಂಧಕವಾಗಲಾರದು ಎಂದು ಮುಂದಿನ ಶ್ಲೋಕದಲ್ಲಿ ತಿಳಿಸಲಾಗಿದೆ-**

**ಕಾರ್ಯಾಭಾವೋ ಯತಃ ಸ್ವಾಭಾವಾಖ್ಯಹೇತೋರಭಾವತಃ ।**
**ಸತಿ ತಸ್ಮಿನ್ನಭೂತ್ತೇನ ಶಕ್ತಿಸ್ತಂಭಕತಾ ಗತಾ ॥ ೩೫೦ ॥**

**ಅರ್ಥ–** ತಸ್ಮಿನ್ ಸತಿ = ಮಣಿ ಇರುತ್ತಿರಲು, ಯತಃ = ಯಾವ ಕಾರಣದಿಂದ, ಸ್ವಾಭಾವಾಖ್ಯಹೇತೋಃ = ಮಣ್ಯಭಾವ ಎಂಬ ಕಾರಣದ, ಅಭಾವತಃ = ಅಭಾವ ಇರುವ ಕಾರಣದಿಂದಾಗಿಯೇ, ಕಾರ್ಯಾಭಾವಃ = ದಾಹವೆಂಬ ಕಾರ್ಯದ ಅಭಾವವು, ಅಭೂತ್ = ಆಯಿತೋ, ತೇನ = ಆ ಕಾರಣದಿಂದಾಗಿ, ಶಕ್ತಿಸ್ತಂಭಕತಾ = ಕಾರಣಗತಶಕ್ತಿನಾಶಕತ್ವವು, ಗತಾ = ಹೋಯಿತು.

**ಅನುವಾದ– ಮಣಿ ಇರುತ್ತಿರಲು ಯಾವ ಕಾರಣದಿಂದ ಮಣ್ಯಭಾವ ಎಂಬ ಕಾರಣದ ಅಭಾವ ಇರುವ ಕಾರಣದಿಂದಾಗಿಯೇ ದಾಹವೆಂಬ ಕಾರ್ಯದ ಅಭಾವವು ಆಯಿತೋ ಆ ಕಾರಣದಿಂದಾಗಿ ಕಾರಣಗತಶಕ್ತಿನಾಶಕತ್ವವು ಹೋಯಿತು.**

**ಭಾವವಿಲಾಸಿನೀ– ಶಕ್ತಿಸ್ತಂಭಕತ್ವೇನ ಪ್ರತಿಬಂಧಕತ್ವಂ ದೂಷಯತಿ – ಕಾರ್ಯಾಭಾವ ಇತಿ ॥** ಯತಸ್ತಸ್ಮಿನ್ ಮಣೌ ಸತಿ ಕಾರ್ಯಾಭಾವೋ ದಾಹಲಕ್ಷಣಕಾರ್ಯಾಭಾವಃ ಸ್ವಾಭಾವಾಖ್ಯಹೇತೋಃ ಸ್ವಸ್ಯ ಮಣೇರಭಾವಾಭಿಧದಾಹಹೇತೋರಭಾವತೋऽಭೂದಿತಿ ಸಂಬಂಧಃ । ತೇನ ಕಾರಣೇನ ॥ ೩೫೦ ॥

**ವಿವರಣೆ–** ಮಣಿಯ ಅಭಾವವು ದಾಹಕ್ಕೆ ಕಾರಣವಾದರೆ, ಕಾರಣಗತಶಕ್ತಿನಾಶಕತ್ವರೂಪವಾದ ಪ್ರತಿಬಂಧಕತ್ವವೂ ಮಣಿಗೆ ಇಲ್ಲದಾಗುತ್ತದೆ. ಮಣಿ ಇದ್ದಾಗ ಮಣ್ಯಭಾವ ಎಂಬ ಕಾರಣವು ಇಲ್ಲದಿರುವುದರಿಂದಲೇ ದಾಹಾಭಾವವನ್ನು ಸಮರ್ಥಿಸಬಹುದು. ಮಣಿಯು ವಹ್ನಿಗತ ಶಕ್ತಿಗೆ ನಾಶಕವಾಗಿದೆ ಎಂದು ಹೇಳಬೇಕಾದ ಅಗತ್ಯವಿಲ್ಲ.

ಹೀಗೆ ಪ್ರತಿಬಂಧಕಾಭಾವವು ಕಾರ್ಯಹೇತುವಾದರೆ ಮಣಿಗೆ ಪ್ರತಿಬಂಧಕತ್ವವನ್ನೇ ಹೇಳಲಾಗದು.

**ಕಾರಣಾಭಾವಮಾತ್ರೇಣ ಕಾರ್ಯಾಭಾವಸ್ಯ ಸಿದ್ಧಿತಃ ।**
**ಶಕ್ತಿಸ್ತಂಭಕತಾ ಕೇನ ಕಲ್ಪ್ಯಾ ಕಲ್ಪಕಸಂಸದಿ ॥ ೩೫೧ ॥**

**ಅರ್ಥ–** ಕಾರಣಾಭಾವಮಾತ್ರೇಣ = ಕಾರಣವು ಇಲ್ಲವಾದುದರಿಂದಲೇ, ಕಾರ್ಯಾಭಾವಸ್ಯ = ದಾಹವೆಂಬ ಕಾರ್ಯದ ಅಭಾವವು, ಸಿದ್ಧಿತಃ = ಸಿದ್ಧವಾಗುತ್ತಿರುವಾಗ, ಕಲ್ಪಕಸಂಸದಿ = ವಿದ್ವತ್ಸಭೆಯಲ್ಲಿ, ಶಕ್ತಿಸ್ತಂಭಕತಾ = ಕಾರಣಗತಶಕ್ತಿವಿನಾಶಕತ್ವವು, ಕೇನ = ಯಾವ ಕಾರಣದಿಂದ, ಕಲ್ಪ್ಯಾ = ಕಲ್ಪಿಸಲ್ಪಡಬೇಕು?

**ಅನುವಾದ–** ಕಾರಣವು ಇಲ್ಲವಾದುದರಿಂದಲೇ ದಾಹವೆಂಬ ಕಾರ್ಯದ ಅಭಾವವು, ಸಿದ್ಧವಾಗುತ್ತಿರುವಾಗ ವಿದ್ವತ್ಸಭೆಯಲ್ಲಿ ಕಾರಣಗತಶಕ್ತಿವಿನಾಶಕತ್ವವು ಯಾವ ಕಾರಣದಿಂದ ಕಲ್ಪಿಸಲ್ಪಡಬೇಕು?

**ಭಾವವಿಲಾಸಿನೀ–** ತೇನ ಶಕ್ತಿಸ್ತಂಭಕತಾ ಗತೇತ್ಯೇತದ್ ವಿಶದಯತಿ – **ಕಾರಣಾಭಾವಮಾತ್ರೇಣೇತಿ** ॥ ಮಣ್ಯಭಾವರೂಪದಾಹಕಾರಣಾಭಾವೇನೈವ ಕಾರ್ಯಾಭಾವಸ್ಯ ದಾಹಲಕ್ಷಣಕಾರ್ಯಾಭಾವಸ್ಯ ಸಿದ್ಧಿತಃ ಸಂಭವಾತ್ ಶಕ್ತಿಸ್ತಂಭಕತಾ ದಾಹಕಾರಣಸಾಮಗ್ರ್ಯಾಂ ದಾಹಶಕ್ತಿಸ್ತಂಭಕತಾ ಕೇನ ಕಾರಣೇನ ಕಲ್ಪ್ಯಾ । ಮಣ್ಯಭಾವಾಖ್ಯಕಾರಣಾಭಾವೇನ ಸಾಮಗ್ರ್ಯ ಏವಾಭಾವಾತ್ ಕಾರ್ಯಾಭಾವೋಪಪತ್ತೌ ಪುನರ್ಮಣೇರಪಿ ಕಾರಣಶಕ್ತಿಸ್ತಂಭಕತಾಯಾ ನ ಕಿಂಚಿತ್ಕಲ್ಪಕಮಿತಿ ಭಾವಃ ॥ ೩೫೧ ॥

**ವಿವರಣೆ–** ಹಿಂದೆ ಹೇಳಿದ್ದನ್ನೇ ಈ ಶ್ಲೋಕದಲ್ಲಿ ಸ್ಪಷ್ಟಪಡಿಸಲಾಗಿದೆ.

ಸರ್ವಥಾ ಕಾರಣಾಭಾವಾದ್ಭಿನ್ನಃ ಸ್ಯಾತ್ಪ್ರತಿಬಂಧಕಃ ।
ನಚೇದ್ದಂಡಾಭಾವತಶ್ಚ ಪ್ರತಿಬಂಧಕತಾ ಭವೇತ್ ॥ ೩೫೨ ॥

**ಅರ್ಥ–** ಪ್ರತಿಬಂಧಕಃ = ಪ್ರತಿಬಂಧಕವು, ಕಾರಣಾಭಾವಾತ್ = ಕಾರಣದ ಅಭಾವಕ್ಕಿಂತ, ಸರ್ವಥಾ = ಖಂಡಿತವಾಗಿಯೂ, ಭಿನ್ನಃ = ಬೇರೆಯಾಗಿ, ಸ್ಯಾತ್ = ಆಗಿರಬೇಕು. ನ ಚೇತ್ = ಇಲ್ಲವಾದಲ್ಲಿ ದಂಡಾಭಾವತಃ= ದಂಡದ ಅಭಾವದಿಂದ (ಘಟವು ಹುಟ್ಟದಿದ್ದಾಗ), ದಂಡಾಭಾವಸ್ಯ ಚ= ದಂಡದ ಅಭಾವಕ್ಕೂ ಕೂಡ, ಪ್ರತಿಬಂಧಕತಾ = ಪ್ರತಿಬಂಧಕತ್ವವು, ಭವೇತ್ = ಬಂದೀತು.

**ಅನುವಾದ–** ಪ್ರತಿಬಂಧಕವು ಕಾರಣದ ಅಭಾವಕ್ಕಿಂತ ಖಂಡಿತವಾಗಿಯೂ ಬೇರೆಯಾಗಿ ಆಗಿರಬೇಕು. ಇಲ್ಲವಾದಲ್ಲಿ ದಂಡದ ಅಭಾವಕ್ಕೂ ಪ್ರತಿಬಂಧಕತ್ವವು ಬಂದೀತು.

**ಭಾವವಿಲಾಸಿನೀ–** ಪ್ರತಿಬಂಧಕಾಭಾವಸ್ಯ ಕಾರಣತ್ವೇ ಪ್ರಕಾರಾಂತರೇಣಾಪಿ ತೇ ಪ್ರತಿಬಂಧಕತ್ವಂ ನ ಘಟತ ಇತ್ಯಾಹ – **ಸರ್ವಥೇತಿ** ॥ ಕಾರಣಾಭಾವಾತ್ಕಾರಣಸ್ಯ ಮಣ್ಯಭಾವಸ್ಯಾಭಾವಾತ್ ಪ್ರತಿಬಂಧಕಃ ಭಿನ್ನಃ ಸ್ಯಾದಿತಿ ಸಂಬಂಧಃ । ಮಣ್ಯಭಾವಸ್ಯ ಕಾರಣತ್ವಮತೇ ಚ ಮಣ್ಯಭಾವಾಭಾವಾತ್ಮಕೋ ಮಣಿಃ ಕಾರಣಸ್ಯಾಭಾವರೂಪ ಏವ । ನತು ಕಾರಣಾಭಾವಾದ್ಭಿನ್ನ ಇತಿ ಭಾವಃ । ಪ್ರತಿಬಂಧಕಸ್ಯ ಕಾರಣಾಭಾವಾದ್ಭಿನ್ನತ್ವಾನಂಗೀಕಾರೇ ಬಾಧಕಮಾಹ – **ನಚೇದಿತಿ** ॥

ದಣ್ಡಸ್ಯ ಘಟಂ ಪ್ರತಿ ಕಾರಣತ್ವಾದ್ದಂಡಾಭಾವಾದ್ಯತ್ರ ಘಟಾಭಾವಸ್ತತ್ರ ದಂಡಾಭಾವಾ-ದಾವಪಿ ಪ್ರತಿಬಂಧಕತಾ ಭವೇತ್ । ದಂಡಾಭಾವಸ್ಯಾಪಿ ಪ್ರತಿಬಂಧಕಂ ವಿದ್ವದ್ಭಿಃ ಕಥ್ಯೇತೇತಿ ಭಾವಃ ॥ ೩೫೨ ॥

**ವಿವರಣೆ–** ಮಣ್ಯಭಾವವು ಕಾರಣವಾದಲ್ಲಿ ಮಣಿಯು ಕಾರಣಾಭಾವ ರೂಪವಾಗುತ್ತದೆ. ಪ್ರತಿಬಂಧಕವು ಎಂದೂ ಕಾರಣಾಭಾವರೂಪವಾಗಿರಬಾರದು. ಹಾಗಿದ್ದರೆ, ಘಟಕ್ಕೆ ದಂಡವು ಕಾರಣ, ದಂಡದ ಅಭಾವವು ಪ್ರತಿಬಂಧಕ ವೆಂದಾಗಬೇಕಾದೀತು.

**ತಸ್ಮಾಚ್ಛಂಕಾಪನೋದಾಯ ಪರೀಕ್ಷಾಪೇಕ್ಷಣಂ ಕ್ವಚಿತ್ ।**
**ತದಭಾವೇ ಸಹಜ್ಞಾನೈಃ ಪ್ರಾಮಾಣ್ಯಂ ಚ ಸ ವೀಕ್ಷತೇ ॥ ೩೫೩ ॥**

**ಅರ್ಥ–** ತಸ್ಮಾತ್ = ಆದ ಕಾರಣ, ಶಂಕಾಪನೋದಾಯ = ಸಂದೇಹದ ಪರಿಹಾರಕ್ಕಾಗಿ, ಕ್ವಚಿತ್ = ಕೆಲವು ಕಡೆ, ಪರೀಕ್ಷಾಪೇಕ್ಷಣಂ = ಪರೀಕ್ಷೆಯ ಅಪೇಕ್ಷೆಯು ಇರುತ್ತದೆ, ತದಭಾವೇ = ಅಪ್ರಾಮಾಣ್ಯಸಂದೇಹವು ಇಲ್ಲದಿರುವಾಗ, ಜ್ಞಾನೈಃ ಸಹ = ಜ್ಞಾನಗಳೊಂದಿಗೆ, ಸಃ = ಆ ಸಾಕ್ಷಿಯು, ಪ್ರಾಮಾಣ್ಯಂ ಚ = ಪ್ರಾಮಾಣ್ಯವನ್ನೂ, ಈಕ್ಷತೇ = ಗ್ರಹಿಸುತ್ತದೆ.

**ಅನುವಾದ–** ಆದ ಕಾರಣ ಸಂದೇಹದ ಪರಿಹಾರಕ್ಕಾಗಿ ಕೆಲವು ಕಡೆ ಪರೀಕ್ಷೆಯ ಅಪೇಕ್ಷೆಯು ಇರುತ್ತದೆ. ಅಪ್ರಾಮಾಣ್ಯಸಂದೇಹವು ಇಲ್ಲದಿರುವಾಗ ಜ್ಞಾನಗಳೊಂದಿಗೆ ಆ ಸಾಕ್ಷಿಯು ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ.

**ಭಾವವಿಲಾಸಿನೀ– ಪ್ರಾಮಾಣ್ಯಗ್ರಹಣೇ ಶಕ್ತಿರಿತ್ಯಾದಿನೋಕ್ತಮರ್ಥಮುಪಸಂಹರತಿ–ತಸ್ಮಾದಿತಿ ॥ ಯಸ್ಮಾತ್ಕಾರಣಾತ್ ಕ್ವಚಿದೇವಾಪ್ರಾಮಾಣ್ಯಶಂಕಾ ನ ಸರ್ವತ್ರ, ಸಮೀಪಸ್ಥಪದಾರ್ಥೇಷು ತದಭಾವಸ್ಯೋಪಪಾದಿತತ್ವಾತ್ । ತಸ್ಮಾದ್ ಅಪ್ರಾಮಾಣ್ಯಶಂಕಾಪನೋದಾಯ ಪರೀಕ್ಷಾ-ಪೇಕ್ಷಣಂ ಕ್ವಚಿದೇವ ನ ಸರ್ವತ್ರೇತಿ ಭಾವಃ । ತದಭಾವೇ ದೂರಸ್ಥವಸ್ತುವಿಷಯತ್ವಾದಿ-ದೋಷಪ್ರಯುಕ್ತಾಪ್ರಾಮಾಣ್ಯಶಂಕಾಭಾವೇ । ಸಃ ಸಾಕ್ಷೀ ॥ ೩೫೩ ॥**

**ವಿವರಣೆ–** ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಲು ಸಂದೇಹವು ಪ್ರತಿಬಂಧಕ. ಸಂದೇಹಾಭಾವವು ಪ್ರತಿಬಂಧಕಾಭಾವ. ಆದ ಕಾರಣ ಅದು ಕಾರಣವಲ್ಲ. ಆದ್ದರಿಂದ ಪ್ರಾಮಾಣ್ಯಸ್ವತಸ್ತ್ವವು ಸಿದ್ಧವಾಗುತ್ತದೆ. ಈ ವಿಷಯವನ್ನು ಇದುವರೆಗೆ ಹೇಳಲಾಯಿತು. ಅದರ ಉಪಸಂಹಾರವನ್ನು ಈ ಶ್ಲೋಕದಲ್ಲಿ ಮಾಡಲಾಗಿದೆ.

ಎಲ್ಲ ಜ್ಞಾನದ ಪ್ರಾಮಾಣ್ಯದಲ್ಲೂ ಮೊದಲು ಸಂದೇಹ ಇದ್ದೇ ಇರುತ್ತದೆ. ಅದರ ನಿವಾರಣೆಗಾಗಿ ಪರೀಕ್ಷೆಯೂ ಅಗತ್ಯವಾಗಿ ಇರಬೇಕು. ಆದ್ದರಿಂದ ಕೆಲವೊಮ್ಮೆ ಮಾತ್ರ ಸಂದೇಹ ಎನ್ನುವುದು ಉಚಿತವಲ್ಲ ಎಂಬ ಈ ಆಕ್ಷೇಪವನ್ನು ಮುಂದಿನ ಶ್ಲೋಕವು ಮಾಡುತ್ತಿದೆ.

**ಅಥ ಪ್ರಾಮಾಣ್ಯಾನುಮಿತೇಃ ಪೂರ್ವಂ ಪ್ರಾಮಾಣ್ಯಸಂಶಯಃ ।**
**ಸರ್ವತ್ರಾಪ್ಯಸ್ತಿ ತೇನೈತತ್ ಸಾಕ್ಷಿಣಾ ವೀಕ್ಷ್ಯತೇ ಕಥಮ್ ॥ ೩೫೪ ॥**

**ಅತೋಽನುಮಾನಾತ್ತದ್ಧೀಪ್ರಾಮಾಣ್ಯಮನುಮೀಯತೇ ।**
**ಇತ್ಯಕ್ಷಿಣೀ ನಿಮೀಲ್ಯೈವ ವದಂತಂ ಪ್ರತಿ ಚೋಚ್ಯತೇ ॥ ೩೫೫ ॥**

**ಅರ್ಥ–** ಅಥ = ಈ ಪ್ರಶ್ನೆಯು ಬರುತ್ತದೆ, ಪ್ರಾಮಾಣ್ಯಾನುಮಿತೇಃ = ಪ್ರಾಮಾಣ್ಯದ ಅನುಮಿತಿಗಿಂತ, ಪೂರ್ವಂ = ಮೊದಲು, ಪ್ರಾಮಾಣ್ಯಸಂಶಯಃ = ಪ್ರಾಮಾಣ್ಯದ ಬಗ್ಗೆ ಸಂದೇಹವು, ಸರ್ವತ್ರ = ಎಲ್ಲ ಕಡೆಯೂ, ಅಸ್ತಿ ಏವ = ಇದ್ದೇ ಇರುತ್ತದೆ. ತೇನ = ಈ ಕಾರಣದಿಂದ, ಏತತ್ = ಪ್ರಾಮಾಣ್ಯವು, ಸಾಕ್ಷಿಣಾ = ಸಾಕ್ಷಿಯಿಂದ, ಕಥಂ = ಹೇಗೆ ತಾನೆ, ವೀಕ್ಷ್ಯತೇ = ನೋಡಲ್ಪಡುತ್ತದೆ?

ಅತಃ = ಪ್ರಾಮಾಣ್ಯಸಂದೇಹವು ನಿಯತವಾದ ಕಾರಣ, ಅನುಮಾನಾತ್ = ಅನುಮಾನದಿಂದ, ತದ್ಧೀಪ್ರಾಮಾಣ್ಯಂ = ಅಂತಹ ಜ್ಞಾನದ ಪ್ರಾಮಾಣ್ಯವು, ಅನುಮೀಯತೇ = ಅನುಮಾನ ಮಾಡಲ್ಪಡುತ್ತದೆ. ಇತಿ = ಹೀಗೆ, ಅಕ್ಷಿಣೀ ನಿಮೀಲ್ಯೈವ = ಕಣ್ಣುಗಳನ್ನು ಮುಚ್ಚಿಕೊಂಡೇ, ವದಂತಂ ಪ್ರತಿ = ಹೇಳುವವನಿಗೆ, ಉಚ್ಯತೇ = ಉತ್ತರವು ಕೊಡಲ್ಪಡುತ್ತದೆ.

**ಅನುವಾದ– ಜ್ಞಾನಗಳ ಪ್ರಾಮಾಣ್ಯವನ್ನು ಅನುಮಾನದ ಮೂಲಕ ತಿಳಿಯುವುದಕ್ಕಿಂತ ಮುಂಚೆ ಅದರ ಬಗ್ಗೆ ಸಂಶಯ ಬರುವುದೇ ಎಲ್ಲ ಕಡೆಯೂ ಕಂಡಿದೆ. ಹೀಗಿರುವಾಗ ಸಾಕ್ಷಿಯು ಆ ಜ್ಞಾನಗಳ ಪ್ರಾಮಾಣ್ಯವನ್ನು ಹೇಗೆ ಗ್ರಹಿಸೀತು? ಆದ್ದರಿಂದ ಅನುಮಾನ ಪ್ರಮಾಣದಿಂದಲೇ ವ್ಯಕ್ತಿಯು ಆಯಾ ಜ್ಞಾನಗಳ ಪ್ರಾಮಾಣ್ಯವನ್ನು ತಿಳಿದುಕೊಳ್ಳಬೇಕೆಂದು ಕಣ್ಣು ಮುಚ್ಚಿಕೊಂಡು ಮಾತನಾಡುವ ತಾರ್ಕಿಕರಿಗೆ ಈ ಮುಂದಿನಂತೆ ಉತ್ತರ ಹೇಳಬೇಕು.**

**ಭಾವವಿಲಾಸಿನೀ–** ನನು ಪ್ರಾಮಾಣ್ಯಾನುಮಿತೇಃ ಪೂರ್ವಂ ಸರ್ವಜ್ಞಾನಪ್ರಾಮಾಣ್ಯ ಸಂಶಯಾತ್ ಕ್ವಾಪಿ ಪ್ರಾಮಾಣ್ಯಂ ಸಾಕ್ಷಿಣಾ ಗೃಹೀತುಂ ನ ಶಕ್ಯತ ಇತ್ಯಾಗ್ರಹಾದ್ ವದಂತಂ ಪ್ರತಿ ದೂಷಣಾಂತರಂ ವಕ್ತುಮುಪಕ್ರಮತೇ – **ಅಥೇತಿ** ॥ ಸರ್ವತ್ರ, ಸನ್ನಿಕೃಷ್ಟವಿಪ್ರಕೃಷ್ಟ-ವಸ್ತುವಿಷಯಕಜ್ಞಾನ ಪ್ರಾಮಾಣ್ಯೇ । ತೇನ ಕಾರಣೇನ । ಏತಜ್ಜ್ಞಾನಪ್ರಾಮಾಣ್ಯಂ ಸಾಕ್ಷಿಣಾ ಕಥಂ ವೀಕ್ಷ್ಯತ ಇತಿ ಸಂಬಂಧಃ ॥ ೩೫೪ ॥

**ಅತಃ** ಯತಃ ಸಾಕ್ಷಿಣಾ ಸರ್ವತ್ರ ಪ್ರಾಮಾಣ್ಯಂ ವೀಕ್ಷಿತುಂ ನ ಶಕ್ಯತೇ, ತಸ್ಮಾದಿತ್ಯರ್ಥಃ । ಅನುಮಾನಾತ್ ಸಮರ್ಥಪ್ರವೃತ್ತಿಜನಕತ್ವಾದಿತ್ಯಾದಿರೂಪಾತ್ । ಸಮೀಪಸ್ಥಪದಾರ್ಥ-ಜ್ಞಾನೇಷು ಪ್ರಾಮಾಣ್ಯಸಂಶಯಾಭಾವಸ್ಯೋಪಪಾದಿತತ್ವಾದ್ ಅಕ್ಷಿಣೀ ನಿಮೀಲ್ಯೇತ್ಯು-ಪಹಾಸೋಕ್ತಿಃ ॥ ೩೫೫ ॥

**ವಿವರಣೆ—** ದೂರದಲ್ಲಿರುವ ವಸ್ತುವಿನ ಜ್ಞಾನಬಂದಾಗ ಈ ಜ್ಞಾನವು ಪ್ರಮಾಣವೋ ಅಪ್ರಮಾಣವೋ, ಎಂಬ ಸಂದೇಹ ಬರುತ್ತದೆ. ಆ ಸಂದೇಹದ ಪರಿಹಾರಕ್ಕಾಗಿ ಪರೀಕ್ಷೆಯ ಆಗತ್ಯವಿದೆ. ಆದರೆ ಅತ್ಯಂತ ಸಮೀಪದ ವಸ್ತುವಿನ ಜ್ಞಾನಬಂದಾಗ ಇಂತಹ ಸಂದೇಹಕ್ಕೆ ಆಸ್ಪದವಿಲ್ಲ. ಅಂತಹ ಜ್ಞಾನದಲ್ಲಿ ಪ್ರಾಮಾಣ್ಯವು ಸಾಕ್ಷಿಯಿಂದ ಗೃಹೀತವಾಗುತ್ತದೆ. ಇದು ವಸ್ತುಸ್ಥಿತಿ. ಇದನ್ನು ಬಿಟ್ಟು ವಸ್ತು ಸಮೀಪದಲ್ಲಿರಲಿ, ದೂರದಲ್ಲಿರಲಿ ಸಂದೇಹ ಬಂದೇ ಬರುತ್ತದೆ. ಆದರ ನಿವಾರಣೆಗಾಗಿ ಪರೀಕ್ಷೆ ಬೇಕೇ ಬೇಕು. ಹೀಗಿರುವಾಗ ಸಾಕ್ಷಿಯು ಅಸಹಾಯಕವಾಗಿ ಪ್ರಾಮಾಣ್ಯವನ್ನು ಗ್ರಹಿಸುವುದು ಹೇಗೆ ಎಂದು ಪ್ರಶ್ನೆಯನ್ನು ತಾರ್ಕಿಕರು ಮಾಡುತ್ತಾರೆ.

ಎಲ್ಲ ಕಡೆಯೂ ಸಂದೇಹ ಬರುವುದರಿಂದ ಸಾಕ್ಷಿಯು ಪ್ರತಿಬದ್ಧವಾಗಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅನುಮಾನದಿಂದಲೇ ಪ್ರಾಮಾಣ್ಯವು ತಿಳಿಯಲ್ಪಡುತ್ತದೆ, ಇದು ತಾರ್ಕಿಕರು ಮಾಡಬಹುದಾದ ಪ್ರಶ್ನೆ

ಇಂತಹ ಆಕ್ಷೇಪವು ಅನುಭವಕ್ಕೆ ದೂರವಾದುದು. ವಿಚಾರ ಮಾಡದೆ ಕಣ್ಣುಮುಚ್ಚಿ ಈ ಆಕ್ಷೇಪಮಾಡಿದಲ್ಲಿ ನಮ್ಮಲ್ಲಿ ಉತ್ತರವೂ ಸಿದ್ಧವಾಗಿದೆ ಎಂದಿದ್ದಾರೆ ರಾಜರು.

**ಅನಾನುಭವಿಕಃ ಸೋಽಯಂ ಸಂಶಯಃ ಕೇನ ಕಲ್ಪ್ಯತೇ ।**
**ಪ್ರಾಮಾಣ್ಯಗ್ರಹಣೋಪಾಯಾಭಾವಾದಿತಿ ಮತಂ ಯದಿ ॥ ೩೫೬ ॥**

**ತದಾ ತೇಽನ್ಯೋನ್ಯಾಶ್ರಯಾಖ್ಯಮಹಾದೋಷೋ ಭವಿಷ್ಯತಿ ॥ ೩೫೭ ॥**

**ಅರ್ಥ—** ಅನಾನುಭವಿಕಃ = ಅನುಭವವಿರುದ್ಧವಾದ, ಸೋಽಯಂ = ಆ ಇಂತಹ, ಸಂಶಯಃ = ಸಂದೇಹವು, ಕೇನ = ಯಾವ ಕಾರಣದಿಂದ ತಾನೇ, ಕಲ್ಪ್ಯತೇ = ಕಲ್ಪಿಸಲ್ಪಡುತ್ತದೆ? ಯದಿ = ಒಂದು ವೇಳೆ, ಪ್ರಾಮಾಣ್ಯಗ್ರಹಣೋಪಾಯಾಭಾವತ್ = ಪ್ರಾಮಾಣ್ಯವನ್ನು ಗ್ರಹಿಸುವ ಸಾಧನವು ಇಲ್ಲದ ಕಾರಣದಿಂದಾಗಿ (ಇಂತಹ ಸಂದೇಹವು ಬರುತ್ತದೆ) ಇತಿ = ಹೀಗೆ, ಮತಂ = ಅಭಿಮತವು ಆಗಿರುವುದಾದಲ್ಲಿ, (ಮುಂದಿನ ಶ್ಲೋಕದಿಂದ ಅನ್ವಯವಿದೆ).

ತದಾ = ಆಗ, ತೇ = ನಿನಗೆ, ಅನ್ಯೋನ್ಯಾಶ್ರಯಾಖ್ಯಮಹಾದೋಷಃ = ಅನ್ಯೋನ್ಯಾಶ್ರಯವೆಂಬ ದೊಡ್ಡ ದೋಷವು, ಭವಿಷ್ಯತಿ = ಬರುವುದು.

**ಅನುವಾದ— ಎಲ್ಲ ರೀತಿಯ ಜ್ಞಾನಗಳ ಪ್ರಾಮಾಣ್ಯದ ಬಗೆಗೂ ಮೊದಲು ಸಂಶಯವೇ ಬರುತ್ತದೆಂಬುದು ಅನುಭವ ವಿರುದ್ಧವಾಗಿದೆ. ಪ್ರಾಮಾಣ್ಯವನ್ನು ತಿಳಿದುಕೊಳ್ಳಲು ಬರುತ್ತದೆಂಬುದು ನಿಮ್ಮ ಅಭಿಪ್ರಾಯವಾಗಿದ್ದರೆ ಆಗ ನಿಮಗೆ ಅನ್ಯೋನ್ಯಾಶ್ರಯದ ದೋಷವು ಬರುತ್ತದೆ.**

**ಭಾವವಿಲಾಸಿನೀ–** ಯದುಕ್ತಂ ಸರ್ವತ್ರ ಪ್ರಾಮಾಣ್ಯಸಂಶಯ ಇತಿ, ತತ್ರ ಕೋ ಹೇತುರಿತಿ ಪೃಚ್ಛತಿ – **ಅನಾನುಭವಿಕ ಇತಿ** ॥ ಅನಾನುಭವಿಕಃ ಅನುಭವವಿರುದ್ಧಃ । ನನ್ವನುಮಾನಾತಿರಿಕ್ತ-ಪ್ರಾಮಾಣ್ಯಗ್ರಾಹಕಪ್ರಮಾಣಾಭಾವಾತ್ ಪ್ರಾಮಾಣ್ಯಸಂಶಯ ಇತಿ ಶಂಕಾಮನೂದ್ಯ ದೂಷಯತಿ – **ಪ್ರಾಮಾಣ್ಯೇತಿ** ॥ ತದಾ ಅನ್ಯೋನ್ಯಾಶ್ರಯಾಖ್ಯಮಹಾದೋಷಃ ತೇ ಭವಿಷ್ಯತೀತಿ ಸಂಬಂಧಃ ॥ ೩೫೬ ॥

ತದುಪಪಾದಯತಿ – **ಸಂಶಯೇತಿ** । ಸರ್ವತ್ರ ಜ್ಞಾನೇ ಪ್ರಾಮಾಣ್ಯಸಂಶಯಾನುಪಪತ್ತ್ಯಾ ಪ್ರಾಮಾಣ್ಯೇಕ್ಷಣಶಿಕ್ಷಣಂ ಪ್ರಾಮಾಣ್ಯೇಕ್ಷಣರೂಪಸ್ಯ ಸಾಕ್ಷಿಣಃ ಶಿಕ್ಷಣಂ ತದಗ್ರಾಹಕತ್ವಕಲ್ಪನಮಿತಿ ಭಾವಃ ॥ ೩೫೭ ॥

**ವಿವರಣೆ–** ಇದಕ್ಕೆ ತಾರ್ಕಿಕರು ಹೀಗೆ ಉತ್ತರಿಸಬಹುದು - ಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುವ ಸಾಧನಗಳು ಯಾವುದೂ ಇಲ್ಲ. ಪ್ರಾಮಾಣ್ಯ ಗ್ರಹವಾಗದಿರುವಾಗ ಪ್ರಾಮಾಣ್ಯದ ಬಗ್ಗೆ ಎಲ್ಲ ಕಡೆಯಲ್ಲೂ ಸಂದೇಹ ಬರುತ್ತದೆ ಎಂದು.

ಇದು ಸರಿಯಲ್ಲ. ಹೀಗೆ ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಅದು ಹೇಗೆ ಎಂದು ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ-

ನಚೇದ್ಘಟತ್ವತದ್ವತ್ತ್ವತತ್ಪ್ರಕಾರಕತಾದಿಕಮ್ ।
ಉಪನೀತಮನೀತಂ ವಾ ಸಾಕ್ಷಾತ್ಕುರ್ಯಾದ್ಧಿ ಸಾಕ್ಷ್ಯಸೌ ॥ ೩೫೮ ॥

**ಅರ್ಥ–** ನ ಚೇತ್ = ಇಲ್ಲದಿದ್ದಲ್ಲಿ, ಅಸೌ = ಈ, ಸಾಕ್ಷೀ = ಸಾಕ್ಷಿಯು, ಘಟತ್ವ - ತದ್ವತ್ತ್ವ - ತತ್ಪ್ರಕಾರತಾದಿಕಂ = ಘಟತ್ವವನ್ನೂ, ಘಟದಲ್ಲಿ ಘಟತ್ವವತ್ತ್ವವನ್ನೂ, ಜ್ಞಾನದಲ್ಲಿ ಘಟತ್ವಪ್ರಕಾರಕತ್ವವನ್ನೂ, ಇದಲ್ಲದೆ ಇನ್ನೂ ಅನೇಕ ಧರ್ಮಗಳನ್ನೂ, ಉಪನೀತಂ = ಘಟತ್ವಾದಿಗಳನ್ನು ಉಪನಯಮರ್ಯಾದಯಾ, ಅನುಪನೀತಂ ವಾ = ಘಟತ್ವಪ್ರಕಾರಕತ್ವಾದಿಗಳನ್ನು ಅನುಪನೀತವಾಗಿಯೂ, ಸಾಕ್ಷಾತ್ ಕುರ್ಯಾತ್ ಹಿ = ಸಾಕ್ಷಾತ್ಕರಿಸುತ್ತದೆಯಷ್ಟೇ.

**ಅನುವಾದ–** ಇಲ್ಲದಿದ್ದಲ್ಲಿ ಈ ಸಾಕ್ಷಿಯು ಘಟತ್ವವನ್ನೂ ಘಟದಲ್ಲಿ ಘಟತ್ವವತ್ತ್ವವನ್ನೂ ಜ್ಞಾನದಲ್ಲಿ ಘಟತ್ವಪ್ರಕಾರಕತ್ವವನ್ನೂ ಇದಲ್ಲದೆ ಇನ್ನೂ ಅನೇಕ ಧರ್ಮ-ಗಳನ್ನೂಘಟತ್ವಾದಿಗಳನ್ನು ಉಪನಯಮರ್ಯಾದಯಾ ಘಟತ್ವಪ್ರಕಾರಕ-ತ್ವಾದಿಗಳನ್ನು ಅನುಪನೀತವಾಗಿಯೂ, ಸಾಕ್ಷಾತ್ಕರಿಸುತ್ತದೆಯಷ್ಟೇ.

**ಭಾವವಿಲಾಸಿನೀ–** ತದುಪಪಾದಯತಿ **ಸಂಶಯೇತಿ** ನಚೇತ್ ಸಂಶಯಾನುಪಪತ್ತ್ಯಾ ಸಾಕ್ಷಿಣಃ ಪ್ರಾಮಾಣ್ಯಾಗ್ರಾಹಕತ್ವಕಲ್ಪನಂ ನ ಚೇದ್ ಘಟತ್ವಂ ಘಟತ್ವಜಾತಿಃ ತದ್ವತ್ತ್ವಂ ಘಟತ್ವವತ್ತ್ವಂ ತತ್ಪ್ರಕಾರಕತಾ ಘಟತ್ವಪ್ರಕಾರಕತ್ವಮ್ । ಆದಿಪದೇನ ಘಟತ್ವವದ್ವಿಶೇಷ್ಯಕತ್ವಂ ಜ್ಞಾನತ್ವಂ ಚೇತಿ

ಪ್ರಾಮಾಣ್ಯಶರೀರಘಟಕಂ ಸರ್ವಂ ಗೃಹೀತಮಿತಿ ದ್ರಷ್ಟವ್ಯಮ್ । ಉಪನೀತಂ ವ್ಯವಸಾಯೋ-ಪನೀತಮ್ । ತಚ್ಚ ಘಟತ್ವಮ್ । ಘಟೇ ಘಟತ್ವವತ್ತ್ವಂ ಚ । ಬಾಹ್ಯತ್ವಾತ್ । ಅನೀತಂ ಅನು-ಪನೀತಮ್ । ತಚ್ಚ ಘಟತ್ವವದ್ವಿಶೇಷ್ಯಕತ್ವಾದಿಕಮ್ । ಸಾಕ್ಷಾಜ್ಜ್ಞಾನನಿಷ್ಠತ್ವೇನಾಂತರತ್ವಾತ್ । ಅಸೌ ಸಾಕ್ಷೀ ಸಾಕ್ಷಾತ್ಕುರ್ಯಾದ್ಧಿ । ಪ್ರತಿಬಂಧಕಾಭಾವಾದಿತಿ ಭಾವಃ ॥ ೩೫೮ ॥

**ವಿವರಣೆ–** ಸಕಲ ಜ್ಞಾನಗಳಲ್ಲೂ ಪ್ರಾಮಾಣ್ಯಸಂಶಯ ಇದೆ ಎಂದಾದಲ್ಲಿ ಅಂತಹ ಸಂಶಯರೂಪವಾದ ಪ್ರತಿಬಂಧಕ ಇರುವ ಕಾರಣದಿಂದಾಗಿ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ಸಿದ್ಧವಾಗುತ್ತದೆ. ಸಾಕ್ಷಿಗೆ ಪ್ರಾಮಾಣ್ಯ ಅಗ್ರಾಹಕತ್ವವನ್ನು ಒಪ್ಪದೇ ಹೋದಲ್ಲಿ ಅದು ಪ್ರಾಮಾಣ್ಯವನ್ನು ಗ್ರಹಿಸಿಯೇ ತೀರುತ್ತದೆ. ಹೇಗೆಂದರೆ ಆ ಸಾಕ್ಷಿಯು ಘಟತ್ವಧರ್ಮವನ್ನು ಘಟದಲ್ಲಿ ಆ ಘಟತ್ವ ಇದೆ ಎಂಬುದನ್ನೂ ವ್ಯವಸಾಯದ ಮೂಲಕ ಜ್ಞಾನಲಕ್ಷಣಾಸನ್ನಿಕರ್ಷದಿಂದ ಗ್ರಹಿಸುತ್ತದೆ. ಏಕೆಂದರೆ, ಅವೆರಡು ಬಾಹ್ಯಗಳಾದುದರಿಂದ ಆಂತರವಾದ ಸಾಕ್ಷಿಯು ನೇರವಾಗಿ ಅವುಗಳನ್ನು ಗ್ರಹಿಸಲಾರದು. ಇನ್ನು ಆಂತರವಾದ ಜ್ಞಾನದಲ್ಲಿರುವ ಘಟತ್ವಪ್ರಕಾರಕತ್ವ ಮತ್ತು ಘಟತ್ವವದ್ವಿಶೇಷ್ಯಕತ್ವವನ್ನು ತಾನೇ ನೇರವಾಗಿ ಗ್ರಹಿಸಿಬಿಡುತ್ತದೆ. ಸಾಕ್ಷಿಯು ಘಟತ್ವವತಿ ಘಟತ್ವಪ್ರಕಾರತ್ವರೂಪವಾದ ಪ್ರಾಮಾಣ್ಯವನ್ನು ಗ್ರಹಿಸಬೇಕಾದರೆ ಇವೆಲ್ಲವನ್ನೂ ಗ್ರಹಿಸಬೇಕಾಗುತ್ತದೆ. ಅವುಗಳನ್ನು ಉಪನೀತವಾಗಿಯೋ, ಅನುಪನೀತವಾಗಿಯೋ ಸಾಕ್ಷಿಗೆ ಗ್ರಹಿಸುವ ಸಾಮರ್ಥ್ಯವಿದೆ. ಹೀಗೆ ಸಂಶಯ ಎಂಬ ಪ್ರತಿಬಂಧಕವಿಲ್ಲದಿದ್ದಲ್ಲಿ ಸಾಕ್ಷಿಯು ಹೇಗಾದರೂ ಮಾಡಿ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಅದಕ್ಕೆ ಪ್ರಾಮಾಣ್ಯಾಗ್ರಾಹಕತ್ವಬರಬೇಕಾದರೆ ಸಂಶಯರೂಪವಾದ ಪ್ರತಿಬಂಧಕವನ್ನು ಹೇಳಲೇಬೇಕು.

ಹಾಗೆ ಮಾಡಿದರೆ ಮುಂದಿನ ಶ್ಲೋಕದಲ್ಲಿ ಇದಕ್ಕೆ ಉತ್ತರವನ್ನು ಹೇಳುತ್ತಾರೆ-

**ಯದ್ಯಸ್ತಿ ಸಂಶಯಸ್ತೇಽಯಂ ತದೈವಾಸ್ಯ ಪರಾಭವಃ ।**
**ಪರಾಭೂತೇ ಸತಿ ಹ್ಯಸ್ಮಿನ್ನೀಕ್ಷಣಂ ಸ್ಯಾದ್ದುರೀಕ್ಷಣಮ್ ॥ ೩೫೯ ॥**

**ಪ್ರಾಮಾಣ್ಯವೀಕ್ಷಣಾಭಾವಾದೇವ ಸಂಶಯಕಲ್ಪನಾ ।**
**ಏವಂಚ ಕಥಮನ್ಯೋನ್ಯಸಂಶ್ರಯಸ್ತ್ವಾಂ ಜಿಹಾಸತಿ ॥ ೩೬೦ ॥**

**ಅರ್ಥ–** ತೇ = ನಿನಗೆ, ಯದಿ = ಒಂದು ವೇಳೆ, ಅಯಂ ಸಂಶಯಃ = ಸಕಲಜ್ಞಾನಗಳಲ್ಲೂ ಪ್ರಾಮಾಣ್ಯಸಂಶಯವು, ಅಸ್ತಿ = ಇದ್ದರೆ, ತದೈವ = ಆಗಲೇ, ಅಸ್ಯ = ಈ ಸಾಕ್ಷಿಗೆ, ಪರಾಭವಃ = ಪ್ರಾಮಾಣ್ಯಗ್ರಹಿಸುವ ವಿಷಯದಲ್ಲಿ ಸೋಲಾಗುತ್ತದೆ.

ಅಸ್ಮಿನ್ = ಈ ಸಾಕ್ಷಿಯು, ಪರಾಭೂತೇ ಸತಿ = ಸೋಲುತ್ತಿರಲು, ಈಕ್ಷಣಂ = ಸಾಕ್ಷಿಯಿಂದ ಪ್ರಾಮಾಣ್ಯಜ್ಞಾನವು, ದುರೀಕ್ಷಣಂ = ಅರ್ಥಸತ್ತಾಕ್ಕೆ ಅನಿಶ್ಚಾಯಕವಾಗುತ್ತದೆ. ಪ್ರಾಮಾಣ್ಯವೀಕ್ಷಣಾಭಾವದೇವ = ಸಾಕ್ಷಿಯಿಂದ ಪ್ರಾಮಾಣ್ಯವು ಗ್ರಹಿಸಲ್ಪಡದಿದ್ದರೆ ಮಾತ್ರ,

ಸಂಶಯಕಲ್ಪನಾ = ಸಕಲಜ್ಞಾನಗಳಲ್ಲೂ ಪ್ರಾಮಾಣ್ಯಸಂಶಯ ಇದೆ ಎಂಬ ಕಲ್ಪನೆ. ಏವಂ ಚ = ಹೀಗೆ, ಅನ್ಯೋನ್ಯಸಂಶ್ರಯಃ = ಅನ್ಯೋನ್ಯಾಶ್ರಯದೋಷವು, ತ್ವಾಂ = ನಿನ್ನನ್ನು ಕಥಂ = ಹೇಗೆ, ಜಿಹಾಸತಿ = ಬಿಟ್ಟೀತು?

**ಅನುವಾದ–** ನಿಮ್ಮ ಮತದಲ್ಲಿ ಒಂದು ವೇಳೆ ಸಕಲಜ್ಞಾನಗಳಲ್ಲೂ ಪ್ರಾಮಾಣ್ಯ ಸಂಶಯವು ಇದ್ದರೆ, ಆಗಲೇ ಈ ಸಾಕ್ಷಿಗೆ ಪ್ರಾಮಾಣ್ಯಗ್ರಹಿಸುವ ವಿಷಯದಲ್ಲಿ ಸೋಲಾಗುತ್ತದೆ.

ಈ ಸಾಕ್ಷಿಯು ಸೋತರೆ ಮಾತ್ರ ಅದರಿಂದ ಬಂದ ಪ್ರಾಮಾಣ್ಯ ಜ್ಞಾನವು ತನ್ನ ವಿಷಯದ ಅಸ್ತಿತ್ವವನ್ನು ದೃಢಪಡಿಸಿದೇ ಹೋಗುತ್ತದೆ. ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಲಾರದು ಎಂದು ಸಿದ್ಧವಾದರೆ ಮಾತ್ರ ಸಕಲ ಜ್ಞಾನಗಳಲ್ಲೂ ಪ್ರಾಮಾಣ್ಯ ಸಂಶಯವಿದೆ ಎಂಬ ಕಲ್ಪನೆ ಮೂಡಲು ಸಾಧ್ಯವಾಗುತ್ತದೆ. ಹೀಗೆ ನಿಮಗೆ ಅನ್ಯೋನ್ಯಾಶ್ರಯವಿದ್ದೇ ಇದೆ.

**ಭಾವವಿಲಾಸಿನೀ–** ತಸ್ಮಾತ್ಪ್ರಾಮಾಣ್ಯಸಂಶಯ ಏವ ಪ್ರತಿಬಂಧಕೋ ವಕ್ತವ್ಯ ಇತ್ಯಾಹ – ಯದೀತಿ ॥ ತೇ ತವ ಮತೇ ಅಯಂ ಸಂಶಯಃ ಪ್ರಾಮಾಣ್ಯಸಂಶಯಃ ಯದ್ಯಸ್ತಿ, ತದೈವಾಸ್ಯ ಸಾಕ್ಷಿಣಃ ಪರಾಭವಃ ಪ್ರಾಮಾಣ್ಯಾಗ್ರಾಹಕತ್ವರೂಪಃ ಸಿದ್ಧ್ಯತೀತಿ ಶೇಷಃ । ಅಸ್ಮಿನ್ ಸಾಕ್ಷಿಣಿ ಪರಾಭೂತೇ ಸತಿ ಪ್ರಾಮಾಣ್ಯನಿರ್ಣಾಯಕತ್ವಶಕ್ತಿರಹಿತೇ ಸತಿ ಈಕ್ಷಣಂ ಅಸ್ಮದಭಿಮತಂ ಸಾಕ್ಷಿಣಾ ಪ್ರಾಮಾಣ್ಯೇಕ್ಷಣಂ ದುರೀಕ್ಷಣಮ್ ಅರ್ಥಸತ್ತಾಯಾ ಅನಿಶ್ಚಾಯಕಂ ಸ್ಯಾದಿತಿ ಸಂಬಂಧಃ ॥೩೫೯॥

ಸಾಕ್ಷಿರೂಪೇಕ್ಷಣಸ್ಯ ದುರೀಕ್ಷಣತ್ವೇ ಸಿದ್ಧ ಏವ ಪ್ರಾಮಾಣ್ಯಕೋಟಿನಿಶ್ಚಾಯಕಾಭಾವಾತ್ ತ್ವದಭಿಲಷಿತಸಂಶಯೋತ್ಥಾನಂ ಸ್ಯಾದಿತ್ಯಾಹ – **ಪ್ರಾಮಾಣ್ಯೇತಿ** ॥ ತಥಾಚಾನ್ಯೋನ್ಯಾಶ್ರಯ ಇತ್ಯಾಹ – **ಏವಂಚೇತಿ** ॥ ೩೬೦ ॥

**ವಿವರಣೆ–** ಸಕಲಜ್ಞಾನಗಳಲ್ಲೂ ಪ್ರಾಮಾಣ್ಯಸಂಶಯವಿದೆ ಎಂದಾಗ ಮಾತ್ರ ಸಂಶಯರೂಪವಾದ ಪ್ರತಿಬಂಧಕವಿರುವ ಕಾರಣ ಸಾಕ್ಷಿಗೆ ಪ್ರಾಮಾಣ್ಯಾಗ್ರಾಹಕತ್ವಸಿದ್ಧಿ. ಪ್ರಾಮಾಣ್ಯಾಗ್ರಾಹಕತ್ವವು ಸಿದ್ಧವಾದರೆ ಮಾತ್ರ ಪ್ರಾಮಾಣ್ಯನಿಶ್ಚಯರೂಪಪ್ರತಿಬಂಧಕವು ಇಲ್ಲದಾಗುವುದರಿಂದ ಜ್ಞಾನದಲ್ಲಿ ಪ್ರಾಮಾಣ್ಯಸಂಶಯ ಉಂಟಾಗಲು ಸಾಧ್ಯವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ.

ಪರಾಭವಃ ಎಂಬ ಪದಕ್ಕೆ ಸುರೋತ್ತಮತೀರ್ಥರು ಸಾಕ್ಷಿಗೆ ಪ್ರಾಮಾಣ್ಯನಿರ್ಣಾಯಕ ಶಕ್ತ್ಯಭಾವ ಎಂದು ಅರ್ಥವನ್ನು ಹೇಳಿದ್ದಾರೆ-

ಪೃಥುಬುಧ್ನೋದರತ್ವಾದೇರ್ವಿಶೇಷಸ್ಯ ಪ್ರದರ್ಶನಾತ್ ।
ಕಥಂ ಸಮೀಪಸ್ಥಘಟಪಟಾದ್ಯರ್ಥೇಷು ಸಂಶಯಃ ।
ಯನ್ಮೂಲೋ ಜ್ಞಾನಮಾನತ್ವಸಂದೇಹಸ್ತೇ ಭವಿಷ್ಯತಿ ॥ ೩೬೧ ॥

**ಅರ್ಥ–** ಸಮೀಪಸ್ಥಘಟಾದ್ಯರ್ಥೇಷು = ಸಮೀಪದಲ್ಲಿರುವ ಘಟ ಮುಂತಾದ ವಸ್ತುಗಳಲ್ಲಿ, ಪೃಥುಬುಧ್ನೋದರತ್ವಾದೇಃ = ಪೃಥುಬುಧ್ನೋದರತ್ವಾದಿ– ರೂಪವಾದ, ವಿಶೇಷಸ್ಯ = ಅಸಾಧಾರಣಧರ್ಮವನ್ನು, ಪ್ರದರ್ಶನಾತ್ = ತಿಳಿದಿರುವ ಕಾರಣದಿಂದ, ಕಥಂ = ಹೇಗೆ, ಸಂಶಯಃ = ಸಂಶಯವು ಉಂಟಾಗುತ್ತದೆ?

ಯನ್ಮೂಲಃ = ಯಾವ ಆ ಅರ್ಥಸಂಶಯಮೂಲಕವಾಗಿ, ತೇ = ನಿನಗೆ, ಜ್ಞಾನಮಾನತ್ವಸಂದೇಹಃ = ಜ್ಞಾನಪ್ರಾಮಾಣ್ಯದ ಸಂದೇಹವು, ಭವಿಷ್ಯತಿ = ಬಂದೀತು.

**ಅನುವಾದ– ಸಮೀಪದಲ್ಲಿಯೇ ಘಟ ಮೊದಲಾದ ವಸ್ತುಗಳನ್ನು ಕಂಡಾಗ ಅವುಗಳ ಗುಂಡಾದತಳಭಾಗ ಮೊದಲಾದ ವಿಶೇಷ ಗುಣಗಳೂ ಸ್ಪಷ್ಟವಾಗಿಯೇ ಕಾಣುತ್ತವೆ. ಹಾಗಿರುವಾಗ ಆ ವಸ್ತುಗಳ ಜ್ಞಾನದ ಪ್ರಾಮಾಣ್ಯದ ಬಗ್ಗೆ ಸಂಶಯ ಹೇಗೆ ಬಂದೀತು?**

**ಯಾವ ವಸ್ತುವಿನ ಬಗೆಗಿನ ಸಂಶಯದಿಂದಾಗಿ ನಿಮಗೆ ಜ್ಞಾನದ ಪ್ರಾಮಾಣ್ಯದ ಬಗ್ಗೆ ಸಂಶಯ ಬಂದೀತು?**

**ಭಾವವಿಲಾಸಿನೀ–ಸಮೀಪಸ್ಥಘಟಾದಿಜ್ಞಾನಪ್ರಾಮಾಣ್ಯೇ ಸಂಶಯೋ ನಾನುಭವಿಕ ಇತ್ಯುಕ್ತಮ್। ತತ್ಕುತಃ? ಇತ್ಯತ ಆಹ – ಪೃಥ್ವಿತಿ ॥ ಘಟತ್ವಾದೇಃ ನಿರ್ಣಾಯಕೋ ಯಃ ಪೃಥುಬುಧ್ನೋ-ದರಾಕಾರತ್ವಾದಿಃ ತಸ್ಯ ವಿಶೇಷಸ್ಯ । ಯನ್ಮೂಲಃ ಯಃ ಅರ್ಥಸಂಶಯಃ ಮೂಲಂ ಕಾರಣಂ ಯಸ್ಯ ಸಃ । ಪೃಥುಬುಧ್ನೋದರಾಕಾರತ್ವಾಖ್ಯವಿಶೇಷದರ್ಶನೇನ ಪುರೋವರ್ತಿನಿ ಘಟತ್ವವತ್ತ್ವಸ್ಯಾಪಿ ನಿರ್ಣೀತತ್ವಾತ್ । ತನ್ನಿರ್ಣಯ ಏವ ಪ್ರಾಮಾಣ್ಯಕೋಟೇರ್ವಿಶೇಷದರ್ಶನಮಿತಿ ಕಥಂ ಪ್ರಾಮಾಣ್ಯಸಂಶಯಃ । ನಹಿ ವಿಶೇಷದರ್ಶನೇ ಸತಿ ಸಂಶಯ ಇತಿ ಭಾವಃ ॥ ೩೬೧ ॥**

**ವಿವರಣೆ–** ಹಿಂದೆ ಸಮೀಪದಲ್ಲಿರುವ ವಸ್ತುಗಳ ಜ್ಞಾನ ಬಂದಾಗ ಅಂತಹ ಜ್ಞಾನಪ್ರಾಮಾಣ್ಯದಲ್ಲಿ ಸಂದೇಹ ಬರುವುದಿಲ್ಲ ಎಂದಿರುತ್ತಾರೆ. ಅದನ್ನು ಅಲ್ಲಿ ಸಮರ್ಥಿಸಲಾಗಿದೆ.

ನಮ್ಮ ಪಕ್ಷದಲ್ಲಿ ಸಮೀಪದಲ್ಲಿ ಇರುವ ಘಟದ ಜ್ಞಾನವು ಬಂದಾಗ ಆ ಘಟದಲ್ಲಿರುವ ಪೃಥುಬುಧ್ನೋದರತ್ವ ಎಂಬ ಅಸಾಧಾರಣಧರ್ಮವೂ ತಿಳಿಯುತ್ತದೆ. ಅಸಾಧಾರಣ ಧರ್ಮಜ್ಞಾನವು ಸಂದೇಹಕ್ಕೆ ಪ್ರತಿಬಂಧಕ. ಆದ್ದರಿಂದ ಇದು ಘಟ ಹೌದೋ ಅಲ್ಲವೋ ಎಂಬ ಸಂದೇಹ ಬರುವುದಿಲ್ಲ, ಅರ್ಥದಲ್ಲಿ ಸಂದೇಹ ಇಲ್ಲದಿರುವಾಗ ಜ್ಞಾನದಲ್ಲೂ ಪ್ರಾಮಾಣ್ಯಸಂದೇಹ ಬರುವುದಿಲ್ಲ, ಏಕೆಂದರೆ ಪ್ರಾಮಾಣ್ಯಸಂದೇಹವು ಅರ್ಥಸಂದೇಹಮೂಲವಾದುದು. ಆದ್ದರಿಂದ ಸಮೀಪದಲ್ಲಿರುವ ವಸ್ತುವಿನ ಜ್ಞಾನಬಂದಾಗ ಅದರಲ್ಲಿ ಪ್ರಾಮಾಣ್ಯಸಂದೇಹಕ್ಕೆ ಅವಕಾಶವೇ ಇಲ್ಲ, ಅಲ್ಲಿ ಪ್ರಾಮಾಣ್ಯಸ್ವತಸ್ತ್ವವನ್ನು ಒಪ್ಪಲೇಬೇಕು.

ಯನ್ಮೂಲಃ - ಯಃ - ಅರ್ಥಸಂಶಯಃ, ಮೂಲಂ-ಮೂಲಕಾರಣಂ ಯಸ್ಯ ಸಃ । ಅರ್ಥಸಂದೇಹವೇ ಮೂಲಕಾರಣವಾಗಿವುಳ್ಳ ಪ್ರಾಮಾಣ್ಯಸಂದೇಹ ಎಂದು ಅರ್ಥ.

**ಯಥಾ ಪ್ರಾಮಾಣ್ಯಾನುಮಾನಾತ್ ಪ್ರಾಮಾಣ್ಯಸ್ಯ ವಿನಿರ್ಣಯಃ ।**
**ತಥಾ ಘಟತ್ವಪ್ರತ್ಯಕ್ಷಾದ್‌ಘಟತ್ವಸ್ಯಾಪಿ ನಿರ್ಣಯಃ ॥ ೩೬೨ ॥**

**ಅರ್ಥ–** ಯಥಾ= ಹೇಗೆ, ಪ್ರಾಮಾಣ್ಯಾನುಮಾನತ್= ಪ್ರಾಮಾಣ್ಯಸಾಧಕಾನು-ಮಾನದಿಂದ, ಪ್ರಾಮಾಣ್ಯಸ್ಯ= ಪ್ರಾಮಾಣ್ಯದ, ವಿನಿರ್ಣಯಃ= ನಿರ್ಧಾರವು, ಭವತಿ= ಆಗುತ್ತದೋ, ತಥಾ= ಅದೇ ರೀತಿಯಲ್ಲಿ, ಘಟತ್ವಪ್ರತ್ಯಕ್ಷಾತ್= ಘಟತ್ವದ ಪ್ರತ್ಯಕ್ಷದಿಂದ, ಘಟತ್ವಸ್ಯ= ಘಟತ್ವದ, ನಿರ್ಣಯಃ ಅಪಿ= ನಿರ್ಣಯವೂ ಕೂಡ, ಭವತಿ= ಆಗುತ್ತದೆ.

**ಅನುವಾದ–** ಪ್ರಾಮಾಣ್ಯವನ್ನು ಸಾಧಿಸುವ ಅನುಮಾನದಿಂದ ಜ್ಞಾನದಲ್ಲಿ ಪ್ರಾಮಾಣ್ಯವಿದೆಯೆಂದು ನಿರ್ಧಾರವಾಗುವಂತೆ ಘಟದಲ್ಲಿ ಘಟತ್ತ್ವವನ್ನು ಗ್ರಹಿಸುವ ಪ್ರತ್ಯಕ್ಷಪ್ರಮಾಣದಿಂದ ಘಟದಲ್ಲಿ ಘಟತ್ತ್ವವಿದೆಯೆಂದೂ ನಿರ್ಧಾರವಾಗುತ್ತದೆ.

**ಭಾವವಿಲಾಸಿನೀ–** ಘಟತ್ವಪ್ರಾಪಕವಿಶೇಷದರ್ಶನಾದ್ ಘಟತ್ವನಿರ್ಣಯಮುಕ್ತ್ವಾ ಪ್ರಕಾರಾಂತರೇಣಾಪಿ ತನ್ನಿರ್ಣಯಮುಪಪಾದಯತಿ – **ಯಥೇತಿ** ॥ ೩೬೨ ॥

**ಶಂಕಾಧಾನಂ ಯಥಾ ತತ್ರ ಮೂಲದಾರ್ಢ್ಯಾನ್ನ ತೇ ಮತೇ ।**
**ತಥಾ ನಿರ್ದೋಷಾಕ್ಷಜನ್ಯಜ್ಞಾನದಾರ್ಢ್ಯಾದಿಹಾಪಿ ನ ॥ ೩೬೩ ॥**

**ಅರ್ಥ–** ಯಥಾ = ಹೇಗೆ, ತೇ ಮತೇ = ನಿನ್ನ ಮತದಲ್ಲಿ, ಮೂಲದಾರ್ಢ್ಯಾತ್ = ಅನುಮಾನಕ್ಕೆ ಮೂಲವಾದ ವ್ಯಾಪ್ತಿಯಲ್ಲಿ ನಿರ್ಧಾರವಿರುವುದರಿಂದ, ತತ್ರ = ಜ್ಞಾನಪ್ರಾಮಾಣ್ಯವಿಷಯದಲ್ಲಿ, ಶಂಕಾಧಾನಂ = ಸಂದೇಹವು, ನ = ಇಲ್ಲವೋ, ತಥಾ = ಹಾಗೆಯೇ, ಇಹಾಪಿ = ಸಮೀಪದಿಂದ ನೋಡಿದ ಘಟಾದಿಗಳ ಬಗ್ಗೆಯೂ, ನಿರ್ದೋಷಾಕ್ಷಜನ್ಯಜ್ಞಾನದಾರ್ಢ್ಯಾತ್ = ದೋಷವಿಲ್ಲದ ಇಂದ್ರಿಯಗಳಿಂದ ಹುಟ್ಟಿರುವ ಜ್ಞಾನದ ಬಗ್ಗೆ ದಾರ್ಢ್ಯವಿರುವ ಕಾರಣದಿಂದಾಗಿ, ನ ಶಂಕಾಧಾನಂ= ಸಂದೇಹವು ಹುಟ್ಟುವುದಿಲ್ಲ.

**ಅನುವಾದ–** ಅನುಮಾನ ಪ್ರಮಾಣದಿಂದ ಮೂಲಕಾರಣವಾದ ವ್ಯಾಪ್ತಿಯ ಬಗ್ಗೆ ದೃಢವಾದ ನಿಶ್ಚಯವಿರುವುದರಿಂದ ಆ ವ್ಯಾಪ್ತಿಯು ನಿಶ್ಚಯದಿಂದ ಹುಟ್ಟಿದ ಅನುಮಿತಿಯ ಪ್ರಾಮಾಣ್ಯದ ಬಗ್ಗೆಯೂ ಸಂದೇಹವು ಬರುವುದಿಲ್ಲವೆಂದು ನಿಮ್ಮ ಮತದಲ್ಲಿ ಒಪ್ಪಲಾಗಿದೆ. ಹಾಗೆಯೇ ಸಮೀಪದಲ್ಲಿರುವ ಘಟಾದಿ ವಸ್ತುಗಳ ಜ್ಞಾನಗಳೂ ದೋಷರಹಿತಗಳಾದ ಇಂದ್ರಿಯಗಳ ಮೂಲಕವೇ ಹುಟ್ಟಿರುವುದರಿಂದ ಆ ಘಟಾದಿ ವಸ್ತುಗಳ ಬಗ್ಗೆಯೂ ಸಂಶಯವು ಹುಟ್ಟುವುದಿಲ್ಲ.

**ಭಾವವಿಲಾಸಿನೀ–** ತತ್ರ ಪ್ರಾಮಾಣ್ಯಾನುಮಾನೇ । ಮೂಲದಾರ್ಢ್ಯಾದ್ ಅನುಮಾನಮೂಲ ವ್ಯಾಪ್ತ್ಯಾದಿದಾರ್ಢ್ಯಾತ್ । ಇಹಾಪಿ ಘಟೇಽಪಿ ಶಂಕಾಧಾನಂ ನೇತಿ ಸಂಬಂಧಃ ॥ ೩೬೩ ॥

**ವಿವರಣೆ–** ಸಮರ್ಥಪ್ರವೃತ್ತಿಜನಕತ್ವಲಿಂಗದಿಂದ ಪ್ರಾಮಾಣ್ಯಾನುಮಿತಿ ಬಂದರೆ ಆ ಅನುಮಿತಿಯು ಸರಿಯೋ ತಪ್ಪೋ ಎಂಬ ಬಗ್ಗೆ ಸಂದೇಹ ಬರುವುದಿಲ್ಲ. ಏಕೆಂದರೆ ಅನುಮಾನಕ್ಕೆ ಆಧಾರವಾದ ವ್ಯಾಪ್ತಿಯು ದೃಢವಾಗಿದ್ದರೆ ಅನುಮಿತಿಯು ಸರಿಯಾಗಿಯೇ ಇರುತ್ತದೆ. ಅದರಂತೆ, ಸಮೀಪದಲ್ಲಿ ಇಂದ್ರಿಯದಿಂದ ಹುಟ್ಟಿದೆ ಎಂದು ನಿರ್ಧಾರವಾಗಿರುವುದರಿಂದ ಅಂತಹ ಜ್ಞಾನದಿಂದ ಗ್ರಹಿಸಲ್ಪಟ್ಟ ವಸ್ತುವೂ ನಿಶ್ಚಿತವಾಗಿರುತ್ತದೆ. ಅದರ ಬಗ್ಗೆ ಸಂದೇಹ ಬರುವುದಿಲ್ಲ.

ತಸ್ಮಾತ್ ಪ್ರಾಮಾಣ್ಯಶಂಕಾಯಾ ಬೀಜಂ ಭರ್ಜಿತಮತ್ರ ತೇ ।
ನಿರ್ಬೀಜಾ ಸಾ ಲತಾ ಗರ್ಭಸ್ರಾವೇಣೈವ ಗತಾಽಭವತ್ ॥ ೩೬೪ ॥

**ಅರ್ಥ–** ತಸ್ಮಾತ್ = ಆದ್ದರಿಂದ, ಅತ್ರ = ಸಮೀಪಸ್ಥವಸ್ತುವಿನ ಜ್ಞಾನದಲ್ಲಿ, ತೇ = ನಿನಗೆ, ಪ್ರಾಮಾಣ್ಯಶಂಕಾಯಾಃ = ಪ್ರಾಮಾಣ್ಯಸಂದೇಹಕ್ಕೆ ಬೇಕಾದ, ಬೀಜಂ= ಬೀಜವೇ, ಭರ್ಜಿತಂ = ಹುರಿಯಲ್ಪಟ್ಟಿದೆ. ಸಾ ಲತಾ = ಸಂದೇಹವೆಂಬ ಬಳ್ಳಿಯು, ನಿರ್ಬೀಜಾ = ಬೀಜವೇ ಇಲ್ಲದ್ದಾಗಿ, ಗರ್ಭಸ್ರಾವೇಣೈವ = ಗರ್ಭಸ್ರಾವದಿಂದಲೇ, ಗತಾ = ಸತ್ತು ಹೋಗಿದ್ದಾಗಿ, ಅಭವತ್ = ಆಯಿತು.

**ಅನುವಾದ–** ಆದ್ದರಿಂದ ಸಮೀಪಸ್ಥವಸ್ತುವಿನ ಜ್ಞಾನದಲ್ಲಿ ನಿನಗೆ ಬರಬಹುದಾದ ಪ್ರಾಮಾಣ್ಯಸಂದೇಹಕ್ಕೆ ಬೇಕಾದ ಬೀಜವೇ ಹುರಿಯಲ್ಪಟ್ಟಿದೆ. ಸಂದೇಹವೆಂಬ ಬಳ್ಳಿಯು ಬೀಜವೇ ಇಲ್ಲದ್ದಾಗಿ, ಗರ್ಭಸ್ರಾವದಿಂದಲೇ ಸತ್ತು ಹೋಯಿತು.

**ಭಾವವಿಲಾಸಿನೀ–** ಸಮೀಪಸ್ಥಘಟಜ್ಞಾನಪ್ರಾಮಾಣ್ಯಸಂಶಯಾಭಾವಮುಪಸಂಹರತಿ – ತಸ್ಮಾದಿತಿ ॥ ಶಂಕಾಬೀಜಂ ನಿರ್ಣಾಯಕಾಭಾವಸಹಕೃತಸಾಧಾರಣಧರ್ಮದರ್ಶನರೂಪಮ್ । ಸಾ ಶಂಕಾ । ಲತೇವ ಲತಾ ಗರ್ಭಸ್ರಾವೇಣೈವ । ಬೀಜಾಭಾವೇನೇತಿ ಭಾವಃ ॥ ೩೬೪ ॥

**ವಿವರಣೆ–** ಸಂದೇಹಕ್ಕೆ ಬೀಜ - ನಿರ್ಣಾಯಕಾಭಾವಸಹಿತ ಸಾಧಾರಣಧರ್ಮಜ್ಞಾನ. ಪ್ರಕೃತ, ಅಸಾಧಾರಣದರ್ಶನಾದಿ ರೂಪವಾದ ನಿರ್ಣಾಯಕ ಇದೆ. ಆದ್ದರಿಂದ ಪ್ರಾಮಾಣ್ಯಸಂದೇಹಕ್ಕೆ ಬೀಜವೇ ಇಲ್ಲ. ಆದ್ದರಿಂದ ಸಮೀಪಸ್ಥವಸ್ತುವಿನ ಜ್ಞಾನದಲ್ಲಿ ಸಂದೇಹಕ್ಕೆ ಆಸ್ಪದವೇ ಇಲ್ಲ.

ರಾಜರೂ ಈ ವಿಷಯವನ್ನು ಆಲಂಕಾರಿಕವಾಗಿ ತಿಳಿಸಿದ್ದಾರೆ. ಲತೆ ಹುಟ್ಟಬೇಕಾದರೆ ಬೀಜ ಬೇಕು. ಬೀಜವೇ ಇಲ್ಲದಿದ್ದರೆ ಲತೆಯ ವಾರ್ತೆಯೇ ಇಲ್ಲ. ಸಂದೇಹವನ್ನು ಲತೆ ಎಂದು ಪರಿಗಣಿಸಿದಲ್ಲಿ ಆ ಸಂದೇಹಲತೆಗೆ ಪ್ರಕೃತ ಬೀಜವೇ ಇಲ್ಲ. ಸಂದೇಹ ಹೇಗೆ ತಾನೇ ಹುಟ್ಟಬೇಕು?

**ದೋಷಶಂಕಾಕೃತೋಽಪ್ಯೇಷು ನ ಸ್ಯಾತ್ ಪ್ರಾಮಾಣ್ಯಸಂಶಯಃ ।**
**ಸಮೀಪಸ್ಥಘಟಾದ್ಯರ್ಥಜ್ಞಾನೇಷು ಕುತ ಏವ ಸಾ ॥ ೩೬೫ ॥**

**ಅರ್ಥ–** ಏಷು = ಸಮೀಪಸ್ಥವಸ್ತುಗಳ ಜ್ಞಾನಗಳಲ್ಲಿ, ದೋಷಶಂಕಾಕೃತಃ ಅಪಿ = ದೋಷಗಳ ಸಂದೇಹಪ್ರಯುಕ್ತವಾಗಿಯೂ, ಪ್ರಾಮಾಣ್ಯಸಂಶಯಃ = ಪ್ರಾಮಾಣ್ಯದ ಸಂದೇಹವು, ನ ಸ್ಯಾತ್ = ಬರಲಾರದು. ಏಕೆಂದರೆ, ಸಮೀಪಸ್ಥಘಟಾದ್ಯರ್ಥಜ್ಞಾನೇಷು = ಸಮೀಪದಲ್ಲಿರುವ ಘಟಾದಿವಸ್ತುಗಳ ಜ್ಞಾನಗಳಲ್ಲಿ, ಸಾ ಶಂಕಾ= ದೋಷಸಂದೇಹವು, ಕುತ ಏವ = ಎಲ್ಲಿಂದ ಬರಬೇಕು?

**ಅನುವಾದ– ಸಮೀಪಸ್ಥ ವಸ್ತುಗಳ ಜ್ಞಾನಗಳು ದೋಷಗಳಿಂದಾಗಿ ಹುಟ್ಟಿವೆಯೇನೋ ಎಂಬ ಸಂದೇಹದಿಂದಲೂ ಅವುಗಳ ಪ್ರಾಮಾಣ್ಯದ ಬಗ್ಗೆ ಸಂದೇಹವು ಬರಲಾರದು. ಏಕೆಂದರೆ, ಸಮೀಪದಲ್ಲಿರುವ ಘಟಾದಿವಸ್ತುಗಳ ಜ್ಞಾನಗಳಲ್ಲಿ ದೋಷಸಂದೇಹವು ಎಲ್ಲಿಂದ ಬರಬೇಕು?**

**ಭಾವವಿಲಾಸಿನೀ–** ನನು ದೋಷಜನ್ಯತ್ವಶಂಕಯಾ ಪ್ರತ್ಯಕ್ಷಸ್ಯ ದುರ್ಬಲತ್ವೇ ಜಾತೇ ಪ್ರಾಮಾಣ್ಯಸಂಶಯಃ ಸ್ಯಾದಿತ್ಯತ ಆಹ – **ದೋಷಶಂಕೇತಿ** ॥ ಏಷು ಜ್ಞಾನೇಷು ದೋಷಶಂಕಾಕೃತಃ ಪ್ರಾಮಾಣ್ಯಸಂಶಯ ಇತಿ ಸಂಬಂಧಃ । ಕುತೋ ನೇತ್ಯತ ಆಹ – **ಸಮೀಪಸ್ಥೇತಿ** ॥ ಹೇತುಗರ್ಭಂ ವಿಶೇಷಣಮ್ । ಯತೋ ಘಟಾದಯಃ ಸಮೀಪಸ್ಥಾಃ ಅತೋಽತಿದೂರತ್ವಾದಿ-ದೋಷಾಭಾವಾತ್ ಸಮೀಪಸ್ಥಘಟಾದ್ಯರ್ಥಜ್ಞಾನೇಷು ದೋಷಶಂಕಾ ಕುತ ಏವ? ನ ಕುತೋಽಪೀತ್ಯರ್ಥಃ ॥ ೩೬೫ ॥

**ವಿವರಣೆ–** ಜ್ಞಾನಗಳಲ್ಲಿ ಸಹಜವಾಗಿ ಪ್ರಾಮಾಣ್ಯಸಂದೇಹ ಬರದಿದ್ದರೂ ಕೆಲವೊಮ್ಮೆ ಆಹಿತಸಂದೇಹವು ಬರಬಹುದು. ಹೇಗೆಂದರೆ ಆ ಜ್ಞಾನವು ದೂರಸ್ಥತ್ವಾದಿ ದೋಷಜನ್ಯವೋ ಏನೋ ಎಂಬ ಸಂದೇಹ ಬರುತ್ತದೆ. ಆದರೆ ಸಮೀಪಸ್ಥವಸ್ತುವಿನ ಜ್ಞಾನದಲ್ಲಿ ಅದಕ್ಕೂ ಅವಕಾಶವಿಲ್ಲ. ಏಕೆಂದರೆ ಅದು ಸಮೀಪಸ್ಥವಾದುದರಿಂದ ದೂರಸ್ಥತ್ವಾದಿದೋಷಸಂದೇಹಕ್ಕೆ ಅವಕಾಶವೇ ಇಲ್ಲ.

**ತತ್ಸನ್ನಿಕೃಷ್ಟದೃಷ್ಟಾರ್ಥಜ್ಞಾನಮಾನತ್ವಸಂಶಯಃ ।**
**ಅಜಾನತಾಂ ಜಾನತಾಂ ವಾ ನಾಸ್ತಿ ಚಕ್ಷುಷ್ಮತಾಂ ಸತಾಮ್ ॥ ೩೬೬ ॥**

**ಅರ್ಥ–** ತತ್ = ಆದ್ದರಿಂದ, ಸನ್ನಿಕೃಷ್ಟದೃಷ್ಟಾರ್ಥಜ್ಞಾನಮಾನತ್ವಸಂಶಯಃ, ಸನ್ನಿಕೃಷ್ಟ = ಸಮೀಪದಲ್ಲಿರುವ, ದೃಷ್ಟಾರ್ಥ = ಇಂದ್ರಿಯಗೋಚರವಾದ ವಸ್ತುವಿನ, ಜ್ಞಾನ = ಜ್ಞಾನದ, ಮಾನತ್ವಸಂಶಯಃ = ಪ್ರಾಮಾಣ್ಯಸಂದೇಹವು, ಚಕ್ಷುಷ್ಮತಾಂ = ಕಣ್ಣಿರುವ, ಅಜಾನತಾಂ = ಅಜ್ಞಾನಿಗಳಾದ ಅಥವಾ, ಜಾನತಾಂ = ಜ್ಞಾನಿಗಳಾದ, ಸತಾಂ = ಸಜ್ಜನರಿಗೆ, ನಾಸ್ತಿ = ಇಲ್ಲ.

**ಅನುವಾದ–** ಆದ್ದರಿಂದ, ಸಮೀಪದಲ್ಲಿರುವ ಇಂದ್ರಿಯಗೋಚರವಾದ ವಸ್ತುವಿನ ಜ್ಞಾನದ ಪ್ರಾಮಾಣ್ಯದ ಬಗ್ಗೆ ಸಂದೇಹವು ಕಣ್ಣಿರುವ, ಅಜ್ಞಾನಿಗಳಾದ ಅಥವಾ ಜ್ಞಾನಿಗಳಾದ ಸಜ್ಜನರಿಗೆ ಇಲ್ಲ.

**ಭಾವವಿಲಾಸಿನೀ–** ಉಕ್ತಮರ್ಥಮುಪಸಂಹರತಿ – **ತದಿತಿ** ॥ ತತ್ತಸ್ಮಾತ್ । ಸನ್ನಿಕೃಷ್ಟಾಶ್ಚ ತೇ ದೃಷ್ಟಾರ್ಥಾಶ್ಚೇತಿ ವಿಗ್ರಹಃ । ಅಜಾನತಾಂ ಅಜ್ಞಾನಿನಾಮ್ । ಜಾನತಾಂ ಜ್ಞಾನಿನಾಮ್ । ಚಕ್ಷುಷ್ಮತಾಮಿತ್ಯನೇನ ಸ್ಯಾತ್ಕಥಂಚಿತ್ಸಂಶಯೋಽಂಧಾನಾಮಿತಿ ಸೂಚಯತಿ । ದೋಷಶಂಕಾ ಹಿ ಪ್ರಾಮಾಣ್ಯಸಂಶಯತದ್ವಿಪರ್ಯಯ- ಲಕ್ಷಣಫಲಬಲಕಲ್ಪ್ಯಾ । ಫಲಂ ಚ ನ ಕೇಷಾಮಪ್ಯಸ್ತೀತಿ ಭಾವಃ ॥ ೩೬೬ ॥

**ವಿವರಣೆ–** ಇದುವರೆಗೆ ಹೇಳಿದ ಪ್ರಾಮಾಣ್ಯಸ್ವತಸ್ತ್ವವಿಚಾರವನ್ನು ಇಲ್ಲಿ ಸಂಗ್ರಹಿಸಿ ಹೇಳಿದ್ದಾರೆ.

ಯಾವುದೇ ದೋಷಗಳೂ ಇಲ್ಲದ ಕಾರಣ ನಮ್ಮ ಸಮೀಪದಲ್ಲೇ ನಾವು ನೋಡುವ ವಸ್ತುಗಳ ಜ್ಞಾನದಲ್ಲಿ, ಇದು ಪ್ರಮಾಣವೋ ಅಲ್ಲವೋ ಎಂಬ ಸಂದೇಹ ಯಾರಿಗೂ ಬರುವುದಿಲ್ಲ. ಆದ್ದರಿಂದ ಅಂತಹ ಜ್ಞಾನಪ್ರಾಮಾಣ್ಯವು ಸಾಕ್ಷಿಯಿಂದ ಗೃಹೀತವಾಗಿದೆ. ಆದ್ದರಿಂದ ಪ್ರಾಮಾಣ್ಯಂ ಸ್ವತಃ.

ಇಂತಹ ಸಂದರ್ಭದಲ್ಲಿ ಸರಿಯಾದ ಜ್ಞಾನಬರಲು ಅಡ್ಡಿಯಾಗುವ ಯಾವುದೇ ದೋಷಗಳು ಕಾಣುವುದಿಲ್ಲ. ಆದರೂ ಏನಾದರೂ ದೋಷವಿರಬಹುದೇನೋ ಎಂಬ ಸಂದೇಹಕ್ಕೂ ಅವಕಾಶವಿಲ್ಲ. ಏಕೆಂದರೆ ಜ್ಞಾನಪ್ರಾಮಾಣ್ಯಸಂದೇಹ ಅಥವಾ ಪ್ರಾಮಾಣ್ಯಭ್ರಮೆ ಬಂದಿದ್ದರೆ ಅಂತಹ ಸಂದೇಹಕ್ಕೆ ಅವಕಾಶವಿರುತ್ತಿತ್ತು. ಆದರೆ ಪ್ರಾಮಾಣ್ಯದ ಸಂದೇಹಾದಿಗಳು ಇಲ್ಲದೆ ಇರುವುದರಿಂದ ದೋಷಸಂದೇಹಕ್ಕೂ ಅವಕಾಶವಿಲ್ಲ.

ಮೇಲಿನ ಸಂದರ್ಭದಲ್ಲಿ ಪ್ರಾಮಾಣ್ಯಸಂದೇಹವಿಲ್ಲ ಎನ್ನುವುದನ್ನು ಮುಂದಿನ ಶ್ಲೋಕದಲ್ಲಿ ಅನುಭವಾರೂಢ ಮಾಡುತ್ತಾರೆ.

**ನಾಯಂ ಘಟ ಇತಿ ಪ್ರೋಕ್ತೇ ಭವತ್ಯೇವೇತಿ ಯತ್ಪುನಃ ।**
**ಭವಂತಿ ಪ್ರತಿವಕ್ತಾರಸ್ತತ್ರ ಕಿಂ ಕಾರಣಂ ವದ ॥ ೩೬೭ ॥**

**ಅರ್ಥ–** ಯತ್ = ಯಾವ ಕಾರಣದಿಂದ, ನಾಯಂ ಘಟಃ = ನೀನು ನೋಡಿರುವ ವಸ್ತುವು ಘಟವಲ್ಲ, ಇತಿ = ಹೀಗೆಂದು, ಪ್ರೋಕ್ತೇ = ಹೇಳಲ್ಪಟ್ಟಾಗ, ಭವತ್ಯೇವ = ಇದು ಘಟವೇ ಆಗಿದೆ. ಇತಿ = ಹೀಗೆಂದು, ಪುನಃ = ಮತ್ತೆ, ಪ್ರತಿವಕ್ತಾರಃ = ಉತ್ತರವನ್ನು ಕೊಡುವವರಾಗಿ, ಭವಂತಿ = ಆಗುತ್ತಾರೆ. ತತ್ರ = ಈ ಬಗ್ಗೆ ಕಿಂ = ಏನು, ಕಾರಣಂ = ಕಾರಣವು? ಎಂದು, ವದ = ಹೇಳು.

**ಅನುವಾದ–** ಘಟವನ್ನು ನೋಡಿದ ವ್ಯಕ್ತಿಯೊಬ್ಬನನ್ನು ಕುರಿತು ಮತ್ತೊಬ್ಬನು 'ನೀನು ನೋಡಿದ್ದು ಘಟವೇ ಅಲ್ಲ' ವೆಂದು ಹೇಳಿದರೆ ಆ ಮೊದಲನೆಯವನು 'ನಾನು ಕಂಡಿದ್ದು ಘಟವೇ ಆಗಿದೆ' ಎಂದು ಉತ್ತರಿಸುತ್ತಾನೆ. ಇದಕ್ಕೇನು ಕಾರಣ ನೀವೇ ಹೇಳಿರಿ.

**ಭಾವವಿಲಾಸಿನೀ–** ಉಕ್ತಂ ಪ್ರಾಮಾಣ್ಯಸಂಶಯಾಭಾವಮನುಭವಾರೂಢಂ ಕರೋತಿ – **ನಾಯಮಿತಿ** ॥ ಅತ್ರಾಯಂ ಘಟ ಇತಿ ಜ್ಞಾನೇ ಜಾತೇ ನಾತ್ರ ಘಟ ಇತಿ ಕೇನಚಿದ್ಧೂರ್ತೇನ ಪ್ರೋಕ್ತೇ ಸತಿ ಅಯಂ ಘಟೋ ಭವತ್ಯೇವೇತಿ ಪುನಃ ಪ್ರತಿವಕ್ತಾರೋ ಭವನ್ತಿ ಲೋಕಾಃ । ತಸ್ಮಾದೇತಾದೃಶಸ್ಥಲೇ ಜ್ಞಾನಪ್ರಾಮಾಣ್ಯಸಂಶಯಃ ಸರ್ವಾನುಭವವಿರುದ್ಧ ಇತಿ ಭಾವಃ । ತತ್ರ ಏವಂ ಪ್ರತಿವಚನೇ ॥ ೩೬೭ ॥

**ವಿವರಣೆ–** ನಾವು ಸಮೀಪದಲ್ಲಿ ಘಟವನ್ನು ನೋಡಿದಾಗ ಮತ್ತೊಬ್ಬರು ಇದು ಘಟವಲ್ಲ ಎಂದು ಹೇಳಿದರೆ ಇದು ಖಂಡಿತವಾಗಿಯೂ ಘಟವೇ ಎಂದು ದೃಢವಾಗಿ ಹೇಳುತ್ತೇವೆ. ಇದಕ್ಕೆ ಏನು ಕಾರಣವೆಂದು ನೀವೇ ಹೇಳಿರಿ. ಇದರಿಂದ ನಮ್ಮ ಜ್ಞಾನವು ಸರಿಯಾಗಿದೆ ಎಂಬ ಖಾತ್ರಿ ನಮಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಅಂತಹ ಸಂದರ್ಭದಲ್ಲಿ ಜ್ಞಾನಪ್ರಾಮಾಣ್ಯವು ತಿಳಿದಿದೆ ಎಂದು ಹೇಳಲೇಬೇಕು.

ಯದ್ಯರ್ಥೇ ತತ್ರ ವಿಶ್ವಾಸಸ್ತರ್ಹಿ ತೇನ ಚ ಸಾಕ್ಷಿಣಾ ।
ಗ್ರಹಣೇ ನತರಾಂ ತಸ್ಯ ವಿಘ್ನೋ ದ್ವೈಮಾತುರೋ ಹ್ಯಸೌ ॥ ೩೬೮ ॥

**ಅರ್ಥ–** ಯದಿ = ಒಂದು ವೇಳೆ, ತತ್ರ = ಸಮೀಪದ ವಸ್ತುವಿನ ಬಗ್ಗೆ, ವಿಶ್ವಾಸಃ = ಇದು ಹೀಗೆಯೇ ಎಂಬ ನಿರ್ಧಾರವು ಇರುವುದಾದರೆ, ತರ್ಹಿ = ಆಗ, ತೇನ = ಆ ವ್ಯವಸಾಯಾತ್ಮಕಜ್ಞಾನದಿಂದ, ಸಾಕ್ಷಿಣಾ ಚ = ಅನುವ್ಯವಸಾಯಾತ್ಮಕ ಸಾಕ್ಷಿಯಿಂದಲೂ, ತಸ್ಯ = ಆ ಘಟತ್ವವತ್ತ್ವರೂಪವಾದ ವಸ್ತುವಿನ, ಗ್ರಹಣೇ = ಜ್ಞಾನವು ಆಗುತ್ತಿರಲು, ತಸ್ಯ= ಎರಡರಿಂದಲೂ, ನಿರ್ಣೀತವಾದ ಆ ಘಟತ್ತ್ವವತ್ತ್ವವೆಂಬ ವಿಷಯದ, ವಿಘ್ನಃ= ಅಭಾವಸಂದೇಹವು, ನತರಾಂ= ಬರುವುದೇ ಇಲ್ಲ, ಹಿ = ಏಕೆಂದರೆ, ಅಸೌ = ಅಂತಹ ಘಟತ್ತ್ವವತ್ತ್ವರೂಪವಾದ ವಿಷಯವು, ದ್ವೈಮಾತುರಃ = ವ್ಯವಸಾಯ ಮತ್ತು ಅನುವ್ಯವಸಾಯಗಳಿಂದ ಮೂಡಿಬಂದಿದೆ. (ಸಾಕ್ಷಾತ್ ವಿಘ್ನನಿವಾರಕಗಣಪತಿಯಂತೆಯೇ ಆಗಿರುತ್ತದೆ.)

**ಅನುವಾದ–** ಒಂದು ವೇಳೆ ಸಮೀಪದ ವಸ್ತುವಿನ ಸ್ವರೂಪದ ಬಗ್ಗೆ ವಿಶ್ವಾಸವಿರುವುದಾದರೆ ಆ ವಸ್ತುವಿನಲ್ಲಿರುವ ಘಟತ್ತ್ವವತ್ತ್ವವೆಂಬ ಧರ್ಮವು ಚಕ್ಷುರಾದಿಜನ್ಯವಾದ ವ್ಯವಸಾಯದಿಂದಲೂ ಸಾಕ್ಷಿರೂಪಾ ಅನುವ್ಯವಸಾಯ-ದಿಂದಲೂ ನಿರ್ಣೀತವಾಗಿರುವುದರಿಂದ ಆ ಧರ್ಮವು ತನಗೆ ಆಶ್ರಯವಾದ

ವಸ್ತುವಿನಲ್ಲಿ ಇದೆಯೋ ಇಲ್ಲವೋ ಎಂಬ ಅಭಾವ ಸಂದೇಹವು ಯಾವ ಕಾರಣಕ್ಕೂ ಬರಲಾರದು. ಏಕೆಂದರೆ ಘಟತ್ತ್ವವತ್ತ್ವವೆಂಬ ಈ ಧರ್ಮಕ್ಕೆ ವ್ಯವಸಾಯ ಅನುವ್ಯವಸಾಯಗಳೆಂಬ ಇಬ್ಬರು ತಾಯಂದಿರಿದ್ದಾರೆ.

**ಭಾವವಿಲಾಸಿನೀ–** ತಸ್ಮಾತ್ತಾದೃಶಸ್ಥಲೇ ಜ್ಞಾನಪ್ರಾಮಾಣ್ಯಸಂಶಯಾಭಾವೋಽವಶ್ಯಂ ವಾಚ್ಯ ಇತ್ಯಾಹ – **ಯದೀತಿ** ॥ ತತ್ರ ತಾದೃಶಸ್ಥಲೇ ಜ್ಞಾತೇಽರ್ಥೇ ಯದಿ ವಿಶ್ವಾಸಃ ಅಯಮೇತಾದೃಶೋ ಭವತ್ಯೇವೇತಿ ವಿಶ್ವಾಸಃ । ಸಂಶಯಾಭಾವಸ್ಯಾಪ್ಯುಪಲಕ್ಷಣಮೇತತ್ । ತರ್ಹಿ ತೇನ ನಿಶ್ಚಯರೂಪೇಣ ಪೂರ್ವವ್ಯವಸಾಯೇನ ನಿರ್ಧಾರಣರೂಪೈತಾದೃಶಜ್ಞಾನಗ್ರಾಹಕಸಾಕ್ಷಿಣಾ ಚ ತಸ್ಯಾರ್ಥಸ್ಯ ಗ್ರಹಣೇ ಉಭಾಭ್ಯಾಮಪಿ ತದರ್ಥಾವಧಾರಣೇ ಕೃತೇ ಸತೀತಿ ಯಾವತ್ । ತಸ್ಯ ತಾಭ್ಯಾಂ ನಿರ್ಣೀತಘಟತ್ವವತ್ತ್ವರೂಪಸ್ಯ ವಿಘ್ನಃ ಅಭಾವಶಂಕಾ ನತರಾಂ ಅತಿಶಯೇನ ನೇತಿ ಸಂಬಂಧಃ । ಸಾಹಿತ್ಯರಸಸಮ್ಪಾದನಾಯ ವಿಘ್ನ ಇತ್ಯುಕ್ತಮ್ । ಕಥಂ ನ ವಿಘ್ನ ಇತ್ಯತಃ ಸಾಹಿತ್ಯಮುದ್ರಯಾ ತಮುಪಪಾದಯತಿ – **ದ್ವೈಮಾತುರ ಇತಿ** ॥ ವ್ಯವಸಾಯಾನುವ್ಯವಸಾಯ-ರೂಪಮಾತೃದ್ವಯೋಪೇತ ಇತ್ಯರ್ಥಃ । ಮಾತೃದ್ವಯಪೋಷಿತತ್ವಾದ್ದ್ವೈಮಾತುರಾಖ್ಯೋ ವಿಘ್ನನಿವಾರಕೋ ವಿನಾಯಕ ಇತಿ ಧ್ವನಿಃ। ಯಥಾ ದ್ವೈಮಾತುರಂ ದೃಷ್ಟ್ವಾ ವಿಘ್ನಃ ಸ್ವಯಮೇವ ಪಲಾಯನಂ ಕರೋತಿ, ಏವಂ ಸಾಧಕದೃಢಪ್ರಮಾಣದ್ವಯಸಾಧಿತಮರ್ಥಸದ್ಭಾವಂ ದೃಷ್ಟ್ವಾ ಶಂಕಾಪಿಶಾಚೀ ದೂರಾಪಾಸ್ತೇತಿ ಭಾವಃ ॥ ೩೬೮ ॥

**ವಿವರಣೆ–** ರಾಜರು ಈ ಘಟತ್ವವತ್ತ್ವರೂಪವಾದ ವಿಷಯವನ್ನು ಗಣಪತಿಗೆ ಹೋಲಿಸಿದ್ದಾರೆ. ಗಣಪತಿಗೆ ಇಬ್ಬರು ತಾಯಿಯರಿರುವಂತೆ ಇದಕ್ಕೂ ಸಹ ವ್ಯವಸಾಯ ಮತ್ತು ಅನುವ್ಯವಸಾಯರೂಪವಾದ ಎರಡು ಜ್ಞಾನಗಳಿವೆ. ಆ ಎರಡು ಜ್ಞಾನಗಳಿಂದ ಇದು ಸಿದ್ಧವಾಗಿದೆ. ಗಣಪತಿಯು ವಿಘ್ನನಿವಾರಕ. ಹಾಗೆ ಈ ಘಟತ್ವವತ್ತ್ವವೂ ಪ್ರಾಮಾಣ್ಯ ಗ್ರಹಣಕ್ಕೆ ಇರಬಹುದಾದ ವಿಘ್ನಗಳನ್ನು ನಿವಾರಿಸಿ ಪ್ರಾಮಾಣ್ಯಗ್ರಹಣಕ್ಕೆ ಅನುಕೂಲ ಮಾಡಿಕೊಡುವುದರಿಂದ ಇದೂ ಗಣಪತಿಯ ಸ್ಥಾನದಲ್ಲಿದೆ ಎಂದು ಅಭಿಪ್ರಾಯ.

ಪ್ರಾಮಾಣ್ಯಂ ಪರತಃ ಎಂದು ಹೇಳಿದಾಗ ಅನವಸ್ಥಾ ದೋಷವನ್ನು ಹೇಳುತ್ತಾರೆ-

**ಕಿಂಚ ವಿತ್ತವ್ಯಯಾಯಾಸಸಾಧ್ಯೇ ಕರ್ಮಣಿ ಕರ್ಮಿಣಾಮ್ ।**
**ಪ್ರಾಮಾಣ್ಯನಿಶ್ಚಯೋಽವಶ್ಯಂ ನಿಶ್ಶಂಕಾಯೈ ಪ್ರವೃತ್ತಯೇ ॥ ೩೬೯ ॥**

**ಅರ್ಥ–** ಕಿಂಚ = ಅಷ್ಟೇ ಅಲ್ಲದೆ, ವಿತ್ತವ್ಯಯಾಯಾಸಸಾಧ್ಯೇ = ಹೆಚ್ಚಿನ ದ್ರವ್ಯವ್ಯಯ ಮತ್ತು ದೇಹಾಯಾಸಗಳಿಂದ ನಡೆಸಲ್ಪಡುವ, ಕರ್ಮಣಿ = ಯಜ್ಞಯಾಗಾದಿಕಾರ್ಯಗಳಲ್ಲಿ, ಕರ್ಮಿಣಾಂ = ಅಂತಹ ಯಜ್ಞಾದಿಗಳನ್ನು ಮಾಡುವವರಿಗೆ, ನಿಃಶಂಕಾಯೈ = ಸಂದೇಹವಿಲ್ಲದ, ಪ್ರವೃತ್ತಯೇ = ಪ್ರವೃತ್ತಿಮಾಡುವುದಕ್ಕಾಗಿ, ಅವಶ್ಯಂ = ಅನಿವಾರ್ಯವಾಗಿ, ಪ್ರಾಮಾಣ್ಯನಿಶ್ಚಯಃ = ಪ್ರಾಮಾಣ್ಯನಿಶ್ಚಯವು, ಆಗಿರಲೇಬೇಕು.

**ಅನುವಾದ–** ಅಷ್ಟೇ ಅಲ್ಲದೇ ಹೆಚ್ಚಿನ ಧನವ್ಯಯ ಮತ್ತು ದೈಹಿಕ ಶ್ರಮಗಳ ಅಗತ್ಯವಿರುವ ಧಾರ್ಮಿಕ, ಧಾರ್ಮಿಕೇತರ ಕಾರ್ಯಗಳಲ್ಲಿ ಸಂಬಂಧಿಸಿದವರು ನಿಃಶಂಕವಾಗಿ ಪ್ರವೃತ್ತಿ ಮಾಡಬೇಕಾದರೆ ಅವರಿಗೆ ಆಯಾ ವಸ್ತುಗಳ ಜ್ಞಾನಗಳ ಬಗ್ಗೆ ಪ್ರಾಮಾಣ್ಯ ನಿಶ್ಚಯವು ಅನಿವಾರ್ಯವಾಗುತ್ತದೆ.

**ಭಾವವಿಲಾಸಿನೀ–** ಪ್ರಾಮಾಣ್ಯಸ್ಯ ಪರತಸ್ತ್ವೇ ಅನವಸ್ಥಾಮಪ್ಯಾಹ – **ಕಿಂಚೇತ್ಯಾದಿನಾ** ॥ ವಿತ್ತವ್ಯಯಾಯಾಸಾಸಾಧ್ಯೇ ಬಹುವಿತ್ತವ್ಯಯಾಯಾಸಸಾಧ್ಯೇ । ವಿತ್ತವ್ಯಯಶ್ಚ ಆಯಾಸಶ್ಚೇತಿ ವಿಗ್ರಹಃ । ಅಲ್ಪಪ್ರಯೋಜನೇ ಕೃಷ್ಯಾದೌ ಸಂದೇಹಾದಪಿ ಪ್ರವೃತ್ತಿದರ್ಶನಾತ್ ತತೋ ವೈಲಕ್ಷಣ್ಯಾಯೈತದ್ವಿಶೇಷಣಮ್ । ಬಹುವಿತ್ತವ್ಯಯಾಯಾಸಾಸಾಧ್ಯೇ ಕರ್ಮಣಿ ಫಲಸನ್ದೇಹಾನ್ನ ಕಸ್ಯಾಪಿ ಪ್ರೇಕ್ಷಾವತಃ ಪ್ರವೃತ್ತಿರಿತಿ ಭಾವಃ । ಕರ್ಮಣಿ ಯಾಗಾದೌ ನಿಶ್ಶಂಕಾಯೈ ಪ್ರವೃತ್ತಯೇಽವಶ್ಯಂ ಪ್ರಾಮಾಣ್ಯನಿಶ್ಚಯಃ ಪುರುಷಪ್ರವರ್ತಕೇ ಜ್ಯೋತಿಷ್ಟೋಮಸ್ಯ ಸ್ವರ್ಗಸಾಧನತ್ವಜ್ಞಾನೇ ಯತ್ಪ್ರಾಮಾಣ್ಯಂ ತನ್ನಿಶ್ಚಯೋ ವಕ್ತವ್ಯಃ ॥ ೩೬೯ ॥

**ವಿವರಣೆ–** ಸಾಮಾನ್ಯಪ್ರಯತ್ನ ಮತ್ತು ಸಾಮಾನ್ಯಖರ್ಚಿನಿಂದಾಗುವ ಕಾರ್ಯಗಳಲ್ಲಿ ಪ್ರಾಮಾಣ್ಯಸಂದೇಹವಿದ್ದರೂ ನಾವು ಪ್ರವೃತ್ತಿಮಾಡುತ್ತೇವೆ. ಆದರೆ ಹೆಚ್ಚಿನ ಶ್ರಮ ಮತ್ತು ಹೆಚ್ಚಿನ ಖರ್ಚಿನಿಂದಾಗುವ ಕೆಲಸಗಳಲ್ಲಿ ನಾವು ತೊಡಗಬೇಕಾದರೆ ಪ್ರಾಮಾಣ್ಯನಿಶ್ಚಯವಾಗಿರಲೇಬೇಕು. ಜ್ಯೋತಿಷ್ಟೋಮಯಾಗಮಾಡಿದರೆ ಸ್ವರ್ಗಸಿಗುತ್ತದೆ ಎಂದು ವೇದವು ಹೇಳಿದರೂ ಅದು ಪ್ರಮಾಣ, ಸುಳ್ಳಲ್ಲ ಎಂದು ನಿರ್ಧಾರವಾದರೆ ಮಾತ್ರ ಆ ಯಾಗವನ್ನು ಮಾಡಲು ಹೊರಡುತ್ತೇವೆ. ಆದ್ದರಿಂದ ಇಂತಹ ಸಂದರ್ಭದಲ್ಲಿ ಪ್ರಾಮಾಣ್ಯನಿಶ್ಚಯ ಅಗತ್ಯವಾಗಿ ಇರಬೇಕು.

ಆಗಲಿ ಅದರಿಂದೇನಾಯಿತು ಎಂಬ ಪ್ರಶ್ನೆಗೆ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

**ಸ ಚೇತ್ಸ್ವತೋ ನ ತರ್ಹಿ ಸ್ಯಾದನವಸ್ಥಾಖ್ಯದೂಷಣಮ್ ॥ ೩೭೦ ॥**

**ಅರ್ಥ–** ಸಃ = ಆ ಪ್ರಾಮಾಣ್ಯನಿಶ್ಚಯವು, ಸ್ವತಃ = ಜ್ಞಾನಗ್ರಾಹಕವಾದ ಸಾಕ್ಷಿಯಿಂದ ನ ಚೇತ್= ಆಗುವುದಿಲ್ಲವೆಂದಾದರೆ, ತರ್ಹಿ = ಆಗ, ಅನವಸ್ಥಾಖ್ಯದೂಷಣಂ = ಅನವಸ್ಥಾ ಎಂಬ ದೋಷವು, ಸ್ಯಾತ್ = ಬಂದೀತು.

**ಅನುವಾದ–** ಆ ಪ್ರಾಮಾಣ್ಯನಿಶ್ಚಯವು ಜ್ಞಾನಗ್ರಾಹಕವಾದ ಸಾಕ್ಷಿಯಿಂದ ಆಗುವುದಿಲ್ಲವೆಂದಾದರೆ, ಆಗ ಅನವಸ್ಥಾ ಎಂಬ ದೋಷವು ಬಂದೀತು.

**ಭಾವವಿಲಾಸಿನೀ–** ಸಃ ಪ್ರಾಮಾಣ್ಯನಿಶ್ಚಯಃ ಸ್ವತಃ ಜ್ಞಾನಗ್ರಾಹಕಾತ್ ಸಾಕ್ಷಿಣ ಏವ ನ ಚೇತ್, ತರ್ಹಿ ಅನವಸ್ಥಾಖ್ಯದೂಷಣಂ ಸ್ಯಾತ್ । ಏತಜ್ಜ್ಞಾನಪ್ರಾಮಾಣ್ಯಂ ಪ್ರಾಮಾಣ್ಯಾನುಮಿತ್ಯಾ

ನಿರ್ಣೇಯಮ್, ತಸ್ಯಾ ಅನುಮಿತೇರಪಿ ಪ್ರಾಮಾಣ್ಯಮನುಮಿತ್ಯಂತರೇಣೇತ್ಯನವಸ್ಥೇತಿ ಭಾವಃ। ಅಸ್ಮಾಕಂ ತ್ವಪೌರುಷೇಯತಯಾ ದೋಷಾಭಾವಸ್ಥಲೀಯತ್ವಾದ್ ಏತಜ್ಜ್ಞಾನಪ್ರಾಮಾಣ್ಯಂ ದೋಷಾಭಾವಸ್ಥಲೀಯಜ್ಞಾನಾಂತರಪ್ರಾಮಾಣ್ಯಂ ಚ ಗೃಹ್ಣನ್ ಸಾಕ್ಷೀ ಚಿದ್ರೂಪತ್ವೇನ ಸ್ವಪ್ರಕಾಶತಯಾ ಸ್ವಾತ್ಮಾನಂ ಸ್ವಪ್ರಾಮಾಣ್ಯಂ ಚ ಸಹೈವ ಗೃಹ್ಣಾತೀತಿ ನಾನವಸ್ಥಿತಿಃ। ಪರಸ್ಯ ತು ಕ್ವಾಪಿ ಜ್ಞಾನೇ ಸ್ವಪ್ರಕಾಶತ್ವಾನಂಗೀಕಾರಾತ್ ಸುಸ್ಥೈವಾನವಸ್ಥಾ ॥ ೩೭೦ ॥

**ವಿವರಣೆ–** ವೇದವಾಕ್ಯದಿಂದ ಉಂಟಾಗುವ ಜ್ಞಾನವನ್ನು ಸಾಕ್ಷಿಯು ಗ್ರಹಿಸುತ್ತದೆ. ಆ ಸಾಕ್ಷಿಯೇ ಜ್ಞಾನದ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಹೀಗೆ ಹೇಳದೆ ಅದರ ಪ್ರಾಮಾಣ್ಯವು ಅನುಮಾನದಿಂದ ತಿಳಿಯುತ್ತದೆ ಎಂದರೆ ಆಗ ಅನವಸ್ಥಾದೋಷ ಬರುತ್ತದೆ. ಏಕೆಂದರೆ, ಆ ಅನುಮಾನದ ಪ್ರಾಮಾಣ್ಯನಿಶ್ಚಯಕ್ಕೆ ಇನ್ನೊಂದು ಪ್ರಮಾಣ. ಅದರ ಪ್ರಾಮಾಣ್ಯನಿರ್ಧಾರಕ್ಕೆ ಮತ್ತೊಂದು, ಹೀಗೆ ಅನವಸ್ಥಾ ದೋಷ. ಸ್ವತಸ್ತ್ವಪಕ್ಷದಲ್ಲಿ ಈ ದೋಷವಿಲ್ಲ. ಏಕೆಂದರೆ ವೇದವು ಅಪೌರುಷೇಯ. ಅದರಿಂದ ಬಂದ ಜ್ಞಾನದಲ್ಲಿ ದೋಷಸಂದೇಹವಿಲ್ಲ. ಆದ್ದರಿಂದ ಸಾಕ್ಷಿಯು ಆ ಜ್ಞಾನದ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಸಾಕ್ಷಿಯು ಸ್ವಪ್ರಕಾಶವಾಗಿದೆ. ಆದ್ದರಿಂದ ತನ್ನನ್ನೂ ತನ್ನ ಪ್ರಾಮಾಣ್ಯವನ್ನೂ ತಾನೇ ಗ್ರಹಿಸುತ್ತದೆ. ಹೀಗಾಗಿ ಅನವಸ್ಥಾ ಇಲ್ಲ.

ಪ್ರವೃತ್ತಿ ಮಾಡಬೇಕಾದರೆ ಅರ್ಥನಿಶ್ಚಯವಿದ್ದರೆ ಸಾಕು. ಪ್ರಾಮಾಣ್ಯ ನಿಶ್ಚಯದ ಅಗತ್ಯವಿಲ್ಲ. ಆದ್ದರಿಂದ ಅನವಸ್ಥಾ ದೋಷಬರುವುದಿಲ್ಲ ಎಂಬ ತಾರ್ಕಿಕರ ಈ ಪ್ರಶ್ನೆಗೆ ಉತ್ತರ ಮುಂದಿನ ಶ್ಲೋಕದಲ್ಲಿದೆ-

**ಯದ್ಯರ್ಥನಿಶ್ಚಯಾದೇವ ಪ್ರವೃತ್ತಿರಿತಿ ಮನ್ಯಸೇ ।**
**ತರ್ಹಿ ಪ್ರಾಮಾಣ್ಯಸಂದೇಹಸ್ಥಲೇಽಪ್ಯರ್ಥಸ್ಯ ನಿಶ್ಚಯಾತ್ ॥ ೩೭೧ ॥**

**ಆವಶ್ಯಕಾತ್ ಪ್ರವೃತ್ತಿಃ ಸ್ಯಾದ್ಯತ್ರ ಪ್ರಾಮಾಣ್ಯಸಂಶಯಃ ।**
**ತತ್ರಾಪ್ಯುಪಾಂತಗಮನೇ ಕಿಂ ನ ಸ್ಯಾದರ್ಥನಿಶ್ಚಯಃ ॥ ೩೭೨ ॥**

**ಅರ್ಥ–** ಯದಿ = ಒಂದು ವೇಳೆ, ಅರ್ಥನಿಶ್ಚಯಾದೇವ = ದೂರದಲ್ಲಿ ನೀರಿದೆ ಎಂಬ ಅರ್ಥನಿಶ್ಚಯದಿಂದಾಗಿಯೇ, ಪ್ರವೃತ್ತಿಃ = ನೀರಡಿಕೆಯಾದವನ ಪ್ರವೃತ್ತಿಯು ಆಗುತ್ತದೆಂದು ಇತಿ = ಹೀಗೆಂದು, ಮನ್ಯಸೇ = ತಿಳಿಯುವಿಯಾದರೆ, ತರ್ಹಿ = ಹಾಗಾದರೆ, ಪ್ರಾಮಾಣ್ಯಸಂದೇಹಸ್ಥಲೇ ಅಪಿ = ಜ್ಞಾನಪ್ರಾಮಾಣ್ಯ ಸಂದೇಹವಿದ್ದಾಗಲೂ, ಆವಶ್ಯಕಾತ್ = ಇರಲೇಬೇಕಾದ, ಅರ್ಥನಿಶ್ಚಯಾತ್ = ಅರ್ಥದ ನಿಶ್ಚಯದಿಂದಾಗಿ, ಪ್ರವೃತ್ತಿಃ ಸ್ಯಾತ್ = ನೀರಿದ್ದೆಡೆ ಪ್ರವೃತ್ತಿ ಮಾಡಬೇಕಾದೀತು. ಏಕೆಂದರೆ, ಯತ್ರ = ಎಲ್ಲಿ ಪ್ರಾಮಾಣ್ಯಸಂಶಯಃ = ಪ್ರಾಮಾಣ್ಯದ ಬಗ್ಗೆ ಸಂದೇಹವಿದೆಯೋ, ತತ್ರಾಪಿ = ಅಲ್ಲೂ, ಉಪಾಂತಗಮನೇ = ಹತ್ತಿರಹೋದಾಗ, ಅರ್ಥನಿಶ್ಚಯಃ = ಅರ್ಥದ ನಿರ್ಧಾರವು, ಕಿಂ ನ ಸ್ಯಾತ್ = ಆಗುವುದಿಲ್ಲವೇನು?

**ಅನುವಾದ–** ಜ್ಞಾನಪ್ರಾಮಾಣ್ಯದ ನಿಶ್ಚಯವಿಲ್ಲದಿದ್ದರೂ ಆ ಜ್ಞಾನದ ವಿಷಯವಾದ ವಸ್ತುವಿನ ನಿಶ್ಚಯವಿರುವುದರಿಂದಲೇ ಆ ವಸ್ತುವನ್ನು ಬಯಸಿದವನು ಅದರೆಡೆಗೆ ಪ್ರವೃತ್ತಿ ಮಾಡುತ್ತಾನೆ ಎಂಬುದು ನಿಮ್ಮ ಅಭಿಪ್ರಾಯವಾದರೆ ಜ್ಞಾನ ಪ್ರಾಮಾಣ್ಯದ ಬಗ್ಗೆ ಸಂದೇಹವಿದ್ದಾಗಲೂ ಆ ಜ್ಞಾನದ ವಿಷಯವಾದ ವಸ್ತುವಿನ ನಿಶ್ಚಯವಿದ್ದೇ ಇರುವುದರಿಂದ ವ್ಯಕ್ತಿಯು ಆ ವಸ್ತುವಿನೆಡೆಗೆ ಪ್ರವೃತ್ತಿ ಮಾಡಬೇಕಾದೀತು. ಏಕೆಂದರೆ ಪ್ರಾಮಾಣ್ಯ ಸಂದೇಹ ಬಂದ ಸ್ಥಳದಲ್ಲಿಯೂ ಆ ವಸ್ತುವನ್ನು ಪರೀಕ್ಷಿಸಲೆಂದು ಅದರ ಸಮೀಪ ಹೋದರೆ ಅದರ ನಿಶ್ಚಯವಾಗಿಯೇ ತೀರುತ್ತದೆ.

**ಭಾವವಿಲಾಸಿನೀ–** ನನು ಕಿಂ ಪ್ರಾಮಾಣ್ಯನಿಶ್ಚಯೇನ ಆವಶ್ಯಕಾರ್ಥನಿಶ್ಚಯಾದೇವ ಪ್ರವೃತ್ತಿಸಂಭವಾದಿತಿ ಕಸ್ಯಚಿಚ್ಛಂಕಾಮನೂದ್ಯ ದೂಷಯತಿ – ಯದೀತಿ ॥ ನನು ಪ್ರಾಮಾಣ್ಯ-ನಿಶ್ಚಯರಹಿತಾರ್ಥನಿಶ್ಚಯೇ ಪ್ರಾಮಾಣ್ಯಸಂಶಯಾಹಿತಾರ್ಥ ಸಂಶಯಸ್ಯಾಪ್ಯವ-ರ್ಜನೀಯತ್ವಾತ್ ಕಥಮರ್ಥನಿಶ್ಚಯಾದೇವ ಪ್ರಾಗುಕ್ತನಿಶ್ಶಂಕಪ್ರವೃತ್ತಿರಿತಿ ಚೇತ್, ಸತ್ಯಮ್ । ದೂಷಣಾಂತರಮಪಿ ವಕ್ತುಂ ಪುನರಾರಂಭ ಇತಿ ದ್ರಷ್ಟವ್ಯಮ್ । ತರ್ಹಿ ಪ್ರಾಮಾಣ್ಯಸಂದೇಹ-ಸ್ಥಲೇಽಪ್ಯಾವಶ್ಯಕಾದರ್ಥನಿಶ್ಚಯಾದೇವ ಪ್ರವೃತ್ತಿಃ ಸ್ಯಾದಿತಿ ಸಂಬಂಧಃ । ಯತ್ರ ಯಸ್ಮಿನ್ ಸ್ಥಲೇ ತತ್ರ ತಸ್ಮಿನ್ ಪ್ರಾಮಾಣ್ಯಸಂದೇಹಸ್ಥಲೇ ಉಪಾಂತಗಮನೇ ಪ್ರಾಮಾಣ್ಯಾನುಮಾಪಕ-ಪ್ರವೃತ್ತಿಸಾಮರ್ಥ್ಯಾಖ್ಯಹೇತುನಿಶ್ಚಯಾರ್ಥಂ ಸಮೀಪಗಮನೇ ಅರ್ಥನಿಶ್ಚಯೋ ನ ಸ್ಯಾತ್ ಕಿಮ್? ಸ್ಯಾದೇವೇತ್ಯರ್ಥಃ ॥ ೩೭೧-೩೭೨ ॥

**ವಿವರಣೆ–** ಪ್ರವೃತ್ತಿಗೆ ಅರ್ಥನಿಶ್ಚಯವು ಕಾರಣ. ಪ್ರಾಮಾಣ್ಯನಿಶ್ಚಯವಲ್ಲ. ಪ್ರಾಮಾಣ್ಯನಿಶ್ಚಯದ ಅಗತ್ಯವೇ ಇಲ್ಲದಿರುವುದರಿಂದ ಪರತಸ್ತ್ವ ಪಕ್ಷದಲ್ಲಿ ಅನವಸ್ಥಾದೋಷವಿಲ್ಲ. ಇದು ತಾರ್ಕಿಕರ ಸಿದ್ಧಾಂತ. ಇದು ಸರಿಯಲ್ಲ. ಜ್ಞಾನದ ಪ್ರಾಮಾಣ್ಯಸಂದೇಹವಿದ್ದಾಗ ಆ ಸಂದೇಹದಿಂದಾಗಿ ಅರ್ಥದ ಸಂದೇಹವೂ ಬರುತ್ತದೆ. ಉದಾಹರಣೆಗೆ ದೂರದಿಂದ ನೀರಿನ ಜ್ಞಾನಬಂದಾಗ ಈ ಜ್ಞಾನವು ಪ್ರಮಾಣವೋ ಅಪ್ರಮಾಣವೋ ಎಂಬ ಸಂದೇಹ ಬಂದರೆ, ನೀರು ಇದೆಯೋ ಇಲ್ಲವೋ ಎನ್ನುವ ಸಂದೇಹವೂ ಬರುತ್ತದೆ. ಇದೇ ಅರ್ಥಸಂದೇಹ. ಈ ಸಂದೇಹ ಪರಿಹಾರವಾಗಬೇಕಾದರೆ ಜ್ಞಾನದಲ್ಲಿ ಪ್ರಾಮಾಣ್ಯ ಸಂದೇಹವೂ ಪರಿಹಾರವಾಗಬೇಕು. ಸಫಲಪ್ರವೃತ್ತಿಜನಕತ್ವಲಿಂಗದಿಂದ ಪ್ರಾಮಾಣ್ಯನಿರ್ಧಾರವಾದಾಗ ಸಂದೇಹವು ಪರಿಹಾರವಾಗುತ್ತದೆ. ಸಫಲಪ್ರವೃತ್ತಿ ಎಂದರೆ ನೀರಿನ ಕಡೆಗೆ ಹೋದಾಗ ನೀರು ದೊರಕುವುದು. ನೀರು ದೊರಕಿದರೆ ಅರ್ಥನಿಶ್ಚಯವಾಯಿತು. ಎಂದು ಅರ್ಥ. ಆಮೇಲೆ ಪ್ರಾಮಾಣ್ಯನಿಶ್ಚಯವಾಗಬೇಕು. ಪ್ರಾಮಾಣ್ಯನಿಶ್ಚಯಕ್ಕಿಂತಲೂ ಮೊದಲೇ ಅರ್ಥನಿಶ್ಚಯವಾಗಿರುವುದರಿಂದ ಪ್ರಾಮಾಣ್ಯಸಂದೇಹವಿದ್ದರೂ ಪ್ರವೃತ್ತಿಯಾಗಲಿ ಎಂಬ ಆಕ್ಷೇಪ ತಾರ್ಕಿಕ ಸಿದ್ಧಾಂತದ ಮೇಲೆ ಬರುತ್ತದೆ.

**ಅತಃ ಪ್ರಾಮಾಣ್ಯನಿರ್ಣೀತ್ಯೈ (ಪ್ರವೃತ್ತೇತ) ಪ್ರವರ್ತೇತ ನ ಕಶ್ಚನ ॥ ೩೭೩ ॥**

**ಅರ್ಥ–** ಅತಃ = ಪ್ರಾಮಾಣ್ಯನಿಶ್ಚಯಕ್ಕಿಂತಲೂ ಮೊದಲು ಅರ್ಥನಿಶ್ಚಯವು ಅಗತ್ಯವಾದುದರಿಂದ, ಕಶ್ಚನ = ಯಾರೂ, ಪ್ರಾಮಾಣ್ಯನಿರ್ಣೀತ್ಯೈ = ಪ್ರಾಮಾಣ್ಯದ ನಿಶ್ಚಯಕ್ಕಾಗಿ, ನ ಪ್ರವರ್ತೇತ = ಪ್ರಯತ್ನಮಾಡಲಿಕ್ಕಿಲ್ಲ.

**ಅನುವಾದ–** ಪ್ರಾಮಾಣ್ಯನಿಶ್ಚಯಕ್ಕಿಂತಲೂ ಮೊದಲು ಅರ್ಥನಿಶ್ಚಯವು ಇದ್ದೇ ಇರುವುದರಿಂದ ಯಾರೂ ಪ್ರಾಮಾಣ್ಯದ ನಿಶ್ಚಯಕ್ಕಾಗಿ ಪ್ರಯತ್ನಮಾಡಲಿಕ್ಕಿಲ್ಲ.

**ಭಾವವಿಲಾಸಿನೀ–** ಅತಃ ಪ್ರವರ್ತಕಾರ್ಥನಿಶ್ಚಯಸ್ಯಾಪಿ ಪ್ರಮಾಣ್ಯಾನುಮಿತೇಃ ಪ್ರಾಗೇವಾವಶ್ಯಕತ್ವಾತ್ ॥ ೩೭೩ ॥

**ವಿವರಣೆ–** ಹಿಂದೆ ಹೇಳಿದಂತೆ ನೀರಿನ ಜ್ಞಾನದಲ್ಲಿ ಪ್ರಾಮಾಣ್ಯಸಂದೇಹ ಇದ್ದಾಗಲೂ ಅರ್ಥನಿಶ್ಚಯ (ನೀರಿದೆ ಎಂಬ ನಿರ್ಧಾರ) ಇದ್ದೇ ತೀರುವುದರಿಂದ ಅರ್ಥನಿಶ್ಚಯವೇ ಪ್ರವೃತ್ತಿಗೆ ಕಾರಣವಾದಲ್ಲಿ ಪ್ರಾಮಾಣ್ಯಸಂದೇಹವನ್ನು ಪರಿಹರಿಸಿಕೊಂಡು ಪ್ರಾಮಾಣ್ಯನಿಶ್ಚಯಮಾಡುವುದಕ್ಕಾಗಿ ಯಾರೂ ಪ್ರಯತ್ನಪಡಲಾರರು. ಆದರೆ, ವಸ್ತುಸ್ಥಿತಿ ಹೀಗಿಲ್ಲ. ಅರ್ಥನಿಶ್ಚಯವಿದ್ದರೂ ಪ್ರಾಮಾಣ್ಯಸಂದೇಹವಿದ್ದರೆ ನಿಃಶಂಕಾಪ್ರವೃತ್ತಿಯಾಗುವುದಿಲ್ಲ. ಆ ಸಂದೇಹಪರಿಹಾರವಾದ ಮೇಲೆಯೇ ಪ್ರವೃತ್ತಿ. ಆದ್ದರಿಂದ ತಾರ್ಕಿಕರ ಸಿದ್ಧಾಂತ ಸರಿಯಲ್ಲ:

ಪ್ರಾಮಾಣ್ಯಸಂದೇಹಕಾಲದಲ್ಲಿ ಅರ್ಥನಿಶ್ಚಯವಿದ್ದರೂ ಅದು ನಿಃಶಂಕಪ್ರವೃತ್ತಿಗೆ ಕಾರಣವಾಗುವುದಿಲ್ಲ. ಏಕೆಂದರೆ ಪ್ರಾಮಾಣ್ಯಸಂದೇಹಪ್ರಯುಕ್ತವಾಗಿ ಅರ್ಥದಲ್ಲಿ ಸಂದೇಹವೇ ಬರುತ್ತದೆ. ಅರ್ಥನಿಶ್ಚಯವಿದ್ದರೂ ಅದು ಫಲಕಾರಿಯಾಗುವುದಿಲ್ಲ. ಹೀಗೆ ತಾರ್ಕಿಕರು ಸಮಾಧಾನ ಕೊಟ್ಟರೆ ಅದಕ್ಕೆ ಉತ್ತರ ಮುಂದಿನ ಶ್ಲೋಕದಲ್ಲಿದೆ-

**ಯದ್ಯರ್ಥನಿಶ್ಚಯಾಶ್ವಾಸಃ ಪ್ರಾಮಾಣ್ಯಸ್ಯ ವಿನಿಶ್ಚಯೇ ।**
**ಅನವಸ್ಥಾ ತರ್ಹಿ ಸುಸ್ಥಾ ನಿಶ್ಶಂಕಾಸು ಪ್ರವೃತ್ತಿಷು ॥ ೩೭೪ ॥**

**ಅರ್ಥ–** ಯದಿ = ಒಂದು ವೇಳೆ, ಪ್ರಾಮಾಣ್ಯಸ್ಯ = ಪ್ರಾಮಾಣ್ಯದ, ವಿನಿಶ್ಚಯೇ (ಸತ್ಯೇವ) = ನಿಶ್ಚಯವಾದರೆ ಮಾತ್ರ, ಅರ್ಥನಿಶ್ಚಯಾಶ್ವಾಸಃ = ಅರ್ಥನಿಶ್ಚಯದ ನಿರ್ಧಾರವು ಆಗುವುದಾದಲ್ಲಿ, ತರ್ಹಿ = ಆಗ, ನಿಃಶಂಕಾಸು = ಸಂದೇಹವಿಲ್ಲದ, ಪ್ರವೃತ್ತಿಷು = ಪ್ರವೃತ್ತಿಗಳಿಗಾಗಿ, ಅನವಸ್ಥಾ = ಅನವಸ್ಥಾ ದೋಷವು, ಸುಸ್ಥಾ = ಇದ್ದೇ ಇರುತ್ತದೆ.

**ಅನುವಾದ–** ಪ್ರವೃತ್ತಿಗಳಿಗಾಗಿ ಆಯಾ ಜ್ಞಾನಗಳ ಪ್ರಾಮಾಣ್ಯ ನಿಶ್ಚಯವು ಬೇಕಾದ್ದರಿಂದ ಅನವಸ್ಥಾ ದೋಷವು, ಇದ್ದೇ ಇರುತ್ತದೆ.

**ಭಾವವಿಲಾಸಿನೀ–** ನನು ಪ್ರಾಮಾಣ್ಯಸಂದೇಹಸ್ಥಲೇ ಜಾತೋಽಪ್ಯರ್ಥನಿಶ್ಚಯಃ ಜ್ಞಾನಪ್ರಾಮಾಣ್ಯಾನುಮಿತೇಃ ಪೂರ್ವಂ ಪ್ರಾಮಾಣ್ಯಸಂಶಯಾಹಿತಾರ್ಥಸಂಶಯಸ್ಯಾಪ್ಯ-

ವತರಣಾದ್ ಅಜಾತಪ್ರಾಯಃ । ಅತಃ ಪ್ರಾಮಾಣ್ಯಾನುಮಿತಿರಪ್ಯಪೇಕ್ಷಿತೇತಿ ಚೇತ್ ತರ್ಹ್ಯಾವಶ್ಯಕಾರ್ಥನಿಶ್ಚಯಾದೇವ ಪ್ರವೃತ್ತಿರಿತಿ ಮತಂ ಗತಮ್ । ಕಿಂತು ನಿಶ್ಚಿತಪ್ರಾಮಾಣ್ಯಮೇವ ಜ್ಞಾನಂ ನಿಶ್ಶಂಕಪ್ರವೃತ್ತಿಜನಕಮಿತಿ ಮನ್ಮತಮೇವ ತ್ವಯಾಽಪ್ಯನುಸೃತಮ್ । ಏವಂಚ ಘಟ್ಟಕುಟೀಪ್ರಭಾತದೃಷ್ಟಾಂತೇನ ಪುನರಸ್ಮದುಕ್ತಾನವಸ್ಥೈವ ಸುಸ್ಥೇತ್ಯಾಹ–ಯದ್ಯರ್ಥನಿಶ್ಚಯಾಶ್ವಾಸ ಇತಿ ॥ ಯದಿ ಪ್ರಾಮಾಣ್ಯನಿಶ್ಚಯೇ ಸತಿ ಪ್ರಾಮಾಣ್ಯನಿಶ್ಚಯೇ ಸತ್ಯೇವೇತ್ಯರ್ಥಃ । ಅರ್ಥನಿಶ್ಚಯಾಶ್ವಾಸಇತಿ ಸಂಬಂಧಃ । ಆಶ್ವಾಸೋ ನಾಮ ಅನೇನ ಗೃಹೀತೋಽರ್ಥಃ ಇತ್ಥಮೇವೇತ್ಯವಧಾರಣಮ್ । ತರ್ಹಿ ಜ್ಞಾನಸ್ಯ ಪ್ರಾಮಾಣ್ಯನಿಶ್ಚಯರೂಪಾಯಾ-ಮನುಮಿತಾವಪ್ಯರ್ಥನಿಶ್ಚಯಾಶ್ವಾಸಃ ತತ್ಪ್ರಾಮಾಣ್ಯ- ವಿನಿಶ್ಚಯರೂಪಾನುಮಿತ್ಯಂತರಾದೇವ । ತತ್ರಾಪಿ ತಥೇತ್ಯನವಸ್ಥಾ ಸ್ಯಾದಿತ್ಯರ್ಥಃ । ತರ್ಹಿ ನಿಶ್ಶಂಕಾಸು ಪ್ರವೃತ್ತಿಷು ನಿಶ್ಶಂಕಪ್ರವೃತ್ತ್ಯರ್ಥಮಿತಿ ಯಾವತ್ । ತತ್ತದರ್ಥನಿಶ್ಚಯಾರ್ಥಂ ತತ್ತಜ್ಜ್ಞಾನಪ್ರಾಮಾಣ್ಯನಿಶ್ಚಯಾನುಸರಣೇಽನವಸ್ಥಾ ಸುಸ್ಥೇತ್ಯರ್ಥಃ ॥ ೩೭೪ ॥

**ವಿವರಣೆ–** ಜ್ಞಾನದಲ್ಲಿ ಪ್ರಾಮಾಣ್ಯಸಂದೇಹವಿದ್ದಾಗ ಅದರಿಂದಾಗಿ ಅರ್ಥದಲ್ಲೂ ಸಂದೇಹ ಬರುವುದಾದಲ್ಲಿ ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯವು ಕಾರಣ ಎಂದು ಒಪ್ಪಿದಂತೆಯೇ ಆಯಿತು. ಪ್ರಾಮಾಣ್ಯನಿಶ್ಚಯದ ಅಗತ್ಯವಿಲ್ಲ ಅರ್ಥನಿಶ್ಚಯವೇ ಸಾಕು ಎನ್ನುವ ಸಿದ್ಧಾಂತವನ್ನು ಬಿಟ್ಟಂತೆಯೇ. ಪ್ರಾಮಾಣ್ಯನಿಶ್ಚಯಕಾರಣವಾದಲ್ಲಿ ಪರತಸ್ತ್ವಸಿದ್ಧಾಂತದಂತೆ ಅನವಸ್ಥಾ ಬಂದೇ ಬರುತ್ತದೆ.

ಶ್ಲೋಕದಲ್ಲಿ ನಿಃಶಂಕಾಸು ಪ್ರವೃತ್ತಿಷು ಎಂದರೆ ನಿಃಶಂಕಪ್ರವೃತ್ತಿಗಾಗಿ ಎಂದರ್ಥ.

2. ತಾರ್ಕಿಕರು, ಪ್ರವೃತ್ತಿಗೆ ಪ್ರಾಮಾಣ್ಯನಿಶ್ಚಯಬೇಕಾಗಿಲ್ಲ, ಅರ್ಥನಿಶ್ಚಯವೇ ಸಾಕು ಎಂದು ಅನವಸ್ಥಾಪರಿಹಾರ ಮಾಡಿದರು. ಆಗ ಶ್ರೀವಾದಿರಾಜರು ಅರ್ಥನಿಶ್ಚಯವಿದ್ದಾಗಲೂ ಪ್ರಾಮಾಣ್ಯಸಂದೇಹವಿದ್ದಾಗ ಪ್ರವೃತ್ತಿ ಆಗಲಿ ಎಂದು ಆಕ್ಷೇಪಿಸಿದರು. ಅದಕ್ಕೆ ತಾರ್ಕಿಕರು ಪ್ರಾಮಾಣ್ಯಸಂದೇಹವಿದ್ದರೆ ಅದರಿಂಗಾಗಿ ಅರ್ಥಸಂದೇಹ ಬರುತ್ತದೆ ಎಂದು ಉತ್ತರ ಕೊಟ್ಟರು. ಇದರಿಂದ ಪರ್ಯಾಯವಾಗಿ ಅರ್ಥನಿಶ್ಚಯವೇ ಪ್ರವೃತ್ತಿಗೆ ಕಾರಣ ಎಂದು ಒಪ್ಪಿದಂತಾಯಿತು. ಇದನ್ನು ಶ್ರೀಸುರೋತ್ತಮತೀರ್ಥರು ಘಟ್ಟಕುಟೀಪ್ರಭಾತಕ್ಕೆ ಹೋಲಿಸಿದ್ದಾರೆ.

ಘಟ್ಟಕುಟೀ ಪ್ರಭಾತನ್ಯಾಯ : ವ್ಯಾಪಾರಸ್ಥನೊಬ್ಬನು ತಾನು ಕೊಡಬೇಕಾದ ಸುಂಕವನ್ನು ತಪ್ಪಿಸಲು ಸುಂಕದ ಕಟ್ಟೆಗೆ ಹೋಗುವ ದಾರಿಯನ್ನು ಬಿಟ್ಟು ರಾತ್ರಿಯೆಲ್ಲ ಪ್ರಯಾಣಿಸಿ ದಾರಿತಪ್ಪಿ ಬೆಳಗಿನ ಹೊತ್ತು ಆ ಸುಂಕದ ಕಟ್ಟೆಯಲ್ಲೇ ಬಂದು ಸಿಲುಕುತ್ತಾನೆ.

**ಕಿಂಚಾರ್ಥನಿಶ್ಚಯವ್ಯಾಪ್ತಃ ಪ್ರಾಮಾಣ್ಯಸ್ಯಾಪಿ ನಿಶ್ಚಯಃ ॥ ೩೭೫ ॥**

**ಅರ್ಥ–** ಕಿಂಚ = ಮಾತ್ರವಲ್ಲದೆ, ಪ್ರಾಮಾಣ್ಯಸ್ಯ = ಪ್ರಾಮಾಣ್ಯದ, ನಿಶ್ಚಯಃ ಅಪಿ = ನಿಶ್ಚಯವೂ ಕೂಡ, ಅರ್ಥನಿಶ್ಚಯವ್ಯಾಪ್ತಃ = ಅರ್ಥನಿಶ್ಚಯದಿಂದ ವ್ಯಾಪ್ತವಾಗಿದೆ.

**ಅನುವಾದ–** ಅದಲ್ಲದೇ ಅರ್ಥನಿಶ್ಚಯವಿದ್ದಲ್ಲೆಲ್ಲ ಪ್ರಾಮಾಣ್ಯನಿಶ್ಚಯವೂ ಇದ್ದೇ ಇರುವುದರಿಂದ ಪ್ರಾಮಾಣ್ಯನಿಶ್ಚಯವು ಅರ್ಥನಿಶ್ಚಯಕ್ಕೆ ವ್ಯಾಪಕವಾಗಿದೆ.

**ಭಾವವಿಲಾಸಿನೀ–** ಅಪಿಚ ಅರ್ಥನಿಶ್ಚಯಸ್ಯೈವ ಪ್ರವರ್ತಕತ್ವಂ ವದನ್ ಪ್ರಷ್ಟವ್ಯಃ ಕಿಂ ಯಾದೃಶತಾದೃಶಾರ್ಥನಿಶ್ಚಯಾದೇವ ನಿಶ್ಶಂಕಪ್ರವೃತ್ತಿರಿತಿ ಬ್ರೂಷೇ, ಉತಾತಿದೂರಸ್ಥತ್ವಾದಿ-ದೋಷಾಭಾವಸ್ಥಲೀಯಾರ್ಥನಿಶ್ಚಯಾದಿತಿ । ತತ್ರ ನಾದ್ಯಃ । ಪೀತಃ ಶಂಕ ಇತಿ ನಿಶ್ಚಯಾತ್ ಪ್ರಾದೇಶಪರಿಮಿತಶ್ಚಂದ್ರ ಇತ್ಯಾದಿನಿಶ್ಚಯಾಚ್ಚ ನಿಶ್ಶಂಕಪ್ರವೃತ್ತ್ಯದರ್ಶನಾತ್ । ದ್ವಿತೀಯಸ್ತು ಪ್ರಾಮಾಣ್ಯನಿಶ್ಚಯಾವಿನಾಭೂತ ಏವೇತಿ ತಸ್ಯ ಪ್ರವರ್ತಕತ್ವೇ ಪ್ರಾಮಾಣ್ಯನಿಶ್ಚಯಸ್ಯೈವ ಪ್ರವರ್ತಕತ್ವಮುಕ್ತಂ ಸ್ಯಾದಿತಿ ಭಾವೇನಾಹ – **ಕಿಂಚೇತಿ** ॥ ಪ್ರಾಮಾಣ್ಯಸ್ಯ ನಿಶ್ಚಯೋಽಪಿ ಅರ್ಥನಿಶ್ಚಯವ್ಯಾಪ್ತ ಇತಿ ಸಂಬಂಧಃ ॥ ೩೭೫ ॥

**ವಿವರಣೆ–** ಯಾವುದೋ ವಿಧವಾದ ಅರ್ಥನಿಶ್ಚಯವು ನಿಃಶಂಕಪ್ರವೃತ್ತಿಗೆ ಕಾರಣವಲ್ಲ. ಪಿತ್ತದೋಷದಿಂದ ಬಿಳಿವಸ್ತು ಹಳದಿಯಾಗಿದೆ ಎಂದು ನಿಶ್ಚಯವಾದಾಗ ನಿಃಶಂಕಪ್ರವೃತ್ತಿಯಾಗುವುದಿಲ್ಲ. ಕಣ್ಣಿಗೆ ಬೆಟ್ಟು ಒತ್ತಿ ಹಿಡಿದಾಗ ಒಂದೇ ವಸ್ತುವು ಎರಡಾಗಿ ಕಂಡಾಗ ಅವೆರಡೂ ಬೇಕೆ ಎಂದು ಯಾರೂ ಬಯಸಿ ಪ್ರವೃತ್ತಿ ಮಾಡುವುದಿಲ್ಲ. ಆದ್ದರಿಂದ ಯಾವುದೇ ದೋಷಗಳಿಲ್ಲದೆ ಹತ್ತಿರದಿಂದ ವಸ್ತುವನ್ನು ಕಂಡು ಅರ್ಥನಿಶ್ಚಯವಾದಾಗಲೇ ನಿಃಶಂಕಪ್ರವೃತ್ತಿಯಾಗುವುದು. ಇಂತಹ ಸಂದರ್ಭದಲ್ಲಿ ಜ್ಞಾನಪ್ರಾಮಾಣ್ಯನಿಶ್ಚಯವೂ ಇದ್ದೇ ಇರುತ್ತದೆ. ಆದ್ದರಿಂದ ತಾರ್ಕಿಕರು ಪ್ರವೃತ್ತಿಗೆ ಕಾರಣವಾಗಿ ಹೇಳುವ ಅರ್ಥನಿಶ್ಚಯವಿದ್ದಾಗಲೆಲ್ಲ ಪ್ರಾಮಾಣ್ಯನಿಶ್ಚಯವೂ ಇರುವುದರಿಂದ ಅದೇ ಪ್ರವೃತ್ತಿಗೆ ಕಾರಣ, ಆದ್ದರಿಂದ ಪ್ರಾಮಾಣ್ಯಂ ಪರತಃ ಎನ್ನುವ ತಾರ್ಕಿಕರಿಗೆ ಅನವಸ್ಥಾ ದೋಷ ಬಂದೇ ಬರುತ್ತದೆ.

ಅರ್ಥನಿಶ್ಚಯವಿದ್ದಾಗ ಪ್ರಾಮಾಣ್ಯನಿಶ್ಚಯ ನಿಯತ ಎನ್ನುವುದನ್ನೇ ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ-

**ಪ್ರಕಾರತ್ವೇ ವಿಶೇಷ್ಯತ್ವೇ ನ ಕದಾಪ್ಯಸ್ತಿ ಸಂಶಯಃ ।**
**ಘಟತ್ವವತ್ತ್ವನಿರ್ಣೀತಿರ್ವಿಶೇಷ್ಯೇ ಯಾಽವಶಿಷ್ಯತೇ ॥ ೩೭೬ ॥**

**ಅರ್ಥ–** ಪ್ರಕಾರತ್ವೇ = ಪ್ರಕಾರದ ಬಗ್ಗೆಯಾಗಲೀ, ವಿಶೇಷತ್ವೇ = ವಿಶೇಷ್ಯದ ಬಗ್ಗೆಯಾಗಲೀ, ಸಂದೇಹಃ = ಸಂಶಯವು, ಕದಾಪಿ = ಎಂದೂ, ನ ಅಸ್ತಿ = ಇರುವುದಿಲ್ಲ. ವಿಶೇಷ್ಯೇ = ವಿಶೇಷ್ಯವಾದ ಮುಂದಿರುವ ವಸ್ತುವಿನಲ್ಲಿ ಘಟತ್ವವತ್ತ್ವನಿರ್ಣೀತಿಃ = ಘಟತ್ವವು ಇದೆ ಎಂಬ ನಿರ್ಣಯವು, ಯಾ = ಯಾವುದಿದೆಯೋ ಅದು ಮಾತ್ರ, ಅವಶಿಷ್ಯತೇ =

ಉಳಿದಿರುತ್ತದೆ. ಏಷಃ ಹಿ = ಇದೇ, ಪ್ರಾಮಾಣ್ಯನಿರ್ಣಯಃ = ಪ್ರಾಮಾಣ್ಯದ ನಿಶ್ಚಯ. ಸ ಏವ = ಅದೇ, ಅರ್ಥನಿರ್ಣಯಃ = ಅರ್ಥನಿಶ್ಚಯರೂಪವಾದುದು.

**ಅನುವಾದ–** ಪ್ರಕಾರದ ಬಗ್ಗೆಯಾಗಲೀ ವಿಶೇಷ್ಯದ ಬಗ್ಗೆಯಾಗಲೀ ಸಂಶಯವು ಎಂದೂ ಇರುವುದಿಲ್ಲ. ವಿಶೇಷ್ಯವಾದ ಮುಂದಿರುವ ವಸ್ತುವಿನಲ್ಲಿ ಘಟತ್ವವು ಇದೆ ಎಂಬ ನಿರ್ಣಯವು ಯಾವುದಿದೆಯೋ ಅದು ಮಾತ್ರ ಉಳಿದಿರುತ್ತದೆ. ಇದೇ, ಪ್ರಾಮಾಣ್ಯದ ನಿಶ್ಚಯ. ಅದೇ ಅರ್ಥನಿಶ್ಚಯರೂಪವಾದುದು.

**ಭಾವವಿಲಾಸಿನೀ–** ಕಥಮಿತ್ಯತಸ್ತದುಪಪಾದಯತಿ – ಪ್ರಕಾರತ್ವ ಇತಿ ॥ ವಿಶೇಷ್ಯೇ ಘಟೇ ಯಾ ಘಟತ್ವವತ್ತ್ವನಿರ್ಣೀತಿಃ ಅವಶಿಷ್ಯತೇ, ಏಷ ಏವ ಪ್ರಾಮಾಣ್ಯನಿರ್ಣಯೋ ಹಿ । ಸ ಏವ ಘಟೇ ಘಟತ್ವವತ್ತ್ವನಿರ್ಣಯ ಏವ । ತಸ್ಮಾದರ್ಥನಿರ್ಣಯಃ ಪ್ರಾಮಾಣ್ಯನಿರ್ಣಯಾವಿನಾಭೂತ ಇತಿ ಭಾವಃ ॥ ೩೭೬ ॥

**ವಿವರಣೆ–** ಅಯಂ ಘಟಃ - ಎಂಬ ಜ್ಞಾನದಲ್ಲಿ ನಮ್ಮ ಮುಂದಿರುವ ವಸ್ತುವಿನಲ್ಲಿ ಘಟತ್ವವು ಕಾಣುತ್ತದೆ. ಆದ್ದರಿಂದ ಘಟತ್ವವು ಪ್ರಕಾರ, ಮುಂದಿರುವ ವಸ್ತುವು ವಿಶೇಷ್ಯ. ಇವೆರಡರ ಬಗ್ಗೆಯೂ ಪ್ರತ್ಯೇಕವಾಗಿ ಸಂದೇಹವೇನಿಲ್ಲ. ಸಂದೇಹವಿರಬಹುದಾದದ್ದು ನಮ್ಮ ಮುಂದಿರುವ ವಸ್ತುವಿನಲ್ಲಿ ಘಟತ್ವ ಧರ್ಮವು ಇದೆಯೋ ಇಲ್ಲವೋ ಎಂದು. ಆವಸ್ತುವಿನಲ್ಲಿ ಘಟತ್ವ ಇದ್ದೇ ಇದೆ ಎಂದು ನಿರ್ಧರಿಸುವುದೇ ಪ್ರಾಮಾಣ್ಯನಿಶ್ಚಯ. ಅರ್ಥನಿಶ್ಚಯವೆಂದರೂ ಇದೆ. ಅಂದ ಮೇಲೆ ಇವೆರಡೂ ಸಮಾನವಾದವುಗಳು. ಹೀಗಿರುವಾಗ ಪ್ರಾಮಾಣ್ಯನಿಶ್ಚಯ ಬೇಡ, ಅರ್ಥನಿಶ್ಚಯ ಸಾಕು ಎನ್ನುವ ವಿವಾದಕ್ಕೆ ಆಸ್ಪದವೇ ಇಲ್ಲ.

**ಪ್ರವೃತ್ತಿಗೆ ಅಪ್ರಾಮಾಣ್ಯಸಂದೇಹವಿಲ್ಲದ ಅರ್ಥನಿಶ್ಚಯವು ಕಾರಣ. ಕೇವಲ ಅರ್ಥನಿಶ್ಚಯವಲ್ಲ, ಇದು ಕೆಲವು ವಾದಿಗಳ ಮತ. ಇದೂ ಸರಿಯಲ್ಲವೆಂದು ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ–**

**ಅತೋ ಗೃಹೀತಪ್ರಾಮಾಣ್ಯಂ ಜ್ಞಾನಮೇವ ಪ್ರವರ್ತಕಮ್ ।**
**ಪ್ರವೃತ್ತೇರರ್ಥನಿರ್ಣೀತಿಜನ್ಯತ್ವೋಕ್ತೌ ಚ ಕಿಂ ನ ತೇ ॥ ೩೭೭ ॥**

**ಅರ್ಥ–** ಅತಃ = ಅರ್ಥನಿಶ್ಚಯವಿದ್ದಾಗ ಪ್ರಾಮಾಣ್ಯನಿಶ್ಚಯ ಇದ್ದೇ ಇರುವ ಕಾರಣದಿಂದಾಗಿ, ಗೃಹೀತಪ್ರಾಮಾಣ್ಯಂ = ನಿಶ್ಚಿತಪ್ರಾಮಾಣ್ಯವುಳ್ಳ, ಜ್ಞಾನಮೇವ = ಜ್ಞಾನವೇ, ಪ್ರವರ್ತಕಂ = ಪ್ರವೃತ್ತಿಗೆ ಕಾರಣವು. ಪ್ರವೃತ್ತೇಃ = ಪ್ರವೃತ್ತಿಗೆ, ಅರ್ಥನಿರ್ಣೀತಿಜನ್ಯತ್ವೋಕ್ತೌ ಚ= ಅರ್ಥನಿಶ್ಚಯಜನ್ಯತ್ವವನ್ನು ಹೇಳಿದಾಗಲೂ, ಗೃಹೀತಪ್ರಾಮಾಣ್ಯಜ್ಞಾನಮೇವ = ನಿಶ್ಚಿತಪ್ರಾಮಾಣ್ಯವುಳ್ಳಜ್ಞಾನವೇ, ಪ್ರವರ್ತಕಂ = ಪ್ರವೃತ್ತಿಗೆ ಕಾರಣವು, ನ ಕಿಂ = ಆಗಲಿಲ್ಲವೇನು?

**ಅನುವಾದ–** ನೀವು ಅರ್ಥನಿಶ್ಚಯದಿಂದಲೇ ವ್ಯಕ್ತಿಯು ಆ ವಸ್ತುವಿನೆಡೆಗೆ ಪ್ರವೃತ್ತಿ ಮಾಡುತ್ತಾನೆಂದು ಹೇಳಿದರೂ ಅಲ್ಲಿಯೂ ಪ್ರಮಾಣವೆಂದು ಖಚಿತವಾದ ವಸ್ತುವಿನ ಜ್ಞಾನವೇ ಪ್ರವೃತ್ತಿಗೆ ಕಾರಣವಾಗಲಿಲ್ಲವೇ?

**ಭಾವವಿಲಾಸಿನೀ–** ಅಪ್ರಾಮಾಣ್ಯಶಂಕಾಶೂನ್ಯಾರ್ಥನಿಶ್ಚಯ ಏವ ಪ್ರವರ್ತಕೋಽಸ್ತು ಕಿಂ ಪ್ರಾಮಾಣ್ಯನಿಶ್ಚಯೇನೇತಿ ಕೇಚಿದ್ ವದಂತಿ । ತದ್ದೃಶ್ಯಮಾನಗೌರವದೋಷದುಷ್ಟಮಪಿ ದೋಷಾಂತರೇಣ ದೂಷಯತಿ – ಅತ ಇತಿ ॥ ಅರ್ಥನಿಶ್ಚಯಸ್ಯ ಪ್ರಾಮಾಣ್ಯನಿಶ್ಚಯವ್ಯಾಪ್ತ-ತ್ವಾದಿತ್ಯರ್ಥಃ । ಅಪ್ರಾಮಾಣ್ಯಶಂಕಾಶೂನ್ಯಂ ಜ್ಞಾನಂ ಪ್ರವರ್ತಕಮಿತಿ ವದತಾಪಿ ಅರ್ಥನಿಶ್ಚಯಃ ಪ್ರವರ್ತಕ ಇತ್ಯವಶ್ಯಂ ವಕ್ತವ್ಯಮ್ । ಜ್ಞಾನಪ್ರವೃತ್ತ್ಯೋಃ ಸಮಾನವಿಷಯಕತ್ವನಿಯಮಾತ್ । ಸ ಚ ಪ್ರಾಮಾಣ್ಯನಿಶ್ಚಯವ್ಯಾಪ್ತ ಇತಿ ನಿಶ್ಚಿತಪ್ರಾಮಾಣ್ಯಮೇವ ಜ್ಞಾನಂ ಪ್ರವರ್ತಕ-ಮಿತ್ಯಂಗೀಕಾರ್ಯಮ್ । ಆವಶ್ಯಕತ್ವಾಲ್ಲಾಘವಾಚ್ಚೇತಿ ಭಾವಃ । ತದೇವ ವಿಶದಯತಿ – ಪ್ರವೃತ್ತೇರಿತಿ ॥ ತೇ ಮತೇ ಪ್ರವೃತ್ತೇಃ ಯಾಗಾದಿಪ್ರವೃತ್ತೇಃ ಅರ್ಥನಿರ್ಣೀತಿಜನ್ಯತ್ವೋಕ್ತೌ ಗೃಹೀತಪ್ರಾಮಾಣ್ಯಂ ಜ್ಞಾನಮೇವ ಪ್ರವರ್ತಕಮಿತಿ ನ ಕಿಂ ಭವತ್ಯೇವೇತಿ ಪೂರ್ವಾವತ್ಯಾ ಯೋಜನಾ ॥ ೩೭೭ ॥

**ವಿವರಣೆ–** ಪ್ರವೃತ್ತಿಗೆ ವಸ್ತುವಿನ ಜ್ಞಾನವು ಇರಬೇಕು, ಆ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಿತವಾಗಬೇಕು. ಆಗ ಅರ್ಥನಿಶ್ಚಯವೂ ಇದ್ದೇ ಇರುತ್ತದೆ. ಅರ್ಥನಿಶ್ಚಯ ಪ್ರವೃತ್ತಿಹೇತು ಎಂದಾಗಲೂ ಪ್ರಮಾಣ್ಯನಿಶ್ಚಯವನ್ನು ಬಿಡಲು ಬರುವುದಿಲ್ಲ, ಹೀಗಿರುವಾಗ ನಿಶ್ಚಿತಪ್ರಾಮಾಣ್ಯವುಳ್ಳ ಅರ್ಥಜ್ಞಾನವು ಪ್ರವೃತ್ತಿಕಾರಣ ಎನ್ನುವುದೇ ಸೂಕ್ತವಾಗುವುದು. ಅಪ್ರಾಮಾಣ್ಯಜ್ಞಾನಾಭಾವವಿಶಿಷ್ಟ ಅರ್ಥನಿಶ್ಚಯವು ಪ್ರವೃತ್ತಿಗೆ ಕಾರಣ ಎನ್ನುವುದಕ್ಕಿಂತ ಇದೇ ಲಘು ಮಾರ್ಗ.

ಮುಂದಿನ ಶ್ಲೋಕದಲ್ಲಿ ಅನವಸ್ಥಾ ದೋಷವನ್ನು ಉಪಸಂಹಾರಮಾಡುತ್ತಾರೆ.

**ತಜ್ಜ್ಞಾನಗ್ರಾಹಕೇಣೈವ ತದ್ಗ್ರಹೇನಾನವಸ್ಥಿತಿಃ ।**
**ಅನ್ಯೇನ ತು ಗ್ರಹೇತ್ಯುಗ್ರಾಂ ಕಸ್ತರೇತ್ತಾಂ ಸುದುಸ್ತರಾಮ್ ॥ ೩೭೮ ॥**

**ಅರ್ಥ–** ತತ್ = ನಿಶ್ಚಿತಪ್ರಾಮಾಣ್ಯಜ್ಞಾನವೇ ಪ್ರವೃತ್ತಿಗೆ ಕಾರಣವಾದುದರಿಂದ, ತದ್ ಜ್ಞಾನಗ್ರಾಹಕೇಣೈವ = ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ, ತದ್ಗ್ರಹೇ = ಪ್ರಾಮಾಣ್ಯವು ಗೃಹೀತವಾದಲ್ಲಿ, ಅನವಸ್ಥಿತಿಃ ನ = ಅನವಸ್ಥಾದೋಷವಿಲ್ಲ, ಅನ್ಯೇನ = ಅನುಮಾನಾ ದಿಗಳಿಂದ, ಗ್ರಹೇ ತು = ಗೃಹೀತವಾದಲ್ಲಿ, ಸುದುಸ್ತರಾಂ = ದಾಟಲು ಅಸಾಧ್ಯವಾದ ಆದ್ದರಿಂದಲೇ, ಅತ್ಯುಗ್ರಾಂ = ಅತ್ಯಂತ ಉಗ್ರವಾದ, ತಾಂ = ಅನವಸ್ಥಾದೋಷವನ್ನು, ಕಃ = ಯಾರು, ತರೇತ್? = ದಾಟಿಯಾನು?

**ಅನುವಾದ–** ಪ್ರಮಾಣವೆಂದು ನಿಶ್ಚಿತವಾದ ವಸ್ತು ಜ್ಞಾನವೇ ಪ್ರವೃತ್ತಿಗೆ ಸಾಕ್ಷಿಯಿಂದಲೇ ಗ್ರಹೀತವಾಗುತ್ತದೆಂದು ಒಪ್ಪಿದರೆ ಮಾತ್ರ ಅನವಸ್ಥಾದೋಷ ಬರುವುದನ್ನು ತಡೆಯಬಹುದು. ಇದನ್ನು ಬಿಟ್ಟು ಆ ಜ್ಞಾನದ ಪ್ರಮಾಣ್ಯವು ಅನುಮಾನ ಮೊದಲಾದ ಬೇರೆಯ ಪ್ರಮಾಣಗಳಿಂದ ಗ್ರಹೀತವಾಗುವುದೆಂದು ಒಪ್ಪಿದರೆ ಅನವಸ್ಥಾ ದೋಷದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಉಕ್ತಾಮನವಸ್ಥಾಮುಪಸಂಹರತಿ–**ತದಿತಿ** ॥ ತನ್ನಿಶ್ಚಿತಪ್ರಾಮಾಣ್ಯಸ್ಯೈವ ಜ್ಞಾನಸ್ಯ ಪ್ರವರ್ತಕತ್ವಾತ್ ತದ್ಗ್ರಹೇ ತಸ್ಯ ಪ್ರಾಮಾಣ್ಯಸ್ಯ ಗ್ರಹೇ ಅನವಸ್ಥಿತಿರ್ನೇತಿ ಸಂಬಂಧಃ । ಅನ್ಯಥಾ ಅನವಸ್ಥಿತಿರಿತಿ ಭಾವಃ । ಅನ್ಯೇನ ಜ್ಞಾನಗ್ರಾಹಕಸಾಕ್ಷ್ಯತಿರಿಕ್ತೇನಾನುಮಾನಾದಿನಾ ಗ್ರಹೇ ಪ್ರಾಮಾಣ್ಯಗ್ರಹೇ ತಾಮನವಸ್ಥಾಮ್ । ಅತ್ಯುಗ್ರತ್ವೇ ಹೇತುಃ – **ಸುದುಸ್ತರಾಮಿತಿ** ॥ ೩೭೮ ॥

**ವಿವರಣೆ–** ಜ್ಞಾನಗ್ರಾಹಕಾತಿರಿಕ್ತವಾದ ಅನುಮಾನಾದಿಪ್ರಮಾಣಗಳಿಂದ ಪ್ರಾಮಾಣ್ಯವು ಗೃಹೀತವಾದರೆ ಹಿಂದೆ ಹೇಳಿದಂತೆ ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ಜ್ಞಾನಗ್ರಾಹಕವಾದ ಸಾಕ್ಷಿಯಿಂದಲೇ ಜ್ಞಾನದ ಪ್ರಾಮಾಣ್ಯವೂ ಗೃಹೀತವಾಗುತ್ತದೆ. ಇದೇ ಪ್ರಾಮಾಣ್ಯಸ್ವತಸ್ತ್ವ.

ಘಟೇ ಘಟತ್ವಸತ್ತ್ವೇ ಹಿ ಘಟಜ್ಞಾನಸ್ಯ ಮಾನತಾ ।
ಪಟಾದೌ ಚ ಪಟತ್ವಾದೇಸ್ಸತ್ತ್ವೇ ತಜ್ಜ್ಞಾನಮಾನತಾ ॥ ೩೭೯ ॥

**ಅರ್ಥ–** ಘಟೇ = ಘಟದಲ್ಲಿ, ಘಟತ್ವಸತ್ತ್ವೇ ಹಿ = ಘಟತ್ವವು ಇದ್ದಲ್ಲಿ, ಘಟಜ್ಞಾನಸ್ಯ = ಅಯಂ ಘಟಃ ಎಂಬ ಜ್ಞಾನಕ್ಕೆ, ಮಾನತಾ = ಪ್ರಾಮಾಣ್ಯವು ಸಿದ್ಧವಾಗುತ್ತದೆ. ಪಟಾದೌ = ಪಟ (ಬಟ್ಟೆ) ಮುಂತಾದ ವಸ್ತುಗಳಲ್ಲಿ, ಪಟತ್ವಾದೇಃ = ಪಟತ್ವಮುಂತಾದ ಧರ್ಮಗಳು, ಸತ್ತ್ವೇ = ಇದ್ದಲ್ಲಿ, ತಜ್ಜ್ಞಾನಮಾನತಾ = ಆ ಜ್ಞಾನಗಳಿಗೆ ಪ್ರಾಮಾಣ್ಯ ಸಿದ್ಧವಾಗುತ್ತದೆ.

**ಅನುವಾದ–** ಘಟದಲ್ಲಿ ಘಟತ್ವವು ಇದ್ದಲ್ಲಿ ಅಯಂ ಘಟಃ ಎಂಬ ಜ್ಞಾನಕ್ಕೆ ಪ್ರಾಮಾಣ್ಯವು ಸಿದ್ಧವಾಗುತ್ತದೆ. ಪಟ (ಬಟ್ಟೆ) ಮುಂತಾದ ವಸ್ತುಗಳಲ್ಲಿ ಪಟತ್ವ ಮುಂತಾದ ಧರ್ಮಗಳು, ಇದ್ದಲ್ಲಿ ಆ ಆ ಜ್ಞಾನಗಳು ಪ್ರಮಾಣಗಳಾಗುತ್ತವೆ.

**ಭಾವವಿಲಾಸಿನೀ–** ನಿರ್ಣೀತಿಕನ್ಯಾ ಧನ್ಯೇತ್ಯೇತದುಪಪಾದಯನ್ ಜ್ಞಾನದ್ವಾರೈವ ಗ್ರಹಣಾತ್ ಕಥಮರ್ಥಸತ್ತಾನಿಶ್ಚಯರೂಪತ್ವಮಿತಿ ಶಂಕಾಂ ಪ್ರತಿಬಂದ್ಯಾ ನಿರಾಕರೋತಿ–**ಘಟ ಇತ್ಯಾದಿನಾ** । ಘಟಜ್ಞಾನಸ್ಯಾಯಂ ಘಟ ಇತಿ ಜ್ಞಾನಸ್ಯ ತದಜ್ಞಾನಮಾನತಾ ಘಟಾದಿಜ್ಞಾನಮಾನತಾ ॥೩೭೯॥

**ವಿವರಣೆ–** ಅಯಂ ಘಟಃ ಎಂಬ ಜ್ಞಾನವು ನಮ್ಮ ಮುಂದಿರುವ ವಸ್ತುವಿನಲ್ಲಿ ಘಟತ್ವ ಧರ್ಮವು ಇದೆ, ಎಂದು ತಿಳಿಸುತ್ತದೆ. ಅದು ಅಲ್ಲಿದ್ದರೆ ಆ ಜ್ಞಾನವು ಪ್ರಮಾಣವಾಗುತ್ತದೆ. ಅದರಂತೆ ಅಯಂ ಪಟಃ ಎಂಬ ಜ್ಞಾನವೂ ಪಟದಲ್ಲಿ ಪಟತ್ವ ಇದೆ ಎನ್ನುತ್ತದೆ ಜ್ಞಾನವು

ತಿಳಿಸಿದ ವಸ್ತುಗಳಲ್ಲಿ ಆಯಾಯ ಧರ್ಮಗಳು ಇದ್ದರೆ ಆ ಜ್ಞಾನಗಳು ಪ್ರಮಾಣಗಳಾಗುತ್ತವೆ.

**ತತ್ತದ್ವತ್ತ್ವಂ ತೇಷು ತೇಷು ವ್ಯವಸಾಯೇಽವಸೀಯತೇ ।**
**ತತೋಽನುವ್ಯವಸಾಯೇಽಪಿ ತದ್ಭಾನಂ ಸ್ಯಾದ್ಧಿ ತದ್ಬಲಾತ್ ॥ ೩೮೦ ॥**

**ಅರ್ಥ–** ತೇಷು ತೇಷು = ಘಟಪಟಾದಿವಸ್ತುಗಳಲ್ಲಿ, ತತ್ತದ್ವತ್ತ್ವಂ = ಘಟತ್ವ ಪಟತ್ವಮುಂತಾದ ಧರ್ಮಗಳ ಇರುವಿಕೆಯು, ವ್ಯವಸಾಯೇ = ಅಯಂ ಘಟಃ ಇತ್ಯಾದಿ ಜ್ಞಾನಗಳಲ್ಲಿ ಅವಸೀಯತೇ = ನಿಶ್ಚಯಿಸಲ್ಪಡುತ್ತದೆ. ತತಃ = ಆದ್ದರಿಂದ, ತದ್ಬಲಾತ್ = ಆ ವ್ಯವಸಾಯದ ಸಾಮರ್ಥ್ಯದಿಂದಾಗಿ, ಅನುವ್ಯವಸಾಯೇ ಅಪಿ = ಅನುವ್ಯವಸಾಯದಲ್ಲೂ ಸಹ, ತದ್ಭಾನಂ = ಘಟಾದಿಗಳಲ್ಲಿ ಘಟತ್ವಾದಿಧರ್ಮಗಳ ತಿಳುವಳಿಕೆಯು, ಸ್ಯಾತ್ ಹಿ = ಆದೀತು ತಾನೇ!

**ಅನುವಾದ–** 'ಇದು ಘಟವಾಗಿದೆ' ಇತ್ಯಾದಿ ವ್ಯವಸಾಯಗಳು ಘಟಘಟಾದಿ ವಸ್ತುಗಳಲ್ಲಿ ಘಟತ್ವ ಪಟತ್ವಾದಿ ಧರ್ಮಗಳ ಅಸ್ತಿತ್ವವನ್ನು ದೃಢಪಡಿಸುತ್ತವೆ. ಆದ್ದರಿಂದ ಆ ವ್ಯವಸಾಯಗಳ ಬೆಂಬಲದಿಂದ ಸಾಕ್ಷಿರೂಪವಾದ ಅನುವ್ಯವಸಾಯವೂ ಘಟಾದಿವಸ್ತುಗಳಲ್ಲಿ ಘಟತ್ವಾದಿ ಧರ್ಮಗಳನ್ನು ಗ್ರಹಿಸುತ್ತದೆ.

**ಭಾವವಿಲಾಸಿನೀ–** ತತ್ತದ್ವತ್ತ್ವಂ ಘಟತ್ವಪಟತ್ವಾದಿಮತ್ತ್ವಮ್ । ತೇಷು ತೇಷು ಘಟಪಟಾದಿ-ವಸ್ತುಷು । ವ್ಯವಸಾಯೇ ಅವಸೀಯತೇ ನಿಶ್ಚೀಯತೇ । ತದ್ಬಲಾದ್ ಉಪನಾಯಕವ್ಯವಸಾಯ-ಬಲಾತ್ । ನಿಶ್ಚಯರೂಪೇಣ ವ್ಯವಸಾಯೇನೋಪನೀತಮ್, ತಥೈವ ಕಥಂ ನು ಸಾಕ್ಷೀ ನ ನಿಶ್ಚಿನುಯಾತ್ । ಚಕ್ಷುಷ್ಮತೋದಿತಮಾರ್ಗೇಣಾನ್ಧೋಽಪಿ ತನ್ನಿಶ್ಚಿತ್ಯ ಗಚ್ಛತಿ । ನಹ್ಯಂಧಾದಪ್ಯಂಧಃ ಸಾಕ್ಷೀ । ಯೇನ ನಿರ್ಣಯೋಪನೀತಮಪಿ ನ ನಿರ್ಣಯೇದಿತಿ ಭಾವಃ ॥ ೩೮೦ ॥

**ವಿವರಣೆ–** ಸಾಕ್ಷಿಯು ನೇರವಾಗಿ ಬಾಹ್ಯವಸ್ತುಗಳನ್ನು ಗ್ರಹಿಸದಿದ್ದರೂ, ವ್ಯವಸಾಯದ ಮೂಲಕ ಅವುಗಳನ್ನು ಗ್ರಹಿಸುತ್ತದೆ. ಕುರುಡನು ತಾನು ಸ್ವತಃ ಯಾವುದನ್ನೂ ನೋಡಲಾರನಾದರೂ ಮತ್ತೊಬ್ಬರು ನೋಡಿ ಹೇಳಿದ್ದನ್ನು ತಿಳಿಯುವಂತೆ ಸಾಕ್ಷಿಯೂ ವ್ಯವಸಾಯ ನೋಡಿದ್ದನ್ನು ದೃಢೀಕರಿಸುತ್ತದೆ. ಹೀಗೆ ಸಾಕ್ಷಿಯೂ ಪ್ರಾಮಾಣ್ಯವನ್ನು ಗ್ರಹಿಸಬಹುದು.

ಇದುವರೆಗೆ ಚರ್ಚೆಯಿಂದ ಸಿದ್ಧವಾದ ಪ್ರಮೇಯವನ್ನು ಹೇಳುತ್ತಾರೆ -

**ಏವಂಚ ಜ್ಞಾನಯಾಥಾರ್ಥ್ಯಂ ಜ್ಞಾನಗ್ರಾಹಕಸಾಕ್ಷಿಣಾ ।**
**ಕಥಂ ನ ಗೃಹ್ಯತೇ ಜ್ಞಾನಂ ಯದಿ ಸ್ಯಾತ್ಸವಿಕಲ್ಪಕಮ್ ॥ ೩೮೧ ॥**

**ಅರ್ಥ—** ಏವಂ ಚ = ಹೀಗೆ, ಜ್ಞಾನಂ = ಜ್ಞಾನವು, ಯದಿ = ಒಂದು ವೇಳೆ, ಸವಿಕಲ್ಪಕಂ ಸ್ಯಾತ್ = ಸವಿಕಲ್ಪಕವಾಗಿದ್ದಲ್ಲಿ, ಜ್ಞಾನಗ್ರಾಹಕಸಾಕ್ಷಿಣಾ = ಜ್ಞಾನವನ್ನು ಗ್ರಹಿಸುವ ಸಾಕ್ಷಿಯಿಂದ, ಜ್ಞಾನಯಾಥಾರ್ಥ್ಯಂ = ಜ್ಞಾನಗತಪ್ರಾಮಾಣ್ಯವೂ, ಕಥಂ = ಹೇಗೆ ತಾನೇ, ನ ಗೃಹ್ಯತೇ? = ಗ್ರಹಿಸಲ್ಪಡುವುದಿಲ್ಲ?

**ಭಾವವಿಲಾಸಿನೀ—** ಅನೇನ ಕಿಂ ಸಿದ್ಧಮಿತ್ಯತಃ ಪ್ರಾಮಾಣ್ಯಸ್ವತಸ್ತ್ವಂ ಸಿದ್ಧಮಿತ್ಯಾಹ— **ಏವಂಚೇತಿ** ॥ ಜ್ಞಾನಂಯಾಥಾರ್ಥ್ಯಂ ಜ್ಞಾನಸ್ಯ ಯಾಥಾರ್ಥ್ಯಂ ಯಥಾವಸ್ಥಿತಾರ್ಥವಿಷಯೀಕಾರಿತ್ವರೂಪಂ ಪ್ರಾಮಾಣ್ಯಮ್ । ನಿಷ್ಪ್ರಕಾರಕನಿರ್ವಿಕಲ್ಪಕಸ್ಯಾನುಪನಾಯಕತ್ವಾತ್ತದ್ವ್ಯವಚ್ಛೇದಾಯೋಕ್ತಂ ಜ್ಞಾನಂ ಯದಿ ಸ್ಯಾತ್ ಸವಿಕಲ್ಪಕಮಿತಿ ॥ ೩೮೧ ॥

**ವಿವರಣೆ—** ತಾರ್ಕಿಕರು ಜ್ಞಾನವು ಸವಿಕಲ್ಪಕ ಮತ್ತು ನಿರ್ವಿಕಲ್ಪಕ ಎಂದು ಎರಡು ವಿಧವಾಗಿದೆ ಎನ್ನುತ್ತಾರೆ. ನಿರ್ವಿಕಲ್ಪಕಜ್ಞಾನದಲ್ಲಿ ಪ್ರಾಮಾಣ್ಯ ಇಲ್ಲ. ಸವಿಕಲ್ಪಕಜ್ಞಾನದಲ್ಲಿ ಮಾತ್ರ ಪ್ರಾಮಾಣ್ಯ ಇದೆ. ಅಂತಹ ಸವಿಕಲ್ಪಕಜ್ಞಾನವನ್ನು ಗ್ರಹಿಸುವ ಸಾಕ್ಷಿಯು ತಾನು ಗ್ರಹಿಸುವ ಜ್ಞಾನದಲ್ಲಿರುವ ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಇದೇ ಪ್ರಾಮಾಣ್ಯದ ಜ್ಞಪ್ತೌ ಸ್ವತಸ್ತ್ವ

**ಯದ್ಯಸ್ಯ ನಿರ್ಣಯೋ ನ ಸ್ಯಾಜ್ಜ್ಞಾನದ್ವಾರೈವ ವೇದನಾತ್ ।**
**ಜ್ಞಾನೋಪನೀತಸೌರಭ್ಯನಿರ್ಣೀತಿಸ್ತರ್ಹಿ ಚಕ್ಷುಷಾ ।**
**ಸುರಭೀದಂ ಚಂದನಂ ಚೇತ್ಯಾಕಾರಾ ಜಾಯತೇ ಕಥಮ್ ॥ ೩೮೨ ॥**

**ಅರ್ಥ—** ಯದಿ = ಒಂದು ವೇಳೆ, ಜ್ಞಾನದ್ವಾರೈವ = ವ್ಯವಸಾಯಾತ್ಮಕ ಜ್ಞಾನದ ಮೂಲಕವೇ, ವೇದನಾತ್ = ತಿಳಿಯುವುದರಿಂದ, ಅಸ್ಯ = ಪ್ರಾಮಾಣ್ಯದ, ನಿರ್ಣಯಃ = ನಿಶ್ಚಯವು, ನ ಸ್ಯಾತ್ = ಆಗವುದಿಲ್ಲವಾದರೆ, ತರ್ಹಿ = ಆಗ, ಚಕ್ಷುಷಾ = ಕಣ್ಣಿನಿಂದ, ಇದಂ = ಈ, ಚಂದನಂ = ಗಂಧವು, ಸುರಭಿ = ಪರಿಮಳಯುಕ್ತವಾಗಿದೆ, ಇತ್ಯಾಕಾರಾ = ಈ ರೀತಿಯ, ಜ್ಞಾನೋಪನೀತಸೌರಭ್ಯನಿರ್ಣೀತಿಃ = ವ್ಯವಸಾಯಾತ್ಮಕ ಜ್ಞಾನಲಕ್ಷಣಾ ಸನ್ನಿಕರ್ಷದಿಂದ ತೋರುವ ಪರಿಮಳದ ನಿರ್ಣಯವು, ಕಥಂ ಜಾಯತೇ = ಹೇಗಾದೀತು?

**ಅನುವಾದ— ಈ ಸಾಕ್ಷಿರೂಪವಾದ ಅನುವ್ಯವಸಾಯವು ವ್ಯವಸಾಯಾತ್ಮಕ ಜ್ಞಾನದ ಸಹಾಯವನ್ನೇ ನೆಚ್ಚಿಕೊಂಡಿರುವುದಾದರೆ ಅದು ವಸ್ತುಗಳ ಗ್ರಹಣ ವಿಷಯದಲ್ಲಿ ಅಸ್ವತಂತ್ರವೆಂದಾಯಿತು. ಹಾಗಾದರೆ ಅದು ಜ್ಞಾನಪ್ರಾಮಾಣ್ಯವನ್ನಾದರೂ ಹೇಗೆ ಗ್ರಹಿಸೀತು ಎಂದು ಶಂಕಿಸುವುದಾದರೆ ಮೂಗಿನಿಂದ ಬಂದ ವ್ಯವಸಾಯಾತ್ಮಕ ಜ್ಞಾನದ ಸಹಾಯದಿಂದ (ಜ್ಞಾನಲಕ್ಷಣಾ ಸಂನಿಕರ್ಷದಿಂದ) ಕಣ್ಣಿನಿಂದ 'ಈ ಗಂಧದ ಕೊರಡು ಸುವಾಸನೆಯಿಂದ ಕೂಡಿದೆ' ಎಂಬ ಜ್ಞಾನವು ಬರುವುದು ಹೇಗೆ ಎಂಬ ಪ್ರತಿಶಂಕೆಯೂ ಬರುತ್ತದೆ.**

**ಭಾವವಿಲಾಸಿನೀ–** ಅಸ್ಯ ಪ್ರಾಮಾಣ್ಯಸ್ಯ ಜ್ಞಾನದ್ವಾರಾ ಜ್ಞಾನೋಪಸರ್ಜನತಯೈವೇತ್ಯನೇನ ಸ್ವಾತನ್ತ್ರ್ಯೇಣಾಭಾನಂ ದ್ಯೋತಯತಿ । ತರ್ಹಿ ಚಕ್ಷುಷಾ ಸುರಭಿ ಚಂದನಂ ಚೇತ್ಯಾಕಾರಾ ಚಂದನಾಂಶಂ ಸೌರಭ್ಯಾಂ ಚ ವಿವಿಚ್ಯ ವಸ್ತುಸತ್ತಯೈವೋಲ್ಲಿಖಂತೀ ಜ್ಞಾನೋಪನೀತ-ಸೌರಭ್ಯನಿರ್ಣೀತಿಃ ಕಥಂ ಜಾಯತ ಇತಿ ಸಂಬಂಧಃ ॥ ೩೮೨ ॥

**ವಿವರಣೆ–** ಗಂಧದ ಕೊರಡನ್ನು ಮೊದಲು ಮೂಸಿ ನೋಡಿ ಮರುದಿನ ದೂರದಲ್ಲೇ ಅದು ಕಣ್ಣಿಗೆ ಬಿದ್ದಾಗ ಈ ಗಂಧದ ಕಟ್ಟಿಗೆ ಪರಿಮಳವಿದೆ ಎನ್ನುವ ಜ್ಞಾನಬರುತ್ತದೆ. ಈ ಜ್ಞಾನದಲ್ಲಿ ಗಂಧದ ಮರವು ಕಣ್ಣಿನೊಂದಿಗೆ ಸಂಪರ್ಕಹೊಂದಿದ್ದರೂ ಪರಿಮಳದೊಂದಿಗೆ ಕಣ್ಣಿನ ಸಂಪರ್ಕವಿಲ್ಲ. ಅದು ಮೂಗಿನಿಂದಲೇ ತಿಳಿಯಬೇಕು. ನಿನ್ನೆ ಮೂಗಿನಿಂದ ತಿಳಿದ ಪರಿಮಳದ ಸಂಸ್ಕಾರ ಮನಸ್ಸಿನಲ್ಲಿರುವುದರಿಂದ ನೋಡಿದ ಕೂಡಲೇ ಇದರಲ್ಲಿ ಪರಿಮಳವಿದೆ ಎಂಬ ಜ್ಞಾನಬರುತ್ತದೆ, ಅದರಂತೆ ಘಟತ್ವ -ಘಟಗಳು ಬಾಹ್ಯವಾದುದರಿಂದ ಸಾಕ್ಷಿಯು ನೇರವಾಗಿ ತಾನೇ ಅವುಗಳನ್ನು ಗ್ರಹಿಸಲಾರದು. ಆದರೂ ಕಣ್ಣಿನಿಂದ ಅವೆರಡರ ಜ್ಞಾನಬಂದಿರುವ ಕಾರಣ ಆ ಜ್ಞಾನದ ಮೂಲಕ ಸಾಕ್ಷಿಯೂ ಅವುಗಳನ್ನು ನಿರ್ಧರಿಸುತ್ತದೆ. ಈ ಜ್ಞಾನವು ಗ್ರಹಿಸಿದ ಘಟತ್ವಧರ್ಮವು ಘಟದಲ್ಲಿ ಇದೆ ಎನ್ನುತ್ತದೆ. ಆದ್ದರಿಂದ ಈ ಜ್ಞಾನವು ಘಟತ್ವವತಿ ಘಟತ್ವಪ್ರಕಾರಕವಾಗಿದೆ ಎಂದು ಪ್ರಾಮಾಣ್ಯವನ್ನು ಸಾಕ್ಷಿಯು ಗ್ರಹಿಸಬಹುದು.

**ಘಟೋಽಯಮಿತಿ ಧೀರ್ದೇಶಕಾಲಯೋರುಪನೀತಯೋಃ ।**
**ನಿರ್ಣಯಾಯ ಕಥಂ ಶಕ್ತಾ ನಹಿ ತತ್ರಾಪ್ಯನಿಶ್ಚಯಃ ॥ ೩೮೩ ॥**

**ಅರ್ಥ–** ಅಯಂ = ಇದು, ಘಟಃ = ಮಡಿಕೆಯು, ಇತಿ ಧೀಃ = ಈ ಜ್ಞಾನವು, ಉಪನೀತಯೋಃ = ಜ್ಞಾನಲಕ್ಷಣಾಸನ್ನಿಕರ್ಷದಿಂದ ಸಿದ್ಧವಾದ, ದೇಶಕಾಲಯೋಃ = ದೇಶ ಮತ್ತು ಕಾಲಗಳ, ನಿರ್ಣಯಾಯ = ನಿರ್ಧಾರಕ್ಕೆ, ಕಥಂ = ಹೇಗೆ ತಾನೇ, ಶಕ್ತಾ = ಸಮರ್ಥವಾದೀತು? ತತ್ರಾಪಿ = ಅಯಂಘಟಃ ಎಂಬ ಚಾಕ್ಷುಷ ಜ್ಞಾನದಲ್ಲಿಯೂ, ಅನಿಶ್ಚಯಃ = ಉಪನೀತ ದೇಶಕಾಲಗಳ ಅನಿರ್ಧಾರವು, ನ ಹಿ = ಇಲ್ಲವಷ್ಟೇ!

**ಅನುವಾದ–** 'ಇದು ಗಡಿಗೆ' ಎಂಬ ಚಾಕ್ಷುಷ ಜ್ಞಾನವು ಸಾಕ್ಷಿರೂಪ ಜ್ಞಾನ ಲಕ್ಷಣಾಸಂನಿಕರ್ಷದಿಂದ ಸಿದ್ಧವಾದ ದೇಶ ಮತ್ತು ಕಾಲಗಳನ್ನು ನಿರ್ಧರಿಸಲು ಹೇಗೆ ಸಮರ್ಥವಾದೀತು? ಆ ಜ್ಞಾನವೂ ಉಪನೀತಗಳಾದ ದೇಶಕಾಲಗಳನ್ನು ನಿರ್ಧರಿಸುವುದೇ ಇಲ್ಲವೆಂಬ ವಾದವೂ ಸೂಕ್ತವಲ್ಲ. ಹಾಗಾದರೆ ಘಟಾದಿ ವಸ್ತುಗಳಿಗೆ ದೇಶಕಾಲಗಳ ಸಂಬಂಧದ ವ್ಯವಸ್ಥೆಯೇ ಆಗದಿರಬೇಕಾದೀತು.

**ಭಾವವಿಲಾಸಿನೀ–** ಜ್ಞಾನದ್ವಾರಾ ಗ್ರಾಹಕಸ್ಯಾಪಿ ತತ್ತತ್ಸ್ವಾನಿರ್ಣಯರೂಪತ್ವಂ ಚ ಸ್ಥಲಾಂತರೇಽಪಿ ದರ್ಶಯತಿ – **ಘಟೋಽಯಮಿತಿ** ॥ ಘಟೋಽಯಮಿತಿ ಧೀಃ ಚಾಕ್ಷುಷಧೀಃ

ಉಪನೀತಯೋರ್ದೇಶಕಾಲಗ್ರಾಹಕ- ಜ್ಞಾನಾಂತರೋಪನೀತಯೋಃ ಸ್ವಾತನ್ತ್ರ್ಯೇಣ ಚಕ್ಷುರಯೋಗ್ಯಯೋರ್ನಿರ್ಣಯಾಯಾರ್ಥಸತ್ತಾನಿರ್ಣಯಾಯ ಕಥಂ ಶಕ್ತಾ? ತತ್ರಾಪಿ ನ ಶಕ್ತೇತ್ಯತ ಆಹ – **ನಹೀತಿ** ॥ ತತ್ರಾಪಿ ಘಟೋಽಯಮಿತಿ ಚಾಕ್ಷುಷಜ್ಞಾನೇಽಪಿ ಅನಿಶ್ಚಯಃ ಉಪನೀತದೇಶಕಾಲಯೋರನ್ನಿರ್ಣಯೋ ನಹೀತಿ ಸಂಬಂಧಃ । ಅತ್ರಾಪ್ಯನಿರ್ಣಯೇ ದೇಶಕಾಲವ್ಯವಸ್ಥೈವ ಘಟಾದೇರ್ನ ಸಿದ್ಧ್ಯೇದಿತಿ ಭಾವಃ ॥ ೩೮೩ ॥

**ವಿವರಣೆ–** ಜ್ಞಾನಲಕ್ಷಣಾಸನ್ನಿಕರ್ಷದಿಂದ ನಿರ್ಧಾರವಾಗುವ ಇನ್ನೊಂದು ಉದಾಹರಣೆಯನ್ನು ಇಲ್ಲಿ ಕೊಡಲಾಗಿದೆ. ಅಯಂ ಘಟಃ ಎಂಬ ಜ್ಞಾನವು ಈ ಆಕಾಶಪ್ರದೇಶದಲ್ಲಿ, ಈ ಕಾಲದಲ್ಲಿ ಘಟ ಇದೆ ಎನ್ನುತ್ತದೆ. ಆದರೆ ಆಕಾಶವಾಗಲೀ, ಕಾಲವಾಗಲೀ ಕಣ್ಣಿಗೆ ಕಾಣುವುದಿಲ್ಲ. ಅವೆರಡೂ ಸಾಕ್ಷಿಯಿಂದ ತಿಳಿಯಲ್ಪಡುವ ವಸ್ತುಗಳು. ಆದರೂ ಅವು ಸಾಕ್ಷಿಯಿಂದ ಉಪನೀತವಾಗಿ ಚಕ್ಷುರಿಂದ್ರಿಯಕ್ಕೆ ವಿಷಯವಾಗುವಂತೆ ಬಾಹ್ಯವಾದ ಘಟಾದಿಗಳೂ ಸಾಕ್ಷಿಯಿಂದ ನಿರ್ಣಯಿಸಲ್ಪಡಬಹುದು.

ಉಪನಾಯಕತಜ್ಜ್ಞಾನದಾರ್ಢ್ಯಾತ್ತತ್ಸಂಶಯೋ ನ ಚೇತ್ ।
ದೃಢಜ್ಞಾನೋಪನೀತೇಽರ್ಥೇ ಕಥಮತ್ರಾಪ್ಯನಿರ್ಣಯಃ ॥ ೩೮೪ ॥

**ಅರ್ಥ–** ಉಪನಾಯಕಜ್ಞಾನದಾರ್ಢ್ಯಾತ್ = ದೇಶಕಾಲಗಳನ್ನು ಉಪನಯ–ಮರ್ಯಾದಯಾ ತಿಳಿಸುವ ಸಾಕ್ಷಿಜ್ಞಾನದಲ್ಲಿ, ದಾರ್ಢ್ಯಾತ್ = ದೃಢತೆ ಇರುವುದರಿಂದಾಗಿ, ತತ್ಸಂಶಯಃ = ದೇಶಕಾಲಗಳ ಬಗ್ಗೆ ಸಂದೇಹ ಇಲ್ಲವೆನ್ನುವುದಾದಲ್ಲಿ, ದೃಢಜ್ಞಾನೋಪನೀತೇ = ದೃಢವಾದ ವ್ಯವಸಾಯದಿಂದ ಉಪನಯಮರ್ಯಾದಯಾ ತಿಳಿಸಲ್ಪಟ್ಟ, ಅತ್ರಾಪಿ = ಪ್ರಾಮಾಣ್ಯದ ಬಗ್ಗೆಯೂ, ಅನಿರ್ಣಯಃ = ಅನಿಶ್ಚಯವು, ಕಥಂ = ಹೇಗೆ?

**ಭಾವವಿಲಾಸಿನೀ–** ಉಪನಾಯಕಜ್ಞಾನದಾರ್ಢ್ಯಾತ್ ಸೌರಭಕಾಲಾದಾವರ್ಥಸತ್ತಾನಿಶ್ಚಯ ಇತಿ ಚೇತ್ತರ್ಹಿಸಮಂಮಮಾಪೀತ್ಯಾಹ ॥ **ಉಪನಾಯಕೇತಿ** ॥ ತಜ್ಜ್ಞಾನಂ ತಸ್ಯಸೌರಭಾದೇರ್ಜ್ಞಾನಂ ಉಪನಾಯಕಂ ಚ ತತ್‌ತಜ್ಜ್ಞಾನಂಚೇತಿವಿಗ್ರಹಃ । ತತ್ಸಂಶಯಃ ಸೌರಭ್ಯಾದಿಸಂಶಯಃ । ದೃಢಜ್ಞಾನಂ ನಿಶ್ಚಯರೂಪ ವ್ಯವಸಾಯಃ । ತೇನೋಪನೀತೇಽರ್ಥೇ ಘಟತ್ವವತ್ತ್ವಾದೌ ಅತ್ರ ಸಾಕ್ಷಿಣಿ ಅನಿರ್ಣಯಸ್ತತ್ಸತ್ತಾನಿರ್ಣಯರೂಪತ್ವಾಭಾವಃ ಕಥಮ್? ಇತಿ ಸಂಬಂಧಃ ॥ ೩೮೪ ॥

**ವಿವರಣೆ–** ದೇಶಕಾಲಗಳನ್ನು ಕಣ್ಣು ಗ್ರಹಿಸಲಾರದು. ಆದರೂ ಸಾಕ್ಷಿಯು ಅವೆರಡನ್ನೂ ನಿರ್ಣಯಿಸಿರುವುದರಿಂದ ಘಟವು ಈ ದೇಶಕಾಲಗಳಲ್ಲಿ ಇದೆ ಎಂದು ಕಣ್ಣಿನಿಂದ ಬರುವ ಜ್ಞಾನದಿಂದಲೇ ನಿರ್ಧಾರವಾಗುತ್ತದೆ. ಅದರಂತೆ, ದೃಢವಾದ ವ್ಯವಸಾಯದಿಂದ ಉಪನೀತವಾದ ಘಟದಲ್ಲಿ ಘಟತ್ವದ ನಿರ್ಣಯವೂ ಸಾಕ್ಷಿಯಿಂದಲೇ ಆಗುತ್ತದೆ.

ಜ್ಞಾತೋ ಮಯಾ ಗುರೂಕ್ತಾರ್ಥ ಇತಿ ಯೋ ವೇತ್ತಿ ಸಾಕ್ಷಿಣಾ ।
ಯಥಾ ತಸ್ಯಾಸ್ತಿ ವಿಶ್ವಾಸಸ್ತಸ್ಮಿನ್ನರ್ಥೇ ತಥೈವ ಹಿ ॥ ೩೮೫ ॥

ಜ್ಞಾತೋ ಘಟಃ ಪಟೋ ಜ್ಞಾತ ಇತ್ಯಾದಾವಪಿ ಸಾಕ್ಷಿಣಾ ।
ಜ್ಞಾನಸ್ಯೂತತಯಾ ಭಾತೋಽಪ್ಯರ್ಥಃ ಕಿಂ ನಾವಸೀಯತೇ ॥ ೩೮೬ ॥

**ಅರ್ಥ–** ಯಃ = ಯಾರು, ಗುರೂಕ್ತಾರ್ಥಃ = ಗುರುಗಳಿಂದ ಹೇಳಲ್ಪಟ್ಟ ವಿಷಯವು, ಮಯಾ = ನನ್ನಿಂದ, ಜ್ಞಾತಃ = ತಿಳಿಯಲ್ಪಟ್ಟಿದೆ, ಇತಿ = ಹೀಗೆಂದು, ಸಾಕ್ಷಿಣಾ = ಸಾಕ್ಷಿಯಿಂದ, ವೇತ್ತಿ = ತಿಳಿಯುತ್ತಾನೆಯೋ, ಕಸ್ಯ = ಅವನಿಗೆ, ಯಥಾ = ಹೇಗೆ, ತಸ್ಮಿನ್ನರ್ಥೇ = ಗುರುಗಳು ಹೇಳಿದ ವಿಷಯದಲ್ಲಿ ವಿಶ್ವಾಸಃ = ನಂಬಿಕೆಯು, ಅಸ್ತಿ = ಇದೆಯೋ, ತಥೈವ = ಹಾಗೆಯೇ, ಘಟಃ = ಘಟವು, ಜ್ಞಾತಃ = ತಿಳಿಯಲ್ಪಟ್ಟಿದೆ, ಪಟಃ = ಬಟ್ಟೆಯು, ಜ್ಞಾತಃ = ತಿಳಿಯಲ್ಪಟ್ಟಿದೆ. ಇತ್ಯಾದೌ ಅಪಿ = ಈ ಮೊದಲಾದ ಸಾಕ್ಷಿಜ್ಞಾನದಲ್ಲೂ, ಸಾಕ್ಷಿಣಾ = ಸಾಕ್ಷಿಯಿಂದ, ಜ್ಞಾನಸ್ಯೂತತಯಾ = ಜ್ಞಾನಗರ್ಭಿತವಾಗಿ, ಭಾತಃ = ತಿಳಿಯಲ್ಪಟ್ಟ ಅರ್ಥಃ = ಘಟಾದಿವಸ್ತುಗಳು, ಕಿಂ = ಏತಕ್ಕಾಗಿ, ನಾವಸೀಯತೇ = ನಿರ್ಧರಿಸಲ್ಪಡುವುದಿಲ್ಲ?

**ಭಾವವಿಲಾಸಿನೀ–** ಕಿಂಚ ಯೋ ಗುರುಮುಖಾತ್ ಕಮಪಿ ಗ್ರಂಥಂ ಶ್ರುತವಾನ್, ಸ ನೈವಂ ವಕ್ತುಮರ್ಹತೀತ್ಯಾಶಯೇನ ಜ್ಞಾನೋಪಸರ್ಜನತಯಾ ಪ್ರತೀತೇಽಪ್ಯರ್ಥೇ ವಿಶ್ವಾಸೋ ಭವತೀತ್ಯತ್ರ ದೃಷ್ಟಾನ್ತಾಂತರಮಾಹ – **ಜ್ಞಾತೋ ಮಯೇತಿ** ॥ ಮಯಾ ಗುರೂಕ್ತಾರ್ಥೋ ಜ್ಞಾತ ಏವೇತಿ ಸಾಕ್ಷಿಣಾ ಯಃ ಪುರುಷೋ ವೇತ್ತಿ ತಸ್ಯ ಪುರುಷಸ್ಯ ತಸ್ಮಿನ್ನರ್ಥೇ ಗುರೂಕ್ತೇರ್ಜ್ಞಾನಸ್ಯ ಚೋಪಸರ್ಜನತಯಾ ಸಾಕ್ಷಿಣಾ ಭಾತೇಽರ್ಥೇ ಯಥಾ ವಿಶ್ವಾಸೋಽಸ್ತಿ, ತಥೈವ ಮಯಾ ಜ್ಞಾತೋ ಘಟಃ ಜ್ಞಾತಃ ಪಟ ಇತ್ಯಾದಾವನುವ್ಯವಸಾಯರೂಪೇ ಜ್ಞಾನೇ ಜ್ಞಾನಸ್ಯೂತತಯಾ ಪೂರ್ವಜ್ಞಾನಗರ್ಭೀಕೃತತಯಾ ಭಾತಃ ವಿಷಯೀಕೃತಃ ಅರ್ಥಸ್ತದ್ವತ್ತ್ವಾದಿಃ ಸಾಕ್ಷಿಣಾ ಕಿಂ ನಾವಸೀಯತ ಇತಿ ಸಂಬಂಧಃ । ಗುರೂಕ್ತೋಽರ್ಥೋ ಮಮ ಸಾಕ್ಷಿಣೇ ಸಮ್ಯಙ್ ನಿಶ್ಚಿತೋಽಭೂದಿತಿ ಗುರುಪ್ರೀತ್ಯೈ ಸ್ವಮನೋನಿಶ್ಚಯಂ ದರ್ಶಯಿತುಂ ಹೀದಂ ವಚನಮ್ । ಏವಂ ವದತೋಽಪಿ ಮನಸಿ ತತ್ತ್ವಸಂದೇಹೇ ಗುರುಮುಖಾಚ್ಛ್ರವಣಾರ್ಥಂ ಕೋಽಪಿ ನ ಯತೇತೇತಿ ಭಾವಃ ॥ ೩೮೫-೩೮೬ ॥

**ವಿವರಣೆ–** ಗುರುಗಳಿಂದ ಪಾಠಕೇಳಿದ ಶಿಷ್ಯನು ಗುರುಗಳು ಹೇಳಿದ ವಿಷಯ ನನಗೆ ಖಾತ್ರಿಯಾಯಿತು ಎನ್ನುತ್ತಾನೆ. ಇಲ್ಲಿ ವಸ್ತುವನ್ನು ನೋಡಿ ತಿಳಿದವರು ಗುರುಗಳು. ಅವರ ಮಾತಿನ ಮೂಲಕ ಆ ವಸ್ತುವಿನ ಜ್ಞಾನ ಶಿಷ್ಯನಿಗೆ ಬರುತ್ತದೆ. ಆದರೂ ಅದು ನಿರ್ಧಾರಾತ್ಮಕವಾಗಿರುತ್ತದೆ. ಅದರಂತೆ, ಬಾಹ್ಯವಸ್ತುಗಳ ಜ್ಞಾನಬಂದಿರುವುದು ಬಾಹ್ಯೇಂದ್ರಿಯಗಳಿಂದ. ಅವುಗಳನ್ನು ಜ್ಞಾನದೊಂದಿಗೆ ಸಾಕ್ಷಿಯು ಗ್ರಹಿಸುತ್ತದೆ. ಆದರೂ ಸಾಕ್ಷಿ ಅದನ್ನು ನಿರ್ಧಾರಾತ್ಮಕವಾಗಿಯೇ ಗ್ರಹಿಸುತ್ತದೆ.

**ಇತಿ ಶುಶ್ರುಮ ಧೀರಾಣಾಂ ತದುಕ್ತಮೃಷಿಣೇತಿ ಚ ।**
**ಶ್ರುತ್ಯಾ ಸ್ವೋಕ್ತಾರ್ಥದಾರ್ಢ್ಯಾರ್ಥಂ ಪೂರ್ವೈರಪ್ಯುಕ್ತತೋಚ್ಯತೇ ॥ ೩೮೭ ॥**

**ಅರ್ಥ–** ಇತಿ = ಹೀಗೆ, ಧೀರಾಣಾಂ = ಜ್ಞಾನಿಗಳ (ಮಾತನ್ನು) ಶುಶ್ರುಮ = ಕೇಳುತ್ತೇವೆ. ಋಷಿಣಾ = ಋಷಿಯಿಂದ, ತದುಕ್ತಂ = ಅದು ಹೇಳಲ್ಪಟ್ಟಿದೆ, ಇತಿ = ಹೀಗೆ, ಶ್ರುತ್ಯಾ = ವೇದದಿಂದ, ಸ್ವೋಕ್ತಾರ್ಥದಾರ್ಢ್ಯಾರ್ಥಂ = ತಾನು ಹೇಳಿರುವ ವಿಷಯದ ನಿರ್ಧಾರಕ್ಕಾಗಿ, ಪೂರ್ವೈಃ = ಪ್ರಾಚೀನರಿಂದ, ಉಕ್ತತಾ ಅಪಿ = ತಾನು ಹೇಳಿದ ವಿಷಯಗಳು ಹೇಳಲ್ಪಟ್ಟಿದ್ದಾಗಿಯೂ, ಉಚ್ಯತೇ = ಹೇಳಲ್ಪಡುತ್ತದೆ.

**ಅನುವಾದ–** ವೇದವೂ ಕೂಡ ತಾನು ವರ್ಣಿಸುವ ವಿಷಯಗಳ ದೃಢತೆಗಾಗಿ 'ಜ್ಞಾನಿಗಳು ಹೀಗೆ ಹೇಳಿದ್ದನ್ನು ನಾವು ಕೇಳುತ್ತೇವೆ' 'ಋಷಿಗಳು ಹೀಗೆ ಹೇಳುತ್ತಾರೆ' ಎಂಬುದಾಗಿ ತಾನು ಹೇಳುವ ವಿಷಯಗಳನ್ನು ಹಿಂದಿನ ಹಿರಿಯರೂ ಹೇಳಿದ್ದಾರೆ ಎಂದು ಹೇಳುತ್ತದೆ.

**ಭಾವವಿಲಾಸಿನೀ–** ಅನ್ಯೋಪಸರ್ಜನತಯಾ ಅರ್ಥಗ್ರಾಹಕಸ್ಯ ತದರ್ಥಸತ್ತಾನಿಶ್ಚಯರೂಪತ್ವಂ ಶ್ರೌತಮತರೀತ್ಯಾ ದರ್ಶಯತಿ – **ಇತೀತಿ** ॥ 'ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ' ತದುಕ್ತಮೃಷಿಣಾ 'ಪವಮಾನಃ ಪ್ರಜಾಪತಿಃ' ಇತ್ಯಾದಿಶ್ರುತ್ಯಾ ಚ ಸ್ವೋಕ್ತೋ ಯೋಽಯಮರ್ಥಃ ತದ್ದಾರ್ಢ್ಯಾರ್ಥಂ ಪೂರ್ವೈಋಷ್ಯಾದಿಭಿರಪ್ಯುಕ್ತತಾ ಸ್ವೋಕ್ತಾರ್ಥಸ್ಯೋಚ್ಯತೇ ॥ ೩೮೭ ॥

**ವಿವರಣೆ–** ಮತ್ತೊಂದು ಮೂಲದಿಂದ ಉಪನೀತವಾದ ವಿಷಯಗಳನ್ನು ಗ್ರಹಿಸುವ ಪ್ರಮಾಣವು ಆ ವಸ್ತುವಿನ ಅಸ್ತಿತ್ವವನ್ನು ದೃಢಪಡಿಸುತ್ತದೆಂಬುದು ವೇದಕ್ಕೂ ಸಂಮತವಾಗಿದೆ ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ :-

'ಇತಿ ಶುಶ್ರುಮ ಧೀರಾಣಾಂ ಯೋನಸ್ತದ್ವಿಚಚಕ್ಷಿರೇ' (ಈ ಶಾವಸ್ಯೂಪನಿಷತ್ ಹದಿಮೂರನೇ ಮಂತ್ರ) ಅರ್ಥ : ಹೀಗೆ ಋಷಿಗಳು ನಮಗೆ ಹೇಳಿದ್ದನ್ನು ನಾವು ಕೇಳಿದ್ದೇವೆ.

'ತದುಕ್ತಮೃಷಿಣಾ ಪವಮಾನಃ ಪ್ರಜಾಪತಿಃ'. ಅರ್ಥ : ಪವಮಾನನನೇ ಪ್ರಜಾಪತಿಯೆಂದು ಋಷಿಯಿಂದ ಹೇಳಲ್ಪಟ್ಟಿದೆ.

**ವಾಚೋ ಗೋಚರತಾಜ್ಞಾನೇಽಪ್ಯರ್ಥಸತ್ತಾ ಯಥೇ(ಷ)ಯತೇ ।**
**ಜ್ಞಾನಗೋಚರತಾಜ್ಞಾನೇಽಪ್ಯರ್ಥಸತ್ತಾ ತಥೇಯತಾಮ್ ।**
**ನಚೇಚ್ಚರಾಂಶ್ಚಾರಯಂತೋ ನೃಪಾಶ್ಚ ಸ್ಯುರಕೋವಿದಾಃ ॥ ೩೮೮ ॥**

**ಅರ್ಥ–** ವಾಚೋಗೋಚರತಾಜ್ಞಾನೇ ಅಪಿ = ಜ್ಞಾನಿಗಳ ಮಾತಿನಿಂದ ತಿಳಿದ ವಿಷಯವೆಂದು ನಮಗೆ ತಿಳಿದರೂ, ಯಥಾ = ಹೇಗೆ, ಅರ್ಥಸತ್ತಾ = ವಿಷಯದ ಸತ್ಯತ್ವವು,

ಈಯತೇ = ನಿರ್ಣಯಿಸಲ್ಪಡುತ್ತದೆಯೋ, ತಥಾ = ಹಾಗೆಯೇ, ಜ್ಞಾನಗೋಚರತಾಜ್ಞಾನೇ ಅಪಿ = ವ್ಯವಸಾಯಕ್ಕೆ ಘಟವು ವಿಷಯವಾಗಿದೆ ಎಂದು ಸಾಕ್ಷಿಜ್ಞಾನಬಂದಾಗಲೂ, ಅರ್ಥಸತ್ತಾ = ವಸ್ತುವಿನ ಸತ್ಯತೆಯು, ತಥಾ = ಹಾಗೆಯೇ, ಈಯತಾಂ = ನಿರ್ಧರಿಸಲ್ಪಡಲಿ.

ನ ಚೇತ್ = ಮತ್ತೊಬ್ಬರ ಜ್ಞಾನದಿಂದ ವಿಷಯನಿರ್ಧಾರವಾಗದಿದ್ದಲ್ಲಿ, ಚಾರಾನ್ = ಗೂಢಚಾರರನ್ನು, ಚಾರಯಂತಃ = ಗೂಢಚರ್ಯೆಗಾಗಿ ಕಳುಹಿಸುವ, ನೃಪಾಃ = ರಾಜರು, ಅಕೋವಿದಾಃ = ಅವಿದ್ವಾಂಸರಾಗಿ, ಸ್ಯುಃ = ಆದಾರು.

**ಅನುವಾದ–** ಮತ್ತೊಬ್ಬರು ನೋಡಿ ಹೇಳಿದ ಮಾತಿನಿಂದ ನಮಗೂ ವಿಷಯದ ನಿರ್ಧಾರವಾಗುವಂತೆ ವ್ಯವಸಾಯಕ್ಕೆ ವಸ್ತುವು ವಿಷಯವಾಗಿದೆ ಎಂಬ ಜ್ಞಾನ ಅನುವ್ಯವಸಾಯಕ್ಕೆ ಬಂದಾಗಲೂ ಆ ವಸ್ತುವಿನ ಅಸ್ತಿತ್ವವು ನಿರ್ಣೀತವಾಗುತ್ತದೆ. ಮತ್ತೊಂದು ಮೂಲದ ಜ್ಞಾನದಿಂದ ವಿಷಯದ ನಿರ್ಧಾರವಾಗುವುದಿಲ್ಲವೆಂದರೆ ವಿಷಯ ಸಂಗ್ರಹಕ್ಕಾಗಿ ಗೂಢಚಾರರನ್ನು ಕಳಿಸಿಕೊಡುವ ರಾಜರು ತಿಳುವಳಿಕೆಯಿಲ್ಲದವರಾದಾರು.

**ಭಾವವಿಲಾಸಿನೀ–** ತಥಾಚ ಪೂರ್ವೇಷಾಂ ವಾಚೋ ಗೋಚರತಾಜ್ಞಾನೇಽಪಿ ತದರ್ಥಸತ್ತಾ ಯಥೇಯತೇ ನಿರ್ಣೀಯತೇ, ತಥಾ ಪ್ರಕೃತೇಽಪಿ ಪೂರ್ವಜ್ಞಾನ- ಗೋಚರೋಽಯಮರ್ಥ ಇತಿ ಜ್ಞಾನೇಽಪ್ಯರ್ಥಸತ್ತಾ ಜ್ಞಾಯತಾಮಿತಿ ಸಂಬಂಧಃ । ರಾಜನೀತ್ಯಾ ಬಾಧಕಾಂತರಂ ಚಾಹ – **ನಚೇದಿತಿ** ॥ ಅನ್ಯೋಪನೀತತಯಾ ಭಾನಮರ್ಥಸತ್ತಾನಿಶ್ಚಾಯಕಂ ನ ಚೇತ್ ತತ್ತದ್ದೇಶೀಯವಾರ್ತಾವಿಜ್ಞಾನಾಯ ಚಾರಾನ್ ಗೂಢಪುರುಷಾನ್ ಧನಂ ದತ್ವಾ ಚಾರಯನ್ತೋ ನೃಪಾ ಅಕೋವಿದಾಃ ಸ್ಯುಃ । ತೇಷಾಂ ಚಾರಮುಖೇನೈವ ತತ್ತದ್ದೇಶವೃತ್ತಾಂತಜ್ಞಾನಾತ್ । ಸ್ವಾತಂತ್ರ್ಯೇಣ ತಜ್ಜ್ಞಾನಾಭಾವಾದ್ ಅನ್ಯೋಪಸರ್ಜನತಯಾ ಜ್ಞಾನಸ್ಯಾಪ್ರಯೋಜಕತ್ವೇ ಚಾರಾಂಶ್ಚಾರಯನ್ತೋ ನೃಪಾಃ ಕಥಂ ಕೋವಿದಾಃ ಸ್ಯುರಿತಿ ಭಾವಃ । ನಿರ್ದೋಷತತ್ತದ್ವಾಕ್ಯ-ರೂಪಚರಮಪ್ರಾಮಾಣೇ ಆಶ್ವಾಸಶ್ಚೇನ್ನಿರ್ದೋಷ- ಪ್ರತ್ಯಕ್ಷರೂಪಪ್ರಥಮಪ್ರಮಾಣೇಽಪಿ ಕುತೋ ನಾಶ್ವಾಸಃ? ಅತೋ ಯತ್ಕಿಂಚಿದೇತತ್ ॥ ೩೮೮ ॥

> ಕಿಂಚೇದಂ ನಿರಣಾಯೀತಿ ಪ್ರೋಕ್ತೇಽರ್ಥೇ ಸತ್ತ್ವನಿರ್ಣಯಃ ।
> ಅಸ್ತ್ಯೇವ ನಿಕಟಸ್ಥೇಷು ಧೀಶ್ಚ ನಿಶ್ಚಯರೂಪಿಣೀ ॥ ೩೮೯ ॥

**ಅರ್ಥ–** ಕಿಂಚ = ಅದಲ್ಲದೆ, ಇದಂ = ಇದು, ನಿರಣಾಯಿ = ನಿರ್ಣಯಿಸಲ್ಪಟ್ಟಿದೆ. ಇತಿ ಪ್ರೋಕ್ತೇ = ಹೀಗೆ ಹೇಳಿದಾಗ, ಸತ್ತ್ವನಿರ್ಣಯಃ = ವಸ್ತುವಿನ ನಿರ್ಧಾರವು, ಅಸ್ತ್ಯೇವ = ಆಗಿಯೇ ತೀರುತ್ತದೆ. ನಿಕಟಸ್ಥೇಷು = ಸಮೀಪದಲ್ಲಿರುವ ಪದಾರ್ಥಗಳಲ್ಲಿ ನಿಶ್ಚಯರೂಪಿಣೀ = ನಿರ್ಧಾರಾತ್ಮಕವಾದ, ಧೀಶ್ಚ = ಜ್ಞಾನವು, ಅಸ್ತ್ಯೇವ = ಇದ್ದೇ ಇದೆ.

**ಅನುವಾದ–** ಅದಲ್ಲದೇ, 'ಈ ವಸ್ತುವು ನಿರ್ಣೀತವಾಗಿದೆ' ಎಂದು ಹೇಳಿದಾಗ ಆ ವಸ್ತುವಿನ ಅಸ್ತಿತ್ವದ ನಿರ್ಧಾರವು ಆಗಿಯೇ ತೀರುತ್ತದೆ. ಹಾಗೂ ಸಮೀಪದಲ್ಲಿರುವ ಘಟಾದಿ ವಸ್ತುಗಳ ಬಗ್ಗೆ ನಿಶ್ಚಯಾತ್ಮಕವಾದ ಜ್ಞಾನವೂ ಅಲ್ಲಿ ಇದ್ದೇ ಇರುತ್ತದೆ.

**ಭಾವವಿಲಾಸಿನೀ–** ದೃಢಜ್ಞಾನೋಪನೀತೇಽರ್ಥೇ ಅರ್ಥಸತ್ತಾನಿಶ್ಚಯೋಽಪ್ಯಸ್ತೀತ್ಯೇತ-ದನುಭವಾರೂಢಂ ಕರೋತಿ – **ಕಿಂಚೇತಿ** ॥ ಇದಮೇವಂ ನಿರಣಾಯಿ । ನಿರ್ಣೀತಮಿತಿ ಪ್ರೋಕ್ತೇ ಸತಿ ಅರ್ಥೇ ಸತ್ತ್ವನಿರ್ಣಯಃ ಅರ್ಥಸತ್ತಾನಿರ್ಣಯ ಇತಿ ಯಾವತ್ । ಅಸ್ತ್ಯೇವೇತ್ಯನೇನಾನ್ಯಥಾ ಸ್ವವ್ಯಾಹತಿರಿತಿ ದ್ಯೋತಯತಿ । ನಿಕಟಸ್ಥೇಷು ಪದಾರ್ಥೇಷು ನಿಶ್ಚಯರೂಪಿಣೀ ಇದಮಿತ್ಥಮೇವೇತಿ ನಿಶ್ಚಯರೂಪಿಣೀ ಧೀಶ್ಚಾಸ್ತೀತಿ ಕ್ರಿಯಾವೃತ್ತ್ಯಾ ಯೋಜನಾ ॥ ೩೮೯ ॥

ಅತೋ ವಿನಿಶ್ಚಿತೋಽರ್ಥೋಽಯಮಿತ್ಯನುವ್ಯವಸಾಯವಾನ್ ।
ಅರ್ಥಸತ್ತಾರೂಪಮೇವ ತತ್ಪ್ರಾಮಾಣ್ಯಂ ಚ ನಿರ್ಣಯೇತ್ ॥ ೩೯೦ ॥

**ಅರ್ಥ–** ಅತಃ = ಆದ್ದರಿಂದ, ಅಯಮರ್ಥಃ = ಈ ವಸ್ತುವು, ವಿನಿಶ್ಚಿತಃ = ನಿರ್ಧರಿಸಲ್ಪಟ್ಟಿದೆ. ಇತಿ ಅನುವ್ಯವಸಾಯವಾನ್ = ಹೀಗೆ ಅನುವ್ಯವಸಾಯವುಳ್ಳ ಪುರುಷನು, ಅರ್ಥಸತ್ತಾರೂಪಂ = ಅರ್ಥಸತ್ವರೂಪವಾದ, ತತ್ಪ್ರಾಮಾಣ್ಯಂಚ = ವ್ಯವಸಾಯದ ಪ್ರಾಮಾಣ್ಯವನ್ನೂ ಕೂಡ, ನಿರ್ಣಯೇತ್ ಏವ = ನಿರ್ಣಯಿಸಿಯೇ ತೀರುತ್ತಾನೆ.

**ಅನುವಾದ–** ಆದ್ದರಿಂದ 'ಈ ವಸ್ತುವು ನಿಶ್ಚಿತವಾಗಿದೆ' ಎಂಬ ಅನುವ್ಯವಸಾಯಕ್ಕೆ ಪುರುಷನಿಗೆ ಬಂದ ಬಳಿಕ ಆತನು ಅದೇ ಅನುವ್ಯವಸಾಯದಿಂದಲೇ ಆ ಜ್ಞಾನರೂಪವ್ಯವಸಾಯದ ವಿಷಯದ ಅಸ್ತಿತ್ವರೂಪ ಪ್ರಾಮಾಣ್ಯವನ್ನೂ ನಿರ್ಣಯಿಸುತ್ತಾನೆ.

**ಭಾವವಿಲಾಸಿನೀ–** ಅತಃ ನಿಶ್ಚಯರೂಪವ್ಯವಸಾಯಬಲಾದ್ ಏವಮರ್ಥೋ ವಿನಿಶ್ಚಿತ ಇತ್ಯನುವ್ಯವಸಾಯವಾನ್ ಪುರುಷಸ್ತೇನಾನುವ್ಯವಸಾಯೇನಾರ್ಥಸತ್ತಾನಿಶ್ಚಯರೂಪಮೇವ ತತ್ಪ್ರಾಮಾಣ್ಯಂ ಪೂರ್ವವ್ಯವಸಾಯಪ್ರಾಮಾಣ್ಯಂ ನಿರ್ಣಯೇತ್ ನಿಶ್ಚಿನುಯಾದೇವ । ತಥಾಚೈತಾದೃಶಸ್ಥಲೇ ಪ್ರಾಮಾಣ್ಯಸ್ವತಸ್ತ್ವಂ ಸಿದ್ಧಮೇವೇತಿ ಭಾವಃ ॥ ೩೯೦ ॥

**ವಿವರಣೆ–** ಆದ್ದರಿಂದ ಅನುವ್ಯವಸಾಯವು ಅವಶ್ಯವಾಗಿ ಪ್ರಾಮಾಣ್ಯವನ್ನು ಗ್ರಹಿಸುವುದೆಂದು ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ.

ಕಿಂಚ ಪ್ರಾಮಾಣ್ಯಾನುಮಿತ್ಯಾಽಪ್ಯುಪಸ್ಥಿತತದಗ್ರಹಃ ।
ಸಾಕ್ಷಿಣಿ ಸ್ಯಾದ್ಯತಸ್ತತ್ರಾಪ್ಯುಪನೀತಂ ತದೀಯತೇ ॥ ೩೯೦ ॥

**ಅರ್ಥ–** ಕಿಂಚ = ಮತ್ತು, ಸಾಕ್ಷಿಣಿ = ಸಾಕ್ಷಿಯಲ್ಲಿ, ಪ್ರಾಮಾಣ್ಯಾನುಮಿತ್ಯಾ= ಪ್ರಾಮಾಣ್ಯಾನುಮಿತಿಯಿಂದ, ಉಪಸ್ಥಿತ = ಉಪಸ್ಥಿತವಾದ, ತದಗ್ರಹಃ = ಪ್ರಾಮಾಣ್ಯದ ಅಗ್ರಹಣವು, ಸ್ಯಾತ್ = ಆಗಬೇಕಾಗುತ್ತದೆ. ಯತಃ = ಏಕೆಂದರೆ, ತತ್ರಾಪಿ = ಆ ಸ್ಥಳದಲ್ಲಿಯೂ ಕೂಡ, ಉಪನೀತಂ = ಉಪನೀತವಾದ, ತತ್ = ಆ ಪ್ರಾಮಾಣ್ಯವು, ಈಯತೇ = ತಿಳಿಯಲ್ಪಡುವುದಷ್ಟೆ?

**ಅನುವಾದ–** ಜ್ಞಾನಪ್ರಾಮಾಣ್ಯವನ್ನು ಅನುಮಾನ ಮಾಡುತ್ತೇನೆ ಎಂಬ ಆಕಾರವುಳ್ಳ ಸಾಕ್ಷಿಯಲ್ಲಿ ವ್ಯವಸಾಯರೂಪವಾದ ಜ್ಞಾನದ ಪ್ರಾಮಾಣ್ಯವು ಗೃಹೀತವಾಗದೇ ಹೋಗಬೇಕಾದೀತು. ಏಕೆಂದರೆ ಅಲ್ಲಿಯೂ ಕೂಡ ಜ್ಞಾನದಿಂದ ಉಪಸ್ಥಾಪಿತವಾದ ಪ್ರಾಮಾಣ್ಯವೇ ಗೋಚರಿಸಬೇಕಷ್ಟೇ.

**ಭಾವವಿಲಾಸಿನೀ–**ಅಧುನಾ ಉಪನೀತಾರ್ಥೇ ಅನುವ್ಯವಸಾಯಸ್ಯಾರ್ಥಸತ್ತಾ-ನಿಶ್ಚಯರೂಪತಾಂ ನಾಸ್ತೀತಿ ವದತಸ್ತಾರ್ಕಿಕಸ್ಯ ಸ್ವವ್ಯಾಹತಿಮಾಹ – **ಕಿಂಚೇತಿ** ॥ ಸಾಕ್ಷಿಣಿ ಜ್ಞಾನಪ್ರಾಮಾಣ್ಯಮನುಮಿನೋಮೀತ್ಯನುವ್ಯವಸಾಯರೂಪೇ ಜ್ಞಾನೇ ಪ್ರಾಮಾಣ್ಯಾ-ನುಮಿತ್ಯಾಪಿ ಪರಾಭಿಮತಪ್ರಾಮಾಣ್ಯಾನುಮಾನ- ಜನ್ಯಪ್ರಾಮಾಣ್ಯಾನುಮಿತ್ಯಾಪಿ ಉಪಸ್ಥಿತ-ತದಗ್ರಹಃ ಉಪಸ್ಥಾಪಿತಜ್ಞಾನಪ್ರಾಮಾಣ್ಯನಿಶ್ಚಯಾಭಾವಃ ಸ್ಯಾದಿತಿ ಸಂಬಂಧಃ । ತತ್ರ ಹೇತುಃ – **ಯತ ಇತಿ** ॥ ತತ್ರ ಪ್ರಾಮಾಣ್ಯಾನುಮಿತ್ಯನುವ್ಯವಸಾಯೇಽಪಿ ಉಪನೀತಂ ತತ್ಪ್ರಾಮಾಣ್ಯಂ ಈಯತೇ ಗೃಹ್ಯತೇ ಸಾಕ್ಷಿಣಾ ॥ ೩೯೧ ॥

**ವಿವರಣೆ–** ಈಗ ಹಿಂದಿನ ಶ್ಲೋಕಗಳಲ್ಲಿ ಉಪನೀತವಾದ ಅರ್ಥದಲ್ಲಿ ಅನುವ್ಯವಸಾಯವು ಅರ್ಥಸತ್ತ್ವರೂಪವಾದ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂದು ಹೇಳಿದರೆ ತಾರ್ಕಿಕರಿಗೆ ಸ್ವವ್ಯಾಹತಿ ದೋಷವು ಬರುತ್ತದೆಂದು 'ಕಿಂಚ' ಎಂದು ಪ್ರಾರಂಭವಾಗುವ ಶ್ಲೋಕದಿಂದ ಹೇಳುತ್ತಾರೆ. 'ಸಾಕ್ಷಿಣಿ' ಎಂದರೆ ಜ್ಞಾನಪ್ರಾಮಾಣ್ಯವನ್ನು ಅನುಮಾನದಿಂದ ತಿಳಿಯುತ್ತೇನೆ ಎಂಬ ಆಕಾರದ ಅನುವ್ಯವಸಾಯರೂಪವಾದ ಜ್ಞಾನ. 'ಪ್ರಾಮಾಣ್ಯಾನುಮಿತ್ಯಾಪಿ' ಎಂದರೆ ತಾರ್ಕಿಕರಿಗೆ ಅಭಿಮತವಾದ ಪ್ರಾಮಾಣ್ಯಾನುಮಾನ ಎಂದರೆ ಸಫಲಪ್ರವೃತ್ತಿಜನಕತ್ವರೂಪವಾದ ಲಿಂಗದಿಂದ ಉತ್ಪನ್ನವಾದ ಪ್ರಾಮಾಣ್ಯಾನು-ಮಿತಿಯಿಂದಲೂ ಎಂದರ್ಥ. 'ಉಪಸ್ಥಿತಃ ತದಗ್ರಹಃ' ಎಂದರೆ ಉಪಸ್ಥಾಪಿತವಾದ ಜ್ಞಾನಪ್ರಾಮಾಣ್ಯದ ನಿಶ್ಚಯಾಭಾವ ಎಂದರ್ಥ. 'ಸ್ಯಾತ್' ಎಂದರೆ ಉಂಟಾಗಲಿ ಎಂಬ ಆಪತ್ತಿ. 'ಯತಃ' ಎಂಬ ಶ್ಲೋಕಭಾಗದಿಂದ ಅದಕ್ಕೆ ಹೇತುವನ್ನು ಹೇಳುತ್ತಾರೆ. ಆ ಸ್ಥಳದಲ್ಲಿಯೂ ಪ್ರಾಮಾಣ್ಯಾನುಮಿತಿಯ ಅನುವ್ಯವಸಾಯದಿಂದಲಾದರೂ ಸಹ ಉಪನೀತವಾದ ಪ್ರಾಮಾಣ್ಯವನ್ನೇ ವಿಷಯೀಕರಿಸಬೇಕಷ್ಟೇ.

'ಇದಂ ಜಲಂ' ಎಂಬ ಜ್ಞಾನವು ಮೊದಲು ಬರುತ್ತದೆ. ಅನಂತರ 'ಜಲಜ್ಞಾನವಾನಹಂ' ಎಂಬ ಅನುವ್ಯವಸಾಯವು ಉಂಟಾಗುತ್ತದೆ. ಈ ಅನುವ್ಯವಸಾಯವು ಮೊದಲನೆಯ ಜ್ಞಾನವಾದ 'ಇದಂ ಜಲಂ' ಎಂಬ ಜ್ಞಾನದ

ಪ್ರಾಮಾಣ್ಯವನ್ನು ವಿಷಯೀಕರಿಸುವುದಿಲ್ಲ. ಆದರೆ ಜಲದ ಸಮೀಪಕ್ಕೆ ಹೋಗಿ ನೀರನ್ನು ಕುಡಿದ ಮೇಲೆ ಆ ಜಲದಲ್ಲಿ ಸಫಲಪ್ರವೃತ್ತಿಜನಕತ್ವವು ಗೊತ್ತಾಗುವುದರಿಂದ ಸಫಲಪ್ರವೃತ್ತಿಜನಕತ್ವರೂಪಲಿಂಗದಿಂದ ಜಲಜ್ಞಾನದಲ್ಲಿ ಪ್ರಾಮಾಣ್ಯವು ವಿವರಿಸಲ್ಪಡುತ್ತದೆ ಎಂದು ತಾರ್ಕಿಕರು ಸ್ವೀಕರಿಸುತ್ತಾರೆ. 'ಇದಂ ಜಲಂ' ಎನ್ನುವ ಮೊದಲನೆಯ ಜ್ಞಾನಕ್ಕೆ ವ್ಯವಸಾಯ ಎಂದು ಹೆಸರು. 'ಇದಂ ಜಲಂ' ಎಂಬ ವ್ಯವಸಾಯದ ನಂತರ ಉಂಟಾಗುವ ಅನುವ್ಯವಸಾಯದಲ್ಲಿ ಜಲಜ್ಞಾನಪ್ರಾಮಾಣ್ಯವು ಹೇಗೆ ಗ್ರಹಿಸಲ್ಪಡುವುದಿಲ್ಲ ಎಂಬ ಪ್ರಶ್ನೆಗೆ ಉತ್ತರವಾಗಿ ವ್ಯವಸಾಯದಿಂದ ಅನುವ್ಯವಸಾಯಕ್ಕೆ ಜಲತ್ವವತ್ತ್ವವು ಉಪಸ್ಥಾಪನೆ ಮಾಡಿಕೊಳ್ಳಲ್ಪಡುವುದರಿಂದ ಅನುವ್ಯವಸಾಯವು ಇನ್ನೊಂದರಿಂದ ಉಪಸ್ಥಾಪಿತವಾದ ಜ್ಞಾನಪ್ರಾಮಾಣ್ಯವನ್ನು ವಿಷಯೀಕರಿಸುವುದಿಲ್ಲ ಎಂದು ತಾರ್ಕಿಕರು ಹೇಳುತ್ತಾರೆ. ಆದರೆ 'ಜಲಜ್ಞಾನಂ ಪ್ರಮಾಣಂ' 'ಸಫಲಪ್ರವೃತ್ತಿಜನಕತ್ವಾತ್' ಎಂಬ ಅನುಮಾನದಿಂದ ಜಲಜ್ಞಾನದಲ್ಲಿ ಪ್ರಾಮಾಣ್ಯವು ಗೊತ್ತಾದ ಮೇಲೆ 'ಪ್ರಮಾರೂಪ ಜಲಜ್ಞಾನವಾನಹಂ' ಎಂಬ ಅನುವ್ಯವಸಾಯವು ಉಂಟಾಗುತ್ತದೆ. ಈ ಅನುವ್ಯವಸಾಯಕ್ಕೆ ಜಲಜ್ಞಾನದ ಪ್ರಾಮಾಣ್ಯವೂ ವಿಷಯವಾಗುತ್ತದೆ ಎಂದು ಹೇಳುತ್ತಾರೆ. ಇನ್ನೊಂದರಿಂದ ಉಪಸ್ಥಾಪಿತವಾದಾಗ ಆ ಪ್ರಾಮಾಣ್ಯವನ್ನು ಅನುವ್ಯವಸಾಯವು ವಿಷಯೀಕರಿಸುವುದಿಲ್ಲ ಎಂದು ಹೇಳಿ ಪ್ರತ್ಯಕ್ಷದಿಂದ ಉಂಟಾದ ಜಲಜ್ಞಾನದ ಪ್ರಾಮಾಣ್ಯಗ್ರಹಣವನ್ನು ನಿರಾಕರಿಸಿದ ಮೇಲೆ ಅನುಮಿತಿಯ ಅನುವ್ಯವಸಾಯದಲ್ಲಿಯೂ ತೋರುವ ಪ್ರಾಮಾಣ್ಯವು ವ್ಯವಸಾಯದಿಂದಲೇ ಉಪಸ್ಥಾಪಿತವಾದುದಷ್ಟೇ ಅದನ್ನು ಹೇಗೆ ಒಪ್ಪುತ್ತೀರಿ? ಉಪಸ್ಥಾಪಿತವಾದ ಜ್ಞಾನಪ್ರಮಾಣ್ಯವು ವಿಷಯೀಕರಿಸುವುದಿಲ್ಲ ಎಂದು ಪ್ರತ್ಯಕ್ಷಸ್ಥಳದಲ್ಲಿ ಹೇಳಿ ಅನುಮಿತಿಸ್ಥಳದಲ್ಲಿ ಉಪಸ್ಥಾಪಿತವಾದ ಜ್ಞಾನಪ್ರಾಮಾಣ್ಯವನ್ನು ವಿಷಯೀಕರಿಸುತ್ತದೆ ಎಂದು ಹೇಳಿದರೆ ತಾರ್ಕಿಕರಿಗೆ ಸ್ವವ್ಯಾಹತಿದೋಷವು ಬರುತ್ತದೆ ಎಂದು ಅಭಿಪ್ರಾಯ.

**ನ ಕಿಂ ಪ್ರಮಾವಾನಹಮಿತ್ಯಾಕಾರಾ ನಿಶ್ಚಯಾತ್ಮಿಕಾ ।**
**ಜಾಯತೇಽನುವ್ಯವಸಿತಿಃ ಪ್ರಾಮಾಣ್ಯೇಽನುಮಿತೇಽಪಿ ತೇ ॥ ೩೯೨ ॥**

**ಅರ್ಥ–** ಪ್ರಾಮಾಣ್ಯೇಽನುಮಿತೇಪಿ = ಪ್ರಾಮಾಣ್ಯವು ಅನುಮಿತವಾದರೂ, ಪ್ರಮಾವಾನಹಂ = ನಾನು ಪ್ರಮಾವುಳ್ಳವನಾಗಿದ್ದೇನೆ. ಇತಿ = ಎಂಬ, ಆಕಾರಾ = ಆಕಾರವುಳ್ಳ, ನಿಶ್ಚಯಾತ್ಮಿಕಾ = ನಿಶ್ಚಯರೂಪವಾದ, ಅನುವ್ಯವಸಿತಿಃ = ಅನುವ್ಯವಸಾಯವು, ಕಿಂ ನ ಜಾಯತೇ = ಹುಟ್ಟುವುದಿಲ್ಲವೇನು?

**ಅನುವಾದ–** ಪ್ರಾಮಾಣ್ಯವನ್ನು ಅನುಮಾನದಿಂದ ತಿಳಿದಾಗಲೂ ಕೂಡ 'ಪ್ರಮಾವಾನಹಂ' ಎಂಬ ಆಕಾರವುಳ್ಳ ನಿಶ್ಚಯಾತ್ಮಕವಾದ ಅನುವ್ಯವಸಾಯವು ಉಂಟಾಗುವುದಿಲ್ಲವೇ?

**ಭಾವವಿಲಾಸಿನೀ**–ಅನುಮಿತ್ಯುಪನೀತಮಪಿ ಪ್ರಾಮಾಣ್ಯಂ ಸಾಕ್ಷಿಣಾ ಮಾ ಗ್ರಾಹಿ ಕೋ ದೋಷಃ? ಇತ್ಯತ ಆಹ – **ನೇತಿ** ॥ ತೇ ತವ ಮತೇ ಪ್ರಾಮಾಣ್ಯೇऽನುಮಿತೇ ಸತ್ಯಪಿ ಪ್ರಮಾವಾನ್ ಪ್ರಮಾರೂಪಜಲಜ್ಞಾನವಾನಹಮಿತ್ಯೇವಮಾಕಾರಾ ನಿಶ್ಚಯಾತ್ಮಿಕಾ ಪ್ರಾಮಾಣ್ಯ-ಸತ್ತಾನಿಶ್ಚಯರೂಪಾ ಅನುವ್ಯವಸಿತಿರ್ನ ಜಾಯತೇ ಕಿಮ್? ಇತಿ ಸಂಬಂಧಃ ॥ ತಥಾಚಾನುಭವವಿರೋಧ ಇತಿ ಭಾವಃ ॥ ೩೯೨ ॥

**ವಿವರಣೆ**– ಅನುಮಿತಿಯಿಂದ ಉಪನೀತವಾದ ಪ್ರಾಮಾಣ್ಯವು ಸಾಕ್ಷಿಯಿಂದ ಗ್ರಹಿಸಲ್ಪಡುವುದಿಲ್ಲ ಎಂದು ಅಂಗೀಕರಿಸುತ್ತೇವೆ. ಆ ಪಕ್ಷದಲ್ಲಿ ಏನು ದೋಷ ಎಂದು ಕೇಳಿದರೆ 'ನ ಕಿಂ' ಎಂಬ ಶ್ಲೋಕದಿಂದ ಅದಕ್ಕೆ ಉತ್ತರವನ್ನು ಹೇಳುತ್ತಾರೆ. ಪ್ರಾಮಾಣ್ಯವು ಅನುಮಿತವಾದ ಮೇಲೆ 'ಪ್ರಮಾರೂಪ ನೀರಜ್ಞಾನವಾನಹಂ' ಎಂಬ ನಿಶ್ಚಯಾತ್ಮಕವಾದ ಅನುವ್ಯವಸಾಯವು ಉಂಟಾಗುತ್ತದೆಯೋ ಅಥವಾ ಇಲ್ಲವೋ ಎಂದು ನಮ್ಮ ಪ್ರಶ್ನೆ. ಉಂಟಾಗುತ್ತದೆ ಎಂದು ಹೇಳಿದರೆ ಉಪನೀತ ಪ್ರಾಮಾಣ್ಯವನ್ನು ಅನುವ್ಯವಸಾಯವು ವಿಷಯೀಕರಿಸುವುದಿಲ್ಲ ಎಂಬ ನಿಮ್ಮ ಅಂಗೀಕಾರಕ್ಕೆ ಭಂಗಬರುತ್ತದೆ. ವಿಷಯೀಕರಿಸುವುದಿಲ್ಲ ಎಂದು ಹೇಳಿದರೆ ಅನುಭವವಿರೋಧವು ಬರುತ್ತದೆ. ಏಕೆಂದರೆ ಜಲಜ್ಞಾನದಲ್ಲಿ ಪ್ರಾಮಾಣ್ಯವು ನಿಶ್ಚಯವಾದ ಮೇಲೆ 'ಪ್ರಮಾರೂಪ ಜಲಜ್ಞಾನವಾನಹಂ' ಎಂಬ ಅನುಭವವು ಸರ್ವರಿಗೂ ಸಿದ್ಧವಾಗಿದೆ.

**ವ್ಯಾಪ್ತಿಜಾನುಮಿತೇರ್ದಾರ್ಢ್ಯಾದುಪನೀತಸ್ಯ ನಿರ್ಣಯೇ ।**
**ಅಕ್ಷಜಾನುಭವೇ ದಾರ್ಢ್ಯಂ ಕಿಂ ನಾಸ್ತ್ಯತ್ರೋಪನೇತರಿ ॥ ೩೯೩ ॥**

**ಅರ್ಥ**– ವ್ಯಾಪ್ತಿಜಾನುಮಿತೇಃ = ವ್ಯಾಪ್ತಿಯಿಂದುಂಟಾದ ಅನುಮಿತಿಯ, ದಾರ್ಢ್ಯಾತ್ = ದಾರ್ಢ್ಯದಿಂದ, ಉಪನೀತಸ್ಯ = ಉಪನೀತವಾದುದು, ನಿರ್ಣಯೇ = ಸಾಕ್ಷಿಯಿಂದ ನಿರ್ಣಯಿಸಲ್ಪಡುವುದಾದರೆ, ಅಕ್ಷಜಾನುಭವೇ = ಚಕ್ಷುರಾದೀಂದ್ರಿಯ ಜನ್ಯಜ್ಞಾನದಲ್ಲಿ, ದಾರ್ಢ್ಯಂ ನ ಕಿಂ = ದಾರ್ಢ್ಯವಿಲ್ಲವೇನು?

**ಅನುವಾದ**– ವ್ಯಾಪ್ತಿಯಿಂದುಂಟಾದ ಅನುಮಿತಿಯು ದೃಢವಾಗುವುದರಿಂದ ಅಲ್ಲಿ ಉಪನೀತವಾದ ಪ್ರಾಮಾಣ್ಯವು ವಿಷಯೀಕೃತವಾಗುತ್ತದೆಂದು ಹೇಳಿದರೆ ಇಲ್ಲಿ ಉಪನಾಯಕವಾದ ಪ್ರತ್ಯಕ್ಷಜನ್ಯಜ್ಞಾನದಲ್ಲಿ ದಾರ್ಢ್ಯವಿಲ್ಲವೇನು?

**ಭಾವವಿಲಾಸಿನೀ**– ಶಂಕತೇ – **ವ್ಯಾಪ್ತಿಜೇತಿ** ॥ ಉಪನೀತಸ್ಯಾನುಮಿತ್ಯುಪನೀತಸ್ಯ ನಿರ್ಣಯೇ ಸಾಕ್ಷಿಣೇತಿ ಶೇಷಃ । ಉತ್ತರಮಾಹ – **ಅಕ್ಷಜೇತಿ** ॥ ಅತ್ರ ಪ್ರಮಾನುವ್ಯವಸಾಯೇನ ಪ್ರಾಮಾಣ್ಯಗ್ರಹಣಸ್ಥಲೇ ಉಪನೇತರಿ ಅಕ್ಷಜಾನುಭವ ಇತಿ ಸಂಬಂಧಃ ॥ ೩೯೩ ॥

**ವಿವರಣೆ**– ವ್ಯಾಪ್ತಿಜ್ಞಾನವು ದೃಢವಾಗಿರುವುದರಿಂದ ಅನುಮಿತಿಯು ದೃಢವಾಗುವುದಾದರೆ ಅಕ್ಷಜಜ್ಞಾನದಲ್ಲಿ ಯಾವ ದೋಷವೂ ಇಲ್ಲದಿರುವುದರಿಂದ

ಇದೂ ಸಹ ದೃಢವಾಗಿಯೇ ಇದೆ. ಆದ್ದರಿಂದ ಅನುಮಿತಿಯಿಂದ ಉಪನೀತವಾದ ಪ್ರಾಮಾಣ್ಯವನ್ನು ಅನುವ್ಯವಸಾಯವು ಗ್ರಹಿಸುವುದಾದರೆ ಪ್ರತ್ಯಕ್ಷೋಪನೀತವಾದ ಪ್ರಾಮಾಣ್ಯವನ್ನು ವಿಷಯೀಕರಿಸಲಿ.

ಹಿಂದೆ ಹೇಳಿದ ಪ್ರಮೇಯದ ಮೇಲೆ ತಾರ್ಕಿಕರು ಶಂಕೆಯನ್ನು ಮಾಡುತ್ತಾರೆ. 'ವ್ಯಾಪ್ತಿಜ' ಎಂಬ ಶ್ಲೋಕದಿಂದ. ಅನುಮಿತಿಯಿಂದ ಉಪನೀತವಾದ ಪ್ರಾಮಾಣ್ಯವು ಸಾಕ್ಷಿಯಿಂದ ಗ್ರಹಿಸಲ್ಪಡುವುದಾದರೆ ಎಂದು ಅರ್ಥ. 'ಅಕ್ಷಜ' ಎಂಬ ಶ್ಲೋಕಭಾಗದಿಂದ ಅದಕ್ಕೆ ಉತ್ತರವನ್ನು ಹೇಳುತ್ತಾರೆ. 'ಅತ್ರ' ಎಂದರೆ ಅಕ್ಷಜಜ್ಞಾನದ ನಂತರ ಉಂಟಾಗುವ ಪ್ರಮಾರೂಪದ ಅನುವ್ಯವಸಾಯದಲ್ಲಿ ಎಂದರ್ಥ. ಆ ಅನುವ್ಯವಸಾಯಕ್ಕೆ ವಿಷಯೋಪಸ್ಥಾಪಕವಾದ ಅಕ್ಷಜಜ್ಞಾನವು ದೃಢವಾಗಿರುವುದರಿಂದ ಈ ಸ್ಥಳದಲ್ಲಿಯೂ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸಲಿ ಎಂದು ಅರ್ಥ.

ನಾಪಿ ಪ್ರಾಮಾಣ್ಯಸಂದೇಹಾಜ್ಞಾನದಾರ್ಢ್ಯಸ್ಯ ವಿಪ್ಲವಃ ।
ದೃಢರೂಢಜ್ಞಾನಶಕ್ತ್ಯಾ ಸಂಶಯಸ್ಯೈವ ಹಿಂಸನಾತ್ ॥ ೩೯೪ ॥

**ಅರ್ಥ–** ದೃಢ= ದೋಷರಹಿತವಾದ್ದರಿಂದ ದೃಢವಾಗಿ, ರೂಢ= ಹುಟ್ಟಿದ, ಜ್ಞಾನ= ಪ್ರತ್ಯಕ್ಷಾನುಭವರೂಪಜ್ಞಾನದ ಶಕ್ತ್ಯಾ= ಸಾಮರ್ಥ್ಯದಿಂದ, ಸಂಶಯಸ್ಯ ಏವ= ಸಂಶಯದ್ದೇ, ಹಿಂಸನಾತ್= ಪರಿಹಾರವಾಗುವುದರಿಂದ, ಪ್ರಾಮಾಣ್ಯ ಸಂದೇಹಾತ್ ಅಪಿ= ಚಾಕ್ಷುಷ ಜ್ಞಾನದ ಅನುವ್ಯವಸಾಯದ ಪ್ರಾಮಾಣ್ಯದ ಬಗ್ಗೆ ಸಂದೇಹ ಬರುವುದರಿಂದಲೂ ಜ್ಞಾನದಾರ್ಢ್ಯಸ್ಯ= ಚಾಕ್ಷುಷ ವ್ಯವಸಾಯದ ದೃಢತೆಯ ವಿಪ್ಲವಃ= ನಾಶವು ನ= ಇಲ್ಲ.

**ಅನುವಾದ–** ಪ್ರಾಮಾಣ್ಯಸಂಶಯವು ಉಂಟಾಗುವ ಕಾರಣದಿಂದಾಗಿ ಚಾಕ್ಷುಷಜ್ಞಾನಸ್ಥಳದಲ್ಲಿ ನಾವು ದಾರ್ಢ್ಯವನ್ನು ಒಪ್ಪುವುದಿಲ್ಲ ಎಂದು ಶಂಕಿಸಿದರೆ ಚಾಕ್ಷುಷಜ್ಞಾನವು ನಿರ್ದುಷ್ಟವಾದುದರಿಂದ ದೃಢವಾಗಿರುವ ಕಾರಣದಿಂದ ಸಂಶಯವನ್ನೇ ನಾಶಮಾಡುತ್ತದೆ ಎಂದು ನಮ್ಮ ಉತ್ತರ.

**ಭಾವವಿಲಾಸಿನೀ–**ನನು ಪ್ರಾಮಾಣ್ಯಾನುಮಿತ್ಯನಂತರಂ ಪುನಃ ಪ್ರಾಮಾಣ್ಯಸಂಶಯಾಭಾವಾದಸ್ತು ತದನುವ್ಯವಸಾಯೇ ಪ್ರಾಮಾಣ್ಯನಿಶ್ಚಯಃ । ಅಕ್ಷಜನ್ಯಜ್ಞಾನಾನುವ್ಯವಸಾಯೇ ಪ್ರಾಮಾಣ್ಯಸ್ಯ ಪ್ರಾಗನಿಶ್ಚಿತತ್ವೇನ ಪ್ರಾಮಾಣ್ಯಸಂಶಯಾದ್ ಉಪನಾಯಕವ್ಯವಸಾಯೇ ನ ದಾರ್ಢ್ಯಮಿತಿ ಶಂಕಾಂ ಪ್ರಾಕ್ ಪರಿಹೃತಾಮಪಿ ಪ್ರತಿಬಂದೀಸ್ಥಾಪನಾಯ ಪುನಃ ಪರಿಹರತಿ – ನಾಪೀತಿ ॥ ಜ್ಞಾನದಾರ್ಢ್ಯಸ್ಯೋಪನಾಯಕಜ್ಞಾನದಾರ್ಢ್ಯಸ್ಯ । ಕುತೋ ನೇತ್ಯತ ಆಹ – ದೃಢೇತಿ ॥ ಅತಿದೂರತ್ವಾದಿದೋಷಾಭಾವಾದ್ ದೃಢಂ ರೂಢಮ್ ಉತ್ಪನ್ನಂ ಯಜ್ಜ್ಞಾನಮ್ ಅಕ್ಷಜಾನುಭವರೂಪಂ ತಚ್ಛಕ್ತ್ಯಾ ಹಿಂಸನಾದ್ ಅನುತ್ಥಾನಾದಿತ್ಯರ್ಥಃ ॥ ೩೯೪ ॥

**ವಿವರಣೆ—** ಪ್ರಾಮಾಣ್ಯಾನುಮಿತಿಯ ನಂತರ 'ಪ್ರಮಾವಾನಹಂ' ಎಂಬ ಅನುವ್ಯವಸಾಯವು ಬಂದಮೇಲೆ ಪುನಃ ಸಂಶಯಬರುವುದಿಲ್ಲವಾದ್ದರಿಂದ ಅನುಮಿತಿಯ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ವಿಷಯೀಕೃತವಾಗುತ್ತದೆ ಎಂದು ಒಪ್ಪುತ್ತೇವೆ. ಚಾಕ್ಷುಷಜ್ಞಾನದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ಮೊದಲು ನಿಶ್ಚಿತವಾಗಿಲ್ಲದ ಕಾರಣ ಪ್ರಾಮಾಣ್ಯ ಸಂಶಯವು ಬರುವುದರಿಂದ ಅನುವ್ಯವಸಾಯಕ್ಕೆ ವಿಷಯೋಪನಾಯಕವಾದ ಚಾಕ್ಷುಷ ವ್ಯವಸಾಯದಲ್ಲಿ ನಾವು ದಾರ್ಢ್ಯವನ್ನು ಅಂಗೀಕರಿಸುವುದಿಲ್ಲ ಎಂದು ಶಂಕಿಸಿದರೆ ಈ ಶಂಕೆಯನ್ನು ಮೊದಲೇ ಪರಿಹಾರ ಮಾಡಿದ್ದರೂ ಸಹ ಪ್ರತಿಬಂದಿಯನ್ನು ಹೇಳುವ ಸಲುವಾಗಿ 'ನಾಪಿ' ಎಂಬ ಶ್ಲೋಕದಿಂದ ಪುನಃ ಪರಿಹರಿಸುತ್ತಾರೆ. 'ಜ್ಞಾನದಾರ್ಢ್ಯಸ್ಯ' ಎಂದರೆ 'ಉಪನಾಯಕ ಜ್ಞಾನದದಾರ್ಢ್ಯದ' ಎಂದು ಅರ್ಥ. ಪ್ರಾಮಾಣ್ಯಸಂಶಯವುಂಟಾದ ಕಾರಣದಿಂದ ಉಪನಾಯಕಜ್ಞಾನದ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ ಎಂದು ಹೇಳಲು ಬರುವುದಿಲ್ಲ. ಇದಕ್ಕೆ ಏನು ಕಾರಣ ಎಂಬುದನ್ನು 'ದೃಢ' ಇತ್ಯಾದಿ ಶ್ಲೋಕಭಾಗದಿಂದ ಹೇಳುತ್ತಾರೆ. ಚಾಕ್ಷುಷಜ್ಞಾನದಲ್ಲಿ ಕ್ಲುಪ್ತವಾದ ದೂರಸ್ಥತ್ವಾದಿ ದೋಷವಿಲ್ಲದಿರುವುದರಿಂದ ಉತ್ಪನ್ನವಾಗುವ ಆ ಜ್ಞಾನವು ದೃಢವಾಗಿಯೇ ಉತ್ಪನ್ನವಾಗುತ್ತದೆ. ಆ ಜ್ಞಾನದಲ್ಲಿ ದಾರ್ಢ್ಯವಿರುವುದರಿಂದ ಪುನಃ ಸಂಶಯವೇ ಬರುವುದಿಲ್ಲ. ಆದ್ದರಿಂದ ಪುನಃ ಸಂಶಯವು ಬರುವ ಕಾರಣದಿಂದ ಜ್ಞಾನದಲ್ಲಿ ದಾರ್ಢ್ಯವಿಲ್ಲ ಎಂದು ಹೇಳಬಾರದು ಎಂದು ನಮ್ಮ ಉತ್ತರ.

**ಘಟತ್ವವತ್ತ್ವೇ ಸಂದೇಹಃ ಸ್ಯಾತ್ತನ್ನಿಶ್ಚಯವಿಚ್ಯುತೌ ।**
**ಸಂದೇಹಾತ್ತಚ್ಚ್ಯುತೇಶ್ಚೋಕ್ತೌ ಕಿಂ ದೋಷಂ ನಾನುಪಶ್ಯಸಿ ॥ ೩೯೫ ॥**

**ಅರ್ಥ—** ತನ್ನಿಶ್ಚಯವಿಚ್ಯುತೌ = ಘಟತ್ವವತ್ತ್ವದ ನಿಶ್ಚಯವು ಇಲ್ಲದಿದ್ದರೆ, ಘಟತ್ವವತ್ತ್ವೇ = ಘಟತ್ವವತ್ತ್ವದ ವಿಷಯದಲ್ಲಿ, ಸಂದೇಹಃ = ಸಂಶಯವು, ಸ್ಯಾತ್ = ಉಂಟಾದೀತು, ಸಂದೇಹಾತ್ = ಘಟತ್ವವತ್ತ್ವದ ಸಂಶಯದಿಂದಲೇ, ಚ್ಯುತೇಶ್ಚ ಉಕ್ತೌ = ಘಟತ್ವವತ್ತ್ವದ ನಿಶ್ಚಯದ ಅಭಾವವನ್ನು ಹೇಳುವುದಿದ್ದರೆ, ದೋಷಂ = ಅನ್ಯೋನ್ಯಾಶ್ರಯ ದೋಷವನ್ನು, ಕಿಂ ನಾನುಪಶ್ಯಸಿ = ನೀನು ಗಮನಿಸುವುದಿಲ್ಲವೇನು?

**ಅನುವಾದ—** ವ್ಯವಸಾಯದಲ್ಲಿ ತೋರುವ ಘಟತ್ವವತ್ತ್ವದ ವಿಷಯದಲ್ಲಿ ಸಂದೇಹವಿರುವುದರಿಂದ ವ್ಯವಸಾಯವು ಘಟತ್ವವತ್ತ್ವವನ್ನು ನಿಶ್ಚಯಿಸುವುದಿಲ್ಲ ಎಂದು ಹೇಳಿ ಘಟತ್ವವತ್ತ್ವನಿಶ್ಚಯವಿಲ್ಲದಿರುವ ಕಾರಣ ಘಟತ್ವವತ್ತ್ವವಿಷಯದಲ್ಲಿ ಸಂಶಯವು ಉಂಟಾಗುತ್ತದೆ ಎಂದು ಹೇಳಿದರೆ ಅನ್ಯೋನ್ಯಾಶ್ರಯ ಉಂಟಾಗುತ್ತದೆ. ಘಟತ್ವವತ್ತ್ವನಿಶ್ಚಯವಿಲ್ಲದಿದ್ದರೆ ಸಂಶಯ. ಸಂಶಯವಿಲ್ಲದಿದ್ದರೆ ಘಟತ್ವವತ್ತ್ವನಿಶ್ಚಯ ಎಂದು ಅನ್ಯೋನ್ಯಾಶ್ರಯವು ಬರುತ್ತದೆ.

**ಭಾವವಿಲಾಸಿನೀ**—ತದನಂಗೀಕಾರೇ ಪ್ರಾಗುಕ್ತಾನ್ಯೋನ್ಯಾಶ್ರಯದೋಷಂ ಸ್ಮಾರಯತಿ – **ಘಟತ್ವವತ್ತ್ವ** ಇತಿ ॥ ಘಟತ್ವವತ್ತ್ವೇ ಪ್ರಾಮಾಣ್ಯಶರೀರಪ್ರವಿಷ್ಟಘಟತ್ವವತ್ತ್ವೇ ಸಂದೇಹಃ ಪ್ರಾಮಾಣ್ಯಸಂಶಯ ಇತಿ ಯಾವತ್ । ತನ್ನಿಶ್ಚಯವಿಚ್ಯುತೌ ತಸ್ಯ ಘಟತ್ವವತ್ತ್ವಸ್ಯ ಯೋ ನಿಶ್ಚಯಃ ಪೂರ್ವವ್ಯವಸಾಯರೂಪಸ್ತಸ್ಯ ವಿಚ್ಯುತೌ ತಿರಸ್ಕಾರೇ ಸತಿ ಸ್ಯಾದಿತಿ ಸಂಬಂಧಃ । ಸಂದೇಹಾತ್ಪ್ರಾಮಾಣ್ಯಸನ್ದೇಹಾತ್ ತಚ್ಯುತೇರ್ವ್ಯವಸಾಯರೂಪನಿಶ್ಚಯಚ್ಯುತೇರ್ದೋಷ-ಮನ್ಯೋನ್ಯಾಶ್ರಯಮ್ । ಪ್ರಾಮಾಣ್ಯಸಂಶಯಬಲಾದೇವ ಹಿ ಘಟತ್ವವತ್ತ್ವನಿಶ್ಚಯರೂಪ-ವ್ಯವಸಾಯತಿರಸ್ಕಾರಃ । ಸತಿ ಚ ತಸ್ಮಿನ್ ಸಂಶಯವಿರೋಧಿನಿಶ್ಚಯಾಭಾವಾತ್ ಪ್ರಾಮಾಣ್ಯ-ಶರೀರನಿವಿಷ್ಟಘಟತ್ವವತ್ತ್ವಸಂದೇಹರೂಪ ಪ್ರಾಮಾಣ್ಯಸಂಶಯ ಇತ್ಯನ್ಯೋನ್ಯಾಶ್ರಯ ಇತಿ ಭಾವಃ ॥ ೩೯೫ ॥

**ವಿವರಣೆ**— ಚಾಕ್ಷುಷಜ್ಞಾನದಾರ್ಢ್ಯದ ಬಲದಿಂದಲೇ ಸಂಶಯವು ವಿನಾಶವನ್ನು ಹೊಂದುತ್ತದೆ ಎಂದು ಅಂಗೀಕರಿಸದಿದ್ದರೆ ಮೊದಲು ಹೇಳಿದ ಅನ್ಯೋನ್ಯಾಶ್ರಯದೋಷವನ್ನು ಇನ್ನೊಮ್ಮೆ ಜ್ಞಾಪಿಸುತ್ತಾರೆ. 'ಘಟತ್ವವತ್ತ್ವೇ' ಎಂದರೆ ಪ್ರಾಮಾಣ್ಯ ಶರೀರದಲ್ಲಿ ಸೇರಿದ ಘಟತ್ವವತ್ತ್ವದ ವಿಷಯದಲ್ಲಿ ಸಂದೇಹ ಎಂದರೆ ಪ್ರಾಮಾಣ್ಯಸಂಶಯ ಎಂದು ಅರ್ಥ. 'ತನ್ನಿಶ್ಚಯವಿಚ್ಯುತೌ' ಎಂದರೆ ಘಟತ್ವವತ್ತ್ವನಿಶ್ಚಯರೂಪವಾದ ಮೊದಲು ಉತ್ಪನ್ನವಾದ ವ್ಯವಸಾಯವನ್ನು ತಿರಸ್ಕರಿಸಿದರೆ ಎಂದು ಅರ್ಥ. ಉತ್ತರಾರ್ಧದ 'ಸಂದೇಹಾತ್' ಎಂಬ ಶಬ್ದಕ್ಕೆ ಪ್ರಾಮಾಣ್ಯ-ಸಂದೇಹದಿಂದ ಎಂದು ಅರ್ಥ. 'ತಚ್ಯುತೇಃ' ಎಂದರೆ ವ್ಯವಸಾಯರೂಪನಿಶ್ಚಯವನ್ನು ಅಂಗೀಕಾರ ಮಾಡಿದರೆ ಎಂದು ಅರ್ಥ. 'ದೋಷ' ಎಂದರೆ ಅನ್ಯೋನ್ಯಾಶ್ರಯ ಎಂದು ಅರ್ಥ. ಪ್ರಾಮಾಣ್ಯಸಂಶಯವು ಉಂಟಾಗುತ್ತದೆ ಎಂಬ ಕಾರಣದಿಂದಲೇ ಘಟತ್ವವತ್ತ್ವನಿಶ್ಚಯರೂಪತ್ವವನ್ನು ನೀನು ವ್ಯವಸಾಯಕ್ಕೆ ಅಂಗೀಕರಿಸುವುದಿಲ್ಲ. ವ್ಯವಸಾಯಕ್ಕೆ ಘಟತ್ವವತ್ತ್ವನಿಶ್ಚಯರೂಪತ್ವವಿಲ್ಲದಿದ್ದರೆ ಸಂಶಯ ವಿರೋಧಿಯಾದ ಘಟತ್ವವತ್ತ್ವನಿಶ್ಚಯವಿಲ್ಲದಿರುವ ಕಾರಣದಿಂದ ಪ್ರಾಮಾಣ್ಯಶರೀರದಲ್ಲಿ ಪ್ರವಿಷ್ಟವಾದ ಘಟತ್ವವತ್ತ್ವದಲ್ಲಿ ಸಂಶಯವುಂಟಾಗುತ್ತದೆ ಎಂದು ಅನ್ಯೋನ್ಯಾಶ್ರಯವು ಬರುತ್ತದೆ.

**ಕಿಂ ಪ್ರತ್ಯಕ್ಷಮಮಾನಂ ತೇ ಕಿಂ ವಾ ದುರ್ಬಲಮನ್ಯತಃ ।**
**ಸಾಭಾಸತ್ವಂ ದ್ವಯೋಶ್ಚಾಸ್ತಿ ಮಾನತ್ವಂ ಚೋಭಯೋಃ ಸಮಮ್ ॥ ೩೯೬ ॥**

**ಅರ್ಥ**— ತೇ = ನಿನಗೆ, ಪ್ರತ್ಯಕ್ಷಂ = ಪ್ರತ್ಯಕ್ಷವು, ಅಮಾನಂ ಕಿಂ = ಅಪ್ರಮಾಣವೇನು?, ಕಿಂವಾ = ಅಥವಾ, ಅನ್ಯತಃ = ಅನುಮಾನಾದಿಗಳಿಗಿಂತ, ದುರ್ಬಲಂ ಕಿಂ = ದುರ್ಬಲವೇನು?, ದ್ವಯೋಃ = ಪ್ರತ್ಯಕ್ಷ ಮತ್ತು ಅನುಮಾನ ಇವೆರಡಕ್ಕೂ, ಸಾಭಾಸತ್ವಂ = ಅಲ್ಲಲ್ಲಿ ದೋಷಗಳಿರುವುದು, ಅಸ್ತಿ = ಕಂಡುಬಂದಿದೆ, ಉಭಯೋಃ = ಇವೆರಡಕ್ಕೂ, ಮಾನತ್ವಂ ಚ = ಪ್ರಾಮಾಣ್ಯವೂ ಸಹ, ಸಮಮ್ = ಸಮಾನವಾಗಿದೆ.

**ಅನುವಾದ–** ಹೀಗೆ ಪ್ರತ್ಯಕ್ಷಕ್ಕೂ ಮತ್ತು ಅನುಮಾನಕ್ಕೂ ವೈಷಮ್ಯವನ್ನು ಇಲ್ಲಿ ಮಾಡುವುದಕ್ಕೆ ಏನು ಕಾರಣ. ಪ್ರತ್ಯಕ್ಷವು ಅಪ್ರಾಮಾಣವೆಂತಲೇ ?ಅಥವಾ ಪ್ರಮಾಣವಾದರೂ ಅನುಮಾನಕ್ಕಿಂತ ದುರ್ಬಲ ಎಂಬ ಕಾರಣದಿಂದಲೇ? ಎರಡು ಪಕ್ಷಗಳೂ ಸರಿಯಲ್ಲ. ಕೆಲವು ಪ್ರತ್ಯಕ್ಷಗಳು ಭ್ರಾಂತಿ ಅಥವಾ ಭ್ರಮಾರೂಪವಾದುದರಿಂದ ಪ್ರತ್ಯಕ್ಷವು ಅಪ್ರಮಾಣ ಎಂದು ಹೇಳುವುದಾದರೆ ಕೆಲವು ಅನುಮಾನಗಳು ಭ್ರಮರೂಪವಾದುದರಿಂದ ಅನುಮಾನವೂ ಅಪ್ರಮಾಣವೆಂದು ಹೇಳಬೇಕಾಗುತ್ತದೆ. ಆದರೆ ದುಷ್ಟಹೇತುವಿನ ಪರಾಮರ್ಶದಿಂದ ಜನ್ಯವಾದ ಅನುಮಾನವು ಅಪ್ರಮಾಣವಾದರೂ ಸದ್ಧೇತುವಿನ ಪರಾಮರ್ಶದಿಂದ ಜನ್ಯವಾದ ಅನುಮಾನಸಾಮಾನ್ಯವು ಪ್ರಮಾಣವೆಂದು ನೀನು ಹೇಳುವುದಾದರೆ ದುಷ್ಟೇಂದ್ರಿಯಜನ್ಯವಾದ ಪ್ರತ್ಯಕ್ಷವು ಅಪ್ರಮಾಣವಾದರೂ, ನಿರ್ದುಷ್ಟೇಂದ್ರಿಯ ಜನ್ಯವಾದ ಪ್ರತ್ಯಕ್ಷವು ಪ್ರಮಾಣವೆಂದು ಹೇಳುವುದಕ್ಕೆ ಏನೂ ಆಕ್ಷೇಪವಿರುವುದಿಲ್ಲ.

**ಭಾವವಿಲಾಸಿನೀ–**ಅನುಮಿತ್ಯನುವ್ಯವಸಾಯಸ್ಯ ಪ್ರಾಮಾಣ್ಯಸತ್ತಾನಿಶ್ಚಯರೂಪತ್ವೇ ಪ್ರತ್ಯಕ್ಷಾನುವ್ಯವಸಾಯಸ್ಯಾಪಿ ತನ್ನಿಶ್ಚಾಯಕತ್ವಂ ಸ್ಯಾದೇವ । ಅವಿಶೇಷಾದಿತ್ಯಾಹ – **ಕಿಂ ಪ್ರತ್ಯಕ್ಷಮಿತಿ ॥** ತೇ ಮತೇ ಪ್ರತ್ಯಕ್ಷಮಮಾನಂ ಕಿಮ್? ಅನ್ಯತೋಽನುಮಾನಾದೇರ್ದುರ್ಬಲಂ ಕಿಂ ವೇತ್ಯಾಕ್ಷೇಪಃ । ದ್ವಯೋಃ ಪ್ರತ್ಯಕ್ಷಾನುಮಾನಯೋಸ್ಸಾಭಾಸತ್ವಂ ಕ್ವಚಿದಾಭಾಸಪ್ರತ್ಯಕ್ಷಾನುಮಾನ-ಸಹಿತತ್ವಂ ಮಾನತ್ವಂ ಸದೋಷಸ್ಯಾಭಾಸತ್ವೇಽಪಿ ನಿರ್ದೋಷಸ್ಯ ಮಾನತ್ವಂ ಚ ಉಭಯೋಃ ಸಮಮ್ । ನಚ ವಾಚ್ಯಮ್ ಅನುಮಿತ್ಯಾ ಸಾಕ್ಷಾತ್ಪ್ರಾಮಾಣ್ಯಮೇವೋಪಸ್ಥಾಪ್ಯತೇ । ಅಕ್ಷಜವ್ಯವಸಾಯೇನ ತು ನೇತಿ । ಅತಃ ಕಥಮವಿಶೇಷ ಇತಿ । ಪ್ರಕಾರಿತ್ವವಿಶೇಷ್ಯಕತ್ವಜ್ಞಾನಿತ್ವಾನಾಂ ಸಾಕ್ಷಾಜ್ಜ್ಞಾನಧರ್ಮಾಣಾಮುಪಸ್ಥಾಪಕಾಂತರಾನಪೇಕ್ಷಣೇನ ಪ್ರಾಮಾಣ್ಯೋಪಸ್ಥಾಪನಸ್ಯಾಪಿ ಜಲನಿಷ್ಠಜಲತ್ವವತ್ತ್ವಮಾತ್ರೋಪಸ್ಥಾಪನೇ ಪರ್ಯವಸಾನೇನಾಕ್ಷಜವ್ಯವಸಾಯಾದವಿಶೇಷಾತ್ ॥ ೩೯೬ ॥

**ವಿವರಣೆ–** ಅನುಮಿತಿಯ ಅನುವ್ಯವಸಾಯವು, ಅನುಮಿತಿಯ ಪ್ರಾಮಾಣ್ಯವನ್ನು ಮತ್ತು ಅನುಮಿತಿಯ ವಿಷಯವಾದ ಜ್ಞಾನದ ಅರ್ಥಸತ್ತಾನಿಶ್ಚಯವನ್ನು ಮಾಡುತ್ತದೆ ಎಂದು ಹೇಳಿದರೆ ಪ್ರತ್ಯಕ್ಷದ ಅನುವ್ಯವಸಾಯಕ್ಕೂ ಸಹ ಅರ್ಥಸತ್ತಾನಿಶ್ಚಾಯಕತ್ವವನ್ನು ಹೇಳಬೇಕು. ಏಕೆಂದರೆ ಇವೆರಡಕ್ಕೂ ಯಾವ ವ್ಯತ್ಯಾಸವೂ ಇಲ್ಲವೆಂದು 'ಕಿಂ ಪ್ರತ್ಯಕ್ಷಂ' ಎಂಬ ಶ್ಲೋಕದಿಂದ ಹೇಳುತ್ತಾರೆ. ನಿನ್ನ ಮತದಲ್ಲಿ ಪ್ರತ್ಯಕ್ಷವೇ ಅಪ್ರಮಾಣವೇ? ಅಥವಾ 'ಅನ್ಯತಃ' ಎಂದರೆ ಬೇರೆ ಅನುಮಾನಾದಿಗಳಿಗಿಂತ ದುರ್ಬಲವೇ ಎಂದು ಆಕ್ಷೇಪ. 'ದ್ವಯೋಃ' ಎಂದರೆ ಪ್ರತ್ಯಕ್ಷ ಮತ್ತು ಅನುಮಾನಗಳೆರಡಕ್ಕೂ, 'ಸಾಭಾಸತ್ವಂ' ಎಂದರೆ ಕೆಲವು ಕಡೆಗಳಲ್ಲಿ ದುಷ್ಟತ್ವವು ಇಬ್ಬರಿಗೂ ಸಮ್ಮತ ಎಂದು ಅಂಗೀಕರಿಸಬೇಕು. ದುಷ್ಟವಾದುದು ಅಪ್ರಮಾಣವಾದರೂ ನಿರ್ದುಷ್ಟವಾದುದು ಪ್ರಮಾಣ ಎಂಬುದೂ

ಕೂಡ ಇಬ್ಬರಿಗೂ ಸಮಾನವಾದ ವಿಷಯ. ಅನುಮಿತಿಯಾದರೂ ಪ್ರಾಮಾಣ್ಯವನ್ನು ಸಾಕ್ಷಾತ್ತಾಗಿ ವಿಷಯೀಕರಿಸುತ್ತದೆ. ಅಕ್ಷಜ ವ್ಯವಸಾಯವು ವಿಷಯೀಕರಿಸುವುದಿಲ್ಲ ಎಂಬ ವೈಷಮ್ಯವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಎರಡು ಕಡೆಯ ಅನುವ್ಯವಸಾಯ ಗಳಲ್ಲಿಯೂ ಪ್ರಕಾರತಾ ನಿರೂಪಕತ್ವ, ವಿಶೇಷ್ಯತಾ- ನಿರೂಪಕತ್ವ, ಜ್ಞಾನತ್ವ ಮೊದಲಾದ ಜ್ಞಾನಧರ್ಮಗಳು ಬೇರೆ ಉಪಸ್ಥಾಪಕವಿಲ್ಲದೇ ಕೇವಲ ಜ್ಞಾನದಿಂದಲೇ ಉಪಸ್ಥಾಪಿತವಾಗಿ ತೋರುತ್ತವೆ. ಆದ್ದರಿಂದ ಪ್ರತ್ಯಕ್ಷಸ್ಥಳದಲ್ಲಿಯೂ ವ್ಯವಸಾಯದಿಂದ ಇಷ್ಟು ವಿಷಯಗಳು ಉಪನೀತವಾಗುತ್ತವೆಂದು ಅಂಗೀಕರಿಸಬೇಕು. ಇಷ್ಟು ವಿಷಯಗಳು ಉಪನೀತವಾದಾಗ ಜ್ಞಾನದ ಇನ್ನೊಂದು ಧರ್ಮವಾದ ಪ್ರಾಮಾಣ್ಯವು ಅದು ಪುರೋವರ್ತಿಯಲ್ಲಿ ಜಲತ್ವವತ್ತ್ವ ರೂಪವಾದುದು - ಅದೊಂದು ಧರ್ಮಮಾತ್ರ ಏಕೆ ವ್ಯವಸಾಯದಿಂದ ಉಪಸ್ಥಾಪಿತವಾಗುವುದಿಲ್ಲ, ಅನುಮಿತಿಯಲ್ಲಿ ಉಪಸ್ಥಾಪಿತವಾಗುತ್ತದೆ ಎಂದು ಹೇಳುತ್ತೀರಿ. ಪ್ರತ್ಯಕ್ಷಸ್ಥಳದಲ್ಲಿ ಉಪಸ್ಥಾಪಿತವಾಗದೇ ಇರುವುದಕ್ಕೆ ಏನೂ ಕಾರಣವಿಲ್ಲ.

ಪ್ರಬಲಾಕ್ಷೋಪನೀತೇಽರ್ಥೇ ನಿರ್ಣಯೋ ಯದಿ ನೇಷ್ಯತೇ ।
ದುರ್ಬಲಾನುಮಯಾಽನೀತೇ ವಿಶ್ವಾಸೋ ನತರಾಂ ತದಾ ॥ ೩೯೭ ॥

**ಅರ್ಥ–** ಪ್ರಬಲಾಕ್ಷೋಪನೀತೇ = ಪ್ರಬಲವಾದ ಪ್ರತ್ಯಕ್ಷದಿಂದ ಉಪನೀತವಾದ, ಅರ್ಥೇ = ವಿಷಯದಲ್ಲಿ, ಯದಿ = ಒಂದುಪಕ್ಷ, ನಿರ್ಣಯಃ = ನಿಶ್ಚಯವು, ನೇಷ್ಯತೇ = ಸ್ವೀಕರಿಸಲ್ಪಡದಿದ್ದರೆ, ತದಾ = ಆಗ, ದುರ್ಬಲಾನುಮಯಾ = ದುರ್ಬಲವಾದ ಅನುಮಾನದಿಂದ, ಆನೀತೆ = ಉಪನೀತವಾದವರಲ್ಲಿ, ವಿಶ್ವಾಸಃ = ವಿಶ್ವಾಸವು, ನತರಾಂ = ಇರಲು ಸಾಧ್ಯವೇ ಇಲ್ಲ.

**ಅನುವಾದ–** ಪ್ರತ್ಯಕ್ಷ ಮತ್ತು ಅನುಮಾನಗಳಲ್ಲಿ ಪ್ರತ್ಯಕ್ಷವು ಪ್ರಬಲ ಮತ್ತು ಅನುಮಾನವು ದುರ್ಬಲ. ಪ್ರಬಲವಾದ ಪ್ರತ್ಯಕ್ಷದಿಂದ ಉಪನೀತವಾದ ಪ್ರಾಮಾಣ್ಯವನ್ನು ಅಂಗೀಕರಿಸದೇ ಇದ್ದ ಪಕ್ಷದಲ್ಲಿ ಅನುಮಿತಿಯ ಸ್ಥಳದಲ್ಲಿ ದುರ್ಬಲವಾದ ಅನುಮಾನದಿಂದ ಉಪನೀತವಾದ ಪ್ರಾಮಾಣ್ಯವನ್ನು ಯಾವ ವಿಶ್ವಾಸದಿಂದ ಅಂಗೀಕರಿಸುತ್ತೀರಿ.

**ಭಾವವಿಲಾಸಿನೀ–**ಕಿಂಚ ಪ್ರತ್ಯಕ್ಷಾನುಮಾನಯೋಸ್ಸಾಮ್ಯಮಂಗೀಕೃತ್ಯೋಕ್ತಮ್ । ವಸ್ತುತಸ್ತು ಪ್ರಬಲಪ್ರತ್ಯಕ್ಷೋಪನೀತೇಽರ್ಥಸತ್ತಾನಿಶ್ಚಯಾಭಾವೇ ದುರ್ಬಲಾನುಮಯೋಪನೀತೇ ಸುತರಾಂ ಸ ನ ಸ್ಯಾದಿತ್ಯಾಹ –**ಪ್ರಬಲೇತಿ** ॥ ಆನೀತೇ ಉಪನೀತೇ ನತರಾಮತಿಶಯೇನ ನೇತ್ಯರ್ಥಃ ॥ ೩೯೭ ॥

**ವಿವರಣೆ–** ನಾವು ಇದುವರೆಗೆ ಪ್ರತ್ಯಕ್ಷ ಮತ್ತು ಅನುಮಾನಗಳಿಗೆ ಸಾಮ್ಯವನ್ನು ಅಂಗೀಕರಿಸಿ ವಿಮರ್ಶೆ ಮಾಡಿದೆವು. ಆದರೆ ನಿಜವಾದ ಸಾಮ್ಯವಿಲ್ಲ. ಪ್ರತ್ಯಕ್ಷವು ಪ್ರಬಲ

ಮತ್ತು ಅನುಮಾನವು ದುರ್ಬಲ. ಪ್ರಬಲ ಪ್ರತ್ಯಕ್ಷದಿಂದ ಉಪನೀತವಾದ ಅರ್ಥಸತ್ತ್ವವನ್ನು ನಿಶ್ಚಯಿಸದೇ ಇರುವುದಾದರೆ ದುರ್ಬಲವಾದ ಅನುಮಾನದಿಂದ ಉಪನೀತವಾದ ಅರ್ಥಸತ್ತ್ವವನ್ನು ಖಂಡಿತವಾಗಿ ಅಂಗೀಕರಿಸಬಾರದು ಎಂದು ಪ್ರಬಲ ಎಂದು ಶುರುವಾಗುವ ಶ್ಲೋಕದಲ್ಲಿ ಹೇಳುತ್ತಾರೆ. 'ಆನೀತೆ' ಎಂದರೆ ಉಪನೀತವಾದ ಎಂದು ಅರ್ಥ. 'ನ ತರಾಂ' ಎಂದರೆ ಯಾವ ಕಾರಣಕ್ಕೂ ಅಂಗೀಕರಿಸಬಾರದು ಎಂದು ಅರ್ಥ.

**ಜ್ಞಾತಸ್ಯೈವ ಪುನರ್ಜ್ಞಾನೇ ಪ್ರಾಮಾಣ್ಯಂ ಗೃಹ್ಯತೇ ಕಿಲ ।**
**ತಾದೃಶ್ಯಾದ್ಯೇ ದೃಢಜ್ಞಾನೇ ಕುತೋ ವಾ ತನ್ನ ಗೃಹ್ಯತೇ ॥ ೩೯೮ ॥**

**ಅರ್ಥ–** ಜ್ಞಾತಸ್ಯೈವ = ಮೊದಲು ಜ್ಞಾತವಾದ ವಸ್ತುವಿನ, ಪುನರ್ಜ್ಞಾನೇ = ಮತ್ತೆ ಹುಟ್ಟುವ ಎರಡನೆಯ ಜ್ಞಾನದಲ್ಲಿ, ಪ್ರಾಮಾಣ್ಯಂ = ಪ್ರಾಮಾಣ್ಯವು, ಗೃಹ್ಯತೇ ಕಿಲ = ಗ್ರಹಿಸಲ್ಪಡುತ್ತದೆ. ತಾದೃಶಿ = ಅಂತಹ, ಆದ್ಯೇ = ಮೊದಲನೆಯ, ದೃಢಜ್ಞಾನೇ = ದೃಢವಾದ ವ್ಯವಸಾಯಾತ್ಮಕ ಜ್ಞಾನದಲ್ಲಿ, ತತ್ = ಪ್ರಾಮಾಣ್ಯವು, ಕುತೋ ವಾ = ಯಾವ ಕಾರಣದಿಂದ, ಗೃಹ್ಯತೇ = ಗ್ರಹಿಸಲ್ಪಡುವುದಿಲ್ಲ?

**ಅನುವಾದ–** ಒಂದು ವಸ್ತುವಿನ ಜ್ಞಾನ ಬಂದು ಪುನಃ ಎರಡನೆಯ ಬಾರಿ ಅದೇ ವಸ್ತುವಿನ ಜ್ಞಾನ ಬಂದಾಗ ಆ ಎರಡನೆಯ ಜ್ಞಾನದ ಅನುವ್ಯವಸಾಯದಲ್ಲಿ ಎರಡನೇ ಜ್ಞಾನದ ಪ್ರಾಮಾಣ್ಯವು ವಿಷಯೀಕರಿಸಲ್ಪಡುತ್ತದೆ ಎಂದು ಒಪ್ಪುತ್ತೀರಿ. ಹೀಗಿರುವಾಗ ಎರಡನೆಯ ಜ್ಞಾನಕ್ಕಿಂತ ಯಾವ ರೀತಿಯಲ್ಲೂ ವ್ಯತ್ಯಾಸವಿಲ್ಲದಿರುವ ಮೊದಲನೆಯ ಜ್ಞಾನದ ಪ್ರಾಮಾಣ್ಯವನ್ನು ಮೊದಲನೆಯ ಜ್ಞಾನದ ಅನುವ್ಯವಸಾಯವು ಏಕೆ ವಿಷಯೀಕರಿಸುವುದಿಲ್ಲ?

**ಭಾವವಿಲಾಸಿನೀ–**ಕಿಂಚ ದ್ವಿತೀಯವ್ಯವಸಾಯಾನುವ್ಯವಸಾಯೇ ಪ್ರಾಮಾಣ್ಯಸ್ಯ ನಿಶ್ಚಯೇ ಪ್ರಥಮವ್ಯವಸಾಯಾನುವ್ಯವಸಾಯೇ ಕುತೋ ನ ನಿಶ್ಚೀಯತೇ? ಉಭಯೋರಪಿ ವ್ಯವಸಾಯಯೋರ್ಮಾತ್ರಯಾಪಿ ವಿಶೇಷಾಭಾವಾದಿತ್ಯಾಹ – **ಜ್ಞಾತಸ್ಯೈವೇತಿ** ॥ ಜ್ಞಾತಸ್ಯೇತ್ಯುಪಲಕ್ಷಣಮ್ । ಅನುವ್ಯವಸಿತಸ್ಯೇತ್ಯಪಿ ಗ್ರಾಹ್ಯಮ್ । ಪುನರ್ಜ್ಞಾನೇ ಅನುವ್ಯವಸಾಯೇ ಚ ಸತೀತ್ಯಪಿ ಗ್ರಾಹ್ಯಮ್ । ತಾದೃಶಿ ದ್ವಿತೀಯಜ್ಞಾನಸದೃಶೇ ॥ ೩೯೮ ॥

**ವಿವರಣೆ–** ಅದೂ ಅಲ್ಲದೇ ಎರಡನೆಯ ಜ್ಞಾನದ ಅನುವ್ಯವಸಾಯದಲ್ಲಿ ಪ್ರಾಮಾಣ್ಯವು ನಿಶ್ಚಿತವಾಗುವುದಾದರೆ ಮೊದಲನೆಯ ಜ್ಞಾನದ ಅನುವ್ಯವಸಾಯದಲ್ಲಿ ಏಕೆ ಪ್ರಾಮಾಣ್ಯವು ನಿಶ್ಚಿತವಾಗುವುದಿಲ್ಲ? ಈ ಎರಡು ಜ್ಞಾನಗಳಿಗೂ ಒಂದು ಕೂದಲೆಳೆಯಷ್ಟೂ ವ್ಯತ್ಯಾಸವಿಲ್ಲವಷ್ಟೇ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಶ್ಲೋಕದಲ್ಲಿರುವ 'ಜ್ಞಾತಸ್ಯ' ಎಂಬುದು ಉಪಲಕ್ಷಣ. ಅದರ ಜೊತೆಗೆ ಅನುವ್ಯವಸಿತ ಎಂತಲೂ ಇಟ್ಟುಕೊಳ್ಳಬೇಕು. ಪುನರ್ಜ್ಞಾನೇ ಎಂಬಲ್ಲಿಯೂ ಕೂಡ ಜ್ಞಾನವು ಬಂದು

ಅನುವ್ಯವಸಾಯವೂ ಬಂದಾಗ ಎಂದು ಅರ್ಥವನ್ನು ಇಟ್ಟುಕೊಳ್ಳಬೇಕು. 'ತಾದೃಶಿ' ಎಂದರೆ ಎರಡನೇ ಜ್ಞಾನಕ್ಕೆ ಸದೃಶವಾದ ಮೊದಲನೆಯ ಜ್ಞಾನದಲ್ಲಿ ಎಂದು ಅರ್ಥ.

**ಪರತಸ್ತ್ವಸ್ಯ ರಕ್ಷಾರ್ಥಂ ಯದ್ಯೇಷ ನಿಯಮಸ್ತವ ।**
**ಸ್ವತಸ್ತ್ವಪರಿರಕ್ಷಾರ್ಥಂ ಯುಕ್ತಿಯುಕ್ತೋ ಮಮಾಪ್ಯಯಮ್ ॥ ೩೯ ॥**

**ಅರ್ಥ**– ತವ = ನಿನಗೆ, ಯದಿ = ಒಂದುಪಕ್ಷ, ಪರತಸ್ತ್ವಸ್ಯ = ಪ್ರಾಮಾಣ್ಯಪರತಸ್ತ್ವದ, ರಕ್ಷಾರ್ಥಂ = ರಕ್ಷಣೆಗೋಸ್ಕರವಾಗಿ, ಏಷನಿಯಮಃ = ಈ ನಿಯಮವು ಇರುವುದಾದರೆ, ಮಮಾಽಪಿ = ನನಗೂಸಹ, ಸ್ವತಸ್ತ್ವಪರಿರಕ್ಷಾರ್ಥಂ = ಪ್ರಾಮಾಣ್ಯಸ್ವತಸ್ತ್ವದ ರಕ್ಷಣೆಗೋಸ್ಕರವಾಗಿ, ಯುಕ್ತಿಯುಕ್ತಃ = ಯುಕ್ತಿಯುಕ್ತವಾದಂತಹ, ಅಯಂ = ಈ ನಿಯಮವು ಇದ್ದೇಇದೆ.

**ಅನುವಾದ**– ಪ್ರಾಮಾಣ್ಯಕ್ಕೆ ಪರತತ್ವವನ್ನು ರಕ್ಷಣೆಮಾಡುವುದಕ್ಕೋಸ್ಕರ ನೀನು ನಿನ್ನ ನಿಯಮವನ್ನು ಅಂಗೀಕರಿಸುವುದಾದರೆ ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ರಕ್ಷಣೆಮಾಡುವುದಕ್ಕೋಸ್ಕರ ಯುಕ್ತಿಯುಕ್ತವಾದ ನನ್ನ ನಿಯಮವನ್ನು ಅಂಗೀಕರಿಸು.

**ಭಾವವಿಲಾಸಿನೀ**–ನನು ತಜ್ಜ್ಞಾನವಿಷಯಕಜ್ಞಾನಾಜನ್ಯಜ್ಞಾನಗ್ರಾಹ್ಯತ್ವಾಭಾವಃ ಪರತಸ್ತ್ವಮ್ । ಪ್ರಥಮಾನುವ್ಯವಸಾಯೇನ ಚ ಪ್ರಾಮಾಣ್ಯಗ್ರಹಣೇತಜ್ಜ್ಞಾನವಿಷಯಕಂ ಜ್ಞಾನಂ ಪ್ರಥಮಾನುವ್ಯವಸಾಯ ಏವ ತದಜನ್ಯಂ ಜ್ಞಾನಂ ತದೇವ ತೇನ ಚ ಪ್ರಾಮಾಣ್ಯಗ್ರಹಣೇ ಮದಭಿಮತಪರತಸ್ತ್ವಭಂಗಃ ಸ್ಯಾತ್ । ತಸ್ಯ ರಕ್ಷಾರ್ಥಂ ಪ್ರಥಮಾನುವ್ಯವಸಾಯೇನ ಪ್ರಾಮಾಣ್ಯಾಗ್ರಹಣನಿಯಮೋಽಂಗೀಕ್ರಿಯತ ಇತಿ ಶಂಕಾಮನೂದ್ಯ ದೂಷಯತಿ – **ಪರತಸ್ತ್ವಸ್ಯೇತಿ** ॥ ತರ್ಹಿ ಸ್ವತಸ್ತ್ವಪರಿರಕ್ಷಾರ್ಥಂ ತಜ್ಜ್ಞಾನವಿಷಯಕಜ್ಞಾನಾಜನ್ಯಜ್ಞಾನ-ಗ್ರಾಹ್ಯತ್ವಲಕ್ಷಣಸ್ವತಸ್ತ್ವಸ್ಯ ಪರಿರಕ್ಷಾರ್ಥಂ ಯುಕ್ತಿಯುಕ್ತಃ ಪೂರ್ವೋಕ್ತಯುಕ್ತಿಯುಕ್ತಃ ಅಯಂ ಪ್ರಥಮಾನುವ್ಯವಸಾಯೇನ ಪ್ರಾಮಾಣ್ಯಗ್ರಹಣನಿಯಮಃ । ಪ್ರಥಮಾನುವ್ಯವಸಾಯೇ ವ್ಯವಸಾಯೋಪನೀತತ್ವಾದ್ ಘಟತ್ವವತ್ತ್ವಂ ನ ನಿಶ್ಚೀಯತೇ । ದ್ವಿತೀಯಾನುವ್ಯವಸಾಯೇ ತು ಪೂರ್ವಾನುವ್ಯವಸಾಯೇನೈವೋಪನೀತತ್ವಾದ್ಘಟತ್ವವತ್ತ್ವಸ್ಯಾರ್ಥಸತ್ತಾನಿಶ್ಚಯೋ ಭವತೀತಿ ಕಶ್ಚಿತ್ । ಇದಮತೀವ ಪರಿಹಾಸ್ಯಮ್। ಸಾಕ್ಷಾದ್ಘಟತ್ವವತ್ತ್ವಗ್ರಾಹಿಣಾ ವ್ಯವಸಾಯೇನೋಪನೀತಂ ಘಟತ್ವವತ್ತ್ವಂ ನ ನಿಶ್ಚೀಯತೇ ಕಿಲ ಸಾಕ್ಷಾತ್ತ್ವಾಯೋಗ್ಯಘಟತ್ವವತ್ತ್ವಸ್ಯ ಪೂರ್ವವ್ಯವಸಾಯೋ-ಪಸ್ಥಾಪಿತಸ್ಯ ಗ್ರಾಹಿಣಾಽತ ಏವ ತಸ್ಯಾರ್ಥಸತ್ತಾನಿಶ್ಚಯಮಕುರ್ವತಾ ಪ್ರಥಮಾನು-ವ್ಯವಸಾಯೇನೋಪಸ್ಥಾಪಿತಂ ಘಟತ್ವವತ್ತ್ವಂ ಸಾಕ್ಷಾತ್ತದಗ್ರಾಹಕತಯಾಭಿಮತೇನ ದ್ವಿತೀಯಾ-ನುವ್ಯವಸಾಯೇನಾರ್ಥಸತ್ತಾಘಟಿತತಯಾ ನಿರ್ಣೀಯತೇ ಕಿಲ । ಇದಂಚ ಸಾಕ್ಷಾದರ್ಥಂ ದೃಷ್ಟ್ವಾ ಕೇನಚಿದುಕ್ತೇ ವಾಕ್ಯೇಽನಾಶ್ವಾಸಃ ಕಿಲ ತದ್ವಾಕ್ಯದ್ವಾರಾ ತಮರ್ಥಂ ವದತಃ ಪರಸ್ಯ ಪರಮ್ಪರಾವಾಕ್ಯೇ

ಸುತರಾಂ ವಿಶ್ವಾಸಃ ಕಿಲೇತಿ ಲೌಕಿಕಮಾಭಾಣಕಮನುಕರೋತಿ । (ನಚ ವಾಚ್ಯಂ ಪ್ರಥಮ-ವ್ಯವಸಾಯೇನ ದ್ವಿತೀಯವ್ಯವಸಾಯಸ್ಯ ಸಂವಾದಾದ್ದಾರ್ಢ್ಯಮಿತಿ । ಸಂವಾದಕಸ್ಯ ತಸ್ಯ ದಾರ್ಢ್ಯೇ ಸ್ವಾನುವ್ಯವಸಾಯೇಽಪಿ ಸುದೃಢತಯಾ ಸ್ವಾರ್ಥಮುಪಸ್ಥಾಪಯೇದೇವ । ನೋ ಚೇದಂಧಾನು-ಗಾಂಧವದ್ ದ್ವಿತೀಯಸ್ಯಾಪಿ ಕಸ್ತೇನೋಪಕಾರಃ) (ಪ್ರಕ್ಷಿಪ್ತೋಯಂ ಗ್ರಂಥಃ) ॥ ೩೯ ॥

**ವಿವರಣೆ–** 'ಪರತಸ್ತ್ವ' ಎಂದರೆ 'ತತ್‌ಜ್ಞಾನವಿಷಯಕ ಜ್ಞಾನಾಜನ್ಯ ಜ್ಞಾನಗ್ರಾಹ್ಯತ್ವಾಭಾವ' 'ಇದಂ ಜಲಂ' ಎಂಬುದು ಪ್ರಥಮಜ್ಞಾನ. 'ಇದಂ ಜಲಂ ಇತಿ ಜ್ಞಾನವಾನಹಂ' ಎಂಬುದು ತತ್‌ಜ್ಞಾನವಿಷಯಕ ಜ್ಞಾನ. ಇದೇ ಅನುವ್ಯವಸಾಯ. ತತ್‌ಜ್ಞಾನವಿಷಯಕಜ್ಞಾನ ಅಜನ್ಯವಾದುದು ತಾನೇ. ಅದೇ ಅನುವ್ಯವಸಾಯ. ತನ್ನಿಂದ ತಾನೇ ಜನ್ಯವಾಗುವುದಿಲ್ಲವಷ್ಟೇ. ಆದರಿಂದ ಗ್ರಾಹ್ಯತ್ವಾಭಾವವು 'ಪರತಸ್ತ್ವ' ಆದ್ದರಿಂದ ಜ್ಞಾನವಿಷಯಕ ಜ್ಞಾನದಿಂದ ಪ್ರಾಮಾಣ್ಯವು ಗೃಹೀತವಾಗುವುದಿಲ್ಲ ಎಂಬ ನಮ್ಮ ಪರತಸ್ತ್ವ ಪರಿಷ್ಕಾರವಿರುವುದರಿಂದ ನಾವು ಇಂತಹ ನಿಯಮವನ್ನು ಒಪ್ಪುತ್ತೇವೆ. ಇಂತಹ ನಿಯಮವನ್ನು ಎಂದರೆ ಪ್ರಥಮಾನುವ್ಯವಸಾಯದಿಂದ ಪ್ರಾಮಾಣ್ಯಜ್ಞಾನವಿಲ್ಲ. ದ್ವಿತೀಯಾನುವ್ಯವಸಾಯದಿಂದ ಪ್ರಾಮಾಣ್ಯಜ್ಞಾನವಿದೆಯೆಂದು ಒಪ್ಪುತ್ತೇವೆ ಎಂದು ಹೇಳಿದರೆ. ಅದಕ್ಕೆ ಹೀಗೆ ದೂಷಣವನ್ನು ಹೇಳುತ್ತಾರೆ. ನಾವು ಸ್ವತಸ್ತ್ವ ಎಂದರೆ ತತ್‌ಜ್ಞಾನ ವಿಷಯಕಜ್ಞಾನ ಅಜನ್ಯ ಜ್ಞಾನಗ್ರಾಹ್ಯತ್ವ ಎಂದು ಹೇಳುತ್ತೇವೆ. ಇದನ್ನು ರಕ್ಷಣೆ ಮಾಡುವುದಕ್ಕೋಸ್ಕರ ಮೊದಲು ಹೇಳಿದ ಯುಕ್ತಿಗೆ ಅನುಸಾರವಾಗಿ ಮೊದಲನೆಯ ಅನುವ್ಯವಸಾಯದಿಂದಲೇ ಪ್ರಾಮಾಣ್ಯವು ಗೃಹೀತವಾಗುತ್ತದೆಂದು ಅಂಗೀಕರಿಸು. ಆದರೆ ಮೊದಲನೇ ಅನುವ್ಯವಸಾಯದಲ್ಲಿ ಘಟತ್ವವತ್ತ್ವರೂಪವಾದ ಪ್ರಾಮಾಣ್ಯವು ವ್ಯವಸಾಯದಿಂದ ಉಪನೀತವಾಗುತ್ತದೆ. ಆದ್ದರಿಂದ ಅದು ಗೃಹೀತವಾಗುವುದಿಲ್ಲ. ಎರಡನೆಯ ಅನುವ್ಯವಸಾಯದಲ್ಲಿ ಮಾತ್ರ ಘಟತ್ವವತ್ತ್ವರೂಪವಾದ ಪ್ರಾಮಾಣ್ಯವು ಮೊದಲನೆಯ ಅನುವ್ಯವಸಾಯದಿಂದ ಉಪನೀತವಾಗುತ್ತದೆ. ಆದ್ದರಿಂದ ಅದು ಗೃಹೀತವಾಗುತ್ತದೆ ಎಂದು ಕೆಲವರು ಹೇಳುತ್ತಾರೆ. ಇದು ಅತ್ಯಂತ ಹಾಸ್ಯಾಸ್ಪದವಾದುದು. ಸಾಕ್ಷಾತ್ತಾಗಿ ಘಟತ್ವವತ್ತ್ವವನ್ನು ವಿಷಯೀಕರಿಸಿ ಅದನ್ನು ಚಾಕ್ಷುಷಜ್ಞಾನವು ಉಪನಯನ ಮಾಡಿದಾಗ ಅನುವ್ಯವಸಾಯದಿಂದ ಅದು ನಿಶ್ಚಿತವಾಗುವುದಿಲ್ಲ. ಸಾಕ್ಷಾತ್ ಘಟತ್ವವನ್ನು ವಿಷಯೀಕರಿಸದಿರುವ ಮೊದಲನೆಯ ಅನುವ್ಯವಸಾಯದಿಂದ ಉಪನೀತವಾದ ಘಟತ್ವವತ್ತ್ವವನ್ನು ವಿಷಯೀಕರಿಸುತ್ತದೆ ಎಂದು ಹೇಳಿದರೆ ಇದು ಕಣ್ಣಿನಿಂದ ನೋಡಿ ಹೇಳಿದವನ ಮಾತನ್ನು ನಂಬುವುದಿಲ್ಲ. ಇನ್ನೊಬ್ಬನ ಮಾತನ್ನು ಪರಂಪರೆಯಿಂದ ಕೇಳಿ ಹೇಳಿದವನ ಮಾತನ್ನು ನಂಬುತ್ತೇನೆ ಎಂಬ ಮಾತಿನಂತೆ ಅತ್ಯಂತ ಹಾಸ್ಯಾಸ್ಪದವಾಗುತ್ತದೆ. ಎರಡನೇ ಅನುವ್ಯವಸಾಯಕ್ಕೆ ಮೊದಲನೆಯ ಅನುವ್ಯವಸಾಯದಿಂದ ಸಂವಾದ ಉಂಟಾಗುತ್ತದೆ ಆದ್ದರಿಂದ ಎರಡನೆಯ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಮೊದಲನೆಯ ಅನುವ್ಯವಸಾಯಕ್ಕೆ ಸಂವಾದವಿಲ್ಲದಿರುವುದರಿಂದ ಅದು

ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ ಎಂಬ ಸಮಾಧಾನವೂ ಸರಿಯಲ್ಲ. ಮೊದಲನೆಯ ಅನುವ್ಯವಸಾಯವು ಅರ್ಥವನ್ನು ಸಾಕ್ಷಾತ್ತಾಗಿ ನೋಡದೆಯೂ ದೃಢವಾಗುವುದಾದರೆ, ಅರ್ಥವನ್ನು ಸಾಕ್ಷಾತ್ತಾಗಿ ವಿಷಯೀಕರಿಸುವ ವ್ಯವಸಾಯವು ಏಕೆ ದೃಢವಲ್ಲ? ಆದ್ದರಿಂದ ಅನುವ್ಯವಸಾಯೋಪನೀತನಾದುದಕ್ಕಿಂತಲೂ ವ್ಯವಸಾಯೋಪನೀತವಾದುದೇ ಪ್ರಬಲ ವಾದುದು. ಹಾಗಿಲ್ಲದಿದ್ದರೆ ತಾನು ವಿಷಯೀಕರಿಸದೇ ಅರ್ಥ ಅಸಂಸ್ಪರ್ಶಿಯಾಗಿ ಅನುವಾದರೂಪದಂತಿರುವ ಮೊದಲನೆಯ ಅನುವ್ಯವಸಾಯದಿಂದಲಾದರೂ ಎರಡನೆಯ ಅನುವ್ಯವಸಾಯಕ್ಕೆ ಏನು ಉಪಕಾರ ಉಂಟಾಗುತ್ತದೆ?

**ಕಿಂಚ ಪ್ರವೃತ್ತಿಸಾಮರ್ಥ್ಯಾತ್ಪ್ರಾಮಾಣ್ಯಾನುಮಿತಿಸ್ತವ ।**
**ಪ್ರವೃತ್ತೇಶ್ಚ ಸಮರ್ಥತ್ವಂ ಕೇನ ನಿರ್ಣೀಯತೇ ವದ ॥ ೪೦೦ ॥**

**ಅರ್ಥ—** ಕಿಂಚ = ಅದೂ ಅಲ್ಲದೇ, ತವ = ನಿನಗೆ, ಪ್ರವೃತ್ತಿಸಾಮರ್ಥ್ಯಾತ್ = ಸಫಲಪ್ರವೃತ್ತಿಜನಕತ್ವರೂಪ ಅನುಮಾದಿಂದ, ಪ್ರಾಮಾಣ್ಯಾನುಮಿತಿಃ = ಪ್ರಾಮಾಣ್ಯಾನುಮಿತಿಯು ಉಂಟಾಗುತ್ತದೆ. ಚ = ಆದರೆ, ಪ್ರವೃತ್ತೇಃ = ಪ್ರವೃತ್ತಿಗೆ, ಸಮರ್ಥತ್ವಂ = ಯೋಗ್ಯ ಫಲಜನಕತ್ವವು, ಕೇನ = ಯಾವರೀತಿಯಲ್ಲಿ, ನಿರ್ಣೀಯತೇ = ನಿರ್ಣಯಿಸಲ್ಪಡುತ್ತದೆ ಎಂದು, ವದ = ಹೇಳು.

**ಅನುವಾದ—** ಅದೂ ಅಲ್ಲದೆ ಸಮರ್ಥಪ್ರವೃತ್ತಿಜನಕತ್ವರೂಪಹೇತುವಿನಿಂದ ನೀನು ಪ್ರಾಮಾಣ್ಯವನ್ನು ಅನುಮಾನಮಾಡುತ್ತೀಯಷ್ಟೇ. ಸಮರ್ಥಪ್ರವೃತ್ತಿ-ಜನಕತ್ವರೂಪವಾದ ಹೇತುವನ್ನು ಹೇಗೆ ನಿಶ್ಚಯಮಾಡುತ್ತೀಯೆ ಎಂದು ಹೇಳು.

**ಭಾವವಿಲಾಸಿನೀ—**ಇದಾನೀಂ ಪ್ರಾಮಾಣ್ಯಗ್ರಾಹಕಸಾಕ್ಷಿಣೋಽವಜ್ಞಾನೇ ತವ ಪ್ರಾಮಾಣ್ಯಾನುಮಾಪಕಹೇತುಸಿದ್ಧಿರೇವ ನ ಸ್ಯಾತ್ । ಅತಸ್ಸೋಽವಶ್ಯಂ ಮಾನ್ಯ ಇತ್ಯಾಹ — **ಕಿಂಚೇತಿ** ॥ ಪ್ರವೃತ್ತಿಸಾಮರ್ಥ್ಯಾತ್ ಪ್ರವೃತ್ತೇಸ್ಸಾಮರ್ಥ್ಯಾತ್ಫಲವತ್ತ್ವಾತ್ಫಲವತ್ಪ್ರವೃತ್ತಿಜನಕತ್ವಾದಿತಿ ಯಾವತ್ ॥ ೪೦೦ ॥

**ವಿವರಣೆ—** ಇನ್ನು ಪ್ರಾಮಾಣ್ಯಗ್ರಾಹಕವಾದ ಸಾಕ್ಷಿಯನ್ನು ತಿರಸ್ಕರಿಸಿದರೆ ನಿನಗೆ ಪ್ರಾಮಾಣ್ಯಾನುಮಾಪಕವಾದ ಹೇತುವು ಸಿದ್ಧವಾಗುವುದಿಲ್ಲ, ಆದ್ದರಿಂದ ಸಾಕ್ಷಿಯನ್ನು ತಿರಸ್ಕಾರ ಮಾಡದೇ ಅವಶ್ಯವಾಗಿ ಅಂಗೀಕರಿಸಬೇಕು ಎಂದು 'ಕಿಂಚ' ಇತ್ಯಾದಿ ಶ್ಲೋಕದಿಂದ ಹೇಳುತ್ತಾರೆ. 'ಪ್ರವೃತ್ತಿಸ್ಸಾಮರ್ಥ್ಯಾತ್' ಎಂದರೆ ಪ್ರವೃತ್ತಿಗೆ ಫಲವಿರು ವುದರಿಂದ ಎಂದು ಅರ್ಥ. 'ಸಮರ್ಥಪ್ರವೃತ್ತಿಜನಕತ್ವಾತ್' ಎಂದು ಅಭಿಪ್ರಾಯ.

**ನಹಿ ತತ್ರಾನುಮಾ ತೇಽಸ್ತಿ ಸಾಕ್ಷಿಣಾ ಕೇವಲೇನ ಚೇತ್ ।**
**ಪಿತಾ ತವಾನುಮಾನಸ್ಯ ಸಾಕ್ಷೀ ರಕ್ಷ್ಯೋ ಹಿ ಸರ್ವಥಾ ॥ ೪೦೧ ॥**

**ಅರ್ಥ–** ತೇ = ನಿನಗೆ, ತತ್ರ = ಸಫಲಪ್ರವೃತ್ತಿಜನಕತ್ವ ವಿಷಯದಲ್ಲಿ, ಅನುಮಾ = ಅನುಮಾನವು, ನಹಿ ಅಸ್ತಿ = ಇಲ್ಲವಷ್ಟೆ. ಕೇವಲೇನ = ಅನ್ಯಸಹಾಯವಿಲ್ಲದ, ಸಾಕ್ಷಿಣಾ = ಸಾಕ್ಷಿಯಿಂದಲೇ, ಚೇತ್ = ಸಫಲಪ್ರವೃತ್ತಿಜನಕತ್ವವು ಸಿದ್ಧವಾಗುವುದಾದರೆ, ಸಾಕ್ಷೀ = ಸಾಕ್ಷಿಯು, ತವ = ನಿನ್ನ, ಅನುಮಾನಸ್ಯ = ಅನುಮಾನಕ್ಕೆ, ಪಿತಾ = ತಂದೆ (ಎಂದಂತಾಯಿತು) ಅಂತಹ ಸಾಕ್ಷಿಯು, ಸರ್ವಥಾ = ಎಲ್ಲಾ ಪ್ರಕಾರಗಳಿಂದಲೂ, ರಕ್ಷ್ಯೋ ಹಿ = ರಕ್ಷಿಸಲ್ಪಡಬೇಕಷ್ಟೆ.

**ಅನುವಾದ–** ಸಮರ್ಥಪ್ರವೃತ್ತಿಜನಕತ್ವವನ್ನು ಸಾಧಿಸಲು ನಿನಗೆ ಅಲ್ಲಿ ಯಾವ ಅನುಮಾನವೂ ಇಲ್ಲ. ಆದ್ದರಿಂದ ಕೇವಲ ಸಾಕ್ಷಿಯಿಂದಲೇ ಸಮರ್ಥಪ್ರವೃತ್ತಿ ಜನಕತ್ವವು ತಿಳಿಯುತ್ತದೆಂದು ಹೇಳಬೇಕು. ಸಾಕ್ಷಿಯಿಂದ ಹೀಗೆ ಹೇತುವಾದ ಸಮರ್ಥಪ್ರವೃತ್ತಿಜನಕತ್ವವು ಸಿದ್ಧವಾದ ಮೇಲೆ ನಿನ್ನ ಅನುಮಾನವು ಪ್ರವೃತ್ತವಾಗುತ್ತದೆ. ಆದ್ದರಿಂದ ನಿನ್ನ ಅನುಮಾನಕ್ಕೆ ಸಾಕ್ಷಿಯು ತಂದೆಯ ಸ್ಥಾನದಲ್ಲಿದೆ. ಅಂತಹ ಸಾಕ್ಷಿಯನ್ನು ಪ್ರಾಮಾಣ್ಯಗ್ರಹಣವಿಷಯದಲ್ಲಿ ಸರ್ವಥಾ ರಕ್ಷಣೆ ಮಾಡಬೇಕು.

**ಭಾವವಿಲಾಸಿನೀ–**ತತ್ಪ್ರವೃತ್ತೇಸ್ಸಮರ್ಥತ್ವಮನುಮಾನೇನ ಗೃಹ್ಯತ ಇತ್ಯತ ಆಹ – **ನಹೀತಿ** ॥ ಪ್ರವೃತ್ತೇರ್ಹಿ ಫಲಂ ಜಲಪಾನಜನ್ಯಸುಖಮ್ । ತಚ್ಚ ಸಾಕ್ಷಿಣಾ ವಾ ಸಾಕ್ಷಿಪ್ರತಿನಿಧಿನಾ ಮನಸಾ ವಾ ಗೃಹ್ಯತ ಇತಿ ತವಾಪ್ಯನುಮತಮಿತಿ ಹೀತ್ಯನೇನ ಸೂಚಯತಿ । ಕೇವಲೇನಾನುಮಾನಾದ್ಯ-ನುಪಜೀವಿನಾ ಸಾಕ್ಷಿಣಾ ಚೇತ್ ತರ್ಹಿ ತವಾನುಮಾನಸ್ಯ ಪಿತಾ ಪಿತೇವ ಪಿತಾ । ಗ್ರಾಹಕ ಇತ್ಯರ್ಥಃ । ಸಾಕ್ಷೀ ಸರ್ವಥಾ ರಕ್ಷ್ಯೋ ಹೀತಿ ಸಂಬಂಧಃ । ಹೀತ್ಯನೇನ ಸಾಕ್ಷಿಣಾ ಗೃಹೀತೇಽರ್ಥೇ ನಿಶ್ಚಯಾಭಾವೇ ತವ ಹೇತೋರಸಿದ್ಧಿಃ ಸ್ಯಾದಿತಿ ಸೂಚಯತಿ ॥ ೪೦೧ ॥

**ವಿವರಣೆ–** ಸಮರ್ಥಪ್ರವೃತ್ತಿಜನಕತ್ವರೂಪವಾದ ಹೇತುವು ಅನುಮಾನದಿಂದ ಗೃಹೀತವಾಗುತ್ತದೆ ಎಂದು ಶಂಕಿಸಿದರೆ ಆದಕ್ಕೆ 'ನಹಿ' ಎಂಬ ಶ್ಲೋಕದಿಂದ ಉತ್ತರವನ್ನು ನೀಡುತ್ತಾರೆ. ಪ್ರವೃತ್ತಿಯ ಫಲ ಜಲಪಾನದಿಂದ ಉಂಟಾಗುವ ಸುಖ. ಆ ಸುಖವನ್ನು ಸಾಕ್ಷಿಯಾಗಲೀ ಅಥವಾ ನೈಯಾಯಿಕ ಮತರೀತ್ಯಾ ಸಾಕ್ಷಿಯ ಪ್ರತಿನಿಧಿಯಾದ ಮನಸ್ಸಾಗಲೀ ವಿಷಯೀಕರಿಸಬೇಕು. ಇದು ನೈಯಾಯಿಕರಿಗೂ ಸಮ್ಮತವಾದುದು. ಅನಂತರ ಜಲಜ್ಞಾನಕ್ಕೆ ಸಫಲ ಪ್ರವೃತ್ತಿಜನಕತ್ವರೂಪವಾದ ಹೇತುವು ಸಿದ್ಧವಾಗುತ್ತದೆ. ಅನಂತರ ಪ್ರವೃತ್ತವಾಗುವ ನಿನ್ನ ಅನುಮಾನವು ಈ ಸಾಕ್ಷಿಯನ್ನು ಉಪಜೀವಿಸಿಕೊಂಡೇ ಹೊರಡುತ್ತದೆ. ಆದ್ದರಿಂದ ನಿನ್ನ ಅನುಮಾನಕ್ಕೆ ಸಾಕ್ಷಿಯು ತಂದೆಯ ಸ್ಥಾನದಲ್ಲಿದೆ. ಅಂತಹ ಹೇತುಗ್ರಾಹಕವಾದ ಸಾಕ್ಷಿಯನ್ನು ಪ್ರಾಮಾಣ್ಯಗ್ರಹಣವಿಷಯದಲ್ಲಿಯೂ ರಕ್ಷಣೆ ಮಾಡಬೇಕಷ್ಟೆ? ಸಾಕ್ಷಿ ಗ್ರಹಿಸಿದ ವಿಷಯದಲ್ಲಿ ಪ್ರಾಮಾಣ್ಯನಿಶ್ಚಯವನ್ನು ಅಥವಾ ಅರ್ಥನಿಶ್ಚಯವನ್ನು ಒಪ್ಪದಿದ್ದಲ್ಲಿ ನಿನ್ನ ಅನುಮಾನದ ಹೇತುವು ಅಸಿದ್ಧವಾಗುತ್ತದೆ ಎಂದು ಸೂಚಿಸುತ್ತಾರೆ.

**ದೂರೇ ಪ್ರಾಮಾಣ್ಯಶಂಕಾ ಚೇನ್ನೋಪಾಂತೇ ಸಾ ಕುತೋ ನೃಣಾಮ್ ।**
**ಜ್ಞಾನೇ ಜ್ಞಾತೇಽರ್ಥತೋಽರ್ಥೇಚ್ಛೋಃ ಕೋಟಿಸ್ಮೃತ್ಯಾ ಬುಭುತ್ಸಯಾ ।**
**ಪ್ರಾಪ್ತಶಂಕಾತರೋರ್ಮೂಲಂ ಛೇತ್ತುಂ ಕೋಽನ್ಯಃ ಪರಶ್ವಧಃ ॥ ೪೦೨ ॥**

**ಅರ್ಥ–** ದೂರೇ = ದೂರಸ್ಥವಸ್ತುವಿನ ವಿಷಯದಲ್ಲಿ, ಪ್ರಾಮಾಣ್ಯಶಂಕಾಚೇತ್ = ಪ್ರಾಮಾಣ್ಯಸಂಶಯವು ಉಂಟಾಗುವುದಾದರೆ, ನೃಣಾಮ್ = ಪುರುಷರಿಗೆ, ಉಪಾಂತೇ = ಸಮೀಪದ ವಸ್ತುಗಳ ವಿಷಯದಲ್ಲಿ, ಸಾ = ಆ ಪ್ರಾಮಾಣ್ಯಶಂಕೆಯು, ಕುತೋ ನ = ಏಕೆ ಉಂಟಾಗುವುದಿಲ್ಲ?, ಜ್ಞಾನೇ = ಜ್ಞಾನವು, ಜ್ಞಾತೇ = ಜ್ಞಾತವಾಗುತ್ತಿರಲು, ಅರ್ಥತಃ = ಪ್ರಯೋಜನವಿರುತ್ತಿರಲು, ಅರ್ಥೇಚ್ಛೋಃ = ಆ ಅರ್ಥವನ್ನು ಬಯಸುವವನಿಗೆ, ಕೋಟಿಸ್ಮೃತ್ಯಾ = ಕೋಟಿಗಳ ಸ್ಮರಣೆ ಬರುವುದರಿಂದ, ಬುಭುತ್ಸಯಾ = ತನಗೆ ಇಷ್ಟವಾದ ಕೋಟಿಯನ್ನು ತಿಳಿಯಬೇಕೆಂಬ ಇಚ್ಛೆಯಿಂದ, ಪ್ರಾಪ್ತಶಂಕಾತರೋಃ = ಉಂಟಾದ ಪ್ರಾಮಾಣ್ಯಶಂಕಾ ಎಂಬ ವೃಕ್ಷದ, ಮೂಲಂ = ಬೇರನ್ನು, ಛೇತ್ತುಂ = ಕತ್ತರಿಸಲು, ಅನ್ಯಃ = ಬೇರೆಯ, ಪರಶ್ವಧಃ = ಕೊಡಲಿಯು, ಕಃ = ಯಾವುದು ಇದೆ?

**ಅನುವಾದ– ದೂರದಲ್ಲಿರುವ ವಸ್ತುವಿಷಯದಲ್ಲಿ ಪ್ರಾಮಾಣ್ಯಶಂಕೆಯು ಉಂಟಾಗುವುದೆಂದು ಒಪ್ಪಿದರೆ ಸಮೀಪದಲ್ಲಿರುವ ವಸ್ತುವಿನ ಜ್ಞಾನದ ವಿಷಯದಲ್ಲಿ ಪ್ರಾಮಾಣ್ಯಶಂಕೆಯು ಏಕೆ ಉಂಟಾಗುವುದಿಲ್ಲ ಎಂದು ನೀನು ಹೇಳಬೇಕು. ಸಮೀಪದ ವಸ್ತುವಿನ ಜ್ಞಾನವು ಬರುತ್ತದೆ. ಆ ಜ್ಞಾನಕ್ಕೆ ಪ್ರಯೋಜನವಿರುವ ಕಾರಣ ಜ್ಞಾತೃವಿಗೆ ಆ ಜ್ಞಾನದ ವಿಷಯವನ್ನು ಹೊಂದುವ ಇಚ್ಛೆಯಿದೆ. ಜ್ಞಾನದ ಜ್ಞಾನವು ಬಂದ ಕಾರಣ ಜ್ಞಾನತ್ವ ಸಹಚರಿತವಾದ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಗಳ ಸ್ಮೃತಿಯೂ ಇದೆ. ಅದರಲ್ಲಿ ಒಂದನ್ನು ನಿರ್ಧರಿಸಲು ಉಂಟಾಗುವ ಸಂಶಯವೆಂಬ ವೃಕ್ಷವನ್ನು ಛೇದಿಸುವುದಕ್ಕೆ ಸಾಕ್ಷಿಯಲ್ಲದೇ ಬೇರೆ ಯಾವ ಆಯುಧವಿದೆಯೆಂದು ಹೇಳು.**

**ಭಾವವಿಲಾಸಿನೀ–ಪರಮುಖೇನೈವ ಸಾಕ್ಷಿಣಾ ಪ್ರಾಮಾಣ್ಯನಿಶ್ಚಯೋ ಭವತೀತಿ ವಾಚಯಿತುಂ ತಂ ಪೃಚ್ಛತಿ – ದೂರ ಇತಿ ॥ ಉಪಾಂತೇ ಸಮೀಪೇ ಸಾ ಅಪ್ರಾಮಾಣ್ಯಶಂಕಾ ಕುತೋ ನ? ಇತಿ ಸಂಬಂಧಃ । ನನು ಧರ್ಮಿಜ್ಞಾನಾದ್ಯಭಾವಾತ್ ಸಂಶಯಾಭಾವ ಇತ್ಯತ ಆಹ – ಜ್ಞಾನ ಇತಿ ॥ ಜ್ಞಾನೇ ಜ್ಞಾತ ಇತ್ಯನೇನ ಧರ್ಮಿಜ್ಞಾನಮುಕ್ತಂ ಭವತಿ । ಅರ್ಥತಃ ಪ್ರಯೋಜನಾತ್ । ಅರ್ಥೇಚ್ಛೋರರ್ಥಪ್ರಾಪ್ತೀಚ್ಛಾವತಃ । ಬುಭುತ್ಸಯಾ ಪ್ರಾಮಾಣ್ಯಾಪ್ರಾಮಾಣ್ಯಾನ್ಯತರ-ಕೋಟಿಬುಭುತ್ಸಯಾ । ಅನ್ಯೋಽನುವ್ಯವಸಾಯೇನೈವ ಪ್ರಾಮಾಣ್ಯನಿಶ್ಚಯಾತ್ ॥ ೪೦೨ ॥**

**ವಿವರಣೆ–** ಸಾಕ್ಷಿಯಿಂದಲೇ ಪ್ರಾಮಾಣ್ಯ ನಿಶ್ಚಯವು ಉಂಟಾಗುತ್ತದೆ ಎಂದು ಪರವಾದಿಯ ಮುಖದಿಂದ ಹೇಳಿಸಲು ಅವನನ್ನು ಕುರಿತು ಪ್ರಶ್ನೆ ಮಾಡುತ್ತಾರೆ. 'ದೂರ'

ಇತ್ಯಾದಿ ಶ್ಲೋಕದಿಂದ. 'ಉಪಾಂತ್ಯೇ' ಎಂದರೆ ಸಮೀಪದಲ್ಲಿ ಎಂದರ್ಥ. ಸಮೀಪದಲ್ಲಿರುವ ವಸ್ತುವಿನ ಜ್ಞಾನ ವಿಷಯದಲ್ಲಿ ಅಪ್ರಾಮಾಣ್ಯ ಶಂಕೆಯು ಏಕೆ ಉಂಟಾಗುವುದಿಲ್ಲ ಎಂದು ಯೋಜನೆ. ಧರ್ಮಿಜ್ಞಾನವಿಲ್ಲದಿರುವುದರಿಂದ ಸಂಶಯ ಉಂಟಾಗುವುದಿಲ್ಲ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಧರ್ಮಿಜ್ಞಾನವುಂಟಾಗಿದೆ ಎಂಬುದನ್ನು 'ಜ್ಞಾನೇಜ್ಞಾತೇ' ಎಂಬ ಶಬ್ದಗಳಿಂದ ತಿಳಿಸುತ್ತಾರೆ. 'ಅರ್ಥತಃ' ಎಂದರೆ ಪ್ರಯೋಜನವಿರುವುದರಿಂದ ಎಂದು ಅರ್ಥ. 'ಅರ್ಥೇಚ್ಛೋಃ' ಎಂದರೆ ಜ್ಞಾನದ ವಿಷಯವನ್ನು ಹೊಂದಲು ಬಯಸುವ ಪುರುಷನಿಗೆ ಎಂದು ಅರ್ಥ. 'ಬುಭುತ್ಸಯಾ' ಎಂದರೆ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಕೋಟಿಗಳಲ್ಲಿ ಯಾವುದಾದರೊಂದನ್ನು ನಿರ್ಧರಿಸುವ ಇಚ್ಛೆಯಿಂದ ಎಂದು ಅರ್ಥ. 'ಅನ್ಯಃ' ಎಂದರೆ ಅನುವ್ಯವಸಾಯ ಅಥವಾ ಸಾಕ್ಷಿಯನ್ನು ಬಿಟ್ಟು ಎಂದರ್ಥ.

ಹತ್ತಿರದಲ್ಲಿ ಇರುವ ವಸ್ತುವಿನ ಜ್ಞಾನವುಂಟಾದಾಗ ಜ್ಞಾನದಜ್ಞಾನ ಉಂಟಾಗುತ್ತದೆ. ಮತ್ತು ಪ್ರವೃತ್ತಿಯೂ ಉಂಟಾಗುತ್ತದೆ. ಈ ಜ್ಞಾನದಜ್ಞಾನವು ಉಂಟಾದಾಗ ಪ್ರಾಮಾಣ್ಯ ಸಂಶಯವು ಬರುವುದಕ್ಕೆ ನಿನ್ನ ರೀತಿಯಲ್ಲಿ ಎಲ್ಲ ಕಾರಣಗಳೂ ಇವೆ. ಆದರೂ ಪ್ರಾಮಾಣ್ಯಸಂಶಯವು ಬರುವುದಿಲ್ಲ. ಏಕೆಂದರೆ ಪ್ರಾಮಾಣ್ಯದ ಸಂಶಯವು ಇಂತಹ ಸ್ಥಳದಲ್ಲಿ ಅನುಭವಸಿದ್ಧವಾಗಿಲ್ಲ. ಆದ್ದರಿಂದ ಪ್ರಾಮಾಣ್ಯಸಂಶಯಕ್ಕೆ ವಿರೋಧಿಯಾದ ವಿಷಯವನ್ನು ಜ್ಞಾನದಜ್ಞಾನವು ವಿಷಯೀಕರಿಸಿದೆ ಎಂದು ಹೇಳಬೇಕು. ಅನ್ಯತರಕೋಟಿಯನಿಶ್ಚಯವೇ ಪ್ರಾಮಾಣ್ಯಸಂಶಯಕ್ಕೆ ವಿರೋಧಿಯಾದುದು. ಆದ್ದರಿಂದ ಅನ್ಯತರಕೋಟಿ ನಿಶ್ಚಯವಿದೆಯೆಂದು ಹೇಳಬೇಕು. ಆ ಅನ್ಯತರಕೋಟಿಯನಿಶ್ಚಯಕ್ಕೆ ಅನುವ್ಯವಸಾಯವಲ್ಲದೇ ಬೇರೆ ಯಾವುದೂ ಇಲ್ಲವಾದ್ದರಿಂದ ಅನುವ್ಯವಸಾಯವೇ ಅನ್ಯತರಕೋಟಿಯನಿಶ್ಚಯರೂಪವಾದುದು ಎಂದು ಹೇಳಬೇಕು.

**ಅತೋಽತ್ರ ತನ್ನಿರೋಧಾಯ ವಿಶೇಷಾವಸಿತಿರ್ಧ್ರುವಾ ।**
**ಸಂಶಯಸ್ಯ ಹ್ಯನುತ್ಥಾನಮೇಕಕೋಟ್ಯವಧಾರಣೇ ॥ ೪೦೩ ॥**

**ಅರ್ಥ–** ಅತಃ = ಆ ಕಾರಣದಿಂದ, ಅತ್ರ = ಸಮೀಪಸ್ಥವಸ್ತುವಿಷಯದ ಜ್ಞಾನದಲ್ಲಿ, ತನ್ನಿರೋಧಾಯ = ಪ್ರಾಮಾಣ್ಯಶಂಕೆಯು ಬರದಿರುವಂತೆ ಮಾಡಲು, ವಿಶೇಷಾವಸಿತಿಃ = ಅನ್ಯತರವಾದ ಪ್ರಾಮಾಣ್ಯಕೋಟಿಯ ಅವಧಾರಣೆಯು, ಧ್ರುವಾ = ಖಂಡಿತವಾಗಿ ಇದೆ (ಎಂದು ಸ್ವೀಕರಿಸಬೇಕು), ಏಕೋಟ್ಯವಧಾರಣೇ = ಸಂಶಯದ ಎರಡು ಕೋಟಿಗಳಲ್ಲಿ ಒಂದು ಕೋಟಿಯ ನಿಶ್ಚಯವು ಬರುತ್ತಿರಲು, ಸಂಶಯಸ್ಯ = ಸಂಶಯದ, ಅನುತ್ಥಾನಂ ಹಿ = ಉತ್ಪತ್ತಿಯಾಗುವುದಿಲ್ಲವಷ್ಟೆ.

**ಅನುವಾದ–** ಆದ್ದರಿಂದ ಇಲ್ಲಿ ಪ್ರಾಮಾಣ್ಯ ಸಂಶಯವು ಬರದೇ ಇರುವುದಕ್ಕೆ ಅನ್ಯತರಕೋಟಿಯನಿಶ್ಚಯವು ಕಾರಣ ಎಂದು ಹೇಳಲೇಬೇಕು.

**ಅನ್ಯತರಕೋಟಿನಿಶ್ಚಯವಿರುವಾಗ ಸಂಶಯವು ಬರುವುದಿಲ್ಲವೆಂಬುದು ಅನುಭವಸಿದ್ಧವಾಗಿದೆ.**

**ಭಾವವಿಲಾಸಿನೀ–**ತದೇವ ವಿಶದಯತಿ – **ಅತ ಇತಿ** ॥ ಯತಃ ಪ್ರಾಮಾಣ್ಯಶಂಕಾ ಸಮ್ಭಾವಿತಾಽತ ಇತ್ಯರ್ಥಃ । ಅತ್ರ ಸಮೀಪಸ್ಥಘಟಾದಿಜ್ಞಾನೇ । ತನ್ನಿರೋಧಾಯ ಪ್ರಾಮಾಣ್ಯಶಂಕಾನಿರೋಧಾಯ ವಿಶೇಷಾವಸಿತಿಃ ಪ್ರಾಮಾಣ್ಯರೂಪಕೋಟಿವಿಶೇಷನಿಶ್ಚಯಃ । ಧ್ರುವೇತ್ಯನೇನಾಪ್ರಾಮಾಣ್ಯ- ಕೋಟಿನಿಶ್ಚಯಸ್ಯಾನಾನುಭವಿಕತ್ವಾತ್ ಪ್ರಾಮಾಣ್ಯಕೋಟೇರೇವ ನಿಶ್ಚಯೋಽವಶ್ಯಂ ವಕ್ತವ್ಯ ಇತಿ ಸೂಚಯತಿ । ತತ್ರ ಹೇತುಮಾಹ – **ಸಂಶಯಸ್ಯೇತಿ** ॥ ೪೦೩ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಈ ಶ್ಲೋಕದಿಂದ ಸ್ಪಷ್ಟಪಡಿಸುತ್ತಾರೆ. ಯಾವಕಾರಣದಿಂದ ಸಮೀಪದಲ್ಲಿರುವ ವಸ್ತುವಿನ ಜ್ಞಾನದ ಪ್ರಾಮಾಣ್ಯವಿಷಯದಲ್ಲಿಯೂ ಸಂಶಯಬರುವುದಕ್ಕೆ ಸಾಮಗ್ರಿಯಿದೆಯೋ ಆ ಕಾರಣದಿಂದ ಎಂದು ಅರ್ಥ. 'ಅತ್ರ' ಎಂದರೆ ಸಮೀಪದಲ್ಲಿರುವ ಘಟದ ಜ್ಞಾನದ ವಿಷಯದಲ್ಲಿ ಎಂದು ಅರ್ಥ. 'ತನ್ನಿರೋಧಾಯ' ಎಂದರೆ ಪ್ರಾಮಾಣ್ಯಸಂಶಯವನ್ನು ತಡೆಗಟ್ಟಲು ಎಂದು ಅರ್ಥ. 'ವಿಶೇಷಾವಸಿತಿಃ' ಎಂದರೆ ಅನ್ಯತರಕೋಟಿಯಾದ ಪ್ರಾಮಾಣ್ಯಕೋಟಿಯ ನಿಶ್ಚಯ ಎಂದು ಅರ್ಥ. ಧ್ರುವಾ ಎಂಬ ಶಬ್ದದಿಂದ ಅಪ್ರಾಮಾಣ್ಯಕೋಟಿಯ ನಿಶ್ಚಯವು ಸಮೀಪಸ್ಥ ವಸ್ತುವಿನ ಇಂತಹ ಜ್ಞಾನದ ವಿಷಯದಲ್ಲಿ ಯಾರಿಗೂ ಬಂದಿಲ್ಲವಾದ ಕಾರಣ ಪ್ರಾಮಾಣ್ಯಕೋಟಿಯ ನಿಶ್ಚಯವನ್ನೇ ಅವಶ್ಯಕವಾಗಿ ಒಪ್ಪಬೇಕು ಎಂದು ಸೂಚಿಸುತ್ತಾರೆ. ಅದಕ್ಕೆ ಕಾರಣವನ್ನು 'ಸಂಶಯಸ್ಯ' ಎಂಬ ಶ್ಲೋಕದ ಭಾಗದಿಂದ ಹೇಳುತ್ತಾರೆ.

**ತಸ್ಮಾತ್ಕಥಂ ನ ನಿರ್ಣೀತಸಮೀಪಸ್ಥಾರ್ಥಧೀಷು ಸಾ ।**
**ಅತೋಽತ್ರ ಸಂಶಯೋಚ್ಛಿತ್ತ್ಯೈ ವಾಚ್ಯಃ ಪ್ರಾಮಾಣ್ಯನಿಶ್ಚಯಃ ॥ ೪೦೪ ॥**

**ಅರ್ಥ–** ತಸ್ಮಾತ್ = ಆ ಕಾರಣದಿಂದ, ನಿರ್ಣೀತಸಮೀಪಸ್ಥಾರ್ಥಧೀಷು = ನಿರ್ಣಯಾತ್ಮಕವಾಗಿ ಉಂಟಾದ ಸಮೀಪಸ್ಥಪದಾರ್ಥಗಳ ಜ್ಞಾನದಲ್ಲಿ, ಸಾ = ಪ್ರಾಮಾಣ್ಯಕೋಟಿಯು, ಕಥಂ ನ = ಏಕೆ ಇಲ್ಲ, ಅತಃ = ಆ ಕಾರಣದಿಂದ, ಅತ್ರ = ಇಂತಹ ಸ್ಥಳದಲ್ಲಿ, ಸಂಶಯೋಚ್ಛಿತ್ತ್ಯೈ = ಸಂಶಯದ ನಾಶಕ್ಕೋಸ್ಕರವಾಗಿ, ಪ್ರಾಮಾಣ್ಯನಿಶ್ಚಯಃ = ಪ್ರಾಮಾಣ್ಯನಿಶ್ಚಯವು, ವಾಚ್ಯಃ = ಇದೆ ಎಂದು ಹೇಳಬೇಕು.

**ಅನುವಾದ– ಆದ್ದರಿಂದ ಸಮೀಪದಲ್ಲಿರುವ ಘಟಾದಿವಸ್ತುವಿನ ವಿಷಯದ ಜ್ಞಾನದಲ್ಲಿ ಪ್ರಾಮಾಣ್ಯಕೋಟಿಯ ಜ್ಞಾನವೇಕಿಲ್ಲ? ಇದ್ದೇ ಇದೆ. ಆದ್ದರಿಂದ ಇಲ್ಲಿ ಪ್ರಾಮಾಣ್ಯ ನಿಶ್ಚಯವಾಗಿರುವುದರಿಂದ ಸಂಶಯ ಬರುವುದಿಲ್ಲವೆಂದೇ ಹೇಳಬೇಕು.**

**ಭಾವವಿಲಾಸಿನೀ–**ಉಕ್ತಮರ್ಥಮುಪಸಂಹರತಿ **– ತಸ್ಮಾದಿತಿ** ॥ ಸಾ ಪ್ರಾಮಾಣ್ಯಕೋಟಿಃ । ಅತೋ ಗತ್ಯಂತರಾಭಾವಾತ್ । ಅತ್ರ ಸಮೀಪಸ್ಥಘಟಾದಿಜ್ಞಾನೇ ॥ ೪೦೪ ॥

**ವಿವರಣೆ–** ಇದುವರೆಗೆ ಹೇಳಿದ ಅರ್ಥವನ್ನು ಈ ಶ್ಲೋಕದಿಂದ ಉಪಸಂಹಾರ ಮಾಡುತ್ತಾರೆ. 'ಸಃ' ಎಂದರೆ ಪ್ರಾಮಾಣ್ಯಕೋಟಿ ಎಂದು ಅರ್ಥ. 'ಅತಃ' ಎಂದರೆ ಗತ್ಯಂತರವಿಲ್ಲದಿರುವುದರಿಂದ ಎಂದು ಅರ್ಥ. 'ಅತ್ರ' ಎಂದರೆ ಸಮೀಪದಲ್ಲಿರುವ ಘಟಾದಿಗಳ ಜ್ಞಾನದ ವಿಷಯದಲ್ಲಿ ಎಂದು ಅರ್ಥ.

ನಾತ್ರ ಪ್ರವೃತ್ತಿಸಾಮರ್ಥ್ಯಮನ್ಯದ್ವಾಸ್ತ್ಯನುಮಾಪಕಮ್ ।
ಯತೋ ಗೃಹೀತಪ್ರಾಮಾಣ್ಯಜ್ಞಾನಜಾತೀಯತಾಪಿ ನ ॥
ನವಾರ್ಥನೂತ್ನಜ್ಞಾನತ್ವಾತ್ಸ್ವತಸ್ತ್ವಂ ಕಸ್ತ್ಯಜೇತ್ ತತಃ ॥ ೪೦೫ ॥

**ಅರ್ಥ–** ಅತ್ರ = ಈ ಸ್ಥಳದಲ್ಲಿ, ಪ್ರವೃತ್ತಿಸಾಮರ್ಥ್ಯಂ = ಸಫಲಪ್ರವೃತ್ತಿಜನಕತ್ವವಾಗಲೀ, ಅನ್ಯದ್ವಾ = ಬೇರೆ ಲಿಂಗವಾಗಲೀ, ಅನುಮಾಪಕಮ್ = ಅನುಮಾಪಕವಾಗಿ, ನ = ಇಲ್ಲ. ಯತಃ= ಯಾವ ಕಾರಣದಿಂದ, ನವಾರ್ಥನೂತ್ನಜ್ಞಾನತ್ವಾತ್ = ಹೊಸವಿಷಯದ ಹೊಸಜ್ಞಾನವಾದ್ದರಿಂದ, ಗೃಹೀತಪ್ರಾಮಾಣ್ಯಜ್ಞಾನ- ಜಾತೀಯತಾಪಿ = ಪ್ರಾಮಾಣ್ಯವು ಗ್ರಹಿಸಲ್ಪಟ್ಟ ಜ್ಞಾನದ ಸಮಾನ ಜಾತಿಯತ್ವವೂ ಕೂಡ, ನ = ಇಲ್ಲವೋ, ತತಃ = ಆ ಕಾರಣದಿಂದ, ಸ್ವತಸ್ತ್ವಂ= ಪ್ರಾಮಾಣ್ಯ ಸ್ವತಸ್ತ್ವವನ್ನು, ಕಃ = ಯಾವನು, ತ್ಯಜೇತ್ = ತ್ಯಜಿಸುತ್ತಾನೆ?

**ಅನುವಾದ–** ಸಮೀಪಸ್ಥ ಘಟಜ್ಞಾನದಲ್ಲಿ ಪ್ರಾಮಾಣ್ಯವನ್ನು ಅನುಮಾನ ಮಾಡಲು ಸಮರ್ಥಪ್ರವೃತ್ತಿಯ ಜನಕತ್ವವಾಗಲೀ, ಅಥವಾ ಬೇರೆ ಹೇತುವಾಗಲೀ ಇಲ್ಲ. ಅಥವಾ ಪ್ರಾಮಾಣ್ಯವು ಗೃಹೀತವಾದ ಜ್ಞಾನಕ್ಕೆ ಈ ಜ್ಞಾನವು ಸಜಾತೀಯವಾದುದರಿಂದ ಇಲ್ಲಿ ಪ್ರಾಮಾಣ್ಯನಿಶ್ಚಯವುಂಟಾಗುತ್ತದೆ ಎಂದು ಹೇಳಲೂ ಬರುವುದಿಲ್ಲ. ಏಕೆಂದರೆ ಇದು ಇದುವರೆಗೆ ನೋಡದಿದ್ದ ಜಲ ಮೊದಲಾದ ವಸ್ತುವಿನ ಮೊದಲನೆಯ ಜ್ಞಾನವಾಗಿದೆ. ಆದ್ದರಿಂದ ಪ್ರಾಮಾಣ್ಯ ಸ್ವತಸ್ತ್ವವನ್ನು ಯಾರು ತ್ಯಜಿಸಲು ಸಾಧ್ಯ?

**ಭಾವವಿಲಾಸಿನೀ–**ನನ್ವತ್ರಾಪಿ ಸಮರ್ಥಪ್ರವೃತ್ತಿಜನಕತ್ವಾದಿನಾ ನಿರ್ಣಯೋ ಭವಿಷ್ಯತೀತ್ಯತ ಆಹ **– ನೇತಿ** ॥ ಅನ್ಯತ್ ಪ್ರವೃತ್ತಿಸಾಮರ್ಥ್ಯಾತ್ । ತಚ್ಚ ಗೃಹೀತಪ್ರಾಮಾಣ್ಯಜ್ಞಾನಜಾತೀಯತ್ವಮ್ । ತದಪಿ ನಾಸ್ತೀತ್ಯಾಹ **– ಯತ ಇತಿ** ॥ ತತ್ರ ಹೇತುಃ **– ನವಾರ್ಥನೂತ್ನಜ್ಞಾನತ್ವಾದಿತಿ** ॥ ನವೋಽಯಮರ್ಥಃ ತಸ್ಯ ನೂತ್ನಂ ನೂತನಂ ಪ್ರಾಥಮಿಕಮಿತಿ ಯಾವತ್ । ಗೃಹೀತಪ್ರಾಮಾಣ್ಯ-ಜ್ಞಾನಜಾತೀಯತ್ವಂ ತದಾ ಸ್ಯಾತ್ । ಯದ್ಯೇತಜ್ಜ್ಞಾನಾತ್ಪೂರ್ವಂ ಜ್ಞಾನಮುತ್ಪನ್ನಂ ಸ್ಯಾತ್ । ತಜ್ಜ್ಞಾನಸ್ಯ ಪ್ರಾಮಾಣ್ಯಂ ಚ ಗೃಹೀತಂ ಸ್ಯಾತ್ । ನಚೈತದತ್ರ ಘಟತೇ । ಅರ್ಥಸ್ಯಾಪಿ

**ನವತ್ವಾಜ್ಜ್ಞಾನಸ್ಯಾಪ್ಯತ ಏವ ಪೂರ್ವಮನುತ್ಪನ್ನತ್ವೇನಾಸ್ಯೈವ ಜ್ಞಾನಸ್ಯ ಪ್ರಾಥಮಿಕತ್ವಾತ್ । ತಸ್ಮಾದತ್ರ ಜ್ಞಾನಗ್ರಾಹಕೇಣೈವ ಗ್ರಾಹ್ಯತ್ವಲಕ್ಷಣಂ ಸ್ವತಸ್ತ್ವಂ ಕಸ್ಯ್ಯಜೇದಿತ್ಯರ್ಥಃ ॥ ೪೦೫ ॥**

**ವಿವರಣೆ–** ಸಮೀಪಸ್ಥ ಜಲಜ್ಞಾನದಲ್ಲಿಯೂ ಕೂಡ ಸಮರ್ಥಪ್ರವೃತ್ತಿಜನಕತ್ವ ರೂಪಹೇತುವಿನಿಂದ ಪ್ರಾಮಾಣ್ಯನಿಶ್ಚಯವು ಉಂಟಾಗುತ್ತದೆ ಎಂಬ ಶಂಕೆಗೆ ಈ ಶ್ಲೋಕದಿಂದ ಉತ್ತರವನ್ನು ಕೊಡುತ್ತಾರೆ. 'ಅನ್ಯತ್' ಎಂದರೆ ಪ್ರವೃತ್ತಿಸಾಮರ್ಥ್ಯ ಅಥವಾ ಸಫಲಪ್ರವೃತ್ತಿ ಜನಕತ್ವವನ್ನು ಬಿಟ್ಟು ಬೇರೆ ಎಂದು ಅರ್ಥ. ಅದು ಯಾವುದೆಂದರೆ ವಿದಿತಪ್ರಾಮಾಣ್ಯಜ್ಞಾನ ಸಜಾತೀಯತ್ವ. ಅದೇ ಇಲ್ಲಿ ಇರಲು ಸಾಧ್ಯವಿಲ್ಲ. ಏಕೆಂದರೆ ಇದು ಹೊಸದಾಗಿ ನೋಡಲ್ಪಡುತ್ತಿರುವ ವಸ್ತು ಮತ್ತು ಅದರ ಪ್ರಥಮಜ್ಞಾನ. ಹಿಂದೆ ಈ ವಸ್ತುವನ್ನು ನೋಡಿದ್ದರೆ ಆ ಜ್ಞಾನದಲ್ಲಿ ಪ್ರಾಮಾಣ್ಯನಿಶ್ಚಯವಾಗಿದ್ದರೆ ಹಿಂದೆ ಉಂಟಾದ ಜ್ಞಾನವು ಆ ಜ್ಞಾನಕ್ಕೆ ಸಜಾತೀಯವಾದ ಕಾರಣದಿಂದ ಇಲ್ಲಿ ಪ್ರಾಮಾಣ್ಯನಿಶ್ಚಯವು ಉಂಟಾಗುತ್ತದೆ ಎಂದು ಹೇಳಬಹುದಾಗಿದ್ದಿತು. ಆದರೆ ಅದು ಸಾಧ್ಯವಿಲ್ಲ ಏಕೆಂದರೆ ಇದೇ ಮೊದಲನೆಯ ಜ್ಞಾನ. ಆದ್ದರಿಂದ ಇಲ್ಲಿ ಸಂಶಯವು ಉಂಟಾಗುವುದಿಲ್ಲ ಎಂಬುದು ಅನುಭವಸಿದ್ಧವಾಗಿದೆ. ಆದ್ದರಿಂದ ಜ್ಞಾನವನ್ನು ಗ್ರಹಿಸುವ ಅನುವ್ಯವಸಾಯವು ಆ ಜ್ಞಾನದ ಪ್ರಾಮಾಣ್ಯವನ್ನು ಗ್ರಹಿಸದಿದ್ದರೆ ಸಂಶಯವು ಏಕೆ ಉಂಟಾಗಲಿಲ್ಲ ಎಂಬ ಪ್ರಶ್ನೆಗೆ ಉತ್ತರವಿಲ್ಲ. ಸಂಶಯವು ಉಂಟಾಗದಿರುವುದಕ್ಕೆ ಕಾರಣ ಪ್ರಾಮಾಣ್ಯನಿಶ್ಚಯವುಂಟಾಗಿದೆ ಎಂಬುದೇ ಆಗಬೇಕು. ಪ್ರಾಮಾಣ್ಯನಿಶ್ಚಯ ವುಂಟಾಗಬೇಕಾದರೆ ಜ್ಞಾನವು ಗೃಹೀತವಾಗುವಾಗ ಪ್ರಾಮಾಣ್ಯವು ಗೃಹೀತ ವಾಗಿರಲೇಬೇಕು. ಇದನ್ನೇ ಪ್ರಾಮಾಣ್ಯಸ್ವತಸ್ತ್ವ ಎಂದು ಕರೆಯಲಾಗುವುದು. ಇಂತಹ ಸ್ವತಸ್ತ್ವವನ್ನು ಹೇಗೆ ತ್ಯಜಿಸಲು ಸಾಧ್ಯ?

**ಸಮೀಪಗಮನೇ ಸತ್ಯೇವಾರ್ಥಸಾಮರ್ಥ್ಯಶೋಧನಮ್ ।**
**ತತ್ಪ್ರಮಾನುಮಿತೇಃ ಪೂರ್ವಂ ಪ್ರಾಮಾಣ್ಯಂ ಸಾಕ್ಷಿಣೇಕ್ಷ್ಯತೇ ॥ ೪೦೬ ॥**

**ಅರ್ಥ–** ಸಮೀಪಗಮನೇ ಸತ್ಯೇವ= ಸಮೀಪಕ್ಕೆ ಹೋದಮೇಲೆ ಮಾತ್ರ, ಅರ್ಥಸಾಮರ್ಥ್ಯಶೋಧನಮ್ = ಸಫಲಪ್ರಪ್ರತ್ತಿಜನಕತ್ವವು ಇದೆ ಎಂದು ನಿಶ್ಚಯಿಸಬೇಕು. ತತ್= ಆದ್ದರಿಂದ, ಪ್ರಮಾನುಮಿತೇಃ = ಪ್ರಾಮಾಣ್ಯಾನುಮಿತಿಗಿಂತಲೂ, ಪೂರ್ವಂ = ಮೊದಲೇ, ಸಾಕ್ಷಿಣಾ = ಸಾಕ್ಷಿಯಿಂದ, ಪ್ರಾಮಾಣ್ಯಂ = ಪ್ರಾಮಾಣ್ಯವು, ಈಕ್ಷ್ಯತೇ = ತಿಳಿಯಲ್ಪಡುತ್ತದೆ.

**ಅನುವಾದ–** ದೂರದಲ್ಲಿರುವ ವಸ್ತುವಿನ ವಿಷಯದ ಜ್ಞಾನವುಂಟಾದಾಗಲೂ ಅದರಲ್ಲಿ ಸಮರ್ಥಪ್ರವೃತ್ತಿಜನಕತ್ವವು ತಿಳಿಯಬೇಕಾದರೆ ಸಮೀಪಕ್ಕೆ ಹೋಗಿ ಪರೀಕ್ಷೆ ಮಾಡಿದ ಮೇಲೆ ತಿಳಿಯಬೇಕು. ಸಮೀಪಕ್ಕೆ ಹೋಗಿ ಪರೀಕ್ಷೆಯನ್ನು ಮಾಡಿ ಸಾಕ್ಷಿಯು ಸಫಲಪ್ರವೃತ್ತಿಜನಕತ್ವವನ್ನು ಗ್ರಹಿಸಿದ ಮೇಲೆ ಅನಂತರ

ಪ್ರಾಮಾಣ್ಯಾನುಮಾನವು ಪ್ರವೃತ್ತವಾಗುತ್ತವೆ. ಆದರೆ ಸಾಕ್ಷಿಯು ಆ ಜಲಾದಿಜ್ಞಾನಕ್ಕೆ, ಅಥವಾ ಜಲಾದಿಜ್ಞಾನದವಿಷಯಕ್ಕೆ ಸಫಲಪ್ರವೃತ್ತಿಜನಕತ್ವವನ್ನು ಗ್ರಹಿಸುವಾಗಲೇ ಅರ್ಥಸತ್ವವನ್ನು ನಿಶ್ಚಯಮಾಡಿರುವುದರಿಂದ ಪ್ರಾಮಾಣ್ಯವನ್ನು ಗ್ರಹಿಸಿದೆ. ಆದ್ದರಿಂದ ದೂರಸ್ಥವಸ್ತುವಿನ ವಿಷಯದಲ್ಲಿಯೂ ಪ್ರಾಮಾಣ್ಯಾ-ನುಮಿತಿಗಿಂತ ಮೊದಲೇ ಸಾಕ್ಷಿಯಿಂದ ಅಥವಾ ಅನುವ್ಯವಸಾಯದಿಂದ ಪ್ರಾಮಾಣ್ಯವು ನಿಶ್ಚಿತವಾಗಿದೆಯೆಂದು ಒಪ್ಪಬೇಕು.

**ಭಾವವಿಲಾಸಿನೀ–**ಸನ್ನಿಕೃಷ್ಟಾರ್ಥೇ ಸಮರ್ಥಪ್ರವೃತ್ತಿಜನಕತ್ವಾದಿಕಂ ಪ್ರಾಮಾಣ್ಯಾನುಮಾಪಕಂ ನಾಸ್ತೀತ್ಯುಕ್ತಮ್ । ತರ್ಹಿ ದೂರಸ್ಥೇ ಭವಿಷ್ಯತೀತ್ಯಾಹ – **ಸಮೀಪೇತಿ** ॥ ದೂರಸ್ಥೇಽಪಿ ಸಮರ್ಥ-ಪ್ರವೃತ್ತಿಜನಕತ್ವಾಖ್ಯಹೇತುನಿರ್ಣಯಾಯ ದೂರಸ್ಥಜಲಾದಿಸಮೀಪಗಮನೇ ಸತೀತ್ಯರ್ಥಃ । ಅರ್ಥಸಾಮರ್ಥ್ಯಶೋಧನಂ ಸಮರ್ಥಪ್ರವೃತ್ತಿಜನಕತ್ವಾವಧಾರಣಮಿತಿ ಯಾವತ್ । ತದಾ ಸನ್ನಿಕೃಷ್ಟಘಟಾದಿಜ್ಞಾನಪ್ರಾಮಾಣ್ಯನಿರ್ಣಯವತ್ತ್ವದಭಿಮತಾನುಮಿತೇಃ ಪೂರ್ವಮೇವ ಸಾಕ್ಷಿಣಾ ತತ್ರ ಪ್ರಾಮಾಣ್ಯನಿರ್ಣಯೋ ವಾಚ್ಯಃ । ಅನ್ಯಥಾ ಹೇತೋರನಿರ್ಣಯಪ್ರಸಂಗಾತ್ । ದೂರಸ್ಥತ್ವಾದಿದೋಷಾಭಾವಾಚ್ಚೇತ್ಯಾಹ – **ತದಿತಿ** ॥ ಯತೋಽನುಮಿತೇಃ ಪೂರ್ವಂ ಸಾಕ್ಷಿಣಾ ಪ್ರಾಮಾಣ್ಯಗ್ರಹಣೇ ಬಾಧಕಾಭಾವಃ ಯತಶ್ಚ ಹೇತುಸಿದ್ಧಾವರ್ಥಸತ್ತಾಽವಶ್ಯಂ ಪರೇಣಾಪಿ ನಿರ್ಣೇಯಾ ತಸ್ಮಾದಿತ್ಯರ್ಥಃ ॥ ೪೦೬ ॥

**ವಿವರಣೆ–** ಸಮೀಪಸ್ಥ ವಸ್ತುವಿಷಯದ ಜ್ಞಾನಬಂದಾಗ ಆ ವಸ್ತುವಿನಲ್ಲಿ ಸಫಲಪ್ರವೃತ್ತಿಜನಕತ್ವವನ್ನು ಅನುಮಾನಮಾಡಲು ಯಾವ ಹೇತುವೂ ಇಲ್ಲ ಎಂದು ಉಪಪಾದನೆ ಮಾಡಲಾಯಿತು. ಆದರೆ ದೂರಸ್ಥವಸ್ತುವಿಷಯದ ಜ್ಞಾನಬಂದಾಗ ಆ ವಸ್ತುವಿನಲ್ಲಿ ಸಫಲಪ್ರವೃತ್ತಿಜನಕತ್ವವನ್ನು ತಿಳಿದು ಅದರಿಂದ ಪ್ರಾಮಾಣ್ಯಾನುಮಾನವನ್ನು ಮಾಡಬಹುದಷ್ಟೇ ಎಂಬ ಶಂಕೆಗೆ ಈ ಶ್ಲೋಕದಿಂದ ಉತ್ತರವನ್ನು ಕೊಡುತ್ತಾರೆ. ದೂರದಲ್ಲಿರುವ ಜಲಾದಿಗಳ ಜ್ಞಾನವುಂಟಾದಾಗ ಆ ಜಲಾದಿಗಳಲ್ಲಿ ಸಮರ್ಥಪ್ರವೃತ್ತಿಜನಕತ್ವವನ್ನು ತಿಳಿಯಲು ಮೊದಲು ಅದರ ಸಮೀಪಕ್ಕೆ ಹೋಗಬೇಕು. ಅನಂತರ ಅರ್ಥಸಾಮರ್ಥ್ಯವನ್ನು ಪರೀಕ್ಷೆ ಮಾಡಬೇಕು. ಆಗ ಸಮರ್ಥಪ್ರವೃತ್ತಿಜನಕತ್ವವು ತಿಳಿಯುತ್ತದೆ. ಹಾಗೇ ಒಪ್ಪಿದಲ್ಲಿ ಸಮೀಪದಲ್ಲಿರುವ ಘಟಾದಿಗಳ ಜ್ಞಾನಪ್ರಾಮಾಣ್ಯವು ಗೃಹೀತವಾದಂತೆ ದೂರದಲ್ಲಿರುವ ಜಲಾದಿಜ್ಞಾನಪ್ರಾಮಾಣ್ಯವು ನಿನಗೆ ಅಭಿಮತವಾದ ಅನುಮಿತಿಗಿಂತ ಮೊದಲೇ ಸಾಕ್ಷಿಯಿಂದ ಗೃಹೀತವಾಗಿದೆ ಎಂದು ಒಪ್ಪಬೇಕು. ಇಲ್ಲದಿದ್ದರೆ ನಿನ್ನ ಅನುಮಾನ ಪ್ರಯೋಗದಲ್ಲಿ ಹೇತುವಿನ ನಿಶ್ಚಯವಾಗದೇ ಅಸಿದ್ಧಿದೋಷವು ಬರುತ್ತದೆ. ಸಮೀಪಕ್ಕೆ ಹೋಗಿ ಪರೀಕ್ಷೆ ಮಾಡಿದಾಗ ಅಲ್ಲಿ ದೂರಸ್ಥತ್ವಾದಿ ದೋಷವೂ ಇಲ್ಲದಿರುವುದರಿಂದ ಅನುವ್ಯವಸಾಯವು ಪ್ರಾಮಾಣ್ಯವನ್ನು ಗ್ರಹಿಸಲು ಯಾವ ಬಾಧಕವೂ ಇಲ್ಲ. ಆದ್ದರಿಂದ ಅನುಮಿತಿಗಿಂತಲೂ ಮೊದಲು ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಿರುವುದರಿಂದ ಮತ್ತು ಸಫಲಪ್ರವೃತ್ತಿಜನಕತ್ವರೂಪವಾದ

ಹೇತುನಿಶ್ಚಯವಾದಾಗಲೇ ಅರ್ಥಸತ್ವವು ನಿಶ್ಚಯವಾಗುವುದರಿಂದ ನಿನ್ನ ಅನುಮಾನಕ್ಕಿಂತ ಮೊದಲೇ ಪ್ರಾಮಾಣ್ಯಜ್ಞಾನವುಂಟಾಗಿದೆ ಎಂದು ಅಂಗೀಕರಿಸಬೇಕು.

**ಸಾಕ್ಷ್ಯುಚ್ಛಿಷ್ಟಕೃತಾಹಾರಾ ತೇಽನುಮಾಽಸ್ಯೋಪಜೀವಿನೀ ।**
**ಸಾಕ್ಷೀ ತದಕ್ಷಾದ್ಯಧ್ಯಕ್ಷೋ ನೋಪೇಕ್ಷ್ಯೋಽಯಂ ಮುಮುಕ್ಷುಭಿಃ ॥ ೪೦೭ ॥**

**ಅರ್ಥ—** ತೇ = ನಿನ್ನ, ಅನುಮಾ = ಅನುಮಾನವು, ಸಾಕ್ಷ್ಯುಚ್ಛಿಷ್ಟಕೃತಾಹಾರಾ = ಸಾಕ್ಷಿಯು ಸ್ವೀಕರಿಸಿದ ವಿಷಯವನ್ನು ವಿಷಯೀಕರಿಸುವುದರಿಂದ, ಅಸ್ಯ = ಈ ಸಾಕ್ಷಿಗೆ, ಉಪಜೀವಿನೀ = ಉಪಜೀವಕವಾಯಿತು. ತತ್ = ಆ ಕಾರಣದಿಂದ, ಅಕ್ಷಾದ್ಯಧ್ಯಕ್ಷಃ = ವ್ಯವಹಾರರೂಪವಾದ ಪ್ರತ್ಯಕ್ಷ ಮತ್ತು ಅನುಮಾನಗಳನ್ನು ವಿಷಯೀಕರಿಸುವ, ಅಯಂ ಸಾಕ್ಷೀ = ಈ ಸಾಕ್ಷಿಯು, ಮುಮುಕ್ಷುಭಿಃ = ಮುಮುಕ್ಷುಗಳಿಂದ, ಉಪೇಕ್ಷ್ಯಃ ನ = ಉಪೇಕ್ಷಿಸಲ್ಪಡಬಾರದು.

**ಅನುವಾದ—** ಆದ್ದರಿಂದ ನಿನ್ನ ಅನುಮಾನವೆಲ್ಲವೂ ಸಾಕ್ಷಿ ಎಂಜಲನ್ನು ತಿಂದು ಬದುಕುವಂತಹದು. ಆದ್ದರಿಂದ ಜಲಾದಿಜ್ಞಾನ ಪ್ರತ್ಯಕ್ಷರೂಪವಾದ ಸಾಕ್ಷಿಯನ್ನು ಮುಮುಕ್ಷುಗಳಾದವರು ಪ್ರಾಮಾಣ್ಯನಿಶ್ಚಯವಿಷಯದಲ್ಲಿ ಎಂದೂ ಉಪೇಕ್ಷೆ ಮಾಡಬಾರದು.

**ಭಾವವಿಲಾಸಿನೀ—**ಸಾಕ್ಷ್ಯುಚ್ಛಿಷ್ಟಕೃತಾಹಾರಾ ಸಾಕ್ಷಿಸಿದ್ಧಪ್ರಾಮಾಣ್ಯಗ್ರಾಹಿಣೀತಿ ಯಾವತ್ । ಉಚ್ಛಿಷ್ಟೇತ್ಯನೇನ ತದನುಮಾನಸ್ಯ ಸಿದ್ಧಸಾಧನತಾಂ ಧ್ವನಯತಿ । ಅಂಗೀಕೃತ್ಯ ಚೇದಮುದಿತಮ್ । ವಸ್ತುತಸ್ತು ತದ್ಧೇತೋರನವಸರದುಃಸ್ಥತ್ವೈವ । ನಹ್ಯಾಪಣಂ ಗತಃ ಸ್ವಕರಸ್ಥಕದಲೀ ಫಲಂ ಭಕ್ಷಯಿತ್ವೈವ ಕಶ್ಚಿನ್ನಿಶ್ಚಿನುಯಾತ್ । ಅಸ್ಯ ಸಾಕ್ಷಿಣಃ । ತತ್ ನಿಶ್ಶಂಕಪ್ರತ್ಯಕ್ಷತಯಾ ಸರ್ವಪ್ರಮಾಣಮೂಲ-ತ್ವಾತ್ । ಅಕ್ಷಾದ್ಯಧ್ಯಕ್ಷಃ ವ್ಯವಸಾಯರೂಪಪ್ರತ್ಯಕ್ಷಾನುಮಾನಾದ್ಯಧ್ಯಕ್ಷಃ । ತತ್ತತ್ಪ್ರಾಮಾಣ್ಯ-ಗ್ರಾಹಕತ್ವೇನೇತಿ ಭಾವಃ ॥ ೪೦೭ ॥

**ವಿವರಣೆ—** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಸಾಕ್ಷಿಯು ಮೊದಲೇ ಪ್ರಾಮಾಣ್ಯವನ್ನು ಗ್ರಹಿಸಿರುವುದರಿಂದ ಸಾಕ್ಷಿಯಿಂದ ಹೇತುವು ಸಿದ್ಧವಾದ ಮೇಲೆ ಪ್ರವೃತ್ತವಾಗಿ ಪ್ರಾಮಾಣ್ಯವನ್ನು ಗ್ರಹಿಸುವ ನಿನ್ನ ಅನುಮಾನವು ಸಾಕ್ಷಿಯಿಂದ ಸಿದ್ಧವಾದುದನ್ನೇ ಇನ್ನೊಮ್ಮೆ ಗ್ರಹಿಸುತ್ತದೆ ಎಂದು ಹೇಳಿದಂತಾಯಿತು. ಆದ್ದರಿಂದ ಸಾಕ್ಷಿಯನ್ನು ಉಪಜೀವಿಸಿಕೊಂಡಿದೆ ಎಂಬುದು ಒಂದು ಅಂಶ. ಸಾಕ್ಷಿಯು ಗ್ರಹಿಸಿದ ಪ್ರಾಮಾಣ್ಯವನ್ನೇ ಅನುಮಾನವನ್ನು ಗ್ರಹಿಸುವುದರಿಂದ ಅನುಮಾನಕ್ಕೆ ಸಿದ್ಧಸಾಧನತ್ವ ದೋಷವೂ ಬರುತ್ತದೆ ಎಂದು ಇನ್ನೊಂದು ಅಂಶ. ನಿಜವಾಗಿ ವಿಚಾರ ಮಾಡಿದರೆ ಈ ಮಾತನ್ನು ಪರರ ಪ್ರಕ್ರಿಯೆಯನ್ನು ಒಪ್ಪಿಕೊಂಡು ಹೇಳಿದ್ದೇವೆ. ಸಮೀಪಕ್ಕೆ ಹೋಗಿ ಪರೀಕ್ಷೆ ಮಾಡಿದಮೇಲೆ ಸಫಲಪ್ರವೃತ್ತಿಜನಕತ್ವವು ನಿಶ್ಚಯವಾಗುತ್ತದೆಂಬುದು ಅನುಭವವಿರುದ್ಧವಾದದು. ಯಾರೂ ಸಹ ಅಂಗಡಿಗೆ ಹೋಗಿ ಬಾಳೆಯಹಣ್ಣನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ತಿಂದು

ಸಫಲಪ್ರವೃತ್ತಿಜನಕತ್ವವನ್ನು ನಿರ್ಣಯಿಸಿ ಅನಂತರ ಆ ಹೇತುವಿನಿಂದ ಇದು ಬಾಳೆಯಹಣ್ಣು ಎಂಬ ಜ್ಞಾನವು ಪ್ರಮಾಣ ಎಂದು ನಿಶ್ಚಯಿಸುವುದಿಲ್ಲ. ಕೈಯಲ್ಲಿದ್ದ ಬಾಳೆಯಹಣ್ಣಿನ ಜ್ಞಾನಬಂದಾಗಲೇ ಆ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಸಾಕ್ಷಿಯು ವಿಷಯೀಕರಿಸಿಬಿಡುತ್ತದೆ. ಸಾಕ್ಷಿಪ್ರತ್ಯಕ್ಷವು ಹೀಗೆ ನಿಶ್ಶಂಕಪ್ರತ್ಯಕ್ಷವಾಗಿ ಎಲ್ಲ ಪ್ರಮಾಣಗಳಿಗೂ ಮೂಲಭೂತವಾಗಿವೆ. ವ್ಯವಸಾಯದ ಪ್ರಾಮಾಣ್ಯಾದಿಗಳನ್ನು ಗ್ರಹಿಸುವ ಸಾಕ್ಷಿಯು ಅದಕ್ಕಿಂತ ಪ್ರಬಲವಾಗಿರುವುದರಿಂದ ಅದನ್ನು ಎಂದೂ ಉಪೇಕ್ಷೆ ಮಾಡಬಾರದು.

**ಅಪ್ರಾಮಾಣ್ಯೇ ಸ್ವತಸ್ತ್ವಂ ನ ಯುಕ್ತಿಯುಕ್ತಮತೋ ನ ತತ್ ॥ ೪೦೮ ॥**

**ಅರ್ಥ–** ಅಪ್ರಾಮಾಣ್ಯೇ = ಅಪ್ರಮಾಣ್ಯದಲ್ಲಿ, ಸ್ವತಸ್ತ್ವಂ = ಸ್ವತಸ್ತ್ವವು, ನ ಯುಕ್ತಿಯುಕ್ತಂ = ಯುಕ್ತಿಯುಕ್ತವಲ್ಲ. ಅತಃ = ಆದ್ದರಿಂದ, ತತ್ = ಅಪ್ರಮಾಣ್ಯಸ್ವತಸ್ತ್ವವು, ನ = ಇಲ್ಲ.

**ಅನುವಾದ–** ಅಪ್ರಾಮಾಣ್ಯದಲ್ಲಿ ಸ್ವತಸ್ತ್ವವು ಯುಕ್ತಿಯುಕ್ತವಾಗುವುದಿಲ್ಲ ಆದ್ದರಿಂದ ಅಪ್ರಾಮಾಣ್ಯದಲ್ಲಿ ಸ್ವತಸ್ತ್ವವು ಇಲ್ಲ.

**ಭಾವವಿಲಾಸಿನೀ–**ಯದಿ ಪ್ರಾಮಾಣ್ಯಸ್ಯ ಸ್ವತಸ್ತ್ವಮ್, ತರ್ಹ್ಯಪ್ರಾಮಾಣ್ಯಸ್ಯಾಪಿ ಸ್ವತಸ್ತ್ವಂ ಸ್ಯಾದಿತಿ ಪ್ರತಿಬಂದೀಂ ಪರಿಹರತಿ – **ಅಪ್ರಾಮಾಣ್ಯೇತಿ** ॥ ಅತಃ ಯತೋ ಯುಕ್ತಿಯುಕ್ತಂ ನ ಅತ ಇತ್ಯರ್ಥಃ । ತದಪ್ರಾಮಾಣ್ಯಸ್ವತಸ್ತ್ವಮ್ ॥ ೪೦೮ ॥

**ವಿವರಣೆ–** ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸಿದರೆ ಅಪ್ರಾಮಾಣ್ಯ ಸ್ವತಸ್ತ್ವವನ್ನೂ ಅಂಗೀಕರಿಸಬೇಕಾದೀತು ಎಂಬ ಪ್ರತಿಬಂದಿಯನ್ನು ಹಿಂದೆ ಪ್ರತಿವಾದಿಗಳು ಹೇಳಿದ್ದರು. ಅದಕ್ಕೆ ಈ ಶ್ಲೋಕದಲ್ಲಿ ಉತ್ತರವನ್ನು ಕೊಡುತ್ತಾರೆ. ಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸುತ್ತೇವೆ. ಏಕೆಂದರೆ ಅಂಗೀಕರಿಸಲು ಯುಕ್ತಿಯಿದೆ. ಅಪ್ರಾಮಾಣ್ಯಸ್ವತಸ್ತ್ವವನ್ನು ಅಂಗೀಕರಿಸುವುದಿಲ್ಲ ಏಕೆಂದರೆ ಅದನ್ನು ಅಂಗೀಕರಿಸಲು ಯುಕ್ತಿಯಿಲ್ಲ.

**ಭ್ರಮಜ್ಞಾನಜ್ಞೇಯರೂಪ್ಯತ್ವಾದ್ಯಭಾವೋ ಹ್ಯಮಾನತಾ ।**
**ತತ್ಸತ್ತ್ವಗ್ರಾಹಿಣೀ ಭ್ರಾಂತಿಃ ಸಾಕ್ಷೀ ಚಾಂತಃ ಸ್ವತಂತ್ರದೃಕ್ ॥**
**ಉಪನಾಯಕಶೂನ್ಯೇನ ಬಾಹ್ಯಂ ತದ್ಗೃಹ್ಯತೇ ಕಥಮ್ ॥ ೪೦೯ ॥**

**ಅರ್ಥ–** ಭ್ರಮಜ್ಞಾನಜ್ಞೇಯರೂಪತ್ವಾದ್ಯಭಾವಃ = ಭ್ರಮಾತ್ಮಕಜ್ಞಾನಕ್ಕೆ ವಿಷಯವಾದ ರೂಪ್ಯತ್ವಾದಿಗಳ ಅಭಾವವೇ, ಅಮಾನತಾ ಹಿ = ಅಪ್ರಾಮಾಣ್ಯವಷ್ಟೆ. ಭ್ರಾಂತಿಃ = ಭ್ರಾಂತಿಯು, ತತ್ಸತ್ತ್ವಗ್ರಾಹಿಣೀ = ರೂಪ್ಯತ್ವದ ಸತ್ಯತ್ವವನ್ನು ವಿಷಯೀಕರಿಸುತ್ತದೆ. ಸಾಕ್ಷೀ ಚ = ಸಾಕ್ಷಿಯಾದರೊ, ಅಂತಃ ಸ್ವತಂತ್ರದೃಕ್ = ಒಳಗಿರುವ ಪದಾರ್ಥಗಳನ್ನು ನೇರವಾಗಿ

ನೋಡುತ್ತದೆ. ಉಪನಾಯಕಶೂನ್ಯೇನ = ಉಪನಾಯಕಜ್ಞಾನ ರಹಿತವಾದ ಸಾಕ್ಷಿಯಿಂದ, ಬಾಹ್ಯಂ ತತ್ = ಬಾಹ್ಯವಾದ ಆ ರೂಪ್ಯತ್ವಾಭಾವವು (ಸಾಕ್ಷಿಯಿಂದ), ಕಥಂ = ಹೇಗೆ, ಗೃಹ್ಯತೇ = ವಿಷಯೀಕರಿಸಲ್ಪಡುತ್ತದೆ?

**ಅನುವಾದ–** 'ಇದಂ ರಜತಂ' ಎಂಬ ಜ್ಞಾನದಲ್ಲಿ ಅಪ್ರಾಮಾಣ್ಯವಿದೆ ಎಂದರೆ ಅಲ್ಲಿ ರಜತತ್ವರೂಪವಾದ ಅರ್ಥವು ಇಲ್ಲ ಎಂದರೆ ರಜತತ್ವಾಭಾವರೂಪವಾದ ಅರ್ಥವಿದೆ ಎಂದು ಅರ್ಥ. ಅಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಒಪ್ಪಿದರೆ 'ಇದಂ ರಜತಂ' ಎಂಬ ಜ್ಞಾನವನ್ನು ವಿಷಯೀಕರಿಸುವ ಅನುವ್ಯವಸಾಯವೇ ಆ ಜ್ಞಾನದ ಅಪ್ರಾಮಾಣ್ಯವನ್ನು ಎಂದರೆ ರಜತತ್ವಾಭಾವವನ್ನು ವಿಷಯೀಕರಿಸುತ್ತದೆ ಎಂದು ಒಪ್ಪಬೇಕು. ಅನುವ್ಯವಸಾಯ ಅಥವಾ ಸಾಕ್ಷಿಯು ಬಾಹ್ಯವಸ್ತುಗಳನ್ನು ನೇರವಾಗಿ ವಿಷಯೀಕರಿಸುವುದಿಲ್ಲ. ಆಂತರಿಕವಾದ ಸುಖಾದಿಗಳನ್ನು ಮಾತ್ರ ನೇರವಾಗಿ ವಿಷಯೀಕರಿಸುತ್ತದೆ. ಆದ್ದರಿಂದ ರಜತತ್ವಾಭಾವವು ಬೇರೆ ಜ್ಞಾನದಿಂದ ಸಾಕ್ಷಿಗೆ ಉಪನೀತವಾಗಬೇಕು. ಇಲ್ಲಿ ಮೊದಲು ಇರುವ ಜ್ಞಾನ 'ಇದಂ ರಜತಂ' ಎಂಬುದು ಅದು ರಜತತ್ವವನ್ನೇ ವಿಷಯೀಕರಿಸುತ್ತದೆ ಹೊರತು, ರಜತತ್ವಾಭಾವವನ್ನು ವಿಷಯೀಕರಿಸುವುದಿಲ್ಲ. ಈ ರಜತಜ್ಞಾನವನ್ನು ಬಿಟ್ಟು ರಜತತ್ವಾಭಾವ ಉಪನಯನ ಮಾಡುವ ಬೇರೆಯಾವ ಜ್ಞಾನವೂ ಇಲ್ಲ. ಹೀಗಿರುವಾಗ ಬಾಹ್ಯವಾದ ರಜತತ್ವಾಭಾವವನ್ನು ಜ್ಞಾನಗ್ರಾಹಕವಾದ ಸಾಕ್ಷಿಯು ಹೇಗೆ ವಿಷಯೀಕರಿಸೀತು? ವಿಷಯೀಕರಿಸಿದ್ದರೆ ಅಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಹೇಳಬಹುದಾಗಿದ್ದಿತು. ವಿಷಯೀಕರಿಸುವುದಿಲ್ಲವಾದ್ದರಿಂದ ಅಪ್ರಾಮಾಣ್ಯಕ್ಕೆ ಸ್ವತಸ್ತ್ವವು ವಿಚಾರ ಸಹವಾದುದಲ್ಲ.

**ಭಾವವಿಲಾಸಿನೀ–**ಕುತೋ ನ ಯುಕ್ತಿಯುಕ್ತಮಿತ್ಯತ ಆಹ – **ಭ್ರಮೇತಿ** ॥ ಭ್ರಮರೂಪಂ ಯಜ್ಜ್ಞಾನಂ ತೇನ ಜ್ಞೇಯಂ ಯಚ್ಛುಕ್ತೇ ರೂಪ್ಯತ್ವಾದಿ, ತದಭಾವಃ ಅಮಾನತಾ ಹೀತಿ ಸಂಬಂಧಃ । ತದಭಾವವತಿ ತತ್ಪ್ರಕಾರಕತ್ವರೂಪಾಪ್ರಾಮಾಣ್ಯಸ್ಯ ತದಭಾವ ಏವ ಪರ್ಯವಸಾನಾದಿತಿ ಹಿ ಶಬ್ದೇನ ಸೂಚಯತಿ । ತದಭಾವೋऽಪಿ ಭ್ರಮೋಪನೀತಃ ಕಿಂ ನ ಸ್ಯಾದಿತ್ಯತ ಆಹ – **ತದಿತಿ** ॥ ತಸ್ಯ ರೂಪ್ಯತ್ವಾದೇಃ ಸತ್ತ್ವಗ್ರಾಹಿಣೀ ನತು ತದಭಾವಗ್ರಾಹಿಣೀತ್ಯರ್ಥಃ। ಭ್ರಮಾನುಪನೀತೋऽಪಿ ತದಭಾವಃ ಸಾಕ್ಷಿಣಾ ಗೃಹ್ಯತಾಮಿತ್ಯತ ಆಹ – **ಸಾಕ್ಷೀತಿ** ॥ ಅಂತಶ್ಶರೀರಾಂತಃಸ್ಥಸುಖಾದಿವಿಷಯೇ ಸ್ವತಂತ್ರದೃಕ್ ಸ್ವಾತನ್ತ್ರ್ಯೇಣ ದರ್ಶನಮ್ । ತಸ್ಮಾದುಪನಾಯಕಶೂನ್ಯೇನ ಸಾಕ್ಷಿಣಾ ಬಾಹ್ಯಂ ತದಪ್ರಾಮಾಣ್ಯಂ ಕಥಂ ಗೃಹ್ಯತೇ? ಇತಿ ಸಂಬಂಧಃ ॥ ೪೦೯ ॥

**ವಿವರಣೆ–** ಏಕೆ ಯುಕ್ತಿಸಹಿತವಾದುದಲ್ಲ ಎಂಬುದನ್ನು ಈ ಶ್ಲೋಕದಿಂದ ವರ್ಣಿಸುತ್ತಾರೆ. ಭ್ರಮಜ್ಞಾನಕ್ಕೆ ವಿಷಯವಾದ ಶುಕ್ತಿಯ ರಜತತ್ವ ಏನಿದೆಯೋ, ಅದರ

ಅಭಾವವೇ ಜ್ಞಾನವು ಅಪ್ರಾಮಾಣ ಎಂಬುದರ ಪರ್ಯವಸಿತವಾದ ಅರ್ಥ. ಏಕೆಂದರೆ ಅಪ್ರಾಮಾಣಜ್ಞಾನದ ಲಕ್ಷಣ 'ತದಭಾವವತಿ ತತ್‌ಪ್ರಕಾರಕತ್ವಂ' ಅದರ ಅಭಾವವಿರುವ ಸ್ಥಳದಲ್ಲಿ ಅದನ್ನು ವಿಷಯೀಕರಿಸುವುದು ಎಂದು. ರಜತತ್ವಾಭಾವವಿರುವ ಶುಕ್ತಿಯಲ್ಲಿ ರಜತತ್ವವನ್ನು ವಿಷಯೀಕರಿಸುವುದರಿಂದ ಈ ಜ್ಞಾನವು ಅಪ್ರಾಮಾಣವಾಗುತ್ತದೆ. ಸಾಕ್ಷಿಗೆ ತೋರಬೇಕಾದ ರಜತತ್ವಾಭಾವವು ಭ್ರಮದಿಂದ ಏಕೆ ಉಪನೀತವಾಗಬಾರದು ಎಂದರೆ ತತ್ಸತ್ತ್ವಗ್ರಾಹಿಣಿಯೆಂದು ಉತ್ತರವನ್ನು ಹೇಳುತ್ತಾರೆ. ಭ್ರಾಂತಿಯು ರಜತತ್ವವನ್ನೇ ವಿಷಯೀಕರಿಸುತ್ತದೆ. ರಜತತ್ವಾಭಾವವನ್ನಲ್ಲ. ಆದ್ದರಿಂದ ಭ್ರಾಂತಿಯು ರಜತತ್ವಾಭಾವವನ್ನು ಉಪನಯನ ಮಾಡಲಾರದು. ಭ್ರಮದಿಂದ ಉಪನೀತ ವಾಗದಿದ್ದರೂ ಸಾಕ್ಷಿಯು ಸ್ವತಃ ಏಕೆ ರಜತತ್ವಾಭಾವವನ್ನು ವಿಷಯೀಕರಿಸಬಾರದು ಎಂಬುದಕ್ಕೆ 'ಸಾಕ್ಷಿ' ಇತ್ಯಾದಿ ಭಾಗದಿಂದ ಉತ್ತರವನ್ನು ಹೇಳುತ್ತಾರೆ. ಸಾಕ್ಷಿಯು ಶರೀರದ ಒಳಗಿರುವ ಸುಖಾದಿಗಳನ್ನು ಮಾತ್ರ ನೇರವಾಗಿ ವಿಷಯೀಕರಿಸುತ್ತದೆ. ಬಾಹ್ಯವಸ್ತುವನ್ನಲ್ಲ ಎಂದು ಅಭಿಪ್ರಾಯ. ಆದ್ದರಿಂದ ಯಾವುದೇ ಉಪನಾಯಕವಿಲ್ಲದಿರುವಾಗ ಸಾಕ್ಷಿಯು ಬಾಹ್ಯವಾದ ರಜತತ್ವಾಭಾವವನ್ನು ಹೇಗೆ ಗ್ರಹಿಸೀತು? ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಾಮಾಣ್ಯಕ್ಕೆ ಸ್ವತಸ್ತ್ವವಿಲ್ಲವೆಂದು ಯೋಜನೆ.

**ಅತೋಽನುಮಾನತೋ ರೂಪ್ಯತ್ವಾಭಾವೋಪಸ್ಥಿತಿರ್ಯದಾ ।**
**ತದಾ ತದಪಿ ಗೃಹ್ಣೀಯಾದಿತಿ ಸರ್ವಮನಾಕುಲಮ್ ॥ ೪೧೦ ॥**

**ಅರ್ಥ–** ಅತಃ = ಆದ್ದರಿಂದ, ಯದಾ = ಯಾವಾಗ, ಅನುಮಾನತಃ = ಅನುಮಾನದಿಂದ, ರೂಪ್ಯತ್ವಾಭಾವೋಪಸ್ಥಿತಿಃ = ರೂಪ್ಯತ್ವಾಭಾವದ ಜ್ಞಾನವು ಉಂಟಾಗುವುದೋ, ತದಾ = ಆಗ, ತದಪಿ = ರೂಪ್ಯತ್ವಾಭಾವವನ್ನೂ, ಗೃಹ್ಣೀಯಾತ್ = ಗ್ರಹಿಸುತ್ತದೆ, ಇತಿ = ಎಂದು, ಸರ್ವಂ = ಎಲ್ಲವೂ, ಅನಾಕುಲಮ್ = ನಿರ್ದುಷ್ಟವಾಯಿತು.

**ಅನುವಾದ–** ಆದ್ದರಿಂದ ಅನುಮಾನವು ರೂಪ್ಯತ್ವಾಭಾವವನ್ನು ಗ್ರಹಿಸಿ, ಆ ರೂಪ್ಯತ್ವಾಭಾವವನ್ನು ಸಾಕ್ಷಿಗೆ ಉಪನಯನ ಮಾಡಿಕೊಟ್ಟಾಗ, ಸಾಕ್ಷಿಯು ರೂಪ್ಯತ್ವಾಭಾವವನ್ನು ಗ್ರಹಿಸುತ್ತದೆ. ಆದ್ದರಿಂದ ಸಾಕ್ಷಿಯು ರೂಪ್ಯತ್ವಾಭಾವವನ್ನು ಗ್ರಹಿಸಲು ಅನುಮಾನದ ಸಹಕಾರವು ಅವಶ್ಯಕವಾಗಿರುವುದರಿಂದ ಅಪ್ರಾಮಾಣ್ಯ-ಜ್ಞಾನದಲ್ಲಿ ಸ್ವತಸ್ತ್ವವೂ ಇಲ್ಲ.

**ಭಾವವಿಲಾಸಿನೀ–ಅತ** ಇತಿ ॥ ಯತಃ ಸಾಕ್ಷಿಣೋ ಬಹಿರಸ್ವಾತಂತ್ರ್ಯಮತ ಇತ್ಯರ್ಥಃ । ಅನುಮಾನತಃ ಇದಂ ರೂಪ್ಯಂ ನ ದಹ್ಯಮಾನತ್ವಾತ್ ಪಾಟ್ಯಮಾನತ್ವಾದಿತ್ಯಾದ್ಯನು-ಮಾನತಃ । ತದಪ್ಯಪ್ರಾಮಾಣ್ಯಮಪಿ। ಸರ್ವಮನಾಕುಲಮಿತಿ ಜ್ಞಪ್ತೌ ಪ್ರಾಮಾಣ್ಯ-ಸ್ವತಸ್ತ್ವಸ್ಯೋಪಸಂಹಾರಃ ॥ ೪೧೦ ॥

**ವಿವರಣೆ**– 'ಅತಃ' ಎಂದರೆ ಸಾಕ್ಷಿಗೆ ಬಾಹ್ಯವಸ್ತುಗಳ ವಿಷಯದಲ್ಲಿ ಸ್ವಾತಂತ್ರ್ಯವಿಲ್ಲದಿರುವ ಕಾರಣದಿಂದ ಎಂದು ಅರ್ಥ. ಅನುಮಾನದಿಂದ ಎಂದರೆ ಇದು ರಜತವಲ್ಲ, ಸುಡಲ್ಪಡುವುದರಿಂದ ಅಥವಾ ಒಡೆಯಲ್ಪಡುವುದರಿಂದ ಎಂಬ ಅನುಮಾನದಿಂದ ರಜತತ್ವಾಭಾವವು ಗೃಹೀತವಾಗುತ್ತದೆ ಎಂದು ಅರ್ಥ. ಶ್ಲೋಕದಲ್ಲಿ 'ಸರ್ವಮನಾಕುಲಂ' ಎಂದಿದೆ. ಇದಕ್ಕೆ ಪ್ರಾಮಾಣ್ಯಜ್ಞಪ್ತಿಯಲ್ಲಿ ಸ್ವತಸ್ತ್ವವಿದೆ. ಅಪ್ರಾಮಾಣ್ಯಜ್ಞಪ್ತಿಯಲ್ಲಿಲ್ಲ ಎಂಬ ವಿಷಯದಲ್ಲಿ ನಾವು ಹೇಳಿದ ಯುಕ್ತಿಗಳೆಲ್ಲವೂ ನಿರ್ದುಷ್ಟವಾಗಿವೆ ಎಂದು ಅಭಿಪ್ರಾಯ.

—o—



# ರಾಜಸುಭಾಷಿತ

ಪದ್ಯಾಖ್ಯಸೂತ್ರಬದ್ಧೇಯಂ ಹೃದ್ಯಾ ಸ್ಯಾದ್ ಯುಕ್ತಿಮಲ್ಲಿಕಾ ।
ಪದ್ಮನಾಭಸ್ಯ ಮಧ್ವಸ್ಯ ವಿದ್ಯಾಯಾಶ್ಚ ಮನಃಪ್ರಿಯಾ ॥

ಪದ್ಮನಾಭನಿಗೂ, ಮಧ್ವರಿಗೂ ಮತ್ತು ಸರಸ್ವತಿಗೂ ಮನಃಪ್ರಿಯವಾದ ಪದ್ಯ ಎಂಬ ಸೂತ್ರಗಳಿಂದ ರಚಿಸಲ್ಪಟ್ಟ ಈ ಯುಕ್ತಿಮಲ್ಲಿಕೆಯು ಎಲ್ಲ ಸಜ್ಜನರಿಗೆ ಹೃದಯಂಗಮವಾಗಲಿ.

